ಋತಮೊಂದೆ ಗೆಲ್ಲುವುದು, ಅನೃತವಲ್ತು ;
ಅಮೃತಮೆನೆ ವಿದ್ಯೆಯೆ : ಅವಿದ್ಯೆಯಲ್ತು ;
ವಿಶ್ವಭಾರತಿ ಶರಣು, ಕಿರುತೀರ್ಥವಲ್ತು.

ಸರ್ವ ಜೀವಂಗಳುಂ ಮುಕ್ತಿಯಂ ಕಾಣ್ಗೆ ;
ಬೇಹರೊಳ್ ಸ್ಪರ್ಧೆವರ್ಗ ಕಾಳಗಂ ಮಾಣ್ಗೆ ;
ಸಾವುದೆಲ್ಲಾ ಸತ್ತು ಬಾಳಾಳ್ಕೆ ಪೂಣ್ಗೆ.

ಜ್ಞಾನಧರ್ಮಂಗಳಿಂ ತಣ್ಪನಿಳೆ ತಾಳ್ಗೆ ;
ಶ್ರೀ ಜಯನ್ ನಿಡುಬಾಳಿ ನಮ್ಮನೊಲಿದಾಳ್ಗೆ ;
ಕನ್ನಡಿಗರುಸಿರಾಗಿ ಕನ್ನಡಂ ಬಾಳ್ಗೆ.

ಶುಕ್ರಗೀತೆಯಿಂದ

—ಶ್ರೀ

# ಸಂಭಾವನೆ

ರಾಜಸೇವಾಸಕ್ತ

ಬೆಳ್ಳೂರ ಮೈಲಾರ ಶ್ರೀಕಂಠಯ್ಯನವರಿಗೆ

ಅವರ ಶಿಷ್ಯರೂ ಮಿತ್ರರೂ ಒಪ್ಪಿಸಿದ

ಪ್ರಬಂಧಗಳ ಸಂಪುಟ

ಬೆಂಗಳೂರು



# ಅರಿಕೆ

ವಿಶ್ವವಿದ್ಯಾನಿಲಯದಲ್ಲಿ ಶ್ರೇಷ್ಠ ಅಧ್ಯಾಪಕರಾಗಿ ಸಾವಿರಾರು ಮಂದಿ ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತಿರುವ ಮಹನೀಯರೂ ನಾಡು ನುಡಿಗಳನ್ನು ತನುಮನಧನಗಳಿಂದ ಎಡೆಬಿಡದೆ ಸೇವಿಸುತ್ತಿರುವ ಕನ್ನಡತಾಯ ಹಿರಿಯ ಮಕ್ಕಳೂ ಈಗಿನ ಕನ್ನಡ ಚಳವಳಿಯ ಜೀವಪ್ರಾಯರೂ ಆದ ರಾಜಸೇವಾಸಕ್ತ ಶ್ರೀಮಾನ್ ಬೆಳ್ಳೂರ ಮೈಲಾರ ಶ್ರೀಕಂಠಯ್ಯನವರ ಸಂತತವಾದ ಸೇವೆಗೆ ಯಾವುದಾದರೊಂದು ರೀತಿ ಮನ್ನಣೆ ತೋರಬೇಕೆಂದು ಅವರ ಶಿಷ್ಯರಾಗಿದ್ದ ಕೆಲವರಿಗೆ ಕೆಲವು ವರ್ಷಗಳ ಹಿಂದೆ ತೋರಿತು. ಇಂಥ ಸೇವೆ ಸಲ್ಲಿಸಿರುವ ಇತರ ದೇಶಗಳ ಇತರ ಭಾಷೆಗಳ ಮಹನೀಯರಿಗೆ ಆಪ್ತರೂ ಇಷ್ಟರೂ ಆಯಾ ಮಹನೀಯರ ಕಾರ್ಯಕ್ಷೇತ್ರಗಳನ್ನು ಕುರಿತ ಲೇಖನಗಳ ಸಂಪುಟವನ್ನು ಒಪ್ಪಿಸುವುದು ವಾಡಿಕೆ. ಕನ್ನಡದಲ್ಲಿ ಇಂಥ ಒಂದು ಸಂಪುಟವನ್ನು ಮಾಡುವುದಕ್ಕೆ ಇದು ತಕ್ಕ ಸಮಯವೆಂದು ಅನೇಕ ಮಿತ್ರರಿಗೆ ಕಂಡಿತು. ಈ ಸಲಹೆಗೆ ಬಹುಮುಖವಾದ ಪುಷ್ಟಿ ದೊರೆತದ್ದರಿಂದ ಈ 'ಸಂಭಾವನೆ' ಗ್ರಂಥವನ್ನು ಪ್ರಕಟಿಸುವ ಉದ್ಯಮದಲ್ಲಿ ತೊಡಗಿದ್ದಾಗಿದೆ. ಇದರಲ್ಲಿ ಬಂದಿರುವ ಲೇಖನಗಳು ಶ್ರೀಯುತರ ಕಾರ್ಯಕ್ಷೇತ್ರವನ್ನೆಲ್ಲ ಒಳಗೊಂಡಿವೆ ಎಂದು ಮಿತ್ರರು ತಿಳಿದಿಲ್ಲ; ಶ್ರೀಯುತರನ್ನು ಕುರಿತು ಲೇಖನ ಬರೆಯುವುದಕ್ಕೆ ಇಷ್ಟವುಳ್ಳವರಿಂದೆಲ್ಲ ಲೇಖನಗಳನ್ನು ತರಿಸಿಕೊಂಡಿದೆ ಎನ್ನುವುದೂ ಮಿತ್ರರ ತಿಳಿವಳಿಕೆ ಅಲ್ಲ. ಶ್ರೀಮಾನ್ ಶ್ರೀಕಂಠಯ್ಯನವರ ನಾನಾಮುಖವಾದ ಉದ್ಯಮ ಆಸಕ್ತಿಗಳನ್ನು ಇಂಥ ಒಂದು ಗ್ರಂಥದಲ್ಲಿ ಒಳಗೊಳ್ಳುವುದು ಸಾಧ್ಯವೇ ಅಲ್ಲ. ಈಗ ನಾಲ್ಕಾರು ವರ್ಷಗಳಿಂದ ಶ್ರೀಯುತರು ದೇಶದಲ್ಲಿ ಪ್ರಚಾರ ಕಾರ್ಯದಲ್ಲಿ ತೊಡಗಿ ಗಳಿಸಿರುವ ಸಾವಿರಾರು ಸ್ನೇಹಗಳ ಪ್ರಾತಿನಿಧ್ಯ ಮಾತ್ರ ಇಲ್ಲಿ ಸಾಧ್ಯವಾಗಿದೆ. ಶ್ರೀಮಾನ್ ಶ್ರೀಕಂಠಯ್ಯನವರು ಕೆಲವು ತಿಂಗಳ ಹಿಂದೆ ತಮ್ಮ ಜೀವನದ ಐವತ್ತೆಂಟನೆಯ ವರ್ಷವನ್ನು ಆರಂಭಿಸಿದರು. ಆ ಉತ್ಸವದ ಗುರುತಾಗಿ ಇದನ್ನು ಅವರ ಶಿಷ್ಯರೂ ಮಿತ್ರರೂ ಅವರಿಗೆ ಒಪ್ಪಿಸುವುದರಲ್ಲಿದಾರೆ. ಈ ಗ್ರಂಥದಲ್ಲಿ ಯಾವ ಕುಂದುಕೊರತೆ ಕಂಡರೂ ಈ ಹಿರಿಯರು ಅದನ್ನು ಲಕ್ಷಿಸಲಾರರೆಂದು ಮಿತ್ರರು ನಂಬಿದಾರೆ. ಇತರ ಹಿರಿಯರೂ ಅದೇ ರೀತಿ ಇದರ ಉದ್ದೇಶವನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಬೇಕೆಂದು ಪ್ರಾರ್ಥನೆ.

ಬೆಂಗಳೂರು, ೧೪-೯-೧೯೪೧

ವೃಷ ಸಂ॥ ಭಾದ್ರಪದ ಕೃಷ್ಣ ಅಷ್ಟಮಿ



## ಹಿತವಚನ

### ೧

ರಾಜಸೇವಾಸಕ್ತ ಶ್ರೀಮಾನ್ ಶ್ರೀಕಂಠಯ್ಯನವರಿಗೆ ಅವರ ಶಿಷ್ಯರೂ ಸ್ನೇಹಿತರೂ ಸೇರಿ ಪ್ರಬಂಧಗಳ ಸಂಪುಟ ಒಂದನ್ನು 'ಸಂಭಾವನೆ'ಯಾಗಿ ಒಪ್ಪಿಸ ಬೇಕೆಂದಿರುವ ಶುಭವಾರ್ತೆಯನ್ನು ಕೇಳಿ ನನಗೆ ತುಂಬ ಸಂತೋಷವಾಗಿದೆ. ಇದು ಅಗತ್ಯವಾಗಿ ನಡೆಯಬೇಕಾದ ಕೆಲಸ; ಶ್ರೀಕಂಠಯ್ಯನವರು ನಾಡಿಗೂ ನುಡಿಗೂ ಸಲ್ಲಿಸಿರುವ ದೊಡ್ಡ ಸೇವೆಗೆ ತಕ್ಕ ಒಂದು ಮರ್ಯಾದೆ. ಇಡಿಯ ಕನ್ನಡ ನಾಡಿನ ಸಾಹಿತಿಗಳು ಹಲವರು ಈ ಸತ್ಕಾರ ಸಮಾರಂಭದಲ್ಲಿ ಭಾಗವಹಿಸಿ, ನಾಡು ನುಡಿ ಕಲೆ ಸಾಹಿತ್ಯ ಧರ್ಮ ಮೊದಲಾದ ವಿವಿಧ ವಿಷಯಗಳ ಮೇಲೆ ಎಪ್ಪತ್ತೈದು ಉತ್ತಮ ಪ್ರಬಂಧಗಳನ್ನು ಕೂಡಿಸಿ ಇಂಥ ದೊಡ್ಡ ಗ್ರಂಥವನ್ನು ಪ್ರಕಟಿಸಿ, ಅವರಿಗೆ ಸನ್ಮಾನಮಾಡುವುದೆಂಬುದು ಶ್ರೀಮಾನ್ ಶ್ರೀಕಂಠಯ್ಯನವರ ವಿಷಯದಲ್ಲಿ ಜನರಿಗೆ ಇರುವ ಪ್ರೀತಿ ಗೌರವಗಳನ್ನು ತೋರಿಸುತ್ತದೆ.

ನಮ್ಮ ಕಾಲದಲ್ಲಿ ಕನ್ನಡ ಭಾಷೆಯ ವಿಷಯವಾಗಿ ಆಗಲಿ ದೇಶದ ವಿಷಯ ವಾಗಿ ಆಗಲಿ ಜನರಿಗೆ ಅಭಿಮಾನ ಇರಲಿಲ್ಲ. ಯಾವನಾದರೊಬ್ಬ ಬಿಳಿಯ ದೊಡ್ಡ ಮನುಷ್ಯ 'ಇವನು ಒಳ್ಳೆಯ ಮನುಷ್ಯ' ಎಂದು ಹೇಳಿದರೆ ಸಾಕು, ಆ ಮಾತು ವೈಕುಂಠಕ್ಕೊ ರಹದಾರಿ ಎಂದು ತಿಳಿದುಕೊಳ್ಳುತ್ತಿದ್ದ ಕಾಲ ಅದು. ಈಗ ಪುಣ್ಯದಿಂದ ಆ ದೈನ್ಯಾವಸ್ಥೆ ನೀಗಿ ಶುಭೋದಯ ಕಾಣುತ್ತಿದೆ. ತಮ್ಮ ನಾಡು ನುಡಿಗಳ ಬಗ್ಗೆ ಕನ್ನಡ ಜನರಲ್ಲಿ ಅಭಿಮಾನ, ಉತ್ಸಾಹ ಉಂಟಾಗಿವೆ. ಇದು ಮನೆಯಲ್ಲಿ ಕನ್ನಡ ಮಾತಾಡುವ ಜನರಲ್ಲಿ ಮಾತ್ರವಲ್ಲ. ತಮಿಳು, ತೆಲುಗು, ಮರಾಠಿ, ಕೊಂಕಣಿ, ಇವು ಮನೆಯ ಮಾತಾಗಿರುವ ಕರ್ನಾಟಕದ ಜನರೂ ದೇಶಭಾಷೆಯಲ್ಲಿ ಸ್ವಭಾಷೆಗಿಂತ ಒಂದು ಬಗೆಯ ಹೆಚ್ಚಿನ ಅಭಿಮಾನವನ್ನೇ ಇಟ್ಟು, ಅದಕ್ಕೆ ಪ್ರಾಮುಖ್ಯತೆ ಕೊಟ್ಟು, ಒಂದು ಸಂಪ್ರದಾಯವನ್ನು ಪಾಲಿಸಿಯೋ ಎಂಬಂತೆ ಈಗಲೂ ಅದಕ್ಕಾಗಿ ದುಡಿಯುತ್ತಿದ್ದಾರೆ. ನಾಡಿನಲ್ಲಿ ಎಲ್ಲೆಲ್ಲೂ ಶ್ರದ್ಧೆ, ಉತ್ಸಾಹ, ಧೈರ್ಯಗಳಿಂದ ಕೆಲಸಮಾಡುತ್ತಿರುವ ಸಾಹಿತ್ಯ ಸೇವಕರನ್ನೂ ಸಂಘ ಗಳನ್ನೂ ಕಂಡು ನನ್ನಂಥ ಹಣ್ಣು ಮುದುಕನಿಗೆ ಆಗುತ್ತಿರುವ ಸಂತೋಷ ಹೇಳಿ ತೀರದು. ಈ ಹೊಸ ಕನ್ನಡ ಚಳವಳಿಯಲ್ಲಿ ಶ್ರೀಮಾನ್ ಶ್ರೀಕಂಠಯ್ಯನವರ ಭಾಗ ಸ್ವಲ್ಪ ಮಾತ್ರದ್ದಲ್ಲ.

ಮೊದಲಿನಿಂದಲೂ ಸದ್ದುಮಾಡದೆ ಕನ್ನಡಕ್ಕಾಗಿ ಶ್ರಮಿಸಿದ ಮಹನೀಯರು ಅವರು. ಲೋಕಹಿತವನ್ನು ಸಾಧಿಸುವುದಕ್ಕೆ ಹೊರಟವನು ಹೆಸರಿಗಾಗಿ ಆಸೆಪಡು ವುದಿಲ್ಲ. ಆತ್ಮಸಂತೋಷಕ್ಕಾಗಿ ಕರ್ತವ್ಯಪಾಲನೆಗಾಗಿ ಕೆಲಸಮಾಡಿ, ಆ ಮೂಲಕ ಅಮೋಘವಾದ ಸೇವೆಯನ್ನು ಸಲ್ಲಿಸಿ, ಇಂದು ಕರ್ನಾಟಕದಲ್ಲಿ ಒಂದು ಹಿರಿಯ ಹೆಸರಾಗಿದ್ದಾರೆ ಶ್ರೀಮಾನ್ ಶ್ರೀಕಂಠಯ್ಯನವರು.

ಶ್ರೀಮಾನ್ ಶ್ರೀಕಂಠಯ್ಯನವರಂಥವರು ದೇಶಕ್ಕೇ ಭೂಷಣ, ದೊಡ್ಡ ಭಾಗ್ಯ. ಇಂತಹ ಮಹನೀಯರು ನಮ್ಮ ನಾಡಿನಲ್ಲಿ ಇನ್ನೂ ಹೆಚ್ಚಲಿ ಎಂಬುದೇ ನನ್ನ ಹಾರ್ದಿಕ ಹರಕೆ.

ನಾನು ಈಗ ತೊಂಬತ್ತನೆಯ ವಯಸ್ಸಿನಲ್ಲಿ ಕಾಲಿಟ್ಟಿದ್ದೇನೆ. ದೇಹ ಗಳಿತವಾಗಿದೆ; ಶಕ್ತಿ ಕುಗ್ಗಿದೆ. ಈ ಸ್ಥಿತಿಯಲ್ಲಿರುವ ನಾನು ಮತ್ತೆ ಯಾವ ರೀತಿಯಲ್ಲಿಯೂ ಈ ಗೌರವ ಕಾರ್ಯದಲ್ಲಿ ಭಾಗವಹಿಸಲಾರದವನಾಗಿದ್ದೇನೆ. ಈ ಒಳ್ಳೆಯ ಕೆಲಸಕ್ಕೆ ಆಶೀರ್ವಾದ ಕೊಡುವುದು ನನ್ನ ಕರ್ತವ್ಯ. ಆ ಆಶೀರ್ವಾದ ಫಲಿಸುತ್ತದೆ ಎಂಬ ದೃಢವಿಶ್ವಾಸದಿಂದ ಮನಃಪೂರ್ವಕವಾಗಿ ಹರಸುತ್ತೇನೆ. ದೇವರು ಶ್ರೀಮಾನ್ ಶ್ರೀಕಂಠಯ್ಯನವರಿಗೆ ಆಯುರಾರೋಗ್ಯಾದಿ ಸಕಲ ಸನ್ಮಂಗಳಗಳನ್ನೂ ಅನುಗ್ರಹಿಸಲಿ. ಅವರೂ ಅವರ ಶಿಷ್ಯರೂ ಮಿತ್ರರೂ ಕೈಕೊಂಡಿರುವ ಪವಿತ್ರಕಾರ್ಯ ನಿರ್ವಿಘ್ನವಾಗಿ ನಡೆದು ಕನ್ನಡ ಮೇಲಾಗಿ ಬಾಳಲಿ, ಬೆಳಗಲಿ. ಇದೇ ಭಗವಂತನಲ್ಲಿ ನಾನು ಸದಾ ಮಾಡುವ ಪ್ರಾರ್ಥನೆ.

**ಚ. ವಾಸುದೇವಯ್ಯ**

ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರಿಗೆ ಅವರ ೬೦ನೆಯ ಹುಟ್ಟಿದ ಹಬ್ಬದ ಸವಿನೆನಪಾಗಿ ಅವರ ಶಿಷ್ಯರಾಗಿದ್ದವರೂ ಮಿತ್ರರೂ ಪ್ರಬಂಧಗಳ ಸಂಪುಟ ಒಂದನ್ನು ಒಪ್ಪಿಸಲು ಉದ್ದೇಶಿಸಿರುವುದು ನನಗೆ ತುಂಬ ಸಂತೋಷ.

ಈ ಪ್ರಬಂಧಗಳು ಪ್ರೊಫೆಸರ್ ಶ್ರೀಕಂಠಯ್ಯನವರ ಅನೇಕ ವರ್ಷಗಳ ಅಭಿನಿವೇಶದ ಹಲವು ವಿಷಯಗಳನ್ನು ಕುರಿತಿವೆ. ಇವನ್ನು ಕನ್ನಡ ನಾಡಿನ ನಾನಾ ಭಾಗಗಳ ಪ್ರಸಿದ್ಧ ವಿದ್ವಾಂಸರು ಬರೆದಿದಾರೆ.

ಪ್ರೊಫೆಸರ್ ಶ್ರೀಕಂಠಯ್ಯನವರ ಮತ್ತು ನನ್ನ ಪರಿಚಯ ಮೂವತ್ತು ವರ್ಷಕ್ಕೆ ಮೇಲ್ಪಟ್ಟದ್ದು. ನಾನು ಅವರ ಮೈತ್ರಿಯನ್ನು ಒಂದು ಭಾಗ್ಯವೆಂದು ಎಣಿಸಿದೇನೆ. ಸಂಸ್ಕೃತ, ಕನ್ನಡ, ಇಂಗ್ಲಿಷ್, ಈ ಸಾಹಿತ್ಯಗಳಲ್ಲಿ ಅವರಿಗೆ ಇರುವ ಆಸಕ್ತಿಯೂ ನಿಷ್ಠೆಯೂ ಎಲ್ಲರಿಗೂ ತಿಳಿದೇ ಇವೆ. ಕನ್ನಡ ನುಡಿಯ ಮುನ್ನಡೆ, ಕನ್ನಡ ನಾಡಿನ ಸಾಂಸ್ಕೃತ ಏಕೀಕರಣ, ಈ ಬಗ್ಗೆ ಅವರು ಮಾಡುತ್ತಿರುವ ನಿಃಸ್ವಾರ್ಥ ಸೇವೆಯನ್ನು ಎಲ್ಲರೂ ಬಲ್ಲರು. ಇಂಥ ಸಮರ್ಥರಾದ ಈ ವಿದ್ವಾಂಸ ಲೇಖಕರಿಗೆ ಕರ್ನಾಟಕದ ಎಲ್ಲೆಡೆಯ ಲೇಖಕರೂ ಮನ್ನಣೆ ಮಾಡುವುದೆಂಬುದು ಉಚಿತವಾಗಿದೆ. ಶ್ರೀಮಾನ್ ಶ್ರೀಕಂಠಯ್ಯನವರಿಗೆ ಗೌರವ ಮಾಡುವಲ್ಲಿ ಇವರೊಂದಿಗೆ ಸೇರುವುದು ನನಗೆ ಆನಂದ. ಶ್ರೀಮಾನ್ ಶ್ರೀಕಂಠಯ್ಯನವರು ತಾವು ಕೈಗೊಂಡಿರುವ ಮಹತ್ಕಾರ್ಯದಲ್ಲಿ ಇನ್ನೂ ಬಹು ವರ್ಷಗಳು ಸೇವೆ ಸಲ್ಲಿಸುತ್ತಿರಲೆಂದು ನಾನು ಹಾರೈಸುತ್ತೇನೆ.

ಪ್ರಬಂಧಗಳ ಈ ಸಂಪುಟ ಶ್ರೀಮಾನ್ ಶ್ರೀಕಂಠಯ್ಯನವರ ಸೇವೆಗೆ ಯುಕ್ತ ರೀತಿಯ ಮನ್ನಣೆಯಾಗುವುದೆಂದೂ ಕನ್ನಡ ಭಾಷೆ ಸಾಹಿತ್ಯಗಳಲ್ಲಿ ಆಸಕ್ತಿಯಿರುವ ಎಲ್ಲರೂ ಇದನ್ನು ಆದರದಿಂದ ಬರಮಾಡಿಕೊಳ್ಳುತ್ತಾರೆಂದೂ ನನಗೆ ಪೂರ್ಣ ವಿಶ್ವಾಸ ಇದೆ.

ಮಿರ್ಜಾ ಎಂ ಇಸ್ಮಾಯಿಲ್

ಶ್ರೀ

ಕನ್ನಡ ಭಾಷೆಗೂ ಸಾಹಿತ್ಯಕ್ಕೂ ವಿಶೇಷ ರೀತಿಯ ಸೇವೆಯನ್ನು ಸಲ್ಲಿಸಿ, ಅತಿಶಯ ಪ್ರಭಾವಶಾಲಿಗಳಾದ ಅಧ್ಯಾಪಕರಾಗಿ, ಹೆಸರು ಗಳಿಸಿರುವ ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯನವರಿಗೆ ಮನ್ನಣೆಯಾಗಿ ಒಪ್ಪಿಸಬೇಕೆಂದಿರುವ 'ಸಂಭಾವನೆ'ಯ ಸಮಾರಂಭದಲ್ಲಿ ಭಾಗಿಯಾಗುವುದು ನನಗೆ ತುಂಬ ಸಂತೋಷ. ಕಳೆದ ಶತಮಾನದ ಕೊನೆಯ ದಶಕದಲ್ಲಿ ಶ್ರೀಮಾನ್ ಶ್ರೀಕಂಠಯ್ಯನವರೂ ನಾನೂ ಶ್ರೀರಂಗಪಟ್ಟಣದಲ್ಲಿ ಶಾಲೆಯಲ್ಲಿ ಸಹಪಾಠಿಗಳಾಗಿದ್ದೆವು. ಎಳೆತನದ ಆ ಸಂಬಂಧ ಮುಂದಿನ ವರ್ಷಗಳಲ್ಲಿ ನಡೆದುಕೊಂಡುಬಂದು ನಾವು ಮೈಸೂರು, ಬೆಂಗಳೂರು, ಮದ್ರಾಸು ಪಟ್ಟಣಗಳಲ್ಲಿ ಶಾಲೆಗಳಲ್ಲಿ ಸಹಪಾಠಿಗಳಾಗಿ, ವಿದ್ಯಾರ್ಥಿ ಭವನಗಳಲ್ಲಿ ಸಂಗಡಿಗರಾಗಿ ಇದ್ದೆವು. ಮತ್ತೆ ಇಬ್ಬರೂ ಸುಮಾರು ಒಂದೇ ಕಾಲದಲ್ಲಿ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಸಹಾಧ್ಯಾಪಕರಾಗಿ ಸೇರಿ, ಈಗ ಮೂವತ್ತು ವರ್ಷಕ್ಕೆ ಮೇಲ್ಪಟ್ಟು ವಿಶ್ವವಿದ್ಯಾನಿಲಯದಲ್ಲಿ ಜತೆಯಾಗಿ ಕೆಲಸ ಮಾಡಿದ್ದೇವೆ. ಆದ್ದರಿಂದ ಮಿಕ್ಕ ಹಲವರಿಗಿಂತ ಹೆಚ್ಚಾಗಿ ನನಗೆ ಶ್ರೀಮಾನ್ ಶ್ರೀಕಂಠಯ್ಯನವರೊಡನೆ ಸಂತತವೂ ಆಪ್ತವೂ ಆದ ಸಂಪರ್ಕ ದೊರೆತಿದೆ. ಇವರು ಕರ್ನಾಟಕಕ್ಕೂ ಕರ್ನಾಟಕ ಭಾಷೆ ಸಾಹಿತ್ಯಗಳಿಗೂ ಮಾಡಿರುವ ಮಹತ್ತರವಾದ ಕಾರ್ಯವನ್ನು ಕುರಿತು ಮಾತು ಬೆಳಸುವ ಅಗತ್ಯ ಈಗ ಇಲ್ಲ. ಇವರ ವಿಷಯವನ್ನು ಕುರಿತು ಹೇಳುವ ಸಂದರ್ಭ ಒದಗಿದಾಗಲೆಲ್ಲ ನಾನು ಶ್ರೀಮಾನ್ ಶ್ರೀಕಂಠಯ್ಯನವರ 'ಇಂಗ್ಲಿಷ್ ಗೀತಗಳನ್ನು' ಇಂಗ್ಲಿಷ್ ಸಾಹಿತ್ಯದಲ್ಲಿ ಒಂದು ಹೊಸ ಯುಗವನ್ನು ಸಾರಿ ತಂದ 'ಲಿರಿಕಲ್ ಬ್ಯಾಲಡ್ಸ್' ಗ್ರಂಥಕ್ಕೆ ನಿಸ್ಸಂಕೋಚವಾಗಿ ಹೋಲಿಸಿದ್ದೇನೆ. ಶ್ರೀಮಾನ್ ಶ್ರೀಕಂಠಯ್ಯನವರ ಹೆಸರು ಹೊಸಕನ್ನಡ ಸಾಹಿತ್ಯವನ್ನು ನಿರೂಪಿಸಿದ ಮತ್ತು ಅದನ್ನು ನಡಸಿದ ಪ್ರಭಾವಗಳಲ್ಲಿ ಒಂದಾಗಿ ನೆಲಸುತ್ತದೆ; ಮತ್ತು ಇವರು ತಾವು ಮೊದಲಿಟ್ಟ ಚಳವಳಿಯ ಗತಿ ಶಕ್ತಿಗೆ ನೆರವಾಗಿ ಕೂಡಿಕೊಳ್ಳುವಂತೆ ಕೆಲಸಮಾಡುವ ಯುವಕರೂ ತೇಜಸ್ವಿಗಳೂ ಉತ್ಸಾಹಶಾಲಿಗಳೂ ಆದ ಕೆಲಸಗಾರರ ಪಡೆಯೊಂದನ್ನು ತಮ್ಮ ಸುತ್ತ ಕಟ್ಟಿದ್ದಾರೆ. ನಾಡು ನುಡಿಗಳ ಕಾರ್ಯಕ್ಷೇತ್ರದಲ್ಲಿ ಹೊಸ ಬಿತ್ತನೆ ಮಾಡಿದ್ದು ಮಾತ್ರವಲ್ಲದೆ, ಶ್ರೀಯುತರು ಸುತ್ತಲೂ ಹುಲುಸಾದ ಬೆಳಸಿನ ಸುಗ್ಗಿಯನ್ನೂ ಕೃಷಕರ ಸಮೃದ್ಧಿಯನ್ನೂ ನೋಡುವ ಭಾಗ್ಯವನ್ನು ಪಡೆದಿರುವುದು ನಮ್ಮೆಲ್ಲರಿಗೂ ಸಂತೋಷವನ್ನು ಉಂಟುಮಾಡುತ್ತಿದೆ.

**ಎನ್. ಎಸ್. ಸುಬ್ಬರಾವ್**





ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಬಹು ಕಾಲದಿಂದ ಮಾಡುತ್ತಿರುವ ಉದಾರವಾದ ಕನ್ನಡ ಭಾಷಾ ಸೇವೆಗಾಗಿ ಕರ್ಣಾಟಕದ ಸಕಲ ಪ್ರಾಂತಗಳಲ್ಲೂ ಇರುವ ಹಲವರು ಕನ್ನಡ ಭಾಷಾಭಿಮಾನಿಗಳು ಅವರನ್ನು ಗೌರವಿಸಿ ಅವರಿಗೆ ಉಚಿತವಾದ ಸಂಭಾವನೆಯನ್ನು ಕೊಡಬೇಕೆಂಬ ಉದ್ದೇಶ ಮಾಡಿರುವುದು ಸ್ತೋತ್ರಾರ್ಹವಾಗಿದೆ.

ಶ್ರೀಕಂಠಯ್ಯನವರು ತಮ್ಮ ವಿದ್ಯಾರ್ಥಿದಶೆಯಿಂದಲೂ ಕೇವಲ ಭಾಷಾಭಿಮಾನಿಗಳು; ಬಿ.ಎ. ಪರೀಕ್ಷೆಗೆ ಐಚ್ಛಿಕವಾಗಿ ತೆಗೆದುಕೊಂಡ ಭೌತ ವಿಜ್ಞಾನದಲ್ಲಿ ಶಿಕ್ಷಣ ಪಡೆದು ತೇರ್ಗಡೆ ಹೊಂದಿದರೂ ಇಂಗ್ಲಿಷ್ ಭಾಷೆಯಲ್ಲಿಯೇ ಅವರಿಗೆ ಹೆಚ್ಚು ಮಮತೆ. ಇವರಿಗೆ ಆಗಲೇ ಕನ್ನಡದಲ್ಲಿಯೂ ಅಭಿಮಾನ ಮೊಳೆತಿರಬೇಕೆಂಬುದೂ, ಅದು ಕ್ರಮೇಣ ಬೆಳೆದು ಯಾರ ದೃಷ್ಟಿಗೂ ಬೀಳದೆ ಫಲವನ್ನು ಮಾತ್ರ ಕೊಡುತ್ತಿದ್ದಿತೆಂಬುದೂ ನಮ್ಮ ಈಚಿನ ಅನುಭವ. ೧೯೨೬ನೆಯ ಇಸವಿಯಲ್ಲಿ ಅವರ "ಇಂಗ್ಲಿಷ್ ಗೀತಗಳನ್ನು" ಬೆಂಗಳೂರು ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದವರು ಪ್ರಕಟಗೊಳಿಸುವ ಸಂದರ್ಭ ಬಂದಾಗ, ಗ್ರಂಥವು ಅಜ್ಞಾತವಾಗಿಯೇ ಪ್ರಕಟವಾಗಬೇಕೆಂದು ಅವರು ಹಠ ತೊಟ್ಟರೂ ಅದು ನ್ಯಾಯವಲ್ಲವೆಂದೂ ಆ ರೀತಿ ಪ್ರಕಟಮಾಡಲಾಗುವುದಿಲ್ಲವೆಂದೂ ನಾನು ಅವರಿಗಿಂತಲೂ ಹೆಚ್ಚಾಗಿ ಹಠ ತೊಟ್ಟದ್ದರಿಂದ ಯತ್ನವಿಲ್ಲದೆ ನನ್ನ ಮಾತಿಗೆ ಅವರು ಕಟ್ಟುಬೀಳಬೇಕಾಯಿತು. ಕರ್ಣಾಟಕ ಸಾಹಿತ್ಯ ಪರಿಷತ್ತಿನಲ್ಲಿ ಪಂಪ ಭಾರತವನ್ನು ತಿದ್ದಿ ಪ್ರಕಟಿಸುವ ಕಾರ್ಯವು ಆರಂಭವಾದಾಗ, ಬರುಬರುತ್ತ ಶ್ರೀಕಂಠಯ್ಯನವರ ಕನ್ನಡ ವ್ಯಾಸಂಗದ ಆಳವೂ ಅವರ ಸಲಹೆಗಳ ಖಚಿತ ರೀತಿಯೂ ಅರಿವಿಗೆ ಬಂದು, ಅವರ ಸಲಹೆ ಯಾವುದಕ್ಕೂ ನಾವು ಗೌರವ ಕೊಡದೆ ಇರುತ್ತಿರಲಿಲ್ಲ.

ಶ್ರೀಕಂಠಯ್ಯನವರಲ್ಲಿ ಕನ್ನಡ ಭಾಷಾ ಪ್ರೇಮವು ಉಕ್ಕಿ ಹರಿಯುತ್ತಿರುವುದರಿಂದ ಅವರು ಕನ್ನಡಿಗರಲ್ಲೆಲ್ಲ ತಮ್ಮ ಮಾತೃಭಾಷೆಯ ಪ್ರೇಮವನ್ನು ಹುಟ್ಟಿಸಿ, ಬೆಳಸಿ, ಕನ್ನಡ ಭಾಷೆಯು ಭಾರತದ ಯಾವ ಪ್ರಮುಖ ದೇಶಭಾಷೆಗೂ ಕಡಮೆಯಲ್ಲವೆಂಬುದನ್ನು ದೃಢಪಡಿಸಲು ಪಂತ ತೊಟ್ಟಿರುತ್ತಾರೆ. ಇದಕ್ಕಾಗಿ ತಮ್ಮ ದೇಹಾರೋಗ್ಯವನ್ನೂ ಲಕ್ಷಿಸದೆ ಕರ್ಣಾಟಕದ ಎಲ್ಲ ಪ್ರಾಂತಗಳಲ್ಲೂ ಸುತ್ತುತ್ತ ಕನ್ನಡಿಗರನ್ನು ಎಚ್ಚರಿಸುತ್ತಿದ್ದಾರೆ. ಇದರ ಫಲವಾಗಿ ಕರ್ಣಾಟಕದಲ್ಲಿ ಮಾತ್ರವೇ ಅಲ್ಲದೆ ಮುಂಬಯಿ, ಕಾಶಿ, ಕಲ್ಕತ್ತ ಮೊದಲಾದ ದೂರ ಪ್ರಾಂತಗಳಲ್ಲೂ ಕರ್ಣಾಟಕ ಸಂಘಗಳು ಅನೇಕವಾಗಿ ಹುಟ್ಟಿ, ಕನ್ನಡಿಗರಲ್ಲಿ ತಮ್ಮ ಮಾತೃಭಾಷೆಯ ಮೇಲೆ ಪ್ರೀತಿ ಗೌರವಗಳು ಮೂಡುತ್ತಿವೆ. ಇಷ್ಟೇ ಅಲ್ಲ; ಶ್ರೀಕಂಠಯ್ಯನವರು ತಮ್ಮ ಸ್ವಂತ ಹಣವನ್ನು ಯಥೇಚ್ಛವಾಗಿ ಕನ್ನಡ ಭಾಷಾ ಸೇವೆಗಾಗಿ ವಿನಿಯೋಗಿಸುತ್ತ ಇತರರಿಗೆ ಮಾರ್ಗದರ್ಶಿಗಳಾಗಿರುತ್ತಾರೆ. ಕನ್ನಡದ 'ಹುಚ್ಚು' ಅವರಿಗೆ ಹಿಡಿದಿರುವಷ್ಟು ಹಿಂದೆ ಮತ್ತೆ ಯಾರಿಗೂ ಹಿಡಿದಿರಲಿಲ್ಲ; ಮುಂದೆ ಈ ಹುಚ್ಚು ಸಾಂಕ್ರಾಮಿಕವಾಗೇರ್ಪಟ್ಟು ಕನ್ನಡ ದೇಶವನ್ನೆಲ್ಲ ವ್ಯಾಪಿಸಿ ಸ್ಥಾಯಿಯಾಗಿರಲಿ ಎಂಬುವೇ

ನನ್ನ ಹಾರೈಕೆ. ಶ್ರೀಕಂಠಯ್ಯನವರು ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕನ್ನಡ ಭಾಷಾ ವಿಶಾರದರಾಗಿ ಅನೇಕ ಮಂದಿ ಶಿಷ್ಯರಿಗೆ ಶಿಕ್ಷಣ ಕೊಟ್ಟು ಅವರನ್ನು ಕನ್ನಡದ ಸೇವೆ ಮಾಡಲು ಅರ್ಹರನ್ನಾಗಿ ಮಾಡಿದ್ದಾರೆ. ಈ ಶಿಷ್ಯರು ತಮ್ಮ ಗುರುಗಳಿಗೆ ಇವರ ಮನಸ್ಸೊಪ್ಪುವಂಥ ಗುರುದಕ್ಷಿಣೆಯನ್ನು ಸಮರ್ಪಿಸುವಂತೆ ಭಗವಂತನು ಅನುಗ್ರಹಿಸಲಿ.

ಹಿಂದೆ, ವಿದ್ಯಾವಂತರಾದ ಕನ್ನಡಿಗರು ಜನರೆದುರಿಗೆ ಭಾಷಣ ಮಾಡುವ ಸಂದರ್ಭದಲ್ಲಿ ಪೀಠಿಕೆಯಾಗಿ, ತಮಗೆ ಕನ್ನಡದಲ್ಲಿ ಮಾತನಾಡುವುದು ಬಾರದೆಂದೂ, ಆದುದರಿಂದ ಇಂಗ್ಲಿಷಿನಲ್ಲೇ ಮಾತನಾಡುವೆನೆಂದೂ ಹೇಳುವುದನ್ನು ಗೌರವ ವೆಂದು ತಿಳಿದಿದ್ದರು. ಈಗ ಶ್ರೀಕಂಠಯ್ಯನವರೇ ಮೊದಲಾದ ಅನೇಕ ಮಂದಿ ಮಾನ್ಯ ಕನ್ನಡಿಗರು ಈ ಮನೋಭಾವವನ್ನು ಬಹುಮಟ್ಟಿಗೆ ಕುಗ್ಗಿಸಿರುತ್ತಾರೆ. ಗಹನವಾದ ಶಾಸ್ತ್ರ ವಿಷಯಗಳನ್ನು ಕೂಡ ಲಲಿತವಾದ ಕನ್ನಡ ನುಡಿಯಲ್ಲಿ, ಜನ ಸಾಮಾನ್ಯರಿಗೆ ತಿಳಿಯುವಂತೆ, ಹೇಳಲೂ ಬರೆಯಲೂ ಕನ್ನಡಿಗರು ದಕ್ಷರಾಗಿರು ತ್ತಾರೆ. ಹದಿನೈದು ವರ್ಷಗಳಿಂದೀಚೆಗೆ ಕನ್ನಡ ಭಾಷಾ ಪ್ರಚಾರವು ಹಿಂದೆ ಎಂದಿಗೂ ಇಲ್ಲದಷ್ಟು ಮಟ್ಟಿಗೆ ಜನರಲ್ಲಿ ಹಬ್ಬುತ್ತಿದೆ; ಇದು ಸಂತತವಾಗಿ ನಡೆಯುತ್ತ ಬರಲಿ. ಕನ್ನಡಕ್ಕೆ ಉತ್ತಮ ಸ್ಥಿತಿ ದೊರೆಯಲು ದುಡಿಯುತ್ತಿರುವ ವಿದ್ಯಾವಂತರಾದ ಅನೇಕ ಮಂದಿ ಕನ್ನಡಿಗರಲ್ಲಿ ಶ್ರೀಕಂಠಯ್ಯನವರು ಗಣ್ಯಸ್ಥಾನ ವನ್ನು ಪಡೆದಿರುತ್ತಾರೆ.

ಕನ್ನಡದ ಮುಂದಿಯಲ್ಲಿ ಕನ್ನಡದ ಮೂಲಕ ಜ್ಞಾನಪ್ರಸಾರ ಮಾಡಲು ಈಗಿನಷ್ಟು ಅನುಕೂಲ್ಯಗಳು ಹಿಂದೆ ಯಾವಾಗಲೂ ಇರಲಿಲ್ಲ. ವಿದ್ಯಾಭ್ಯಾಸದ ಇಲಾಖೆಯವರೂ ವಿಶ್ವವಿದ್ಯಾನಿಲಯದವರೂ ಈ ಕಾರ್ಯದಲ್ಲಿ ಆಸಕ್ತಿ ವಹಿಸಿರು ತ್ತಾರೆ; ಜನರು ಕಣ್ದೆರೆಯುತ್ತಿದ್ದಾರೆ. ಈ ಕೆಲಸ ಮಾಡಲು ದಕ್ಷತೆಯುಳ್ಳ ಅನೇಕ ಮಂದಿ ಕನ್ನಡಿಗರು ನಮ್ಮಲ್ಲಿರುತ್ತಾರೆ. ಇವರೆಲ್ಲರನ್ನೂ ಒಂದು ಉತ್ತಮ ಸೈನ್ಯವನ್ನಾಗಿ ಯೋಜಿಸಿ ಕಾರ್ಯ ನಡಸುವ ಅಧಿಕಾರಯುತ ಕಾರ್ಯಪಟುಗಳು ಬೇಕು. ಹಿಂದಿನಂತೆ ಈಗಿನ ವಾಹಿನಿಯೂ ಒಂದು ಪ್ರವಾಹವಾಗಿ ಪರಿಣಮಿಸದೆ ಶಾಶ್ವತವಾಗಿ ಹರಿಯುವ ಜೀವನದಿಯಾಗಲು ಗ್ರಂಥಕರ್ತರು ಮಾತ್ರವಲ್ಲದೆ ಇತರ ಕನ್ನಡಿಗರೂ ಹರಪ್ರಯತ್ನ ಮಾಡುವುದು ಅತ್ಯಾವಶ್ಯಕ. ತಮ್ಮ ತನುಮನಧನ ಗಳನ್ನು ಇದಕ್ಕಾಗಿ ಮುಡುಪುಮಾಡಿರುವ ನಮ್ಮ ಶ್ರೀಕಂಠಯ್ಯನವರಿಗೆ ಇತರರು ಬೆಂಬಲವಾಗಿ ನಿಲ್ಲುವಂತೆಯೂ ಕನ್ನಡ ಪ್ರಚಾರ ಕಾರ್ಯವು ಒಂದು ಗೊತ್ತಾದ ಕ್ರಮದಲ್ಲಿ ಚಿರಕಾಲ ನಡೆಯುವಂತೆಯೂ ಕನ್ನಡ ಭಾಷೆಯು ಇತರ ಯಾವ ದೇಶಭಾಷೆಗೂ ಕಡಮೆಯಲ್ಲವೆಂಬ ಪ್ರಸಿದ್ಧಿ ದೊರೆಯುವಂತೆಯೂ ಪರಮೇಶ್ವರನು ಅನುಗ್ರಹಿಸಲಿ. ಶ್ರೀಕಂಠಯ್ಯನವರು ಬಹುಕಾಲ ಕನ್ನಡ ಮಾತೆಯ ಸೇವೆ ಯನ್ನು ಇದೇ ರೀತಿಯಲ್ಲಿ ನಡಸಿಕೊಂಡುಬರಲು ಅವರಿಗೆ ಆಯುರಾರೋಗ್ಯ ಸುಖ ಸಂತೋಷಗಳನ್ನು ಆ ಕರುಣಾಮಯನು ದಯೆಗೈಯಲಿ.

**ಬೆಳ್ಳಾವೆ ವೆಂಕಟನಾರಾಯಣಪ್ಪ**

ಶ್ರೀಃ

ಶ್ರೀ

# ಮಂಗಳಾಶಾಸನಂ

ಶ್ರೀಕಂಠಯ್ಯಾಹ್ವಯಕ ಸುಗುಣೇನ್ ಮಂಗಳಂ ಸಂತನೋತು
ಶ್ರೀ ಶೇಷಾದ್ರೇಃ ಶಿರಸಿ ವಿಲಸನ್ ಕೋಽಪಿ ತೇ ನೀಲಮೇಘಃ
ದೇವೀ ಮಧ್ಯೇಹೃಪಯಮನಿಶಂ ಭೂಷಯಂತೀ ರಮಾ ಯಂ
ವಿದ್ಯುದ್ವಲ್ಲೀ ಸ್ಥಿರರುಚಿರಿವಾಭಾತಿ ಜಾಂಬೂನದಾಂಗೀ

ಶ್ರೀಮನ್ನಾಲ್ವಡಿ ಕೃಷ್ಣಭೂಮಿಪತಿನಾ ದತ್ತಾಭಿನೂತ್ನಾಂಕನಃ
ಶ್ರೀಕಂಠಯ್ಯ ಇತಿ ಪ್ರತೀತಿಮುಪಯಾನ್ ಆಂಗ್ಲೇಯಕಾವ್ಯೇ ಸುಧೀಃ
ಬೆಳ್ಳೂರ್ ಗ್ರಾಮವಿಭೂಷಣಸ್ಯ ಮಹತೋ ಮೈಲಾರನಾಮ್ನಃ ಸುತಃ
ಜೀಯಾತ್ ಪಾಠಕತಾವಿರಾಮಮುಪಯಾನ್ ಆನಂದಲಾಭಾತ್ ಸದಾ

ಕಾರ್ಣಾಟಕಾಂಗ್ಲ ಭಾಷಾನಿಪುಣೇನಾನೇನ ಭಾಷಿತಂ ಜೀಯಾತ್
ಕರ್ಣಾಟಗಿರಾಂ ಮಾರ್ಗಪ್ರದರ್ಶಕಂ ತದ್ಗಿರಾಂ ಶಾಸ್ತ್ರಂ

ಶ್ರೀಕಂಠಯ್ಯವರೇಣ್ಯ ಕನ್ನಡದೆ ಸದ್‌ಗ್ರಂಥಾಳಿಗೆಯ್ವಿಚ್ಛೆಯಂ
ಕೈಕೊಂಡೈ ವಲವಾಂಗ್ಲಕಾವ್ಯದೊಲವಿಂ ಮೇಲಾದ ಶಿಷ್ಯಾಳಿಯಂ
ಶ್ರೀಕಂಠಂ ನಿನಗಿತ್ತನೀಶನೊಲವಿಂ ಶ್ರೀಮನ್ಮಹಾರಾಜರೊಳ್
ನೀ ಕೊಂಡೈ ಬಿರುದಂ ಶಿವಂ ಕುಡುಗೆ ತಾಂ ನಿತ್ಯಂ ಶುಭಂ ಮಂಗಳಂ

ಕಾನಕಾನಹಳ್ಳಿ ವರದಾಚಾರ್ಯ

# ಒಳಪಿಡಿ

# ಸಂಭಾವನೆ

## ಕರ್ಣಾಟಕ ಭಾಷೋಜ್ಜೀವನ

ಕರ್ಣಾಟಕ ಅಥವಾ ಕನ್ನಡ ಭಾಷೋಜ್ಜೀವನವು ಸುಮಾರು ಎಪ್ಪತ್ತು ವರ್ಷಗಳಿಂದಲೂ ಅವಿಚ್ಛಿನ್ನವಾಗಿ ನಡೆದುಕೊಂಡುಬಂದಿದೆ. ಅವಿಚ್ಛಿನ್ನವಾಗಿದ್ದರೂ ಈ ಕಾಲವನ್ನು ಮೂರು ಭಾಗವನ್ನಾಗಿ ವಿಂಗಡಿಸಬಹುದು. ಮೊದಲನೆಯ ಭಾಗ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲಕ್ಕೆ ಸೇರಿದುದು. ಪ್ರಭುಗಳಂತೆಯೇ ಅನೇಕ ರಾಜಬಂಧುಗಳು, ಸ್ವತಃ ಕವಿತ್ವವನ್ನು ಮಾಡುವುದರಿಂದ, ಪುರಾತನ ಗ್ರಂಥಗಳನ್ನು ಪ್ರಚಾರಕ್ಕೆ ತರುವುದರಿಂದ ಮತ್ತು ವಿದ್ವದ್ಗೋಷ್ಠಿಗಳಿಗೆ ಜೀವನೋಪಾಯಗಳನ್ನು ಕಲ್ಪಿಸಿಕೊಡುವುದರಿಂದ, ಆಸ್ತಿಕ್ಯದಿಂದ ಭಾಷಾಸೇವೆಯನ್ನು ಅನೇಕ ಪ್ರಕಾರವಾಗಿ ಮಾಡುತ್ತಿದ್ದರು. ಎರಡನೆಯ ಭಾಗವು ಸುಮಾರು ಮೂವತ್ತು ವರ್ಷಗಳೆಂದು ಇಟ್ಟುಕೊಳ್ಳಬಹುದು — ೧೮೮೦ನೆಯ ಇಸವಿಯಿಂದ ೧೯೧೦ರ ವರೆಗೆ. ಎಂದರೆ ಪ್ರಭುಗಳಾದ ಚಾಮರಾಜ ಒಡೆಯರವರ ಮತ್ತು ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರ ಆಳಿಕೆಗಳು ಮತ್ತು ನಾಲ್ವಡಿ ಕೃಷ್ಣರಾಜ ಒಡೆಯರವರ ಆಳಿಕೆಯ ಪ್ರಥಮ ವರ್ಷಗಳು ಈ ಎರಡನೆಯ ಭಾಗಕ್ಕೆ ಸೇರುತ್ತವೆ. ದೇಶವು ಸುಖ ಸಂಪತ್ತುಗಳಿಂದ ದಿನೇ ದಿನೇ ಮುಂದುವರಿಯುತ್ತಿತ್ತು. ಜನಗಳಲ್ಲಿ ವಿದ್ಯಾಪ್ರಚಾರವು ಹೆಚ್ಚಾಗುತ್ತಿತ್ತು. ಪುಸ್ತಕಗಳನ್ನು ಸುಲಭ ಕ್ರಯದಲ್ಲಿ ಅಚ್ಚುಹಾಕಿಸಲು ಅನುಕೂಲಗಳಿದ್ದುವು. ಇವೆಲ್ಲಕ್ಕಿಂತಲೂ ಮೇಲಾಗಿ ಚಾಮರಾಜ ಒಡೆಯರವರು ಕನ್ನಡ ಭಾಷೋಜ್ಜೀವನದ ಕಾರ್ಯದಲ್ಲಿ ಬದ್ಧಕಂಕಣರಾಗಿದ್ದರು. ಮೈಸೂರಲ್ಲಿ ಆಗ್ಗೆ ಪ್ರತಿಯೊಂದು ಪುರಾತನ ಶಾಸ್ತ್ರದಲ್ಲೂ ಅದ್ವಿತೀಯ ಪಾಂಡಿತ್ಯವುಳ್ಳ ವಿದ್ವನ್ಮಣಿಗಳು ಶೋಭಿಸುತ್ತಿದ್ದರು. ಪ್ರಭುಗಳ ಪ್ರೋತ್ಸಾಹದಿಂದ ಮತ್ತು ಸಂಸ್ಕೃತ ಭಾಷಾ ಪಾಂಡಿತ್ಯದ ಬಲದಿಂದ ಕರ್ಣಾಟಕ ಭಾಷೋಜ್ಜೀವನದ ಕಾರ್ಯವು ಇವರುಗಳಿಂದ ನಿರ್ವಿಘ್ನವಾಗಿಯೂ ಸುಸೂತ್ರವಾಗಿಯೂ ನಡೆಯಿತು. ಆಗಿನ ಕಾಲದ ಆಸೆಯೇನೆಂದರೆ ಸಂಸ್ಕೃತದಲ್ಲಿರುವ ಪ್ರತಿಯೊಂದು ಗ್ರಂಥವನ್ನೂ ಕೈಲಾದ ಮಟ್ಟಿಗೆ ಕನ್ನಡಿಗರಿಗೆ ಓದಲನುಕೂಲವಾಗುವುದಕ್ಕೋಸ್ಕರ ಅನುವಾದಮಾಡುವುದು ಮತ್ತು ಕನ್ನಡಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ಪ್ರಕಟಿಸುವುದು. ಕನ್ನಡ ವಚನ ಭಾರತದ ಉದಾಹರಣೆ ಒಂದು ಸಾಕಲ್ಲವೆ? ಶಬ್ದಾನುಶಾಸನದ ಪ್ರಕಟಣೆಯೂ ಜ್ಞಾಪಕಕ್ಕೆ ಬರುವುದಿಲ್ಲವೆ? ಆಗಣ ಭಾಷಾ ಸೇವಕರು ಸಂಸ್ಕೃತ ಕಾವ್ಯ ಮತ್ತು ನಾಟಕಗಳನ್ನು ಒಂದೊಂದಾಗಿ ಕನ್ನಡದಲ್ಲಿ ಬರೆದರು. ಈ ಕಾರ್ಯದಲ್ಲಿ ತೊಡಗಿದ್ದ ಆಗಿನ ಕಾಲದ ಪಂಡಿತರುಗಳಿಗೆಲ್ಲರಿಗೂ ಸಂಸ್ಕೃತದ ಬೆಂಬಲ: ಸಂಸ್ಕೃತವೇ ತಳಹದಿಯೆನ್ನಬಹುದು. ಕನ್ನಡ ಸೇವೆ ಮಾಡಿದವರು — ಭಾಷಾ ಸೇವೆಯೊಂದೇ ಅಲ್ಲ; ಲಲಿತಕಲೆ ಇತ್ಯಾದಿ ರಂಗಗಳಲ್ಲಿ ಸೇವೆಯನ್ನು ಸಲ್ಲಿಸಿರುವವರೂ — ಪ್ರಥಮತಃ ಸಂಸ್ಕೃತ ಪಂಡಿತರು

ಅಥವಾ ಸಂಸ್ಕೃತ ಪಂಡಿತ ಸಂಪರ್ಕವುಳ್ಳವರು. ಸಂಸ್ಕೃತದ ಜೀವಾಳವನ್ನರಿತು ಅದನ್ನು ಕನ್ನಡಕ್ಕೆ ಸೇರಿಸಿ — ಒಂದು ಭಾಷೆಯ ಸತ್ವವನ್ನು ಮತ್ತೊಂದು ಭಾಷೆಯ ಸತ್ವದೊಡನೆ ಸೇರಿಸಿ — ಒಂದರಲ್ಲೊಂದು ಐಕ್ಯವಾಗುವಂತೆ ಮಾಡಿದರು. ಇದರ ಪರಿಣಾಮವೇನಾಯಿತೆಂದರೆ ಆಗಿನ ಕಾಲದ ಕನ್ನಡ ಗ್ರಂಥಗಳಲ್ಲೆಲ್ಲಾ ಸಂಸ್ಕೃತ ಭಾಷಾ ಮಾರ್ಗಗಳು, ರೀತಿಗಳು, ಸಂಕೇತಗಳು, ಸಂಪ್ರದಾಯಗಳು, ಭಾವಾರ್ಥಗಳು ಮತ್ತು ಮರ್ಯಾದೆಗಳು ಕನ್ನಡಕ್ಕೆ ಅಂಟಿಕೊಂಡುಬಿಟ್ಟವು. ಸಂಸ್ಕೃತದಿಂದಲೇ ಕನ್ನಡಕ್ಕೆ ಒಂದು ಸ್ಥಾನವೆನ್ನುವಮಟ್ಟಿಗೆ ಕೂಡ ಸಂಶಯಗಳುಂಟಾದವು. ಆಗಿನ ಕಾಲದವರು ಆ ಸ್ಥಿತಿಯನ್ನು ಪುರಸ್ಕಾರ ಮಾಡಿದರೇ ವಿನಾ ಕನ್ನಡಕ್ಕೆ ಒಂದು ತೆರನಾದ ಕೀಳುಸ್ಥಾನವು ದೊರಕಿತೆಂದು ಎಂದೂ ಪೇಚಾಡಲಿಲ್ಲ. ಯಾಕೆಂದರೆ ಅವರು ಪ್ರಥಮಸ್ಥಾನವು ಸಂಸ್ಕೃತಕ್ಕೆ ಎಂದು ದೃಢವಾಗಿ ನಂಬಿದ್ದರು. ಸಂಸ್ಕೃತವನ್ನು ಮೂಲವಾಗಿಟ್ಟುಕೊಂಡು ಕನ್ನಡಕ್ಕೆ ಅಪಾರಸೇವೆ ಮಾಡಿದರು. ಆಗಿನ ಕಾಲದ ಕೆಲವು ವಿದ್ವಾಂಸರುಗಳ ನಾಮಸ್ಮರಣೆಮಾಡಿದರೆ ತಪ್ಪೇನೂ ಕಾಣುವುದಿಲ್ಲ. ಮತ್ತು ಏಕಕಾಲದಲ್ಲಿ — ಎಂದರೆ ಚಾಮರಾಜ ಒಡೆಯರ ಆಸ್ಥಾನದಲ್ಲಿ ಮತ್ತು ಅವರ ಆಳಿಕೆಯ ಕಾಲದಲ್ಲಿ — ಎಂತಹ ರತ್ನಗಳು ಬೆಳಗುತ್ತಿದ್ದವೆಂದು ಆಶ್ಚರ್ಯವಾಗುತ್ತದೆ. (೧) ಚಾಮರಾಜನಗರದ ಶ್ರೀಕಂಠಶಾಸ್ತ್ರಿಗಳು. ಆಶ್ರಮ ಸ್ವೀಕಾರಮಾಡದ ಸಂನ್ಯಾಸಿ, ಕರ್ಮಯೋಗಿ ಮತ್ತು ಜ್ಞಾನಯೋಗಿ. ಸಾಹಿತ್ಯ, ವ್ಯಾಕರಣ, ವೇದ, ವೇದಾಂತ, ಧರ್ಮಶಾಸ್ತ್ರ, ಪೂರ್ವಾಪರಪ್ರಯೋಗ ಶಾಸ್ತ್ರಗಳನ್ನು ಕೂಲಂಕಷವಾಗಿ ತಿಳಿದ ಮಹಾತ್ಮ. ಒಂದು ಮತದ ಬಹಿಷ್ಕಾರವನ್ನೂ ಎಣಿಸದೆ ಲಿಂಗಾಯತರಿಗೆ ವೇದಪಾಠಮಾಡಿಸಿದವರು. (೨) ಚಾಮರಾಜನಗರದ ರಾಮಶಾಸ್ತ್ರಿಗಳು. ನಿಜವಾದ ಸಾಹಿತ್ಯರತ್ನ. ಕೀರ್ತಿಶೇಷರಾದ ಕವಿಗಳೆಲ್ಲರೂ ಪುನರುದ್ಭವಿಸಿ ತಮ್ಮ ಕವಿತಾ ಸ್ವಾರಸ್ಯಗಳನ್ನು ಶಿಷ್ಯರುಗಳಿಗೆ ರಾಮಶಾಸ್ತ್ರಿಗಳ ಮೂಲಕ ಪಾಠಹೇಳುತ್ತಿದ್ದರು. (೩) ರಾಜಗುರುಗಳು ಕವಿತಿಲಕ ಸೋಸಲೆ ಅಯ್ಯಶಾಸ್ತ್ರಿಗಳು. ಈ ಪೂಜ್ಯರು ನಮ್ಮ ತಂದೆಯವರಾದ್ದರಿಂದ ಅವರ ವಿಷಯ ಹೆಚ್ಚಾಗಿ ನಾನು ಪ್ರಸ್ತಾಪಿಸಲಾರೆ. (೪) ಸದ್ವಿದ್ಯಾಶಾಲಾ ಮುಖ್ಯೋಪಾಧ್ಯಾಯರು ಪೆರಿಯಸ್ವಾಮಿ ತಿರುಮಲಾಚಾರ್ಯರು. (೫) ಸಾಧುಶಿರೋಮಣಿ ಕುಂಭಕೋಣ ಶೇಷಾಚಾರ್ಯರು. ನೂರಾರು ವಿದ್ಯಾರ್ಥಿಗಳಿಗೆ ವ್ಯಾಕರಣ ಪಾಠವನ್ನು ಹೇಳಿ ಪಂಡಿತರನ್ನಾಗಿ ಮಾಡಿದವರು. (೬) ಜ್ಯೋತಿಷರತ್ನ ನರಹರಿ ಜೋಯಿಸರು. ವಾರದ ಹುಡುಗರಿಗೆ ಏಕಾದಶೀ ದಿವಸಗಳಲ್ಲಿ ಭೋಜನಾನುಕೂಲಗಳನ್ನು ಮಾಡಿಸಿಕೊಟ್ಟಿದ್ದರು. (೭) ವಿದ್ಯಾತರಂಗಿಣೀ ಮುದ್ರಾಕ್ಷರ ಶಾಲೆಯನ್ನಿಟ್ಟುಕೊಂಡು ಬಡಬಗ್ಗರಿಗೆ ಸುಲಭಕ್ರಯದಲ್ಲಿ ಸಂಸ್ಕೃತ ಪುಸ್ತಕಗಳನ್ನೊದಗಿಸಿಕೊಟ್ಟ ಚಕ್ರವರ್ತಿ ಅಯ್ಯಂಗಾರರು. ಸಾಹಿತ್ಯ ಮತ್ತು ವ್ಯಾಕರಣ ಪಂಡಿತರು. (೮) ಸಂಸ್ಕೃತ ಪಂಡಿತರಾಗಿ ಕನ್ನಡದಲ್ಲಿ ಗ್ರಂಥಗಳನ್ನು ಬರೆದು ಸೇವೆ ಮಾಡಿದವರುಗಳು — ಅಭಿನವಕಾಳಿದಾಸ ಬಸಪ್ಪಶಾಸ್ತ್ರಿ, ಕವಿತಿಲಕ ಸೋಸಲೆ ಅಯ್ಯಶಾಸ್ತ್ರಿ, ಪಂಡಿತ ಜಯರಾಯಾಚಾರ್ಯ, ನಂಜನಗೂಡು ಸುಬ್ಬಶಾಸ್ತ್ರಿ, ನಂಜನಗೂಡು ಅನಂತನಾರಾಯಣಶಾಸ್ತ್ರಿ, ಬಿ. ಮಲ್ಲಪ್ಪ ಇತ್ಯಾದಿಗಳು.

(೯) ಋಗ್ಯಜುರ್ವೇದಗಳಿಗೆ ದ್ವಿವೇದಿ ಸುಬ್ರಹ್ಮಣ್ಯ ವಾಧ್ಯಾಯರ್: ಸಾಮವೇದಕ್ಕೆ ಮಗುಶ್ರೌತಿ. (೧೦) ಆಂಗ್ಲೇಯಾಧಿಕಾರಿ ಲೂಯಿ ರೈಸ್ ಮತ್ತು ಅವರ ಬಳಿ ಬೆಳಗುತ್ತಿದ್ದ ಆರ್. ನರಸಿಂಹಾಚಾರ್ಯರು. (೧೧) ಕರ್ಣಾಟಕ ಕಾವ್ಯಕಲಾನಿಧಿಯ ಮತ್ತು ಕರ್ಣಾಟಕ ಕಾವ್ಯಮಾಲೆಯ ಕೆಲಸದಲ್ಲಿ ಉದ್ಯುಕ್ತರಾಗಿದ್ದ ಆಜಿ ರಾಮಾನುಜಯ್ಯಂಗಾರ್ ಮತ್ತು ಎಸ್. ಜಿ. ನರಸಿಂಹಾಚಾರ್ಯರು. (೧೨) ವಿದ್ಯಾದಾಯಿನಿ ಮತ್ತು ಕರ್ಣಾಟಕ ಗ್ರಂಥಮಾಲಾ ಸಂಪಾದಕರಾದ ಬಾಪು ಸುಬ್ಬರಾವ್ ಮತ್ತು ಅವರ ಸಹಾಯಕರಾದ ಎಂ. ಶಾಮರಾವ್. (೧೩) ಕನ್ನಡದಲ್ಲಿ ಮೊದಲನೆಯ "ಡಿಟೆಕ್ಟಿವ್ ನಾವೆಲ್" (Detective novel : ಚೋರಗ್ರಹಣ ತಂತ್ರ) ಬರೆದ, ಹಿತಬೋಧಿನಿ, ವೃತ್ತಾಂತ ಚಿಂತಾಮಣಿ, ಸಾಧ್ವಿ ಇತ್ಯಾದಿಗಳ ಸಂಪಾದಕರಾದ ವೃದ್ಧಪಿತಾಮಹ ವೆಂಕಟಕೃಷ್ಣಯ್ಯನವರು — ತಾತಯ್ಯನವರು. (೧೪) ಸುಮತಿ ಮತ್ತು ಮದನಕುಮಾರನ ಚರಿತ್ರೆ, ನೀತಿಚಿಂತಾಮಣಿ ಇತ್ಯಾದಿಗಳನ್ನು ಬರೆದ ಎಂ. ಎಸ್. ಪುಟ್ಟಣ್ಣನವರು. (೧೫) ನೀತಿರತ್ನಾಕರ, ಪ್ರಾಣಿಶಾಸ್ತ್ರ ಇತ್ಯಾದಿಗಳನ್ನು ಬರೆದ ಆರ್. ರಘುನಾಥರಾವ್. (೧೬) ಗ್ರಾಜುಯೇಟ್ಸ್ ಅಸೋಸಿಯೇಷನ್ (Graduates Association)ಗೆ ಸೇರಿದ ಪಿ. ರಾಘವೇಂದ್ರ ರಾಯರು; ಜಯರಾಯರು: ಪ್ರತಾಪರುದ್ರದೇವ ಮತ್ತು ಪ್ರಮೀಳಾರ್ಜುನೀಯಗಳನ್ನು ಬರೆದ ಮತ್ತು "ಸುರಭಿ"ಯ ಸಂಪಾದಕರಾದ ಶ್ರೀಕಂಠೇಶ ಗೌಡರು; ಚಿಕ್ಕಂದಿನಲ್ಲಿಯೇ ದೈವಾಧೀನರಾದ ಶೂರಸೇನ ಚರಿತ್ರೆಯನ್ನು ಬರೆದ ಸಿ. ಸುಬ್ಬರಾವ್ ಇತ್ಯಾದಿಗಳು. (೧೭) ಸ್ವಸಹಾಯ ದೀಪಿಕೆಯನ್ನು ರಚಿಸಿದ, ಮುದ್ರಾಮಂಜೂಷವನ್ನು ಪ್ರಕಟಿಸಿದ ಮತ್ತು "ಮಹಿಳಾಸಖಿ"ಯ ಸಂಸ್ಥೆಯಲ್ಲಿಯೂ ವೃತ್ತಾಂತ ಪತ್ರಿಕೆಯ ಸಂಸ್ಥೆಯಲ್ಲೂ ಶ್ರಮಿಸಿದ ವೇದಮಿತ್ರಯ್ಯನವರು. (೧೮) ಓರಿಯೆಂಟಲ್ ಲೈಬ್ರರಿಯಲ್ಲಿ ಅದ್ಭುತ ಕೆಲಸವನ್ನು ಮಾಡಿ ಸಂಸ್ಕೃತ ಮತ್ತು ಕನ್ನಡ ಎರಡಕ್ಕೂ ಸೇವೆಯನ್ನು ಸಲ್ಲಿಸಿದ ಎ. ಮಹದೇವಶಾಸ್ತ್ರಿಗಳು. (೧೯) ಧನ್ವಂತರಿಯ ಪ್ರೇಮಪುತ್ರರುಗಳು ಕೆಂಪುರಾಮಪಂಡಿತರು, ಪುಟ್ಟಶಾಮಪಂಡಿತರು, ಗುಂಡ್ಲುಪಂಡಿತರು — ಆಯುರ್ವೇದದಲ್ಲಿ ಅದ್ವಿತೀಯ ಪಂಡಿತರುಗಳು. (೨೦) ಶೃಂಗೇರಿ ಶಾರದಾ ಪೀಠ, ಮೈಸೂರು ಪರಕಾಲಸ್ವಾಮಿಯವರ ಪೀಠ, ವ್ಯಾಸರಾಯ, ಉತ್ತರಾದಿ — ಇತ್ಯಾದಿ ಮಠಗಳಲ್ಲಿ ಅಧಿಷ್ಠಿತರಾದ ದೇವಾಂಶ ಪುರುಷರುಗಳು. (೨೧) ಬೆಂಗಳೂರು, ಮೇಲುಕೋಟೆ ಮತ್ತು ಸಂಸ್ಥಾನದ ಇತರ ಪಾಠಶಾಲೆಗಳಲ್ಲಿದ್ದ ವಿದ್ವನ್ಮಣಿಗಳು. (೨೨) ಮೈಸೂರು ಅರಮನೆ ಧರ್ಮಾಧಿಕಾರಿಗಳು. (೨೩) ಕನ್ನಡಕ್ಕೆ ಬೆಂಬಲ ಕೊಡುತ್ತಿದ್ದ ಏಕಾಂಗಿಯಾದ ರಸಿಕಶಿರೋಮಣಿ ನಿವೃತ್ತ ರಾಜ್ಯಾಧಿಕಾರಿ ಅಂಬಿಲ್ ನರಸಿಂಹ ಅಯ್ಯಂಗಾರವರು. (೨೪) ಮನೋಜ್ಞ ಕವಿ ರಸಿಕಾಗ್ರೇಸರ ಅಳಿಯ ಲಿಂಗರಾಜ ಅರಸಿನವರು. (೨೫) ವಾಣಿಯ ಪ್ರೇಮಪುತ್ರ ಮೃದುಮಧುರ ಗುಣಾನ್ವಿತ ಸರಳಹೃದಯ ಸಹೃದಯ ವೀಣೆ ಶೇಷಣ್ಣನವರು: ಮತ್ತು ಅವರಲ್ಲಿ ಪ್ರವರ್ಧಮಾನರಾಗುತ್ತಿದ್ದ ಶಿಷ್ಯಂದಿರುಗಳು. ಈ ಕಾಲದಲ್ಲಿ ಬಿಡಾರ ಕೃಷ್ಣಪ್ಪ ಮತ್ತು ಪಂಡಿತ ವಾಸುದೇವಾಚಾರ್ಯರು ಮುಂದಕ್ಕೆ ಬರುತ್ತಿದ್ದರು. (೨೬) ವೀಣೆ ಶಾಮಣ್ಣ, ವೀಣೆ ಸುಬ್ಬಣ್ಣ, ವೀಣೆ ಸುಬ್ಬರಾಯರು, ಸಂಗೀತ ವಿದ್ವಾನ್

ಕರಿಗಿರಿರಾಯರು — ಇವರುಗಳು ರಾಜಾಸ್ಥಾನದಲ್ಲಿ ಮಾನ್ಯರಾಗಿದ್ದರು. (೨೭) ನಟರತ್ನ ಗಾಂ ನರಸಿಂಹಯ್ಯ ಮತ್ತು ಅವರ ತಮ್ಮ ದೇವುಡು ಶಾಸ್ತ್ರಿ, ಕವಿ ಮತ್ತು ನಟ ಗಿರಿಭಟ್ಟರ ತಮ್ಮಯ್ಯ, ರಾಜಾಪಾರ್ಟ್ ಸುಬ್ಬಣ್ಣ, ನಾಟಕದ ಕೃಷ್ಣಯ್ಯಂಗಾರ್, ಸರ್ವಪಾತ್ರಾಭಿನಯಚತುರ ಲಕ್ಷ್ಮೀಪತಿಶಾಸ್ತ್ರಿ, ಹಾಸ್ಯರಸಾಭಿನಯಚತುರ ಪುಟ್ಟಾರಿಶಾಸ್ತ್ರಿ, ನಟಶ್ರೇಷ್ಠ ಎ. ವಿ. ವರದಾಚಾರ್ಯ — ಇತ್ಯಾದಿಗಳು ಕನ್ನಡ ನಾಟಕಗಳನ್ನು ಆಡಿ ಭಾಷಾಸೇವೆ ಮಾಡುತ್ತಿದ್ದರು. (೨೮) ಅರಮನೆಗೆ ಸೇರಿದ ಸರಸ್ವತೀ ಭಂಡಾರದಲ್ಲಿದ್ದ ಪಂಡಿತರುಗಳು ಅನೇಕ ಕನ್ನಡ ಗ್ರಂಥಗಳನ್ನು ಪ್ರಚಾರಕ್ಕೆ ತಂದರು. (೨೯) ಬೆಂಗಳೂರಲ್ಲಿ ಅಡ್ವೋಕೇಟ್ ಡಿ. ವೆಂಕಟರಾಮಯ್ಯ ಮತ್ತು ಅವರ ಗುಂಪಿನವರು ವೃತ್ತಾಂತ ಚಿಂತಾಮಣಿಯನ್ನು ವಾರಪತ್ರಿಕೆಯನ್ನಾಗಿ ಪ್ರಕಟಿಸಿ, ಅವರ ಸ್ನೇಹಿತರುಗಳೊಡನೆ ಅನೇಕ ವಿಧವಾಗಿ ಕನ್ನಡಸೇವೆ ಮಾಡಿದರು. (೩೦) "ಆರ್ಯಕೀರ್ತಿ" ಮತ್ತು "ಭೀಷ್ಮಚರಿತ್ರೆ"ಗಳನ್ನು ಬರೆದು, ಮಕ್ಕಳ ಗುಂಪಿನಲ್ಲಿ "ಆಟ ಊಟ"ದ ತಾತಯ್ಯನೆಂದು ಸುಪ್ರಸಿದ್ಧರಾದ ಜ. ವಾಸುದೇವಯ್ಯನವರು. ಈ ಕಾಲದಲ್ಲಿ ಮೈಸೂರಲ್ಲಿ "ಭಾಷೋಜ್ಜೀವಿನೀ ಪಾಠಶಾಲೆ"ಯು (ಈಗಿನ "ಟೀಚರ್ಸ್ ಟ್ರೈನಿಂಗ್ ಕಾಲೇಜ್") ಪ್ರಾರಂಭವಾಗಿ ಕನ್ನಡಕ್ಕೆ ಅಪಾರ ಸೇವೆಯನ್ನು ಸಲ್ಲಿಸಿತು. ಇದು ಸರ್ಕಾರದ ಸಹಾಯ.

ಇದೇ ಪ್ರಕಾರ ಇನ್ನೂ ನೂರಾರು ಪ್ರಸಿದ್ಧ ಹೆಸರುಗಳನ್ನು ನೆನಪಿಗೆ ತಂದುಕೊಳ್ಳಬಹುದು. ಮುಖ್ಯವಾದ ವಿಷಯವೇನೆಂದರೆ: ಭಾಷೋಜ್ಜೀವನದ ಎರಡನೆಯ ಭಾಗವಾದ ಮೂವತ್ತು ವರ್ಷಗಳಲ್ಲಿ ನಮ್ಮ ಮೈಸೂರು ನಾಡು ಆರ್ಯಸಂಪ್ರದಾಯ, ವೈದಿಕ ಮತಾನ್ವೇಷಣ, ಅನೂಚಾನವಾಗಿ ಬಂದ ವೇದಪುರಾಣೇತಿಹಾಸಗಳ ಪುರಸ್ಕರಣೆ, ಮತ್ತು ಸಾಹಿತ್ಯ ಸಂಗೀತ ನೃತ್ಯಗೀತ ವಾದ್ಯಗಳಾರಾಧನೆಯ ಮೂಲಕ ಲಲಿತಕಲೋಪಾಸನೆ — ಇವುಗಳೆಲ್ಲವನ್ನೂ ಕನ್ನಡ ಭಾಷೋಜ್ಜೀವನದ ಉಪಭಾಗಗಳೆಂದೆಣಿಸಿ ಒಗ್ಗಟ್ಟಿನಿಂದ ಎಲ್ಲರೂ ಭಾಷಾಸೇವೆಯನ್ನು ಮಾಡಿರುವುದು. ಇವುಗಳಿಗೆ ಕಾರಣರಾದ ಸಂಸ್ಕೃತ ಪಂಡಿತರುಗಳನ್ನು ಸದಾ ನೆನಪಿನಲ್ಲಿಡುವುದು ನಮ್ಮ ಕರ್ತವ್ಯ ಮತ್ತು ಧರ್ಮವೆಂದು ಹೇಳಬೇಕಲ್ಲವೆ? ಈ ಅದ್ಭುತ ಪರಿಣಾಮಕ್ಕೆ ಮೂಲಪುರುಷರು ಸರ್ವಪ್ರಕಾರದಲ್ಲಿಯೂ ಚಾಮರಾಜ ಒಡೆಯರವರು.

ಮೂರನೆಯ ಕಾಲವು ಸುಮಾರು ೧೯೧೦ ರಿಂದ ೧೯೪೦ರ ವರೆಗೆ ಎಂದು ಇಟ್ಟುಕೊಳ್ಳಬಹುದು. ಈ ಕಾಲದಲ್ಲಿ ಅನೇಕ ವಿಧಗಳಾದ ಭಾಷೋಜ್ಜೀವನ ಕಾರ್ಯಗಳು ಅದ್ಭುತವಾಗಿ ನಡೆದವು. ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು ಈ ಕಾಲಕ್ಕೆ ಸೇರಿದವರು ಮತ್ತು ಕೆಲಸಮಾಡಿದವರಲ್ಲಿ ಅಗ್ರಸ್ಥಾನವನ್ನು ಈಗ ಪಡೆದಿದ್ದಾರೆ.

ಮೈಸೂರು ದೇಶವು ೧೮೮೦ನೆಯ ಇಸವಿಯಿಂದ ರಾಜಕೀಯ ಮತ್ತು ಸಾಮಾಜಿಕ ಕ್ಷೇತ್ರಗಳಲ್ಲಿ ಏಕಪ್ರಕಾರವಾಗಿ ಅಭಿವೃದ್ಧಿ ಹೊಂದುತ್ತಿತ್ತು. ೧೮೮೧ನೆಯ ಇಸವಿಯಿಂದ, ಎಂದರೆ ಬ್ರಿಟಿಷ್ ಮೇಲಾಡಳಿತ ತಪ್ಪಿ ನಮ್ಮ ನಾಡಿನ ದೊರೆಗಳಾದ ಚಾಮರಾಜ ಒಡೆಯರವರಿಗೆ ಮೈಸೂರು ದೇಶದ ಆಳಿಕೆಯು ದೊರೆತಾಗಿನಿಂದ, ರಾಜ್ಯದಲ್ಲಿ ಒಂದು ನವಚೇತನವುಂಟಾಗಿ ಪ್ರಜೆಗಳನ್ನು ಉತ್ಸಾಹ

ಭರಿತರನ್ನಾಗಿ ಮಾಡಿ ನಾನಾ ವಿಧಗಳಲ್ಲೂ ಮುಂದುವರಿಯಲು ಅವಕಾಶಗಳು ದೊರಕಿದವು. ವಿದ್ಯಾಭ್ಯಾಸವು— ಕನ್ನಡ ಮತ್ತು ಇಂಗ್ಲೀಷು — ಹೆಚ್ಚುತ್ತಬಂತು. ಓದುವವರ ಸಂಖ್ಯೆ ಹೆಚ್ಚಾಯಿತು. ಇಂಗ್ಲೀಷು ಭಾಷಾ ಪ್ರಾಬಲ್ಯವು ಅಧಿಕಾಧಿಕವಾಗಿ ಜನಗಳನ್ನು ವಶಮಾಡಿಕೊಂಡಿತು. ಇಂಡಿಯಾ ದೇಶದ ನಾನಾ ಬ್ರಿಟಿಷ್ ಪ್ರಾಂತಗಳಲ್ಲಿ ರಾಜಕೀಯ ಚಳುವಳಿಗಳು ಪ್ರಾರಂಭವಾಗಿ ಮತ್ತು ವ್ಯಾಪಾರಗಳು ಎಲ್ಲೆಲ್ಲೂ ಅಭಿವೃದ್ಧಿಯಾಗಿ, ನಾನಾ ಭಾಷೆಗಳನ್ನೊಳಗೊಂಡ ನಮ್ಮ ಭಾರತ ಭೂಮಿಯಲ್ಲಿ ದಿನಚರಿ ವ್ಯವಹಾರಗಳಿಗೆ ಇಂಗ್ಲೀಷು ಭಾಷೆಯು ಪ್ರಥಮಸ್ಥಾನವನ್ನು ಪಡೆಯಿತು. ಪರದೇಶದ ವ್ಯಾಪಾರ ವ್ಯವಹಾರಗಳಿಗೆ ಅತ್ಯಾವಶ್ಯಕವಾಗಿ ಬೇಕಾದುದರಿಂದಲೂ ಮತ್ತು ಚಕ್ರಾಧಿಪತ್ಯಕ್ಕೆ ಮುಖ್ಯ ಭಾಷೆಯಾದುದರಿಂದಲೂ ಇಂಗ್ಲೀಷಿಗೆ ಮತ್ತಷ್ಟು ಹೆಚ್ಚಿನ ಸ್ಥಾನ ದೊರೆಯಿತು. ಅಲ್ಲದೆ ಇಂಗ್ಲೆಂಡಿಗೆ ವಿದ್ಯಾಭ್ಯಾಸಕ್ಕೆ ಹೋಗಿ ಅಲ್ಲಿಂದ ಹಿಂತಿರುಗಿ ಬಂದಮೇಲೆ ಕೆಲವು ಭಾರತೀಯರು ಇಂಗ್ಲೀಷನ್ನು ಮತ್ತಷ್ಟು ಹರಡುವುದಕ್ಕೆ ತೊಡಗಿದರು. ಇಂಗ್ಲೆಂಡಿನ ಸಮಸ್ತ ಪುಸ್ತಕ ವ್ಯಾಪಾರಿಗಳು ಅತ್ಯುತ್ತಮಗಳಾದ ಇಂಗ್ಲೀಷು ಪುಸ್ತಕಗಳನ್ನು ಅತಿಸುಲಭ ಕ್ರಯದಲ್ಲಿ ಇಂಡಿಯಾದಲ್ಲಿ ಮಾರ ತೊಡಗಿದರು. ಮಾಧ್ಯಮಿಕ ಪಾಠಶಾಲೆಗಳಲ್ಲೂ ಮತ್ತು ವಿಶ್ವವಿದ್ಯಾನಿಲಯಗಳಲ್ಲೂ ಇಂಗ್ಲೀಷಿಗೆ ಪ್ರಥಮಸ್ಥಾನ ದೊರಕಿತು. ಇಂಗ್ಲೀಷು ಭಾಷೆಯು ನಮ್ಮ ಪುಣ್ಯಭೂಮಿಯಾದ ಭರತಖಂಡದಲ್ಲಿ "ಪ್ರಥಮಭಾಷೆ"ಯೆಂದು ಕರೆಯಲ್ಪಟ್ಟಿತು. ಹೈಸ್ಕೂಲು ಮತ್ತು ಕಾಲೇಜು ಕ್ಲಾಸಿನಲ್ಲಿ ಇಂಗ್ಲೀಷು ಭಾಷೆಯಲ್ಲಿಯೇ ಪಾಠ ಪ್ರವಚನಗಳು ನಡೆಯುವುದಕ್ಕೆ ಪ್ರಾರಂಭವಾಯಿತು. ಇದು ಎಷ್ಟು ಮಟ್ಟಿಗೆ ಮುಂದುವರಿಯಿತೆಂದರೆ ಕಾಳಿದಾಸನ ಶಾಕುಂತಲ ನಾಟಕವನ್ನು ಭಾರತೀಯರು ಇಂಗ್ಲೀಷು ಭಾಷೆಯಲ್ಲಿ ಪಾಠ ಹೇಳುತ್ತಿದ್ದರು— ಈಗಲೂ ಹೇಳುತ್ತಿದ್ದಾರೆ. ಇಂಗ್ಲೀಷಿನಲ್ಲಿ ಮಾತಾಡುವುದು, ಇಂಗ್ಲೀಷು ಕವಿಗಳ ವಾಕ್ಯೋದ್ಧರಣೆ ಮಾಡುವುದು ಒಂದು ಅಂತಸ್ತಿನ ಗುರುತೆಂದು ಭಾವಿಸಲ್ಪಡುತ್ತಿತ್ತು.

ಇಂಗ್ಲೀಷಿನ ಉಚ್ಛ್ರಾಯಸ್ಥಿತಿಯನ್ನು ಮತ್ತು ದೇಶಭಾಷೆಗಳ ದುರವಸ್ಥೆಯನ್ನು ನೋಡಿ ಕೊರಗಿ. ಈ ಸ್ಥಿತಿಯು ದೇಶೋನ್ನತಿಗೆ ಕುಂದಕವೆಂದು ಅರಿತು ಕೆಲವು ವಿದ್ಯಾವಂತರು ದೇಶಭಾಷೋಜ್ಜೀವನ ಕಾರ್ಯಗಳಲ್ಲಿ ಉದ್ಯುಕ್ತರಾದರು. ಇದರಲ್ಲಿ ಒಂದು ವಿಶೇಷವೇನೆಂದರೆ: ಇಷ್ಟು ಹೊತ್ತಿಗಾಗಲೆ ಇಂಡಿಯಾ ದೇಶದ ಪ್ರತಿಭಾಗದಲ್ಲೂ ಪೂರ್ವಪದ್ಧತಿಯನ್ನು ಅನುಸರಿಸುತ್ತಿದ್ದ ವೈದಿಕ ಪಂಡಿತರು ಉತ್ತೇಜನವಿಲ್ಲದೆ ನಿರುತ್ಸಾಹಿಗಳಾಗಿ ಹಿಂದಕ್ಕೆ ಬಿದ್ದುಬಿಟ್ಟರು. ಇಂಗ್ಲೀಷು ಮತ್ತು ಇತರ ಪಾಶ್ಚಿಮಾತ್ಯ ಭಾಷಾ ಪಾರಂಗತರಾಗಿಯೂ ಮತ್ತು ಸಂಸ್ಕೃತ ಅಥವಾ ಬೇರೆ ಪ್ರಾಂತೀಯ ಭಾಷಾ ಪಂಡಿತರಾಗಿಯೂ ಇದ್ದ ಕೆಲವು ಮಹನೀಯರುಗಳು ಧೈರ್ಯವನ್ನು ತಾಳಿ ದೇಶಭಾಷೋಜ್ಜೀವನ ಕಾರ್ಯದಲ್ಲಿ ಬದ್ಧಕಂಕಣರಾದರು. ವಂಗ, ತೆಲಗು, ಗುಜರಾತಿ, ಹಿಂದಿ, ಮರಾಟಿ, ತಮಿಳು— ಈ ಭಾಷೆಗಳೆಲ್ಲವೂ ಪುನರುಜ್ಜೀವಿತಗಳಾಗಿ ಹೊಸ ಹೊಸ ಮಾರ್ಗಗಳನ್ನು ಹಿಡಿದು ಜನಜೀವನದ ನವಚೇತನಕ್ಕನುಸಾರವಾಗಿ ಪ್ರಜಾಸಮುದಾಯದಲ್ಲಿ ಹರಡಲು ಪ್ರಾರಂಭ ಮಾಡಿದವು. ಹೊಸ ಕವನಗಳಲ್ಲಿ. ಪ್ರಬಂಧಗಳಲ್ಲಿ. ನಾಟಕಗಳಲ್ಲಿ– ಹೆಚ್ಚೇಕೆ?–

ನವೀನ ಗದ್ಯ ಪದ್ಯ ಮಿಶ್ರಕಾವ್ಯಗಳಲ್ಲೆಲ್ಲಾ ಹೊಸ ಹುರುಪು ತುಂಬಿತು. ಆದರೆ ಇಂಗ್ಲೀಷು ಭಾಷಾ ಸಾಹಚರ್ಯದಿಂದ— ಸ್ನೇಹದಿಂದ— ಇಂಗ್ಲೀಷು ಭಾಷೋಪಾಸನೆಯಿಂದ, ಇಂಗ್ಲೀಷು ಕವಿಗಳ ಶ್ರೇಷ್ಠಗ್ರಂಥಗಳ ವ್ಯಾಸಂಗದಿಂದ ಉಂಟಾದ ಒಂದು ವಿಧವಾದ ಅನಿರ್ವಚನೀಯವಾದ ಮನಃಪರಿಪಾಕದಿಂದ, ಇಂಗ್ಲೀಷ್ ಭಾಷಾಶಕ್ತಿ ಪ್ರಭಾವಸಾಮರ್ಥ್ಯ ಅಧಿಕಾರಸ್ಥಾನ ಗೌರವಗಳಿಂದುಂಟಾದ ಪರಿಣಾಮಗಳಿಂದ—ಇವುಗಳೆಲ್ಲವುಗಳಿಂದಲೂ ಈ ಕಾಲದಲ್ಲಿ ಬರೆದ ಗ್ರಂಥಗಳಲ್ಲೆಲ್ಲಾ ಒಂದು "ಹೊಸ ವಾಸನೆ" ತುಂಬಲು ಪ್ರಾರಂಭವಾಯಿತು. ಇದು ಅನಿವಾರ್ಯವಾದುದೆಂಬುದು ಬಹುಮತವಾಗಿದೆ. ಈ ತೆರನಾದ ಹೊಸ ಹುರುಪು ಕನ್ನಡ ಭಾಷೆಗೆ ಬರಲು ಸ್ವಲ್ಪ ತಡವಾಯಿತು. ಮಿಕ್ಕ ಭಾಷೆಗಳು ಮುಂದಕ್ಕೆ ಬಂದವು, ಕನ್ನಡವು ಹಿಂದುಳಿದಿದೆಯಲ್ಲಾ ಎಂದು ಕನ್ನಡಿಗರಲ್ಲಿ ಕಳವಳವುಂಟಾಯಿತು. ಕರ್ಣಾಟಕ ಭಾಷೋಜ್ಜೀವನದ ಒಂದು ಹೊಸ ಯುಗವು ಪ್ರಾರಂಭವಾಗುವುದಕ್ಕೆ ಸಮಯವೊದಗಿತು. ಭಾಷಾಸೇವೆ ಮಾಡಲು ಜನಗಳೂ ಸಿದ್ಧರಾಗಿದ್ದರು. ಎಂದಿನಂತೆ ನಮ್ಮ ಮೈಸೂರು ದೇಶದಲ್ಲಿ ಪ್ರಭುವರ್ಯರಾದ ನಾಲ್ವಡಿ ಕೃಷ್ಣರಾಜ ಒಡೆಯರವರು ಪ್ರಥಮಸ್ಥಾನವನ್ನಲಂಕರಿಸಿದ್ದರು. ಮೈಸೂರು ವಿಶ್ವವಿದ್ಯಾನಿಲಯದ ಒಂದು ಉತ್ಸವಕಾಲದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರವರು ಕನ್ನಡಕ್ಕೆ ಪ್ರತಿಯೊಂದು ವಿಧದಲ್ಲಿಯೂ ಸಹಾಯಮಾಡುವುದಾಗಿ ಅಭಯವನ್ನಿತ್ತರು. ದಿವಾನ್ ಸರ್ ಎಂ. ವಿಶ್ವೇಶ್ವರಯ್ಯ, ಎಚ್. ವಿ. ನಂಜುಂಡಯ್ಯ, ದಿವಾನ್ ಸರ್. ಎಂ. ಕಾಂತರಾಜ ಅರಸರು, ಎಂ. ಶ್ಯಾಮರಾವ್, ಕರ್ಪೂರ ಶ್ರೀನಿವಾಸರಾವ್, (ಈಗ ರಾಜಸೇವಾಸಕ್ತ) ಬೆಳ್ಳಾವೆ ವೆಂಕಟನಾರಣಪ್ಪ, ಡಿ. ವಿ. ಗುಂಡಪ್ಪ, ನಂಗಪುರಂ ವೆಂಕಟೇಶಯ್ಯಂಗಾರ್, ಇತ್ಯಾದಿ ಮಹನೀಯರುಗಳು ಕರ್ಣಾಟಕ ಸಾಹಿತ್ಯ ಪರಿಷತ್ತನ್ನು ಸರ್ಕಾರದ ಆಶ್ರಯದಲ್ಲಿ ಸ್ಥಾಪಿಸಿದರು.

ಈ ಕಾಲದಲ್ಲಿ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಎಲೆಮರೆಯ ಕಾಯಿನಂತೆ ಅಥವಾ ಬೂದಿಮುಚ್ಚಿದ ಕೆಂಡದಂತೆ ಒಂದು ಸಾಧುವ್ಯಕ್ತಿಯಿತ್ತು. "ಇಂಗ್ಲಿಷ್ ಪ್ರೊಫೆಸರ್— ಆದರೆ ಅವರಿಗೆ ಕನ್ನಡವೂ ಬರುತ್ತಂತೋ" ಎಂದು ಜನರು ಆಡಿಕೊಳ್ಳುವ ವಾಡಿಕೆಯಿತ್ತು. ಮದರಾಸಿನಲ್ಲಿ ಅವರು ವಿದ್ಯಾರ್ಥಿಯಾಗಿ ಓದುತ್ತಿದ್ದಾಗಲೆ "ಬ್ರೌನಿಂಗ್" (Browning) ಮಹಾಕವಿಯ ಗ್ರಂಥಗಳ ವಿಷಯದಲ್ಲಿ ಅವರು "Authority" ಕಣೋ ಎಂದು ಯಶಸ್ಸು ಬಂದಿತ್ತು. ಇವರು ಎಂ.ಎ. ಪ್ಯಾಸ್ ಮಾಡಿದರು. ಬಿ.ಎಲ್. ಪರೀಕ್ಷೆ ಮಾಡಿದರು. ಮೈಸೂರು ಸಿವಿಲ್ ಸರ್ವೀಸ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಲಿಲ್ಲ. ಆಗ ಅವರಿಗೆ ಆಶಾಭಂಗವಾಗಿರಬಹುದು. ಈಗ ನಮಗೆ ಸಂತೋಷ— ನಿಜವಾಗಿಯೂ ಸಂತೋಷ. ತೇರ್ಗಡೆ ಹೊಂದಿದ್ದರೆ ರಾಜ್ಯಾಧಿಕಾರಿಗಳ ವರ್ಗದಲ್ಲಿ ಸೇರಿಕೊಂಡು ಪ್ರಭುವಿನ ಸೇವೆಯನ್ನು ಸಲ್ಲಿಸಿ ಪ್ರಭುವಿನ ಮೆಚ್ಚುಗೆಗೆ ಪಾತ್ರರಾಗಿ ಕೊನೆಗೆ "ರಾಜಸೇವಾಸಕ್ತ"ರೆಂಬ ಬಿರುದನ್ನೇ ಆಗಲೂ ಸಂಪಾದಿಸುತ್ತಿದ್ದರು. ಹಾಗಾಗಿದ್ದರೆ, ಅವರನ್ನು ಬೇರೆ ವಿಧವಾದ ಗೌರವದಿಂದ ಕಾಣುತ್ತಿದ್ದೆವು. ಅವರು ಸಿವಿಲ್ ಸರ್ವಿಸ್ ಪರೀಕ್ಷೆಯಲ್ಲಿ ತೇರ್ಗಡೆ ಹೊಂದದೇ ಹೋದದ್ದು ಕನ್ನಡಿಗರ ಪುಣ್ಯ. ನನಗೇನೋ ತುಂಬಾ ಸಂತೋಷ.

ಈ ವ್ಯಕ್ತಿ ಯಾರೆಂದರೆ ನಮ್ಮ ಮಾನ್ಯಮಿತ್ರರು ರಾಜಸೇವಾಸಕ್ತ ಬಿ. ಎಂ. ಶ್ರೀಕಂಠಯ್ಯನವರು.

ನನಗೆ ತಿಳಿದಿರುವಂತೆ ಶ್ರೀಕಂಠಯ್ಯನವರು ಮಿಕ್ಕ ವಿದ್ಯಾರ್ಥಿಗಳಂತೆ ಆಟಪಾಟಗಳಲ್ಲಿ ಭಾಗವಹಿಸುತ್ತಿರಲಿಲ್ಲ. ಮದರಾಸಿನಲ್ಲಿ ಸಮುದ್ರದ ದಡದಲ್ಲಿ ಸಾಯಂಕಾಲದಲ್ಲಿ ಓಡಾಡುತ್ತಿದ್ದರು. ಮೈಸೂರು ಬೆಂಗಳೂರುಗಳಲ್ಲೂ "ಗಾಳಿಸವಾರಿ"ಗೆ ಅಥವಾ "ಹವಾ ತಿನ್ನುವುದಕ್ಕೆ" ಅಥವಾ ಪ್ರಕೃತಿಸೌಂದರ್ಯೋಪಾಸನೆಗೆ ಅಥವಾ ಓದಿದ ವಿಷಯಗಳನ್ನು ಮನಸ್ಸಿನಲ್ಲಿ ಪುನಃಪುನಃ ಚಿಂತನೆ ಮಾಡುವುದಕ್ಕೆ ಅವರು ತಂಪು ಹೊತ್ತಿನಲ್ಲಿ ಸುತ್ತಾಡುವ ಪದ್ಧತಿಯಿದೆ. ಆ ಸಮಯದಲ್ಲಿ ಸ್ನೇಹಿತರು ಯಾರನ್ನಾದರೂ ಕಂಡರೆ ಅವರ ಗಂಭೀರವಾದ ಮೊಗವು ಅರಳುತ್ತದೆ. ಆದರಗರ್ಭಿತವಾದ ಮುಗುಳುನಗೆ, ಸಂತೋಷವನ್ನು ಚಿಮ್ಮುತ್ತಿರುವ ಕಣ್ಣುಗಳು, ಮನಸ್ಸನ್ನು ಕರಗಿಸುವ ಮೃದುವಾಣಿ. ಆ ವಾಣಿಯಲ್ಲಿ ಎಳೆಮಗು, ಪುಟ್ಟ ಹುಡುಗಿ ಮತ್ತು ಆಪ್ತ ಸ್ನೇಹಿತನ ಮಾತುಗಳ ಮಾಧುರ್ಯಗಳೆಲ್ಲವೂ ಇದ್ದು ಏಕಕಾಲದಲ್ಲಿ ಮನಸ್ಸನ್ನು ಸೆಳೆಯುವುವು. ಸಭೆಗಳಲ್ಲಿ, ಪಾಠಶಾಲೆಗಳಲ್ಲಿ, ಅವರ ಮನೆ "ಡ್ರಾಯಿಂಗ್ ರೂಮಿ"ನಲ್ಲಿ ನೋಡಬಹುದಾದ ಹಸನ್ಮುಖವೇ ಬೇರೆ. ಸೂರ್ಯೋದಯ ಸಮಯದಲ್ಲಿ "ಲಾಲ್ ಬಾಗಿ"ನಲ್ಲಿ ನಲಿಯುವ ಹಸನ್ಮುಖವೇ ಬೇರೆ. ಸ್ಮಿತವದನ ಮತ್ತು ಮಿತಭಾಷೆ—ಎರಡು ಮಾತನ್ನಾಡಿ ಸ್ನೇಹಿತರನ್ನು ಸಂತೋಷಗೊಳಿಸಿ, ತಮ್ಮ ಸ್ವಂತ ಸಾಹಿತ್ಯ ಪ್ರಪಂಚದಲ್ಲಿ ಅಲೆದಾಡುವರು ಅವರು. ಅವರನ್ನು ಕಂಡಮೇಲೆ ನಾವು ಅವರನ್ನು ನೆನೆಯುತ್ತಾ ಏನೇನೋ ದೊಡ್ಡ ಯೋಚನೆ ಮಾಡುತ್ತಾ ಮನೆಗೆ ಬರುವೆವು. ಅವರ ಸಂಪರ್ಕವೇ ಸಾಕು. ಜನಗಳ ಮನಸ್ಸು ಸಾಹಿತ್ಯ ಪ್ರಪಂಚದ ಕಡೆಗೆ ತಿರುಗುವುದು. ಆಕಸ್ಮಿಕವಾಗಿ ಕಂಡ ಸ್ನೇಹಿತರಿಗೇ ಹೀಗಾದರೆ ವರ್ಷಗಟ್ಟಳೆ ಇಂತಹ ಗುರುಸನ್ನಿಧಾನದಲ್ಲಿ ವಿದ್ಯಾಭ್ಯಾಸಂಗ ಮಾಡಿದ ವಿದ್ಯಾರ್ಥಿಗಳ ಉತ್ಸಾಹಕ್ಕೂ ಗೌರವಕ್ಕೂ ಪ್ರೀತಿಗೂ ಮಿತಿಯುಂಟೆ? ಇಷ್ಟಾದರೂ ಅಧ್ಯಾಪಕ ವೃತ್ತಿಯಲ್ಲಿದ್ದ ಮೊದಲನೆಯ ಭಾಗದಲ್ಲಿ ಸರ್ವ ಪ್ರಕಾರದಲ್ಲಿಯೂ ಮುಂದುವರಿದು ಬರಲು ಶ್ರೀಕಂಠಯ್ಯನವರು ಹಿಂಜರಿಯುತ್ತಿದ್ದರು. ಶಿಷ್ಯಂದಿರುಗಳ ಪಾಠ ಪ್ರವಚನಗಳು ಸಾಂಗವಾಗಿ ನಡೆದರೆ ಸಾಕು; ಮಿಕ್ಕ ಕಾಲಗಳಲ್ಲಿ ಗ್ರಂಥಾವಲೋಕನ, ಗ್ರಂಥ ಪಠನ; ಅನಂತರದಲ್ಲಿ "ಚಿಂತನೆ". ಉಪಾಧ್ಯಾಯರಾದ್ದರಿಂದ ಮನದಣಿಯುವಷ್ಟು (ಶ್ರೀಕಂಠಯ್ಯನವರಿಗೆ ಪುಸ್ತಕಗಳನ್ನು ಓದುವುದರಲ್ಲಿ ತೃಪ್ತಿಯೇ ಇಲ್ಲವೆಂದು ಹೇಳುತ್ತಾರೆ) ಅಥವಾ ಕೈಲಾದಷ್ಟು ಓದುವುದಕ್ಕೆ ಅನುಕೂಲಗಳೊದಗಿದವು. ಡೆಪ್ಯುಟಿ ಕಮಿಷನರಾಗಿದ್ದರೆ ಅಷ್ಟು ಸಮಯ ಒದಗುತ್ತಿರಲಿಲ್ಲ. ಇಷ್ಟು ಹೊತ್ತಿಗೆ ಇಂಗ್ಲೀಷು, ಕನ್ನಡ, ತೆಲಗು, ಸಂಸ್ಕೃತ ಮತ್ತು ತಮಿಳು—ಈ ಭಾಷೆಗಳ ಉತ್ತಮ ಗ್ರಂಥಗಳ ಪರಿಚಯದಿಂದ ರೂಢವಾದ ಜ್ಞಾನವು ಪರಿಪಾಕಸ್ಥಿತಿಯನ್ನು ಹೊಂದಿ, ಒಂದು ವಿಧವಾದ ಶಾಂತಿಯೂ, ಸ್ಥೈರ್ಯವೂ, ಆದರ್ಶಪ್ರಾಯವಾದ ವಿನಯವೂ ಶ್ರೀಕಂಠಯ್ಯನವರ ಮನಸ್ಸಿನಲ್ಲಿ ಸೇರಿದವು. ಸರ್ವಥಾ ಕನ್ನಡ ಸೇವೆಯನ್ನು ಹೇಗಾದರೂ ಮಾಡಿ ಧನ್ಯನಾಗಬೇಕೆಂಬ ಧ್ಯೇಯವು ಈ ಕಾಲದಲ್ಲಿ ಉಚಿತವಾಗಿ ಶ್ರೀಕಂಠಯ್ಯನವರ ಮನಸ್ಸಿನಲ್ಲಿ ನಿರ್ಧರವಾಗಿರಬೇಕೆಂದು ಊಹಿಸಬಹುದು. ಅವರ

ಕವಿತಾ ಸಾಮರ್ಥ್ಯವು ಹೊರಬೀಳುತ್ತಾ ಬಂತು.* ಮೋಡದ ಹಿಂದೆ ಬೆಳಗುವ ಮಿಂಚಿನಂತೆ— ಇಲ್ಲೊಂದು ಅಲ್ಲೊಂದು— ಅಂತೂ ಬೆಳಕು ಶಾಶ್ವತವಾಗಿದೆ; ಮೋಡಗಳು ಚೆಲ್ಲಾಪಿಲ್ಲಿಯಾದ ಮೇಲೆ ಎಲ್ಲವೂ ಕಾಣುವವು ಎಂಬಂತೆ. ಆಪ್ತ ಸ್ನೇಹಿತರು ಅವರ ಕವಿತ್ವಗಳನ್ನು ನೋಡಿ ಮೆಚ್ಚಿ ಮುಗ್ಧರಾದರು. ಶ್ರೀಕಂಠಯ್ಯ ನವರ ಕವಿತ್ವದ ವಿಷಯವಾಗಿ ಇತರರು ಪ್ರಸ್ತಾಪಿಸಿದ್ದಾರೆ. ನಾನು ಆ ಕೆಲಸವನ್ನು ಮಾಡಲು ಅಶಕ್ತ. ಆದರೆ ಪ್ರಕೃತದಲ್ಲಿ ಏನು ಹೇಳಬೇಕೆಂದರೆ: ಇಂಡಿಯಾ ದೇಶದ ಮುಕ್ಕ ಪ್ರಾಂತಗಳಲ್ಲಿ ಆದಂತೆಯೇ ಮೈಸೂರಲ್ಲೂ ಕೂಡ ಈ ಸಮಯದಲ್ಲಿ ನಡೆದ ಭಾಷೋಜ್ಜೀವನ ಕಾರ್ಯದಲ್ಲಿ ಇಂಗ್ಲೀಷು ತಿಳಿದ ಪಂಡಿತರು ಮುಂದಾಳುಗಳಾದರು; ಮತ್ತು ಈ ಗುಂಪಿಗೆ ಹೆಗ್ಗಡೆಯಾದರು ನಮ್ಮ ಶ್ರೀಕಂಠಯ್ಯನವರು. ಶ್ರೀಕಂಠಯ್ಯನವರಿಗೆ ವಿಶ್ವವಿದ್ಯಾನಿಲಯದಲ್ಲಿ ದೊಡ್ಡ ಸ್ಥಾನವೊದಗಿದುದು ಅವರಿಗೆ ತಮ್ಮ ಮನಸ್ಸಿನಲ್ಲಿರುವ ಧ್ಯೇಯಗಳನ್ನೆಲ್ಲಾ ಮುಂದುವರಿಸುವುದಕ್ಕೆ ಸಹಾಯವಾಯಿತು. ಭಾಷೋಜ್ಜೀವನವು ಸಮಾಜದ ಪ್ರತಿಯೊಂದು ಭಾಗವನ್ನೂ ಹೊಕ್ಕು ಪಂಡಿತ ಪಾಮರಾದಿಗಳೆಲ್ಲರಿಗೂ ರಂಜಿಸುವಂತೆ ನಡೆಯಬೇಕಾಗಿದ್ದಿತು. ಇದರ ಗುಟ್ಟು ಏನೆಂದರೆ: ತರುಣರನ್ನು ಹಿಡಿದು ಅವರ ಮನಸ್ಸನ್ನು ಒಲಿಸಿ ಈ ದಾರಿಗೆ ಎಳೆದ ಹೊರತು ಬೇರೆ ಮಾರ್ಗವಿರಲಿಲ್ಲ. ಈ ಸೌಕರ್ಯವು ಶ್ರೀಕಂಠಯ್ಯನವರಿಗೆ ದೊರಕಿತು. ಈ ಭಾವದ ಪರಿಣಾಮವು ಏನೆಂದರೆ: ಬೆಂಗಳೂರಲ್ಲಿ ಕರ್ಣಾಟಕ ಸಂಘದ ಜನನ ಮತ್ತು ಪ್ರಬುದ್ಧ ಕರ್ಣಾಟಕದ ಜನನ. ಇದು ಶ್ರೀಕಂಠಯ್ಯನವರ ಸ್ಫೂರ್ತಿದಾಯಕವಾದ ಮತ್ತು ಫಲದಾಯಕವಾದ ದೊಡ್ಡ ಕೆಲಸ. ಐರ್ಲೆಂಡ್ (Ireland) ದೇಶದಲ್ಲಿ "ಗೇಲಿಕ್" (Gaelic Language) ಭಾಷಾ ಸಂಘಗಳು ಫಲದಾಯಕಗಳಾಗಿ ಕೊನೆಯಲ್ಲಿ ಆ ದೇಶಕ್ಕೆ ಸ್ವಾತಂತ್ರ್ಯವನ್ನು ಸಂಪಾದಿಸಿಕೊಟ್ಟ ವಿಷಯವು ಈ ಸಮಯದಲ್ಲಿ ನೆನಪಿಗೆ ಬರುತ್ತದೆ. ಈ ಕೆಲಸದಲ್ಲಿ ಶ್ರೀಕಂಠಯ್ಯನವರ ಮಿತ್ರರೂ ಮತ್ತು ಶಿಷ್ಯರೂ ಸಹಾಯಮಾಡಿದರು. ಈ ಕಾಲದಲ್ಲಿ ಮುಂದುವರಿದು ಕನ್ನಡ ಸೇವೆಯನ್ನು ಮಾಡುತ್ತಿದ್ದವರ ವಿಷಯವಾಗಿ ಮಾಸ್ತಿ ವೆಂಕಟೇಶ ಅಯ್ಯಂಗಾರರವರು ೧೯೩೧ನೆಯ ಇಸವಿ ಸೆನ್ಸಸ್ ರಿಪೋರ್ಟಿನಲ್ಲಿ ಸೂಕ್ಷ್ಮವಾಗಿ ವಿಮರ್ಶಿಸಿದ್ದಾರೆ.† ತರುಣ ವಿದ್ಯಾರ್ಥಿಗಳು ಈ ಕೆಲಸದಲ್ಲಿ ಭಾಗವಹಿಸಲು ಅನುಕೂಲವಾಯಿತು ಮತ್ತು ವಿದ್ಯಾರ್ಥಿಗಳಿಗೆ ತನ್ಮೂಲಕ ಪ್ರಶಸ್ತಿದೊರೆಯಲು ಅನುಕೂಲವಾಯಿತು. ಈ ವಿಷಯಗಳನ್ನು ಇತರರು ಕೂಲಂಕಷವಾಗಿ ವಿಮರ್ಶಿಸಿ ಬೇರೆಕಡೆ ಪ್ರಸ್ತಾಪಿಸಿರುತ್ತಾರೆ. ಒಂದು ಒಳ್ಳೆಯ ಕೆಲಸ ನಡೆದರೆ ಎಲ್ಲರೂ ಅದೇ ಕೆಲಸದಲ್ಲಿ ಉದ್ಯುಕ್ತರಾಗುವುದು ವಾಡಿಕೆಯಲ್ಲಿರುತ್ತೆ. ಬಿ. ಎಂ. ಶ್ರೀಕಂಠಯ್ಯನವರ ಉತ್ತೇಜನದಿಂದ ಈಗ್ಯೆ ಕರ್ಣಾಟಕ ಸಂಘವಿಲ್ಲದ ತಾಲ್ಲೂಕೇ ಮೈಸೂರು ದೇಶದಲ್ಲಿಲ್ಲ. ತಾವು ಶ್ರಮಿಸುತ್ತಿದ್ದರೂ ಇತರರ ಕೈಲಿ— ಅದರಲ್ಲೂ ತಮ್ಮ ಶಿಷ್ಯಂದಿರುಗಳ

* ಅವರ ಕೆಲವು ಇಂಗ್ಲೀಷು ಗೀತೆಗಳ ಅನುವಾದವು ಮೊದಲು ಕರ್ಣಾಟಕ ಗ್ರಂಥಮಾಲೆಯಲ್ಲಿ ಬಾಪು ಸುಬ್ಬರಾಯರಿಂದ ಪ್ರಕಟವಾದುವು.

† Census of India, 1931, Vol. XXV, Mysore, Appendix VII, pages 353—58.

ಮುಖಾಂತರ— ಕೆಲಸಗಳನ್ನು ಮಾಡಿಸಿ "ಕನ್ನಡ ಬಾವುಟ"ವನ್ನು ಎಲ್ಲೆಲ್ಲೂ "ಶ್ರೀ"ಯವರು ಹಾರಿಸುತ್ತಿದ್ದಾರೆ. ಕನ್ನಡ ನಾಡಿನಲ್ಲಿ ಶ್ರೀಕಂಠಯ್ಯನವರು ನೋಡದ ಊರಿಲ್ಲ, ಹಳ್ಳಿಯಿಲ್ಲ. ಎಲ್ಲೆಲ್ಲೂ ಹೋಗಿ ಕನ್ನಡ ಜನರನ್ನೆಬ್ಬಿಸಿ ಕನ್ನಡ ಭಾಷೆಯ ಹಿರಿಮೆಯನ್ನು ತೋರಿಸಿ ಜನರೆಲ್ಲರೂ ಪುನಃ ಭಾಷಾ ಸೇವೆಯನ್ನು ಯಥಾಶಕ್ತಿಯಾಗಿ ನಡೆಸುವರೆಂಬ ಭರವಸೆಯನ್ನು ಶ್ರೀಕಂಠಯ್ಯನವರು ಸಂಪಾದಿಸಿದ್ದಾರೆ. ಕರ್ಣಾಟಕ ಏಕೀಕರಣ ಕಾರ್ಯದಲ್ಲಿ ಶ್ರೀಕಂಠಯ್ಯನವರು ಮಾಡಿರುವಷ್ಟು ಸೇವೆಯನ್ನು ಮೈಸೂರು ದೇಶದಲ್ಲಿ ಮತ್ತೆ ಯಾರೂ ಸಲ್ಲಿಸಿಲ್ಲ. ಸ್ವಂತ ಕೆಲಸದೊಡನೆ ಮೈಸೂರು ವಿಶ್ವವಿದ್ಯಾನಿಲಯದ ಸಹಾಯ, ತಮ್ಮ ಶಿಷ್ಯಂದಿರುಗಳ ಸಹಾಯ, ಮತ್ತು ಶ್ರೀಕಂಠಯ್ಯನವರ ಗುಣಗಳನ್ನು ಮೆಚ್ಚಿದ ಕನ್ನಡಿಗರ ಸಹಾಯ, ಪ್ರಭುಮಾನ್ಯರೆಂದು ಗೊತ್ತಾದ ವಿಷಯದ ಸಹಾಯ— ಇವುಗಳಿಂದ ಶ್ರೀಕಂಠಯ್ಯನವರು ಕನ್ನಡಕ್ಕೆ ಅದ್ಭುತ ಸೇವೆಯನ್ನು ಸಲ್ಲಿಸಿದ್ದಾರೆ. ಅಕ್ಷರಶಃ ತನುಮನಧನಗಳನ್ನು ನಿರ್ವಂಚನೆಯಾಗಿ ಕನ್ನಡ ಸೇವೆಗೆ ಧಾರೆ ಎರೆದಿದ್ದಾರೆ. ಶ್ರೀಕಂಠಯ್ಯನವರು ತಾವು ಬದುಕಿರುವುದೂ ಮತ್ತು ತಮ್ಮ ಸರ್ವಸ್ವವೂ ಕನ್ನಡ ಸೇವೆಗಾಗಿಯೇ ಎಂದು ತಮ್ಮ ಕಾರ್ಯಗಳಿಂದ ಖಚಿತವಾಗಿ ಎಲ್ಲರಿಗೂ ತೋರಿಸಿರುತ್ತಾರೆ. ಇವರನ್ನು ಪಡೆದಿರುವುದು ಕನ್ನಡಿಗರ ಭಾಗ್ಯ.

**ಸೋಸಲೆ ಗರಳಪುರಿ ಶಾಸ್ತ್ರಿ**

# ಪ್ರೊಫೆಸರ್ ಶ್ರೀಕಂಠಯ್ಯನವರು

## (೧)

ಕಾಲೇಜಿನಲ್ಲಿ ಉಪಾಧ್ಯಾಯರು 'ನೋಟ್ಸ್' ಹೇಳಿ ಬರೆಯಿಸುವ ವಾಡಿಕೆಯಿದೆ. ವಿದ್ಯಾರ್ಥಿಗಳಿಗೆ ಬೇಕಿರುವುದೂ ಅಷ್ಟೇ. ಮುಂದೆ ಪರೀಕ್ಷೆಯಲ್ಲಿ ಬರುವ ಪ್ರಶ್ನೆಗಳಿಗೆ ಉತ್ತರಗಳನ್ನು ಸಿದ್ಧಪಡಿಸುವುದೇ ಕಾಲೇಜಿನ ವಿದ್ಯಾರ್ಥಿಯ ಗುರಿ. ಈ ಪದ್ಧತಿ ಅನೂಚಾನವಾಗಿ ಬಂದದ್ದು. ಅದು ಕಾಲೇಜಿನ ಸಂಪ್ರದಾಯವಾಗಿ ಹೋಗಿದೆ. ಈ ಮಾರ್ಗವನ್ನು ಬಿಟ್ಟು ವಿದ್ಯಾರ್ಥಿಗಳಿಗೆ ಮನದಟ್ಟಾಗುವಂತೆ ಒಂದು ವಿಷಯವನ್ನು ಕುರಿತು ಉಪನ್ಯಾಸಮಾಡಿ, ತಮ್ಮ ಅಭಿಪ್ರಾಯವನ್ನು ಮುಂದಿಡದೆ, ಆ ವಿಷಯವಾಗಿ ಯೋಚನೆ ಮಾಡಿದವರ ಅಭಿಪ್ರಾಯಗಳನ್ನು ಕ್ರೋಡೀಕರಿಸಿ ಹೇಳಿ, ವಿದ್ಯಾರ್ಥಿಗಳನ್ನು ಯೋಚನಾಪರರನ್ನಾಗಿ ಮಾಡುವ ಉಪಾಧ್ಯಾಯರುಗಳನ್ನು ಶಾಲೆ ಕಾಲೇಜುಗಳಲ್ಲಿ ಹೊಂದುವುದು ವಿದ್ಯಾರ್ಥಿಯ ಪುಣ್ಯ ವಿಶೇಷ. ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರೊಬ್ಬರೇ ನನಗೆ ದೊರೆತ ಅಂತಹ ಗುರುಗಳು.

ಅವರು ಒಂದು ದಿನವಾದರೂ 'ನೋಟ್ಸನ್ನು' ಹೇಳಿ ಬರೆಯಿಸಿದವರಲ್ಲ. "ಲಿರಿಕಲ್ ಬ್ಯಾಲಡ್ಸ್"(Lyrical Ballads)ಎಂಬ ಪುಸ್ತಕ ಆ ವರ್ಷ ನಮಗೆ ಪಾಠದ ಪುಸ್ತಕವಾಗಿದ್ದಿತು. ಈ ಪುಸ್ತಕಕ್ಕೆ ಪೀಠಿಕೆಯಾಗಿ ಜನಪದಗಳ (Ballads and Folk Songs) ವಿಷಯವಾಗಿ ಇವರು ಸುಮಾರು ನಾಲ್ಕು ತಿಂಗಳಕಾಲ ಉಪನ್ಯಾಸ ಮಾಡಿದರು. ನಮ್ಮ ದೇಶದಲ್ಲಿ ಜನಪದಗಳ ಬೆಳವಣಿಗೆಯನ್ನು ಋಗ್ವೇದ ಮಂತ್ರಗಳಿಂದ ಆರಂಭಿಸಿಕೊಂಡು ಈಚಿನ ಲಾವಣಿಗಳವರೆಗೆ ವಿವರಿಸಿ, ಯೂರೋಪಿನಲ್ಲಿ ಇವು ಹೇಗೆ ಬೆಳೆಯಿತು, ಎಲ್ಲ ದೇಶ ಕಾಲಗಳಲ್ಲಿಯೂ ಈ ಜನಪದಗಳ ಮುಖ್ಯ ಲಕ್ಷಣಗಳೇನು ಎಂಬುವನ್ನು ಉದಾಹರಣೆ ಕೊಟ್ಟು ವಿವರಿಸಿದರು. ಆಗ ಅವರು ಕನ್ನಡದಲ್ಲಿ ಮಾತನಾಡುವುದು ಬಹು ಅಪೂರ್ವವಾಗಿದ್ದಿತು. ಇಂಗ್ಲಿಷು ಪಾಠ ಕಾಲದಲ್ಲಂತೂ ಕನ್ನಡ ಶಬ್ದವನ್ನು ಉಚ್ಚರಿಸುತ್ತಿರಲಿಲ್ಲ. ಆದರೂ ನಮ್ಮ ದೇಶದ ಜನಪದದ ಒಂದು ಉದಾಹರಣೆಯನ್ನು ಕೊಡುತ್ತಾ:

> ಹುಯ್ಯೋ! ಹುಯ್ಯೋ! ಮಳೆರಾಯ; ಹೂವಿನ ತೋಟಕ್ಕೆ ನೀರಿಲ್ಲ.
> ಬಾರೊ! ಬಾರೊ! ಮಳೆರಾಯ; ಬಾಳೆ ತೋಟಕ್ಕೆ ನೀರಿಲ್ಲ.

ಎಂದು ಸಣ್ಣ ದನಿಯಲ್ಲಿ ಹಾಡಿದಾಗ ನಮ್ಮ ಮೈ ರೋಮಾಂಚವಾದದ್ದು ಇಂದಿಗೂ ನೆನಪಿದೆ.

ಈ ಉಪನ್ಯಾಸಗಳನ್ನು ಕೊಡುವಾಗ ಅವರಿಗೆ ಟಿಪ್ಪಣಿಯ ಆವಶ್ಯಕತೆಯಿರಲಿಲ್ಲ. ಅವರ ಮಾತು ಕೇಳುವುದೆ, 'ನೋಟ್ಸ್' ಬರೆದುಕೊಳ್ಳುವುದೆ ಎನ್ನುವ ಸಂಕಟ ವಿದ್ಯಾರ್ಥಿಗಳಿಗೆ. ಈ ಮಧ್ಯೆ, ಈ ವಿಷಯವು ಪರೀಕ್ಷೆಗೆ ಆವಶ್ಯಕವಿಲ್ಲವೆಂದು ಒಬ್ಬಿಬ್ಬರು ಗೊಣಗಾಡುತ್ತಲೇ ಇದ್ದರು. ಎಂ.ಎ. ತರಗತಿಯ ವಿದ್ಯಾರ್ಥಿಗಳಿಗಲ್ಲದೆ ಈ ವಿಷಯವನ್ನು ಇನ್ನು ಯಾರಿಗೆ ಹೇಳಬೇಕು? ಅದೇ ರೀತಿಯಲ್ಲಿ

ವರ್ಡ್ಸ್‌ವರ್ತಿನ ಕವಿತೆಗಳಿಗೆ 'ಮುನ್ನುಡಿ' ಮತ್ತು ಕೋಲ್‌ರಿಜ್ಜಿನ 'ವಿಮರ್ಶೆ' ಗಳನ್ನು (Biographia Literaria) ಪಾಠ ಹೇಳುವಾಗ, ಪದ್ಯಕ್ಕೆ ಪ್ರತ್ಯೇಕವಾದ ಭಾಷೆ ಆವಶ್ಯಕವೇ ಎಂಬ ವಿಷಯವನ್ನು ಅವರು ವಿಚಾರಮಾಡಿದ ರೀತಿ, ವೈಖರಿ, ಧೋರಣೆ ನಮ್ಮ ಜೀವನದ ಒಂದು ದೊಡ್ಡ ಅನುಭವ. ಮುಂದೆ ಜೀವನದ, ಇಲ್ಲವೇ ಸಾಹಿತ್ಯದ, ವಿಮರ್ಶಕರಾಗಬಹುದಾದ ವಿದ್ಯಾರ್ಥಿಗಳಿಗೆ ಈ ಉಪನ್ಯಾಸಗಳು ಎಂಥ ಶಿಕ್ಷಣವಾಗಬಲ್ಲವು!

ಶ್ರೀ॥ ಶ್ರೀಕಂಠಯ್ಯನವರಿಗೆ ಮ್ಯಾಥ್ಯೂ ಆರ್ನಾಲ್ಡನ್ನು ಕಂಡರೆ ಬಹಳ ಮೆಚ್ಚುಗೆ. ಅವರ ಉಪನ್ಯಾಸದ ಧಾಟಿಯಲ್ಲಿ ಆರ್ನಾಲ್ಡಿನ ಶೈಲಿ ಎದ್ದು ಕಾಣುತ್ತಿತ್ತು. ವಿಷಯದ ಮುಖ್ಯ ಭಾಗಗಳನ್ನು ವಿವರಿಸುವ ಮಾತುಗಳನ್ನು ಒತ್ತಿ ಒತ್ತಿ, ಪುನಃ ಪುನಃ, ಹೇಳುವುದು ವಾಡಿಕೆಯಾಗಿದ್ದಿತು. ಇದಕ್ಕೆ ಒಂದು ಉದಾಹರಣೆ ಕೊಡುತ್ತೇನೆ. ವರ್ಡ್ಸ್‌ವರ್ತಿನ ಪದ್ಯ ಶೈಲಿಯನ್ನು ಚರ್ಚಿಸುತ್ತ "Wordsworth writes best when he puts his theory into his pocket" (ತನ್ನ ತತ್ವವನ್ನು ಮರೆತಾಗ—ಅದನ್ನು ಜೇಬಿಗೆ ಹಾಕಿದಾಗ—ವರ್ಡ್ಸ್‌ವರ್ತ್ ಅತ್ಯುತ್ತಮವಾಗಿ ಬರೆಯುತ್ತಾನೆ) ಎಂದು ಸೈಂಟ್ಸ್‌ಬೆರಿ ಹೇಳಿದ ಲೇವಡಿಮಾತನ್ನು ವಿಚಾರಮಾಡಬೇಕಾದಾಗ ತಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಅಷ್ಟು ಮಾತುಗಳಲ್ಲಿ ಹೇಳಲೊಲ್ಲರು. ಆ ವಾಕ್ಯವನ್ನು ತಮ್ಮ ಉಪನ್ಯಾಸಗಳಲ್ಲಿ ಬಾರಿಬಾರಿಗೂ ಬೇರೆ ಬೇರೆ ದನಿಯಲ್ಲಿ, ಧ್ವನಿಯಿಂದ ಕೂಡಿದ್ದಾಗಿ, ಇಲ್ಲ ವ್ಯಂಗ್ಯವಾಗಿ ಹೇಳಿ. ತಮ್ಮ ಅಭಿಪ್ರಾಯವೇನಿರಬಹುದೆಂದು ಊಹಿಸಲು ವಿದ್ಯಾರ್ಥಿಗಳಿಗೆ ಬಿಡುತ್ತಿದ್ದರು. ಸುಮಾರು ಹದಿನಾರು ವರ್ಷಗಳಾದಮೇಲೆ ಈ ಮಾತುಗಳು ನನ್ನ ನೆನಪಿನಲ್ಲಿರುವುದೆ ಈ ಬೋಧನೆಯ ಮಾರ್ಗದ ಮಹತ್ವವನ್ನು ಸಾರುವುದು.

ಅಲ್ಲದೆ ಆಗಾಗ್ಗೆ ಕಪ್ಪುಹಲಗೆ ಇವರ ಬೋಧನೆಯ ಸಹಾಯಕ್ಕೆ ಬರುತ್ತಿದ್ದಿತು. ಒಂದೆರಡು ಮಾತುಗಳನ್ನು ಕಪ್ಪುಹಲಗೆಯ ಮೇಲೆ ಗುರುತಿಸುವುದು. ಒಂದು ಮಾತಿನಿಂದ ಇನ್ನೊಂದಕ್ಕೆ ಒಂದು ಗೆರೆ ಎಳೆಯುವುದು, ಒಂದು ಮಾತಿಗೆ ಸೊನ್ನೆ ಸುತ್ತುವುದು, ಇನ್ನೊಂದರ ಕೆಳಗೆ ಒತ್ತಿ ಗೆರೆ ಎಳೆಯುವುದು—ಇದೇ ಅವರು ಬರಸುತ್ತಿದ್ದ ಟಿಪ್ಪಣಿ. ಹೀಗೆ ಕಪ್ಪುಹಲಗೆಯ ಮೇಲೆ ಬರೆಯಬೇಕಾದಾಗ ಅವರು ನಿಲ್ಲಬೇಕಿತ್ತು. ಆಗ ಅವರು ಒಂದು ಕೈಯಲ್ಲಿ, ಹೊಟ್ಟೆಯನ್ನುಮುಚ್ಚದೆ ಸಡಿಲವಾಗಿ ಕೊಂಡು ಜಾರಿಬೀಳುತ್ತಿದ್ದ ಗೌನನ್ನು ಎಳೆದು ಹಿಡಿದುಕೊಂಡು, ಇನ್ನೊಂದರಲ್ಲಿ ಹಿಡಿದ ಸೀಮೆಸುಣ್ಣದಿಂದ ಕಪ್ಪುಹಲಗೆಯ ಮೇಲೆ ಗುರುತಿಸುವುದು. "Lamb was sore, but not sour" (ಲ್ಯಾಂಬ್ ಬಹು ನೊಂದ ಮನುಷ್ಯನಾದರೂ, ಅವನ ಮನಸ್ಸು ಹುಳಿಯಾಗಲಿಲ್ಲ) ಎಂದು ನಾವೆಂದಿಗೂ ಮರೆಯಲಾಗದ ವಾಕ್ಯಗಳನ್ನು ಅಲ್ಲಲ್ಲಿ ಹೇಳಿದಾಗ ಕಣ್ಣುಗಳನ್ನು ಮುಚ್ಚುವುದು.—ಈ ಚಿತ್ರ ಅವರ ವಿದ್ಯಾರ್ಥಿಗಳ ಕಣ್ಣಿಗೆ ಇಂದಿಗೂ ಕಟ್ಟಿದಹಾಗೆ ಇದೆ.

ಶ್ರೀ॥ ಶ್ರೀಕಂಠಯ್ಯನವರ ಬೋಧನೆಯ ಇನ್ನೊಂದು ಅತಿಶಯವೇನೆಂದರೆ: ಇಂಗ್ಲಿಷ್ ಸಾಹಿತ್ಯದಲ್ಲಿ ಅವರಿಗಿದ್ದ ಉತ್ಸಾಹ. ಅವರು ಈ ಉತ್ಸಾಹವನ್ನು ತಮ್ಮ ವಿದ್ಯಾರ್ಥಿಗಳಲ್ಲಿ ತುಂಬುತ್ತಿದ್ದರು. ಒಂದು ಕವಿತೆಯನ್ನು ಅವರು ಓದಿದಮೇಲೆ,

ಅದರ ಅರ್ಥ, ತಾತ್ಪರ್ಯಗಳನ್ನು ವಿವರಿಸಬೇಕಾಗಿರಲಿಲ್ಲ. ಸಾಹಿತ್ಯ, ಕವಿತೆ ಸೃಷ್ಟಿಯಾಗುವುದು ಉತ್ಸಾಹದಿಂದ. ಉಪಾಧ್ಯಾಯರು ಆ ಕವಿತೆಯನ್ನು ವಿದ್ಯಾರ್ಥಿಗಳಿಗೆ ತಿಳಿಸಬೇಕಾದರೆ ಉತ್ಸಾಹದ ಮೂಲಕವಲ್ಲದೆ ಇನ್ನು ಹೇಗೆ ಸಾಧ್ಯ? ಆದರೆ ಈ ಮಾರ್ಗ ಎಲ್ಲ ಉಪಾಧ್ಯಾಯರಿಗೂ ಬರುವುದಿಲ್ಲವೆಂದು ಹಾಲಿ ಕಾಲೇಜುಗಳನ್ನು ಹೊಕ್ಕಿದ ವಿದ್ಯಾರ್ಥಿಗಳಿಗೆಲ್ಲರಿಗೂ ಗೊತ್ತು. ಬೋಧನೆಯೂ ಒಂದು ಕಲೆ. ಇದರಲ್ಲಿ ಜಾಣ್ಮೆ ಹುಟ್ಟುಗುಣವಾಗಿರಬೇಕು. 'ಶ್ರೀ' ಯವರು Francis Thompson's 'The Hound of Heaven' ಎಂಬ ಕವಿತೆಯನ್ನು ಓದಿದ್ದನ್ನು ನಾನೆಂದಿಗೂ ಮರೆಯಲಾರೆ. ಆ ಕವಿತೆಯ ಸಾಲುಗಳನ್ನು ಓದಿದ ಧ್ವನಿ ನನ್ನ ಕಿವಿಯಲ್ಲಿ ಇನ್ನೂ ಮೊಳಗುತ್ತಿದೆ.

But with unhurrying chase,
And unperturbed pace,
Deliberate speed, majestic instancy,

They beat—and a Voice beat
More instant than the Feet—
"All things betray Thee, who betrayest Me."

ಅವರ ಓದಿನಲ್ಲಿ ಕವಿತೆಯ ಆನಂದಾನುಭವದ ಧ್ವನಿಯಿರುತ್ತಿತ್ತು. ಅದರಲ್ಲಿ ಅಭಿನಯದ ಆಡಂಬರವಿಲ್ಲ, ಕೂಗಾಟವಿಲ್ಲ. ಧನಿಯ ಸೂಕ್ಷ್ಮವಾದ ಏರಿಳಿತಗಳಲ್ಲಿ ಅವರು ಕವಿತೆಯ ಜೀವಾಳವನ್ನು ಹೊರಗೆಡಹುತ್ತಿದ್ದರು. ಓದುವಾಗ ಕತ್ತು ಒಂದು ಕಡೆಗೆ ಬಾಗಿ ಸ್ವಾಭಾವಿಕವಾಗಿ ಅವರ ಕಣ್ಣುಗಳು ಆಗಾಗ್ಗೆ ಮುಚ್ಚುತ್ತಿದ್ದುವು. ಇದು ಭಾವಪ್ರದರ್ಶನಕ್ಕೆ ಒಂದು ವಿಲಕ್ಷಣವಾದ ಪುಷ್ಟಿಕೊಡುತ್ತಿತ್ತು. 'ಶ್ರೀ'ಯವರು ಒಂದು ಕವಿತೆ ಓದಿದ್ದನ್ನು ಕೇಳಿದಮೇಲೆ, ನಮ್ಮ ಜೀವಾವಧಿ ಆ ಕವಿತೆಯನ್ನು ನಮಗೆ ಪ್ರಿಯವನ್ನಾಗಿ ಮಾಡಿಕೊಂಡಂತೆಯೇ.

ನಾನು ಕಾಲೇಜಿನಲ್ಲಿದ್ದಾಗ ಶ್ರೀ॥ ಶ್ರೀಕಂಠಯ್ಯನವರು ಮೈಸೂರಿನ ವಿಶ್ವವಿದ್ಯಾನಿಲಯ ಸಂಘದ (The University Union, Mysore) ಅಧ್ಯಕ್ಷರಾಗಿದ್ದರು. ಆಗ, ತರಗತಿಗಳಲ್ಲಿ ವ್ಯಾಸಂಗಮಾಡುವ ಗ್ರಂಥಗಳು ಸಾಲವೆಂದು, ಸಾಹಿತ್ಯದಲ್ಲಿ ಆಸಕ್ತಿಯುಳ್ಳವರು ಹೆಚ್ಚು ಗ್ರಂಥಗಳನ್ನು ಓದಲು ಅನುಕೂಲಿಸುವಂತೆ ಅವರು ಆ ಸಂಘದಲ್ಲಿ ವ್ಯಾಸಂಗ ಗೋಷ್ಠಿಯೊಂದನ್ನು ಏರ್ಪಡಿಸಿ ಅನೇಕ ಕಾವ್ಯಗಳ ಪರಿಚಯವನ್ನು ತಮ್ಮ ವಿದ್ಯಾರ್ಥಿಗಳಿಗೆ ಮಾಡಿಕೊಟ್ಟರು.

ಅವರಲ್ಲಿ 'ನೋಟ್ಸ್' ಬರೆಯಿಸುವ ವಾಡಿಕೆಯಿರಲಿಲ್ಲವೆಂದು ಹಿಂದೆಯೇ ಹೇಳಿದ್ದೇನೆ. ಅಷ್ಟೇ ಅಲ್ಲ. ಒಂದು ಕವಿತೆಯನ್ನಾಗಲಿ ಗ್ರಂಥವನ್ನಾಗಲಿ ಪಾಠ ಹೇಳುವಾಗ, ಆ ಕವಿತೆಯ ಇಲ್ಲವೆ ಗ್ರಂಥದ ಪರಿಚಯಮಾಡಿಕೊಡುವ ಕಡೆ ಅವರ ಗಮನವಿತ್ತೇ ವಿನಾ, ಅವುಗಳನ್ನು ಕುರಿತು ಅನೇಕರು ಬರೆದ ವಿಮರ್ಶೆಗಳ ಕಡೆಗೆ ಅವರ ದೃಷ್ಟಿ ಹೋಗುತ್ತಿರಲಿಲ್ಲ. "..........it was part of his general principle to concern himself with the books themselves rather than with 'books on' or even 'talk on'."—ಎಂದು ಆಕ್ಸ್‌ಫರ್ಡಿನಲ್ಲಿ ಪ್ರೊಫೆಸರಾಗಿದ್ದ ರ್‍ಯಾಲಿಯ ವಿಷಯವಾಗಿ ಹೇಳಿದ ವಾಕ್ಯ 'ಶ್ರೀ'ಯವರಿಗೆ ಅಕ್ಷರಶಃ

ಒಪ್ಪುತ್ತವೆ. ಹೇಗೆಂದರೆ ಅವರಲ್ಲಿ ಪಾಂಡಿತ್ಯವಿರಲಿಲ್ಲವೆಂದಲ್ಲ; ಯಥೇಚ್ಛವಾಗಿತ್ತು. ಆದರೆ ಅವರು ಪಾಂಡಿತ್ಯವನ್ನು ಹಿನ್ನೆಲೆಯಲ್ಲಿಟ್ಟು ಕಾವ್ಯದ ಅನುಭವಕ್ಕೆ ತಮ್ಮ ಸಾಹಿತ್ಯ ಬೋಧನೆಯಲ್ಲಿ ಪ್ರಾಮುಖ್ಯತೆಯನ್ನು ಕೊಟ್ಟಿದ್ದರು. ಸಾಧಾರಣವಾಗಿ ಸಾಹಿತ್ಯ ಪಂಡಿತರು ಕವಿತೆಗಳ ಸುತ್ತ ಮಾತನಾಡುವರು. ಷೇಕ್ಸ್‌ಪಿಯರಿನ ನಾಟಕವೊಂದನ್ನು ಓದುವುದಕ್ಕೆ ಮುಂಚೆ, ಅಲ್ಲಿ ಕಾಣುವ ಸೊಬಗು ಇದು, ಅವನ ಪಾತ್ರ ರಚನೆಯ ರೀತಿ ಹೀಗೆ, ವಸ್ತುವಿನ್ಯಾಸ ಈ ರೀತಿ ಎಂದು ಬ್ರಾಡ್ಲಿ, ಲ್ಯಾಂಬ್, ಜಾನ್‌ಸನ್‌ರವರು ಹೇಳಿರುವ ವಾಕ್ಯಗಳನ್ನು ವಿದ್ಯಾರ್ಥಿಗಳಿಗೆ ಬಾಯಿಪಾಠ ಮಾಡಿಸುವರು. ಈ ಪದ್ಧತಿಯನ್ನು ವಿಚಾರಮಾಡುತ್ತ, ಇಂತಹ ಸಾಹಿತಿಗಳನ್ನು "Eng. Lit." ಎಂದು 'The Muse in Chains' ಎಂಬ ಈಚಿನ ಒಂದು ಗ್ರಂಥದಲ್ಲಿ ಅದರ ಗ್ರಂಥಕರ್ತನು ಕರೆದಿದ್ದಾನೆ.

ಇಂಗ್ಲೆಂಡಿನ ವಿಶ್ವವಿದ್ಯಾನಿಲಯಗಳಲ್ಲಿ ಇಂಗ್ಲಿಷ್ ಸಾಹಿತ್ಯದ ವ್ಯಾಸಂಗ ಆರಂಭವಾದುದು ಇತ್ತೀಚೆಗೆ. ಅಲ್ಲಿ ಇಂಗ್ಲಿಷು ಬಹುಕಾಲ ಇಲ್ಲಿ ನಮ್ಮ ಕನ್ನಡದ ಅವಸ್ಥೆಯನ್ನೆ ಹೊಂದಿತ್ತು. ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದಲ್ಲಿ ೧೮೯೩ರ ವರೆಗೆ ಇಂಗ್ಲಿಷ್ ಸಾಹಿತ್ಯವು ಪರೀಕ್ಷೆಗೆ ಯೋಗ್ಯವೆನಿಸಿದ ವಿಷಯವಾಗಿರಲಿಲ್ಲ. ಅಲ್ಲಿಯವರೆಗೆ ಗ್ರೀಕ್, ಲ್ಯಾಟಿನ್ ಭಾಷೆಗಳ ವ್ಯಾಸಂಗಕ್ಕೇ ಸಾಹಿತ್ಯವೆಂಬ ಹೆಸರಿದ್ದದ್ದು. ಇಂಗ್ಲಿಷ್ ಸಾಹಿತ್ಯದ ವ್ಯಾಸಂಗವನ್ನು ವಿಶ್ವವಿದ್ಯಾನಿಲಯದಲ್ಲಿ ಸೇರಿಸಿದ್ದು ಮುಖ್ಯವಾಗಿ ಹೆಂಗಸರ ಚಳುವಳಿಯಿಂದ. "Now if there was one educational habit which the women carried to the University more than another, it was the English, and English literature. For its reputation for easiness, or for its unmasculinity, or for its uses in the home, English had been regularly taught at girls' schools in the 'Sixties and Seventies'. It was vaguely connected with 'Art'—always considered right for women." ಈ ಹೊಸ ವಿಷಯವನ್ನು ಪಾಠ ಹೇಳಲು ಪ್ರೊಫೆಸರು ಯಾರನ್ನು ತರುವುದು? ಬಹಳ ಹುಡುಕಾಟವಾದಮೇಲೆ ವಾಲ್ಟರ್ ರ್‍ಯಾಲೆ (Walter Raleigh)ಯವರನ್ನು ಇಂಗ್ಲಿಷ್ ಸಾಹಿತ್ಯದ ಪ್ರೊಫೆಸರನ್ನಾಗಿ ನೇಮಿಸಿದರು. ಅವರು ಪಂಡಿತ ವರ್ಗದಲ್ಲಿ ಅಷ್ಟು ಹೆಸರಾದವರಲ್ಲದಿದ್ದರೂ ಸೈಂಟ್ಸ್‌ಬೆರಿ, ಚರ್ಟನ್‌ಕಾಲಿನ್ಸ್, ಮೊದಲಾದ ಪ್ರಸಿದ್ಧರಾದ ಪಂಡಿತರನ್ನು ಬಿಟ್ಟು ಅವರನ್ನು ಆರಿಸಿದರು. ಅದಕ್ಕೆ ಕಾರಣ: ಸಾಹಿತ್ಯವನ್ನು ಪಾಠ ಹೇಳುವುದಕ್ಕೆ ಆವಶ್ಯಕವಾದುದು ಶುಷ್ಕ ಪಾಂಡಿತ್ಯವಲ್ಲ, ಕಾವ್ಯವನ್ನು ಸಜೀವವಾಗಿ ಮಾಡಬಲ್ಲ ಸಹೃದಯತೆ; ಸಾಹಿತ್ಯದಲ್ಲಿ ತನಗೆ ತುಂಬಿ ತುಳುಕಾಡುತ್ತಿರುವ ಉತ್ಸಾಹವನ್ನು ವಿದ್ಯಾರ್ಥಿಗಳಲ್ಲಿ ತುಂಬಬಲ್ಲ ಉಪನ್ಯಾಸಕನ ಜಾಣ್ಮೆ.

ಬಹು ವಿಧಗಳಲ್ಲಿ ಶ್ರೀ॥ ಶ್ರೀಕಂಠಯ್ಯನವರು ಆಕ್ಸ್‌ಫರ್ಡಿನ ಈ ಹೊಸ ಪ್ರೊಫೆಸರನ್ನು ಹೋಲುತ್ತಾರೆ. ಈ ಹೋಲಿಕೆ ಬೋಧನ ಮಾರ್ಗದಲ್ಲಿಯೇ ಅಲ್ಲ. ಆಕ್ಸ್‌ಫರ್ಡಿನ ವಿಶ್ವವಿದ್ಯಾನಿಲಯದಲ್ಲಿ ರ್‍ಯಾಲೆ ಹೇಗೆ ಇಂಗ್ಲಿಷ್ ಸಾಹಿತ್ಯಕ್ಕೆ ಉತ್ಸಾಹವನ್ನು ಹುಟ್ಟಿಸಿ, ಇಂಗ್ಲಿಷ್ ವಿದ್ಯಾಭ್ಯಾಸದಲ್ಲಿ ಅದಕ್ಕೆ ಸಲ್ಲಬೇಕಾದ ಮನ್ನಣೆಯನ್ನು ತಂದರೋ, ಹಾಗೆ ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಕನ್ನಡ

ಸಾಹಿತ್ಯದ ವ್ಯಾಸಂಗಕ್ಕೆ ಹೊಸ ಚೇತನವನ್ನು ಕೊಟ್ಟಿದ್ದಾರೆ. ಕೆಲವು ದಿನಗಳ ಹಿಂದೆ ಪ್ರೊ॥ ಮೆಕಿಂಟಾಷ್ ಅವರು ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರ ಉಪನ್ಯಾಸಕ್ಕೆ ಅಧ್ಯಕ್ಷರಾಗಿದ್ದರು. ಅವರು ಹೇಳಿದ ಮಾತು ಈ ಸಂದರ್ಭದಲ್ಲಿ ನೆನಪಿಗೆ ಬರುತ್ತದೆ. ಪ್ರೊ॥ ಮೆಕಿಂಟಾಷ್ ಅವರು ಹೆಚ್ಚು ಮಾತಿನವರಲ್ಲ: ಮಾತನಾಡಿದರೆ ಎಲ್ಲಿ ಮುತ್ತು ಉದುರುತ್ತದೆಯೋ ಎಂದು ಭಯಪಡುವವರು. ಉಪನ್ಯಾಸದ ಕೊನೆಯಲ್ಲಿ ಉಪನ್ಯಾಸಕರಿಗೆ ವಂದನೆಗಳನ್ನು ಅರ್ಪಿಸುತ್ತಾ "ನಾನು ಜನ್ಮಾಂತರಗಳನ್ನು ನಂಬುವುದಾದರೆ, ತಮ್ಮ ಹಿಂದಿನ ಜನ್ಮದಲ್ಲಿ ಪ್ರೊ॥ ಶ್ರೀಕಂಠಯ್ಯನವರು ಆಕ್ಸ್‌ಫರ್ಡಿನ ವಿಶ್ವವಿದ್ಯಾನಿಲಯದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರೊಫೆಸರಾಗಿದ್ದರೆಂದು ನನಗೆ ತೋರುವುದು" ಎಂದು ಹೇಳಿದರು.

ತಮ್ಮ ಸಹೋಪಾಧ್ಯಾಯರುಗಳಲ್ಲಿ 'ಶ್ರೀ' ಯವರು ಯಾವ ಗೌರವವನ್ನು ಹೊಂದಿದಾರೆನ್ನುವುದಕ್ಕೆ ಇದೊಂದು ನಿದರ್ಶನ. ಅಲ್ಲದೆ, ಅವರು ವಿದ್ಯಾರ್ಥಿಗಳೊಂದಿಗೆ ಲಾಘವದಿಂದ ಬೆರೆತು, ಅವರ ದರ್ಜೆಗೆ ಇಳಿದು, ಅಗ್ಗದ ಮನ್ನಣೆ ಮರ್ಯಾದೆಗಳನ್ನು ಹೊಂದಲು ಬಯಸಿದವರಲ್ಲ. ತಮ್ಮ ಪಾಂಡಿತ್ಯ, ಬೋಧನಾ ಕುಶಲತೆ, ಶೀಲಗಳಿಂದ, ಒಟ್ಟಿನಲ್ಲಿ ತಮ್ಮ ಅಸಾಧಾರಣ ವ್ಯಕ್ತಿತ್ವದಿಂದ ವಿದ್ಯಾರ್ಥಿಗಳ ಗೌರವ ಆದರಗಳನ್ನು ಸಂಪಾದಿಸಿದರು.

**ಎಸ್. ವಿ. ಶ್ರೀನಿವಾಸರಾವ್**

# ಪ್ರೊಫೆಸರ್ ಶ್ರೀಕಂಠಯ್ಯನವರು

## (೨)

'ಶ್ರೀ'ಯವರು ಇಂಗ್ಲಿಷ್ ಅಧ್ಯಾಪಕರಾಗಿ ನೇಮಕವಾದಕಾಲ ಈಗಿ
ನಂತಿರಲಿಲ್ಲ. ಇಂಗ್ಲಿಷ್ ಸಾಹಿತ್ಯದ ಸಾರವು ಇಂಗ್ಲಿಷ್ ಜನರಿಗಲ್ಲದೆ ಬೇರೆ
ಯವರಿಗೆ ತಿಳಿಯಲು ಸಾಧ್ಯವಿಲ್ಲ: ಇಂಗ್ಲಿಷ್ ವ್ಯಾಸಂಗವನ್ನು ಇಂಗ್ಲಿಷಿನವ
ರಲ್ಲಿಯೇ ಮಾಡಬೇಕು: ನಮ್ಮವರಿಗೆ ಅವರ ರಸಿಕತೆ ಇಲ್ಲ: ಆ ಸಾಹಿತ್ಯದ
ನಾಡಿಯ ಮಿಡಿತವು ನಮಗೆ ಸಿಕ್ಕುವಂಥದಲ್ಲ: ಆದುದರಿಂದ ನಮ್ಮವರಿಂದ
ಇಂಗ್ಲಿಷ್ ಹೇಳಿಸಿಕೊಳ್ಳುವುದು ಅನುಪಯೋಗ, ಅಗೌರವ— ಎಂಬ ಕಾಲ.
ಇಂಥ ವಾತಾವರಣದಲ್ಲಿದ್ದುಕೊಂಡು ವಿದ್ಯಾರ್ಥಿಗಳ ಮೆಚ್ಚಿಕೆಯನ್ನೂ ಅಖಂಡ
ಪ್ರೇಮವನ್ನೂ 'ಶ್ರೀ'ಯವರು ಸಂಪಾದಿಸಿದ್ದು ಅಚ್ಚರಿಯೇ ಸರಿ.
'ಶ್ರೀ'ಯವರು ಹುಟ್ಟು ಉಪಾಧ್ಯಾಯರು. 'ಶ್ರೀ'ಯವರಿಗೆ ಸೆಂಟ್ರಲ್
ಕಾಲೇಜಿಗೆ ವರ್ಗವಾದಾಗ ಅಲ್ಲಿನ ಹುಡುಗರಿಗೆ ಉಂಟಾದ ಸಂತೋಷ, ಅವರ
ಉಪನ್ಯಾಸಗಳಿಂದ ಹುಡುಗರಲ್ಲಿ ಉಕ್ಕಿಬಂದ ಸ್ಫೂರ್ತಿ, ಉತ್ಸಾಹ, ಸಾಹಿತ್ಯಾಭಿ
ರುಚಿ, ಅವನ್ನು ಕೇಳಲು ಇತರ ಪಾಠಗಳನ್ನು ಲಕ್ಷಿಸದೆ ಬಂದು ನೆರೆಯುತ್ತಿದ್ದುದು.
ಇವೆಲ್ಲವನ್ನೂ ಆ ಕಾಲದ ಪ್ರತಿಯೊಬ್ಬ ವಿದ್ಯಾರ್ಥಿಯೂ ಹೇಳಿಕೊಂಡು ಇನ್ನೂ
ಮೈಮರೆಯುತ್ತಾನೆ. ಈಗ ಕೆಲವು ದಿನಗಳ ಹಿಂದೆ ಭದ್ರಾವತಿಗೆ ಹೋಗಿದ್ದೆ.
ಅಲ್ಲಿ ಒಬ್ಬ ತರುಣ ಅಧಿಕಾರಿಗಳು— ಈಗತಾನೆ ಒಂದು ಮಹದುಪಯುಕ್ತವಾದ
ಶಾಸ್ತ್ರ ಗ್ರಂಥವನ್ನು ಬರೆದು ಕನ್ನಡಿಗರ ಗೌರವಕ್ಕೆ ಪಾತ್ರರಾಗಿದ್ದಾರೆ— ಇವರ
ವಿಷಯವಾಗಿ ಮಾತನಾಡುತ್ತಾ, "'ಶ್ರೀ'ಯವರದು ಮ್ಯಾಥ್ಯೂ ಆರ್ನಾಲ್ಡಿಗೆ
ಸರಿತೂಗುವ ಸಾಮರ್ಥ್ಯ. ಅದೇ ರಸಿಕತೆ, ತೀಕ್ಷ್ಣದೃಷ್ಟಿ, ವಿಮರ್ಶಾ
ಸಾಮರ್ಥ್ಯ" ಎಂದು ನಿರ್ಭಯವಾಗಿ ಹೇಳಿದರು. ಇವರು ವಿಶ್ವವಿದ್ಯಾಲಯದಲ್ಲಿ
ಉತ್ತಮ ದರ್ಜೆಯಲ್ಲಿ ತೇರ್ಗಡೆ ಹೊಂದಿದವರು, ಇಂಗ್ಲಿಷ್ ಸಾಹಿತ್ಯದಲ್ಲಿ ವಿಶೇಷ
ಪಾಂಡಿತ್ಯವುಳ್ಳವರು. ಆದುದರಿಂದ ಇವರ ಅಭಿಪ್ರಾಯವು ಪ್ರಮಾಣ ಯೋಗ್ಯ
ವಾದುದೆನ್ನಬಹುದು. 'ಶ್ರೀ'ಯವರ ವಿಷಯದಲ್ಲಿ ಇಂಗ್ಲಿಷ್ ಪ್ರೊಫೆಸರು
ಗಳೆಲ್ಲರೂ ವಿಶೇಷ ಗೌರವವುಳ್ಳವರಾಗಿದ್ದರು. ಅನೇಕ ಭಾಗಗಳಲ್ಲಿ ತಮ್ಮ
ತಿಳುವಳಿಕೆಗಿಂತಲೂ 'ಶ್ರೀ'ಯವರ ಪಾಂಡಿತ್ಯವು ಖಚಿತವಾದುದೆಂದೂ,
ಆ ವಿಷಯಗಳಮೇಲೆ ಪ್ರಶ್ನೆಗಳು ಬಂದಾಗ ಅವರನ್ನು ಕೇಳಬೇಕೆಂದೂ ಆಗಾಗ
ಹೇಳುತ್ತಿದ್ದರು. ಈ ರೀತಿ ಶಿಷ್ಯರಿಂದಲೂ ಸಹಾಧ್ಯಾಪಕರಿಂದಲೂ ಗೌರವ
ಪಡೆಯಬೇಕಾದರೆ ಅಸಾಧಾರಣ ಪಾಂಡಿತ್ಯ, ಪ್ರತಿಭೆ, ವಾಗ್ಮಿತೆಗಳು ಅಗತ್ಯ.

ಸಾಕ್ರೆಟೀಸಿನಂಥ ಗುರುಮಹನೀಯರು ಯುಗಕ್ಕೊಮ್ಮೆ ಅವತರಿಸಿ ಪ್ಲೇಟೋವಿ
ನಂಥ ಶಿಷ್ಯರನ್ನು ಪಡೆದು ಅವರ ಭಕ್ತಿ ಕೃತಜ್ಞತೆಗಳಿಗೆ ಪಾತ್ರರಾಗಿ ಅವರ ಗ್ರಂಥ
ಗಳಲ್ಲಿ ಚಿರಪ್ರತಿಷ್ಠಿತರಾಗಿ ಲೋಕಪೂಜಿತರಾಗಿರುವುದು ಸರಿಯಷ್ಟೆ. ಆದರೆ ಅನೇಕ
ಮಹನೀಯರು ತಮ್ಮ ಶಾಲೆಯ ವಿಷಯದಲ್ಲಿ, ಉಪಾಧ್ಯಾಯರ ವಿಷಯದಲ್ಲಿ
ಈ ಗೌರವವನ್ನು ಸೂಚಿಸಿರುವುದಿಲ್ಲ. ಶಾಲೆಯು ಅವರ ಬೆಳವಣಿಗೆಗೆ ಸಹಾಯ

ಮಾಡುವುದಕ್ಕೆ ಬದಲಾಗಿ ಅವರ ನೈಜ ಶಕ್ತಿ ಸಾಹಸಗಳನ್ನು ಸಂಕುಚಿತಮಾಡಿ ಜಿಗುಪ್ಸೆಯನ್ನು ಹುಟ್ಟಿಸುವುದರಿಂದ, ಕೆಲವರು ಶಾಲೆಯನ್ನು ಬಿಟ್ಟು ಓಡಿ ಹೋಗಿದಾರೆ, ಮತ್ತೆ ಕೆಲವರನ್ನು ಶಾಲೆಯ ಅಧಿಕಾರಿಗಳೇ ಓಡಿಸಿರುತ್ತಾರೆ.

‘ಶ್ರೀ’ಯವರಿಂದ ಯಾವ ವಿದ್ಯಾರ್ಥಿಯೂ ಈ ರೀತಿಯ ಮನೋವೇದನೆಯನ್ನನುಭವಿಸಿದವನಲ್ಲ. ಇಂಗ್ಲಿಷಿನವರಿಂದ ಪಾಠ ಕಲಿತರೆ ಗೌರವ, ಅವರು ಎಷ್ಟಾದರೂ ನಮ್ಮವರು ಎಂಬ ಮೂಢ ಅಭಿಪ್ರಾಯ ಕೆಲವು ದಿನಗಳಲ್ಲಿ ಸಾಮಾನ್ಯವಾಗಿ ಅವರ ಸವಿಮಾತುಗಳನ್ನು ಕೇಳಲು ಕೌತುಕದಿಂದ ಎಲ್ಲರೂ ಕಾದಿರುತ್ತಿದ್ದರು. ಒಂದು ದಿನವೂ ಅವರು ತಮ್ಮ ಕೆಲಸದ ವಿಷಯದಲ್ಲಿ ಅಸಡ್ಡೆ ತೋರಿಸಿದವರಲ್ಲ. ಒಂದು ದಿನವೂ ತರಗತಿಗೆ ಹೊತ್ತಾಗಿ ಬಂದವರಲ್ಲ. ನಿಯಮಿತವಾದ ಪಾಠಗಳನ್ನು ಅರ್ಧದಲ್ಲಿಯೆ ನಿಲ್ಲಿಸಿಬಿಡುವುದು, ಕೆಲವು ಪಠ್ಯ ಪುಸ್ತಕಗಳನ್ನೇ ಬಿಟ್ಟುಬಿಡುವುದು, ಅವರ ರೀತಿಯಲ್ಲ. ಹೀಗೆ ಮೈಬಗ್ಗಿ ಕೆಲಸಮಾಡದ ಕೆಲವು ಪ್ರೊಫೆಸರುಗಳು ಅನಂತರ ಬರಬಹುದಾದ ಆಕ್ಷೇಪಣೆಗಳನ್ನು ಪರಿಹರಿಸಿಕೊಳ್ಳಲು ಕೆಲವು ಪ್ರಶ್ನೆಗಳನ್ನು ಮುಂಗಡವಾಗಿ ಹೇಳಿಕೊಟ್ಟು ಬಾಲಕರ ವಿಶ್ವಾಸವನ್ನು ಸಂಪಾದಿಸುವ ವಾಡಿಕೆಯುಂಟು. ಈ ಅಗೌರವವರ್ತನೆಗೂ ‘ಶ್ರೀ’ಯವರಿಗೂ ಬಹು ದೂರ. ಅವರ ಪಾಠ ಪ್ರವಚನ ರೀತಿಯಲ್ಲಿ ಬಾಲಕರು ತೊಂದರೆಗೆ ಸಿಕ್ಕಲು ಅವಕಾಶವಿರಲಿಲ್ಲ. ಪಾಠದಲ್ಲಿ ನಿಜವಾದ ಅಭಿರುಚಿಯನ್ನು ಹುಟ್ಟಿಸುತ್ತಿದ್ದುದರಿಂದ ಅವರು ಬೋಧಿಸದಷ್ಟನ್ನಾದರೂ ಚೆನ್ನಾಗಿ ಓದಿಕೊಳ್ಳುತ್ತಿದ್ದರು. ‘ಶ್ರೀ’ಯವರು ಯಾವ ವಿಷಯವನ್ನು ತೆಗೆದುಕೊಂಡರೂ ಸಾಂಗವಾಗಿ ಬೋಧಿಸುವರು. ಒಂದು ನಾಟಕ ಅಥವಾ ಕವನವನ್ನು ಪ್ರಾರಂಭಿಸಿದರೆ ಆ ಕವಿಗೆ, ಕಾಲಕ್ಕೆ, ಕವನಕ್ಕೆ ಸಂಬಂಧಪಟ್ಟ ಪ್ರತಿಯೊಂದು ವಿಷಯವನ್ನೂ ಕೂಲಂಕಷವಾಗಿ ಚರ್ಚಿಸುತ್ತಿದ್ದರು. ಪ್ರತಿ ಗ್ರಂಥಕ್ಕೂ ಉಪೋದ್ಘಾತರೂಪವಾಗಿ ಅವರು ಕೊಡುತ್ತಿದ್ದ ಉಪನ್ಯಾಸಗಳು ಬಹಳ ವಿಷಯ ಗರ್ಭಿತವಾಗಿರುತ್ತಿದ್ದುವು. ಹಿನ್ನೆಲೆಯನ್ನು ಈ ರೀತಿ ಅಣಿಮಾಡಿ ಅನಂತರ ಗ್ರಂಥಾರಂಭ ಮಾಡುತ್ತಿದ್ದುದರಿಂದ ಕಾವ್ಯದ ಜೀವವು ಸರಿಯಾಗಿ ಗೋಚರಿಸಿ ಅದರಲ್ಲಿ ನಿಜವಾದ ಅಭಿರುಚಿ, ವಿಶ್ವಾಸ ಹುಟ್ಟುತ್ತಿತ್ತು. ಇವರು ತಮ್ಮ ವಿದ್ಯಾರ್ಥಿ ದಶೆಯಲ್ಲಿ ಗಳಿಸಿದ ಅಥವಾ ನೌಕರಿಗೆ ಸೇರಿದ ತರುಣದಲ್ಲಿ ಶೇಖರಿಸಿದ ವಿಷಯ ಭಂಡಾರದಲ್ಲಿಯೇ ಕಾಲ ಹಾಕುತ್ತಿರಲಿಲ್ಲ. ತಮ್ಮ ಶಾಖೆಗೆ ಸಂಬಂಧಪಟ್ಟ ಯಾವ ಹೊಸ ಗ್ರಂಥ ಬಂದರೂ ಅದನ್ನು ಪಠಿಸಿ ಮನನ ಮಾಡಿಕೊಳ್ಳುವ ಸತ್ಸಂಪ್ರದಾಯ ಇವರದು. ತಾವು ಪ್ರೊಫೆಸರಾದರೂ ಇನ್ನೂ ವಿದ್ಯಾರ್ಥಿಯೇ ಎಂಬ ಮನೋಭಾವ ಇವರದು. ಇವರ ವಿದ್ಯಾತುರತೆಯನ್ನು ನೋಡಿದರೆ ಬ್ರೌನಿಂಗನ ಗ್ರಮೇರಿಯನ್ ಸ್ಮರಣೆಗೆ ಬರುತ್ತದೆ. ಅಂಥ ತೀವ್ರ ದಾಹ ಇವರದು. ಹೀಗೆ ತಮ್ಮ ಜ್ಞಾನದೀವಿಗೆಯನ್ನು ಅನವರತವೂ ಪ್ರಜ್ವಲಗೊಳಿಸಿ ಕೊಳ್ಳುತ್ತಿದ್ದುದರಿಂದಲೇ ಇವರ ಉಪನ್ಯಾಸಗಳು ಅಷ್ಟು ಜೀವಕಳೆಯಿಂದ ತುಂಬಿರುತ್ತಿದ್ದವು. ವಿದ್ಯಾರ್ಥಿಗಳಲ್ಲಿ ಸ್ವಲ್ಪ ಮಟ್ಟಿಗಾದರೂ ಸಾಹಿತ್ಯಾಭಿಲಾಷೆ ಹುಟ್ಟಿದ್ದ ಪಕ್ಷದಲ್ಲಿ ಅದಕ್ಕೆ ಮುಖ್ಯಕಾರಣ ‘ಶ್ರೀ’ಯವರು ಎಂದು ಧಾರಾಳವಾಗಿ ಹೇಳಬಹುದು.

'ಶ್ರೀ'ಯವರು ವಿದ್ಯಾರ್ಥಿಗಳಲ್ಲಿ ಇಟ್ಟಿದ್ದ ವಾತ್ಸಲ್ಯ ಮಮತೆಗಳನ್ನು ತೋರಿಸುವ ಸಂಗತಿಯೊಂದನ್ನು ಇಲ್ಲಿ ಹೇಳಬಹುದು. ಮೊದಲನೆಯ ಎಂ.ಎ. ತರಗತಿಯಲ್ಲಿ ಇವರ ಕ್ಲಾಸುಗಳಿಗೆ ಒಬ್ಬಿಬ್ಬರು ಸರಿಯಾಗಿ ಹೋಗುತ್ತಿರಲಿಲ್ಲ. ಇದರಿಂದ ಪರೀಕ್ಷೆಯಲ್ಲಿ ತೊಂದರೆಯಾಗಬಹುದೆಂಬ ತಪ್ಪು ಭೀತಿಯಿಂದ ತಮ್ಮ ವರ್ತನೆಯನ್ನು ಮನ್ನಿಸಬೇಕೆಂದು ಆ ವಿದ್ಯಾರ್ಥಿಗಳು ಕೇಳಹೋದಾಗ ಅವರು ನಗುತ್ತಾ ಈ ರೀತಿ ಹೇಳಿದರು: "ನೀವು ಹೇಳದಿದ್ದರೆ ಆ ವಿಷಯ ನನ್ನ ನೆನಪಿಗೂ ಬರುತ್ತಿರಲಿಲ್ಲ. ನಾನು ಸೆಂಟ್ರಲ್ ಕಾಲೇಜಿನಲ್ಲಿ ಓದುತ್ತಿದ್ದೆ. ಕುಕ್ ಪ್ರಿನ್ಸಿಪಾಲರಾಗಿದ್ದರು. ಅವರಿಗೆ ತಮ್ಮ ಕಾಲೇಜೆಂದರೆ ಪಂಚಪ್ರಾಣ. ಬಿ.ಎ. ಪರೀಕ್ಷೆಯ ಹಿಂದಿನ ದಿನ ಒಳ್ಳೆಯ ಬೆಳುದಿಂಗಳು. ಹಾಸ್ಟೆಲಿನಿಂದ ಹತ್ತು ಹದಿನೈದು ಮಂದಿ ಬಂದು ಮೈದಾನದಲ್ಲಿ ಕುಳಿತು ಹರಟೆ ಹೊಡೆಯುತ್ತಾ ಕೇಕೆ ಹಾಕಿಕೊಂಡು ನಗುತ್ತಾ ಆನಂದದಲ್ಲಿ ಲೀನರಾಗಿದ್ದೇವೆ. ರಾತ್ರೆ ಒಂಬತ್ತಾಯಿತು, ಹತ್ತಾಯಿತು, ಹನ್ನೊಂದಾಯಿತು; ನಮ್ಮ ಹರಟೆ ಮುಗಿಯಲಿಲ್ಲ. ಆ ಹೊತ್ತಿಗೆ ಕುಕ್ ಅವರು ಬೆಳುದಿಂಗಳಲ್ಲಿ ತಿರುಗಾಡುತ್ತಾ ನಮ್ಮ ಕಡೆಗೇ ಬಂದರು. ಅವರು ಸುಮಾರು ಸಮೀಪಕ್ಕೆ ಬರುವವರೆಗೂ ನಮಗೆ ಕಾಣಿಸಲೇ ಇಲ್ಲ. ಕೂಡಲೇ ಎಲ್ಲರೂ ಓಡಿದರು. ನಾನೂ, ನನ್ನ ಸ್ನೇಹಿತನೊಬ್ಬನೂ ಧೈರ್ಯಮಾಡಿ ಅಲ್ಲಿಯೇ ನಿಂತೆವು. ಹತ್ತಿರಕ್ಕೆ ಬಂದು ಮುಖವನ್ನು ಗಂಟು ಹಾಕಿಕೊಂಡು 'ಏಕೆ ಇನ್ನೂ ಕೊಠಡಿಗೆ ಹೋಗಿಲ್ಲ?' ಎಂದರು. 'ಪರೀಕ್ಷೆಗೆ ಓದಿ ಬೇಜಾರಾಗಿತ್ತು. ಬೆಳುದಿಂಗಳಲ್ಲಿ ಕುಳಿತರೆ ಮನಸ್ಸು ಸ್ವಲ್ಪ ಹಗುರವಾಗಬಹುದು, ಹೊಸದಾಗಬಹುದು ಎಂಬ ಆಸೆಯಿಂದ' ಎಂದೆವು. ಕೂಡಲೇ 'ಇತರರು ಏಕೆ ಓಡಿಹೋದರು?' ಎಂದರು. 'ನೀವು ಬರುವುದನ್ನು ನೋಡಿದರು. ಶಿಕ್ಷಿಸಬಹುದೆಂಬ ಭಯ. ತಪ್ಪಿಸಿಕೊಂಡರು' ಎಂದೆವು. ಅದಕ್ಕೆ 'ನಿಮಗೆ ಬೆಳುದಿಂಗಳಿನ ಸೊಬಗು ತಣ್ಪು ಬೇಕಾದರೆ ನನಗೆ ಬೇಡವೆ? ನಿಮ್ಮೊಡನೆ ಕುಳಿತು ಹರಟೆ ಹೊಡೆಯಬೇಕು ಎಂದು ನಾನೂ ಬಂದೆ. ಎಲ್ಲರನ್ನೂ ಕರೆಯಿರಿ' ಎಂದರು. ಅವರ ಮಾತನ್ನು ಕೇಳಿ ನಮಗೆ ಆಶ್ಚರ್ಯವಾಯಿತು. ಗಾಬರಿಯೆಲ್ಲ ಮಾಯವಾಗಿ ಕೂಡಲೇ ಓಡಿಹೋಗಿ ಎಲ್ಲರನ್ನೂ ಕರೆತಂದೆವು. ಪ್ರಿನ್ಸಿಪಾಲರು ಕೊಂಚ ಹೊತ್ತು ನಮ್ಮೊಡನೆ ಕುಳಿತು ಸರಸ ಸಲ್ಲಾಪವಾಡುತ್ತಾ, ಪ್ರತಿಯೊಬ್ಬರೂ ತೇರ್ಗಡೆ ಹೊಂದುತ್ತೀರಿ, ಅನಂತರ ಏನು ಮಾಡುತ್ತೀರಿ? ಎಂದು ನಮ್ಮನ್ನು ಪ್ರಶ್ನಿಸಿ ಹುರಿದುಂಬಿಸಿ ಪರೀಕ್ಷೆಯ ಭಯವನ್ನೇ ದೂರಮಾಡಿ ಹೊರಟುಹೋದರು. ನಮ್ಮ ಗಾಬರಿಗೆ ಕಾರಣವೇನಿತ್ತು? ಇಂಥ ಮಹನೀಯರ ವಿಷಯದಲ್ಲಿ ತಪ್ಪು ಎಣಿಸಿದ್ದಕ್ಕಾಗಿ ಪಶ್ಚಾತ್ತಾಪಪಟ್ಟೆವು. ನಾನು ಅವರ ಶಿಷ್ಯ. ಅವರ ಗುಣವನ್ನು ಹೇಗೆ ಮರೆಯಲಿ? ಅವರ ಪ್ರಭಾವ ಇನ್ನೂ ನನ್ನಮೇಲೆ ಇದೆ. ನೀವು ನನ್ನ ವಿಷಯದಲ್ಲಿ ಈ ರೀತಿ ಯೋಚಿಸಲೇಕೆ?" ಎಂದು ಉಪಚಾರ ಹೇಳಿ ಕಳಿಸಿಕೊಟ್ಟರು. 'ಶ್ರೀ'ಯವರ ಶಿಷ್ಯದಶೆಯಲ್ಲಿ ಕಂಡ ಈ ಧೈರ್ಯದ ಅಂಕುರ ಬೇರೂರಿ ಬಲಿಯಿತೆಂದು ಕಾಣುತ್ತದೆ. ಇಲ್ಲದಿದ್ದರೆ ಸಾಹಿತ್ಯದಲ್ಲಿ ನೂರಾರು ವರ್ಷಗಳಿಂದ ಬೆಳೆದು ಬೀಳಲು ಬಿಟ್ಟಿದ್ದ ಆಚಾರಗಳನ್ನು ಪ್ರತಿಭಟಿಸಿ ಹೊಸ ಸಂಪ್ರದಾಯಗಳನ್ನು ಬಿತ್ತಿ ರೂಪುಗೊಳಿಸುವ ಮಹತ್ಕಾರ್ಯ ಅವರಿಗೆ ಸಾಧ್ಯವಾಗುತ್ತಿರಲಿಲ್ಲ.

'ಶ್ರೀ'ಯವರಿಗೆ ಪೂರ್ವ ವಯಸ್ಸಿನಲ್ಲಿಯೇ ಕೆಲವು ದುಃಖಗಳು ಒದಗಿದವು. ಕೈ ಹಿಡಿದ ಮಡದಿ ಎಂಟು ಹತ್ತು ವರ್ಷವೂ ಅವರ ಮನೆಯನ್ನು ಬೆಳಗದೆ ಕೇವಲ ಪೂರ್ವವಯಸ್ಸಿನಲ್ಲಿಯೇ ತೀರಿಕೊಂಡು ಅವರನ್ನು ಘೋರ ಶೋಕದಲ್ಲಿ ಮುಳುಗಿಸಿ ಬಿಟ್ಟರು. ಮುತ್ತಿನಂಥ ಮಗನು ಕಣ್ಣಿನ ಬೇನೆಯಿಂದ ನರಳಿ ಔಷಧ ಹಾಕಿದವರ ಅಚಾತುರ್ಯದಿಂದ ಕಣ್ಣನ್ನು ಕಳೆದುಕೊಂಡನು. ಸಾಹಿತ್ಯ ದೀಕ್ಷೆಯನ್ನು ಕೈಗೊಂಡು ಸೌಂದರ್ಯದ ಮಹಿಮೆಯನ್ನು ಬೆದಕಿ ಚಿಂತಿಸಿ ಪ್ರತಿಪಾದಿಸುತ್ತಿದ್ದ ಈ ಕಲಾಪಟುಗಳಿಗೆ ಹೀಗೆ ಪ್ರೇಮದ ಬೆಳಕೇ ಇಂಗಿಹೋದುದರಿಂದ ಎಂಥ ಅಂಧಕಾರವು ಕವಿದಿರಬೇಕು? ಅವರ ಮನಸ್ಸು ಯಾವ ರೀತಿ ಉಲ್ಲೋಲಕಲ್ಲೋಲವಾಗಿರಬೇಕು? ಜೀವನವು ಎಷ್ಟು ಶೂನ್ಯವಾಗಿ ಕಂಡಿರಬೇಕು? ಅವರು ಮೆಚ್ಚುತ್ತಿದ್ದ ಸಾಹಿತ್ಯವೂ ಜೀವನದ ಹುಳುಕು, ತೊಡಕು, ಬೇನೆ, ಇರಿತಗಳನ್ನು ಚಿತ್ರಿಸುವಂಥದೆ. ಆದರೆ ವಿಶ್ವವನ್ನು ಪರೀಕ್ಷಿಸಲು ಹೊರಟ ಅನೇಕ ಮಹಾಕವಿಗಳಿಗೆ ಅದರ ಹಳ್ಳತಗ್ಗುಗಳೇ ಪ್ರಧಾನವಾಗಿ ಕಂಡಿವೆ. ಉತ್ತಮ ಸಾಹಿತ್ಯದ ಬಹು ಭಾಗವೆಲ್ಲವೂ ಶೋಕಪ್ರಧಾನವಾದುದು. 'ಶ್ರೀ'ಯವರು ಇಂಥ ಕೃತಿಗಳ ಹೃದಯವನ್ನು ಹೊಕ್ಕು ಅವುಗಳ ಪ್ರತಿಪಾದನೆಯಲ್ಲಿ ಒಂದು ವೈಶಿಷ್ಟ್ಯವನ್ನು ಹೊಂದಿದ್ದರು.

> Our sincerest laughter
> With some pain is fraught:
> Our sweetest songs are those that tell of saddest thought.

ಎಂಬ ಕವಿನುಡಿಯನ್ನು ಅವರು ಓದುತ್ತಿದ್ದ ರೀತಿ, ಶೈಲಿ, ಧ್ವನಿ, ಆಗ ಅವರು ತಾಳುತ್ತಿದ್ದ ಮುಖಭಾವ ಎಲ್ಲವೂ ಅವರದೇ. ಇಂಥ ವಾಕ್ಯಗಳನ್ನೋದಿ, ಪುನಃ ಓದಿ, ಅವುಗಳ ನಾದಬ್ರಹ್ಮವನ್ನು ನಮ್ಮಲ್ಲಿ ಆರೋಪಿಸುತ್ತಿದ್ದರಲ್ಲದೆ ಇವರು ಅವುಗಳ ಮೇಲೆ ವ್ಯಾಖ್ಯಾನಮಾಡಲು ಪ್ರಯತ್ನಪಡುತ್ತಿರಲಿಲ್ಲ. ಇಂಥ ವಾಕ್ಯಗಳಿಗೆ ಅರ್ಥ ಹೇಳಲೆಳಸುವುದು ಮರುಳುತನವೆಂದು ಅವರ ಅಭಿಪ್ರಾಯವಿರಬಹುದು. ಭಾವವು ಉಕ್ಕಿ ಶುದ್ಧವಾಗಿ ತಿಳಿಯಾಗಿ ನಿಂತು ಈ ರೂಪವನ್ನು ತಾಳುತ್ತದೆ. ಶುದ್ಧ ಸ್ವರೂಪವನ್ನು ಶುದ್ಧಿಮಾಡುವುದು ಹೇಗೆ? ಕವಿಯ ಅಪೂರ್ವ ವಾಣಿಯಲ್ಲಿಯೇ ಅವರ ತಾತ್ಪರ್ಯವೆಲ್ಲ ಅಡಕವಾಗಿದೆ. ಮಾತುಗಳನ್ನು ಭಿನ್ನಮಾಡಿದರೆ ಭಾವವು ಮಲಿನವಾಗಿ ಕವಿಹೃದಯಕ್ಕೆ ಬದಲು ವ್ಯಾಖ್ಯಾನಕಾರನ ಜಡತ್ವವು ಎದ್ದು ಕಾಣುತ್ತದೆ. ಕಾವ್ಯಾನುಭವಕ್ಕೆ ಕಲಾಕುಶಲತೆ, ಸರಿಯಾದ ಕಲಾದೃಷ್ಟಿ, ರಸಾನುಭವ ಶಕ್ತಿ ಬೇಕು. ಇವು ಇದ್ದವರಿಗೆ ಶೈಲಿಯು ಸರಳವಾಗಿಯೇ ಕಾಣುತ್ತದೆ. 'ಶ್ರೀ'ಯವರು ರಸಾಭಿಜ್ಞರು. ಕವಿಯ ರಮ್ಯ ಶೈಲಿಯನ್ನು ಕುಂದಿಸಲು ಅವರ ಮನಸ್ಸು ಒಡಂಬಡದು.

> Break, break, break
> At the foot of thy crags, O sea!
> But the tender grace of a day that is dead
> Will never come back to me.

ಎಂದು ಅವರು ಓದಿ ಅರ್ಧ ನಿಮಿಷ ಕಣ್ಣು ಮುಚ್ಚಿ ಭಾವಾವಿಷ್ಟರಾಗಿದ್ದುದು ನನಗೆ ಇನ್ನೂ ಜ್ಞಾಪಕವಿದೆ. ಇಂಥ ಸಂದರ್ಭದಲ್ಲಿ ಕೇಳುವವರು ಕಣ್ಣೀರು ಸುರಿಸಬೇಕಲ್ಲದೆ, 'ಶ್ರೀ'ಯವರು ತಮ್ಮ ಶೋಕವನ್ನು ನುಂಗಿಕೊಂಡು ಹಾಗೇ ಮೆಲುಕು ಹಾಕಿ 'ಜೀರ್ಣಿಸಿಕೊಳ್ಳುತ್ತಿದ್ದರು. ಕಿಂಗ್ ಲಿಯರ್ ನಾಟಕದಲ್ಲಿ ಲಿಯರನು

ಕಾರ್ಡೀಲಿಯಳ ಮೃತದೇಹವನ್ನು ಹೊತ್ತುಕೊಂಡು ರಂಗದಮೇಲೆ ಬರುತ್ತಾನೆಂದು ಓದುವಾಗ ನಮ್ಮ ಕಣ್ಣುಗಳು ತಾವಾಗಿಯೇ ನೀರಿಡಲಾರಂಭಿಸುತ್ತವೆ. ಪೂರ್ಣ ಗರ್ಭಿಣಿ ಶಕುಂತಳೆಯು ದುಷ್ಯಂತನ ಆಸ್ಥಾನಕ್ಕೆ ಹೋಗಿ ತನ್ನನ್ನು ಅಂಗೀಕರಿಸ ಬೇಕೆಂದು ವಿನಯಪೂರ್ವಕವಾಗಿ ಪ್ರಾರ್ಥಿಸಿಕೊಂಡಾಗ ಅವಳನ್ನು ಧಿಕ್ಕರಿಸಿ ಆಡಿದ ಶೂಲದಂಥ ವಾಕ್ಯಗಳು ನಮ್ಮ ಕಿವಿಯಮೇಲೆ ಬಿದ್ದೊಡನೆ ರಾಜನಮೇಲೆ ಕಿಡಿಕಿಡಿ ಯಾಗುತ್ತೇವೆ. ವಿಂಕಲ್ಲಿನ ಕುದುರೆ, ಡಾಗ್‌ಬೆರಿಯ ವಾದ, ಶಕಾರನ ಠೀವಿ–ಇವುಗಳ ಮುಂದೆ ನಗುವನ್ನು ತಡೆಯುವುದು ಹೇಗೆ? 'ಶ್ರೀ'ಯವರು ಇಂಥ ದೃಶ್ಯಗಳ ಆನಂದವನ್ನು ಇತರರಂತೆ, ಇತರರಿಗಿಂತಲೂ ವಿಶೇಷವಾಗಿ, ಅನುಭವಿಸಿದರೂ ತಮ್ಮ ಶೋಕವನ್ನೂ, ಕೋಪವನ್ನೂ, ಸಂತೋಷವನ್ನೂ ಹೆಚ್ಚಾಗಿ ಪ್ರದರ್ಶಿಸುತ್ತಿರಲಿಲ್ಲ. ಟೆನಿಸನ್ ಕವಿಯು ತನ್ನ ಸ್ನೇಹಿತ ಹ್ಯಾಲಮ್‌ಗಾಗಿ ತನ್ನೊಳಗೆ ತಾನೆ ಕೊರಗಿದಂತೆ ತಮ್ಮ ಭಾವಗಳು ಬಹಿರ್ಮುಖವಾಗಲು ಇವರು ಅವಕಾಶ ಕೊಡುತ್ತಿರಲಿಲ್ಲ.

ನೊಂದ ಜೀವಿಗಳನ್ನು ನೋಡಿ ಪರಿತಪಿಸುವ ಸ್ವಭಾವ ಅವರದು. ಅವರ ಕಷ್ಟ ತಮ್ಮದೆಂದು ಅರಿತವರು. ಮ್ಯಾಥ್ಯೂ ಆರ್ನಾಲ್ಡನು ತನಗೆ ಮೆಚ್ಚಿಕೆಯಾಗಿದ್ದ ದೈವಿಕ ಮತ್ತು ಪಾರಲೌಕಿಕ ತತ್ವಗಳು ನೂತನ ಶಾಸ್ತ್ರವಾದದಿಂದ ಪ್ರಮಾಣ ರಹಿತವಾದುದೆಂದು ಸ್ಪಷ್ಟಪಟ್ಟು, ಸತ್ಯದ ಸರಿಯಾದ ಸ್ವರೂಪವು ಕಾಣದೆ, ಶಾಂತಿ ಯನ್ನು ಕಳೆದುಕೊಂಡು ಪ್ರಲಪಿಸುವ ಕೆಲವು ಕವನಗಳು ಅವರ ಮನಸ್ಸನ್ನು ಸೂರೆ ಗೊಂಡಿದ್ದವು. ಅವರೂ ಪರಾಪರ ತತ್ವಗಳ ವಿಷಯದಲ್ಲಿ ಅದೇ ಸಂದೇಹವನ್ನು ತಾಳಿ ಹೊಸದನ್ನು ಕಾಣಲು ಯತ್ನಿಸುತ್ತಿದ್ದರು. ಮ್ಯಾಥ್ಯೂ ಆರ್ನಾಲ್ಡಿನ ಕವನದ ವಿಷಯ ಸತ್ಯವಾಗಿರಬಹುದು. ಆ ರೀತಿಯ ಚಿಂತೆ ಪ್ರತಿಯೊಬ್ಬರಿಗೂ ಆವಶ್ಯಕ. ಆದರೆ ಅವನು ಹೇಳುವ ರೀತಿಯು ತಾರ್ಕಿಕನದಲ್ಲದೆ ಕವಿಯದಲ್ಲ. 'ಶ್ರೀ'ಯವರು ವರ್ಡ್ಸ್‌ವರ್ತಿನ ಮಹಾವಾಕ್ಯಗಳನ್ನೋದಿ ಯಾವ ರೀತಿ ಮೈಮರೆಯುತ್ತಿದ್ದರೊ ಅದೇ ರೀತಿ ಆರ್ನಾಲ್ಡಿನ ಕವಿತೆಯಲ್ಲಿಯೂ ಲೀನವಾಗುತ್ತಿದ್ದರು. ಆರ್ನಾಲ್ಡಿನ ಕವಿತೆಯು ನಮ್ಮಲ್ಲಿ ಕೆಲವರಿಗೆ ಸ್ವಲ್ಪವೂ ರುಚಿಸುತ್ತಿರಲಿಲ್ಲ. ಅವನು ಕವಿಯೇ ಅಲ್ಲವೆಂದು ಒಂದುಸಲ ವಾದಿಸಿದೆವು. ಅವರು ಒಪ್ಪರು. ಅವರಿಗೆ ವಿಮರ್ಶೆಯ ಶಕ್ತಿ ಸಾಲದು, ಖಚಿತವಾದ ಅಭಿಪ್ರಾಯವನ್ನು ಕೊಡಲಾರರು, 'Sense of values' ಇಲ್ಲ ಎಂದು ನಾವು ಆಗ ಜರಿದೆವು. ಇದರಿಂದ ಅವರಿಗೆ ಕೇಡೇನು? ಅರೆ ಬೆಂದ ಬುದ್ಧಿ ನಮ್ಮದೊ ಅವರದೊ? ಅವರ ಮನಸ್ಸಿನ ಮೇಲ್ಮೆಯನ್ನು ಕಾಣಲು ನಮಗೆ ಕಣ್ಣಿರಲಿಲ್ಲ ಅಷ್ಟೆ. ಕುಂದನ್ನು ಕಾಣದ, ಕವಿಗಳ ಬೆಲೆಯನ್ನು ಸರಿಯಾಗಿ ಅಳೆಯಲಾರದ ಅಶಕ್ತರಲ್ಲ ಅವರು. ಆದರೆ ವಿಮರ್ಶಕನ ಕೆಲಸ ಬೇರೆ, ಧರ್ಮ ಬೇರೆ ಎಂದು ಅವರ ಅಭಿಪ್ರಾಯ. ಸಹಾನುಭೂತಿಯುಳ್ಳವನಾಗಿ ವಿಶ್ವಾಸದಿಂದ ಎಲ್ಲವನ್ನೂ ಪರಿಶೀಲಿಸಿ ಕವಿಯಿಂದ ಆಗಿರುವ ಉಪಕಾರವನ್ನು ಹೊರಗೆಡಹುವುದು ವಿಮರ್ಶಕನ ಕರ್ತವ್ಯವೇ ಹೊರತು, ದೋಷಗಳನ್ನೇ ಹುಡುಕುತ್ತಾ ಹೋದರೆ, ದೋಷರಹಿತರಾದವರು ಒಬ್ಬಿಬ್ಬರು ದೊರೆಯುತ್ತಾರೊ ಇಲ್ಲವೊ? ಎನ್ನುವ ವಿಶಾಲ ಹೃದಯ ಅವರದು. 'ಅನುದ್ವೇಗಕರಂ ವಾಕ್ಯಂ ಸತ್ಯಂ ಪ್ರಿಯಹಿತಂ' ಎಂಬ ಸಂಕಲ್ಪವುಳ್ಳವರು. ತಮ್ಮ ಸಂಕಟವನ್ನು

ಬಹಿರಂಗಪಡಿಸಿದರೆ ಇತರರು ನೋಯಬಹುದೆಂದು ಆ ಪ್ರಸ್ತಾಪವನ್ನೇ ಎತ್ತುತ್ತಿರಲಿಲ್ಲ. ಈಗಲೂ ಅವರ ಎದೆಯ ನಿಜವಾದ ಬೇನೆಯನ್ನು ಯಾರಲ್ಲಾದರೂ ಹೇಳಿ ಕೊಳ್ಳುತ್ತಾರೊ ಇಲ್ಲವೆ ಇಲ್ಲವೊ?

ವಿಷಯದ ಕಡೆ ಅವರ ದೃಷ್ಟಿ ಇದ್ದಿತೇ ಹೊರತು ರೀತಿಗೆ ಅವರು ಅಷ್ಟು ಗಮನ ಕೊಡುತ್ತಿರಲಿಲ್ಲ. ಜೀವ ಮುಖ್ಯ, ಉಡುಗೆ ತೊಡಿಗೆಗಳಲ್ಲ ಎಂದು ಅವರ ಅಭಿಪ್ರಾಯ. ಅವರು ಬಾಹ್ಯವೇಷವನ್ನು ದಾಟಿಕೊಂಡು ಒಳಗಿರುವ ಸಾರವನ್ನು ಪರೀಕ್ಷಿಸಿ ತುಲನಮಾಡಿ ಬೆಲೆ ಕಟ್ಟಬೇಕು ಎನ್ನುತ್ತಿದ್ದರು. ಮತಸಂಬಂಧವಾದ ಚರ್ಚೆಗಳು ಬಂದಾಗ ಈ ವಿಚಾರಪರತೆ ಸಾರಗ್ರಹಣ ಸಾಮರ್ಥ್ಯ ಅವರಲ್ಲಿ ಎದ್ದು ಕಾಣುತ್ತಿತ್ತು. ಹತ್ತೊಂಬತ್ತನೆಯ ಶತಮಾನದಲ್ಲಿ ಕಾಣುವ ಮುಖ್ಯ ಜಿಜ್ಞಾಸೆಗಳು ಇವೇ. ಈ ಪ್ರಸಂಗಗಳು ಬಂದಾಗ 'ಶ್ರೀ'ಯವರು ತೋರಿಸುತ್ತಿದ್ದ ನಿಷ್ಪಕ್ಷಪಾತ ಬುದ್ಧಿ, ವಿಶಾಲದೃಷ್ಟಿ, ಅಪಾರ ಪಾಂಡಿತ್ಯ, ತತ್ತ್ವಾನ್ವೇಷಣೆಯ ಉತ್ಸಾಹ ನಮ್ಮ ಹೃದಯ ಕುಹರವನ್ನೆಲ್ಲ ಕಲಕಿ ನಮ್ಮಲ್ಲಿ ನಿಜವಾದ ಚಿಂತನೆಯ ಬುದ್ಧಿಯನ್ನುಂಟು ಮಾಡುತ್ತಿದ್ದುವು. ಜೈನ ಬೌದ್ಧ ಮತ ಗ್ರಂಥಗಳು, ಬೈಬಲ್, ಕೊರಾನ್ ಮೊದಲಾದ ಅನ್ಯಮತ ಗ್ರಂಥಗಳು ನಮ್ಮ ಉಪನಿಷತ್ತುಗಳಂತೆಯೇ ಮಾನ್ಯವಾದುವೆಂದೂ, ಅವುಗಳಲ್ಲಿ ಕಾಣುವ ಜೀವನ ರಹಸ್ಯವೇ ಉತ್ತಮ ಸಾಹಿತಿಗಳ ಮುಖ್ಯ ಸಾಮಗ್ರಿ ಯೆಂದೂ ತಕ್ಕ ಉದಾಹರಣೆಗಳಿಂದ ವಿವರಿಸುತ್ತಾ ಹೊರಟಾಗ ಅವರ ವಿದ್ವತ್ತಿನ ಗಾಂಭೀರ್ಯ, ಪ್ರತಿಪಾದನೆಯ ರೀತಿ ಮತ್ತು ಸತ್ಯಪ್ರೇಮವು ನಮ್ಮನ್ನು ಮುಗ್ಧ ರನ್ನಾಗಿ ಮಾಡುತ್ತಿದ್ದವು.

'ಶ್ರೀ'ಯವರು ಬಹು ದೊಡ್ಡಮನುಷ್ಯರು. ಉಪಾಧ್ಯಾಯ ವೃತ್ತಿಯು ಒಂದು ದೊಡ್ಡ ತಪಸ್ಸೆಂದು ಅರಿತವರು. ತಮ್ಮ ಕೆಲಸವು ಪವಿತ್ರವಾದುದೆಂದೂ ಅದಕ್ಕೆ ತಕ್ಕ ಘನತೆ ಆಚಾರಗಳು ಅಗತ್ಯವೆಂದೂ ನಂಬಿದ್ದವರು. ಶುಷ್ಕವಾದ ಹರಟೆಯಲ್ಲಿಯೂ, ಕೀಳಾದ ವ್ಯವಹಾರಗಳಲ್ಲಿಯೂ ಕಾಲಹರಣ ಮಾಡಿದವರಲ್ಲ. ಬೋಧಕರು ಪ್ರತಿಯೊಂದು ವಿಷಯದಲ್ಲಿಯೂ ಶಿಷ್ಯರಿಗೆ ಮಾದರಿಯಾಗಿರಬೇಕೆಂಬು ದನ್ನು 'ಶ್ರೀ'ಯವರು ಚೆನ್ನಾಗಿ ಮನಗಂಡವರು. ಅವರ ನಡೆ ನುಡಿ ಶಿಷ್ಯರಿಗೆ ಒಳ್ಳೆಯ ಮಾದರಿಯಾಗಿತ್ತು. ತಮ್ಮ ಶಿಷ್ಯರಲ್ಲಿ ಹೆಚ್ಚಿನ ಸಾಮರ್ಥ್ಯವು ಕಂಡು ಬಂದಲ್ಲಿ ನಿಜವಾಗಿಯೂ ಸಂತೋಷಪಟ್ಟು ಅವರನ್ನು ಎಲ್ಲರ ಮುಂದೆಯೂ ಹೊಗಳಿ ಹುರಿದುಂಬಿಸುತ್ತಿದ್ದರು. ನನ್ನ ಮಿತ್ರ ಮೂರ್ತಿರಾಯರು ಬರೆದ ಒಂದು ಪ್ರಬಂಧ ವನ್ನು ತರಗತಿಗೆ ತಂದು ಓದಿ 'I do not think I can write better' ಎಂದು ಪ್ರಶಂಸಿಸಿದ್ದು ಇನ್ನೂ ನನಗೆ ಜ್ಞಾಪಕವಿದೆ. ಇಂಥ ನಚ್ಚಿನ ಶಿಷ್ಯರು ತಮ್ಮಂತೆಯೇ ಬೋಧಕರಾಗಿ ಪ್ರಾಮಾಣಿಕತನದಿಂದ ಕೆಲಸಮಾಡಿ ಶಿಷ್ಯಮಂಡಲಿಯ ವಿಶ್ವಾಸಕ್ಕೆ ಪಾತ್ರರಾಗಿರುವುದು ಅವರಿಗೆ ಎಷ್ಟು ಸಂತೋಷವನ್ನುಂಟುಮಾಡಿದೆಯೊ? ಇದನ್ನು ಅವರು ಅನೇಕಸಲ ಶಿಷ್ಯರ ಮುಂದೆಯೇ ಬಲ್ಲವರ ಸಭೆಯಲ್ಲಿ ಹೇಳಿ ಹೆಮ್ಮೆ ಪಟ್ಟಿದ್ದಾರೆ.

ಹದಿನೈದು ವರ್ಷಗಳ ಹಿಂದೆ ಅವರಲ್ಲಿ ಕಾಣುತ್ತಿದ್ದ ಬಿಗಿಯೆಲ್ಲವೂ ಮಾಯ ವಾಗಿ ಇವರು ಈಗ ಶಿಷ್ಯರನ್ನು ಎಲ್ಲಿ ಕಂಡರೂ ನೈಜವಾದ ವಿಶ್ವಾಸದಿಂದ

ಮಾತನಾಡಿಸಿ ಅವರಲ್ಲಿ ಹೊಸ ಜೀವವನ್ನು ತುಂಬುತ್ತಾರೆ. ಕನ್ನಡ ಪ್ರಬಲವಾಗುವ ವೇಳೆಗೆ ಅದಕ್ಕೆ ಅವರ ನೆರೆ ದೊರೆತದ್ದು ಎಂಥ ಅಪೂರ್ವ ಅದೃಷ್ಟವೆಂಬುದನ್ನು ಕನ್ನಡಿಗರೆಲ್ಲರೂ ಬಲ್ಲರು. ಅವರು ಕನ್ನಡ ಪ್ರೊಫೆಸರಾಗಿ ಕನ್ನಡಬೋಧನೆಯಲ್ಲಿ ಒಂದು ಹೊಸ ಸಂಪ್ರದಾಯವನ್ನೆ ಬಿತ್ತಿದರೆಂದು ಶ್ರೀ॥ ವೆಂಕಣ್ಣಯ್ಯನವರು ಹೇಳುತ್ತಿದ್ದರು. ಅವರಲ್ಲಿ ನಾಲ್ಕಕ್ಷರ ಕಲಿತ ಶಿಷ್ಯರಿಗೆ ಅವರ ಕನ್ನಡ ನುಡಿಯ ಪುನರುದ್ಧಾರ ಪ್ರಯತ್ನದಲ್ಲಿ ಬೆಂಬಲವಾಗಿ ನಿಂತು ಅಳಿಲು ಸೇವೆಯನ್ನಾದರೂ ನೀಡುವುದು ಒಂದು ಮಹಾಭಾಗ್ಯವೆಂಬ ಸಂತೋಷ ಮತ್ತು ಹೆಮ್ಮೆ. ಅವರಿಂದ ಹೆಚ್ಚು ಸೇವೆ ಪಡೆಯುವ ಪುಣ್ಯ ದೇಶಕ್ಕೆ ಇರಬೇಕು.

ಜಿ. ಆರ್. ರಂಗಸ್ವಾಮಿ

# ಶ್ರೀಕಂಠಯ್ಯನವರ ಹೆದ್ದಾರಿ

ಯಾವ ಸಂಪ್ರದಾಯದ ಬಾಳಿಕೆಯು ಆಗಲಿ, ಅದೊಂದು ಕಾಲಾವಧಿಯಿಂದ ಕಟ್ಟುಗೊಂಡಿದೆ. ಲೋಕೋಪಯೋಗಿತ್ವವೆ ಅದರ ಮೂಲದಲ್ಲಿರುವ ಶಕ್ತಿ. ಈ ಶಕ್ತಿಯ ಬಲದಿಂದ ಅದು ಆರಾಧಕರನ್ನು ಆಕರ್ಷಿಸುವುದು; ಅವರ ಮೇಲೆ ತನ್ನ ಮುದ್ರೆಯನ್ನೊತ್ತುವುದು; ಅವರಿಗೆ ಪರಮಾವಧಿಯ ಪ್ರಯೋಜನವನ್ನು ಒದಗಿಸಿಕೊಡುವುದು. ಆ ಸಂಪ್ರದಾಯದ ಭಕ್ತರು "ಇದೇ ಲೇಸು" ಎನ್ನುವಷ್ಟು ಕಾಲ, ಅವರಿಗೂ ಅದಕ್ಕೂ ಇರುವ ಸಂಬಂಧವು ಶಿಥಿಲವಾಗದಷ್ಟು ಕಾಲ, ಅದರ ಏಕೈಕ ಪ್ರಭುತ್ವಕ್ಕೆ ವಿಘ್ನವೇನೂ ಇಲ್ಲ. ರೂಢಿಯೆಂದರೆ, ಮಾನವನ ಸಂಸ್ಕಾರ–ಅಭಿರುಚಿ–ವ್ಯಾಪಾರಗಳ ಫಲವಾಗಿ ಉಂಟಾದ ನಿಯಮ. ಪೀಳಿಗೆಯಲ್ಲಿ ವ್ಯತ್ಯಾಸವಾದಂತೆ ಸಂಸ್ಕಾರಾಭಿರುಚಿಗಳಲ್ಲಿಯೂ ವ್ಯತ್ಯಾಸವುಂಟಾಗುವುದು. ಕೆಲ ಸಮಯದವರೆಗೆ ಈ ವ್ಯತ್ಯಾಸವು ಇದ್ದರೂ ಇಲ್ಲದಂತೆ ಅಗೋಚರವಾದ ಸ್ಥಿತಿಯಲ್ಲಿರುವುದು. ಅಲ್ಪ ವ್ಯತ್ಯಾಸವು ವ್ಯತ್ಯಾಸವೇ ಅಲ್ಲ ಎನ್ನುತ್ತಾ ರೂಢಿ ವಿರೋಧಗಳನ್ನು ಮರೆತು ಬಿಡುವ ಅಭ್ಯಾಸವೂ ಮನುಷ್ಯರಲ್ಲಿ ಉಂಟು. ಇದು ಹೀಗೇಕೆ ಆಗಬೇಕು? ಎಂದು ಪ್ರಶ್ನೆಯೆತ್ತುವ ವಿಚಿಕಿತ್ಸಕನೊಬ್ಬ ಹುಟ್ಟುವವರೆಗೆ ಅದುವರೆಗಣ ರೂಢಿಯ ಅಡಿಗಟ್ಟು ಭದ್ರವಾಗಿರುವುದು. ವಿಚಿಕಿತ್ಸೆಯ ಫಲ ವಿಮರ್ಶೆ; ಅದರ ಫಲ ಸುಧಾರಣೆ ಅಥವಾ ನೂತನ ಸಂಸ್ಕಾರ. ಇಷ್ಟಾಗುವಲ್ಲಿ ಅದುವರೆಗೆ ಬಾಳಿಬಂದ ಸಂಪ್ರದಾಯದ ಕಾಲೋಪಯೋಗಿತ್ವವು ಕುಂದಿಹೋದಂತೆ ತೋರಿ, ಅದಕ್ಕೂ ಹೊಸದಾಗಿ ತಲೆಯೆತ್ತಲೆಳಸುವ ಮತ್ತೊಂದು ಪದ್ಧತಿಗೂ ಘರ್ಷಣೆಯಾಗದಿರುವುದಿಲ್ಲ. ವಿಚಿಕಿತ್ಸೆ–ವಿಮರ್ಶೆ–ಘರ್ಷಣೆ ಎಂಬ ಮೂರವಸ್ಥೆಗಳಲ್ಲಿ ಹುಟ್ಟಿ ಬೆಳೆದು ನೆಲೆಗೊಳ್ಳುವ ರೂಢಿಯು ಹಿಂದಿನದನ್ನು, ಇಂದಿಗಲ್ಲ ಎಂದು ಒತ್ತರಿಸುವುದು; ತತ್ಕಾಲಕ್ಕೆ ಹೊಸದೆನಿಸಿ, ಬಹು ಜನಾಭಿರುಚಿಗೆ ಸಮ್ಮತವಾಗಿ, ಬಹು ಜನರ ವಿಚಾರ ವಿಭಾವಗಳಿಂದ ತುಂಬಿ, ಹೊಮ್ಮಿ, ಕಳೆಗೊಂಡು, ಕಂಗೊಳಿಸುವುದು. ಹಳೆಯ ರೂಢಿ ಲಯವಾಗುವ ಲಕ್ಷಣವನ್ನು ತೋರಿಸುವುದಕ್ಕೆ ಮೊದಲುಮಾಡಿ, ಹೊಸ ರೂಢಿಯು ಜೀವಕಳೆ ಹೊಂದುವವರೆಗಿನ ಅಂತರಕಾಲವನ್ನು ನಾವು ಸಂಧಿಕಾಲ ಎನ್ನುತೇವೆ. ಸಂಧ್ಯಾಕಾಲವು ಹಗಲೂ ಅಲ್ಲ; ರಾತ್ರಿಯೂ ಅಲ್ಲ. ಇದು ರಾತ್ರಿಯೆ? ಹಗಲೆ? ಎಂದು ಕಲಹ ಹೂಡಿ ಪ್ರಯೋಜನವೂ ಇಲ್ಲ. ಸಂಧ್ಯೆ ಹೋದ ಮೇಲೆ ಬರುವ ಕಾಲಕ್ಕೆ ಸ್ಪಷ್ಟವಾದ ಕೆಲವು ಲಕ್ಷಣಗಳು ಗೋಚರಿಸುತ್ತವೆ. ಆಗ ಹಗಲಿರುಳುಗಳ ಭೇದವೇನೆಂಬುದು ತಿಳಿಯದಿರದು. ಅದರಂತೆ ಒಂದು ರೂಢಿಯ ಪತನ ಪ್ರವೃತ್ತಿಯು ಕಂಡುಬಂದು, ಹೊಸತೆನಿಸುವುದು ರೂಢಮೂಲವಾಗುವವರೆಗಣ ಸಂಧಿಕಾಲವು ಸಂದಿಗ್ಧಕಾಲವಾಗಿಯೇ ಇರುವುದು. ಆಗ ಕಲಹಕ್ಲೇಶಗಳಿಗೆ ಎಡೆಯುಂಟು. ಸತ್ಯವನ್ನು ಮರೆಮಾಜದೆ ಅದನ್ನು ಬೋಧಿಸುವ ಪ್ರಚೋದಕರ ಅವಶ್ಯಕತೆಯೂ ಉಂಟು. ಮನುಷ್ಯನ ಜ್ಞಾನಕ್ಷೇತ್ರದೊಳಗೆ ಅಳವಟ್ಟ ಯಾವ ಶಾಸ್ತ್ರದ ಇತಿಹಾಸವನ್ನು ನೋಡಿದರೂ, ಭಿನ್ನಸಂಪ್ರದಾಯಗಳ, ಸಂಪ್ರದಾಯ ಸ್ಥಾಪಕರ, ಸಂಪ್ರದಾಯ ಪಾಲನೆಗಾಗಿ ಹೋರಾಡಿದ ವೀರರ ಉಲ್ಲೇಖನಗಳಿಂದಲು ತುಂಬಿಹೋಗಿರುವುದೆಂಬುದನ್ನು ನಾವು ಮೊತ್ತಮೊದಲು ಅವಗಾಹನೆಗೆ ತರಬೇಕು.

ಕನ್ನಡನಾಡಿನ ಸಂಸ್ಕೃತಿ ಕಲೆಗಳಲ್ಲಿ ಹೇಗೋ ಹಾಗೆ ನುಡಿಯಲ್ಲಿಯೂ ಅವಸ್ಥಾಂತರಗಳಿದ್ದುವೆಂಬುದನ್ನು ಚರಿತ್ರಕಾರರು ಉಲ್ಲೇಖಿಸುತ್ತಾರೆ. ಈ ಅವಸ್ಥಾಂತರಗಳ ಲಕ್ಷಣಗಳೇನು? ಪದ ಪ್ರಯೋಗದಲ್ಲಿರುವ ಭೇದಗಳು ಮಾತ್ರವೇ? ಎಂದೂ ಅಲ್ಲ. ಹಳಗನ್ನಡ, ನಡುಗನ್ನಡ ಇತ್ಯಾದಿ ಭೇದಗಳನ್ನು ಹೆಕ್ಕಿ ತೆಗೆಯುವಲ್ಲಿ ಅವುಗಳ ವಿಶಿಷ್ಟತೆ ಎಂದು ವೈಕಲ್ಪಿಕವಾದ ಪದಪ್ರಯೋಗಗಳನ್ನು ಮಾತ್ರ ಎತ್ತಿತೋರಿಸಿದರೆ ಸಮರ್ಪಕವಾದ ಪ್ರತಿಪಾದನೆಯಾಗಲಾರದು. ಶಬ್ದಗಳಲ್ಲಿ ಭಾವವಿದೆ; ಜೀವವಿದೆ; ಅಭಿಪ್ರಾಯ ಚಿತ್ರವಿದೆ; ಕಿವಿಗೆ ತೃಪ್ತಿಯನ್ನುಂಟು ಮಾಡುವ ಶಕ್ತಿಯಿದೆ; ಹೃದಯವನ್ನು ಮೂದಲಿಸುವ ಸಾಮರ್ಥ್ಯವಿದೆ. ಆದುದರಿಂದ ಪದಪ್ರಯೋಗಗಳ ವ್ಯತ್ಯಾಸವೂ ಭಾಷಾಸ್ವರೂಪಗಳ ಪರಿವರ್ತನವೂ ಪದಸತ್ವವಾದ ಭಾವದಲ್ಲಿಯೂ ಅದನ್ನು ಪ್ರಯೋಗಿಸುವವರ ಅಭಿರುಚಿಯಲ್ಲಿಯೂ ಅದನ್ನು ಕೇಳಿ ಅರ್ಥಗ್ರಹಣ ಮಾಡುವ ಶ್ರಾವಕರ ಸಂಸ್ಕಾರದಲ್ಲಿಯೂ ವ್ಯತ್ಯಾಸವುಂಟಾಗಿರುವುದೆಂಬುದನ್ನು ನಿದರ್ಶಿಸುತ್ತಿವೆ. ಆದುದರಿಂದ ಹೊಸಗನ್ನಡ, ಹಳಗನ್ನಡ, ಪೂರ್ವದ ಹಳಗನ್ನಡ ಎಂದು ನಮ್ಮ ನುಡಿಯ ಅವಸ್ಥೆಗಳ ಸ್ವರೂಪವನ್ನು ವಿಮರ್ಶಿಸುವವರು, ಶಬ್ದಕೋಶದಿಂದೆತ್ತಿದ, ಆ ಆ ಸಂಪ್ರದಾಯಸಿದ್ಧವಾದ, ನಾಲ್ಕು ಪದಗಳನ್ನು ಕೊಟ್ಟರೆ ವಿಮರ್ಶೆಯ ಬುಡಕ್ಕೂ ಬಂದಂತಾಗಲಿಲ್ಲ. ಅವಸ್ಥಾಭೇದಗಳು ದೃಷ್ಟಿ ಭೇದವನ್ನೂ ಅಭಿರುಚಿ ಭೇದವನ್ನೂ ಸಂಸ್ಕಾರ ಭೇದವನ್ನೂ ಸೂಚಿಸುತ್ತವೆ ಎಂಬುದನ್ನು ಒಪ್ಪಿಕೊಳ್ಳುವುದು ಸಾಹಿತ್ಯ ವಿಮರ್ಶೆಯ ಮೂಲ ಪ್ರಸ್ಥಾನವಾಗಿದೆ. ಈ ಪ್ರಮಾಣದಿಂದ ಪರೀಕ್ಷಿಸಲಾಗಿ, ಇಪ್ಪತ್ತೈದು ವರ್ಷಗಳಿಂದೀಚೆಗೆ ಸಂಧಿ ಕಾಲವನ್ನು ದಾಟಿ, ಬೇರೂರುವುದಕ್ಕೆ ಪ್ರಯತ್ನಪಟ್ಟು, ಈಗ ಸ್ಥಿರರೂಪವನ್ನು ಹೊಂದಿರುವ ಹೊಸಗನ್ನಡವು ಸ್ಪಷ್ಟವಾದ ಕೆಲವು ರೂಪರೇಖೆಗಳಿಂದೊಡಗೂಡಿ, ಹೊಸದಾದ ಒಂದು ಸಂಸ್ಕಾರವನ್ನು ಸೂಚಿಸುತ್ತಿದೆ ಎನ್ನುವುದರಲ್ಲಿ ಆಕ್ಷೇಪವಿರಲಾರದು. ಇಪ್ಪತ್ತೈದು ವರ್ಷಗಳ ಹಿಂದಣ ಪ್ರಾಸದ ಕದನಗಳೂ ವ್ಯಾಕರಣದ ಮಲ್ಲಯುದ್ಧಗಳೂ ಇಂದು ಸ್ಮರಣೆಯ ಗರ್ಭದಲ್ಲಿ ಉಳಿದಿವೆ. ಭಾಷಾ ಪ್ರವಾಹವು ನಿರರ್ಗಳವಾಗಿ ಹರಿಯುತ್ತಿರುವುದು. ಇದರಿಂದ ಕನ್ನಡವು ಹಾಳಾಯಿತು, ಹೊಲೆಯಾಯಿತು, ಎಂದು ಕೂಗೆಬ್ಬಿಸುವವರ ಸ್ವರವಿಂದು ಕ್ಷೀಣವಾಗುತ್ತಾ ಬಂದಿದೆ. ಅನಾಯಕವಾಗಿ ತೋರುತ್ತಿದ್ದ ಭಾಷಾ ಪ್ರಯೋಗದೊಳಗೂ ವ್ಯಾಕರಣದ ದಾರಿಯನ್ನು ತೋರಿಸುವ ರೂಢಿಯೊಂದು ರೂಪುಗೊಳ್ಳುತ್ತಿದೆ. ಗದ್ಯ ಸಾಹಿತ್ಯವು ವಿಪುಲವಾಗಿ ಬೆಳೆದಿದೆ. ಪದ್ಯ ಸಾಹಿತ್ಯವು ನಾನಾ ಥಾಟಿಯಲ್ಲಿ ಹರಿದಿದೆ. ನಾಟಕಗಳ ವಸ್ತು ಸಾಮ್ರಾಜ್ಯವು ಅತಿವಿಸ್ತಾರವಾಗಿದೆ. ಹೊಸ ಛಂದಸ್ಸಿನ 'ಶಾಸ್ತ್ರ' ಒಂದು ನಿರ್ಮಾಣಹೊಂದದಿದ್ದರೂ, ಅದರ ಗತಿಯು ಯಾವುದೋ ಒಂದು ನಿಯಮವನ್ನು ಅನುಸರಿಸಿ ಬರುವಂತೆ ತೋರುವುದು. ಕಥೆಗಳೂ ಆತ್ಮಕಥೆಗಳೂ ಕಾದಂಬರಿಗಳೂ ಪ್ರಬಂಧಗಳೂ ಶಿಶು ಸಾಹಿತ್ಯಗಳೂ ಪ್ರೌಢ ಸಾಹಿತ್ಯಗಳೂ ಪತ್ರಿಕಾ ವಾಙ್ಮಯವೂ ಭಾಷಣ ವಾಙ್ಮಯವೂ ತಾರತಮ್ಯಾನುಸಾರವಾಗಿ ಬೇರೆ ಬೇರೆ ಸ್ವರೂಪವನ್ನೂ ವೇಗವನ್ನೂ ಹೊಂದಿ ಹೊಂಚುತ್ತಿರುವುವು. ಕನ್ನಡವಿಂದು ನಿರ್ಜೀವ ಭಾಷೆಯಾಗಿಲ್ಲ; ಸಜೀವ ಭಾಷೆಯಾಗಿದೆ;

ವರ್ಧಿಷ್ಣುವಾಗಿವೆ. ಕನ್ನಡದೇವಿಯಿಂದು ತನ್ನ ಕಾಲಲ್ಲೆ ನಡೆವ ಶಕ್ತಿಯನ್ನು ಹೊಂದಿದ್ದಾಳೆ. ತನ್ನ ಒಡೆತನವನ್ನು ಸ್ಥಾಪಿಸುವ ವಿಶ್ವಾಸವನ್ನೂ ಹೊಂದಿದ್ದಾಳೆ. ಅವಳಿಗೆ ಇಂತಹ ಸೌಭಾಗ್ಯವನ್ನೊದಗಿಸುವುದರಲ್ಲಿ ಮೈಸವೆದ ಹಿರಿಯಾಳುಗಳು ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಬೇಕಲ್ಲವೆ? 'ಶ್ರೀ'ಯವರು ನಮ್ಮ ಹಿರಿಯಾಳುಗಳಲ್ಲಿ ಗಣನೀಯರು.

'ಶ್ರೀ'ಯವರನ್ನು ಕುರಿತು ಮಾತಾಡುವಾಗ ಕೈ. ವಾ. ಪಂಜೆಯವರು "ಅದೊಂದು ತುಂಬಿದ ಕೊಡ" ಎನ್ನುತ್ತಿದ್ದರು. ತುಂಬಿದ ಕೊಡ ತುಳುಕುವುದಿಲ್ಲವಷ್ಟೆ? ತುಳುಕದೆ ತುಂಬಿಕೊಂಡಿರುವ ಕೊಡದ ಆಳವೇನು? ಅಳವೇನು? ಒಳಗೇನು? ಎಂದು ಹೊರಗಣಿಂದ ನೋಡುವವರು ತಿಳಿಯುವ ಬಗೆ ಹೇಗೆ? 'ಶ್ರೀ'ಯವರ ಪ್ರಮಾಣವು ಕನ್ನಡಿಗರಿಗೆ ತಿಳಿಯುವಂತಾದುದು, ಅವರು ನೂತನ ಸಾಹಿತ್ಯ ಪಂಥದ ಪ್ರವರ್ತಕರಾಗಿ ಮುಂದೆ ಬಂದುದರಿಂದ. ಪಡುವ ಕಡಲ ಹೊನ್ನ ಹೆಣ್ಣಿನ ವ್ಯಾಮೋಹವಲ್ಲೇ ಕೆಡೆದಿದ್ದು, ಕನ್ನಡದ ಕರ್ಮಕ್ಷೇತ್ರವನ್ನು ಮರೆಯುತ್ತಿದ್ದರೆ, ಬಹುಶಃ ಅವರಿಂದು "ಶ್ರೀ"ಗಳೆಂದು ವಿಖ್ಯಾತರಾಗುತ್ತಿರಲಿಲ್ಲ. ಜನತೆಯ ಹೃದಯ ತಂತ್ರಿಗಳನ್ನು ಮಿಡಿಯುವ ವಿಾಟುವ ಕನ್ನಡದ ವೀರಭಕ್ತರಾಗುತ್ತಿರಲಿಲ್ಲ. ಹೊಸಗನ್ನಡ ಸಾಹಿತ್ಯದಲ್ಲಿ ನಾಯಕರ ಅವಶ್ಯತೆಯೊದಗಿತು. ಮನೋವಾಕ್ಕಾಯಗಳಿಂದ ಕನ್ನಡದೇವಿಯ ಪಾದಸೇವೆಯನ್ನು ಮಾಡುವ ಭಕ್ತಶಿಖಾಮಣಿಗಳು ಮೂಡಿ ಬರಬೇಕಾಗಿತ್ತು. ಪಾಂಡಿತ್ಯ, ಪ್ರತಿಭೆ, ರಸಿಕತೆ, ಮನೋನಿರ್ಧಾರ. ಹೃದಯ ವಿಶಾಲತೆ, ವಾಗ್ಮಿತ್ವ, ಕರ್ತವ್ಯ ಪ್ರವಣತೆ ಮೊದಲಾದ ಹಲವು ಗುಣಗಳೊಂದಾಗಿ ನಾಯಕ ಶಕ್ತಿಯಲ್ಲಿ ಪರಿಣಮಿಸುವುವು. ಇಂತಹ ನಾಯಕರಿಗೆ ಆಹ್ವಾನ ಬಂತು. 'ಶ್ರೀ'ಯವರು ಸಾಹಿತ್ಯ ಸೇವೆಗೆ ತೊಡಗುವ ಮುಂಚೆ ಹೊಸ ಆವೇಶದಿಂದ ಪ್ರೇರಿತರಾಗಿ ಕರ್ಮರಂಗಕ್ಕಿಳಿದವರೇ ಇರಲಿಲ್ಲ ಎಂದು ಹೇಳುವುದು ನನ್ನ ಆಶಯವಲ್ಲ; ಇದ್ದರು; ಹಲವರಿದ್ದರು. ಏಕಾಂಗವಾಗಿ, ಹೆಗಲಿಗೆ ನೊಗ ಕಟ್ಟಿಕೊಂಡು, ತಾವೇ ಎತ್ತುಗಳಾಗಿ ಸಾಹಿತ್ಯ ಕ್ಷೇತ್ರವನ್ನು ಉತ್ತವರು ಇಲ್ಲದಿರಲಿಲ್ಲ. ಅಲ್ಲಲ್ಲಿ ಬೀಜಬಿತ್ತಿದವರು ಇಲ್ಲದಿರಲಿಲ್ಲ. ತಾವೇ ಸಾಹಿತ್ಯದ ಸಸ್ಯಕ್ಕೆ ಗೊಬ್ಬರವಾಗಿ ಬಿದ್ದವರು ಇಲ್ಲದಿರಲಿಲ್ಲ. ಆದರೆ ಹೊಸಗನ್ನಡ ಸಾಹಿತ್ಯ ವ್ಯವಸಾಯಕ್ಕೆ ಹೊಸ ಪ್ರೇರಣೆಯನ್ನೂ ಹೊಸಪರಿವಿಡಿಯನ್ನೂ ಹೊಸ ನೆಲೆಗಟ್ಟನ್ನೂ ಕೊಟ್ಟು, ಅದನ್ನು ಸಾರ್ವಜನಿಕ ಕರ್ತವ್ಯದ ಮಟ್ಟಕ್ಕೇರಿಸಿ, ಅದರ ತೇಜಸ್ಸು ಜನರ ತನುಮನಗಳನ್ನು ಬೆಳಗುವಂತೆಸಗಬೇಕೆಂದು ಸೊಂಟಕಟ್ಟಿ ನಿಂತವರನ್ನು ಹುಡುಕಬೇಕಾಗಿದೆ; ಈಗ ಹುಡುಕದೆ ದೊರೆಯುವವರೆಂದರೆ 'ಶ್ರೀ'ಯವರೊಬ್ಬರೆ.

ಹೊಸಗನ್ನಡ ಸಾಹಿತ್ಯದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ, ಆಂಗ್ಲ ಸಾಹಿತ್ಯದ ಪ್ರಭಾವವು ಹೆಚ್ಚಾಗಿ ಬಿದ್ದುದು ಕಂಡುಬರುತ್ತದೆ. ನಮ್ಮ ದೇಶದ ಜನರು ಆಂಗ್ಲ ಭಾಷೆಯ ಅಧ್ಯಯನವನ್ನು ಮಾಡಿ, ಅದರ ಜಿಡಗನ್ನು ಮೆಚ್ಚಿ, ಅದರ ಅನುಕರಣೆಯನ್ನು ಮಾಡತೊಡಗಿದರೆಂದು ವಿಮರ್ಶಕರು ಹೇಳಬಹುದು. ಈ ಮಾತೇ ನಿಜವೆಂದು ತರ್ಕಕ್ಕಾಗಿ ಒಪ್ಪಿದರೂ, ಇಂತಹ ಅನುಕರಣವು ಒಂದು ಕಾಲದಲ್ಲಿ ಅವಶ್ಯವಾಗಿದ್ದಿತೆಂದರೆ ತಪ್ಪಾಗದು. ನಮ್ಮ ಮನೋಧರ್ಮವು ಪಾಶ್ಚಾತ್ಯ ಸಂಸ್ಕೃತಿಯ

ಕಡೆಗೆ ತಿರುಗುತ್ತಿದ್ದ ಕಾಲವಿತ್ತು. ಆಂಗ್ಲವಿದ್ಯೆಯನ್ನರಿತವರೇ ಓದಿದವರು; ಆಂಗ್ಲ ವಿದ್ಯೆಯೇ ಸಾರ್ಥಕ ವಿದ್ಯೆ; ಎನ್ನುವ ಅಭಿಪ್ರಾಯವು ಜನರಲ್ಲಿ ಉಂಟಾದುದು ಹೇಗೆ? ಏಕೆ? ಎಂಬುದನ್ನಿಲ್ಲಿ ವಿಚಾರಿಸಬೇಕಾಗಿಲ್ಲ. ಒಂದು ಕಾಲದಲ್ಲಿ ಸಂಸ್ಕೃತ ಸಾಹಿತ್ಯವು ದೇಶಭಾಷೆಗಳ ಮೇಲೆ ಇದೇ ಒಡೆತನವನ್ನು ಸ್ಥಾಪಿಸಿರಲಿಲ್ಲವೆ? ಸಂಸ್ಕೃತಜ್ಞಾನ ವಿಹೀನರು ಪಶುಗಳೆಂಬ ಭಾವನೆ ಬಲಿತಿರಲಿಲ್ಲವೆ? ಅದರಂತೆ. ಆಂಗ್ಲವಿದ್ಯಾ ಪ್ರಭಾವಕ್ಕೆ ಸೋತ ನಮ್ಮವರು ತಾಯ್ನುಡಿಯ ಸೊಗಸನ್ನು ಮರೆತರು. ಆಂಗ್ಲ ಭಾಷಾ ಪಂಡಿತರು, ದೇಶ ಭಾಷಾ ಪಂಡಿತರು ಎಂಬ ಎರಡು ಪಂಡಿತ ಜಾತಿಗಳುಂಟಾದುವು. ಈ ಎರಡು ಜಾತಿಗಳಲ್ಲಿ ಪರಸ್ಪರ ವೈಮನಸ್ಯ ಉಂಟಾಯಿತು. ಆಧುನಿಕ ಕಾಲದ ವಿಚಾರ ವಾದಕ್ಕೆ (Rationalism) ತವರೂರಾದ ಪಾಶ್ಚಾತ್ಯ ದೇಶದ ಭಾವನಾ ಪ್ರವಾಹವು ಆಂಗ್ಲ ಭಾಷಾ ಪಾತ್ರದ ಮೂಲಕ ನಮ್ಮ ಜನರ ಹೃದಯ ಪ್ರದೇಶಕ್ಕೆ ಹರಿಯತೊಡಗಿತು. ಆಂಗ್ಲ ಭಾಷೆಯು ನಮ್ಮ ಜನರ ವಿಚಾರಗಳಲ್ಲಿ ಕ್ರಾಂತಿಯನ್ನೆಬ್ಬಿಸಿತೇ? ಅಥವಾ ಕಾಲಧರ್ಮ ಪ್ರಭಾವದಿಂದ ನಮ್ಮವರು ನವೀನ ಸಂಸ್ಕೃತಿಯ ಆರಾಧಕರಾದರೇ? ಎಂಬುದು ಚರ್ಚಾ ವಿಷಯವಾಗಿದೆ. ಅಂತೂ ನಮ್ಮವರ ವಿಚಾರಪರಿವರ್ತನೆಗೆ ಆಂಗ್ಲ ಸಾಹಿತ್ಯವು ನಿಮಿತ್ತ ಕಾರಣವಾಗಿ ಕಂಡುಬರುತ್ತಿದೆ. ಹೀಗಾದುದಕ್ಕಾಗಿ ಯಾರೂ ವಿಷಾದಿಸಬೇಕಾಗಿಲ್ಲ. ಯಾವ ಸಾಹಿತ್ಯಕ್ಕೂ ಏಕಾಂತ ಜೀವನವು ಸಲ್ಲದು. ಭಾಷಾ ಸಂಪರ್ಕವು ಜ್ಞಾನವನ್ನು ಹೆಚ್ಚಿಸುತ್ತದೆ ಎಂಬುದನ್ನು ಸಂಸ್ಕೃತ ದೇಶಭಾಷೆಗಳ ಸಂಪರ್ಕವು ತಿಳಿಸುತ್ತದೆ. ಆತ್ಮಾಪಮಾನದ ಬುದ್ಧಿ (Inferiority complex) ಇಲ್ಲದಷ್ಟು ಕಾಲಿ ಯಾವ ವ್ಯಕ್ತಿ ಯಾವ ವ್ಯಕ್ತಿಯೊಂದಿಗೂ ಬೆರೆತು ವಿಚಾರ ಲಾಭವನ್ನು ಪಡೆಯಬಹುದು. ಭಾಷೆಗೂ ಇದೇ ನಿಯಮವು ಅನ್ವಯಿಸುತ್ತದೆ. ಆತ್ಮಾಪಮಾನವು ಪರಾವಲಂಬನ ಸ್ವಭಾವಕ್ಕೆ ಕಾರಣವಾಗುತ್ತಿದೆ. ಸಂಸ್ಕೃತ ಸಾಹಿತ್ಯದ ತಿರುಳನ್ನರಿತವರು ಅದರ ರಸಸರ್ವಸ್ವವನ್ನೂ ನಮ್ಮ ಭಾಷೆಗೆ ತಂದು ಸುರಿದರು. ನಮ್ಮ ಭಾಷೆಯ ಸಂಪತ್ತನ್ನು ಹೆಚ್ಚಿಸಿದರು. ಸ್ವಭಾಷೆಯ ಭವಿಷ್ಯದಲ್ಲಿ ವಿಶ್ವಾಸವಿಲ್ಲದವರು ಅನುಕರಣಪಟುಗಳಾದರು. ಒಂದು ಕಾಲದಲ್ಲಿ ಅನುಕರಣವು ಅವಶ್ಯವಾಗಿದ್ದಿರಬಹುದಾದರೂ, ಕಾಲಾತೀತವಾಗಿ ಬಂದ ಅನುಕರಣ ಸ್ವಭಾವವು ಸಾಹಿತ್ಯದ ಅಭಿವೃದ್ಧಿಗೆ ತಡೆಹಾಕಿತು. ಪ್ರಾಚೀನ ಸಾಹಿತ್ಯದಲ್ಲಿ ಒದಗಿದ ಇದೇ ಅವಸ್ಥೆಯು ಆಧುನಿಕ ಕನ್ನಡ ಸಾಹಿತ್ಯದಲ್ಲಿಯೂ ಪುನರಾವರ್ತನ ಹೊಂದಿತು. ಅದು ಮಬ್ಬಿನ ಕಾಲ. ಮಬ್ಬಿನ ಕಾಲದಲ್ಲಿ ಕೆಲವರು ಬೆಳಕನ್ನು ಹುಡುಕಿದರು; ಕಂಡರು. ಆಂಗ್ಲ ಸಾಹಿತ್ಯದ ಪ್ರಯೋಜನವನ್ನು ಹೊಂದಿಸಿಕೊಳ್ಳಬೇಕು; ಆದರೆ, ಅದರ ಛಾಯಾನುಕೃತಿ ಸಲ್ಲದು. ನಮ್ಮ ಸಾಹಿತ್ಯ ಸಂಸ್ಕೃತಿಯ ಮೂಲನಿಧಿಯನ್ನು ಹೆಚ್ಚಿಸಬೇಕು. ಆದರೆ ಪರರ ಒಡವೆಯನ್ನು ನಮ್ಮದೇ ಎಂದು ಹೇಳುವ ಚೌರ್ಯ ಪ್ರವೃತ್ತಿ ಇರಬಾರದು. ನಾವು ಕಾಣಬೇಕು; ವಿಚಾರಿಸಬೇಕು; ಅನುಭವಿಸಬೇಕು. ಹೀಗೆ ಸಂಶೋಧಿಸಿದುದನ್ನು ಸಾಹಿತ್ಯದ ಪಾಕದಲ್ಲಿ ಇಳಿಸಬೇಕು. ಪರದೇಶಗಳಿಂದ ಬಂದ ಭಾವನೆ ನಮ್ಮ ಸಾಹಿತ್ಯ ವೃಷ್ಟಿಯನ್ನು ಮುಂದೀಕರಿಸದೆ, ಅದರ ಒಳನೋಟವನ್ನು ತೀಕ್ಷ್ಣಗೊಳಿಸಬೇಕು ಎಂಬ ಸಿದ್ಧಾಂತವು

ನಮ್ಮ ದೇಶದ ಹಲವು ಸಾಹಿತ್ಯಾಚಾರ್ಯರ ಮೆಚ್ಚುಗೆಯನ್ನು ಪಡೆಪಂದಿಸಿಂದ, ನಮ್ಮ ಭಾಷೆಗಳು ಸ್ವಾತಂತ್ರ್ಯದ ಹಜ್ಜೆಯನ್ನಿಟ್ಟುವು. ಭಾಷಾಸ್ವಾತಂತ್ರ್ಯ ಎಂಬುದರ ಅರ್ಥವಿಷ್ಟೆ: ಭಾಷೆಯ ಉದ್ಗಮವು ಜನಜೀವನದಲ್ಲಾದುದರಿಂದ ಅದು ಜನಜೀವನ ವಿಕಾಸಕ್ಕೆ ಕಾರಣವಾಗಬೇಕು. ಪ್ರಪಂಚದ ವಿವಿಧ ಜ್ಞಾನ ಭಂಡಾರವು ಅದರಲ್ಲಿ ತುಂಬಿ ಜನರ ಸೊತ್ತಾಗಬೇಕು. ಪ್ರಪಂಚಹೃದಯ ದೊಂದಿಗೆ ಜನರ ಹೃದಯವೂ ಸ್ಪಂದಿಸುವುದಕ್ಕೆ ಬೇಕಾದಷ್ಟು ವಿಷಯ ವಿಪುಲತೆಯು ಭಾಷೆಯಲ್ಲಿರಬೇಕು. ವಿಷಯದಾರಿದ್ರ್ಯ—ಶಬ್ದದಾರಿದ್ರ್ಯಗಳಿಂದ ಭಾಷೆಯು ಜೊಕ್ಕಸವು ಬರಿದಾಗಬಾರದು. ನಾನಾ ವಿಧದ ವಿಚಾರಗಳನ್ನೂ ಸಂಸ್ಕೃತಿಗಳನ್ನೂ ಶುದ್ಧೀಕರಿಸಿ ನಮ್ಮ ಸಂಸ್ಕೃತಿಯೊಂದಿಗೆ ಅವು ಹದವಾಗಿ ಬೆರಕೆ ಹೊಂದುವಂತೆಸಗಬೇಕು. ಇಂತಹ ವ್ಯವಸಾಯ ಕ್ರಿಯೆಯಾಗುವಾಗಲೂ, ನಮ್ಮದೆನಿಸುವ ಭಾಷೆಯ ಸಂಸ್ಕೃತಿಯ ಮೂಲಸೌಂದರ್ಯ ವಿಶಿಷ್ಟತೆಗಳು ಕಳೆದುಹೋಗಬಾರದು. ವೀರರು ವೀರರೊಡನೆ ಹೆಗಲೊಡ್ಡಿ ಕಾದಾಡಿ, ಶಕ್ತಿ ಪರೀಕ್ಷೆಯಾದ ಅನಂತರ ಪರಸ್ಪರ ಗುಣಗಳನ್ನು ತಿಳಿದು ಹೇಗೆ ಸಂಭಾವಿತ ಸ್ನೇಹವನ್ನು ಬೆಳೆಯಿಸುವರೋ ಹಾಗೆಯೇ ಭಾಷಾಸ್ನೇಹವು ವರ್ಧಿಸಿದರೆ ಅದರಿಂದ ಲಾಭವಲ್ಲದೆ ಕೆಡುಕಿಲ್ಲ. ಇದನ್ನು ಅರಿತುಕೊಂಡು, "ಹೀಗೆ ನನಗೆ ಹಬ್ಬವಾಗಿ, ಇನಿಯರಿಬ್ಬರನ್ನು ತೂಗಿ. ಇವಳ ಸೊಬಗನವಳು ತೊಟ್ಟು ನೋಡ ಬಯಸಿದೆ; ಅವಳ ತೊಡಿಗೆ ಇವಳಿಗಿಟ್ಟು ಹಾಡಬಯಸಿದೆ" ಎಂದು ಹಾಡಿದ 'ಶ್ರೀ'ಯವರ ಹೃದಯವು ಆಂಗ್ಲ ಕನ್ನಡ ಭಾಷೆಗಳ ಘರ್ಷಣದ ವೇದನೆಯನ್ನು ಅನುಭವಿಸಿ ಪಾಕಗೊಂಡ ಹೃದಯ; ಸ್ವಾತಂತ್ರ್ಯವನ್ನು ಕಾಯ್ದುಕೊಂಡು ಸಂಸ್ಕೃತಿಯ ಕಳೆಗೂಡಿ ಸ್ಫುರಿಸುತ್ತಿರುವ ಹೃದಯ. ಇದರ ಸ್ವಾರಸ್ಯವನ್ನರಿಯಲು ಬಲ್ಲವರಾಗಬೇಕು. "ಬಲ್ಲವರಿಗೆ ಬೆರಗೆ ಇಲ್ಲಿ?" ಎಂದವರು ಕೇಳಿದರೆ "ಬೆರಗಿಲ್ಲ" ಎಂದು ಉತ್ತರ ಕೊಡುವುದಕ್ಕೆ ನಾವು ಸಂದೇಹಪಡಬೇಕಾಗಿಲ್ಲ.

ಪಾಶ್ಚಾತ್ಯ ಪೌರಸ್ತ್ಯ ಸಂಸ್ಕೃತಿಗಳ ಮಧುರಮಿಲನವನ್ನಪೇಕ್ಷಿಸುವ ಇಂದಿನ ಸಂಪ್ರದಾಯವು ಸ್ವಾತಂತ್ರ್ಯವನ್ನು ಎತ್ತಿ ಹಿಡಿಯುವುದರಿಂದಲೆ ಚೈತನ್ಯವನ್ನು ಹೊಂದಿಕೊಂಡಿದೆ. ಈ ಸ್ವಾತಂತ್ರ್ಯವು ಬಹುಮುಖವಾಗಿರುವುದು; ವಿಚಾರಪ್ರಧಾನವಾದುದು. ನಮ್ಮಲ್ಲಿರುವ ಕಲ್ಮಷವನ್ನು ಹೋಗಲಾಡಿಸಬೇಕು; ಪರರ ದೌರ್ಬಲ್ಯಗಳನ್ನಲ್ಲ, ಸದ್ಗುಣಗಳನ್ನು ಪರಿಗ್ರಹಿಸಬೇಕು; ಎನ್ನುವ ಮನೋಭಾವದಲ್ಲಿ ಧರ್ಮ, ನೀತಿ, ವೇದಾಂತ, ಸಮಾಜಜೀವನ, ರಾಜಕೀಯ ಮೊದಲಾದ ಸಕಲ ವಿಷಯಗಳಲ್ಲಿಯೂ ಇರುವ ಗ್ರಾಹ್ಯವಲ್ಲದ ಕೆಲವಂಶಗಳನ್ನು ಬಿಟ್ಟು, ಇಲ್ಲದ, ಇರಬೇಕಾಗಿದ್ದ, ಕೆಲವಂಶಗಳನ್ನು ತರಬೇಕೆನ್ನುವ ಪ್ರೇರಣೆಯಿರುವುದು. ಸುಧಾರಕರೆನಿಸುವವರಲ್ಲಿರಬೇಕಾದ ಪ್ರವೃತ್ತಿಯಿದು. ಹಲವು ವೇಳೆ ಮೇಲಿಂದ ಮೇಲೆ ನೋಡುವ ವಿಮರ್ಶಕರು ಇದನ್ನೇ ಸಂಪ್ರದಾಯವಿರೋಧವೆಂದೂ, ಪರಾವಲಂಬನ ಚಿತ್ತವೃತ್ತಿಯೆಂದೂ ಟೀಕಿಸುವುದುಂಟು. ಆಳವಾದ ನೋಟಕ್ಕೆ ಇಂತಹ ಪ್ರತಿಪಾದನೆಯ ಅಯಥಾರ್ಥತೆ ತಿಳಿಯದಿರುವುದೇ?

ಭರತಮಾತೆಯೆ, ಭರತಮಾತೆಯೆ, ಎಂದು ನೀ ತಲೆಯೆತ್ತುವೆ?
ಎಂದು ಲೋಕದ ಜನದ ಹೃದಯದಿ, ನಿನ್ನ ಮಹಿಮೆಯ ಬಿತ್ತುವೆ?



## ಶ್ರೀಕಂಠಯ್ಯನವರ ಹೆದ್ದಾರಿ

*  *  *

ನಿನ್ನ ಧರ್ಮದ ದಿವ್ಯಪಥದಲಿ ಬದುಕತಿದ್ದದೆ ಹೋದೆವು.

*  *  *

ನಮ್ಮ ಮನೆಯಲಿ ನಾವು ಹೆರರಿಗೆ ದುಡಿವ ತೊತ್ತುಗಳಾದೆವು.

*  *  *

ಧರ್ಮಶಾಂತಿ ಸ್ವತಂತ್ರವಲ್ಲವೆ ನಮ್ಮ ಹಿರಿಯರ ನುಡಿಗಳು?

ಹೃದಯವನ್ನು ಮೂದಲಿಸುವ ಈ ಮಾತುಗಳಲ್ಲಿ ಸ್ವಧರ್ಮ ವಿಸ್ಮೃತಿಯ ಛಾಯೆಯಾದರೂ ಉಂಟೆ? ನಮ್ಮ ಧರ್ಮದ ದಿವ್ಯಪಥವೇನೆಂದು ನಾವು ತಿಳಿಯದೆ ಹೋದೆವು. ತಿಳಿದವರೂ ಅದಕ್ಕನುಗುಣವಾಗಿ ಜೀವನವನ್ನು ಸಂಸ್ಕಾರಗೊಳಿಸ ಲಿಲ್ಲ. ಇದರಿಂದ 'ಧರ್ಮ' ಎಂಬುದು ಶಾಸ್ತ್ರದಲ್ಲುಳಿಯಿತು. ಜೀವನದಲ್ಲಿ ಧರ್ಮ ವಿರುದ್ಧವಾದ ಮೂಢಾಚರಣೆಗಳು ನೆಲೆಗೊಂಡುವು. ಈ ಆಚಾರಗಳನ್ನೆ ಧರ್ಮ ವೆಂದು ಭ್ರಮಿಸಿದೆವು. ಹೀಗೆ ವಿಮರ್ಶಿಸುತ್ತಾ ಹೋಗುವವರು ಟೀಕಾಕರ್ತರ ಬಾಯ್ಮುಚ್ಚಿಸದೆ ಇರಲಾರರು. ಆದರೇನು? ಟೀಕೆಯಿಂದ ಸತ್ಯಸಿದ್ಧಾಂತದ ಪ್ರಕಾಶವು ಹೆಚ್ಚುತ್ತದೆಯಲ್ಲದೆ ಕುಂದಿಹೋಗುವುದಿಲ್ಲ. ಧರ್ಮವಲ್ಲದುದನ್ನು ಧರ್ಮವೆಂಬ ಅಜ್ಞಾನವನ್ನು ಅಪ್ಪಿಹಿಡಿದ ಕಾರಣವೇ ನಮಗೀ ಅಧೋಗತಿ ಬಂದು ದೇನೊ? ಒಂದು ಕಾಲದಲ್ಲಿ ಭರತಮಾತೆಯ ಮಹಿಮೆ ಲೋಕಕ್ಕೆಲ್ಲ ವಿದಿತ ವಾಗಿತ್ತು. ಆ ಹೆಗ್ಗಳಿಕೆಯನ್ನು ಇನ್ನೊಮ್ಮೆ ಬಿತ್ತಬೇಕಾಗಿದೆ. ನಮ್ಮ ಅಜ್ಞಾನವು— ಧರ್ಮಶಾಂತಿ ಸ್ವಾತಂತ್ರ್ಯಗಳನ್ನು ಬೋಧಿಸಿದ ನಮ್ಮ ಹಿರಿಯರ ನುಡಿಗಳ ಮರವೆ—ನಮ್ಮ ಸರ್ವ ಪ್ರಕಾರವಾದ ದಾಸ್ಯಕ್ಕೆ ಕಾರಣವಾಯಿತು. ನಮ್ಮ ಮನೆಯಲ್ಲಿ ನಾವೇ ದಾಸರಾದೆವು. ಕೆಲವು ಕಾಲದಿಂದ ನಾವು ಧರ್ಮಭ್ರಾಂತಿಯಿಂದ ಅನುಸರಿಸಿಕೊಂಡ ಆಚಾರ ಸಂಪ್ರದಾಯಗಳು ನಮಗಿಂತಹ ದುರವಸ್ಥೆಯನ್ನೊದಗಿ ಸಿದಮೇಲೆ, ನಮ್ಮ ದೃಷ್ಟಿಯಲ್ಲೇನು ದೋಷವಿದ್ದಿತು? ಎಂದು ಶೋಧನೆ ನಡೆಯಿ ಸುವುದು ಅವಶ್ಯವಲ್ಲವೆ? ಕಾಲಾಂತರದಲ್ಲಿ ಕಲ್ಲೂ ಬೆಳೆಯುತ್ತದೆ ಎಂದ ಮೇಲೆ ನಮ್ಮ ಪೌರುಷ ಬೆಳೆಯಬೇಡವೆ? ರಾಜಕೀಯದಲ್ಲಿ ಈ ಪ್ರಶ್ನೆ ಕೇಳಿಬರುತ್ತಿದೆ. ಧರ್ಮದಲ್ಲಿ ಇದೇ ಬಗೆಯಾದ ವಿಚಿಕಿತ್ಸೆಗಳಿವೆ. ಸಾಹಿತ್ಯ ಕಲೆಗಳು ಮಾತ್ರ ಇಂತಹ ಕೋಲಾಹಲ ಗಳಿಂದ ಅಬಾಧಿತವಾಗಿರುವುದೆಂದರೆ ಹೇಗೆ? ಹತ್ತಾರು ವಿಚಾರ ಸಂಕಟದಿಂದ, ಹತ್ತಾರು ಸಮಸ್ಯೆಗಳ ತಾಪದಿಂದ, ಪ್ರಪಂಚಹೃದಯವೆಂಬ ಭಾಂಡವು ಕುದಿಯು ತ್ತಿರಲು, ಆ ಬೇಗೆಯನ್ನು ನಾವು ಅನುಭವಿಸದೆ ಇರಬೇಕೆಂಬುದು ಹೇಗೆ? ಭಾರತ ವರ್ಷದ ಪತನಕಾಲವು ಸಂದುಹೋಯಿತು. ಅಭ್ಯುದಯಕಾಲವೀಗ ಬಂದಿದೆ. ಮಬ್ಬು ಕರಗಿದೆ. ಕರ್ತವ್ಯಪಥವು ಕಣ್ಣಿಗೆ ಗೋಚರಿಸುತ್ತಿದೆ. ಸೌಭಾಗ್ಯದ ಸುಗ್ಗಿಯ ಬರವನ್ನು ಹಾಡಿ ಸೂಚಿಸುವ ಕೋಗಿಲೆಗಳ ಧ್ವನಿ ಅಲ್ಲಲ್ಲಿ ಕೇಳಿಬರುತ್ತಿದೆ. ರಾಜಕೀಯ ರಂಗದಲ್ಲಿ ಬಹಿರಂಗವಾದ ಹೋರಾಟವು ಕಂಡುಬರುತ್ತಿರಲು, ಸಾಹಿತ್ಯ ಕಲಾರಂಗ ಗಳಲ್ಲಿ ವಿಚಾರೋಪಮರ್ದಗಳು ಒಳಗೊಳಗೆ ಆಗುತ್ತಲೇ ಇವೆ. ಉತ್ಥಾನಕಾಲವು ಬಂತೆಂದು ಸಾರಿಹೇಳುವ ಸಂದೇಶಹಾರರು ಎಲ್ಲ ಕ್ಷೇತ್ರಗಳಲ್ಲಿಯೂ ಕಾಣಿಸುತ್ತಿರು ವರು. ಕನ್ನಡದ ಸಾಂಸ್ಕೃತಿಕ ರಂಗದಲ್ಲಿ 'ಶ್ರೀ'ಯವರು ಈ ಕೆಲಸಕ್ಕೆ ತೆತ್ತಿಗರಾ ಗಿರುವರು.

ಇಂತಹ ಹೊಸತನದ ಸಂದೇಶವನ್ನು ಕನ್ನಡ ನಾಡಿನ ಉದ್ದಗಲದಲ್ಲಿ ಸಾರಿದ 'ಶ್ರೀ'ಯವರ ಸಾಧನಕ್ರಮವಾವುದು? ಎಂಬುದನ್ನು ನಿಷ್ಕರ್ಷಿಸಿದರೆ, ಅವರ ವ್ಯಕ್ತಿತ್ವದ ಸ್ವಲ್ಪ ಪರಿಚಯವಾಗಬಹುದು.

ಅವಳ ನಿರ್ಮಲ ತೇಜಂ
ತೀವಲ್ ಕಳೆಗೊಂಡು ಪಾಡಿ ಮೆಚ್ಚಿದರೊ ಕವಿಗಳ್
ಆ ವಾಣಿ ತನ್ನ ಪಾವನ
ಸೇವೆಗೆ ಕೃಪೆಯಿಂದಮೆಂದು ಕರೆವಳೊ ಎನ್ನಂ

ಮೇಲಿನ ಪದ್ಯವು ಇಂಗ್ಲಿಷ್ ಗೀತಗಳ ಮುಖಪುಟವನ್ನಲಂಕರಿಸುತ್ತದೆ. "ಬೆಳೆಯೇನೋ ಬೇಕಾದಹಾಗಿದೆ; ಕುಯ್ಯುವವರು ಕಡಮೆ" ಎನ್ನುವ ಮರುಕದ ಮಾತೂ, ಪೂರ್ವಪಶ್ಚಿಮಗಳ ಆತ್ಮವೊಂದಾಗಿ ಬೆರೆಯಬೇಕೆಂಬ ವಿಶ್ವಾಸವುಳ್ಳ ವಿದ್ಯಾರ್ಥಿವರ್ಗಕ್ಕೆ ಈ ಗ್ರಂಥವನ್ನು ಸಮರ್ಪಿಸಿರುವೆನೆಂಬ ವಾಕ್ಯವೂ ತಮ್ಮ ಕರ್ಮಾರಂಭ ಕ್ಷೇತ್ರವನ್ನವರು ಮಿತವಾಗಿರಿಸಿದ್ದರೆಂಬುದನ್ನು ಕಾಣಿಸುತ್ತವೆ. 'ಶ್ರೀ'ಯವರಲ್ಲಿ ಆತ್ಮವಿಶ್ವಾಸವು ತುಂಬ ಇದೆ. ಗಾಢಚಿಂತನೆಯ ಫಲವಾಗಿ ತಮ್ಮ ಆತ್ಮದಲ್ಲಿ ಹೊಕ್ಕ ನಂಬಿಕೆಯನ್ನವರು ಅನ್ಯರ ಮೇಲೆ ಬಲಾತ್ಕಾರದಿಂದ ಆರೋಪಿಸುವ ಸ್ವಭಾವದವರಲ್ಲವಾದುದರಿಂದ, "ಪರಪರಿವಾದಮಂ ನೆಗಳ್ದುದೇ ಜಪಂ, ಅನ್ಯಮನಃ ಪ್ರಸೂನಮಂ ಕೊರಗಿಪುದೇ ತಪಂ" ಎನ್ನುವಂತಹ ಸುಧಾರಕಾಗ್ರೇಸರರ ಪಂಥವನ್ನು ಹಿಡಿಯದೆ, ತಮ್ಮ ಅಭಿಪ್ರಾಯಗಳನ್ನು ವಿನಯದ ಭಾಷೆಯಲ್ಲಿ ಮಂಡಿಸಿ ಜನರ ಮುಂದಿಟ್ಟರು. ಕುಯ್ಯುವ ಬೆಳೆ ಸಮೃದ್ಧವಾಗಿದ್ದರೂ ಕುಯ್ಯುವವರಿಲ್ಲವಲ್ಲಾ ಎಂದು ನೊಂದರು. ಸರಸ್ವತೀದೇವಿಯ ಸೇವೆಯ ಕರೆಯನ್ನು ನಿರೀಕ್ಷಿಸಿ ಕಿವಿದೆರೆದು ನಿಂತರು. ಕರೆ ಬಂದೇಬಿಟ್ಟಿತು. ಅವರ ಇಂಗ್ಲಿಷ್ ಗೀತಗಳು ಸಾಹಿತ್ಯ ಸೇವಕರ ವಿಚಾರದಲ್ಲಿ ಅಪೂರ್ವವಾದ ಕ್ರಾಂತಿಯನ್ನೆಬ್ಬಿಸಿಬಿಟ್ಟಿತು. ಪೂರ್ವ ಪಶ್ಚಿಮಗಳ ಆತ್ಮವೊಂದಾಗಬೇಕೆಂಬ ಹಾರೈಕೆಯುಳ್ಳ ಅವರ ವಿದ್ಯಾರ್ಥಿವೃಂದದಲ್ಲಿ ಅವರ ಪ್ರಚೋದನ ಶಕ್ತಿಯ ಆದ್ಯಫಲೋದಯವಾಯಿತು. ಪೂರ್ವಸಂಪ್ರದಾಯದ ವ್ಯಾಕರಣದ ಮಡಿಯುಟ್ಟವರು ಈ ಗೀತಗಳ ಭಾಷೆ ಇಂಗ್ಲಿಷೊ? ಕನ್ನಡವೊ? ಎಂದೂ ಕೇಳಿರಬಹುದು. ರಳಕುಳ ಶುದ್ಧತೆಯನ್ನು ಕೂಡ ಪಾಲಿಸಿ "ಅಶ್ವತ್ಥಾಮನ್" ಮೊದಲಾದ ಕಾವ್ಯಗಳನ್ನು ಬರೆದವರಿಗೆ, ಅತಿ ಪರಿಶುದ್ಧವಾದ ಹಳಗನ್ನಡದಲ್ಲಿಯೇ ಇಂಗ್ಲಿಷ್ ಗೀತಗಳನ್ನು ಬರೆಯುವುದು ಅಸಾಧ್ಯವಾಗಿರಲಿಲ್ಲ. ವಿಮರ್ಶಕರಿಗೆ ಮೆಚ್ಚದುದು ಅವರ ಭಾಷೆಯಲ್ಲ. ಭಾಷೆಯಲ್ಲೇನೂ ದುರವಗಾಹತೆ ಇರುವುದಿಲ್ಲ. ಮುಚ್ಚಿರುವಂತೆ ಕಾಣುವುದು ಭಾವ. ವ್ಯಾಕರಣ ಸಂಪ್ರದಾಯವನ್ನು ಮೀರುವುದು ಸರಸ್ವತೀದ್ರೋಹವಾದರೆ, ಕನ್ನಡದ ಕವಿಕುಲ ಗುರುಗಳ ಗಣನೆಯಲ್ಲಿ ಅಗ್ರಸ್ಥಾನವನ್ನು ಪಡೆದ ಕುಮಾರವ್ಯಾಸನು ಮಹಾಪಾಪಿಯೆನ್ನಬಹುದು. 'ಶ್ರೀ'ಯವರ ಪಾಪದ ಹೊರೆ, ಕುಮಾರವ್ಯಾಸನ ಪಾಪಕ್ಕೆ ಸರಿತೂಕವಾಗಿ ಬರಲಿಲ್ಲ. ಪ್ರತಿಯೊಬ್ಬನಿಗೂ ಒಂದೊಂದು ವಿಶಿಷ್ಟ ಶೈಲಿಯಿರುತ್ತದೆ. ಅನ್ಯಸಾಹಿತ್ಯದ ನುಡಿಗಟ್ಟುಗಳೂ ಬಗೆಬೆಡಗುಗಳೂ ಭಿನ್ನವಾಗಿರುತ್ತವೆ. ಇದರ ದೆಸೆಯಿಂದ 'ಶ್ರೀ'ಗಳವರ ಇಂಗ್ಲಿಷ್ ಗೀತೆ, ಶುದ್ಧ ಕನ್ನಡಿಗರಲ್ಲಿ

ಎಂದರೆ ಆಂಗ್ಲ ಭಾಷಾ ಸಂಸ್ಕಾರವಿಲ್ಲದವರಲ್ಲಿ, ವಿರೋಧವನ್ನೆಬ್ಬಿಸಿರಬಹುದು. ನಿಷ್ಕಲ ಸ್ವರೂಪವನ್ನು ಹೊಂದಿದ ಈ ಪ್ರಾಚೀನ ಭಾವನಾ ಸ್ರೋತದಲ್ಲಿ ಹೊಸ ಭಾವನೆಗಳು ಕೆಲಗಾಲ ಹಿಮಖಂಡದಂತೆ ತೇಲುತ್ತಿರಬೇಕಾಗುತ್ತದೆ. ಹೊಸತಾದ, ಎಂದರೆ ನಮ್ಮ ಕನ್ನಡಿಗರಿಗೆ ಪರಿಚಿತವಲ್ಲದ, ಪರಕೀಯ ಸಾಹಿತ್ಯದ ಸವಿಯುಣಿಸನ್ನು, ಹೊಸ ರೀತಿಯಲ್ಲಿ ರೂಪಿಸಿದ ಭಾಷಾ ಪಾತ್ರದಲ್ಲಿಟ್ಟು 'ಶ್ರೀ'ಯವರು "ರುಚಿನೋಡಿ" ಎಂದು ಕೊಟ್ಟರು: ಕೇವಲ ಪ್ರಯೋಗಾರ್ಥವಾಗಿ ಕೊಟ್ಟರು. ಇದೇನು ಅಮೃತವೇ? ವಿಷವೇ? ಎಂಬ ಸಂದೇಹದಿಂದ ಕಂಗೆಟ್ಟವರು ದೂರನಿಂತರು. ಅಭಿಪ್ರಾಯ ಪರಿವರ್ತನಕ್ಕೆ ಹೆಚ್ಚು ಕಾಲ ಕಳೆಯಲಿಲ್ಲ. ಕಷ್ಟವಾದುದು ಭಾಷೆಯಾಗಿರಲಿಲ್ಲ—ಭಾವ! ಅದರ ಪರಿಚಯವಾದೊಡನೆ ಭಾಷೆಯ ಬಾಗಿಲು ತೆರೆದೇ ನಿಂತಿತು. ಇಂಗ್ಲಿಷ್ ಸಾಹಿತ್ಯವನ್ನು ಅಥವಾ ಗೀತಗಳನ್ನು ಕನ್ನಡಕ್ಕೆ ಪರಿವರ್ತಿಸಿದವರಲ್ಲಿ 'ಶ್ರೀ'ಯವರು ಮೊದಲಿಗರಲ್ಲ. ಆದರೆ ಕ್ರಮಬದ್ಧವಾಗಿ, ಅನಲ್ಪ ಪ್ರಮಾಣದಲ್ಲಿ, ಆಂಗ್ಲ ಕಾವ್ಯಸಾಹಿತ್ಯದ ರಸವನ್ನು ಕನ್ನಡಿಗರ ಕಿವಿಗೆ ಹಿಂಡಿ ಹೇಳಿದವರಲ್ಲಿ ಅವರಿಗೆ ಮೊದಲಿನ ಮಣೆ ದೊರೆಯಬೇಕು. ಇದರಿಂದಾದ ಫಲವಿಷ್ಟೆ: ಸಣ್ಣ ಕವಿತೆಗಳ ನಿರ್ಮಾಣವು ಬಹಳವಾಗಿ ಬೆಳೆಯಿತು; ಅವುಗಳ ವಸ್ತು ವಿಸ್ತಾರವಾಯಿತು; ಸಣ್ಣ ಕವಿತೆಗಳ ಭಾಷೆ ವಿಷಯಾನುಗುಣವಾಗಿ ಸರಳತೆಯಿಂದ ಕೂಡಿರಬೇಕೆಂಬ ಭಾವನೆ ಬಂತು: ಪ್ರಾಚೀನ ವ್ಯಾಕರಣ ನಿಯಮೋಲ್ಲಂಘನವೆಂಬುದು ಬ್ರಹ್ಮಹತ್ಯಾ ಪಾತಕವಲ್ಲ ಎಂದಾಯಿತು. ಈ ಮುಂಚೆ ಇಂಗ್ಲಿಷ್ ಗೀತಗಳನ್ನು ಬರೆದಿದ್ದವರು ಭಾಷಾ ಸಮಾಜದಿಂದ ಬಹಿಷ್ಕೃತರಾಗಿದ್ದರು. ಅವರ ಕೃತಿಗಳನ್ನು ಬಹಿರಂಗವಾಗಿ ಓದುವ ಧೈರ್ಯವುಳ್ಳವರನ್ನು ಹುಡುಕಬೇಕಾಗಿತ್ತು. ಮತ್ತದು ಸಂಪ್ರದಾಯವಾಗಿಹೋಯಿತು. ವಿದ್ಯಾಗುರುಸ್ಥಾನದಿಂದ ಅವರು ಕೊಟ್ಟ ಹೊಸ ಸಂದೇಶವನ್ನು ಸಾಧಿಸುವ ಸ್ಥಿರಸಂಕಲ್ಪದಿಂದ ಅನೇಕ ತರುಣರು ಸಾಹಿತ್ಯ ರಂಗವನ್ನು ಪ್ರವೇಶಿಸಿದರು. ಅದುವರೆಗೆ ವಿವಿಕ್ತ ಪ್ರಯತ್ನಗಳನ್ನು ಕೈಕೊಂಡು ಅಲ್ಲಲ್ಲಿ ದಣಿಯುತ್ತಿದ್ದ ಕವಿ ಲೇಖಕ ವರ್ಗವೂ ಈ ಹೊಸ ಸಂಪ್ರದಾಯವನ್ನು ಸೇರಿದುದರಿಂದ, ಈ ಮಾರ್ಗದಲ್ಲಿ ಹಜ್ಜೆಯಿಡುವವರ ಗಣ ದೊಡ್ಡದಾಗುತ್ತಾ ಬಂತು. ಇಂಗ್ಲಿಷ್ ಭಾಷೆಯ ಸಾಹಿತ್ಯ ರಸವು ಸೂರೆಯಾಯಿತು. ಶೈಲಿ, ಛಂದಸ್ಸು, ಭಾವನಾವ್ಯತಿಕರ—ಈ ಎಲ್ಲ ವಿಷಯಗಳಲ್ಲಿಯೂ ಹೊಸತಾದೊಂದು ವ್ಯವಸ್ಥೆ ನೇರ್ಪಟ್ಟು, ಒಂದು ಬಗೆಯ ಕ್ರಾಂತಿಯುಂಟಾಯಿತೆಂದರೂ ತಪ್ಪಲ್ಲ. ಬೆಳೆ ಸಮೃದ್ಧವಾಗಿದೆ; ಮಾತ್ರವಲ್ಲ, ಅದನ್ನು ಕುಯ್ಯುವ ಕೈಗಳೂ ಕಾಪಿಡುವ ಹೃದಯಗಳೂ ಉಪಯೋಗಿಸುವ ಮನಸ್ಸುಗಳೂ ಇವೆಯೆಂದು ಸಾಹಿತ್ಯಕೃಷೀವಲರಿಗೆ ಅವಗತವಾಗುವಂತಾಯಿತು.

'ಶ್ರೀ'ಯವರ ಮನಸ್ಸು ಗ್ರಂಥ ರಚನೆಯೊಂದರ ಕಡೆಗೇ ಸಾಗಿಹೋಗಿಲ್ಲ. ಇಂಗ್ಲಿಷ್ ಗೀತಗಳು: ಸ್ವತಂತ್ರವಾದ ಕೆಲವು ಭಾವಗೀತಗಳು; ಗ್ರೀಕ್ ನಾಟಕಗಳ ಭಾಷಾಂತರಗಳು ಅಥವಾ ಭಾವಾನುವಾದಗಳು; ಅನೇಕ ಗ್ರಂಥಗಳಿಗೆ ಬರೆದ ಮುನ್ನುಡಿಗಳು; ಅಧ್ಯಕ್ಷ ಭಾಷಣಗಳು— ಇಷ್ಟೇ ಅವರ ಕೃತಿಗಳು. ಗ್ರಂಥಸ್ಥವಾಗಿದ್ದು ಕನ್ನಡಿಗರ ಮನಸ್ಸನ್ನು ಸೆಳೆದ ಅವರ ಕೃತಿಗಳು ಇನ್ನೂ ಹೆಚ್ಚು

ಇರಲಾರವು. ಎದೆ ತೆರೆದು ಬರುತ್ತಿರಲು ಅದರಿಂದ ನಿಸ್ಯಂದಿಸುವ ಅಭಿಪ್ರಾಯ ಗಳನ್ನೂ ಭಾವನೆಗಳನ್ನೂ ಪ್ರಕಟೀಕರಿಸುವುದಕ್ಕೆ ಲೇಖನ ಎಂಬುದೊಂದು ಸಾಧನ ಮಾತ್ರವಲ್ಲದೆ, ಅದಕ್ಕಿಂತ ಹೆಚ್ಚಿನ ಸೋಜಿಗ ಅದರಲ್ಲಿಲ್ಲ. ಈ ಸಾಧನವನ್ನು ಅವರು ಅತಿ ಮಿತವಾಗಿ ಉಪಯೋಗಿಸಿದ್ದಾರೆ. "ನನಗೇನೋ ಅಂತಹದೊಂದು ಚಾಪಲ್ಯ ಬಂತು: ಬರೆಯುವ ತಪ್ಪನ್ನು ಮಾಡಿದೆ" ಎಂದವರು ತಮ್ಮದೊಂದು ಭಾಷಣ ದಲ್ಲಿ ಹೇಳಿದರು. ಮಿತವಾಗಿ "ತಪ್ಪು" ಮಾಡಿದರೆ ಅದರಲ್ಲಿ ಸೊಗಸಿದೆ ಎಂಬು ದಕ್ಕೆ ಅವರದೇ ದೃಷ್ಟಾಂತ. 'ಶ್ರೀ'ಯವರು ಗದ್ಯವನ್ನು ಬರೆಯಲಿ ಪದ್ಯವನ್ನು ಬರೆಯಲಿ, ಅದರಲ್ಲಿ ಒಂದು ಬಗೆಯ ಕುಣಿತೆಯನ್ನು (Rhythm) ನೋಡಬಹುದು. ವ್ಯಾಕರಣ ಸಮ್ಮತ ಭಾಷೆಯಲ್ಲಿ ಬರೆಯಲ್ಪಟ್ಟ 'ಅಶ್ವತ್ಥಾಮನ್' ಕೃತಿಯಲ್ಲಾಗಲಿ ಸಂಪ್ರದಾಯವನ್ನು ಮೀರಿ ಬರೆದ ಆಂಗ್ಲ ಗೀತಗಳಲ್ಲಾಗಲಿ ಭಾವಗಳ ಏರಿಳಿತಗಳಿಗೆ ತಕ್ಕಂತಹ ನುಡಿಗಟ್ಟಿನ ಸಡಗರವನ್ನು ಕಾಣದಿರುವುದು ದುರ್ಲಭ. ಅವರ ಜೀವನ ದಂತೆಯೇ ಅವರ ಭಾಷಾ ಶೈಲಿಯು ಧೀರೋದಾರವಾಗಿಯೂ, ಮೃದುಭಾವ ಮಂಥರಗತಿಯಾಗಿಯೂ ಇದೆ. ಭಾಷಾ ಶೈಲಿಗಳ ಬೆಳೆವಣಿಗೆಯ ಚರಿತ್ರೆಯನ್ನು ಕೊಡುವವರು ವೃತ್ತಿ, ರೀತಿ ಮೊದಲಾದ ಗಂಭೀರ ಪದಗಳಿಂದ ಭಾಷೆಯ ಓಘಗಳನ್ನು ಬಣ್ಣಿಸುತ್ತಾರೆ. ಮನಸ್ಸಿನ ಕುಣಿತಕ್ಕೆ ತಕ್ಕಂತೆ ಭಾಷೆಯು ಕುಣಿಯುತ್ತಿರಬೇಕೆಂಬ ಒಂದೇ ಒಂದು ಮಾತಿನಲ್ಲಿ ಶೈಲಿಯ ಸಕಲ ಲಕ್ಷಣಗಳನ್ನು ಹೇಳಿಬಿಡಬಹುದು. 'ಶ್ರೀ'ಯವರ ಬರೆವಣಿಗೆಯು ಎಷ್ಟು ಚಿಕ್ಕದಾಗಿರಲಿ ದೀರ್ಘವಾಗಿರಲಿ, ಕುಣಿತೆ ಎಂಬ ಸೌಂದರ್ಯರೇಖೆಯಿಂದದು ವಿರಹಿತವಾಗಿಲ್ಲ. ಭಾವನೆಗಳ ಉಕ್ಕು ಸೊಕ್ಕುಗಳಲ್ಲಿಯೂ ಒಂದು ಸಂಯಮ; ನಿಯಮೋಲ್ಲಂಘನ ದಲ್ಲಿಯೂ ಒಂದು ಅಂತರ್ನಿಯಮ. ಅವರ ಕವಿತೆ ಲೇಖನ ಭಾಷಣಗಳಲ್ಲಿ ಅನುಸ್ಯೂತವಾಗಿ ಬರುವ ಈ ಒಂದು ಗುಣವು, ಅವರನ್ನು ಸಂಪ್ರದಾಯ ಕರ್ತರ ಸಾಲಿನಲಲ್ಲದೆ ಸಂಪ್ರದಾಯ ಭಂಜಕರ ಸಾಲಿನಲ್ಲಿ ಸೇರಿಸಲು ಎಡೆಗೊಡುವುದಿಲ್ಲ. ಹೀಗೊಂದು ಸಂಪ್ರದಾಯವನ್ನು ಪ್ರಾರಂಭಿಸಬಹುದೇ? ಎಂಬ ಆಲೋಚನೆ ಯಿಂದ ಅವರು ಬರೆದರು. "ಅವಳ ತೊಡಿಗೆ ಇವಳಿಗಿಟ್ಟು" ನೋಡಲು ಬಯ ಸಿದರು. ಅಚ್ಚಗನ್ನಡಿಗರಿಗೆ ಪಾಶ್ಚಾತ್ಯ ಸಾಹಿತ್ಯದಲ್ಲಿ ಅಭಿರುಚಿಯುಂಟಾಗ ಬೇಕೆಂದು ತಮ್ಮ ಭಾಷಾಂತರಿತ ಕೃತಿಗಳನ್ನು ಪ್ರಕಟಿಸಿದರು. ಭಾಷೆಗಳಲ್ಲಿ, ಸಂಸ್ಕೃತಿಗಳಲ್ಲಿ, "ಕೊಳ್‌ಕೊಡೆ" ಯಾಗಬೇಕಾದುದು ಅವಶ್ಯವೆಂಬ ಕಾರಣದಿಂದ, ಭಾವ–ಭಾಷೆಗಳೆರಡರಲ್ಲಿಯೂ ಅತ್ಯುದಾರತೆಯ ಪಕ್ಷವನ್ನು ವಹಿಸಿದರು. 'ಶ್ರೀ' ಯವರ ಕೃತಿಗಳನ್ನು ವಿಮರ್ಶಿಸುವವರಲ್ಲಿ ಒಬ್ಬೊಬ್ಬರ ಅಭಿಪ್ರಾಯ ಒಂದೊಂದಿರ ಬಹುದು. ಯಾವ ಕೃತಿಯೇ ಆಗಿರಲಿ ಟೀಕಾಬಾಹ್ಯವಾಗಿರುವುದಿಲ್ಲ. ಆಯಾ ಕಾಲದ ಸದಭಿರುಚಿಯನ್ನು ಅವಲಂಬಿಸಿಕೊಂಡೆ ಸಾಹಿತ್ಯವು ನಿಂತಿರುವುದು; ಎಂದ ಮೇಲೆ ಸಮೂಲ ಖಂಡನ ಮಂಡನಗಳು ದೋಷವಿದೂರವಾಗಿರಲಾರವು. 'ಶ್ರೀ' ಯವರ ಕೃತಿಗಳು ಒಂದು ವಿಶಿಷ್ಟಪ್ರಕಾರವಾದ ಅಭಿರುಚಿಯನ್ನುಂಟುಮಾಡಲು ಸಾಹಿತ್ಯರಂಗಕ್ಕಿಳಿದುವುಗಳು. ಇಂಥ ಅಭಿರುಚಿಯನ್ನವು ಉದ್ರೇಕಿಸಿವೆ; ನೆಲೆ ನಿಲ್ಲಿಸಿವೆ. ,ಕಿವಿಗೆ ಕೇಳಿ ಅಭ್ಯಾಸವಾಗದೆ, ಹೃದಯಕ್ಕೆ ಆಸ್ವಾದಿಸಿ ಅಭ್ಯಾಸವಾಗದೆ,

ಯಾರೂ ಸಹೃದಯನಾಗಲಾರನು. 'ಶ್ರೀ'ಯವರು ಇಂತಹ ಸಹೃದಯ ವರ್ಗವನ್ನು ನಿರ್ಮಾಣ ಮಾಡಿರುವುದರಿಂದ. ಅಥವಾ ಮೊದಲೇ ಅಲ್ಲಲ್ಲಿ ಇದ್ದಿರಬಹುದಾಗಿದ್ದ ಸಹೃದಯರನ್ನು ಹೊರಗೆಳೆದು ಗುಂಪಾಗಿ ಕೂಡಿಸಿ, ಇಲ್ಲದವರನ್ನು ಇರುವಂತೆ ಮಾಡಿ, ಗುಂಪನ್ನು ದೊಡ್ಡದು ಮಾಡಿ, ನಡೆಯುಸುತ್ತಾ ಬಂದಿರುವುದರಿಂದ ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅವರ ಕಾವ್ಯಗಳಿಗೆ ಸಂಭಾವನಾ ಸ್ಥಾನವು ಇದ್ದೇ ಇದೆ.

ಕನ್ನಡ ನುಡಿಯನ್ನೂ ಸಂಸ್ಕೃತಿಯನ್ನೂ ಕಾಪಾಡುವುದಕ್ಕಾಗಿ ಅವರು ಹೂಡಿದ ಜಟ್ಟಿಗಾಳಗಗಳ ಕತೆಯೇ ಬೇರೆ; ಅವರ ಕಳಗಳು ಅಸಂಖ್ಯ.

ಓವೊ, ಕನ್ನಡದ ನಾಡೇ,
ಮುನ್ನೀರ್ ಮೊಟಂಗು ಕರೆನಾಡೇ,
ಮಲೆನಾಡೆ, ಪೊನಲ್‌ನಾಡೆ, ಬಯಲ ಪೊನ್‌ನಾಡೇ,
ಪಲಕಾಲಮಾನಗಲ್ದಿರ್ದೆನ್.
ಅಲ್ಲಿ ಕಣ್ಮುಚ್ಚಲೆಂದಿರ್ದೆನ್.
ಇಲ್ಲಮೆನಗಾ ಪುಣ್ಯಂ, ಓ ಚೆಲ್ವ ನಾಡೇ —

'ಶ್ರೀ'ಯವರ ಅಶ್ವತ್ಥಾಮನು ಹೀಗೆ ಪ್ರಲಾಪಿಸಿದನು. ಆತ್ಮಹತ್ಯೆ ಮಾಡಿಕೊಳ್ಳುವ ಅಶ್ವತ್ಥಾಮನನ್ನು ಶಪಿಸುವ ಕನ್ನಡದ ವಿಮರ್ಶಕರು, ಕನ್ನಡ ನಾಡಿನ ಕುರಿತಾದ ಆತನ ಭಾವೋದ್ರೇಕದ ಹಾಡಿನ ಕರುಣರಸವನ್ನು ಸವಿದು ಅಶ್ವತ್ಥಾಮನು ಸತ್ತರೇನು? ಹೀಗೆ ಸತ್ತನಲ್ಲ ಎಂದು ಸಮಾಧಾನ ಪಡೆಯದಿರಲಾರರು. "ಚೆಲ್ವಿನ ನೆಲೆ, ಕಣ್ಗಳ ಬಲೆ, ಸುಖದೊಜತೆಯ ಬನವಾಸಿ"ಯ ಹಾಡಿನ ಇಂಪು ಶ್ರವಣ ಸುಖ, ಭಾವ ಸುಖದ ಪರಮಾವಧಿಯಲ್ಲಿ ಅಶ್ವತ್ಥಾಮನನ್ನು ವೈಮರೆಯಿಸಿರಬಹುದು; ನಮ್ಮನ್ನಂತೂ ವೈಮರೆಯಿಸದೆ ಇರದು. ಇಂಗ್ಲಿಷ್–ಕನ್ನಡ, ಸಂಸ್ಕೃತ–ಕನ್ನಡ, ಹಿಂದಿ-ಕನ್ನಡ ಈ ದ್ವಂದ್ವಯುದ್ಧಗಳಲ್ಲಿ 'ಶ್ರೀ'ಯವರು ಕನ್ನಡ ಜಟ್ಟಿಗಳಾಗಿಯೇ ಕಳಕ್ಕಿಳಿದವರು; ಇಳಿಯುವುದಾಗಿ ಪಣತೊಟ್ಟವರು; ತಮ್ಮ ಇದಿರಾಳಿಗಳನ್ನು ನೆಲಕ್ಕಪ್ಪಳಿಸಿದವರು. 'ಶ್ರೀ'ಯವರ ಹೃದಯ ಭೂಮಿಯು ಅತಿ ವಿಶಾಲ; ಅದರಲ್ಲಿ ನೂರಾರು ಒರತೆಗಳು ಹರಿಯುತ್ತಲೇ ಇದ್ದರೂ, ಅವೆಲ್ಲ ಏಕವೇಣಿಯಾಗಿ ಕನ್ನಡದ ಕ್ಷೇತ್ರವನ್ನೆ ಫಲವತ್ತಾಗಿ ಮಾಡಲು ಹರಿಯುವುದರಿಂದ ಅವರ ಬಾಳೆಂಬುದೇ ಕನ್ನಡಕ್ಕಾಗಿ ಮೀಸಲಿಟ್ಟ ಬಾಳೆಂದರೆ ಅತಿಶಯವಲ್ಲ. ಇಂತಹ ಆತ್ಮವಿಶ್ವಾಸದಿಂದ ಕನ್ನಡದ ಗತ–ಆಗತ–ಆಗಾಮಿ ವೈಭವಗಳ ವರ್ಣನೆಯನ್ನು ಅವರ ಬಾಯಿಂದ ಕೇಳುವುದು ಕಿವಿಯ ಪುಣ್ಯ.

ಬಾಳ್ ಕನ್ನಡ ತಾಯ್
ಏಳ್ ಕನ್ನಡ ತಾಯ್
ಆಳ್ ಕನ್ನಡ ತಾಯ್
ಕನ್ನಡಿಗರೊಡತಿ ಓ ರಾಜೇಶ್ವರೀ

ಎಂದು ಭಕ್ತಿರಸದಿಂದ ಉಬ್ಬಿ ಕುಣಿವಾಗ ಅವರಿಗಾಗುವ ಆತ್ಮಸಮಾರಾಧನೆ ಬೇರಾವ ಸಂದರ್ಭದಲ್ಲಿಯೂ ಆಗುವುದಿಲ್ಲ ಎಂಬಂತೆ ತೋರುತ್ತದೆ.

ಕನ್ನಡದೇವಿ 'ಶ್ರೀ'ಯವರ ಲೆಕ್ಕಣಿಕೆಯನ್ನು ಮಾತ್ರವಲ್ಲ, ಜಿಹ್ವೆಯನ್ನೂ ತನ್ನ ಸೇವೆಗೆ ಕರೆದಿದ್ದಾಳೆ. ಕಾವ್ಯಕಲೆಯ ನಯನುಣುಪುಗಳನ್ನರಿತವರೂ, ಜೀವನದ ತಿರುಳೇನೆಂಬುದನ್ನು ತಿಳಿದು ಬಾಳುವವರೂ ಆದ 'ಶ್ರೀ'ಯವರು ತಮ್ಮ ಭಾಷಣ ಕಲೆಯನ್ನು ಒಂದು ಪರಿಪೂರ್ಣಾವಸ್ಥೆಗೆ ತಂದಿರುವುದು ಆಶ್ಚರ್ಯ ವಲ್ಲ. ನಮ್ಮಲ್ಲಿ ವಕ್ತೃತ್ವವನ್ನು ಕಲಾದೃಷ್ಟಿಯಿಂದ ಸಂಸ್ಕಾರಗೊಳಿಸಿದವರು ವಿರಳ. ವಿಷಯಗಳ ಸ್ವಚ್ಛಜ್ಞಾನವು ಹೃದಯವನ್ನು ಮೂದಲಿಸಬೇಕು; ಹೇಳತಕ್ಕ ವಿಷಯಗಳಿರುವುದರಿಂದ ವಾಣಿಯು ಸ್ಫೂರ್ತಿಯುಕ್ತವಾಗಿರಬೇಕು; ವಿಷಯಾನು ಗುಣವಾದ ಭಾಷೆಯು ಹೆಣೆದು ಬರಬೇಕು: ವಿಸ್ತರಿಸಿ ಹೇಳುವ, ಸಂಕೋಚಮಾಡಿ ಹೇಳುವ ಸ್ಥಾನಗಳನ್ನು ತಿಳಿಯುವುದು; ಸ್ವರಗಳ ಏರಿಳಿತಗಳಿಂದಾಗುವ ಪರಿಣಾಮ ಗಳನ್ನು ಗಮನಿಸುವುದು; ವ್ಯಂಗ್ಯ ವಕ್ರೋಕ್ತಿ ಹಾಸ್ಯೋಕ್ತಿ ಮೊದಲಾದು ವುಗಳನ್ನು ಯುಕ್ತಪ್ರಮಾಣದಲ್ಲಿ ಬೆರಸಿ ಆಡುವುದು; ಎಷ್ಟು ಗಹನ ವಿಷಯವನ್ನೂ ಸರಳವಾಗಿ ಹೇಳುವುದು; ನೀರಸವಾದುದನ್ನೂ ಸರಸವಾಗಿ ಮಾಡುವುದು; ಸಂದರ್ಭಕ್ಕೆ ಉಚಿತವಾದಷ್ಟೆ ಭಾಷಿಸುವುದು; ಕೇಳುವವರ ಮನಸ್ಸಿನಲ್ಲಿ ಎಂತೆಂತಹ ವಿಕಾರವುಂಟಾಗುತ್ತದೆ ಎಂಬುದನ್ನರಿತಿರುವುದು; ಇವೇ ಮೊದಲಾದ ಗುಣಗಳು ವಕ್ತೃವಿನಲ್ಲಿರಬೇಕಾಗುತ್ತದೆ. ಅಭ್ಯಾಸ ಬಲದಿಂದ ಈ ಗುಣಗಳನ್ನು ಸಂಪಾದಿಸು ವವರಿದ್ದಾರೆ. ಕೆಲವರಿಗೆ ಜನ್ಮಸಿದ್ಧವಾದ ಗುಣವಿದು. 'ಶ್ರೀ'ಯವರ ಮಾತು ಗಾರಿಕೆ ಎಂಬುದು ಅವರಿಗೆ ಸರಸ್ವತಿಯ ಅನುಗ್ರಹದಿಂದ ದೊರೆತ ವರ. ಅವರ ಉತ್ತಮಭಾಷಣಗಳನ್ನು ಕೇಳುವುದೇ ಒಂದು ವಿದ್ಯಾಭ್ಯಾಸ. ಅವರ ಮಾತು ಗಾರಿಕೆಯೆಂದರೆ, ಅದೊಂದು ಗಂಗಾ ಪ್ರವಾಹ: ಸ್ವಪಕ್ಷಮಂಡನ ಮಾಡುವಲ್ಲಿ ಆಗ್ರಹರಾಹಿತ್ಯ; ಪರಪಕ್ಷವನ್ನು ಖಂಡಿಸುವಲ್ಲಿ ಗುರಿತಪ್ಪದಿರುವುದು, ದಾರಿತಪ್ಪ ದಿರುವುದು; ಇವು ಅವರ ವಾಕ್ಪ್ರವಾಹದ ತೀರಗಳಾಗಿವೆ. ಅವರ ಮಾತುಗಳ ಕೊಂಕುಕೋರೆಗಳ ಬೆಡಗನ್ನೂ, ರಭಸವನ್ನೂ, ಉದ್ರೇಕವನ್ನೂ ನೋಡಬೇಕಾದಲ್ಲಿ ಅವರ ಮನಸ್ಸಿಗೆ ಒಂದಿಷ್ಟು ನೋವನ್ನುಂಟುಮಾಡಬೇಕು. ಅವರ ಹೃದಯವು ಒಂದಿಷ್ಟು ನೊಂದಿರಬೇಕು; ಭಾವವು ಉದ್ರಿಕ್ತವಾಗಿರಬೇಕು; ಅವರು ಆಡಬೇಕು: ನಾವು ಕೇಳಬೇಕು! ಕಲಾಪ್ರಿಯರ ಸ್ವಾರ್ಥವಿದು: ಆದರೂ ಇರಬೇಕಾದ ಸ್ವಾರ್ಥ.

'ಶ್ರೀ'ಯವರೆಂದರೇನು? ಯಾರೂ ಕೇಳಬೇಕಾಗಿಲ್ಲ. ಅವರೇನು ಕವಿಗಳೆ? ಪಂಡಿತರೇ? ವಾಗ್ಮಿಗಳೆ? ಗಮಕಿಗಳೆ? ಇಂತಹ ಪ್ರಶ್ನೆಗಳು ಅನವಶ್ಯ. 'ಶ್ರೀ' ಎಂಬುದೊಂದು ಸಂಕೇತಾಕ್ಷರವಾಗಿದೆ. ಆ ಅಕ್ಷರದಿಂದ ಸೂಚಿತರಾದ ವ್ಯಕ್ತಿಗಳ ಅಖಂಡಸತ್ವವೊಂದು, ಆ ಅಕ್ಷರವನ್ನು ಕೇಳಿದೊಡನೆ ನಮ್ಮ ಭಾವದಲ್ಲಿ ಪ್ರತಿಬಿಂಬಿಸುವುದು. ಅವರು ನಡೆದ ದಾರಿ, ಹೋದ ದಿಕ್ಕು, ಆಡಿದ ಮಾತು, ಹಾಡಿದ ಹಾಡು—ಎಲ್ಲ ಆ ಅಕ್ಷರದಲ್ಲಿ ಚಿತ್ರಗತವಾಗಿ ನಿಂತಿವೆ. ಉನ್ನತ ಧ್ಯೇಯ, ಉನ್ನತ ಧ್ಯಾನ, ಉನ್ನತ ದೃಷ್ಟಿ—ಇವುಗಳಿಂದ ಅವರ ಜೀವನದ ದಾರಿಯು ಹೆದ್ದಾರಿಯಾಗಿದೆ. ಅವರ ಗ್ರಂಥಗಳನ್ನು ಎತ್ತಿನೋಡೋಣ; ಅವರ ಭಾಷಣ ಗಳನ್ನು ಕೇಳೋಣ: ಅವರಲ್ಲಿ ಒಡನಾಡಿ ವ್ಯವಹರಿಸೋಣ; ಮೇಲಿನ ಮೂರು

ಗುಣಗಳು ಅವರ ಜೀವನದಲ್ಲಿ ಬೆರೆತಿರುವುವೆಂಬುದನ್ನು ನಾವು ಒಪ್ಪಿಕೊಳ್ಳ ಬೇಕಾದೀತು. 'ಶ್ರೀ'ಯವರು ಏರಿಸಿ ಹಾರಿಸಿದ ಕನ್ನಡದ ಬಾವುಟದ ಕೆಳಗೆ ದುರಾಗ್ರಹದ ಛಾಯೆಯೂ ಸುಳಿಯುವ ಹೆದರಿಕೆಯಿಲ್ಲದಿರುವುದರಿಂದ, ಅವರು ಪ್ರತಿಪಾದಿಸುವ ಕನ್ನಡ ನುಡಿಯ ಸ್ವಾತಂತ್ರ್ಯದ ಚಳವಳವು ರಾಜಕೀಯ ತಂತ್ರಜ್ಞರ ಅನುಕೂಲಸಿಂಧುವಲ್ಲ; ಧರ್ಮದ ಮೇಲ್ಮಟ್ಟವನ್ನೇರಿದ ಕರ್ತವ್ಯ ಕರ್ಮ. ಸಾಹಿತ್ಯ, ಸಂಸ್ಕೃತಿ, ಕಲೆ, ಧರ್ಮ, ಜನತೆ ಇವುಗಳೆಲ್ಲವನ್ನು ಒಳಕೊಂಡ ಸಮಗ್ರ ದೃಷ್ಟಿಯುಳ್ಳವರಾಗಿ, ಸರ್ವಸಮರ್ಪಣ ಬುದ್ಧಿಯಿಂದ, ಅನುದಿನ ಮೈಮುರಿದು ಕೆಲಸ ಮಾಡುತ್ತಿರುವ 'ಶ್ರೀ'ಯವರು

"ಬಾಳಬೆಳ್ದಿಂಗಳಲಿ ಒಲಿದು ನಲಿದವರು —
ಬೇವೊ ಬೆಲ್ಲವೊ ಬರಲಿ, ಮಲ್ಲಿಗೆಯೊ ಮುಳ್ಳೋ,
ಬಾನಬೆಳಕಿನಲಿ, ಮಾನದಳುಕಿನಲಿ,
ಚೆನ್ನುಬದುಕನು ಕುಣಿಸಿ, ಒಲಿದು ನಲಿದವರು —
ನಮ್ಮ ತಾಯಣುಗರು"—

ಎಂದು ನಾವು ಹಿಗ್ಗ ಬೇಡವೆ?

ಕಡೆಂಗೋಡ್ಲು ಶಂಕರಭಟ್ಟ

# ಶ್ರೀಕಂಠಯ್ಯನವರ ವಕ್ತೃತ್ವ

ಮನುಷ್ಯನಿಂದ ಮಾತೊ ಮಾತಿನಿಂದ ಮನುಷ್ಯನೊ ಎಂಬ ಪ್ರಶ್ನೆ ತಲೆಯೆತ್ತಿದಾಗ. ಮಾತಿನಿಂದಲೇ ಮನುಷ್ಯನೆಂದು ಹೇಳಬೇಕಾಗುವುದು. ಮಾತಿನ ಉಪಾಯವು ಮಾನವನಿಗೆ ಸಿಕ್ಕದಿದ್ದರೆ ಪ್ರಪಂಚವಿಂದು ಕತ್ತಲಲ್ಲಿರುತ್ತಿದ್ದಿತು. ಭಾವ ವಿವರಣೆಗೆ ಹೊರಟ ಮಾತು ವ್ಯವಹಾರ ನಿರ್ವಾಹಕ್ಕಿಳಿಯಿತೊ ಇಲ್ಲವೆ ವ್ಯವಹಾರಕ್ಕೆಂದು ಹೊರಟು ಭಾವ ಪ್ರಕಟನೆಯ ಶಿಖರಕ್ಕೇರಿತೊ ಖಚಿತವಾಗಿ ತಿಳಿಯದು. ಔನ್ನತ್ಯದಿಂದವನತಿಗಿಳಿಯಿತೆಂಬುದಕ್ಕಿಂತ ನಖದಿಂದ ಶಿಖಕ್ಕೇರಿತೆಂಬುದು ಹೆಚ್ಚು ಗಂಭೀರವಾಗಿದೆ. ಸತ್ಯಕ್ಕೆ ಸೌಂದರ್ಯ ಬೆರೆತರೆ ಕಲೆಯಾಗುವುದು. ಮೃತ್ತಿಕೆಗೆ ಮೆರಗು ಕೊಟ್ಟರೆ ಮೂರ್ತಿಯಾಗುವುದು; ಪೂಜೆಗೊಳ್ಳುವುದು. ಅಂತೆಯೆ ವ್ಯವಹಾರದ ಮಾತಿಗೆ ಭಾವನೆಯ ಬಣ್ಣ ಬಳಿದರೆ ವಕ್ತೃತ್ವದ ಕಲಾಮೂರ್ತಿಯಾಗಿ ಸಹೃದಯರ ಸಂತೋಷಕ್ಕೆ ಕಾರಣವಾಗುವುದು.

ವಕ್ತೃತ್ವವು ಒಂದು ಕಲೆ. ಸಂಗೀತದಂತೆ, ಸಾಹಿತ್ಯದಂತೆ, ಶಿಲ್ಪದಂತೆ ವಕ್ತೃತ್ವವೂ ಹುಟ್ಟುಗುಣ. ಶಿಕ್ಷಣವು ನಿಸರ್ಗಶಕ್ತಿಗೆ ಪುಷ್ಟಿಕೊಡುವುದೆ ವಿನಾ ಅಂತಸ್ತೇಜಸ್ಸನ್ನು ಹುಟ್ಟಿಸಲಾರದು. ಅದಕ್ಕಾಗಿಯೆ ಕಲಾನುಭವಿಗಳು ಹಲವರಿದ್ದರೂ ಕಲಾಜನಕರು ಕೆಲವರೆ. ವೈರಳ್ಯಕ್ಕಾಗಿಯೇ ಕಲಾಪುರುಷನಿಗೆ ಮನ್ನಣೆ. ವಾಗ್ಮಿಗೆ ಸಮಾಜದಲ್ಲಿ ಕವಿಗಿದ್ದಷ್ಟು, ಗಾಯಕನಿಗಿದ್ದಷ್ಟು, ಶಿಲ್ಪಾಚಾರ್ಯನಿಗಿದ್ದಷ್ಟು ಗೌರವವಿದೆ. ಏಕೆಂದರೆ ಅವರಂತೆಯೆ ಇವನು ಮನುಷ್ಯರ ಮನದ ನಾಡಿಯನ್ನು ಮಿಡಿಯಬಲ್ಲನು. ವಾಗ್ಮಿಯ ವ್ಯಾಖ್ಯಾನವು ಗಿಳಿಪಾಠಮಾಡಿದ ನಾಟಕದ ಮಾತಾದರೆ ಸಂಪ್ರದಾಯಬದ್ಧವಾದ ಕಾವ್ಯಗಳ ಶುಷ್ಕವರ್ಣನೆಗಳನ್ನು ಓದಿದಂತಾಗುವುದು. ಅದು ಕಲೆಯಾಗದೆ ತಲೆಸೂಲೆಗೆ ಕಾರಣವಾಗುವುದು. ಸಹಜತೆ ಸ್ವಾಚ್ಛಂದ್ಯವಿದ್ದು ಹೃದಯವೀಣೆಯ ತಾನಗಳು ಸಂಯಮದಿಂದ ಮಿಡಿಯುತ್ತಿದ್ದರೆ ಕಲಾದೇವಿಯ ಅವತಾರವಾಗಿ ಶ್ರೋತೃವರ್ಗಕ್ಕೆ ಸಂತೋಷವಾಗುವುದು. ಹೃದಯ ಪರಿಷ್ಕಾರವಾಗಿ ಭಾವಶುದ್ಧಿಯಾಗುವುದು. ಹಾಗಾದರೆಯೆ ವಾಗ್ಮಿ ವಾಗ್ಮಿ.

ಉತ್ತಮನಾದ ವಾಗ್ಮಿ ಉಪನ್ಯಾಸದ ಪೂರ್ವಸಿದ್ಧತೆಯನ್ನು ಮಾಡುವುದಿಲ್ಲ. ಆಶು ಭಾಷಣವೇ ಅವನ ನೈಸರ್ಗಿಕ ಗುಣವು. ಶಿಕ್ಷಣ ಸಂಸ್ಕಾರಗಳಿಂದ ಪುಷ್ಟವಾದ ಅವನ ಬುದ್ಧಿಯು ಮತ್ತು ನೈಸರ್ಗಿಕ ಪ್ರತಿಭೆಯಿಂದ ಚುರುಕಾದ ಅವನ ಭಾವನೆಗಳ ಮಥನದಿಂದ ವಾಗ್ದೇವಿ ಜನಿಸುವಳು. ಇಂಥ ಸಹಜ ಸುಂದರಿಯ ದಿವ್ಯ ದರ್ಶನವು ಆಕರ್ಷಕವಾಗುವುದು. ಕಲಾ ಸೃಷ್ಟಿಯಲ್ಲಿ ನಡೆಯಬೇಕಾದ ಪ್ರಕ್ರಿಯೆಗಳೆಲ್ಲ ಭಾಷಣಾವಸ್ಥೆಯಲ್ಲಿಯೂ ನಡೆಯುವುವು. ವಿಷಯ ವಿಭಜನೆ ಮತ್ತು ಸಮರ್ಪಕ ಪ್ರತಿಪಾದನೆಗಳು ಅಜ್ಞಾತವಾಗಿ ವಾಗ್ಮಿಯ ಚಿತ್ತದಲ್ಲಿ ನೆಯ್ದು ಸುಂದರ ಭಾಷಣದ ಸ್ವರೂಪದಲ್ಲಿ ಅವನ ಮನೋವೃತ್ತಿ ವ್ಯಕ್ತವಾಗುವುದು. ಈ ಪ್ರಕ್ರಿಯೆಗೆ ಕೊರತೆ ಬಂದರೆ ಭಾಷಣಕಾರನು ತಡವರಿಸುವನು. ಶ್ರೋತೃವರ್ಗಕ್ಕೆ ರಸವಿಚ್ಛಿತ್ತಿಯಾಗಿ ಭಾಷಣವು ಅಸ್ವಾದುವಾಗುವುದು. ಇದರ ಅನುಭವವು ನಿತ್ಯ ಜೀವನದಲ್ಲಿ

ಬೇಕಾದಷ್ಟು ದೊರೆಯುವುದು. ಘನ ಪಂಡಿತರು, ಬಹು ವೇತ್ತರು ನಾಲ್ಕು ಮಾತುಗಳನ್ನು ಸಭೆಯಲ್ಲಿ ನಿಂತು ನುಡಿಯಲು ತಡವರಿಸುವರು. ಇದಕ್ಕೆ ಕಾರಣವು ಬರಿಯ ಅವರ ಭೀರುವೃತ್ತಿಯೆನ್ನುವುದಕ್ಕಿಂತ ಕಲಾಸೃಷ್ಟಿಯ ಸಮಯಸ್ಫೂರ್ತಿ ಅವರಲ್ಲಿ ಜಾಗ್ರತವಾಗಿಲ್ಲವೆಂಬುದೆ ಹೆಚ್ಚು ಸಹಜ. ಪಂಡಿತರೆಲ್ಲ ಕವಿಗಳಲ್ಲ, ಕವಿಗಳೆಲ್ಲ ಪಂಡಿತರಲ್ಲವೆಂದಂತೆ ವಿದ್ವಾಂಸರೆಲ್ಲ ವಾಗ್ಮಿಗಳಲ್ಲ ಮತ್ತು ವಾಗ್ಮಿಗಳೆಲ್ಲ ವಿದ್ವಾಂಸರಲ್ಲವೆಂಬುದು ಸತ್ಯ. ಅಂತೆಯೆ ತಥ್ಯವಿಲ್ಲದ ತಾಳುವ ಭಾಷಣಗಳನ್ನೂ ತಥ್ಯಪೂರ್ಣ ನೀರಸ ಭಾಷಣಗಳನ್ನೂ ನಿತ್ಯ ಜೀವನದಲ್ಲಿ ನಾವು ಕೇಳುವೆವು. ಮೊದಲನೆಯವನಿಗೆ ಕ್ರಿಯಾಶಕ್ತಿಯಿದೆ; ಆದರೆ ಸಾಧನೆಯ ಬಲವಿಲ್ಲ. ಎರಡನೆಯವನಿಗೆ ಬರಿಯ ಭಾವನಾಶಕ್ತಿಯಿದೆ: ಅಭಿವ್ಯಕ್ತಿಯಿಲ್ಲ. ಇವೆರಡರ ಸಂಗಮವಾಗದಿದ್ದರೆ ಕಲೆ ಊನವಾಗುವುದು. ಪಂಡಿತ ಕವಿ ಪಾಮರ ಕವಿಗಿಂತ ಶಿಕ್ಷಣ ಸಂಸ್ಕಾರಗಳಲ್ಲಿ ಮೇಲ್ತರಗತಿಯವನಾದುದರಿಂದ ಕಲಾನಿರ್ಮಾಣದ ಅವನ ಹಂತವೂ ಉನ್ನತವಾದುದು, ಶಾಶ್ವತವಾದುದು ಮತ್ತು ಶಿಷ್ಟವಾದುದು. ಉತ್ತಮ ವಾಗ್ಮಿಯ ಭಾಷಣವು ಒಂದು ಖಂಡ ಕಾವ್ಯ. ಅದರ ಪರಿಣಾಮವು ರಸಾನುಭವ. ಕವಿ ತನ್ನ ಕಾವ್ಯವನ್ನು ಪ್ರತ್ಯಕ್ಷವಾಗಿ ಸಹೃದಯರಿಗೆ ತಲಪಿಸುವುದಿಲ್ಲ; ಲೇಖನಿಯ ಮೂಲಕ ಅದು ಅವರನ್ನು ಸೇರುವುದು. ಆದರೆ ವಾಗ್ಮಿ ಪ್ರತ್ಯಕ್ಷವಾಗಿ ಸಹೃದಯರಿದುರಿಗೆ ತಕ್ಷಣವೆ ರಸೋತ್ಪತ್ತಿಯಾಗುವಂತೆ ತನ್ನ ಮನೋಗತವನ್ನು ಸೂಚಿಸುವನು. ಕಲಾನುಭವವನ್ನು (ಕಲಾನುಭವ=Aesthetic experience) ಸಾಕಲ್ಯವಾಗಿ ಮುಟ್ಟಿಸಲು ಅವನು ಅಭಿನಯದ ಸಹಾಯವನ್ನು ತೆಗೆದುಕೊಳ್ಳುವನು. ಆದುದರಿಂದ ಭಾಷಣವು ದೃಶ್ಯಕಾವ್ಯದ ಅಂಚನ್ನು ತಾಕಿದೆ. ಭಾಷಣಮಾಡುವಾಗ ಉಪನ್ಯಾಸಕನು ಮಿತಿ ಮೀರದ ಹದಕೆಡದ ರೀತಿಯಲ್ಲಿ ತನ್ನ ಮನಸ್ಸಿನ ಭಾವವನ್ನು ಅಂಗವಿನ್ಯಾಸದಿಂದಲೂ ಸೂಚಿಸಬೇಕು. ಒಟ್ಟಾಗಿ ವಾಗ್ಮಿ ಪಂಡಿತನೂ ಭಾವಕನೂ ಕ್ರಿಯಾಶಕ್ತಿಯುಳ್ಳವನೂ ಪ್ರತ್ಯಕ್ಷವಾಗಿ ಸಹೃದಯ ಸಮೂಹಕ್ಕೆ ಕಲಾನುಭವವನ್ನು ಸಾಕಲ್ಯವಾಗಿ ಮುಟ್ಟಿಸಲು ಬೇಕಾದ ಚಾತುರ್ಯವುಳ್ಳವನೂ ಆಗಿರಬೇಕು.

ಮೇಲಿನ ಲಕ್ಷಣಗಳನ್ನು ಆಧಾರವಾಗಿಟ್ಟುಕೊಂಡು 'ಶ್ರೀ'ಯವರ ವಕ್ತೃತ್ವವನ್ನು ವಿಮರ್ಶಿಸಿದರೆ ಅವರ ಘನತೆಗೆ ತಕ್ಕ ಸೇವೆಯನ್ನು ಸಲ್ಲಿಸಿದಂತಾಗುವುದು. 'ಶ್ರೀ'ಯವರ ವಿಸ್ತಾರ ವ್ಯಾಸಂಗವೂ, ನಾನಾ ಸಾಹಿತ್ಯ ಭಾಷೆಗಳಲ್ಲಿ ವೈದುಷ್ಯವೂ ಜೀವನದ ಸಾಮಾನ್ಯ ಸಂಗತಿಗಳನ್ನು ಚುರುಕಾದ ಕಣ್ಣಿನಿಂದ ನೋಡುವ ಅವರ ತೀಕ್ಷ್ಣದರ್ಶನವೂ ಆ ದರ್ಶನದಿಂದ ಹೃದಯರಾಗಗಳು ಅರಳುವ ಕೆರಳುವ ಅವರ ಕೋಮಲ ಭಾವಕತ್ವವೂ 'ಶ್ರೀ'ಯವರನ್ನು ನಿಕಟವಾಗಿ ಬಲ್ಲವರಿಗೆ ಗೊತ್ತು. ಈಗಲೂ ವಿದ್ಯಾರ್ಥಿದಶೆಯ ಜ್ಞಾನಾರ್ಜನೆಯ ಕುತೂಹಲವು ಅವರಲ್ಲಿರುವುದನ್ನು ನೋಡಿದರೆ ಅವರ ಜ್ಞಾನ ಜಿಜ್ಞಾಸೆಯ ಆಳವೆಷ್ಟೆಂಬುದು ನಮಗೆ ತಿಳಿಯುವುದು. ಅವಿಶ್ರಾಂತ ವ್ಯಾಸಂಗದಿಂದ ಪುಷ್ಟವಾದ ಅವರ ಬುದ್ಧಿ ಹೃದಯಗಳು ಅವರಲ್ಲಿರುವ ಸಹಜ ಪ್ರತಿಭೆಗೆ ಮೆರಗುಗೊಟ್ಟಿವೆ. ಅವರಲ್ಲಿ ವಿಷಯ ಬಾಹುಲ್ಯವೆಂದರೆ— ಮಾತನಾಡಲು ನಿಂತರೆ ಗಂಟೆಗಳಾದರೂ ಕೇಳುವವರಿಗೆ ತಣಿವಿಲ್ಲ, ಹೇಳಬೇಕೆಂಬ ಅವರ ಉತ್ಸಾಹಕ್ಕೆ ಭಂಗವಿಲ್ಲ. ಅವರ ಜೀವನವು ಜ್ಞಾನಸಾಧನೆಗೆ ಮೀಸಲಾದುದರಿಂದ

ಪಾಂಡಿತ್ಯದ ದೃಷ್ಟಿಯಿಂದ 'ಶ್ರೀ'ಯವರಲ್ಲಿ ಉತ್ತಮ ವಾಗ್ಮಿಯ ಗಭೀರತೆಯಿದೆ ಎಂದಂತಾಯಿತು.

ಕಲಾ ನಿರ್ಮಾಣಕ್ಕಿರಬೇಕಾದ ದಿವ್ಯ ದರ್ಶನವೂ ಅವರಿಗಿದೆ. ಪ್ರತಿಯೊಂದು ವಸ್ತುವನ್ನು ತಮ್ಮದೇ ಆದ ಒಂದು ದೃಷ್ಟಿಯಲ್ಲಿ ನೋಡಿ ವಿಮರ್ಶಿಸುವ ಅದ್ಭುತ ಶಕ್ತಿ ನಿಸರ್ಗದತ್ತವಾಗಿದೆ. 'ಶ್ರೀ'ಯವರ ವಿಮರ್ಶನ ಚಾತುರ್ಯವನ್ನು ಅವರ ಶಿಷ್ಯವೃಂದವು, ಕನ್ನಡನಾಡಿನ ಕನ್ನಡ ಪ್ರೇಮಿಗಳು ಚೆನ್ನಾಗಿ ಬಲ್ಲರು. ಕನ್ನಡಿಗರಲ್ಲ ದವರಿಗೂ ಆಂಗ್ಲಭಾಷೆಯ ಮೂಲಕ ಅವರು ತಮ್ಮ ಈ ಪರಾಕಾಷ್ಠಶಕ್ತಿಯನ್ನು ಪ್ರಕಟಮಾಡಿದ್ದಾರೆ. "ಸಾಹಿತ್ಯದ ವಿಮರ್ಶೆ ಸಾಹಿತ್ಯ". 'ಶ್ರೀ'ಯವರ ವಿಮರ್ಶೆ ಸಾಹಿತ್ಯದ ಸುಂದರ ರೂಪದಲ್ಲಿ ಆಶು ಭಾಷಣವಾಗಿ ಬರುವುದನ್ನು ನೋಡಿ ತಲೆ ತೂಗದವರಿಲ್ಲ. 'ಶ್ರೀ'ಯವರು ಮಾತನಾಡಲು ಹೊರಟರೆ ಎಂದೂ ಪೂರ್ವ ಸಿದ್ಧತೆಯನ್ನು ಮಾಡುವುದಿಲ್ಲ. ಒಂದೇ ವಿಷಯದ ಮೇಲೆ ಹಲವು ಸಲ ಮಾತ ನಾಡಿದರೂ ಪ್ರತಿಯೊಂದರಲ್ಲಿ ಪ್ರತಿಪಾದನ ಕ್ರಮವು ಭಿನ್ನವಾಗಿದ್ದು ವಿಷಯ ವಿವರಣೆಯೂ ವಿವಿಧವಾಗಿರುತ್ತದೆ. ಪಂಪ ಇಲ್ಲವೆ ಷೇಕ್ಸಪಿಯರನನ್ನು ಕುರಿತ ಇವರ ಉಪನ್ಯಾಸಗಳು ಪುನರಾವೃತ್ತವಾದರೂ ಇವರು ಪ್ರತಿಸಲ ಹೊಸ ಬೆಳಕನ್ನು ಹೇಗೆ ನೀಡುವರೆಂಬುದನ್ನು ಸಹೃದಯರು ಬಲ್ಲರು.

'ಶ್ರೀ'ಯವರು ಮಾತನಾಡುವಾಗ ಕೃತ್ರಿಮತೆ ಕಾಣುವುದಿಲ್ಲ. ಪಾಂಡಿತ್ಯ ಪ್ರದರ್ಶನವನ್ನಾಗಲಿ, ಮಾತಿನ ಅಸ್ವಾಭಾವಿಕ ಕಾಕುವನ್ನಾಗಲಿ, ಶಬ್ದಾಡಂಬರದ ಸುರಿಮಳೆಯನ್ನಾಗಲಿ ಇವರ ಉಪನ್ಯಾಸದಲ್ಲಿ ನಾವು ನೋಡುವುದಿಲ್ಲ. ಶಬ್ದಗಳ ಸಾರ್ಥಕ ಪ್ರಯೋಗವು 'ಶ್ರೀ'ಯವರ ದ್ವಿತೀಯ ಪ್ರಕೃತಿಯಾಗಿದೆ. ಧನಿಕನಿಗೆ ಮುಂದುಗಾರಿಕೆ ಸೇರದಂತೆ 'ಶ್ರೀ'ಯವರು ಭಾಷೆಯ ದುರುಪಯೋಗಕ್ಕೆ ಅಳುಕುವರು. "ಹಿತಮಿತಮೃದುವಚನ"ವು ಅವರ ಭಾಷಣದ ತಿರುಳು. ಹೇಳಬೇಕಾದುದನ್ನು ಹೇಳುವಷ್ಟೆ ಮಾತಿನಲ್ಲಿ ಹೇಳುವರು. ಇವರ ಹೃದಯವು ಕನ್ನಡದ ಕೆಚ್ಚಿನಿಂದ ಕುಣಿಯುವುದಾದುದರಿಂದ ಕನ್ನಡ ಶಬ್ದಗಳನ್ನೆ ಹೆಚ್ಚು ಪ್ರಯೋಗಿಸಿ, ಉಪಯೋಗ ತಪ್ಪಿದ ಎಷ್ಟೋ ಶಬ್ದಗಳನ್ನು ಪುನರುಜ್ಜೀವನಗೊಳಿಸುವರು. ಅಣ್ಣನು ತಮ್ಮನಿಗೆ ಹೇಳುವಂತೆ, ಮಿತ್ರನು ಮಿತ್ರನಿಗೆ ಹೇಳುವಂತೆ, ತಂದೆ ಮಗನಿಗೆ ಹೇಳುವಂತೆ, ಗುರು ಶಿಷ್ಯನಿಗೆ ಬೋಧಿಸುವಂತೆ ಇವರು ಸಹಜವಾಗಿ ಮಾತನಾಡುವರು. ಮೇಲೆ ಹೇಳಿದಂತೆ ಇವರ ಭಾವಕತ್ವವು ಅತಿ ಸೂಕ್ಷ್ಮವಾದುದರಿಂದ ಆಡುವ ಮಾತುಗಳು ಭಾವನೆಯಲ್ಲಿ ನೆನೆದು ಹೊರ ಹೊಮ್ಮುವವು. ಇವರ ಹೃದಯವು ಎಷ್ಟು ಕೋಮಲವೋ ಅಷ್ಟೇ ಸತ್ಯಪ್ರಿಯವಾದುದರಿಂದ ಸತ್ಯವನ್ನು ನಿಷ್ಠುರವಾಗಿ ವ್ಯಕ್ತಮಾಡಲು ಹೆದರುವುದಿಲ್ಲ. ಅಂತೆಯೆ ಅಸಹನೆಯುಳ್ಳವರು ಇವರನ್ನು ದೂರಿಯೂ ದೂರುವರು. ಭಿನ್ನಾಭಿಪ್ರಾಯವುಳ್ಳವರು ಬೈಯುವರು. ಕರ್ತವ್ಯ ಪರರಿಗೆ ಹೊಗಳಿಕೆ ತೆಗಳಿಕೆಗಳ ಕಡೆಗೆ ಲಕ್ಷ್ಯವಿರಬಾರದೆಂದು ಅವರು ತಮ್ಮ ಭಾಷಣಗಳಲ್ಲಿ ಎಷ್ಟೊ ಸಲ ಹೇಳಿದ್ದಾರೆ. ಆದರೂ ಮಾನವ ಹೃದಯವಾದುದರಿಂದ ಇಲ್ಲದ ಆಪಾದನೆಗಳಿಂದ ಬಗೆ ಬೇಸತ್ತು ತೂಕ ತಪ್ಪಿದಾಗ ಮಾತನಾಡುವ ಪ್ರಸಂಗ ಬಂದರೆ ಸದಾ ಕ್ರಮವಾಗಿ ಸಾಗುವ ಇವರ ವಿಭಜನ ಚಾತುರ್ಯವು ಸ್ವಲ್ಪ

ವ್ಯತ್ಯಸ್ತವಾಗುವುದು. ನೊಂದ ನುಡಿಗಳು ಬಾಯಿಂದ ಹೊರಡುವಾಗ ಕೆಂಡದ
ಕಾವನ್ನು ಶ್ರೋತೃವರ್ಗದ ಹೃದಯಕ್ಕೆ ಮುಟ್ಟಿಸುವುವು. 'ಶ್ರೀ'ಯವರ ಮಾತು
ಗಾರಿಕೆಯಲ್ಲಿ ಮನಮುರಿಯದ ಶುದ್ಧ ಹಾಸ್ಯವು ಬೇಕಾದಷ್ಟಿದೆ. ಅವರ ಚಿತ್ತವೃತ್ತಿ
ಯಂತೆ ಅದು ಆಳವಾಗಿಯೆ ಇದೆ. ಆದರೆ ಮನಸ್ಸಿನ ಕೊರಗನ್ನು ಸೂಚಿಸುವಾಗ
ಮಾತ್ರ ಇವರ ವಕ್ತೃತ್ವವು ಭಾವ ಪ್ರಧಾನವಾಗಿ ಕಾವ್ಯದ ಕಾವನ್ನು ತಾಳುವುದು.
'ಶ್ರೀ'ಯವರಿಗೆ ಕನ್ನಡಕ್ಕಾಗಿ ಇರುವ ಕಳವಳವು ಅವರ ಪ್ರತಿಯೊಂದು ಉಪನ್ಯಾಸ
ದಲ್ಲಿ ಸ್ಫುಟವಾಗಿ ತೋರಿಬರುವುದು. ಇವರು ಮಾತನಾಡುವಾಗ ಹೆಚ್ಚಿನ
ಅಭಿನಯವನ್ನು ಮಾಡದಿದ್ದರೂ, ಶಬ್ದಗಳು ಅರ್ಥಭರಿತವಾಗುವಂತೆಯೂ,
ಭಾವಪೂರ್ಣವಾಗುವಂತೆಯೂ ಇವರು ಉಚ್ಚರಿಸುವರು. ಇವರ ಅದ್ಭುತ ಮೇಧಾ
ಶಕ್ತಿಯೆಂದರೆ ಎಷ್ಟೋ ಪದ್ಯಗಳನ್ನು ಅಖಂಡವಾಗಿ ಉದ್ಧರಿಸುವರು. ಗಹನ
ವಿಷಯಗಳನ್ನು ತಿಳಿಮಾತಿನಲ್ಲಿ ತಿಳಿಸುವರು.

'ಶ್ರೀ' ಯವರು ಬರಿಯ ಸಾಹಿತ್ಯದ ವಿಷಯಗಳನ್ನು ಮಾತ್ರ ಕುರಿತು ಮಾತ
ನಾಡುವವರಲ್ಲ. ಸಾಮಾಜಿಕ ಪ್ರಶ್ನೆಗಳೂ ಇವರ ಹೃದಯದಲ್ಲಿ ಕುದಿಯು
ತ್ತಿರುವುವು. ಆ ಪ್ರಶ್ನೆಗಳನ್ನು ಬಿಡಿಸಲೂ ಇವರು ಪ್ರಯತ್ನಪಡುವರು. ರಾಜಕೀಯ
ರಣಾಂಗಣದಲ್ಲಿವರು ಭಾಗವಹಿಸಲು ಮನಸ್ಸುಮಾಡದ್ದರಿಂದಲೋ ಅಥವಾ
ಅವಕಾಶ ಸಿಕ್ಕದಿದ್ದುದರಿಂದಲೊ ಏನೊ ಇವರು ರಾಜಕೀಯ ರಂಗಕ್ಕಿಳಿಯಲಿಲ್ಲ.
ಇಲ್ಲವಾದರೆ ತಮ್ಮ ಅದ್ಭುತ ವಕ್ತೃತ್ವದಿಂದ ಇವರು ಸಾವಿರಾರು ಜನಗಳನ್ನು
ಸೆಳೆದೊಯ್ಯಬಹುದಾಗಿತ್ತು—ಗೋಖಲೆ ಮುಂತಾದ ನೇತೃಗಳ ಸ್ಥಾನವನ್ನು ಪಡೆಯ
ಬಹುದಾಗಿತ್ತು. ಇವರು ಉದ್ಯೋಗದಿಂದ ಸಾಹಿತ್ಯ ಸೇವೆಯಲ್ಲಿ ಮಗ್ನರಾದುದ
ರಿಂದ ವಿಶೇಷವಾಗಿ ಆ ವಿಷಯಗಳನ್ನು ಕುರಿತೇ ಮಾತನಾಡುವರು. ಸಾಹಿತ್ಯ
ಪರಿಷತ್ತಿನ ಉಪಾಧ್ಯಕ್ಷಸ್ಥಾನವನ್ನಂಗೀಕರಿಸಿದ ಮೇಲೆ ಇವರ ವ್ಯಾಖ್ಯಾನರಂಗವು
ವಿಸ್ತಾರವಾಗಿದೆ. ವಿದ್ಯಾಶಾಲೆಯ ಉಪನ್ಯಾಸ ಮಂದಿರಕ್ಕೆ ಮೀಸಲಾದ ಇವರ
ಉಪನ್ಯಾಸಗಳು ಕನ್ನಡ ನಾಡ ಮೂಲೆ ಮೂಲೆಯನ್ನು ವ್ಯಾಪಿಸಿವೆ. ಪಂಡಿತ
ವರ್ಗಕ್ಕೆ ಉದ್ದಿಷ್ಟವಾದ ಇವರ ಭಾಷಣಗಳು ಪಾಮರ ಹೃದಯರಂಜನೆಗೂ ಕಾರಣ
ವಾಗಿವೆ. ಸಾಹಿತ್ಯ ಪ್ರಗತಿಯ ಪ್ರಚೋದಕಗಳಲ್ಲದೆ ಸಂಸ್ಕೃತಿಯ ಏಳ್ಗೆಯನ್ನೂ
ದಿಗ್ದರ್ಶಿಸುತ್ತ ನಡೆದಿವೆ. ಸಾಹಿತ್ಯದಿಂದ ಸಮಾಜಕ್ಕಿಳಿದು ರಾಜಕಾರಣದ ಅಂಚನ್ನು
ಮುಟ್ಟುತ್ತಿರುವ ಇವರ ಉಪನ್ಯಾಸಗಳು ಮುಂದೆ ಪ್ರತ್ಯಕ್ಷ ರಾಜಕಾರಣವನ್ನು
ಪ್ರವೇಶಿಸಿದರೂ ಪ್ರವೇಶಿಸಬಹುದು. ಕಲ್ಪನೆ ಕಾರ್ಯಕ್ಕಿಳಿದು ಸಾಹಿತ್ಯ
ಪಟುಗಳು ರಾಜಕಾರಣ ಪಟುಗಳಾಗಲೂ ಬಹುದು. ಹಾಗಾದರೆ 'ಶ್ರೀ'ಯವರ
ವಕ್ತೃತ್ವದ ಪ್ರಾಂತಿಕ ಕೀರ್ತಿ ರಾಷ್ಟ್ರೀಯವಾಗಿ ಹೆಚ್ಚು ವ್ಯಾಪಿಸಲೂ ಬಹುದು.

'ಶ್ರೀ'ಯವರು ಸವ್ಯಸಾಚಿಗಳು. ಇದುವರೆಗೆ ಇವರ ಕನ್ನಡ ಉಪನ್ಯಾಸ
ಗಳನ್ನು ಕುರಿತು ವಿಮರ್ಶಿಸಿಯಾಯಿತು. ಇವರು ಆಂಗ್ಲ ಭಾಷೆಯ ಮಹೋಪಾ
ಧ್ಯಾಯರು. ಆಂಗ್ಲ ಸಾಹಿತ್ಯವು ಇವರ ಮೆಚ್ಚಿಕೆ ಪಡೆದು ಇವರ ಹೃದಯದಲ್ಲಿ
ಕನ್ನಡಕ್ಕಿದ್ದ ಸ್ಥಾನವನ್ನೇ ಪಡೆದಿದೆ. ಆಂಗ್ಲ ಭಾಷೆ ಮಾತೃಭಾಷೆಯಲ್ಲದಿದ್ದರೂ
ಅದರಲ್ಲಿ ಅಪ್ರತಿಮ ಪಾಂಡಿತ್ಯವನ್ನು ಸಂಪಾದಿಸಿ ಅದರಲ್ಲಿ ಅಧಿಕಾರವನ್ನು ಪಡೆದುದು

ಇವರು ಎಂಥ ಮೇಧಾವಿಗಳೆಂಬುವನ್ನು ಸೂಚಿಸುವುದು. ಇದಕ್ಕಿಂತ ಹೆಚ್ಚಾಗಿ
ಆ ಭಾಷೆಯುಳ್ಳವರು ಕನ್ನಡದಷ್ಟೇ ಸುಲಭವಾಗಿ ಮಾತನಾಡುವರು. ಇದು ಪ್ರಕೃತ
ವಾದುದು. ಮಾತೃಭಾಷೆ ಚಿಕ್ಕಂದಿನಿಂದ ರೂಢಿಯಾಗಿ ಅದು ಸುಷುಮ್ನಾಗತ
ವಾಗುವುದು. ಅಭ್ಯಾಸಬಲದಿಂದ ಮನುಷ್ಯನು ಮಾತನಾಡುವಾಗ ಜಾಗ್ರತನಾಗಿ
ಯೋಚಿಸಿ ಮಾತನಾಡುವ ಬದಲು ಸಹಜವಾಗಿ ತನ್ನಷ್ಟಕ್ಕೆ ತಾನೆ ಮಾತನಾಡುವನು.
ಆ ಭಾಷೆಯ ಶಬ್ದಸರಣಿ, ಅರ್ಥಸರಣಿಗಳು ಅವನ ಒಳಮನಸ್ಸಿನಲ್ಲಿ ಸ್ಥಳ
ಪಡೆದುದರಿಂದ ಮನುಷ್ಯನು ಮಾತನಾಡುವಾಗ ತಪ್ಪುಮಾಡುವುದಿಲ್ಲ. ಆದರೆ
ಅನ್ಯಭಾಷೆಗಳನ್ನು ನಾವು ಎಷ್ಟು ಓದಿದರೂ ಅವುಗಳ ಒಳಜೀವವನ್ನು ಗುರುತಿಸುವುದು
ಅಸಾಧ್ಯವಾದುದು. ಅದರಲ್ಲೂ ಇಂಗ್ಲಿಷ್ ಭಾಷೆಯಂಥ ಭಾಷೆಯನ್ನು ಆ ಭಾಷೆಯೇ
ಮಾತೃಭಾಷೆಯಾಗುಳ್ಳ ಜನರು ಮಾತಾಡುವಷ್ಟು ಸುಲಭವಾಗಿ ಮಾತನಾಡುವದು
ಬಹಳ ಕಷ್ಟ. ಇಂಗ್ಲಿಷ್ ಭಾಷೆ 'ಶ್ರೀ'ಯವರ ಚಿತ್ತಗತವಾಗಿದೆ. ಅದರ ಸರಣಿ
ಮರ್ಯಾದೆಗಳ ತಿರುಳನ್ನಿವರು ಚೆನ್ನಾಗಿ ಅರಿತಿದ್ದಾರೆ. ಇವರು ಮಾತನಾಡುವಾಗ
ಶಬ್ದಕ್ಕಾಗಲಿ, ಸರಣಿಗಾಗಲಿ ಕ್ಲೇಶಪಡುವುದಿಲ್ಲ. ಪರಭಾಷೆಯೆಂಬ ಹೆದರಿಕೆಯಿಂದ
ಮೈ ಬಿಗಿಹಿಡಿದು ಮಾತನಾಡುವುದಿಲ್ಲ. ಮಾತೃಭಾಷೆಯಾದ ಕನ್ನಡದಂತೆ ನಿರಾಯಾಸ
ವಾಗಿ ಅವ್ಯಾಹತ ಭಾಷಣಗಳನ್ನು ಮಾಡುವರು. ಹೀಗಾಗಿ ಸಹಜಾಭಿವ್ಯಕ್ತಿಗೆ
ವಿಚ್ಛಿತ್ತಿಯುಂಟಾಗುವುದಿಲ್ಲ. ವಿಚಾರ ವಿಭಜನೆಯ ಸಂಗಡ ವಾಕ್ಯಗಳು ಸುಲಭವಾಗಿ
ನೈಸರ್ಗಿಕವಾಗಿ ಉಂಟಾಗುವುವು. ಭಾರತೀಯರಂತೂ ಹೋಗಲಿ ಆಂಗ್ಲರು ಸಹ
ಬೆಟ್ಟುಕಚ್ಚುವಂತೆ ಇವರು ಮಾತನಾಡುವರು. ಒಂದು ಸಲ ಉಸ್ಮಾನಿಯಾ
ವಿಶ್ವವಿದ್ಯಾನಿಲಯದ ಉಪನ್ಯಾಸ ಮಂದಿರದಲ್ಲಿ ಷೇಕ್ಸಪಿಯರ್ ಕವಿಯ ಮೇಲೆ
ಇವರು ಮಾತನಾಡಿದಾಗ ಅಲ್ಲಿಯ ಆಂಗ್ಲ ಪ್ರೊಫೆಸರೊಬ್ಬರು "ಒಬ್ಬ
ಭಾರತೀಯನು ಆಂಗ್ಲ ಕವಿಯ ಮೇಲೆ ಇಷ್ಟು ಚೆನ್ನಾಗಿ ಮಾತಾಡಬಲ್ಲನೆಂದು
ನನಗೆನಿಸಿರಲಿಲ್ಲ" ಎಂದು ಉಪನ್ಯಾಸ ಮುಗಿದ ಮೇಲೆ ಹೇಳಿದರು.

ಒಟ್ಟಿನಮೇಲೆ 'ಶ್ರೀ'ಯವರ ವಾಣಿ ರಸವಾಣಿ, ಅವರ ಹೃದಯ ಕವಿ
ಹೃದಯ ಮತ್ತು ಅವರ ಬುದ್ಧಿ ತೈಲ ಬುದ್ಧಿ. ಇವುಗಳ ಮೇಲೆ ಅವಿಶ್ರಾಂತ
ಸಾಧನೆ. ಈ ಮೂರರ ಸಂಗಮದಿಂದ ಹೊರಟ ಅವರ ವಾಗ್ಗಂಗೆ ನಿರ್ಮಲ
ವಾಗಿಯೂ, ಗಂಭೀರವಾಗಿಯೂ, ಮನೋಹರವಾಗಿಯೂ ಹರಿದು ಬಾಯಾರಿ
ಬಂದವರ ತೃಷೆಯನ್ನು, ಆರ್ತರಾಗಿ ಬಂದವರ ಪಾಪವನ್ನು ಓಡಿಸಿ ಹೃದಯ
ಪಾವಿತ್ರ್ಯವನ್ನು ಕಾಯ್ದು ಸಂತೋಷವನ್ನುಂಟುಮಾಡುವಳು. ಕನ್ನಡ ಮಾತಾಳಿ
ಗಳಲ್ಲಿ ಇವರ ಬಾವುಟವು ಉನ್ನತವಾದುದು, ಅಪ್ರತಿಮವಾದುದು. 'ಶ್ರೀ'ಯವರ
ವೈದುಷ್ಯದಿಂದ ಕನ್ನಡಕ್ಕೆಷ್ಟು ಕೀರ್ತಿ ಬಂದಿದೆಯೋ ಅವರ ವಕ್ತೃತ್ವದಿಂದಲೂ
ಅಷ್ಟೇ ಬಂದಿದೆ. ವಿದ್ವತ್ತಿಗೆ ವಕ್ತೃತ್ವವು ಬಣ್ಣ ಕೊಟ್ಟದೆಯೆಂದರೆ ಅತಿಶಯೋಕ್ತಿ
ಯಾಗದು. ರಾಯಚೂರ ಕರ್ನಾಟಕ ತರುಣ ಸಂಘದವರು ತಮ್ಮ ಬಿನ್ನವತ್ತಳೆ
ಯಲ್ಲಿ "ವಕ್ತೃತ್ವದ ವಾಣಿ ತಾವು" ಎಂದು ಇವರನ್ನು ಸಂಬೋಧಿಸಿದುದು
ಯಥಾರ್ಥವಾದುದು. 'ಶ್ರೀ'ಯವರ ಜ್ಞಾನ ಭಾಂಡಾರದ ಬೀಗದಕೈ ಅವರ
ವಾಣಿ. "ಪಂಪನು ಕನ್ನಡ ಪದಗಳನ್ನು ಭೂರಿ ಎರಚಿದ್ದಾನೆ" ಎಂದು ಅವರು

ಹೇಳುವುದುಂಟು. ಈ ವಾಕ್ಯವನ್ನೇ ನಾವು ಅವರ ಉಪನ್ಯಾಸಕ್ಕೆ ಅನ್ವಯಿಸಬಹುದು. ಒಂದೇ ಮಾತಿನಲ್ಲಿ ಹೇಳಬೇಕಾದರೆ ಕನ್ನಡ ಭಾಷೆಯ ಸಂಪೂರ್ಣಸತ್ವವನ್ನು ತಿಳಿದವರೆಂದರೆ 'ಶ್ರೀ'ಯವರೊಬ್ಬರೆ. ಕನ್ನಡ ಪದಗಳು ಕಿಡಿಯಾಗಿ ಬಂದು ಕೇಳುವವರಲ್ಲಿ ಕೆಚ್ಚನ್ನುಂಟುಮಾಡುವುವೆಂಬುದು ಇವರ ಉಪನ್ಯಾಸವನ್ನು ಕೇಳಿದವರಿಗೆ ಚೆನ್ನಾಗಿ ಗೊತ್ತಿದೆ. ಇವರ ಮಾತಿನಲ್ಲಿ ಅರ್ಥವಿದೆ, ಪ್ರತಿಭೆಯುಂಟು, ಒಂದು ಪರಿಣಾಮವಿದೆ. ಕೇಳಿ ತಲೆ ಜಾಡಿಸದ ತಲೆ ತೂಗುವಂಥುವು ಇವರ ಉಪನ್ಯಾಸಗಳು. ಇವರು ಕಾಲಹರಣಕ್ಕೆ ಮಾತನಾಡುವುದಿಲ್ಲ. ತಮ್ಮದೊಂದು ವಿಶಿಷ್ಟ ಸಂದೇಶವನ್ನು ಜನರಿಗೆ ತಿಳಿಯ ಹೇಳಲು ಮಾತನಾಡುವರು. ದೇವರು ಬಾಯಿಕೊಟ್ಟಿದ್ದಾನೆಂದು ಮಾತಾಡುವವರು ಕೆಲವರು. ಆದರೆ 'ಶ್ರೀ'ಯವರು ಆ ವರ್ಗಕ್ಕೆ ಸೇರದೆ ದೇವರು ಮತಿ ಕೊಟ್ಟಿದ್ದಾನೆ, ಅದರಿಂದ ಕನ್ನಡ ತಾಯಿಯ ಸೇವೆಯಾಗಲಿ ಎಂಬ ಸೇವಾ ಬುದ್ಧಿಯಿಂದ ಮಾತನಾಡುವರು. ಅಂತೆಯೆ ಅವರ ಮಾತಿನಲ್ಲಿ ಓಜಸ್ಸಿದೆ, ತೇಜಸ್ಸಿದೆ, ತಿರುಳಿದೆ. ಕನ್ನಡದಿಂದ ಇವರಿಗಿರುವ ಕೀರ್ತಿಗಿಂತ ಹೆಚ್ಚಾಗಿ ಕನ್ನಡಕ್ಕೇ ಇವರಿಂದ ಕೀರ್ತಿಯಿದೆ. 'ಶ್ರೀ'ಯವರ ವಾಗ್ಗಂಗೆ ನಿರಂತರವಾಗಿ ಹರಿದು ಕನ್ನಡ ಭಕ್ತರನ್ನು ಪವಿತ್ರರನ್ನು ಮಾಡುತ್ತಲೆ ಇರಲೆಂದು ಪ್ರತಿಯೊಬ್ಬ ಕನ್ನಡಿಗನು ಹಾರೈಸಬೇಕು; ಹಾರೈಸುತ್ತಿರುವನು.

**ಮಾನ್ವಿ ನರಸಿಂಗರಾವ್**

# ಶ್ರೀಕಂಠಯ್ಯನವರ ಕಾರ್ಯರಂಗ

'ಶ್ರೀ'ಯವರನ್ನು ಇಂದಿನ ಕನ್ನಡದ ಕಣ್ವನೆಂದು ಶ್ರೀನಿವಾಸರು ಕರೆದರು. ಇಂದಿನ ಕನ್ನಡದ ಬೆಳವಣಿಗೆಗೆ ಸಹಾಯಕವಾಗುವ ಅನೇಕ ಕೆಲಸಗಳು 'ಓನಾಮಾ' ಕಲಿಯುವ ಎಳೆಯರ ಪಾಠದಂತೆ 'ಶ್ರೀ'ಯವರನ್ನು ಹಿಡಿದೇ ಪ್ರಾರಂಭವಾದ ವೆಂದು ಹೇಳಬೇಕಾಗುತ್ತದೆ. ಅವಳ ತೊಡಿಗೆಯನ್ನು ಇವಳಿಗಿಟ್ಟು ನೋಡ ಬಯಸಿ ಕನ್ನಡದ ಇಂದಿನ ಛಂದಸ್ಸಿಗೂ ಭಾವನೆಗೂ ಲೋಕಮಾನ್ಯವಾಗುವ ಮೂರ್ತಸ್ವರೂಪವನ್ನು ಅನುವಾದಗಳ ಮೂಲಕ ಯಾರು ಮೊದಲು ಕಲ್ಪಿಸಿ ಕೊಟ್ಟರು? 'ಶ್ರೀ'ಯವರು. ನಾಟಕಗಳಿಲ್ಲವೆಂದು ಜನರು ತಿಳಿದ ಹಳಗನ್ನಡದಲ್ಲಿ 'ಗದಾಯುದ್ಧ ನಾಟಕ'ವನ್ನು ತೋರಿಸಿಕೊಟ್ಟರಾರು? 'ಶ್ರೀ'ಯವರು. ಗ್ರೀಕ ಬಗೆಯ ಆವಿದ್ಧಪ್ರಯೋಗವನ್ನು ಅವರು 'ಅಶ್ವತ್ಥಾಮ' ಹಾಗು 'ಪಾರಸಿಕ'ರಲ್ಲಿ ಬಿಂಬಿಸಿ ತೋರಿಸಿದರು. ಶೈಲಿಯನ್ನು ಕುರಿತು ಇಂದು ನಡೆದ ಅನೇಕ ಪ್ರಯೋಗ ಗಳಲ್ಲಿ ಭಾವಗೀತಗಳ ಸುಕುಮಾರ ಶೈಲಿ, ಉಪನ್ಯಾಸ–ಪ್ರಬಂಧಗಳಲ್ಲಿಯ ಹೃದಯ ಸ್ಪರ್ಶಿ ಶೈಲಿ, 'ಅಶ್ವತ್ಥಾಮ' ಮುಂತಾದವುಗಳಲ್ಲಿಯ ಹಳಗನ್ನಡ ಶೈಲಿ– ಇವೆಲ್ಲ ವನ್ನೂ ಇಂದಿನ ಕನ್ನಡಕ್ಕೆ ಕೊಟ್ಟುದಲ್ಲದೆ, ಶೈಲಿಯಂತೆ ಮನುಷ್ಯನೆಂಬ ಮಾತನ್ನೂ ತಮ್ಮ ಉಭಯ ಭಾಷಾ ವಿಶಾರದತೆಯಿಂದ 'ಶ್ರೀ'ಯವರು ತೋರಿಸಿಕೊಟ್ಟರು.

ವಿದ್ಯಾರ್ಥಿಗಳ ಗುಂಪನ್ನು ಕನ್ನಡದ ಸ್ವಯಂದಳವಾಗಿ ಮಾಡಿ ಇಂದಿನ ಅನೇಕ ಪ್ರಸಿದ್ಧ ಸಾಹಿತಿಗಳನ್ನು ಹುರಿಗೊಳಿಸಿದ ಶ್ರೇಯಸ್ಸು 'ಶ್ರೀ'ಯವರಿಗೆ ಸಲ್ಲುವದೆಂಬ ಮಾತನ್ನು 'ಕಿರಿಯ ಕಾಣಿಕೆ' ಹಾಗು 'ತಳಿರ'ನ್ನು ನೋಡಿದವರು ಸಹಜವಾಗಿ ಒಪ್ಪುವರು. ಇಂದು ಮೈಸೂರು ಕರ್ನಾಟಕದಲ್ಲಿ ಶ್ಲಾಘ್ಯವಾದ ಸಾಹಿತ್ಯವನ್ನು ನಿರ್ಮಿಸುತ್ತಿರುವ ತರುಣರನೇಕರು 'ಶ್ರೀ'ಯವರು ಹಿಡಿದ ಆರತಿ ಯಲ್ಲಿಯೇ ತಮ್ಮ 'ನೀಲಾಂಜನ'ಗಳನ್ನೂ ಹಚ್ಚಿಕೊಂಡರು. ಸಾಹಿತ್ಯವನ್ನು ನಿರ್ಮಿಸುವದಕ್ಕಿಂತ ಈ ರೀತಿಯಾಗಿ ಸಾಹಿತ್ಯವನ್ನು 'ಸ್ಫೂರ್ತಿಗೊಳಿಸು'ವ ಕಾರ್ಯವು ಮಹತ್ತರವಾದುದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಮೈಸೂರು ವಿಶ್ವವಿದ್ಯಾಲಯದಲ್ಲಿ ಕನ್ನಡಕ್ಕಾಗಿ ವಿಶ್ವಪ್ರಯತ್ನಮಾಡಿ ಕನ್ನಡದ ಕೈಪಿಡಿಗಳನ್ನೂ ಕಾವ್ಯಸಂಗ್ರಹಗಳನ್ನೂ ಪ್ರಸಿದ್ಧಿಗೊಳಿಸುವ ಕೆಲಸವನ್ನು ಪ್ರಾರಂಭಿ ಸಿದ ಶ್ರೇಯಸ್ಸು ಎಷ್ಟೋ ಪಾಲು 'ಶ್ರೀ'ಯವರಿಗೆ ಸಲ್ಲುವದು. ಪ್ರಾಥಮಿಕ ಪುಸ್ತಕಗಳನ್ನು ಹಿಡಿದುಕೊಂಡು ಕನ್ನಡದ ಶಬ್ದಕೋಶದ ವಿಸ್ತಾರ ಕಾರ್ಯದ ವರೆಗೆ 'ಶ್ರೀ'ಯವರ ಕೈಚಳಕವು ನಮಗೆ ಕಂಡುಬರುವದು ಆಶ್ಚರ್ಯವಲ್ಲ. ಅದು ಅವರು ಅನೇಕ ವರ್ಷಗಳವರೆಗೆ ಮಾಡಿದ ತಪಸ್ಸಿನ ಫಲವಾಗಿದೆ. ಕನ್ನಡ ಶಬ್ದಕೋಶವು ಕರ್ನಾಟಕದ ಏಕೀಕರಣವಾಗುವದಕ್ಕಿಂತ ಒಂದು ವರ್ಷ ಮುಂಚಿತ ವಾಗಿ ಮಾತ್ರ ಮುಗಿಯಲೊಲ್ಲದೇಕೆ,– ಅದಕ್ಕೆ ಇಂದಿನ ಪರಿಸ್ಥಿತಿಯು ಕಾರಣ ವಾಗಿರಬಹುದು; ಆದರೆ ಈ ಕೆಲಸಗಳನ್ನೆಲ್ಲ ಕೈಕೊಳ್ಳಲು ಬೇಕಾದ ದೂರ ದೃಷ್ಟಿಯೂ ಎದೆಗಾರಿಕೆಯೂ ಅಷ್ಟಿಷ್ಟೆಂದಲ್ಲ.

ಇದಕ್ಕೂ ಒಂದು ಹೆಜ್ಜೆ ಮುಂದೆ ಹೋಗಿ ಈಗ ಹತ್ತು–ಹನ್ನೆರಡು ವರ್ಷಗಳಿಂದ 'ಶ್ರೀ'ಯವರು ಕರ್ನಾಟಕದಲ್ಲೆಲ್ಲ ಸಂಚರಿಸಿದ್ದಾರೆ. ಅವರ ಉಪನ್ಯಾಸಗಳ ಸ್ವಾರಸ್ಯವನ್ನು ಸವಿಯದ ಕುತೂಹಲಿಗಳು ಇಂದು ಕನ್ನಡ ನಾಡಿನ ಯಾವ ಮೂಲೆಯಲ್ಲಿಯೂ ನಮ್ಮ ಕಣ್ಣಿಗೆ ಬೀಳರು. ಕಲುಬುರ್ಗಿಯ ಸಾಹಿತ್ಯ ಸಮ್ಮೇಲನದಲ್ಲಿ ಅಧ್ಯಕ್ಷರಾಗಿ ಅವರು ಸಾಂಗಗೊಳಿಸಿದ ತಮ್ಮ ಉಪನ್ಯಾಸಮಾಲೆಯ ದುರ್ಗಾಷ್ಟಮಿ. ಬೆಳಗಾವಿಯ ಕವಿ ಸಮ್ಮೇಲನಕ್ಕೆ ಅಧ್ಯಕ್ಷರಾಗಿ ಅವರು ಪೂರ್ಣಗೊಳಿಸಿದ ವಿಜಯದಶಮಿ,–ಇವನ್ನು ನಾವು ಮರೆಯುವದು ಕಷ್ಟ. ಇತ್ತೀಚೆಗೆ ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿದ್ದುಕೊಂಡು ಹಿಂದಿನವರ ಪರಂಪರೆಯನ್ನು ಅವ್ಯಾಹತವಾಗಿ ಮುಂದೆ ಸಾಗಿಸಿ 'ಶ್ರೀ'ಯವರು ಆ ಕಾರ್ಯಕ್ಕೆ ತಮ್ಮ ತನು-ಮನ-ಧನಗಳನ್ನು ಧಾರೆಯಾಗಿ ಎರೆದಿದ್ದಾರೆ. ಅನೇಕ ಕರ್ತೃತ್ವಶಾಲಿಗಳ ಸಹಕಾರವನ್ನು ಸಂಪಾದಿಸಿ ಸಾಹಿತ್ಯ ಪರೀಕ್ಷೆ, ಲಿಪಿ ಸಂಸ್ಕರಣ, ಸಂಘಗಳ ಸಮ್ಮೇಲನ, 'ಕನ್ನಡ ನುಡಿ'ಯ ಪ್ರಕಾಶನ ಮೊದಲಾದ ಕಾರ್ಯಗಳಲ್ಲಿ ಅವರು ತಮ್ಮ ಪ್ರತಿಭೆ–ವರ್ಚಸ್ಸನ್ನೆಲ್ಲ ವಿನಿಯೋಗಿಸುತ್ತಿದ್ದಾರೆ. ರಾಜ– ಮಾಂಡಳಿಕ– ದೇಸಾಯಿ– ದೇಶಭಕ್ತರನ್ನೂ ಆಸ್ತಿಕ– ನಾಸ್ತಿಕ– ಕೋಮುವಾದಿ– ವಸುಧಿವಾದಿಗಳನ್ನೂ ಕಲೆಹಾಕಿ ಕನ್ನಡದ ಕಾರ್ಯಕ್ಕೆ ಅಣಿಗೊಳಿಸುವ ಸಾಹಸವನ್ನು ಕೈಕೊಂಡು 'ಶ್ರೀ'ಯವರು ಧೈರ್ಯದಿಂದ ಮುಂದಡಿಯಿಟ್ಟಿದ್ದಾರೆ. ಇದು ನಮ್ಮ ನಾಡು ನೆನಸಿಡಬೇಕಾದ ಮಾತು.

ಹೀಗೆ ನೂತನ ಸಾಹಿತ್ಯದ ಚತುರ್ಮುಖನಂತೆ ಸರ್ವತೋಮುಖವಾಗಿ ಕನ್ನಡಕ್ಕಾಗಿ ದುಡಿಯುತ್ತಿರುವ 'ಶ್ರೀ'ಯವರ ಮೋರೆಯಮೇಲೆ ನಯವಿನಯದ ಮುಗುಳ್ನಗೆಯೊಂದು ಸದಾ ಮಿನುಗುತ್ತಿರುತ್ತದೆ. ಅವರ ಆ ಜರಕಟ್ಟಿನ ಮೈಸೂರು ರುಮಾಲು ಅವರ ತಲೆಗೇ ಒಪ್ಪುವದು. ಹಿಂದೀ ರಾಜಕಾರಣದಲ್ಲಿ 'ಜ್ಞಾನಮಾರ್ಗಿ'ಗಳೆಂದು ಕೆಲವರು ಹೇಳುತ್ತಿರುವ ಲಿಬರಲ್ ಪಂಗಡದಲ್ಲಿ ಬೆಳೆದ 'ಶ್ರೀ'ಯವರು ಇತ್ತೀಚೆಗೆ ಒಂದೆರಡು ಸಲ ಗಾಂಧಿ ಟೊಪ್ಪಿಗೆಯನ್ನು ತಲೆಯಮೇಲಿಟ್ಟುಕೊಂಡು ಜನರನ್ನು ಬೆರಗುಗೊಳಿಸಿದರು. ಸ್ಥಾನ-ಮಾನಗಳ ತಾರತಮ್ಯದ ದೃಷ್ಟಿಯಿಂದ ಭೂವೈಕುಂಠವೇ ಆದ ಮೈಸೂರಿನಲ್ಲಿ ಬೆಳೆದ ಅವರು ವಿಜಯನಗರದ ಷಟ್‌ಸಾಂವತ್ಸರಿಕೋತ್ಸವದ ಕಾಲಕ್ಕೆ ಜಾಗ ಸಿಗದೆಹೋಗಿ ತಮ್ಮ ಮೋಟರಿನ ಮಗ್ಗುಲಿಗೆ ಮಲಗಿಕೊಂಡು ರಾತ್ರಿಯನ್ನು ಕಳೆಯಲೂ ಹಿಂದೆಗೆಯಲಿಲ್ಲ. ಅನೇಕ 'ಸಾಮಾಜಿಕ ವರ್ತುಲ'ಗಳಿಗೆ ಮಧ್ಯಬಿಂದುವಿನಂತಿರುವ ಅವರು ಕನ್ನಡದ ಉತ್ಸಾಹವಿರುವ ಎಂಥ ಎಳೆಯನೊಡನೆ ಸಹ ಕಿರಿಯರಿಗಿಂತ ಕಿರಿಯರಾಗಿ ನಡೆದು ಕನ್ನಡದ ಪಸಿಗೆ ನೀರೆರೆಯುತ್ತಾರೆ. ನೌಕರಿಯು ಪ್ರಾರಂಭವಾದಂದಿನಿಂದ ರುಮಾಲು ಕಟ್ಟಿದಂತೆಯೇ ನಾಲಗೆಯನ್ನೂ ಅನೇಕ ವರ್ಷಗಳ ವರೆಗೆ ಬಿಗಿಹಿಡಿದ ಅವರು ಈಗ ಹೋದಲ್ಲೆಲ್ಲ ತಮ್ಮ ಹೃದಯವನ್ನೇ ತೆರೆದು ಮಾತನಾಡುತ್ತಾರೆ. ಕನ್ನಡದ ಹುಚ್ಚು ಹಿಡಿದಂದಿನಿಂದ, ಇಳಿವಯಸ್ಸಿನವರಾದ ಅವರ ಉತ್ಸಾಹವು ಕೊನರಿದೆ; ಎಳೆತನದ ಮಾರ್ದವವು ಅವರಲ್ಲಿ ಮಾಗಿದೆ. 'ಗಂಧದ ಗುಡಿ'ಯಾದ ಮೈಸೂರನ್ನು ಅವರು ಮರೆತಿಲ್ಲ. ಆದರೆ ಕರುನಾಡಿನ ದಿವ್ಯ ದರ್ಶನವು ಅವರನ್ನು ಅಖಂಡ ದಾಸರನ್ನಾಗಿ ಮಾಡಿಕೊಂಡಿದೆ. "ನಿಮ್ಮಂತೆ ಇಪ್ಪತ್ತು– ಇಪ್ಪತ್ತೈದು

ವರ್ಷದವನಿದ್ದಾಗ ನಾನೇನಿದ್ದೆ ? ಏನನ್ನೂ ಮಾಡಿರಲಿಲ್ಲ” ಎಂದು ಹೇಳಿ ತರುಣ ರನ್ನು ಹುರಿದುಂಬಿಸುವ ಅವರು ಹೊತ್ತಾಗಿ ಕಾರ್ಯರಂಗದ ಮೇಲಿಳಿದರೂ ಮುತ್ತಿನಂತಹ ಕೆಲಸವನ್ನು ಮಾಡಿದ್ದಾರೆ.

ವಿಳಂಬವಾಗಿ ಅವರ ಕಾರ್ಯವು ಪ್ರಾರಂಭವಾಗಲು ಕಾರಣಗಳಿದ್ದವು. ಇಂಗ್ಲಿಷ್ ಪ್ರೊಫೆಸರು ಕನ್ನಡವನ್ನು ಮಾತನಾಡುವದೆಂದರೇ ಅವರ ಕಾಲದಲ್ಲಿ ಮಹತ್ಪಾಪವಾಗಿತ್ತು. ಕನ್ನಡದಲ್ಲಿ ಓದಿ ಬರೆಯುವದಂತೂ ದೂರುಳಿಯಿತು. ಕನ್ನಡದ ನಡುಮನೆಯಾದ ಮೈಸೂರಲ್ಲಿಯೇ ಆಗ ಕನ್ನಡವು ಹೇಳ ಹೆಸರಿಲ್ಲದಾಗುವ ಹೊತ್ತು ಬಂದಿತ್ತು. ಇಂಥದರಲ್ಲಿಯೇ ಹಾಗೂ ಹೀಗೂ ಮಾಡಿ ‘ಶ್ರೀ’ಯವರು ಕೆಲವು ಆಂಗ್ಲ ಕವನಗಳನ್ನು ಅನುವಾದಿಸಿದರು. ಅಲ್ಲಲ್ಲಿ ಕೆಲವು ಮಾಸಪತ್ರಿಕೆ ಗಳಲ್ಲಿ ಗೆಳೆಯರ ಆಗ್ರಹದ ಮೂಲಕ ಹಲಕೆಲವು ಕೃತಿಗಳನ್ನು ಪ್ರಕಟಗೊಳಿಸಿದರು. ದಿವಂಗತ ಶ್ರೀ॥ ಪಂಜೆ ಮಂಗೇಶರಾಯರು ಮೊದಲಾದ ಕೆಲವು ಮಹನೀಯರೊಡನೆ ಕನ್ನಡದ ವಿಷಯವನ್ನು ಕುರಿತು ಅವರು ಚರ್ಚಿಸಿದರು. ಅದೆಷ್ಟೋ ವರ್ಷಗಳ ವರೆಗೆ ‘ಇಂಗ್ಲಿಷ್ ಗೀತಗಳು’ ಅಜ್ಞಾತವಾಗಿಯೇ ಉಳಿದವು. ಕೊನೆಗೊಮ್ಮೆ— ‘ಶ್ರೀ’ಯವರ ತಪಸ್ಸೆಲ್ಲ ಫಲಿಸುವ ಸಮಯ ಬಂದಾಗ— ಆ ಗೀತಗಳು ಅಚ್ಚಾ ದೊಡನೆ ಕನ್ನಡಪ್ರೇಮಿಗಳೆಲ್ಲರ ಮನ್ನಣೆಯನ್ನು ಪಡೆದವು. ಹುಟ್ಟಿದೊಡನೆ ಮುಕುಟರತ್ನದಂತೆ ಕನ್ನಡದಲ್ಲಿ ಹೊಳೆಯ ತೊಡಗಿದ ಕೆಲವೇ ಕೃತಿಗಳಲ್ಲಿ ‘ಇಂಗ್ಲಿಷ್ ಗೀತ’ಗಳೂ ಒಂದು.

‘ಶ್ರೀ’ಯವರು ‘ಮೇಷ್ಟರು’. ರಾಜಕಾರಣದಲ್ಲಿ ಬಿದ್ದವರಲ್ಲ. ಸಭಾಪತಿ ಗಳಾಗಿ ಕಾರ್ಯಸಮಿತಿಗಳನ್ನು ನಡೆಸುವದಕ್ಕಿಂತ ಉಪನ್ಯಾಸಕಾರರಾಗಿ ಮಾತ ನಾಡುವದು ಅವರಿಗೆ ಹೆಚ್ಚು ಪ್ರಿಯವಾದುದು, ಇಷ್ಟವಾದುದು. ಸಭೆಯ ವಿಧಾಯಕ ರೀತಿಗಳಲ್ಲಿ ಅನೇಕ ‘ಮೇಷ್ಟರು’ಗಳಂತೆ ಅವರು ಗೊಂದಲಗೆಟ್ಟರೆ ಆಶ್ಚರ್ಯವಲ್ಲ. ಆದರೆ ರಥದ ಗಾಲಿ ಕುಸಿಬಿದ್ದಾಗ, ತಮ್ಮಿಂದಾದಷ್ಟು ಸಹಾಯ ವನ್ನು ಮಾಡಬೇಕೆಂಬ ಭಾವನೆಯು ‘ಶ್ರೀ’ಯವರನ್ನು ಪ್ರೇರಿಸಿದೆ. ‘ಶ್ರೀ’ ಯವರು ಇಂತಹ ವಿಧಾಯಕ ಕಾರ್ಯಗಳಲ್ಲಿ ತೊಡಗಿಕೊಂಡದ್ದರಿಂದ ಇಂದಿನ ಕನ್ನಡಕ್ಕೆ ಉದ್ದೀಪನವು ದೊರೆತರೂ ಇಂದಿನ ಕನ್ನಡ ಸಾಹಿತ್ಯಕ್ಕೆ ಅಪಾರವಾದ ಹಾನಿ ತಟ್ಟುತ್ತಿದೆಯೆಂದು ಕೆಲವರಾಡಿಕೊಳ್ಳುವದುಂಟು. ಈ ಮಾತಿನಲ್ಲಿ ತಥ್ಯ ವಿಲ್ಲದೆ ಇಲ್ಲ. ಆದರೆ ‘ಕುಯ್ಯುವವರು ಬೇಕಾಗಿದಾರೆ’ ಎಂಬ ಮಾತು ಮೊದಲಿ ನಿಂದ ‘ಶ್ರೀ’ಯವರಿಗೆ ಮನದಟ್ಟಾಗಿದೆ. ಮುಕ್ಕು ಚಿಕ್ಕೆಯ ಕಾಳನ್ನೇನೊ ‘ಶ್ರೀ’ ಯವರು ಬಿತ್ತಿದ್ದಾರೆ. ಆದರೆ ನಾಡಿನ ಪ್ರಗತಿಗಾಗಿ ಟೊಂಕಕಟ್ಟಿ ಈಗ ‘ಕುಯ್ಲು’ ನಿಂತಿದ್ದಾರೆ. ಇದೂ ಒಂದು ಬಗೆಯ ಸ್ವಾರ್ಥತ್ಯಾಗವೆಂದೇ ಹೇಳಬೇಕು.

‘ಶ್ರೀ’ಯವರ ನಡೆನುಡಿಯಲ್ಲಿ ಕಪಿಯಿಲ್ಲ. ‘ಶ್ರೀ’ಯವರು ಯಾರಿಗೂ ಕೆಡುಕು ಬಯಸಲಾರರು. ಅದು ಅವರ ಹುಟ್ಟುಗುಣದಲ್ಲಿಯೇ ಇಲ್ಲ. ‘ಆಳು ಬ್ರಿಟಾನಿಯ’ ಎಂದು ‘Rule Britannia’ ಎಂಬ ಆಂಗ್ಲರ ರಾಷ್ಟ್ರಗೀತಗಳಲ್ಲೊಂದನ್ನು ಅನುವಾದಿಸಿದ್ದಕ್ಕಾಗಿ ಅನೇಕರು ‘ಶ್ರೀ’ಯವರ ಮೇಲೆ ಸಿಟ್ಟಾಗಿದ್ದಾರೆ. ‘Rule Britannia’ ಎಂಬ ಗೀತೆಗೂ ನಮಗೂ ಅಷ್ಟೊಂದು ಮಧುರ ಸಂಬಂಧವಿರಲಾರ

ದೆಂಬುದು ಮೇಲೆಯೇ ಕಾಣುತ್ತದೆ. ಆದರೆ ಅದನ್ನು ಅನುವಾದಿಸಿದೊಡನೆ ನಮ್ಮ ದಾಸ್ಯವು ಅಪೇಕ್ಷಣೀಯವೆಂದು ಹೇಳಿದಹಾಗಾಗಲಿಲ್ಲ. ಇಂದಿನ ಪ್ರೇಮಗೀತೆಗಳಂತೆ ರಾಷ್ಟ್ರಗೀತೆಗಳೂ ಆಂಗ್ಲ ಕಾವ್ಯದಿಂದ ಸ್ಫೂರ್ತಿಪೆತ್ತಿವೆ. ಇಂಥ ಕೃತಿಗಳಿಗೆ ಮೂಲವಾದ ಭಾಷೆಯಲ್ಲಿಯ ಒಂದು ಕೃತಿಯೆಂದು ನಾವು ‘Rule Britannia’ದ ಕಡೆಗೆ ನೋಡಬಹುದು. ಹೀಗೆ ನೋಡುವದು ಕಠಿಣವೆಂದು ನಾನು ಒಪ್ಪುತ್ತೇನೆ. ಆದರೂ ಈ ಶಾಸ್ತ್ರೀಯ ದೃಷ್ಟಿಯಿಂದ ಮಾತ್ರ ನಾವು ಇಂಥ ಅನುವಾದಗಳನ್ನು ಕಾಣಬಹುದಲ್ಲವೆ?

‘ಶ್ರೀ’ಯವರ ಮನೆಯಲ್ಲಿ ವಿಧಿಯು ಒಂದೆರಡು ರುದ್ರ ದೃಶ್ಯಗಳನ್ನಾಡದೆ ಇಲ್ಲ. ಮೃದು ಸ್ವಭಾವದವರಾದ ‘ಶ್ರೀ’ಯವರಿಗೆ ಇದರಿಂದಾದ ನೋವು ಅವರ ಸಮೀಪದಲ್ಲಿದ್ದು ಸೂಕ್ಷ್ಮವಾಗಿ ನೋಡಿದಾಗ ಗೊತ್ತಾಗುತ್ತದೆ. ಅವರ ತಾತ್ವಿಕ ವೃತ್ತಿಯೇ ಈ ನೋವಿನಿಂದ ಅವರ ಮನಸ್ಸನ್ನು ಕಾಯ್ದಿದೆ. ಇಷ್ಟೆಲ್ಲ ಸಂಕಟಗಳನ್ನು ಅನುಭವಿಸಿದರೂ ಅವರ ಮನಸ್ಸು ಮುರುಟಿ ತನ್ನ ನಯವನ್ನು ಕಳಕೊಂಡಿಲ್ಲ. ಇಂಥ ಆಳವಾದ ಅನುಭವದ ನೆರವಿನಿಂದ ಮಾತ್ರ ಅವರ ಸಾರ್ವಜನಿಕ ಜೀವನವು ಇಷ್ಟು ಪ್ರಫುಲ್ಲವಾಗಿ ಅರಳುತ್ತಲಿದೆ. ‘ಕರುಣಾಳು ಬೆಳಕಿ’ನ ಶಾಂತ ಪ್ರಶಾಂತ ಆವರಣದಲ್ಲಿ ಅವರ ಅಂತರಂಗವು ತೆರೆಯುತ್ತಲಿದೆ.

ಬೆಂಗಳೂರಿನಲ್ಲಿ ಕೋಟೆಯ ನಡುರಸ್ತೆಯ ಮೇಲಿರುವ ಇಪ್ಪತ್ತೈದನೆಯ ನಂಬರಿನ ಬಂಗಲೆಯಲ್ಲಿ ಹೊಕ್ಕಾಗ, ಅಲ್ಲಿ ಒಂದಿಲ್ಲೊಂದು ಬಗೆಯ ಕನ್ನಡದ ಚಳವಳಿಯು ನಡೆದದ್ದು ನಮಗೆ ಗೊತ್ತಾಗುತ್ತದೆ. ಅದೇನು ಅಂಥ ಸಿರಿವಂತರ ಮನೆಯಲ್ಲ. ಅಲ್ಲಿದ್ದವರು ಪ್ರೊಫೆಸರಾಗಿ ಅನೇಕ ವರ್ಷಗಳವರೆಗೆ ಕೆಲಸಮಾಡುತ್ತಿದ್ದ ಮಹನೀಯರೊಬ್ಬರು. ಆದರೆ ದೇಶದಲ್ಲಿ ಎಷ್ಟು ಜನ ಪ್ರೊಫೆಸರಿಲ್ಲ? ರಾಧಾಕೃಷ್ಣ, ಹಿರಿಯಣ್ಣಯ್ಯ ಮೊದಲಾದ ಕೀರ್ತಿವಂತ ವಿದ್ವಾಂಸರೊಡನೆ ಭುಜಕ್ಕೆ ಭುಜ ಹಚ್ಚಿ ಕೆಲಸಮಾಡಿದ ‘ಶ್ರೀ’ಯವರು ತಮ್ಮ ವಿಷಯವಾದ ಆಂಗ್ಲ ಸಾಹಿತ್ಯದ ಅಭ್ಯಾಸದಲ್ಲಿ ಎಷ್ಟೊಂದು ಪಾರಂಗತರಿರಬಹುದೆಂಬುದನ್ನು ತಿಳಿಯಲು ನಮಗೆ ತಡವಾಗದು. ಆದರೆ ಮೇಲೆ ಹೇಳಿದ ಮಹನೀಯರಂತೆ ತಮ್ಮ ಪರಿಣತಿಯನ್ನು ದೇಶದ ಪ್ರಗತಿಗಾಗಿ ವಿನಿಯೋಗಿಸುವವರೆಷ್ಟು ಮಂದಿ? ‘ಶ್ರೀ’ಯವರು ಈ ಕೆಲಸವನ್ನು ಮಾಡುತ್ತ ಬಂದಿರುವರೆಂದೇ ಇಂದು ನಾವೆಲ್ಲ ಅವರ ಬಗ್ಗೆ ಇಷ್ಟೊಂದು ಹೆಮ್ಮೆತಾಳಿ ಮಾತನಾಡುತ್ತಿದ್ದೇವೆ. ಅವರು ಕೈಕೊಂಡ ಕಾರ್ಯದಲ್ಲಿ ಅವರಿಗೆ ಅಖಂಡವಾದ ಯಶಸ್ಸಿರಲಿ.

ವಿ. ಕೃ. ಗೋಕಾಕ



## ಶ್ರೀಕಂಠಯ್ಯನವರೂ – ಕನ್ನಡ ಲಿಪಿ ಸಂಸ್ಕರಣವೂ

'ಶ್ರೀ'ಯವರಿಗೆ ಕನ್ನಡ ಅಕ್ಷರ ಸಂಸ್ಕರಣವೂ ಕನ್ನಡ ಮುದ್ರಣವೂ ಬಹು ಪ್ರಿಯವಾದ ವಿಷಯಗಳು. ಕನ್ನಡ ಭಾಷಾ ಪ್ರಚಾರಕ್ಕೊದಗಿರುವ ತೊಡಕುಗಳನ್ನೆಲ್ಲಾ ಬಿಡಿಸಿ ಆ ಭಾಷೆಯನ್ನು ಜನಪ್ರಿಯವಾಗಿಯೂ ಜನಾದರಣೀಯವಾಗಿಯೂ ಮಾಡಬೇಕೆಂದು ಅವರು ತೀವ್ರಾಭಿಲಾಷೆಯುಳ್ಳವರಾಗಿದ್ದಾರೆ. ಕನ್ನಡ ಅಕ್ಷರಗಳಲ್ಲಿ ತಲೆಕಟ್ಟು, ದೀರ್ಘ. ಗುಡಿಸು, ಒತ್ತಕ್ಷರ ಮುಂತಾದ ಅಡಚಣೆಗಳಿರುವುದರಿಂದ ಭಾಷೆಯನ್ನು ಸರಾಗವಾಗಿ ಓದುವುದಕ್ಕೂ ಬರೆಯುವುದಕ್ಕೂ ಕಲಿಯುವುದಕ್ಕೂ ಅಭ್ಯಂತರವಾಗಿದೆ ಎಂದೂ; ಇಂಗ್ಲಿಷ್ ಬಲ್ಲ ಕನ್ನಡಿಗರು ತಮ್ಮ ಓದು ಬರಹವನ್ನು ಇಂಗ್ಲಿಷಿನಲ್ಲಿಯೇ ನಡೆಸಲು ಮನ ಒಪ್ಪುವಷ್ಟು ಕನ್ನಡದಲ್ಲಿ ನಡೆಸಲು ಮನಸ್ಸಿಲ್ಲದವರಾಗಿರುವುದು ಇದಕ್ಕೆ ದೃಷ್ಟಾಂತವಾಗಿದೆ ಎಂದೂ: ಇಂಗ್ಲಿಷ್‌ಕಡೆಗೆ ಓಡುವ ಅವರ ಮನಸ್ಸು ಕನ್ನಡದ ಕಡೆಗೆ ತಾನಾಗಿ ಒಲಿಯಬೇಕಾದರೆ ಅಚ್ಚ ಕನ್ನಡಿಗರಿಗೆ ಕನ್ನಡದ ಕಲಿಕೆಯು ಸುಲಭವೂ ಹರ್ಷಕರವೂ ಆಗಬೇಕಾದರೆ ಅದರಲ್ಲಿರುವ ತೊಡಕುಗಳನ್ನು ತೆಗೆದುಹಾಕಬೇಕಾದುದು ಅಗತ್ಯವೆಂದೂ 'ಶ್ರೀ'ಯವರ ಅಭಿಪ್ರಾಯ. ತುರ್ಕಿ ದೇಶದ ಪ್ರಜೆಗಳು ಅನಕ್ಷರಸ್ಥರಾಗಿದ್ದುದಕ್ಕೆ ಅವರ ಭಾಷೆಯ ತೊಡಕೇ ಕಾರಣವೆಂದು ತಿಳಿದು ರಾಷ್ಟ್ರಪತಿಯಾದ ಕೆಮಾಲ್ ಪಾಷಾ ಅವರು ತುರ್ಕಿ ಲಿಪಿಯನ್ನು ತೊಡೆದು ಹಾಕಿ ಅದಕ್ಕೆ ಬದಲು ಇಂಗ್ಲಿಷ್ ಲಿಪಿಯನ್ನು ಆಚರಣೆಗೆ ತಂದರು. ಅಂದಿನಿಂದ ತುರ್ಕಿ ದೇಶೀಯರು ತುರ್ಕಿ ಭಾಷೆಯನ್ನು ಇಂಗ್ಲಿಷ್ ಲಿಪಿಯ ಮೂಲಕ ಬಹು ಸುಲಭವಾಗಿ ಕಲಿತು ಅಕ್ಷರಸ್ಥರಾಗಲು ಬಹಳ ಸಹಾಯವಾಯಿತು. ಹಾಗೆಯೇ ಲ್ಯಾಟಿನ್, ಜರ್ಮನ್, ಫ್ರೆಂಚ್, ಇಟಾಲಿಯನ್ ಮುಂತಾದ ಭಾಷೆಗಳೂ ಸಹ ಇಂಗ್ಲಿಷ್ ಲಿಪಿಯ ಮೂಲಕವೇ ಅಭ್ಯಾಸವಾಗುತ್ತಿರುವುದರಿಂದ ಆಯಾ ಭಾಷೆಗಳನ್ನು ಜಾಗ್ರತೆ ಕಲಿಯಲು ಬಹಳ ಸಹಾಯವಾಗಿದೆ. ಆದಕಾರಣ ನಮ್ಮ ಕನ್ನಡ ಭಾಷೆಯೂ ಸಹ ಇಂಗ್ಲಿಷ್ ಲಿಪಿಯ ಮೂಲಕ ಕಲಿಯುವಂತೆ ಆದರೆ ನಮ್ಮ ನಿರಕ್ಷರ ಪ್ರಜೆಗಳು ಜಾಗ್ರತೆಯಾಗಿ ಸಾಕ್ಷರರಾಗಲು ಸಹಾಯವಾಗುವುದೆಂದು ಕೆಲವರ ಅಭಿಪ್ರಾಯವಿದೆ. ಆದರೆ ನಮ್ಮ ಪ್ರಾಚೀನ ಭಾಷೆಯನ್ನು ಅನ್ಯ ಲಿಪಿಯ ಮೂಲಕ ಕಲಿಯುವುದಕ್ಕಿಂತ ಇರುವ ಲಿಪಿಯನ್ನೇ ಸ್ವಲ್ಪ ಸಂಸ್ಕರಣ ಮಾಡಿಕೊಂಡರೆ ನಮ್ಮ ಉದ್ದೇಶವು ನೆರವೇರುವುದಲ್ಲದೆ ನಮ್ಮ ಲಿಪಿಯ ವೈಶಿಷ್ಟ್ಯವೂ ಉಳಿಯುವುದು, ಪರಲಿಪಿಯ ದಾಸ್ಯವೂ ತಪ್ಪುವುದು ಎಂದು 'ಶ್ರೀ'ಯವರು ಕನ್ನಡ ಅಕ್ಷರ ಸಂಸ್ಕಾರಣದ ಕಡೆಗೆ ಮನಗೊಟ್ಟು ಆಕ್ಷೇಪಣೆಗಳಿಗೆ ಹೆದರದೆ ಕನ್ನಡ ಲಿಪಿ ಸಂಸ್ಕರಣ ಸಮ್ಮೇಳನವನ್ನು ಮೂರು ವರ್ಷಗಳ ಹಿಂದೆ ಏರ್ಪಡಿಸಿ ಪಂಡಿತರನ್ನು ಬರಮಾಡಿಕೊಂಡು ತಮ್ಮ ಆಶಯವನ್ನು ಅವರ ಮುಂದಿಟ್ಟು ಅವರ ಅಭಿಪ್ರಾಯವನ್ನು ಕೇಳಿದರು. ತತ್ಫಲವಾಗಿ ಬಹುಮಂದಿ ಈ ಉದ್ಯಮವನ್ನು ಸ್ವಾಗತಿಸಿ ಉಪಯುಕ್ತವಾದ ಸಲಹೆಗಳನ್ನು ಕೊಟ್ಟರು. ಹಲವರು ಹಳಿದರು. ಒಟ್ಟಿನಲ್ಲಿ ಕೆಲವು ಕಾರ್ಯಕಾರಿಯಾದ ತೀರ್ಮಾನಗಳು ಆ ಸಮ್ಮೇಳನದಲ್ಲಿ ಆದುವು. ಇಂಗ್ಲಿಷ್ ಲಿಪಿಯನ್ನು ಕನ್ನಡಕ್ಕೆ ಬಳಸುವುದು

ಯುಕ್ತವಲ್ಲವೆಂತಲೂ ಪ್ರಯೋಗದಲ್ಲಿರುವ ಕನ್ನಡ ಲಿಪಿಯನ್ನೇ ಇಟ್ಟುಕೊಂಡು ಅದರಲ್ಲಿ ಕೇವಲ ಆವಶ್ಯಕವಾದ ಮಾರ್ಪಾಟುಗಳನ್ನು ಮಾಡಿಕೊಳ್ಳತಕ್ಕದ್ದೆಂದೂ ನಿರ್ಣಯವಾಯಿತು. ಮುಖ್ಯವಾಗಿ ಮಾಡಬೇಕೆಂದು ಉದ್ದೇಶಿಸಿರುವ ಮಾರ್ಪಾಟುಗಳು ಮೂರು:—(i) ದೀರ್ಘ ಚಿಹ್ನೆಯನ್ನು ಎಲ್ಲಾ ಕಡೆಯೂ ಒಂದೇ ರೀತಿ ಬರೆಯುವುದು—ಆ = ಅೀ, ಬಾ = ಬೀ, ಕೂ = ಕುೀ ; (ii) ಒತ್ತಕ್ಷರವನ್ನು ಬಿಡಿಸಿ ಪಕ್ಕದಲ್ಲಿ ಬರೆಯುವುದು—ಕನ್ನಡ = ಕನ್‌ನಡ, ಶ್ರೀ = ಶ್‌ರೀ ; (iii) ಎಲ್ಲಾ ಮಹಾಪ್ರಾಣ ಚಿಹ್ನೆಗಳನ್ನೂ ಅಲ್ಪಪ್ರಾಣ ಚಿಹ್ನೆಗಳ ಹೊಕ್ಕಳು ಸೀಳಿಯೇ ಮಾಡಿಕೊಳ್ಳುವುದು—ಛ = ಚ಼ ; ಭ = ಬ಼. "ಈ ಸಣ್ಣ ಮಾರ್ಪಾಟುಗಳನ್ನು ತಾಳ್ಮೆಯಿಂದಲೂ ದೂರದೃಷ್ಟಿಯಿಂದಲೂ ನೋಡಿ ಎಲ್ಲರೂ ಒಪ್ಪಿಕೊಂಡು ಆದಷ್ಟು ಬೇಗ ಬಳಕೆಗೆ ತಂದರೆ ಎಳೆಯ ಮಕ್ಕಳ ಹೊರೆ, ಅಚ್ಚುಕೂಟಗಳ ತೊಡಕು ಅರ್ಧಕ್ಕರ್ಧ ಕಡಮೆಯಾಗುವುದು" ಎಂಬುದು 'ಶ್ರೀ'ಯವರ ಅಭಿಪ್ರಾಯ.

ಈಗ ನಾವು ಮಕ್ಕಳಿಗೆ ಅಕ್ಷರಾಭ್ಯಾಸವನ್ನು ಮಾಡಿಸುವಾಗ ಕಾಗುಣಿತವನ್ನು ಮರಳಿನ ಮೇಲೋ ಹಲಗೆಯ ಮೇಲೋ ಬರೆದುಕೊಟ್ಟು ಅಕ್ಷರಗಳ ರೂಪು ಅವರ ಮನಸ್ಸಿನ ಮೇಲೆ ಛಾಯಾಚಿತ್ರದಂತೆ ನಿಲ್ಲುವವರೆಗೂ ತಿದ್ದಿಸಿ ತಿದ್ದಿಸಿ ಬರೆಸಿ ಬರೆಸಿ ಮೂರು ನಾಲ್ಕು ತಿಂಗಳ ಕಾಲ ಇದರಲ್ಲೇ ಕಾಲವಿಳಂಬವಾಗುತ್ತಿರುವುದು. ಇದರಿಂದ ಮಕ್ಕಳಿಗೆ ಬೇಸರವೂ ಜಿಗುಪ್ಸೆಯೂ ಹುಟ್ಟಿ ವಿದ್ಯಾಭ್ಯಾಸದಮೇಲೆ ಇಷ್ಟ ತಪ್ಪುವಂತಾಗುವುದು. ಈ ಪದ್ಧತಿಯನ್ನು ತಪ್ಪಿಸಬೇಕೆಂಬ ಉದ್ದೇಶದಿಂದ ಕೆಲವರು ಹೊಸ ಪದ್ಧತಿಗಳನ್ನು ಸೂಚಿಸಿ ಪುಸ್ತಕಗಳನ್ನು ಮುದ್ರಿಸಿದ್ದಾರೆ. ಚಿತ್ರಗಳನ್ನು ನೋಡಿ ಅವುಗಳ ಹೆಸರನ್ನು ಹೇಳಿ ಆ ಹೆಸರಿನ ಅಕ್ಷರಗಳನ್ನು ಗುರುತಿಸಿ ಜ್ಞಾಪ್ತಿ ಇಟ್ಟುಕೊಳ್ಳುವುದು ಒಂದು ಕ್ರಮ. ಮೂಲ ಅಕ್ಷರವನ್ನು ಕಪ್ಪು ಶಾಯಿಯಲ್ಲಿಯೂ ಅದಕ್ಕೆ ಸಂಯೋಜನವಾಗುವ ಕೊಂಬು, ದೀರ್ಘ, ಒತ್ತು ಮುಂತಾದ ಅನುಬಂಧಗಳನ್ನು ಕೆಂಪು ಶಾಯಿಯಲ್ಲಿಯೂ ಮುದ್ರಿಸಿ ಅಕ್ಷರ ರಚನೆಯಮೇಲೆ ಗಮನವನ್ನು ಆಕರ್ಷಿಸಿ ಕಲಿಸುವುದು ಮತ್ತೊಂದು ಕ್ರಮ. ಸಂಪ್ರದಾಯದ ಪ್ರಕಾರ ಸ್ವರ ವ್ಯಂಜನಗಳನ್ನು ಕ್ರಮಪ್ರಕಾರ ಪ್ರತ್ಯೇಕವಾಗಿ ಹೇಳಿಕೊಡದೆ, ಸ್ವರ ವ್ಯಂಜನಗಳನ್ನು ಸೇರಿಸಿ ಸುಲಭವಾದ ಮಾತುಗಳನ್ನು ಮಾಡಿ, ಮಾತುಗಳ ಮೂಲಕ ಅಕ್ಷರಗಳ ಗುರುತನ್ನು ಮಾಡಿಕೊಂಡು ಅಕ್ಷರಾಭ್ಯಾಸ ಮಾಡಿಸುವುದು ಇನ್ನೊಂದು ಕ್ರಮ. ಈ ಕ್ರಮಗಳೂ ಸಹ ಹಿಂದಿನ ಪದ್ಧತಿಗಿಂತ ಕಷ್ಟನಿವಾರಣೆಯಲ್ಲಾಗಲಿ ಕಾಲ ಉಳಿತಾಯದಲ್ಲಾಗಲಿ ಉತ್ತಮವೆಂದು ಹೇಳುವುದಕ್ಕಾಗುವುದಿಲ್ಲ. ಹಳೆಯ ಪದ್ಧತಿಯು ಯಾಂತ್ರಿಕವಾದರೆ ಹೊಸ ಮಾರ್ಪಾಟು ಮಾನಸಿಕ. ಎರಡೂ ಮಕ್ಕಳಿಗೆ ಬೇಸರಬರುವ ನಿರುತ್ಸಾಹಕರವಾದ ಕ್ರಮಗಳೆಂದು ಧಾರಾಳವಾಗಿ ಹೇಳಬಹುದು. ಆದರೆ 'ಶ್ರೀ'ಯವರ ಸಲಹೆಯ ಪ್ರಕಾರ ಅಕ್ಷರ ಸಂಸ್ಕರಣ ಮಾಡಿಕೊಂಡರೆ ಮಹಾಪ್ರಾಣಾಕ್ಷರಗಳು, ದೀರ್ಘ ವ್ಯಂಜನಾಕ್ಷರಗಳು, ಎರಡು ಮೂರು ಬಗೆಯ ದೀರ್ಘಗಳು, ಒತ್ತಕ್ಷರಗಳು — ಇವೆಲ್ಲವೂ ಅಳಿದು ಹೋಗಿ ಕಲಿಯಬೇಕಾದ ವರ್ಣಮಾಲಾಕ್ಷರ ಸಂಖ್ಯೆಯು ಕಡಮೆಯಾಗಿ ಉಳಿದ ಹಲವು ಅಕ್ಷರಗಳನ್ನು ಸುಲಭವಾಗಿಯೂ ಜಾಗ್ರತೆಯಾಗಿಯೂ • ಕಲಿಯಲು

ಅನುಕೂಲವಾಗುವುದು. ಇದರಿಂದ ಮಕ್ಕಳ ಅಕ್ಷರಾಭ್ಯಾಸ ಸುಲಲಿತವಾಗಿ ನಡೆಯುವುದಕ್ಕೆ ಬಹಳ ಸಹಾಯವಾಗುತ್ತದೆ.

ಮುದ್ರಣ ದೃಷ್ಟಿಯಿಂದ ಈ ಬಗೆಯ ಅಕ್ಷರಸಂಸ್ಕರಣವು ಬಹಳ ಉಪಯುಕ್ತವಾಗುವುದು. ಅಚ್ಚುಮೊಳೆಗಳನ್ನು ಜೋಡಿಸುವವರಿಗೆ ಈಗ ಬಹಳ ಶ್ರಮವಿದೆ. ಒಂದೊಂದು ಅಕ್ಷರಕ್ಕೂ ಒಂದೊಂದು ಮೊಳೆಯಿರುವುದರಿಂದ ಅವುಗಳನ್ನಿಟ್ಟಿರುವ ಸುಮಾರು ೬೭ ಅರೆಗಳುಳ್ಳ ಖಾನೆಯ ಮೇಲೆಲ್ಲಾ ಅವರ ಕೈಯಾಡಬೇಕಾದ ಪ್ರಯುಕ್ತ ಕಾಲವಿಳಂಬವೂ ಆಯಾಸವೂ ಆಗುತ್ತದೆ; ಜೋಡಣೆಯ ಕೆಲಸ ತಾಮಸವಾಗುತ್ತದೆ. ಮೇಲ್ಕಂಡ ಲಿಪಿ ಸಂಸ್ಕರಣದ ಪ್ರಕಾರ ದೀರ್ಘದ ಸ್ವರಗಳೂ ವ್ಯಂಜನಗಳೂ, ದೀರ್ಘದ ಬೇರೆ ಬೇರೆ ಚಿಹ್ನೆಗಳೂ, ಮಹಾಪ್ರಾಣಾಕ್ಷರಗಳೂ, ಒತ್ತಕ್ಷರಗಳೂ ಕಡಮೆಬೀಳುವುದರಿಂದ ಜೋಡಿಸಬೇಕಾದ ಅಕ್ಷರ ಮೊಳೆಗಳ ಸಂಖ್ಯೆ ಅರ್ಧಕ್ಕರ್ಧ ಕಡಮೆಯಾಗಿ ಜೋಡಣೆಯ ಕೆಲಸ ಎರಡರಷ್ಟು ಶೀಘ್ರವಾಗಿ ನಡೆಯುವುದಕ್ಕೆ ಸಹಾಯವಾಗುತ್ತದೆ. ಮೊಳೆ ಜೋಡಿಸುವವರಿಗೆ ಶ್ರಮವೂ ಕಡಮೆಯಾಗಿ ಕೆಲಸವೂ ಚುರುಕಾಗಿ ನಡೆಯಲು ಸಾಧ್ಯವಾಗುತ್ತದೆ: ಒತ್ತಕ್ಷರಗಳನ್ನು ಜೋಡಿಸುವ ಕಷ್ಟವೂ ತಪ್ಪುತ್ತದೆ: ಕಾಲವೂ ಉಳಿಯುತ್ತದೆ: ಅಕ್ಷರಗಳು ಪಂಕ್ತಿರೇಖೆಯ ಕೆಳಕ್ಕೆ ಇಳಿಯದೆ ಇಂಗ್ಲಿಷಿನಲ್ಲಿರುವಂತೆ ಒಂದೇ ಸಾಲಿನಲ್ಲಿರುವುದರಿಂದ ಪಂಕ್ತಿಗಳು ಅಂದವಾಗಿ ಕಾಣುತ್ತವೆ. ಈ ಎಲ್ಲ ಕಾರಣಗಳಿಂದ ನೂತನ ಲಿಪಿ ಸಂಸ್ಕರಣವು ಅಪೇಕ್ಷಣೀಯವಾದುದಾಗಿರುವುದು. ಈ ಸಂಸ್ಕರಣದ ರೀತಿಯಲ್ಲಿ ಮುದ್ರಿಸಿದ "ಕನ್ನಡದ ಬಾವುಟ" ಎಂಬ 'ಶ್ರೀ'ಯವರ ಕವನವನ್ನು ಅವರ ಆ ಹೆಸರಿನ ಗ್ರಂಥದ ಆದಿಯಲ್ಲಿ ನೋಡಬಹುದು. ಮೊದಲು ಮೊದಲು ಆ ಮುದ್ರಣವು ವಿಲಕ್ಷಣವಾಗಿ ಕಾಣಬಹುದು: ಓದುವುದೂ ಸ್ವಲ್ಪ ತಡವಾಗಬಹುದು. ಆದರೆ ಇದೇನೂ ಅಂತಹ ಪ್ರಬಲವಾದ ಪ್ರತಿಬಂಧಕವಲ್ಲ: ರೂಢಿಯಿಂದ ನಿವಾರಣೆಯಾಗುವುದು. ಆದಕಾರಣ ಈ ಲಿಪಿಯನ್ನು ಎಷ್ಟು ಜಾಗ್ರತೆ ಆಚರಣೆಗೆ ತಂದರೆ ಅಷ್ಟೂ ಅನುಕೂಲ. ಕನ್ನಡ ಭಾಷೆ ಹಬ್ಬಿ ಹರಡುವುದಕ್ಕೆ ಇದು ಬಹಳ ಸಹಾಯಮಾಡುತ್ತದೆ: ಅಚ್ಚುಕೂಟದ ತೊಡಕೂ ಕಡಮೆಯಾಗುತ್ತದೆ. 'ಶ್ರೀ'ಯವರು ಯೋಚಿಸಿರುವ ಈ ನೂತನ ತಿದ್ದುಪಾಟು ಕನ್ನಡದ ಬರವಣಿಗೆ ಮತ್ತು ಮುದ್ರಣದಲ್ಲಿ ಮತ್ತೊಂದು ಕ್ರಾಂತಿಯನ್ನುಂಟುಮಾಡುವುದಾಗಿರುತ್ತದೆ.

ಶ್ರೀ ಶ್ರೀಕಂಠಯ್ಯನವರು ತಮ್ಮ ಜೀವನವನ್ನು ಕನ್ನಡಕ್ಕೆ ಮುಡಿಪಾಗಿಟ್ಟಿದ್ದಾರೆ. ಕನ್ನಡ ನುಡಿಯು ಹಬ್ಬಿ ಹರಡಿ ಕನ್ನಡ ನಾಡು ಒಂದಾಗಿ ಕನ್ನಡಿಗರು ಒಗ್ಗಟ್ಟಾಗಿ ಕನ್ನಡ ಬಾವುಟದ ಅಡಿ ನೆರೆದು ಮೆರೆಯುವಂತಾಗಬೇಕೆಂಬುದು ಅವರ ಮಹತ್ತಾದ ಆಕಾಂಕ್ಷೆ. ಇದಕ್ಕೋಸ್ಕರ ಅವರು ಅವಿಶ್ರಾಂತರಾಗಿ ದುಡಿಯುತ್ತಿದ್ದಾರೆ. ನಾನಾ ಮುಖವಾಗಿ ಕನ್ನಡ ಸೇವೆಯನ್ನು ಮಾಡುತ್ತಿದ್ದಾರೆ. ಕನ್ನಡ ಕವನಕ್ಕೆ ಹೊಸ ಮಾರ್ಗವನ್ನು ತೋರಿಸಿ ಹೊಸ ಕಳೆಯನ್ನು ಕೊಟ್ಟಿರುವರು. ಕನ್ನಡ ನಾಡಿನ ಕನ್ನಡಿಗರನ್ನು ಜಾಗ್ರತಿಗೊಳಿಸಿರುವರು: ಕನ್ನಡ ರಾಷ್ಟ್ರವನ್ನು ಕಟ್ಟಬೇಕೆಂದು ಶ್ರಮಿಸುತ್ತಿರುವರು: ಕನ್ನಡ ಬಾವುಟವನ್ನು ಕಂಡುಹಿಡಿದು ಎತ್ತಿ ಹಿಡಿದು ಕನ್ನಡಿಗರನ್ನು ಕೂಗಿ ಎಬ್ಬಿಸಿ ಬಾವುಟದಡಿ ಬಂದು ಸೇರುವಂತೆ

ಹುರಿದುಂಬಿಸುತ್ತಿರುವರು. ಮೈಸೂರು ಮಕ್ಕಳಿಗೆ ಮೈಸೂರಿನ ಮೇಲ್ಮೆಯನ್ನು ಹಾಡಿ ತೋರಿಸಿ ಮೈಸೂರಿನಮೇಲೆ ಹೆಮ್ಮೆಯನ್ನು ಹುಟ್ಟಿಸಿ ಅವರ ದೇಶಭಕ್ತಿಯನ್ನು ಗಾಢವಾಗಿ ಮಾಡುತ್ತಿರುವರು. ಗಾಢವಾದ ರಾಜಭಕ್ತಿ ಪ್ರಜೆಗಳಲ್ಲಿ ಬೇರೂರಿ ನಲಿಯುವಂತೆ ಉಲಿಯುವಂತೆ ಚಿತ್ತಾಕರ್ಷಕವಾದ ಪ್ರಗಾಥವನ್ನು ಹಾಡಿರುವರು. ಕನ್ನಡವೇ ಅವರ ಜೀವ, ಕನ್ನಡವೇ ಅವರ ಬಾಳು, ಕನ್ನಡವೇ ಅವರ ಸರ್ವಸ್ವ. ಈ ಪ್ರಕಾರ ಅವರು ಕನ್ನಡಕ್ಕೆ ಮೀಸಲಾಗಿರುವುದು ಕನ್ನಡದ ಪುಣ್ಯ, ಕನ್ನಡಿಗರ ಸುಕೃತ, ಕನ್ನಡ ನಾಡಿನ ಸುಯೋಗ.

ಬಿ. ಪುಟ್ಟಯ್ಯ

# ವ್ಯಾಸಂಗ ಗೋಷ್ಠಿಯ ನೆನಪು

ಈಗ ನಾಲ್ಕು ವರ್ಷಗಳ ಹಿಂದೆ ಬೆಂಗಳೂರು ಕಾಲೇಜೊಂದರಲ್ಲಿ ಅಧ್ಯಾಪಕನಾಗಿದ್ದೆನು. ನಾನು ಮೈಸೂರು ಮಹಾರಾಜ ಕಾಲೇಜಿನಲ್ಲಿ ವಿದ್ಯಾರ್ಥಿಯಾಗಿದ್ದಾಗ "ಶ್ರೀ"ಯವರು ನನ್ನ ಗುರುಗಳಾಗಿದ್ದರು. ಮೂರು ವರ್ಷ ಕಾಲ ಅವರಲ್ಲಿ ಇಂಗ್ಲಿಷ್ ಸಾಹಿತ್ಯದ ವ್ಯಾಸಂಗ ಮಾಡಿದೆ. ಆಗಿನಿಂದಲೇ ಅವರಲ್ಲಿ ಪೂಜ್ಯಭಾವ ನನ್ನ ಮನಸ್ಸಿನಲ್ಲಿ ನೆಲಸಿತು. ಬೆಂಗಳೂರಿನಲ್ಲಿ ಅಧ್ಯಾಪಕನಾಗಿದ್ದಾಗ ಅವರಲ್ಲಿ ಮತ್ತೆ ಇಂಗ್ಲಿಷ್ ಸಾಹಿತ್ಯದ ವ್ಯಾಸಂಗ ಮುಂದುವರಿಯುವ ಸುಯೋಗ ನನಗೆ ದೊರೆಯಿತು. ಸೆಂಟ್ರಲ್ ಕಾಲೇಜಿನಲ್ಲಿ "ಶ್ರೀ"ಯವರ ನೇತೃತ್ವದಲ್ಲಿ ಅಧ್ಯಾಪಕ ವರ್ಗದವರೂ ವಿಶೇಷವಾಗಿ ಇಂಗ್ಲಿಷ್ ಸಾಹಿತ್ಯ ವ್ಯಾಸಂಗ ಮಾಡುವ ವಿದ್ಯಾರ್ಥಿಗಳೂ ಕಲೆತು ಉತ್ತಮ ಸಾಹಿತ್ಯ ಗ್ರಂಥಗಳನ್ನು ವಿಶಾಲ ದೃಷ್ಟಿಯಿಂದ ಓದಿ ವಿಚಾರಮಾಡಿ ಆನಂದಪಡುವ ವ್ಯಾಸಂಗ ಗೋಷ್ಠಿ (Seminar) ಏರ್ಪಾಡಾಯಿತು. ಹದಿನೈದು ದಿನಗಳಿಗೊಮ್ಮೆ ಆ ವ್ಯಾಸಂಗ ಗೋಷ್ಠಿ ಸೇರುತ್ತಿತ್ತು. ಅಲ್ಲಿ ವ್ಯಾಸಂಗ ಮಾಡುವ ಗ್ರಂಥಗಳು ಕೇವಲ ಇಂಗ್ಲಿಷ್ ಸಾಹಿತ್ಯದ್ದಲ್ಲದೆ ಪೌರಸ್ತ್ಯ ಸಾಹಿತ್ಯಕ್ಕೂ ಸಂಬಂಧಿಸುತ್ತಿದ್ದವು. ಕೆಲವುವೇಳೆ ತತ್ವ ಮತ್ತು ಮತ ಧರ್ಮಕ್ಕೆ ಸಂಬಂಧಪಟ್ಟ ಗ್ರಂಥಗಳನ್ನು ವ್ಯಾಸಂಗಮಾಡಿ ಅಲ್ಲಿ ನಡೆಯುವ ಚರ್ಚೆಯಲ್ಲಿ ಭಾಗವಹಿಸುತ್ತಿದ್ದೆವು.

ಅಲ್ಲಿ ವ್ಯಾಸಂಗಮಾಡುತ್ತಿದ್ದ ಗ್ರಂಥಗಳು ಗದ್ಯ, ಪದ್ಯ, ನಾಟಕ, ಸಣ್ಣಕತೆ, ನೀಳ್ಗತೆಗಳನ್ನು ಒಳಗೊಂಡಿದ್ದವು. ಒಂದು ಸಲ ಮ್ಯಾಥ್ಯೂ ಆರ್ನಾಲ್ಡರ "ಸಂಸ್ಕೃತಿ ಮತ್ತು ನಿರಂಕುಶ ಜೀವನ" (*Culture and Anarchy*) ಎಂಬ ಗ್ರಂಥವನ್ನು ವಿಮರ್ಶೆಗೆ ಇಟ್ಟುಕೊಂಡಿದ್ದೆವು. ಮ್ಯಾಥ್ಯೂ ಆರ್ನಾಲ್ಡರೆಂದರೆ "ಶ್ರೀ"ಯವರಿಗೆ ವಿಶೇಷ ಅಭಿಮಾನವೆಂದು ನಾವು ವಿದ್ಯಾರ್ಥಿಗಳಾಗಿದ್ದಾಗಲೇ ಅರಿತಿದ್ದೆವು. ಮತ್ತೊಮ್ಮೆ ಅವರ ವಿಮರ್ಶೆಯನ್ನು ಕೇಳಬೇಕೆಂಬ ಕುತೂಹಲ ನಮ್ಮಲ್ಲಿ ಕೆರಳಿತು. ಆ ದಿನ ಸೆಮಿನಾರ್ ಸಭೆಯ ಪ್ರಾರಂಭದಲ್ಲಿ ವಿಷಯ ಪ್ರವೇಶಮಾಡಿಸಿ, ವಿಮರ್ಶೆ ಮಾಡಲು ಯಾವ ವಿಚಾರಗಳನ್ನು ಇತರರು ಎತ್ತಿ ಮಾತನಾಡಬಹುದೆಂಬ ಸೂಚನೆ ಕೊಡುವುದು "ಶ್ರೀ"ಯವರ ಕೆಲಸವಾಗಿದ್ದಿತು. ಮ್ಯಾಥ್ಯೂ ಆರ್ನಾಲ್ಡರ ಅಭಿಪ್ರಾಯಗಳಿಗೂ "ಶ್ರೀ"ಯವರ ಅಭಿಪ್ರಾಯಗಳಿಗೂ ಬಹುಮಟ್ಟಿಗೆ ಸಾಮರಸ್ಯವಿದ್ದುದನ್ನು ಅರಿತೆವು. ಆ ಅಭಿಪ್ರಾಯಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಸೂಚಿಸುತ್ತೇನೆ. ಸಂಸ್ಕೃತಿ ಎಂದರೆ ಮನುಷ್ಯನಲ್ಲಿ ಹುದುಗಿರತಕ್ಕ ಶಕ್ತಿಗಳ ಆವಿರ್ಭಾವ ಅಥವಾ ವಿಕಾಸ. ಯಾವದು ಮನುಷ್ಯನ ಮನಸ್ಸನ್ನೂ ಹೃದಯವನ್ನೂ ಹೂವಿನಂತೆ ಅರಳಿಸಿ ಘಮಘಮಿಸುವುದೋ ಅದೇ ನಿಜವಾದ ಸಂಸ್ಕೃತಿ. ಇಂತಹ ಸಂಸ್ಕೃತಿಯನ್ನು ಪಡೆಯುವ ಬಗೆಯಾದರೂ ಯಾವದು? ಇದಕ್ಕೆ ಉತ್ತರ: ಪ್ರಪಂಚದಲ್ಲಿ ಶ್ರೇಷ್ಠವೆಂದು ಎಲ್ಲರಿಂದಲೂ ಆದರಿಸಲ್ಪಡುತ್ತಿರುವ ಸಾಹಿತ್ಯಜ್ಞಾನದಿಂದಲೂ, ಲೋಕಾನುಭವದಿಂದಲೂ, ಸೌಂದರ್ಯೋಪಾಸನೆಯಿಂದಲೂ ನಮ್ಮ ಜೀವನವು ಸಂಸ್ಕೃತಜೀವನವಾಗಬಲ್ಲದು. ಎರಡೇ ಮಾತಿನಲ್ಲಿ ಹೇಳಬೇಕಾದರೆ ಸಂಸ್ಕೃತಿ

ಎಂದರೆ "ಸವಿ ಮತ್ತು ಬೆಳಕು" ("Sweetness and Light"). ಅಂದರೆ ಸೌಂದರ್ಯದ ಸವಿ, ಜ್ಞಾನದ ಬೆಳಕು. ಒಂದರಿಂದ ಪ್ರೇಮ ಮತ್ತೊಂದರಿಂದ ಜ್ಞಾನ. ತುಂಬಿದ ಜೀವನ ಇವೆರಡರ ಸಮ್ಮಿಳನ. ಇದನ್ನು ಬಿಟ್ಟರೆ ಅಸಂಸ್ಕೃತ ಜೀವನ, ಸ್ವೈರವೃತ್ತಿ, ಅನಾಯಕತ್ವ (Anarchy). ಸುಂದರಜೀವನ ಗ್ರೀಕರ ಆದರ್ಶ. ಧಾರ್ಮಿಕ ಜೀವನ ಕ್ರೈಸ್ತ ಧರ್ಮದ ತಿರುಳು. ಆಧುನಿಕ ಜೀವನದಲ್ಲಿ ಇವೆರಡೂ ಸಂಗಮವಾಗಬೇಕೆಂಬ ಹೆಬ್ಬಯಕೆ ಮ್ಯಾಥ್ಯೂ ಆರ್ನಾಲ್ಡರದು. "ಶ್ರೀ"ಯವರ ಆಸೆಯೇ ಇದು. ಸಾಹಿತ್ಯ ಯಾವ ದೇಶದ್ದಾದರೂ ಅವೆಲ್ಲಕ್ಕೂ ಮಾನವಹೃದಯವೇ ಮಾತೃಸ್ಥಾನವಾದದ್ದರಿಂದ ಸುಸಂಸ್ಕೃತರಿಂದ ಪ್ರಪಂಚದ ಸಾಹಿತ್ಯದ ಗ್ರಂಥಗಳೆಲ್ಲವೂ ಸಮಾನವಾಗಿ ಗೌರವಿಸಲ್ಪಡತಕ್ಕವೆಂಬ ಭಾವ ನಮ್ಮ ಮನಸ್ಸಿನಲ್ಲಿ ಮೂಡುವಂತೆ "ಶ್ರೀ"ಯವರು ಆ ದಿನ ಸ್ಫೂರ್ತಿಯುತವಾಗಿ ಭಾಷಣಮಾಡಿದರು.

ಮತ್ತೊಮ್ಮೆ ಜಾನ್ ಸ್ಟುವರ್ಟ್ ಮಿಲ್ ಎಂಬ ಆಂಗ್ಲೇಯ ದಾರ್ಶನಿಕನ "ಧರ್ಮ ತತ್ತ್ವವನ್ನು ಕುರಿತ ಮೂರು ಪ್ರಬಂಧಗಳು" (*Three Essays on Religion*) ಎಂಬ ಪುಸ್ತಕ ಪರಿಶೀಲನೆಗೆ ಬಂದಿತ್ತು. ನಿಜವಾದ ಸಾಹಿತ್ಯ ಪ್ರೇಮಿಗೆ ಧರ್ಮದ ವಿಮರ್ಶೆ ಎಷ್ಟು ಆವಶ್ಯಕವೆಂಬ ವಿಚಾರವನ್ನು ಮನಮುಟ್ಟುವಂತೆ ವಿವರಿಸಿ "ಶ್ರೀ"ಯವರು ನಮ್ಮ ಮನಸ್ಸಿನ ಮೇರೆಯನ್ನು ವಿಶಾಲಗೊಳಿಸಿದರು. ಮತಧರ್ಮಗಳ ವ್ಯಾಸಂಗವನ್ನು ಎಷ್ಟು ಆಳವಾಗಿ "ಶ್ರೀ"ಯವರು ಮಾಡಿರುವ ರೆಂಬ ಭಾವನೆ ನಮ್ಮನ್ನು ಬೆರಗುಗೊಳಿಸಿ ಅವರಂತೆಯೇ ನಾವೂ ವ್ಯಾಸಂಗಮಾಡ ಬೇಕೆಂಬ ಪ್ರೇರಣೆ ಉಂಟಾಯಿತು.

ಒಂದು ಸಲ ಪ್ಲೇಟೋವಿನ "ಆದರ್ಶ ರಾಜ್ಯ" (*Republic*) ನಮ್ಮ ಸೆಮಿನಾರಿನ ಹಬ್ಬದ ಊಟವಾಗಿತ್ತು. ಪ್ಲೇಟೋವಿನ ತತ್ತ್ವಗಳು ಮನುಷ್ಯನ ವಿಚಾರ ಪ್ರಪಂಚದಲ್ಲಿ ಹೊಸ ಆಲೋಚನೆಗಳನ್ನು ಹೇಗೆ ಉದ್ಬೋಧಗೊಳಿಸಿದುವು, ಅವು ಹೇಗೆ ಕ್ರಾಂತಿಕಾರಕವಾದುವು—ಎಂಬ ವಿಷಯವನ್ನು "ಶ್ರೀ"ಯವರು ನಿರೂಪಿಸಿ ಪುರಾತನ ಗ್ರೀಕ್ ಸಂಸ್ಕೃತಿಯ ಸ್ವರ್ಣಯುಗದ ಕಡೆಗೆ ನಮ್ಮ ಮನಸ್ಸನ್ನು ಸೆಳೆದರು. ಸಮಾಜವು ವ್ಯಕ್ತಿಯ ಬೃಹದ್ರೂಪ (Society is individual writ large) ಎಂಬುದು ಪ್ಲೇಟೋವಿನ ಅಭಿಪ್ರಾಯ. ಆದರ್ಶ ಮನುಷ್ಯನಿಂದ ಆದರ್ಶ ಸಮಾಜವಾಗಬಲ್ಲದು. ಆದರ್ಶ ಮನುಷ್ಯನ ನಿರ್ಮಾಣ ಆದರ್ಶ ಶಿಕ್ಷಣದಿಂದ ಸಾಧ್ಯವಾಗಬಲ್ಲದು. ಸತ್ಸಂತಾನಶಾಸ್ತ್ರ (Eugenics) ಇದಕ್ಕೆ ನೆರವಾಗಬಲ್ಲದು. ಸ್ತ್ರೀ ಪುರುಷರಿಬ್ಬರೂ ಸಮಾನ ಶಿಕ್ಷೆಗೂ, ಅಧಿಕಾರಕ್ಕೂ ಅರ್ಹರು. ಗಂಡಸರಂತೆ ಹೆಂಗಸರಿಗೂ ಶಾರೀರಕ ವ್ಯಾಯಾಮ, ಗಣಿತ, ಸಂಗೀತ ಶಿಕ್ಷೆಯನ್ನು ಕೊಡುವುದು ಆವಶ್ಯಕ. ಶರೀರಕ್ಕೆ ವ್ಯಾಯಾಮವು ಹೇಗೆ ಆವಶ್ಯಕವೋ ಹಾಗೆ ಮನಸ್ಸಿಗೆ ಕಾವ್ಯ, ಕಲೆಗಳು ಆವಶ್ಯಕ. ಇವೇ ಮೊದಲಾದ ವಿಷಯಗಳು ನಿರೂಪಿಸಲ್ಪಟ್ಟುವು. ಅದೇ ಸಮಯದಲ್ಲಿ ಕವಿಗಳ ವಿಷಯದಲ್ಲಿ ಪ್ಲೇಟೋ ತೋರಿಸಿದ ಜುಗುಪ್ಸೆಯೂ ಚರ್ಚೆಗೆ ಬಂತು. ಇದಕ್ಕೆ ಮುಖ್ಯಕಾರಣವೇನಿರಬಹುದೆಂದು ವಿಚಾರಿಸಿ ಗ್ರೀಕ್ ಕವಿಗಳು ದೇವತೆಗಳ ಸಂಬಂಧವಾಗಿ ಅಶ್ಲೀಲ ಕತೆಗಳನ್ನು ಕಟ್ಟಿ ಪ್ರಚಾರಮಾಡಿ ಜ್ಞಾನದ

ಮುಂದೋಟಕ್ಕೆ ತಡೆಮಾಡುತ್ತಿದ್ದುದ್ದರಿಂದ ಈ ರೀತಿ ಪ್ಲೇಟೋ ಅಭಿಪ್ರಾಯ ಪಟ್ಟಿರಬಹುದೆಂದು ತೀರ್ಮಾನಕ್ಕೆ ಬಂದೆವು.

ಸಂಸ್ಕೃತ ಸಾಹಿತ್ಯವನ್ನು ನಮ್ಮ ಸೆಮಿನಾರಿನಲ್ಲಿ ಆಗಾಗ ವಿಮರ್ಶಿಸುತ್ತಿದ್ದೆವು. ಒಂದು ದಿನ ಕಠೋಪನಿಷತ್ತಿನ ವ್ಯಾಸಂಗ ನಡೆಯಿತು. ನಚಿಕೇತಸಿಗೆ ಹುಟ್ಟಿದ್ದ ಅರಿವಿನ ಹಸಿವು ಮೇರೆ ಇಲ್ಲದ್ದು; ಎರಡು ದಿನದ ಬಾಳಿನ ಬೆಡಗಿಗೆ ಮನ ಸೋಲದೆ ತತ್ವದ ಕೊನೆ ಮುಟ್ಟಲೇಬೇಕೆಂಬ ಛಲ ಎಷ್ಟರ ಮಟ್ಟಿನದೆಂದು ಚಿರಗಾಗುವಂತೆ ಬಣ್ಣಿಸಿದ "ಶ್ರೀ"ಯವರ ಕಾವಿನ ನುಡಿ ನಾನೆಂದೂ ಮರೆಯುವಂತಿಲ್ಲ. ಇದೇ ರೀತಿ ಬೈಬಲಿನ "ಜೋಬಿನ ಉಪಾಖ್ಯಾನ" ವನ್ನು (Book of Job) ವಿಮರ್ಶೆ ಮಾಡುವಾಗಲೂ ತಮ್ಮ ನಿಜವಾದ ಧರ್ಮಶ್ರದ್ಧೆಯನ್ನು ತೋರ್ಪಡಿಸಿದರು. ಶೂದ್ರಕನ "ಮುದ್ರಾ ರಾಕ್ಷಸ", ಭಾಸನ "ಪ್ರತಿಮಾ ನಾಟಕ"ಗಳನ್ನೂ ಕುರಿತು ಸೂಕ್ಷ್ಮವಾದ ವಿಮರ್ಶೆಯನ್ನು "ಶ್ರೀ"ಯವರು ಮಾಡಿದರು. ಈ ಸಂದರ್ಭದಲ್ಲಿ ರಾಜಕೀಯ ಘಟನೆಯೊಂದನ್ನು ನಾಟಕ ರೂಪಕ್ಕೆ ಹೇಗೆ ತಿರುಗಿಸಬಹುದು ಎಂಬುದನ್ನೂ, ಸಂಸ್ಕೃತ ನಾಟಕದ ಮೇಲೆ ಗ್ರೀಕ್ ನಾಟಕದ ಪ್ರಭಾವವಿರಬಹು ದೆಂಬುದನ್ನೂ ಸಾಧಾರವಾಗಿ ಅವರು ನಿರೂಪಿಸಿದರು.

ಧರ್ಮ ಮತ್ತು ಮತ ವಿಚಾರಗಳಲ್ಲಿ ಸಂಕುಚಿತಭಾವ ಲೇಶ ಮಾತ್ರವೂ "ಶ್ರೀ"ಯವರಲ್ಲಿ ಕಾಣುತ್ತಿರಲಿಲ್ಲ. ಉಪನಿಷತ್ತು, ಗೌತಮ ಬುದ್ಧನ ಉಪದೇಶ, ಏಸುಕ್ರಿಸ್ತನ ಜೀವನ ಮತ್ತು ತ್ಯಾಗ, ಭಗವದ್ಗೀತೆಯ ತತ್ವೋಪದೇಶ—ಎಲ್ಲವನ್ನೂ ಸೆಮಿನಾರಿನಲ್ಲಿ ವ್ಯಾಸಂಗ ಮಾಡಿದ ನೆನಪು ನನ್ನಲ್ಲಿ ಉಳಿದಿದೆ. ಒಂದೇ ರೀತಿಯ ಶ್ರದ್ಧೆಯಿಂದಲೂ ಪೂಜ್ಯಭಾವದಿಂದಲೂ ಮತಾಂತರ ಗ್ರಂಥಗಳನ್ನು ನಿಷ್ಪಕ್ಷಪಾತ ವಾಗಿ ವ್ಯಾಸಂಗಮಾಡುವ ಧರ್ಮದ ಹೊಸದೃಷ್ಟಿ ತಮ್ಮಲ್ಲಿರುವುದನ್ನು ಇತರ ರಲ್ಲಿಯೂ ಉಂಟಾಗುವಂತೆ ಮಾಡಿದರು. ಇದೇ ಭಾವವು ಕನ್ನಡ ಸಾಹಿತ್ಯದ ವಿಷಯದಲ್ಲಿ ಇವರಿಗೆ ಇರುವುದು ಎಲ್ಲರಿಗೂ ತಿಳಿದ ಅಂಶವೇ ಆಗಿರುತ್ತದೆ. ಜೈನ ಸಾಹಿತ್ಯ, ವೀರಶೈವ ಸಾಹಿತ್ಯ, ಬ್ರಾಹ್ಮಣ ಸಾಹಿತ್ಯ ಕನ್ನಡ ನಾಡಿನವರಿಗೆಲ್ಲಾ ಸೇರಿದ ಭಾಗ್ಯವೆಂದೂ, ಈ ಮೂರು ಸಾಹಿತ್ಯಗಳನ್ನೂ ಮತದ ದೃಷ್ಟಿಯನ್ನು ಒತ್ತಟ್ಟಿಗಿಟ್ಟು, ಸಾಹಿತ್ಯಕ್ಕಾಗಿಯೇ ಅವುಗಳ ಅನುಭವ ಪಡೆಯುವ ಅಭ್ಯಾಸ ನಮ್ಮದಾಗಬೇಕೆಂದೂ ಅವರ ಉಪನ್ಯಾಸಗಳಲ್ಲಿ "ಶ್ರೀ"ಯವರು ಸಾರುತ್ತಿರುತ್ತಾರೆ. ಇಂತಹ ಉದಾರ ಭಾವನೆ "ಶ್ರೀ"ಯವರದು.

ಚರ್ಚೆಯಲ್ಲಿ ಭಾಗವಹಿಸದೆ ಹಿಂದುಳಿದ ನಮ್ಮಲ್ಲಿ ಕೆಲವರನ್ನು ಹುರಿದುಂಬಿಸಿ ನಮಗೆ ತಿಳಿಯದೆಯೇ ವಿಚಾರ ಪ್ರವಾಹದಲ್ಲಿ ಈಜುವಂತೆ ಅವರು ಮಾಡು ತ್ತಿದ್ದುದನ್ನು ಕೃತಜ್ಞತಾಪೂರ್ವಕವಾಗಿ ನೆನಪಿಗೆ ತಂದುಕೊಳ್ಳುತ್ತಿದ್ದೇವೆ.

"ಶ್ರೀ"ಯವರು ಈಗಿನ ವಿದ್ಯಾರ್ಥಿಗಳಿಗೆ ರಾಜಕೀಯ ವಿಷಯಗಳಲ್ಲಿರುವ ಆಸಕ್ತಿಯನ್ನು ಅರಿತು ಆ ವಿಷಯವಾಗಿ ಜವಾಬ್ದಾರಿಯಿಂದಲೂ ವಿಚಾರಪರತೆ ಯಿಂದಲೂ ಕೂಡಿದ ನಿಷ್ಪೃಷ್ಟಜ್ಞಾನ ಉಂಟಾಗಲು ಸೆಮಿನಾರೂ ಕೂಡ ಸಾಧಕ ವಾಗಬಹುದೆಂದು ಎಣಿಸಿದರು. ಇದರ ಸಲುವಾಗಿ ಒಮ್ಮೆ ಪಂಡಿತ ಜವಾಹರಲಾಲ್ ನೆಹ್ರೂರವರ ಆತ್ಮಕಥೆಯನ್ನು ವ್ಯಾಸಂಗಕ್ಕೆ ಇಟ್ಟುಕೊಂಡು ಅದರಿಂದ

ಸೂಚಿತವಾದ ರಾಜಕೀಯ, ಸಾಮಾಜಿಕ ಮತ್ತು ಧಾರ್ಮಿಕ ಸಮಸ್ಯೆಗಳನ್ನು ಚರ್ಚೆಗೆ ತಂದರು. ಆ ದಿನ ಸೆಮಿನಾರಿನ ಸಭೆ ಕಿಕ್ಕಿರಿದಿತ್ತು. ವಿಚಾರಪೂರಿತವಾದ ವಾಕ್ಸರಣಿಯ ಸುರಿಮಳೆಯಾಯಿತು. ಹೆಚ್ಚು ಜನ ವಿದ್ಯಾರ್ಥಿಗಳು ಚರ್ಚೆಯಲ್ಲಿ ಭಾಗವಹಿಸಿದ್ದರು. ಒಟ್ಟಿನ ಮೇಲೆ ಯಶಸ್ವಿಯಾಗಿ ಆ ದಿನದ ಸಭೆಯು ಕೊನೆಗಂಡಿತು. ಹೀಗೆಯೇ ಮತ್ತೊಮ್ಮೆ ಹಿಟ್ಲರನ "ನನ್ನ ಹೋರಾಟ" (*Mein Kampf*) ಎಂಬುದನ್ನು ಚರ್ಚೆಗಾಗಿ ಇಟ್ಟುಕೊಂಡಿದ್ದೆವು. ಅಂದರೆ ಈಗ ಐದು ವರ್ಷಗಳ ಹಿಂದಿನ ಮಾತು. ಈಗಿನ ಯುದ್ಧದ ಸೂಚನೆ ಆಗ ತೋರದಿದ್ದರೂ ಆ ಗ್ರಂಥವನ್ನು ಸೆಮಿನಾರಿಗಾಗಿ ಓದಿದವರಿಗೆಲ್ಲಾ ಮುಂದಿನ ಯುದ್ಧದ ಬಿಸಿ ಅದರಲ್ಲಿದ್ದಂತೆ ತೋರಿತು. ಯೆಹೂದ್ಯರಲ್ಲಿ ಹಿಟ್ಲರನು ತೋರಿದ ದ್ವೇಷ; ಜರ್ಮನರೇ ನಿಜವಾದ ಆರ್ಯರು, ಮಾನವ ಕೋಟಿಯಲ್ಲಿ ಅತ್ಯುತ್ತಮ ವರ್ಗಕ್ಕೆ ಸೇರಿದವರು, ಅವರ ಒಡೆತನವೇ ಭಾವೀ ಪ್ರಪಂಚದ ಒಡೆತನವಾಗಬೇಕು ಎಂಬ ದುರಭಿಮಾನ; ತನ್ನ ಉದ್ದೇಶಗಳು ನೆರವೇರಲು ಏನು ಬೇಕಾದರೂ ಮಾಡಲು ತೊಡಗಿದ ಅವನ ಹಟಮಾರಿತನ—ಇವೆಲ್ಲವೂ ಆಗಲೇ ಚರ್ಚೆಗಳಲ್ಲಿ ಬಯಲಿಗೆ ಬಂದವು. ವಿಶ್ವ ಶಾಂತಿಗೆ, ಪ್ರಜಾಪ್ರಭುತ್ವ ತತ್ವಕ್ಕೆ ಹಿಟ್ಲರನ ನಾಜಿಸಮ್ (ಸರ್ವಾಧಿಕಾರ ತತ್ವ) ಕುಠಾರಪ್ರಾಯವಾಗದಿರದೆಂದು ಆಗಲೇ ಮನಗಂಡೆವು.

ಇವೇ ನನ್ನ ಕೆಲವು ನೆನಪುಗಳು. ಸೆಮಿನಾರಿನ ಏರ್ಪಾಡಿನಿಂದ "ಶ್ರೀ"ಯವರ ವಿದ್ಯಾರ್ಥಿವರ್ಗಕ್ಕೂ, ಸಹೋದ್ಯೋಗಿಗಳಿಗೂ ತುಂಬಾ ಪ್ರಯೋಜನವಾಗಿದೆ ಎಂದು ನನ್ನ ಅನುಭವದಿಂದ ಹೇಳಬಲ್ಲೆ. ಅವರ ನಂದಾದೀವಿಗೆಯಿಂದ ನನ್ನ ಸೊಡರನ್ನು ಹೊತ್ತಿಸಿಕೊಂಡಿದ್ದೇನೆ. ಅದರಿಂದ ನನಗೆ ಕೊಂಚ ಬೆಳಕು ಉಂಟಾಗಿ ಮುಂದಿನ ದಾರಿಯನ್ನು ಕಾಣುತ್ತಿದ್ದೇನೆ.

**ಎಂ. ಯಾಮುನಾಚಾರ್ಯ**

# ಶ್ರೀಕಂಠಯ್ಯನವರೂ ಜೈನ ಧರ್ಮವೂ

ಕನ್ನಡ ಸಾಹಿತ್ಯ ದೇವಿಯ ಮಂದಿರವನ್ನು ಜೀರ್ಣೋದ್ಧಾರಮಾಡಿ ಹಿಂದಿನ
ವೈಭವದುನ್ನತಿಯ ಪ್ರಭೆಯಿಂದ ತೇಜಃಪುಂಜವನ್ನಾಗಿಮಾಡಿ, ಇಡಿಯ ಭಾರತದ
ಕಣ್ಮನಗಳನ್ನು ಆ ಮಂದಿರದೆಡೆಗಾಕರ್ಷಿಸಿ, ನಮ್ಮ ಜನಾಂಗದ ಉಸಿರೂ ಕಣ್ಣೂ
ಆದ ನಮ್ಮ ತಾಯ್ನುಡಿಗೆ ಹೊಸದೊಂದು ಹುರುಪನ್ನೂ ನವೀನವಾದೊಂದು ಚೆಲು
ವನ್ನೂ ನವಚೈತನ್ಯವನ್ನೂ ಕೊಟ್ಟು, ಕಂದಿ ಕುಂದಿ ಬಳಲಿ ಬೆಂಡಾಗಿದ್ದ ಕನ್ನಡ
ತಾಯನ್ನು ನಾಡ ಹಬ್ಬದ ತೇರಿನ ಮೇಲಿಟ್ಟು, ಇಡಿಯ ಕನ್ನಡ ನಾಡಿನ ಅಣ್ಣ
ತಮ್ಮಂದಿರನ್ನೂ ಅಕ್ಕತಂಗಿಯರನ್ನೂ ಆ ಮಾತಾಯಿಯ ಆರಾಧನೆಗೆ ಪ್ರೀತಿಯ
ಆದರದಿಂದಲೂ ಪ್ರೇಮದ ಆವೇಶದಿಂದಲೂ ಭಕ್ತಿಯ ಭರದಿಂದಲೂ ಅಭಿಮಾನದ
ಅತಿಶಯದಿಂದಲೂ ತಮ್ಮದೇ ಒಂದು ಬಗೆಯ ವಿಶಿಷ್ಟ ಶೈಲಿಯ ಗೀತೆಗಳಿಂದ,
ಹಿತ ಮಿತ ಮೃದು ವಚನದಿಂದ, ದೇಶಾಭಿಮಾನ ಭಾಷಾಭಿಮಾನಗಳಿಂದ
ತುಂಬಿತುಳುಕುತ್ತಿರುವ ಸುಲಲಿತ ಲೇಖನಗಳಿಂದ, ಭಾವೋದ್ರೇಕಗೊಳಿಸುವ
ಹೃದಯಂಗಮವಾದ ಉಜ್ವಲ ಭಾಷಣಗಳಿಂದ, 'ಶ್ರೀ'ಯವರು ಎಲ್ಲರನ್ನೂ
ಕೂಗುತ್ತಿದ್ದಾರೆ. ತಮ್ಮ ಪ್ರತಿಭೆಗೂ ಪಾಂಡಿತ್ಯಕ್ಕೂ ಕನ್ನಡ ನಾಡಿನಮೇಲೆ
'ಶ್ರೀ'ಯವರಿಗಿರುವ ಹೃತ್ಪೂರ್ವಕವಾದ ಭಕ್ತಿಗೂ ಕನ್ನಡ ತಾಯಿಯ ಸೇವಾ
ಕಾರ್ಯದಲ್ಲಿ ತಾವು ಮಾಡಿರುವ ಮತ್ತು ಮಾಡುತ್ತಿರುವ ತ್ಯಾಗಕ್ಕೂ, ಪಡುತ್ತಿರುವ
ಶ್ರಮಕ್ಕೂ ಕನ್ನಡಿಗರೆಲ್ಲರೂ ಮನಸೋತು, ಕನ್ನಡ ತಾಯಿಯ ಆರಾಧನೆಗೆ ಗುಂಪು
ಗುಂಪಾಗಿ ಬಂದು ಸೇರುತ್ತಿದ್ದಾರೆ. ಕನ್ನಡ ಸಾಹಿತ್ಯಕ್ಕೆ ಜೀವವನ್ನೂ ಕಣ್ಣನ್ನೂ
ಸೊಬಗನ್ನೂ ಕೊಟ್ಟ ಜೈನರೂ ವೀರಶೈವರೂ ಬ್ರಾಹ್ಮಣರೂ ಎಲ್ಲರೂ 'ಶ್ರೀ'ಯವರು
ಎತ್ತಿ ಹಿಡಿದಿರುವ ಪವಿತ್ರವಾದ ಕನ್ನಡದ ಬಾವುಟದಡಿಯಲ್ಲಿ ಒಟ್ಟಾಗಿ ಸೇರಿ,
ಒಕ್ಕೊರಲಿಂದ ಕನ್ನಡ ತಾಯಿಯ ಗುಣಗಾನ ರೂಪವಾದ ಜಯಜಯಕಾರಗಳನ್ನು
ಮಾಡುತ್ತಾ 'ಶ್ರೀ'ಯವರನ್ನು ಮುಂದಿಟ್ಟುಕೊಂಡು ಆರಾಧನಾ ಮಂಟಪದೆಡೆಗೆ
ಉತ್ಸಾಹಗೊಂಡು ಒಮ್ಮುಖವಾಗಿ ನಡೆಯುತ್ತಿದ್ದಾರೆ. 'ಶ್ರೀ'ಯವರ ಅವಿಶ್ರಾಂತ
ದುಡಿತದ ಫಲವಾಗಿ ಕರ್ನಾಟಕದ ಎಲ್ಲ ಭಾಗಗಳೂ ಮತ್ತು ಎಲ್ಲ ಪಂಗಡಗಳೂ
ಒಟ್ಟಿಗೆ ಸೇರಿವೆ. ಎಲ್ಲ ಧರ್ಮೀಯರೂ 'ಶ್ರೀ'ಯವರನ್ನು ಕನ್ನಡ ಸಾಹಿತ್ಯಕ್ಷೇತ್ರದ
ನಾಯಕರೆಂದು ಒಮ್ಮತದಿಂದ ಒಪ್ಪಿಕೊಂಡಿರುತ್ತಾರೆ. 'ಶ್ರೀ'ಯವರು ತಮ್ಮ
ಪವಿತ್ರವಾದ ಗುರಿಯ, ಅಂದರೆ— ಕನ್ನಡ ಸಾಹಿತ್ಯದ ಪುನರುಜ್ಜೀವನ, ಕನ್ನಡದಲ್ಲಿ
ನವೀನ ಸಾಹಿತ್ಯ ನಿರ್ಮಾಣ, ಸಾಹಿತ್ಯ ದೃಷ್ಟಿಯಿಂದ ಕರ್ನಾಟಕದ ಏಕೀಕರಣ
ಇವುಗಳ— ಸಾಧನೆಯಲ್ಲಿ ಬಂದ ತೊಡರುಗಳನ್ನು ನಿರ್ಭೀತಿಯಿಂದ ಬಿಡಿಸಿಕೊಂಡು,
ಸಾಧ್ಯವಾದೆಡೆಗಳಲ್ಲಿ ಅವುಗಳನ್ನು ಕತ್ತರಿಸಿ, ಧೈರ್ಯದಿಂದಲೂ ಜಯದ ಭರವಸೆ
ಯಿಂದಲೂ ಮುನ್ನುಗ್ಗುತ್ತಿದ್ದಾರೆ. ಕನ್ನಡ ಮಾತೆಯ ಪ್ರಿಯಪುತ್ರರಾದ 'ಶ್ರೀ'
ಯವರನ್ನು ಎಲ್ಲ ಧರ್ಮಗಳವರೂ ತಮ್ಮ ಧರ್ಮೀಯರೆಂದು ಹೇಳಿಕೊಳ್ಳುವಷ್ಟು
ಸಹನೆಯೂ ನಿಷ್ಪಕ್ಷಪಾತವೂ ಸತ್ಯಪ್ರೇಮವೂ ಕಲಾಭಿಮಾನವೂ ಸಾಹಿತ್ಯೋಪಾ
ಸನಾಗುಣವೂ ಧರ್ಮಾನುಷ್ಠಾನವೂ 'ಶ್ರೀ'ಯವರಲ್ಲಿ ಮೂರ್ತೀಭವಿಸಿವೆ.

ಜೈನರಂತೂ 'ಶ್ರೀ'ಯವರನ್ನು ಜೈನಬಂಧುಗಳೆಂದೇ ಭಾವಿಸಿದ್ದಾರೆ. 'ಶ್ರೀ'ಯವರ ಶಾಂತ ಸ್ವಭಾವ, ಸಂಸಾರದಲ್ಲಿ ನಿರ್ಲಿಪ್ತತೆ, ಹೃದಯ ಪರಿಪಕ್ವತೆ, ವೈರಾಗ್ಯ ಪ್ರಬೋಧಕವಾದ ಚಿತ್ತವೃತ್ತಿ, ತ್ಯಾಗಿಸಾಧ್ಯವಾದ ಔದಾರ್ಯ, ಯೋಗಿಸಾಧ್ಯವಾದ ಸರಳಜೀವನ—ಈ ಉದಾತ್ತಗುಣಗಳಿಗಾಗಿ ಜೈನರು 'ಶ್ರೀ'ಯವರನ್ನು ಉತ್ತಮತರದ ಜೈನ ಬಂಧುಗಳೆಂದು ಪರಿಗಣಿಸುವುದು ಸಹಜವೇ ಸರಿ. 'ಶ್ರೀ'ಯವರು ಪರಿಶುದ್ಧ ಜೀವನವನ್ನು ತಮ್ಮ ಜೀವನದ ಗುರಿಯನ್ನಾಗಿಟ್ಟುಕೊಂಡಿರುವುದರಿಂದ, ಈ ಜೀವನಸಾಧನೆಗೆ ಎಲ್ಲ ಧರ್ಮಗಳ ಸಾಹಿತ್ಯಗಳಿಂದ ಸಲಕರಣೆ ಸಾಮಗ್ರಿಗಳನ್ನು ಆರಿಸಿಕೊಂಡಿರುತ್ತಾರೆ. ಶುದ್ಧ ಜೀವನದ ಸಾಕ್ಷಿಗಳಾಗಿರುವ ಎಲ್ಲ ಮಹನೀಯರೂ ಇವರ ಪೂಜೆಗೆ ಪಾತ್ರರಾಗಿದ್ದಾರೆ. ಶಾಂತಿ ವೈರಾಗ್ಯಗಳು ಜೈನ ಜೀವನ ಕ್ರಮದ ಹೆಗ್ಗುರುತುಗಳಾಗಿವೆ. 'ಶ್ರೀ' ಯವರ ಜೀವನ ಚರಿತ್ರೆ ಈ ರಸಗಳಿಂದ ತುಂಬಿ ತುಳುಕುತ್ತಿದೆ. ಅರಿವನ್ನು ಧರೆಯಲ್ಲಿ ಮೆರೆಯಿಸಿದವರು ತೀರ್ಥಂಕರ ಪರಮದೇವರು. ತೀರ್ಥಂಕರರೆಂದರೆ ಜ್ಞಾನದಾನಿಗಳು, ಧರ್ಮದಾನಿಗಳು, ಬೆಳಕನ್ನು ಹರಿಸಿದವರು. ಈ ಮಹಾತ್ಮರ ಗುರಿಯನ್ನೇ 'ಶ್ರೀ'ಯವರು ತಮ್ಮ ಬದುಕಿನ ಹೆಗ್ಗುರಿಯಾಗಿಟ್ಟುಕೊಂಡು ತಮ್ಮ ತನುಮನಧನಗಳನ್ನು ಆ ಗುರಿಯ ಸಾಧನೆಗೆ ಮುಡಿಪಾಗಿಟ್ಟಿದ್ದಾರೆ. ಅನೇಕ ವಿಧಗಳಲ್ಲಿ ಬೆಳಕನ್ನು ಕನ್ನಡ ಜನತೆಯ ಬದುಕಿನಲ್ಲಿ ತುಂಬುತ್ತಿದ್ದಾರೆ. ಈ ಗುರಿಯೇ ಜೈನಾಚಾರ್ಯರ ಹಿರಿಯ ವಿವೇಕವಾಣಿ.

## ಧರ್ಮ

'ಶ್ರೀ'ಯವರ ಭಾಷಣಗಳಲ್ಲಿ ಜೈನ ಪಾರಿಭಾಷಿಕ ಶಬ್ದಗಳನ್ನು ಅನೇಕ ಸಾರಿ ಕೇಳಿದ್ದೇವೆ. ಅವರ ಒಂದು ಭಾಷಣದ ಈ ಕೆಳಗಿನ ವಾಕ್ಯಗಳು ಈ ವಿಷಯವನ್ನು ಸಮರ್ಥಿಸುತ್ತವೆ. "ಯಾವ ಪಾಪ ಕರ್ಮಗಳಿಂದ, ಅಜ್ಞಾನದಿಂದ, ಆಲಸ್ಯದಿಂದ ನಾವು ಸೋತು ಸುಕ್ಕಿದೆವೊ ಆ ಅಶುಭಾಸ್ರವಗಳು ಈಗ ತಡೆಗಟ್ಟಿ ಹಿಮ್ಮೆಟ್ಟುತ್ತಿವೆ. ಕರ್ಮಕ್ಷಯದಿಂದ ಬಂಧನ ದೂರವಾಗುತ್ತ ಮುಕ್ತಿ, ಆನಂದ, ಐಶ್ವರ್ಯ ಹತ್ತಿರ ಬರುತ್ತಿವೆ" ಎಂದೂ "ಈ ಅವಸರ್ಪಿಣಿ ಕಾಲದ ದುಸ್ಸಮದಲ್ಲಿ ಉತ್ಸರ್ಪಿಣಿಯ ಸುಷಮವನ್ನು ಕಾಣುತ್ತಿದ್ದೇವೆ"ಎಂದೂ ನುಡಿದಿರುತ್ತಾರೆ. 'ಶ್ರೀ'ಯವರು ಬೋಧಿಸಿರುವಂತೆ ಜೈನ ಪುರಾಣಗಳಲ್ಲಿ ಕಂಡುಬರುವ ಈ ಉತ್ಸರ್ಪಿಣಿ ಅವಸರ್ಪಿಣಿಗಳ ಮತ್ತು ಸುಷಮ, ದುಷ್ಷಮಗಳ ವಿಷಯವನ್ನು ಇಲ್ಲಿ ಸಂಕ್ಷೇಪಿಸಲಾಗಿದೆ.

ಉತ್ಸರ್ಪಿಣಿ ಅವಸರ್ಪಿಣಿಯೆಂದು ಜೈನರು ಯುಗಭೇದವನ್ನು ಮಾಡಿರುತ್ತಾರೆ. ಕಾಲವು ಉರುಳಿದಂತೆ ಇವು ಒಂದಾದಮೇಲೊಂದು ಬರುತ್ತಲೇ ಇರುತ್ತವೆ. ಉತ್ಸರ್ಪಿಣಿಯು ಅಭ್ಯುದಯ ಕಾಲ. ಜೀವಿಗಳ ಆಯುಷ್ಯ, ದೇಹ ಪ್ರಮಾಣ. ಸುಖ, ಸಂಪತ್ತು, ಬಲ, ವೈಭವ, ಧರ್ಮಾಸಕ್ತಿ, ಸತ್ಯಸಂಧತೆ ಇವುಗಳೆಲ್ಲವೂ ಈ ಕಾಲದಲ್ಲಿ ವೃದ್ಧಿಹೊಂದುತ್ತಾ ಹೋಗುತ್ತವೆ. ಅವಸರ್ಪಿಣಿಯಲ್ಲಿ ಇದಕ್ಕೆ ವಿರೋಧಪರಿಣಾಮವು ಕಂಡು ಬರುತ್ತದೆ. ಜೀವಿಗಳ ಶಕ್ತಿಯೂ, ಜ್ಞಾನವೂ, ಧರ್ಮಾಸಕ್ತಿಯೂ, ಸದ್ಗುಣವೂ ಕಡಮೆಯಾಗುತ್ತಾ ಹೋಗುತ್ತವೆ. ಈಗ ನಾವು ಜೈನ ಸಿದ್ಧಾಂತದ ಪ್ರಕಾರ ಅವಸರ್ಪಿಣಿ ಯುಗದಲ್ಲಿದ್ದೇವೆ. ಈ ಯುಗವನ್ನು

ಜೈನ ಸಿದ್ಧಾಂತವು ಆರು ಭಾಗಗಳನ್ನಾಗಿ ವಿಭಾಗಿಸಿದೆ. ಸುಷಮ (ಸುಖ) ದುಷ್ಷಮ (ದುಃಖ) ಎಂಬ ಸುಖ–ದುಃಖಮಾಪಕ ವಿಧಾನದಿಂದ ಈ ವಿಭಾಗಗಳನ್ನು ಮಾಡಲಾಗಿದೆ. ಈ ಯುಗದ ಕಾಲಚಕ್ರದ ಮೂರು ಭಾಗಗಳಲ್ಲಿ ಭೋಗಭೂಮಿಯ ಲಕ್ಷಣಗಳಿದ್ದು, ನಾಲ್ಕನೆಯ ಕಾಲದಲ್ಲಿ ಕರ್ಮಭೂಮಿಯು ಪ್ರಾರಂಭವಾಗುತ್ತದೆ. ಈ ಚತುರ್ಥಕಾಲವು ಬಹುಮುಖ್ಯವಾದುದು. ಈ ಕಾಲದಲ್ಲೇ ಜೈನರಲ್ಲಿ ತ್ರಿಷಷ್ಟಿ ಶಲಾಕಾಪುರುಷರೆಂದು ಪ್ರಸಿದ್ಧರಾದ ಅರುವತ್ತುಮೂರುಮಂದಿ ಮಹಾತ್ಮರುಗಳು ಜನ್ಮವೆತ್ತಿ ತಮ್ಮ ತಮ್ಮ ಮಹಿಮೆಗಳನ್ನು ತೋರಿಸುತ್ತಾರೆ. ಈ ಕಾಲದಲ್ಲೇ ತೀರ್ಥಂಕರರು ಜಗತ್ತಿಗೆ ಜ್ಞಾನದಾನವನ್ನು ಮಾಡುವುದು.

'ಶ್ರೀ'ಯವರು ಜೈನತತ್ವಗಳ ಸಾರವನ್ನು ಚೆನ್ನಾಗಿ ಗ್ರಹಿಸಿದ್ದಾರೆ. ಜೈನ ಸಿದ್ಧಾಂತದ ಅಡಿಗಲ್ಲಾದ ಸಮ್ಯಕ್‌ದರ್ಶನ, ಸಮ್ಯಕ್‌ಜ್ಞಾನ, ಸಮ್ಯಕ್‌ಚಾರಿತ್ರಗಳೆಂಬ ರತ್ನತ್ರಯದ ವಿಷಯದಲ್ಲಿ 'ಶ್ರೀ'ಯವರು ನುಡಿದಿರುವ ನುಡಿಗಳಿವು: "ಭಾರತಮಾತೆಯ ಧರ್ಮ ಕಿರೀಟದಲ್ಲಿ ಮಿರುಗುವ ದಿವ್ಯಮಣಿಗಳ ನಡುವೆ, ಒಳ್ಳೆಯ ಬಿಳಿಯ ಹೊಳಪಿನ ಮೂರು ರತ್ನಗಳು". ಈ ನುಡಿಗಳನ್ನು ಕೇಳಿದರೆ ಆ ರತ್ನತ್ರಯದ ವಿಷಯದಲ್ಲಿ 'ಶ್ರೀ'ಯವರಿಗಿರುವ ಶ್ರದ್ಧೆಯು ಎಷ್ಟರಮಟ್ಟಿನದೆಂಬುದು ವ್ಯಕ್ತವಾಗುತ್ತದೆ. 'ಶ್ರೀ'ಯವರು ತಮ್ಮ ಸಾರ್ವಜನಿಕ ಭಾಷಣಗಳಲ್ಲಿಯೂ ವಿದ್ಯಾರ್ಥಿಗಳಿಗೆ ತಾವು ಕೊಟ್ಟ ಉಪನ್ಯಾಸಗಳಲ್ಲಿಯೂ ಬೋಧಿಸಿದ ಜೈನ ಸಿದ್ಧಾಂತದ ಕೆಲವು ವಿಷಯಗಳನ್ನು ಇಲ್ಲಿ ಕೊಡುವುದು ಉಚಿತವಾಗಿದೆ. ಇದರಿಂದ 'ಶ್ರೀ'ಯವರಿಗಿರುವ ಜೈನ ಸಿದ್ಧಾಂತದ ಜ್ಞಾನದ ಮಟ್ಟವು ಗೊತ್ತಾಗುವುದು. ಜೈನ ಸಿದ್ಧಾಂತವು ಸಮ್ಯಗ್ದರ್ಶನ, ಸಮ್ಯಗ್‌ಜ್ಞಾನ, ಸಮ್ಯಕ್ಚಾರಿತ್ರ ಎಂಬ ಪಾಯದಮೇಲೆ ಕಟ್ಟಲ್ಪಟ್ಟಿದೆ. "ಸಮ್ಯಗ್ದರ್ಶನ ಜ್ಞಾನ ಚಾರಿತ್ರಾಣಿ ಮೋಕ್ಷಮಾರ್ಗಃ" ಎಂಬ ಸೂತ್ರದಿಂದ ಶ್ರೀ ಆಚಾರ್ಯ ಉಮಾಸ್ವಾಮಿಯವರು ತತ್ವಾರ್ಥಸೂತ್ರವೆಂಬ ಸೈದ್ಧಾಂತಿಕ ಗ್ರಂಥವನ್ನು ಪ್ರಾರಂಭಮಾಡಿದ್ದಾರೆ. ಈ ರತ್ನತ್ರಯಗಳ ಸ್ವರೂಪವನ್ನು ರತ್ನಾಕರ ಮಹಾಕವಿ ಈ ಕೆಳಗಣ ಪದ್ಯದಲ್ಲಿ ಸುಲಭವಾಗಿ, ಲಲಿತವಾಗಿ, ವಿವರಿಸಿದ್ದಾನೆ:

> ತತ್ವಪ್ರೀತಿ ಮನಕ್ಕೆ ಪುಟ್ಟಲದು ಸಮ್ಯಗ್ದರ್ಶನಂ ಮತ್ತಮಾ
> ತತ್ವಾರ್ಥಂಗಳನೊಲ್ದು ಭೇದಿಪುದು ಸಮ್ಯಗ್ಜ್ಞಾನಮಾ ಬೋಧದಿಂ
> ಸತ್ವಂಗಳ್ಕಿಡದಂತುಟೋವಿ ನಡೆಯಲ್ಸಮ್ಯಕ್ಚರಿತ್ರಂ ಸುರ
> ತ್ನತ್ವಂ ಮೂರಿವು ಮುಕ್ತಿಗೆಂದರುಪಿದೈ! ರತ್ನಾಕರಾಧೀಶ್ವರಾ

ಯಥಾರ್ಥವಾದ ದೇವರು, ಯಥಾರ್ಥವಾದ ಗುರು, ಯಥಾರ್ಥವಾದ ಶಾಸ್ತ್ರ—ಇವುಗಳಲ್ಲಿ ಅಚಲ ಭಕ್ತಿಯನ್ನಿಡುವುದೇ ಸಮ್ಯಗ್ದರ್ಶನ. ಅಂದರೆ ಪವಿತ್ರನಾದ ದೇವರು, ನಿಷ್ಕಳಂಕನಾದ ಗುರು, ಪೂರ್ವಾಪರ ವಿರೋಧವಿಲ್ಲದ ಶಾಸ್ತ್ರ—ಇವುಗಳ ಶರಣುಹೊಕ್ಕು ತತ್ವಚಿಂತನೆಯನ್ನು ಪ್ರಾರಂಭಿಸುವುದೇ ಜೈನ ಸಿದ್ಧಾಂತದ ತಳಹದಿ. ದೇವ, ಗುರು, ಶಾಸ್ತ್ರಗಳ ಬೆಂಬಲವಿಲ್ಲದೆ ಯಾವ ಸಿದ್ಧಾಂತವೂ ನಿಲ್ಲಲಾರದು. ಆದುದರಿಂದಲೇ ತತ್ವಜಿಜ್ಞಾಸುವು ಗಗನಕುಸುಮಕ್ಕಾಗಿ ಆಕಾಶಕ್ಕೆ ಏಣಿ ಹಾಕುವುದನ್ನು ತಪ್ಪಿಸುವುದಕ್ಕೋಸ್ಕರ ಈ ಸಿದ್ಧಾಂತದಲ್ಲಿ ದೇವ, ಗುರು,

ಶಾಸ್ತ್ರಗಳಿಗೆ ಮೊದಲನೆಯ ಸ್ಥಾನವು ಕೊಡಲ್ಪಟ್ಟಿದೆ. ಸಮ್ಯಗ್ದರ್ಶನವನ್ನು ಲೋಕದ ಮಾತಿನಲ್ಲಿ ಭಕ್ತಿಯೆಂದು ಕರೆಯಬಹುದು. ಇದಾದಮೇಲೆ ಭಕ್ತನು ಜ್ಞಾನದ ಸೋಪಾನಕ್ಕೇರಿ ಯಥಾರ್ಥನಾದ ದೇವನಾರು? ನಿಷ್ಕಳಂಕನೂ ಲೋಕ ಪೂಜ್ಯನೂ ಆದ ಗುರುವಿನ ಲಕ್ಷಣಗಳಾವುವು? ಪೂರ್ವಾಪರ ವಿರೋಧವಿಲ್ಲದ ಶಾಸ್ತ್ರ ವಾವುದು? ಎಂಬ ವಿಷಯವನ್ನು ವಿಮರ್ಶಿಸಿ ನೋಡುತ್ತಾನೆ. ನ್ಯಾಯದ ಒರೆ ಗಲ್ಲಿನಿಂದ ಪರೀಕ್ಷಿಸುತ್ತಾನೆ. ಉತ್ಕೃಷ್ಟವಾದುದನ್ನು ಸ್ವೀಕರಿಸುತ್ತಾನೆ. ಇದಕ್ಕೆ ಸಮ್ಯಗ್‌ಜ್ಞಾನವೆಂದು ಹೆಸರು. ಈ ಜ್ಞಾನ ಲಾಭವಾದನಂತರ ಜ್ಞಾನಿಯು ಆ ತನ್ನ ಜ್ಞಾನವನ್ನು ಆಚರಣೆಗೆ ತಂದು ತನ್ನ ದಿನಚರಿಯ ಕಾರ್ಯಗಳಲ್ಲಿ ನಡೆಸು ವುದೇ ಸಮ್ಯಕ್ಚಾರಿತ್ರ. ಈ ಸಮ್ಯಕ್ಚಾರಿತ್ರಕ್ಕೆ "ಅಹಿಂಸಾ ಪರಮೋ ಧರ್ಮಃ", "ಜೀವದಯೆ ಪರಮ ಧರ್ಮಂ", ಎಂಬ ಮಹಾವಾಕ್ಯಗಳೇ ಅಡಿಗಲ್ಲಾಗಿವೆ. ಮನವಚನಕಾಯಗಳಿಂದ ಯಾವ ಪ್ರಾಣಿಗೂ ಯಾವ ರೀತಿಯಲ್ಲಿಯೂ ಹಿಂಸೆ ಮಾಡದಿರುವುದೂ ಎಲ್ಲ ಜೀವಿಗಳನ್ನೂ ದಯೆಯಿಂದ ನೋಡುವುದೂ ಈ ಚಾರಿತ್ರದ ಮುಖ್ಯ ಗುರಿ. 'ಶ್ರೀ'ಯವರು ಈ ತತ್ವವನ್ನು ಬಹಳವಾಗಿ ಮೆಚ್ಚಿಕೊಂಡು "ಜೀವದಯೆ ಜೈನ ಧರ್ಮಂ" ಎಂದು ನಮ್ಮ ಜನ್ನನು ಹೇಳಿಲ್ಲವೆ; ಎಂಬುದಾಗಿ ಅನೇಕ ಸಾರಿ ಪ್ರಶಂಸಿಸಿದ್ದಾರೆ. ಈ ತತ್ವವೇ ಜಗದ್ವಂದ್ಯರಾದ ಮಹಾತ್ಮಾ ಗಾಂಧಿಯವರ ಪವಿತ್ರ ಜೀವನದ ಅಡಿಗಲ್ಲಾಗಿದೆ.

ಈ ರತ್ನತ್ರಯದ ಮೇಲೆ, ಅಂದರೆ ಭಕ್ತಿ, ಜ್ಞಾನ, ವೈರಾಗ್ಯಗಳ ಮೇಲೆ ಜೈನಸಿದ್ಧಾಂತದ ಕಟ್ಟಡವು ಕಟ್ಟಲ್ಪಟ್ಟಿದೆ. 'ಶ್ರೀ'ಯವರು ತಮ್ಮ ಭಾಷಣದಲ್ಲಿ ಹೇಳಿರುವಂತೆ ಆತ್ಮ– ಕರ್ಮ– ಮುಕ್ತಿ ಇವುಗಳೇ ಈ ಸಿದ್ಧಾಂತವು ಬಹಳ ಜಾಣ್ಮೆ ಯಿಂದ ಬಿಡಿಸಿರುವ ಸಮಸ್ಯೆಗಳು. ಆತ್ಮನ ಸ್ವರೂಪವೇನು? ಈ ಆತ್ಮನಿಗೆ ಕರ್ಮ ಬಂಧವು ಯಾವ ರೀತಿ ಆಯಿತು? ಕರ್ಮಗಳು ಯಾವ ರೀತಿ ಆತ್ಮನಲ್ಲಿ ಮಿಳಿತ ವಾಗುವುವು? ಕರ್ಮಗಳನ್ನು ಪ್ರತಿ ನಿಮಿಷವೂ ಆತ್ಮನು ಯಾವ ರೀತಿ ಆಕರ್ಷಿ ಸುವನು? ಬರುವ ಕರ್ಮಗಳನ್ನು ತಡೆಗಟ್ಟುವುದೆಂತು? ಇರುವ ಕರ್ಮಗಳನ್ನು ಸುಡುವ ಮಾರ್ಗವಾವುದು? ಈ ಪ್ರಶ್ನೆಗಳಿಗೆ ಜೈನ ಸಿದ್ಧಾಂತವು ಕೊಟ್ಟಿರುವ ಉತ್ತರವನ್ನು 'ಶ್ರೀ'ಯವರು ಅನೇಕ ಸಾರಿ ತಮ್ಮ ಭಾಷಣಗಳಲ್ಲಿ ಹೇಳಿದ್ದಾರೆ. (೧) ಆತ್ಮನು ಸ್ವಾಭಾವಿಕವಾಗಿ ಪರಿಶುದ್ಧನು. ಅನಂತಕಾಲದಿಂದ, ಕಲ್ಲಿನಲ್ಲಿ ಚಿನ್ನವು ಸೇರಿರುವಂತೆ, ಕರ್ಮದ ಜೊತೆಗೆ ಆತ್ಮನು ಸೇರಿದ್ದಾನೆ. ಕಲ್ಲಿಗೂ ಚಿನ್ನಕ್ಕೂ ಯಾವಾಗ ಸಂಬಂಧವಾಯಿತೊ ಗೊತ್ತಿಲ್ಲ. ಆದರೆ ಕಲ್ಲನ್ನು ಚಿನ್ನದಿಂದ ಬೇರೆ ಮಾಡಬಹುದು. ಅದರಂತೆ ಆತ್ಮವನ್ನು ಕರ್ಮದಿಂದ ಬೇರೆ ಮಾಡಬಹುದು. ಹಾಲಿನಲ್ಲಿ ತುಪ್ಪದ ಛಾಯೆಯನ್ನು ಕಾಣುವಂತೆ ಈ ಶರೀರದಲ್ಲಿ ಆತ್ಮನ ಲಕ್ಷಣ ಗಳನ್ನು ನಾವು ನೋಡುತ್ತೇವೆ. ಶರೀರವೇ ಕರ್ಮ, ಜಡ. ಆತ್ಮನೇ ಅದಕ್ಕೆ ಚೈತನ್ಯವನ್ನೂ, ಲವಲವಿಕೆಯನ್ನೂ, ವಿಜ್ಞಾನವನ್ನೂ, ಸೊಲ್ಲನ್ನೂ ಕೊಟ್ಟಿರುತ್ತಾನೆ. ಭ್ರಮೆಯಿಂದ, ಅಜ್ಞಾನದಿಂದ ತಾನೇ ಶರೀರವೆಂದು ನಂಬಿ ಕೆಟ್ಟುಹೋಗಿದ್ದಾನೆ. ಬೂರುಗದ ಅರಳೆಯು ಶುದ್ಧವಾಗಿದ್ದು, ಹಗುರವಾಗಿದ್ದು, ಆಕಾಶದಲ್ಲಿ ಹಾರಾಡು ತ್ತಿರುವಾಗ ಒಂದು ಹನಿ ನೀರು ಅದರ ಮೇಲೆ ಬಿದ್ದರೆ ಅದು ಭೂಮಿಯಮೇಲೆ

ಬಿದ್ದು ಅಲ್ಲಿ ಧೂಳಿನ ಭಾರವನ್ನು ಹೊಂದಿ ಮೇಲಕ್ಕೆ ಹಾರುವ ಗುಣವನ್ನು ಕಳೆದು ಕೊಂಡು ಗಾಳಿಯು ಹೊಡೆದುಕೊಂಡುಹೋದ ಕಡೆ ಹೋಗುತ್ತ ಸುತ್ತುತ್ತಿರುವಂತೆ ಪರಿಶುದ್ಧನಾದ ಜೀವನು ಕರ್ಮಾಧೀನನಾಗಿ, ಆ ಕರ್ಮವು ಒಯ್ದೆಡೆಗೆ ಹೋಗಿ ಅನೇಕ ರೂಪಗಳಲ್ಲಿ, ಅನೇಕ ಭವಗಳಲ್ಲಿ, ತೊಳಲುತ್ತಿದ್ದಾನೆ. (೨) ಕರ್ಮವು ಪುದ್ಗಲ (matter). ಇದು ಜಡವಾದುದು. ಕರ್ಮಾಣುಗಳು ಈ ಜಗತ್ತಿನಲ್ಲಿ ತುಂಬಿವೆ. ಇವು ಬಹು ಸೂಕ್ಷ್ಮವಾಗಿವೆ. ಇವುಗಳಿಗೆ ನಿರ್ದಿಷ್ಟವಾದ ಸ್ವರೂಪವಿಲ್ಲ. ಇವು ಆತ್ಮನಿಗೆ ಬಂದು ಸೇರಿದಮೇಲೆ ಆ ಆತ್ಮನ ಪರಿಣಾಮಕ್ಕನುಸಾರವಾಗಿ ರೂಪ ಗೊಳ್ಳುತ್ತವೆ. ಶುಭ ಪರಿಣಾಮವುಳ್ಳ ಆತ್ಮನನ್ನು ಇವು ಸೇರಿದಾಗ ಪುಣ್ಯಕರ್ಮ ಗಳಾಗುತ್ತವೆ. ಅಶುಭ ಪರಿಣಾಮವುಳ್ಳ ಆತ್ಮನಿಂದ ಆಕರ್ಷಿಸಲ್ಪಟ್ಟಾಗ ಪಾಪ ಕರ್ಮಗಳಾಗುತ್ತವೆ. ಒದ್ದೆಯಾದ ಅಥವಾ ಜಿಡ್ಡಾದ ಬಟ್ಟೆಯು ಕೊಳೆಯನ್ನು ಧೂಳನ್ನು ಆಕರ್ಷಿಸುವಂತೆ ಶುಭಾಶುಭ ಪರಿಣಾಮಗಳನ್ನುಳ್ಳ ಆತ್ಮನು ಕರ್ಮವನ್ನು ಆಕರ್ಷಿಸುತ್ತಾನೆ. ಧೂಳಿಗೆ ಯಾವುದೊಂದು ರುಚಿಯೂ ಇಲ್ಲ. ಅದು ವಿಷದೊಂದಿಗೆ ಸೇರಿ ಕಹಿಯಾಗುವಂತೆ, ಬೆಲ್ಲದ ಪಾಕದೊಂದಿಗೆ ಸೇರಿ ಸಿಹಿಯಾಗುವಂತೆ, ಕರ್ಮವು ಆತ್ಮನ ಪರಿಣಾಮಕ್ಕನುಸಾರವಾಗಿ ಪುಣ್ಯಪಾಪವಾಗಿ ಪರಿಣಮಿಸುವುದು. ಆತ್ಮನು ಮನ, ವಚನ, ಕಾಯಗಳೆಂಬ ತ್ರಿಕರಣಗಳಿಂದ ಪುಣ್ಯ ಪಾಪಗಳನ್ನು ಆಕರ್ಷಿಸುತ್ತಾನೆ. ಭಾವನೆ, ಮಾತು, ಕಾರ್ಯ,— ಇವುಗಳಿಂದಲೇ ಕರ್ಮ ಕಟ್ಟುತ್ತದೆ. ಸದ್ಭಾವನೆ, ಸದ್ವಚನ, ಸತ್ಕಾರ್ಯ,— ಇವುಗಳಿಂದ ಶುಭ ಪರಿಣಾಮವು ಆತ್ಮನಿಗೆ ಲಭಿಸಿ, ಆ ಸಮಯದಲ್ಲಿ ಬಂಧವಾದ ಕರ್ಮಗಳನ್ನು ಪುಣ್ಯರೂಪಕ್ಕೆ ತರುತ್ತವೆ. ದುರ್ಭಾವನೆ, ದುರ್ವಚನ, ದುಷ್ಕಾರ್ಯ — ಇವುಗಳು ಆತ್ಮನಲ್ಲಿ ದುಷ್ಪರಿಣಾಮವನ್ನುಂಟುಮಾಡಿ ಆ ಸಮಯದಲ್ಲಿ ಬಂಧವಾದ ಕರ್ಮಗಳನ್ನು ಪಾಪರೂಪಕ್ಕೆ ತರುತ್ತವೆ. ಮನಸ್ಸಿನ ಭಾವನೆಗಳಿಗನುಸಾರವಾಗಿ ಪ್ರತಿಕ್ಷಣವೂ ಕರ್ಮವು ಆತ್ಮನಿಗೆ ಬಂಧವಾಗುತ್ತಿರುತ್ತದೆ. ಈ ಭಾವನೆಗಳಿಂದಲೆ ಬಂಧವಾಗುವ ಕರ್ಮಗಳಿಗೆ ಭಾವಕರ್ಮಗಳೆಂದು ಹೆಸರು. ಈ ಭಾವನೆಗಳು ಕಾರ್ಯರೂಪಕ್ಕೆ ಬಂದು ಆ ಕಾರ್ಯಗಳಿಂದ ಉಂಟಾಗುವ ಕರ್ಮಗಳಿಗೆ ದ್ರವ್ಯಕರ್ಮಗಳೆಂದು ಹೆಸರು. (೩) ಈ ಕರ್ಮಗಳ ಬರುವಿಕೆಗೆ ಆಸ್ರವವೆಂದೂ, (೪) ಬಂದ ಕರ್ಮಗಳು ಆತ್ಮನ ಜೊತೆಗೆ ಮಿಳಿತವಾಗುವುದಕ್ಕೆ ಬಂಧವೆಂದೂ, (೫) ಬರುವ ಕರ್ಮಗಳನ್ನು ತಡೆಗಟ್ಟುವುದಕ್ಕೆ ಸಂವರವೆಂದೂ, (೬) ಈಗಾಗಲೇ ಬಂಧವಾಗಿರುವ ಕರ್ಮ ಗಳನ್ನು ನಾಶಮಾಡುವುದಕ್ಕೆ ನಿರ್ಜರೆಯೆಂದೂ, (೭) ಬರುವ ಕರ್ಮಗಳು ನಿಂತು ಇರುವ ಕರ್ಮಗಳು ಹೋಗಿ ಉಂಟಾಗುವ ಆನಂದವೇ ಮೋಕ್ಷವೆಂದೂ ಜೈನ ಸಿದ್ಧಾಂತವು ತಿಳಿಸಿ ಆತ್ಮ ಕರ್ಮ ಮುಕ್ತಿ— ಇವುಗಳಿಗೆ ಸಂಬಂಧಪಟ್ಟ ಏಳು ತತ್ತ್ವ ಗಳನ್ನು ಪ್ರತಿಪಾದಿಸಿದೆ.

ಶುಭಾಶುಭ ಪರಿಣಾಮಗಳಿಂದ, ತ್ರಿಕರಣ ವ್ಯಾಪಾರಗಳಿಂದ ಆತ್ಮನಿಗೆ ಪುಣ್ಯ ಪಾಪಗಳು ಪ್ರತಿ ಕ್ಷಣವೂ ಬಂಧವಾಗುತ್ತಿರುವುವೆಂದು ಹೇಳಿದುದಾಯಿತು. ಪುಣ್ಯವು ಆತ್ಮನಿಗೆ ಭೋಗೋಪಭೋಗಗಳನ್ನು ಕೊಟ್ಟು ನಾಶವಾಗುತ್ತದೆ. ಪಾಪವು ದಾರಿದ್ರ್ಯಾದಿ ದುಃಖಗಳನ್ನು ಕೊಟ್ಟು ಅಳಿಯುತ್ತದೆ. ಪುಣ್ಯ ಪಾಪಗಳೆರಡೂ ಬಂಧ

ರೀತಿಯಲ್ಲಿ ಆತ್ಮನನ್ನು ಬಂಧಿಸಿವೆ. ಪುಣ್ಯ ಚಿನ್ನದ ಸಂಕೋಲೆ. ಪಾಪ ಕಬ್ಬಿಣದ ಸರಪಣಿ. ಇವೆರಡನ್ನೂ ಬಿಡಿಸಿಕೊಂಡಲ್ಲದೆ ಆತ್ಮನಿಗೆ ಮೋಕ್ಷವಿಲ್ಲ. ಮೋಕ್ಷಕ್ಕೆ ಶುಭಾಶುಭ ಪರಿಣಾಮಗಳಿಗೆ ಮೀರಿದ ಶುದ್ಧ ಪರಿಣಾಮವೆಂಬುದು ಅಗತ್ಯ. ಆ ಶುದ್ಧ ಪರಿಣಾಮವು ಅಲೌಕಿಕವಾದುದು. ಪರಿಶುದ್ಧ ಪರಮಾತ್ಮನೇ ಆ ಪರಿಣಾಮದ ಗುರಿ. ಎಲ್ಲ ವಸ್ತುಗಳನ್ನೂ ಬಿಟ್ಟು, ಲೌಕಿಕ ಪ್ರಪಂಚವನ್ನು ದೂರ ಮಾಡಿ, ಆತ್ಮನನ್ನು ಆತ್ಮನಲ್ಲಿಡುವುದು ಶುದ್ಧ ಪರಿಣಾಮದ ಸ್ವರೂಪ. ತನ್ನಲ್ಲಿ ತನ್ನನ್ನು ನೋಡುವುದು, ತನ್ನನ್ನು ತಾನು ಅರಿಯುವುದು, ತಾನು ತಾನಾಗುವುದು — ಇದೇ ಮೋಕ್ಷ. ಇದಕ್ಕೆ ಆತ್ಮಧ್ಯಾನವು ಆವಶ್ಯಕ. ಆ ಧ್ಯಾನದ ಸ್ವರೂಪವನ್ನು ರತ್ನಾಕರನ ವಾಣಿಯಲ್ಲಿ 'ಶ್ರೀ'ಯವರೇ "ಕನ್ನಡದ ಬಾವುಟ"ದಲ್ಲಿ ಈ ರೀತಿ ಹಾಡಿದ್ದಾರೆ:

> ಧ್ಯಾನದಿಂದಲ್ಲದೆ ಕರ್ಮನಿರ್ಜರಿಸದಾ। ಧ್ಯಾನ ತಾನೆಂತುಟೆಂದೆನಲು
> ನಾನಾ ಚಿಂತೆಯುಳಿದು ಮನವಾತ್ಮಸಂ। ಧಾನದೊಳಿರಲದೆ ಧ್ಯಾನ.

### ಆಚಾರ

ಜೈನ ಜೀವನ ನಿಯಮದ ಅಡಿಗಲ್ಲೇ ವೈರಾಗ್ಯ ಮತ್ತು ಶಾಂತಿ. ಮೇಲಿನ ತತ್ವಗಳನ್ನು ಆಚರಣೆಗೆ ತರುವುದೇ ಈ ಬಾಳಿನ ಗುರಿ. ದರ್ಶನ, ಜ್ಞಾನ, ಚಾರಿತ್ರಗಳು — ಅಂದರೆ ಭಕ್ತಿ, ಜ್ಞಾನ, ವೈರಾಗ್ಯಗಳು ಮುಪ್ಪುರಿಯಾಗಿ ಹೆಣೆದ ಒಂದು ಹಗ್ಗದಂತಿವೆ. ಈ ಹಗ್ಗವನ್ನು ಅವಲಂಬಿಸಿ ಜೀವನದ ಗುರಿಗೆ ಏರಬೇಕಾಗಿದೆ. 'ಶ್ರೀ'ಯವರು ಈ ಜೀವನದ ಗುರಿಯ ರಹಸ್ಯವನ್ನು ಬಲ್ಲವರು. ಲೌಕಿಕದಲ್ಲಿಯೇ ಮಗ್ನರಾಗಿರದೆ ಬೆಳಕನ್ನು ತುಂಬಿಕೊಳ್ಳುವುದರಲ್ಲಿಯೂ, ಆ ಬೆಳಕನ್ನು ಎಲ್ಲೆಲ್ಲಿಯೂ ಹರಿಸುವುದರಲ್ಲಿಯೂ ತಮ್ಮ ಜೀವನವನ್ನು ಸವೆಯಿಸುತ್ತಿದ್ದಾರೆ. 'ಶ್ರೀ'ಯವರಿಗೆ ಜೀವನದಲ್ಲಿ ದುಃಖಗಳು ಉಂಟಾದುವು. ಆದರೆ ಆ ದುಃಖಗಳು ಚಿನ್ನವನ್ನು ಪುಟಕ್ಕೆ ಹಾಕುವ ಬೆಂಕಿಯಂತೆ 'ಶ್ರೀ'ಯವರನ್ನು ಗೃಹಸ್ಥನ ದರ್ಜೆಯಿಂದ ತಪಸ್ವಿಯ ದರ್ಜೆಗೆ ಏರಿಸಿದುವು. ಕಾವಿಬಟ್ಟೆಯು ತಪಸ್ವಿನ ಮುಖ್ಯವಾದ ಚಿಹ್ನೆಯಲ್ಲ, ವನ ಗಮನವು ತಪಸ್ಸಿನ ತಿರುಳಲ್ಲ, ಆತ್ಮಸಂಯಮವು ತಪಸ್ಸಿನ ನಿಜವಾದ ರಹಸ್ಯ. ಜ್ಞಾನಾರ್ಜನೆ, ಜ್ಞಾನದಾನ, ಮನಸ್ಸಿನ ಪರಿಪಕ್ವತೆ ಮತ್ತು ತ್ಯಾಗ—ಇದು ತಪಸ್ಸಿನ ಉಸಿರು ಕಣ್ಣು. 'ಶ್ರೀ'ಯವರು ಬಹು ಚಿಕ್ಕವಯಸ್ಸಿನಲ್ಲಿ ಲೌಕಿಕ ಜೀವನವನ್ನು ಕಡೆಗಣಿಸಿ ಸಾಹಿತ್ಯೋಪಾಸನೆ, ತತ್ವಾಭ್ಯಾಸ, ಜ್ಞಾನ ಪ್ರಸಾರ, ಸದಾಚಾರ— ಇವುಗಳಲ್ಲಿ ಮಗ್ನರಾದರು. ಐಹಿಕಸುಖವನ್ನು ಬೇಕಾದಷ್ಟು ಅನುಭವಿಸಲು ಅವಕಾಶವೂ, ಐಶ್ವರ್ಯವೂ, ಪದವಿಯೂ, ದೇಹಾರೋಗ್ಯ ಭಾಗ್ಯವೂ ಇದ್ದರೂ, ನಶ್ವರವಾದ ಆ ಸುಖಕ್ಕೆ ತಿಲಾಂಜಲಿಯನ್ನು ಕೊಟ್ಟು ಆತ್ಮೋನ್ನತಿಯ ಕಾರ್ಯದಲ್ಲಿ ಮಗ್ನರಾದರು. ಇವರ ಜೀವನ ಗುರಿಯನ್ನು ಪ್ರಸ್ತಾವಿಸುವಾಗ ಪಂಪ ಮಹಾ ಕವಿಯ, ಜೈನ ಜೀವನ ಗುರಿಯನ್ನು ವ್ಯಕ್ತಪಡಿಸುವ ಒಂದು ಪದ್ಯವು ಜ್ಞಾಪಕಕ್ಕೆ ಬರುತ್ತದೆ. ಭರತಚಕ್ರವರ್ತಿಯು ಸಮವಸರಣಕ್ಕೆ ಹೋಗಿ ಆದಿತೀರ್ಥಂಕರ ಪರಮದೇವರನ್ನು ಸ್ತೋತ್ರಮಾಡಿ ವರ ಬೇಡುವಾಗ ಆಡಿದ ಮಾತುಗಳಿವು.

> “ಅಮರೇಂದ್ರೋನ್ನತಿ, ಖೇಚರೇಂದ್ರ ವಿಭವಂ, ಭೋಗೀಂದ್ರ ಭೋಗಂ’ ಮಹೇಂದ್ರ ಮಹೈಶ್ವರ್ಯಂ, ಇವೆಲ್ಲವುಂ ಅಧ್ರುವಂ. ಇವಂ ಬೇಳ್ಪಂತು ಬೆಳ್ಳಲ್ಲೆನ್. ಉತ್ತಮ ದೀಕ್ಷಾ ವಿಧಿಯುಂ, ಸಮಾಧಿ ಮರಣಂ, ಕರ್ಮಕ್ಷಯಂ, ಬೋಧಿಲಾಭಂ ಅಮೋಘಂ ದೊರೆಕೊಳ್ವುದು ಅಕ್ಕೆ ಎಮಗೆ ಮುಕ್ತಿಶ್ರೀ ಮನೋವಲ್ಲಭಾ”

ಇದು ಜೈನ ಜೀವನದ ಗುರಿ. ಇದಕ್ಕೂ ‘ಶ್ರೀ’ಯವರ ಪವಿತ್ರ ಜೀವನಕ್ಕೂ ಸಾಮರಸ್ಯವಿದೆ. ಭರತಚಕ್ರವರ್ತಿಯಂತೆ ನೋಟಕ್ಕೆ ಸಂಸಾರದಲ್ಲಿದ್ದರೂ ‘ಶ್ರೀ’ಯವರು ನಿರ್ಲಿಪ್ತರಾಗಿದ್ದಾರೆ: ತಾವರೆಯ ಎಲೆಯ ಮೇಲಿನ ನೀರಿನಂತೆ, ಭೂಮಿಯಲ್ಲಿ ಬಿದ್ದ ಪಾದರಸದಂತೆ.

**ಕಾ. ಸ. ಧರಣೇಂದ್ರಯ್ಯ**

# ಶ್ರೀಕಂಠಯ್ಯನವರ ದೇಶಭಕ್ತಿಯ ಕವನಗಳು

ದೇಶಭಕ್ತಿಯೂ ದೈವಭಕ್ತಿಯೂ ಮನುಷ್ಯ ಜನ್ಮವನ್ನೇ ಸಾರ್ಥಕಗೊಳಿಸುವ ಸದ್ಗುಣಗಳು. ದೇಶಭಕ್ತಿಯಿಂದ ತುಂಬಿರುವ ಕಥೆಗಳೂ ಕವಿತೆಗಳೂ ಇಲ್ಲದ ಸಾಹಿತ್ಯವೇ ಬಹುಶಃ ಈ ಪ್ರಪಂಚದಲ್ಲಿ ಯಾವುದೂ ಇಲ್ಲವೆನ್ನಬಹುದು. "ನನ್ನ ತಾಯಿ, ನನ್ನ ನಾಡು" ಎಂದು ಹೆಮ್ಮೆಪಡುವುದು ಮನುಷ್ಯ ಸ್ವಭಾವ. ಋಗ್ವೇದ ದಷ್ಟು ಪ್ರಾಚೀನ ಗ್ರಂಥವು ಪ್ರಪಂಚದಲ್ಲಿ ಮತ್ತಾವುದೂ ಇಲ್ಲ. ಅದರ ಕೆಲವು ಭಾಗಗಳಲ್ಲಿ ಕೂಡ ದೇಶಭಕ್ತಿಯಿಂದ ತುಂಬಿದ ಋಕ್ಕುಗಳಿವೆ. ದೊಡ್ಡ ನಾಗರಿಕತೆ ಯನ್ನು ಕಟ್ಟಿ ಈಗ ಪ್ರಪಂಚದಲ್ಲಿ ಅತ್ಯಂತ ಬಲಿಷ್ಠ ಜನಾಂಗಗಳೆನಿಸಿಕೊಂಡಿರುವ ಜನಾಂಗಗಳಲ್ಲಿ ಅನೇಕ ಜನಾಂಗಗಳವರು ಇನ್ನೂ ಕಾಡು ಜನರಂತೆ ಅನಾಗರಿಕ ರಾಗಿದ್ದ ಕಾಲದಲ್ಲೇ ಭಾರತೀಯರು ನಾಗರಿಕತೆಯಲ್ಲಿ ಮೇಲಕ್ಕೇರುತ್ತಿದ್ದುದೂ, ಅವರು ಸಾಧಿಸಿದ ಇತರ ನಾನಾ ಕಾರ್ಯಸಿದ್ಧಿಗಳಂತೆಯೇ ಅವರು ಕಟ್ಟಿದ ದೇಶಭಕ್ತಿಯ ಕಥೆಗಳೂ ಕವಿತೆಗಳೂ ಬಹಳ ಮೇಲಿನ ಮಟ್ಟದಲ್ಲಿದ್ದುದೂ ವಿಸ್ಮಯ ವನ್ನುಂಟುಮಾಡುವ ಸಂಗತಿಗಳು. "ಜನನಿಯೂ ಜನ್ಮಭೂಮಿಯೂ ಸ್ವರ್ಗ ಕ್ಕಿಂತಲೂ ಶ್ರೇಷ್ಠ"; "ತಾಯೆ, ದೇಶಮಾತೆ, ನೀನು ಒದಗಿಸಿರುವ ವೃಕ್ಷಗಳೆಲ್ಲ ಕಲ್ಪವೃಕ್ಷಗಳು, ಕಲ್ಲುಗಳೆಲ್ಲ ಚಿಂತಾಮಣಿ ಶಿಲೆಗಳು, ತೋಪುಗಳೆಲ್ಲ ನಂದನವನಗಳು, ನೀನು ಸ್ವರ್ಗದೇವತೆ"; "ದೇವತೆಗಳು ಹಾಡುತ್ತಿದ್ದಾರೆ 'ಮುಂದೆ ನಮಗೆ ಸ್ವರ್ಗವಾಸವು ತಪ್ಪಿದಮೇಲೆ ಮತ್ತೆಲ್ಲಿ ಜನ್ಮವೋ ಕಾಣೆವು. ಭರತ ಖಂಡದ ಜನರು ದೇವತೆಗಳಿಗೆ ಸಮಾನರು. ಭರತಭೂಮಿಯಲ್ಲಿ ನಾವು ಹುಟ್ಟಿದರೆ ಧನ್ಯರಾದೇವು. ಅಲ್ಲಿ ಅಂಗಹೀನರಾಗಿ ಹುಟ್ಟಿರುವವರು ಕೂಡ ಧನ್ಯರು' ಎಂದು"; "ನಾವೂ ನಮ್ಮ ಪೀಳಿಗೆಯವರೂ ನಮ್ಮೆಲ್ಲರ ಸರ್ವಸ್ವವನ್ನೂ ನಿನ್ನ ಸೇವೆಗೆ ಸಮರ್ಪಿಸಿ ಧನ್ಯರಾಗುವಂತೆ ಅನುಗ್ರಹಿಸು, ತಾಯೆ"—ಎಂಬಿವೇ ಮುಂತಾದ ವಾಣಿಗಳು ಭರತಖಂಡದ ಪ್ರಾಚೀನ ಗ್ರಂಥಗಳಲ್ಲಿವೆ. ಆ ವಾಣಿಗಳು ಯಾವ ಜನಾಂಗದವ ರಾದರೂ ಮತ್ತು ಯಾವಕಾಲದವರಾದರೂ ಹೆಮ್ಮೆಪಡುವಂತಿವೆ. ಒಟ್ಟು ಪ್ರಪಂಚದ ಅತ್ಯಧಿಕ ಭಾಗವು ಕಗ್ಗತ್ತಲೆಯಲ್ಲಿ ಮುಳುಗಿದ್ದಂತೆ ತೋರುತ್ತಿದ್ದ ಪ್ರಾಚೀನಕಾಲದಲ್ಲಿ ಸಂಸ್ಕೃತಿಯು ತನಿಬೆಳಕಿನಂತಿರುವ ಇಷ್ಟು ಉದಾತ್ತಭಾವಗಳು ಭಾರತೀಯರಿಂದ ಇಷ್ಟು ಸುಂದರವಾಗಿ ಸೂಚಿತವಾಗಿರುವುದನ್ನು ಸ್ಮರಿಸಿದರಂತೂ, ಆ ಹೆಮ್ಮೆಯ ಜೊತೆಗೆ ವಿಸ್ಮಯವೂ ಉಂಟಾಗುತ್ತದೆ.

ನಮ್ಮ ಕನ್ನಡ ಭಾಷೆಯಲ್ಲಿ "ಕವಿರಾಜಮಾರ್ಗ"ದ ಕಾಲದಿಂದ ಹಿಡಿದು ಇಂದಿನವರೆಗೂ ಬಂದಿರುವ ದೇಶಭಕ್ತಿಪೂರಿತವಾದ ಕವಿತೆಗಳೂ ಕಥೆಗಳೂ ಮತ್ತಾವ ಭಾಷೆಯವುಗಳಿಗಿಂತಲೂ ಬೀಳಾಗಿಲ್ಲ. "ಕವಿರಾಜಮಾರ್ಗ"ದಲ್ಲಿರುವ "ಪದ ನಱಿದು ನುಡಿಯಲುಂ ನುಡಿ। ದುದನಱಿದಾರಯಲುಮಾರ್ಪರಾ ನಾಡವರ್ಗಳ್॥ ಚದುರರ್ ನಿಜದಿಂ ಕುಱಿತೋ। ದದೆಯುಂ ಕಾವ್ಯಪ್ರಯೋಗ ಪರಿಣತಮತಿ ಗಳ್" ಎಂಬ ಪದ್ಯವನ್ನೋದಿದಾಗ ಕವಿಗೆ ತನ್ನ ನಾಡಿನ ಜನರಲ್ಲೆಷ್ಟು ಅಭಿಮಾನ ವೆಂಬುದು ಬಹು ಚೆನ್ನಾಗಿ ಗೊತ್ತಾಗುವುದು. ಆತನು ಕನ್ನಡಿಗರನ್ನು ಹೊಗಳಿರು

ವುದು ಅತಿಶಯೋಕ್ತಿಯ ಹೊಗಳಿಕೆಯೆಂದು ಹಳಿಯುವವರು ಕೂಡ, ಕವಿಯ ಹೃದಯದಲ್ಲಿ ಸ್ವಜನಾಭಿಮಾನರೂಪದ ಉಜ್ಜ್ವಲ ದೇಶಭಕ್ತಿಯು ಉಕ್ಕಿ ಹರಿಯುತ್ತಿದ್ದುದನ್ನು ಇಲ್ಲವೆನ್ನಲಾರರು. ಪಂಪ ಮಹಾಕವಿ ತನ್ನ ನೆನ್ನಿಯ ನಾಡಾದ ಬನವಾಸಿಯಲ್ಲಿ ತೋರಿಸಿರುವ ಭಕ್ತಿಯಾದರೂ ಎಷ್ಟು! ಆತನ ದೃಷ್ಟಿಯಲ್ಲಿ ಬನವಾಸಿ ದೇಶದ ತೋಪುಗಳೆಲ್ಲ ನಂದನವನಗಳೇ! ಬನವಾಸಿಯ ನಂದನದಲ್ಲಿ ಮರಿದುಂಬಿಯಾಗಿ ಅಥವಾ ಕೋಗಿಲೆಯಾಗಿ ಹುಟ್ಟುವ ಪುಣ್ಯವೇ ಸಾಕು. ಪಂಪನ ದೇಶಭಕ್ತಿಯ ದೆಸೆಯಿಂದ ಅರ್ಜುನನು ಬನವಾಸಿಯನ್ನು ನೆನೆದು ನೆನೆದು.

ತೆಂಕಣ ಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಮಿಂಪನಾಳ್ದ ಗೇ
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆ ಗಂಡೊಡಮಾದ ಕೆಂದಲಂ
ಪಂ ಗೆಡೆಗೊಂಡೊಡಂ ಮಧು ಮಹೋತ್ಸವಮಾದೊಡಮೇನನೆಂಬೆನಾ
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ

ಎಂದು ಹೇಳುವಂತಾಗಿದೆ. ಹರಿಹರ ಕವಿಯ ದೇಶಭಕ್ತಿಯ ದೆಸೆಯಿಂದ ಪರಮೇಶ್ವರನು—ಹಿಮಾಲಯವನ್ನು ಬಿಟ್ಟು—ಹಂಪೆಯ ಬಳಿಯ ಬೆಟ್ಟಕ್ಕೆ ಬಿಜಯಮಾಡಿದನೆಂದು ವರ್ಣಿತವಾಗಿದೆ. ಇತರ ಹಲವು ಕವಿಗಳು ಹಲವು ರೀತಿಗಳಲ್ಲಿ ತಮ್ಮ ದೇಶಭಕ್ತಿಯನ್ನು ಸೂಚಿಸಿ ತಮ್ಮ ಕಾವ್ಯಗಳನ್ನು ಬರೆದಿದ್ದಾರೆ.

ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಪರಿಣಾಮವುಂಟಾದಮೇಲೆ ಕನ್ನಡ ಭಾಷೆಯಲ್ಲಿ ಹೊಸ ಬಗೆಯ ಗದ್ಯಪದ್ಯ ಕಾವ್ಯಗಳು ಹುಟ್ಟಲು ಪ್ರಾರಂಭವಾಗಿವೆ. ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ ಆಗಿರುವುದೆಲ್ಲ ಸತ್ಪರಿಣಾಮವೇ ಎಂದು ಖಂಡಿತವಾಗಿ ಹೇಳುವುದು ಅತ್ಯುಕ್ತಿಯೆನಿಸುವುದಾದರೂ, ಅದರಿಂದ ಅನೇಕ ಉಪಕಾರಗಳಾಗಿವೆಯೆಂದು ಕೃತಜ್ಞತೆಯಿಂದ ಒಪ್ಪಿಕೊಳ್ಳುವುದು ಆವಶ್ಯಕ. ದೇಶಭಕ್ತಿಯಿಂದ ತುಂಬ ಅಂದವಾಗಿರುವ ಅನೇಕ ಕವಿತೆಗಳೂ ಕಥೆಗಳೂ ನಾಟಕಗಳೂ ರಚಿತವಾಗಲು ವಿಶೇಷವಾಗಿ ಸ್ಫೂರ್ತಿದೊರೆತುದು ಆ ಉಪಕಾರಗಳಲ್ಲೊಂದು.

ಕನ್ನಡ ಭಾಷೆಯ ಮೇಲಿನ ಪ್ರೇಮದಿಂದ ಉದ್ದೀಪಿತರಾಗಿ, ಕನ್ನಡ ನಾಡಿನಲ್ಲೆಲ್ಲ ಪ್ರಖ್ಯಾತರಾಗಿ, ಕನ್ನಡದ ಏಳಿಗೆಗಾಗಿ ಶ್ರಮಿಸುತ್ತಿರುವ ಹಿರಿಯ ಸಾಹಿತಿಗಳಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ದೇಶಭಕ್ತಿಯ ಕವನಗಳು ಕನ್ನಡಿಗರಿಗೆಲ್ಲ ಸ್ಫೂರ್ತಿದಾಯಕವಾಗಿ ಶ್ರೇಷ್ಠವಾಗಿವೆ. 'ಶ್ರೀ'ಯವರ ಈ ಕವನಗಳಲ್ಲಿ ದೇಶಭಕ್ತಿಯ ಮೂರು ರೂಪಗಳಂತಿರುವ ರಾಜಭಕ್ತಿಯೂ ಭಾಷಾಪ್ರೇಮವೂ ನಾಡಿನ ಪ್ರೇಮವೂ ಸೇರಿವೆ. ಅವುಗಳು ಹದವರಿತು ಸೇರಿರುವ ಅಂದವನ್ನು ಆ ಕವಿತೆಗಳನ್ನೋದಿಯೇ ಪೂರ್ತಿಯಾಗಿ ಗ್ರಹಿಸಬೇಕು.

ಮೊದಲನೆಯದಾಗಿ, ರಾಜಭಕ್ತಿಯ ವಿಚಾರ. "ಮೈಸೂರು ಮಕ್ಕಳು" ಎಂಬ ಕವನದ

ಚಿನ್ನದ ನಾಡದು,
ಮೈಸೂರು.
ಗಂಧದ ಗುಡಿಯದು.
ಮೈಸೂರು.

ವೀಣೆಯ ಬೆಡಗದು,
ಮೈಸೂರು.
ನಾಲುಮಡಿ ಕೃಷ್ಣನ
ಮೈಸೂರು.

ಅಲ್ಲೊಬ್ಬ ನಮಗಿಹನು ನಾಯಕನು: ಭಕ್ತಿಯಲಿ ನಿಲುನಿಲುಕಿ ಕಣ್‌ತುಂಬ ನೋಡುತಿರಲು
ಆನೆಯಂಬಾರಿಯಲಿ ನಸುನಗೆಯನಿಕ್ಕೆಲಕೆ ಬೀರಿ, ಜನರಕ್ಕರೆಯನುಕ್ಕಿಸುವನು.
ಧೀರನಾತನು; ತುಂಬುಗಾಂಭೀರ್ಯದಲಿ ಸತ್ಯವನೆ ಎತ್ತಿ ನಿಲಿಸುವನು ಪ್ರಜೆಯ ತಂದೆ;
ಮರೆತು ತನ್ನನು ರಾಜ್ಯಸೇವೆಯಲಿ, ಸಲಿಸುವನು ಧರ್ಮವನು ರಾಜರ್ಷಿ ಕರ್ಮಯೋಗಿ.
ಬನ್ನಿ ಕೆಳೆಯರ, ನಮ್ಮ ಬಾಳಿಕೆಯ ಕಾಣಿಕೆಯನೊಪ್ಪಿಸುವ, ಕೈಕೊಳುವ ದೊರೆಯ ಗುರಿಯ:
ನೋಂಪಿಯಾತನದು — ತನ್ನರಮನೆಯ ಹಸಗೆಯ್ದು ಬೆಳಗಿದಂತೆಯೆ, ಬೆಳಗಿ ಊರ, ನಾಡ,
ಪಸಗೆಯ್ದು. ಹೊಸಗೆಯ್ವನೆಂಬೊಲುಮೆ: ನಾವೆಲ್ಲರಾ ನಾಯಕನ ವಳದಿ ದೀಕ್ಷೆಪಡೆದು,
ನಿಸಾರಿ ಬಳಸುವ ಬನ್ನಿ ಬುದ್ಧಿಯನು ಶ್ರದ್ಧೆಯನು, ಕನ್ನಡಿಗರ್ಸಿರಿಯ ಬೆಳೆಯ ಬೆಳಸಿ.

ಬೆಳೆಯುವ ನಾಡದು,
ಮೈಸೂರು.
ಇಳೆಯ ಮಾದರಿಯದು,
ಮೈಸೂರು.
ಕನ್ನಡಿಗನುಸಿರದು,
ಮೈಸೂರು.
ನಾಲುಮಡಿ ಕೃಷ್ಣನ
ಮೈಸೂರು.

ಎಂಬ ಭಾಗವನ್ನು ಓದಿದರೆ, ಮೈಸೂರು ಸಂಸ್ಥಾನದ ಪ್ರಜೆಗಳ ಹೃದಯದಿಂದ ರಾಜಭಕ್ತಿಯು ಉಕ್ಕಿ ಹರಿಯುತ್ತದೆ. ರಾಜರ್ಷಿಗಳಾಗಿ ಪ್ರಜೆಗಳನ್ನು ಮಕ್ಕಳಂತೆ ಕಾಪಾಡುತ್ತಿದ್ದ ಶ್ರೀಮನ್ನಾಲ್ವಡಿ ಶ್ರೀ ಕೃಷ್ಣರಾಜೇಂದ್ರ ಪ್ರಭುವರ್ಯರವರ ಮರಣದಿಂದುಂಟಾದ ಅಪಾರ ನಷ್ಟದಿಂದ ನೊಂದ ಮನಸ್ಸು, ಈಗ ತಾನೆ ಹೊಸದಾಗಿ ಪ್ರಾರಂಭವಾಗಿರುವ ಶ್ರೀಮನ್ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರವರ ರಾಜ್ಯಭಾರವೂ ಹಿಂದಿನ ರಾಜ್ಯಭಾರದಂತೆಯೇ ಯಶಸ್ವಿಯಾಗುವಂತೆ ಅನುಗ್ರಹಿಸೆಂದು ತಾಯಿ ಚಾಮುಂಡೇಶ್ವರಿಯನ್ನು ಬೇಡಿಕೊಳ್ಳುತ್ತದೆ; ನಮ್ಮ ಸಂಸ್ಥಾನದ ರಾಜವಂಶದ ಮೂಲಪುರುಷರಾದ ಶ್ರೀ ಯದುರಾಯರವರು

ಪ್ರಾರ್ಥಿಸಿದಂತೆ "ಶ್ರೀಕೃಷ್ಣರಾಜ ರಜತ ಮಹೋತ್ಸವ ಪ್ರಗಾಥ" ಎಂಬ ಕವನದಲ್ಲಿ ಸೂಚಿತವಾಗಿರುವ

ಧರ್ಮದೊಲವ ನಮಗೆ ನೀಡು,
ಸತ್ಯ ನಿಲಿಸುವಂತೆ ಮಾಡು,
ಹಿರಿಯ ಮೈತ್ರಿಗಳನು ಕೂಡು,
ಕರುಣದಿಂದ ಬಿಡದೆ ನೋಡು,
ಕಾಯಿ, ತಾಯಿ, ನಮ್ಮನಾಡು,
ನಮ್ಮ ಮನೆಯನು,
ನಡಸಿ, ಬೆಳಸಿ, ಹಿರಿದು ಮಾಡು
ನಮ್ಮ ಮನೆಯನು.

ಎಂಬ ಪ್ರಾರ್ಥನೆ ಸಂತತವಾಗಿ ಫಲಿಸುತ್ತ ಬರಲೆಂದು ರಾಜಭಕ್ತಿಯಿಂದ ಹಾರೈಸುತ್ತದೆ; ರಾಜಸೇವಾಸಕ್ತರ ರಾಜಭಕ್ತಿ ಪೂರಿತವಾದ ಹೃದಯದಿಂದ ಹೊರಹೊಮ್ಮಿರುವ ವಾಣಿಗಳನ್ನು ನೆನೆನೆನೆದು ಹಿಗ್ಗುತ್ತದೆ.

ಎರಡನೆಯದಾಗಿ, 'ಶ್ರೀ'ಯವರಿಗಿರುವ ಕನ್ನಡ ಭಾಷೆಯ ಮೇಲಿನ ಪ್ರೇಮವೂ ಅಧಿಕವಾದುದು. ಕನ್ನಡದ ಪುರೋಭಿವೃದ್ಧಿಗಾಗಿ ಯಥೇಷ್ಟವಾಗಿ ಹಣವನ್ನು ಕೊಟ್ಟು, ಶ್ರಮವನ್ನು ಸಹಿಸಿ, ಹೆಚ್ಚಿನ ಸೇವೆಯನ್ನು ಅವರು ಸಮರ್ಪಿಸಿಯೂ ಸಮರ್ಪಿಸುತ್ತಲೂ ಇರುವುದೇ ಅದಕ್ಕೆ ನಿದರ್ಶನ. ಅವರು "ಕಾಣಿಕೆ" ಎಂಬ ಕವನದಲ್ಲಿ ಹೇಳಿರುವ "ಕನ್ನಡ ನುಡಿ, ನಮ್ಮ ಹೆಣ್ಣು, ನಮ್ಮ ತೋಟದಿನಿಯ ಹಣ್ಣು" ಎಂಬ ಮಾತುಗಳು ಕನ್ನಡ ನುಡಿಯ ಮೇಲಿನ ಪ್ರೀತಿಯಿಂದ ತುಂಬಿದ ಅಂತಃಕರಣದ ಮಾತುಗಳು. ಅದೇ ಕವನದ

ಮೊದಲು ತಾಯ ಹಾಲ ಕುಡಿದು,
ಲಲ್ಲೆಯಿಂದ ತೊದಲಿ ನುಡಿದು,
ಕೆಳೆಯರೊಡನೆ ಬೆಳೆದು ಬಂದ
ಮಾತದಾವುದು —
ನಲ್ಲೆಯೊಲವ ತೆರೆದು ತಂದ
ಮಾತದಾವುದು —

ಎಂಬ ಮಾತುಗಳು ತಮ್ಮದೇ ಆದೊಂದು ಸರಳ ಸೌಂದರ್ಯದಿಂದ ಶೋಭಿಸುತ್ತಿವೆ.

ಮೂರನೆಯದಾಗಿ, ನಾಡಿನ ಮೇಲಿನ ಮಮತೆಯ ವಿಚಾರ. 'ಶ್ರೀ'ಯವರು "ಕನ್ನಡ ತಾಯ ನೋಟ" ಎಂಬ ಕವನದಲ್ಲಿ ಮತ್ತು "ಕನ್ನಡದ ಬಾವುಟ" ಎಂಬ ಕವನದಲ್ಲಿ ಒಟ್ಟು ಕನ್ನಡ ನಾಡಿನ ಮೇಲಿನ ಪ್ರೇಮವನ್ನೂ ಹೃದಯಂಗಮವಾಗಿ ವ್ಯಕ್ತಗೊಳಿಸಿದ್ದಾರೆ. "ಮೈಸೂರು ಮಕ್ಕಳು" ಎಂಬ ಕವನದಲ್ಲಿ "ಬಾನ ಕರೆಯಲಿ ಹುದುಗಿ ಕಾರ ಮುಗಿಲಂತಿಹುವು" ಎಂದು ಬೆಟ್ಟಗಳನ್ನು ವರ್ಣಿಸಿದ್ದಾರೆ. "ಪಯಿರುಗಳ ಬದುಕಾಗಿ, ಹೊಳಲುಗಳ ಬೆಳಕಾಗಿ, ಕಣ್ಣುಗಳ ಬೆರಗಾಗಿ ಹರಿವ ಹೊನಲು" ಕಾವೇರೀ ನದಿಯೇ ಮುಂತಾದುವನ್ನೂ ಬಣ್ಣಿಸಿದ್ದಾರೆ. ಒಟ್ಟು ಕನ್ನಡ ನಾಡಿನ ಹಿಂದಿನ ವೈಭವವನ್ನೂ, ಇಂದಿನ ಹೀನ

ದಶೆಯನ್ನೂ 'ಶ್ರೀ'ಯವರು "ಕನ್ನಡ ತಾಯ ನೋಟ" ಎಂಬ ಕವನದಲ್ಲಿ ವರ್ಣಿಸಿ, ಮುಂದಿನ ಮಂಗಳದ ಐಸಿರಿಯ ಆಶೆಯನ್ನು ಮಂಡಿಸಿ, ಹೃದಯವೇಧಕ ವಾದ ಆ ಕವನವನ್ನು ಮುಗಿಸಿದ್ದಾರೆ. ಅದರಲ್ಲಿರುವ

ಏನು ಚೆಲುವಿನ ನಾಡು! ಚೆಲುವು ಚೆಲ್ಲುವ ನಾಡು! ಕನ್ನಡದ ನಾಡು!
ಏನು ಚಿನ್ನದ ನಾಡು! ನಮ್ಮೊಲುಮೆಯಾ ನಾಡು! ನಮ್ಮಿನಿಯ ನಾಡು!

ಎಂಬ ವರ್ಣನೆಯನ್ನು ಓದಿದಾಗ ಅಭಿಮಾನದಿಂದಲೂ ದೇಶವಾತ್ಸಲ್ಯದಿಂದಲೂ ಹೃದಯವೇ ಉಬ್ಬಿದಂತೆ ತೋರುವುದು. ಮುಂದೆ ಕನ್ನಡದ ತಾಯಿ

ಕೇಳಣ್ಣ, ನಾನೊಬ್ಬ ಹಳೆಯ ಮುತ್ತೈದೆ— ಹಿರಿದಾಗಿ ಬಾಳಿದವಳೊಮ್ಮೆ;
ಈಗ ಬಡತನ, ಬಡವೆ, ಬಡವಾದೆ: ಬಡವಾದ ಮಕ್ಕಳನು ನೋಡಿ,
ಬತ್ತಿ, ಮತ್ತಿಮ್ಮಡಿಯ ಸೊರಗಿನಲಿ ಬಡವಾದೆ— ಸಾವಿಲ್ಲ ನನಗೆ!

ಎಂದು ನುಡಿದಂತೆ ಚಿತ್ರಿತವಾಗಿರುವ ಮಾತುಗಳನ್ನು ಓದಿದಾಗ ತಟಕ್ಕನೆ ಕಂಬನಿ ಯುರುಳುವುದು. ಕನ್ನಡದ ತಾಯಿ ತನ್ನ ಅಕ್ಕ ತಂಗಿಯರ ಮಕ್ಕಳು ವೈಭವದಿಂದ ಕೂಡಿ "ಚಿನ್ನವಾಗಿ" ತೂಗಿ ತೊನೆಯುತ್ತಿರುವುದನ್ನು ಬಣ್ಣಿಸಿ ತನ್ನ ಮಕ್ಕಳ ಕಾರ್ಪಣ್ಯವನ್ನು ಕುರಿತು ಹಲುಬಿದುದನ್ನು ಕೇಳಿದಂತೆಲ್ಲ, "ಕನ್ನಡಿಗರಿಗೆ ಆ ಸುದಿನ ಗಳು ಬರುವುದೆಂದಿಗೆ? ಕನ್ನಡಿಗರೆಲ್ಲ ಒಕ್ಕಟ್ಟಿನಿಂದ ಒಂದಾಗಿ ಒಲವಿನಿಂದ ಬಾಳು ವುದೆಂದಿಗೆ?" ಎಂದು ಹೃದಯವು ಚೀರಿಡುವುದು. ಕೊನೆಗೆ, ತನ್ನ ಮಕ್ಕಳೆಲ್ಲರೂ ಉತ್ಸಾಹದಿಂದ ತಮ್ಮ ಕರ್ತವ್ಯವನ್ನು ನೆರವೇರಿಸುವುದಾಗಿ ಅವರ ಪರವಾಗಿ ವಾಗ್ದಾನವಾದೊಡನೆಯೇ "ಮುದುಕಿ ಎಳೆಯವಳಾಗಿ, ಮಾಸು ಮಿಂಚೆಳೆಯಾಗಿ, ಸವೆದ ಮೈ ತುಂಬಿ, ಕಡಲತೆರೆಗಳನುಟ್ಟು, ಬಟ್ಟಬಯಲನು ತೊಟ್ಟು, ಅರಿಲ ಮುಡಿಗಿಟ್ಟು" ತಾಯಿ ಭುವನೇಶ್ವರೀ ದೇವಿ ರಥವೇರಿದಳೆಂದು ಕೇಳಿದಾಗ ಭಕ್ತಿ ವಿಶ್ವಾಸಗಳಿಂದ ರೋಮಾಂಚವಾಗುವುದು; ಹೃದಯವೇ ಅರಳು ತಾವರೆಯಾಗಿ ತಾಯಿಯ ಪೂಜೆಗೆ ಮೀಸಲು ಮುಡಿಪಾಗುವುದು. "ಕನ್ನಡದ ಬಾವುಟ"ವೆಂಬ ಕವನದಲ್ಲಿ,

ಬಾಳ್ ಕನ್ನಡ ತಾಯ್
ಏಳ್ ಕನ್ನಡ ತಾಯ್
ಆಳ್ ಕನ್ನಡ ತಾಯ್
ಕನ್ನಡಿಗರೊಡತಿ ಓ ರಾಜೇಶ್ವರೀ!

ಎಂದು ಹಾಡಿ ಹುರಿದುಂಬಿಸಿದ ಮಾನ್ಯರಾದ ಹಿರಿಯ ಕನ್ನಡಿಗರು ಚಿರಕಾಲ ಕಿರಿಯ ರನ್ನು ಹರಸುತ್ತ, ಹಾಡುತ್ತ, ಆ ರಾಜೇಶ್ವರೀದೇವಿಯ— ಆ ಭುವನೇಶ್ವರೀ ಮಾತೆಯ— ಸೇವೆಯನ್ನು ಇನ್ನೂ ಹೆಚ್ಚು ಹೆಚ್ಚಾಗಿ ಸಲ್ಲಿಸುತ್ತ ಬರುವಂತೆ ಆ ತಾಯಿ ಅನುಗ್ರಹಿಸಲೆಂದು ಮನಸ್ಸು ಭಕ್ತಿಯಿಂದ ಪ್ರಾರ್ಥಿಸುತ್ತದೆ.

ಸಿ. ಕೆ. ವೆಂಕಟರಾಮಯ್ಯ

# ಇಂಗ್ಲಿಷ್ ಗೀತಗಳು

ಶ್ರೀಕಂಠಯ್ಯನವರ ಕೃತಿಗಳಲ್ಲಿ 'ಇಂಗ್ಲಿಷ್ ಗೀತಗಳಿ'ಗೆ ಮಹತ್ವದ ಸ್ಥಾನವಿದೆ. ಅವರ ಉಳಿದ ಕೃತಿಗಳಂತೆ ಇದೂ ಕನ್ನಡ ಹೊಸಸಾಹಿತ್ಯದಲ್ಲಿ ನವೀನ ಮಾರ್ಗದ ನೆಲೆ ಹಾಕಿತು. ಗ್ರೀಕರ ರುದ್ರನಾಟಕಗಳನ್ನು ಮೆಚ್ಚಿದ ಶ್ರೀಕಂಠಯ್ಯನವರು ಅವುಗಳ ಭಾಷಾಂತರ ರೂಪಾಂತರಗಳನ್ನು ಕನ್ನಡಕ್ಕಿಳಿಸಿದ್ದಾರೆ. ದುರಂತ ನಾಯಕನ ತತ್ವವನ್ನು ಚೆನ್ನಾಗಿ ಮನನ ಮಾಡಿದ್ದರಿಂದ ಅವರು ರನ್ನನ ಗದಾಯುದ್ಧವನ್ನು ರುದ್ರರೂಪಕವಾಗಿ ಪರಿವರ್ತಿಸಿದರು. ಕನ್ನಡ ಕಾವ್ಯಗಳಲ್ಲಿ ಪ್ರತಿನಾಯಕರಾಗಿ ಬರುವ ಅನೇಕರಲ್ಲಿ ದುರಂತತೆಯನ್ನು ಕಂಡು ಅದನು ವಿಮರ್ಶಿಸಿ ಕಾವ್ಯರಸಾಸ್ವಾದನದಲ್ಲಿ ಇನ್ನೊಂದು ರುಚಿಯನ್ನು ಹುಟ್ಟಿಸಿದ್ದಾರೆ. ದುರ್ಯೋಧನ, ರಾವಣ, ಕರ್ಣ, ಶಿಶುಪಾಲ ಮೊದಲಾದ ಪಾತ್ರಗಳು ಈ ವಿಮರ್ಶಕ ದೃಷ್ಟಿಯಲ್ಲಿ ಹೊಸ ಕಳೆಯನ್ನು ಹೊಂದಿವೆ. ರುದ್ರನಾಟಕಗಳ ಬರೆವಣಿಗೆಯಲ್ಲಿ, ಕಾವ್ಯಭಾಗಗಳನ್ನು ರೂಪಕಕ್ಕಿಳಿಸುವದರಲ್ಲಿ, ದುರಂತ ತತ್ವವನ್ನು ವಿಮರ್ಶಿಸುವಲ್ಲಿ. ಅವರನ್ನು ಅನೇಕರು ಹಿಂಬಾಲಿಸಿದ್ದಾರೆ. ಅವರ ಪ್ರಗಾಥಗಳಾದರೂ ಆಂಗ್ಲ. ಗ್ರೀಕ್ ಸಾಹಿತ್ಯದ ಓಡುಗಳ (Ode) ಓಟ, ರಭಸಗಳನ್ನು ಕನ್ನಡದ ಧಾಟಿಯಲ್ಲಿ ತಂದಿವೆ. ಅವರ ಮುಖ್ಯ ಸಂಪಾದಕತ್ವದಲ್ಲಿ ಪ್ರಚಾರಗೊಳ್ಳುತ್ತಿರುವ ಮೈಸೂರು ವಿಶ್ವವಿದ್ಯಾನಿಲಯದ ಕಾವ್ಯ ಸಂಗ್ರಹಗಳು ಕಾವ್ಯಾಭ್ಯಾಸದಲ್ಲಿ ನೂತನ ದೃಷ್ಟಿಯನ್ನುಂಟುಮಾಡುತ್ತಿವೆ. ಮೈಸೂರು ವಿಶ್ವವಿದ್ಯಾನಿಲಯದ ಲಘು ಪುಸ್ತಕ ಮಾಲಿಯಲ್ಲಿ ಬರುವ ಕವಿಕಾವ್ಯ ವಿಮರ್ಶೆಯ ಪುಸ್ತಕಗಳು ಕಿರಿದರಲ್ಲಿ ಹಿರಿದಾದ ಹಾದಿಯನ್ನು ಬಳಕೆಗೆ ತರುತ್ತಿವೆ. ಅವರ ಉಪನ್ಯಾಸಗಳು ಪ್ರಸ್ತಾವನೆಗಳು ಕನ್ನಡ ಭಾಷಾಭ್ಯಾಸಕ್ಕೆ ವಿಸ್ತಾರವನ್ನೂ ಆಳವನ್ನೂ ಎತ್ತರವನ್ನೂ ತಂದು 'ಶ್ರೀನಿವಾಸ'ರು 'ಶ್ರೀ'ಯವರನ್ನು 'ಕನ್ನಡಕ್ಕೆ ಕಣ್ವಮುನಿ' ಎಂದುದನ್ನು ಸಾರ್ಥಕಮಾಡುತ್ತಿವೆ. 'ಶ್ರೀ'ಯವರು ಮಾರ್ಗದರ್ಶಿಗಳು, ಮಾರ್ಗಕಾರರು. ಅವರ ಇಂಗ್ಲಿಷ್ ಗೀತಗಳು ಭಾಷಾಂತರಗಳಾದರೂ ಹೊಸ ಕನ್ನಡ ಭಾವಗೀತಗಳಿಗೆ ಮಾರ್ಗದರ್ಶಕ ಆಗಿವೆ.

'ಇಂಗ್ಲಿಷ್ ಗೀತಗಳು' ಪುಸ್ತಕ ರೂಪವಾಗಿ ಪ್ರಕಾಶಗೊಂಡು ಹದಿನಾಲ್ಕು ವರ್ಷಗಳಾದುವು. ಅದಕ್ಕೂ ಮೊದಲು ಅದರ ಮಿಂಚು ಅಲ್ಲಿ ಇಲ್ಲಿ ಹೊಡಕರಿಸಿತ್ತು. ಅವರೇ ಈ ಪುಸ್ತಕದ ಪ್ರಸ್ತಾವನೆಯಲ್ಲಿ ಹೇಳಿದಂತೆ ೧೯೧೯ರಲ್ಲಿ, ೧೯೨೧ರಲ್ಲಿ, ೧೯೨೪ರಲ್ಲಿ ಈ ಗೀತಗಳೊಳಗಿನ ಮೂರು, ಹನ್ನೆರಡು, ಇಪ್ಪತ್ನಾಲ್ಕು ಗೀತಗಳು ಪ್ರಕಟವಾಗಿದ್ದವು. ಈ ಗೀತಗಳು ಮಾತ್ರ ೧೯೧೯ರ ಪೂರ್ವದಲ್ಲಿಯೇ ರಚಿತವಾದವುಗಳು. 'ಭಾರತಮಾತೆ' ಎಂಬ ಗೀತವು ೧೯೧೪ರದು. 'ಕನ್ನಡ ಮಾತು ತಲೆಯೆತ್ತುವ ಬಗೆ'ಯನ್ನು ಕುರಿತು ಅವರು ಧಾರವಾಡದಲ್ಲಿ ಉಪನ್ಯಾಸ ಮಾಡಿದುದು ೧೯೧೧ರಲ್ಲಿ. ಮುದ್ದಣನ ವಿಷಯ ಅವರು ಬರೆದುದು ಅದಕ್ಕೂ ಬಹಳ ಹಿಂದೆ. 'ಶ್ರೀ'ಯವರ ಕನ್ನಡದ ಆರಾಧನೆಯು ಚಿಕ್ಕ ಪ್ರಾಯದಲ್ಲಿಯೇ ಪ್ರಾರಂಭವಾಗಿದೆ: ಯಾವ ಕನ್ನಡ ಹೃದಯದ ಸಂತೋಷಕ್ಕಾಗಿ ಇವರ ಆಂಗ್ಲ ಸಂಸ್ಕೃತಿಯನ್ನು

ಅರಗಿಸಿಕೊಂಡ ಚಿತ್ತವು ಈ ಗೀತಗಳನ್ನು ಕನ್ನಡಿಸಿತೋ, ಆ ಕಾಲವು ಅವರ ಪ್ರಾಯದ ಇಪ್ಪತ್ತೈದರಿಂದ ಮೂವತ್ತರ ಒಳಗಿನದು ಎಂದು ತೋರುತ್ತದೆ. ಇಂಗ್ಲಿಷ್ ಗೀತಗಳ ಅರುವತ್ತುಮೂರರಲ್ಲಿ ಮೂವತ್ತು ಪ್ರಣಯದ ಪ್ರಪಂಚವನ್ನು ವಿಸ್ತರಿಸಿದ್ದು ಆಶ್ಚರ್ಯವಲ್ಲ. ಅವರ ಕವನಗಳನ್ನು ಮೊದಲು ಬೆಳಕಿಗೆ ತಂದವರು ಅವರೊಬ್ಬ ವಿದ್ಯಾಗುರುಗಳು. ಗೀತೆಗಳ ಸಮಗ್ರ ಸಂಗ್ರಹವನ್ನು ಪುರಸ್ಕರಿಸಿದವರು ಅವರ ಇನ್ನೊಬ್ಬ ವಿದ್ಯಾಗುರುಗಳು. ಪ್ರಬುದ್ಧ ಕರ್ಣಾಟಕವೂ ಬೆಂಗಳೂರಿನ ಕರ್ಣಾಟಕ ಸಂಘವೂ ಮೊದಲಾದುದು ಅವರ ವಿದ್ಯಾರ್ಥಿಗಳಿಂದ. ಆ ಸಂಘವೇ ಗೀತೆಗಳನ್ನು ಪ್ರಕಟಿಸಿತು. ಆ ಮೊದಲು ಆ ಸಂಘದಿಂದಲೇ ಶ್ರೀ ಡಿ. ವಿ. ಗುಂಡಪ್ಪನವರ ಎರಡು ಕವನ ಸಂಗ್ರಹಗಳು ಪ್ರಕಟವಾಗಿದ್ದುವು. 'ಶ್ರೀ'ಯವರ ಮಿತ್ರರಾದ ಇವರು ಈ ಗೀತಗಳಲ್ಲಿ ಇಪ್ಪತ್ನಾಲ್ಕನ್ನು ಬೆಳಕಿಗೆ ತಂದು ಕನ್ನಡ ನಾಡಿನಲ್ಲಿ ಇಂಥವರ ಕೃತಿಗಳನ್ನು ಹೆಚ್ಚಾಗಿ ನೋಡಬೇಕೆಂಬ ಆಶೆಯನ್ನು ಹುಟ್ಟಿಸಿದ್ದರು. ಶ್ರೀ ಬೆಳ್ಳಾವೆ ವೆಂಕಟನಾರಣಪ್ಪನವರು ಗೀತಗಳ ಮುನ್ನುಡಿಯಲ್ಲಿ ಪ್ರೋತ್ಸಾಹಕವಾಗಿ ಶ್ರೀಕಂಠಯ್ಯನವರನ್ನು ಕನ್ನಡದ ಅಭಿವೃದ್ಧಿಗೆ ಗಲಭೆ ಮಾಡದೆ ಶ್ರಮಿಸುತ್ತಿರುವ ಪಂಡಿತರೆಂದೂ ಹೆಸರುವಾಸಿಗೆ ಇಷ್ಟಪಡದೆ ಗೋಪ್ಯವಾಗಿ ಭಾಷಾಸೇವೆಯನ್ನು ಮಾಡುತ್ತಿರುವ ವಿದ್ವಾಂಸರೆಂದೂ ಬರೆದದ್ದುಂಟು. ಗೀತೆಗಳ ಪ್ರಕಟನೆಯ ಅನಂತರದಲ್ಲಿ ಅವರ ರುದ್ರನಾಟಕಗಳು, ಅವರ ಸಮ್ಮೇಲನಾಧ್ಯಕ್ಷತೆ, ಸ್ವಾಗತಾಧ್ಯಕ್ಷತೆ, ಪರಿಷತ್ತಿನ ಉಪಾಧ್ಯಕ್ಷತೆ, ಅವರ ಸಂಚಾರ, ವಿಚಾರ, ಪ್ರಚಾರ—ಇವೆಲ್ಲವೂ ಕೂಡಿ ಅವರ ಪಾಂಡಿತ್ಯ ವಿದ್ವತ್ತುಗಳೊಡನೆ ಸರಿಮಿಗಿಲೆನಿಸಿ ಬಂದ ತ್ಯಾಗ ಮತ್ತು ಕೃತಿಸಾಮರ್ಥ್ಯವೂ, ಕಾರ್ಯಶಕ್ತಿಯೂ ಸಹಜವಾಗಿ ಗಲಭೆಯನ್ನುಂಟುಮಾಡಿವೆ; ಸ್ವಾಭಾವಿಕವಾಗಿ ಹೆಸರುವಾಸಿಯನ್ನು ತಂದಿವೆ. ಅವರ ಪೂರ್ವದ ಗೋಪ್ಯಸ್ವಭಾವವು ಅವರ ಕೆಲ ವಿದ್ಯಾರ್ಥಿಗಳಲ್ಲಿ ಅವರು ಕನ್ನಡವನ್ನು ದುರ್ಲಕ್ಷಿಸುವರು ಎಂಬ ಅಪವಾದವನ್ನು ಹುಟ್ಟಿಸುವಂತಿತ್ತು, ಎಂದು ಹೇಳಿದರೆ ಆಶ್ಚರ್ಯವಾಗಿ ತೋರಬಹುದು. ಇಂದು ಅವರ ಮುಂದಾಳಿಕೆಯು ಕನ್ನಡವೊಂದೇ ಅವರ ಲಕ್ಷ್ಯವಿರುವಂತೆ ಕೆಲವರಲ್ಲಿ ಭ್ರಮೆಯುಂಟುಮಾಡುವಂತಿದೆ. ಆದರೆ ಅವರ ಸಾಹಿತ್ಯಾಭ್ಯಾಸವೂ, ಕನ್ನಡದ ಪ್ರೀತಿಯೂ ಮೊದಲಿಸಿಂದಲೂ ಬೆಳೆದುಕೊಂಡುಬಂದಿವೆ. 'ಇಂಗ್ಲಿಷ್ ಗೀತಗಳು' ಒಬ್ಬ ಸಾಹಿತ್ಯ ಸಾಧಕನನ್ನಲ್ಲ, ಸಾಹಿತ್ಯಸಿದ್ಧನನ್ನು, ಪ್ರಕಾಶಗೊಳಿಸಿದವು. ಅದರಲ್ಲಿ ಪ್ರಯೋಗಕ್ಕಿಂತ ಪರಿಣತಿಯ ಲಕ್ಷಣಗಳು ಹೆಚ್ಚಾಗಿವೆ.

'ಇಂಗ್ಲಿಷ್ ಗೀತಗಳು' ಸ್ವಯಂಸ್ಫೂರ್ತ ಕೃತಿಯಲ್ಲ; ಭಾಷಾಂತರಿತ ಕೃತಿ; ಅದರ ಮಹತ್ವ ಅಷ್ಟೇನು ಎಂದು ಕೆಲವರು ಹೇಳಬಹುದು. ಆದರೆ ಈ ಕೃತಿಯಲ್ಲಿಯೇ 'ಶ್ರೀ'ಯವರ ವ್ಯಕ್ತಿತ್ವದ ಲಕ್ಷಣಗಳಿವೆ. ಆಂಗ್ಲ ಸಾಹಿತ್ಯ ಸಂಸ್ಕೃತಿಯು ದೇಶೀಯ ಭಾಷೆಗಳಲ್ಲಿ ಬರುವಂತಾಗಬೇಕು ಎಂಬುದು ಆಂಗ್ಲ ವಿದ್ಯಾಭ್ಯಾಸದ ಉದ್ದೇಶಗಳಲ್ಲೊಂದಾಗಿತ್ತು. ಆ ಶಿಕ್ಷಣದ ಋಣ ತೀರಿಸಿ ಸಾರ್ಥಕತೆಯನ್ನು ಹೊಂದಿದ ಪ್ರಮುಖ ಸುಶಿಕ್ಷಿತರು 'ಶ್ರೀ'ಯವರು. ಅವರ ಗೀತಗಳ ಸಂಗ್ರಹವು 'ಯಾರು ಭಾರತ ಆಂಗ್ಲ ದೇಶಗಳ ಆತ್ಮಸಮ್ಮಿಲನದಲ್ಲಿ ನಂಬಿರುವರೋ ಅವರಿಗೆ' ಅರ್ಪಿತವಾಗಿದೆ. ಅವರಿಗೆ ಇಂಗ್ಲಿಷ್ ಭಾಷೆ ಕನ್ನಡ

ನುಡಿ— ಇವರಿಬ್ಬರೂ ಇನಿಯರು. ಇವಳ ಸೊಬಗು ಅವಳಿಗೆ, ಅವಳ ತೊಡಿಗೆ ಇವಳಿಗೆ ಇಟ್ಟು ನೋಡುವುದು ಅವರಿಗೆ ದಿನದ ವಿಲಾಸ—ಎಂದು ಅವರ 'ಕಾಣಿಕೆ'ಯ ಕವನವೇ ಹೇಳುವದು. ಅದು ಅವರ ಸ್ವಂತ ಕವನ. ಇಂಗ್ಲಿಷು ಅವರ 'ಜೀವದುಸಿರು ಕಣ್ಣು' ಆಗಿರಬಹುದಾದರೂ ಭಾರತವೇ ಅವರಿಗೆ ಮಾತೆ. ಭಾರತ ಮಾತೆಯನ್ನು ಅವಳು ಎಂದು ತಲೆಯೆತ್ತುವಳೋ ಎಂದು ಸ್ವಯಂಸ್ಫೂರ್ತಿಯಿಂದ ಹಾಡಿದ್ದಾರೆ. ತಾನು ಮೈಸೂರು ದೇಶದ ಮಗು, ಎಂಬದನ್ನು ಅವರು ಮರೆಯಲಾರರು. ಅವರ ರಾಜಭಕ್ತಿ, ದೇಶಪ್ರೇಮ ಅವರನ್ನು ಹಾಡಹಚ್ಚಿದೆ. 'ಕನ್ನಡ ತಾಯಿ ನೋಟ'ವು ಅವರಿಗೆ ಹಂಪೆಯಲ್ಲಿ ಕಂಡರೂ ಕನ್ನಡ ನುಡಿಯು ಅವರ ಜೀವವೀಣೆಯಾಗಿ ಮೊದಲಿಂದಲೂ ಇದೆ. 'ಶ್ರೀ'ಯವರ ಪ್ರಾಯದ ಕಾಲವು ಸಮುದ್ರದಾಚೆ ಹೋದ ಚಿತ್ತವು ಈಚೆ ಬರುತ್ತಿದ್ದ ಕಾಲ. ಹೀಗಿದ್ದು ಈ ಕನ್ನಡ ಭಕ್ತನಿಗೆ ಇಂಗ್ಲಿಷದ ಊಳಿಗವೇ ದಿನದ ವೃತ್ತಿಯಾಗಿತ್ತು. ಈ ಒಳದೋಟಿಯಲ್ಲಿಯೇ ಅವರ ಕೃತಿಯ ಉಗಮವಿದೆ.

ಭಾಷಾಂತರವೆಂದಷ್ಟಕ್ಕೆ— ಯಾವ ಸಾಹಿತ್ಯದಲ್ಲೆಯಾಗಲಿ, ಕನ್ನಡ ಸಾಹಿತ್ಯದಲ್ಲಂತೂ—ಕಡಿಮೆ ತಿಳಿಯುವ ಕಾರಣವಿಲ್ಲ. ಲಕ್ಷ್ಮೀಶನ ಜೈಮಿನಿ. ಕುಮಾರ ವ್ಯಾಸನ ಭಾರತ, ರುದ್ರಭಟ್ಟನ ಕೃತಿ, ನಾಗವರ್ಮನ ಕಾದಂಬರಿ ಇವು ಕೆಲಮಟ್ಟಿಗಾದರೂ ಏನು? ಭಾಷಾಂತರಗಳಲ್ಲವೇ? ಅದರಿಂದ ಅವುಗಳ ಸಾಹಿತ್ಯ ಗುಣಕ್ಕೆ ಕೊರತೆಯೇ? ಆದರೆ ಅವುಗಳಲ್ಲಿ ಸ್ವತಂತ್ರ ಕೃತಿಯು ವಿಪುಲವಾಗಿದೆಯೆಂದೂ ಹೇಳಬಹುದು. ಅದು ನಿಜ. ಆಂಗ್ಲರ ಯುಗ ಬರುವ ಮುಂಚೆ ಶುದ್ಧ ಭಾಷಾಂತರಗಳ ಕಲೆ ಪರಿಣತವಾಗಿರಲಿಲ್ಲ. ಬಸಪ್ಪಶಾಸ್ತ್ರಿಗಳ ಕೀರ್ತಿಯ ಕೆಲವು ಪಾಲು ಅವರ ಶಾಕುಂತಲಕ್ಕಿದೆ. ಅದು ಭಾಷಾಂತರ. ಭಾಸ ನಾಟಕಗಳ ಭಾಷಾಂತರದಿಂದಲೇ ಅಳಸಿಂಗರಾಚಾರ್ಯರ ಪ್ರತಿಭೆ ಮಿಂಚಲಿಲ್ಲವೆ? 'ಶ್ರೀ'ಯವರು ಇಂಗ್ಲಿಷ್ ಭಾವಗೀತಗಳನ್ನು ಕನ್ನಡಿಸಿರುವಂತೆ ಬೇರೆಯವರೂ ಮಾಡಿದ್ದಾರೆ. ಬೇರೆ ಭಾಷೆಯಲ್ಲಿಯೂ ಇಂಥ ಪ್ರಯತ್ನಗಳಾಗಿವೆ. ಆದರೆ ನನಗೆ ಇದ್ದ ಸಾಹಿತ್ಯ ಪರಿಚಯದಿಂದ ಹೇಳುವುದಾದರೆ ಇಂಗ್ಲಿಷ್ ಗೀತಗಳು ತನ್ನ ಮೊತ್ತದಿಂದಲೂ ಕಾವ್ಯಗುಣದಿಂದಲೂ ಶೈಲಿಯ ಸಮತ್ವದಿಂದಲೂ ತನ್ನ ಜಾತಿಯಲ್ಲಿ ಆದರ್ಶವಾಗಿರುವಂತೆ ಈ ಗುಣಸಮುದಾಯವನ್ನು ನಾನು ಬೇರೆಕಡೆಗೆ ಕಂಡಿಲ್ಲ. ಕನ್ನಡ ಗೀತಗಳನ್ನು ಇಂಗ್ಲಿಷಿನ ಹದಕ್ಕೆ ಹವಣುಗೊಳಿಸುವದು ಹಿತವಾಗಿರುತ್ತದೆಂದು ನನ್ನ ಆಂಗ್ಲ ಕವಿ ಮಿತ್ರರೊಬ್ಬರು ಹೇಳಿದರು. ಇಂಗ್ಲಿಷ್ ಗೀತಗಳನ್ನು ಛಂದದಲ್ಲಿಯೂ ಅಂದದಲ್ಲಿಯೂ ವಿಪರೀತವಾಗದಂತೆ ಪಾಕಕ್ಕಿಳಿಸಿದ ಕರ್ಮ ಕೌಶಲ್ಯವು ಈ ಗೀತಗಳಲ್ಲಿ ಕಂಡುಬರುವದು. ಭಾಷಾಂತರದ ಮೇಲ್ಮೆಯನ್ನು ಹೇಳುವಾಗ ಅದು ಸ್ವತಂತ್ರ ಕೃತಿಗಿಂತಲೂ ಕಷ್ಟತರವಾದ ಕಲೆಯೆಂದು ಹೇಳುವದುಂಟು. ಅದರ ಕಷ್ಟ ಅದಕ್ಕಿರಲಿ. ಭಾಷಾಂತರಕಾರನಲ್ಲಿ ತಾನು ಬಳಸುವ ಭಾಷೆಯ ಜಾಯಮಾನದ ಮರ್ಮ ತಿಳಿಯುವ ಬಿನ್ನಾಣ, ಛಂದದ ಔಚಿತ್ಯ, ರಚನೆಯ ಪ್ರಸನ್ನತೆ, ಶಬ್ದದ ಶಯ್ಯೆ— ಇವುಗಳನ್ನು ಬಳಸುವ ಕೌಶಲ್ಯ ಇರಲೇಬೇಕು. ಅಂಥ ಸಿದ್ಧ ಹಸ್ತವು ಇಂಗ್ಲಿಷ್ ಗೀತಗಳಲ್ಲಿದೆ. ಅಂತೆಯೇ ಈ ಕೃತಿಯಲ್ಲಿ ಅಮೃತದ ಹನಿಯಿದೆ.

ಈ ಸಂಗ್ರಹದಲ್ಲಿ ಇರುವ ಗೀತಗಳು ಒಟ್ಟು ಅರುವತ್ತುಮೂರು. ಅದರಲ್ಲಿ 'ಶ್ರೀ'ಯವರ ಸ್ವಂತ ಕವನಗಳು ಮೂರು. ಎಲ್ಲಕ್ಕೂ ಹೆಚ್ಚೆಂದರೆ ಶೆಲ್ಲಿಯ ಒಂಬತ್ತು ಕವನಗಳು ಇಲ್ಲಿ ಕನ್ನಡಿಸಿವೆ. ಬರ್ನ್ಸನ ಏಳು ಕವನಗಳೂ ವರ್ಡ್ಸ್‌ವರ್ತನ ಐದು ಕವನಗಳೂ ಇಲ್ಲಿ ಎಡೆದೊರಕಿಸಿವೆ. ಬ್ರೌನಿಂಗ್, ಟೆನಿಸನ್, ಸ್ಕಾಟರ ಮೂರು ಮೂರು ಕವನಗಳೂ; ಶೇಕ್ಸ್‌ಪಿಯರ್, ಸೌದೆ, ಬೈರನ್, ಕ್ಯಾಂಬೆಲ್, ಕೌಪರ್ ಇವರ ಎರಡೆರಡು ಕವನಗಳೂ; ಬೇರೆ ಹದಿಮೂರು ಕವಿಗಳ ಒಂದೊಂದು ಕವನವೂ; ಐದು ಸ್ತ್ರೀಯರವೂ; ಎರಡು ಅನಾಮಿಕರವೂ — ಹೀಗೆ ಕವನಗಳ ಹಂಚಿಕೆಯಿದೆ. 'ಯುವ್ವ, ಪ್ರೇಮ, ಮರಣ, ದೇಶಭಕ್ತಿ, ದೈವಭಕ್ತಿ, ಪ್ರಕೃತಿ ಸೌಂದರ್ಯ, ಮಾನವ ಜನ್ಮದ ಸುಖ ದುಃಖಗಳು, ರಾಗದ್ವೇಷಗಳು, ಪುರುಷಾರ್ಥಗಳು, ಜನ್ಮಾಂತರ ದರ್ಶನಗಳು' ಇವೇ ಪ್ರಮುಖವಾದ ವಿಷಯಗಳನ್ನು ಕುರಿತು ಆಂಗ್ಲ ಭಾವಗೀತೆಯ ಭಂಗಿಭಣಿತಗಳನ್ನು ತೋರಿಸುವದು ಇವುಗಳಲ್ಲಾಗಿದೆ. ಇನ್ನೊಂದು ವಿಧದಲ್ಲಿಯೂ ಇವುಗಳನ್ನು ವಿಭಾಗಿಸಬಹುದು. ದೇಶಭಕ್ತಿಯನ್ನು ಕುರಿತು ಹದಿನೈದು, ಪ್ರಕೃತಿ ಸೌಂದರ್ಯವನ್ನು ಕುರಿತು ಆರು, ತಾತ್ವಿಕವಾದವು ಹನ್ನೆರಡು, ಉಳಿದ ಮೂವತ್ತು ಪ್ರಣಯ ಪ್ರಪಂಚಕ್ಕೆ ಸೇರಿದುವು. ಇದರೊಳಗಿನ ಕವನಗಳೆಲ್ಲ ಇಂಗ್ಲಿಷ ಕಾವ್ಯಮಾಲೆಯ ನಾಯಕರತ್ನಗಳೇನೂ ಅಲ್ಲವೆಂದು 'ಶ್ರೀ'ಯವರೇ ಹೇಳಿದ್ದಾರೆ. ಆದರೂ ಆಂಗ್ಲ ಕಾವ್ಯಮಾಲೆಯ 'ಸ್ವರ್ಣ ಭಂಡಾರ' (Golden Treasury), 'ಸಾವಿರದೊಂದು ರತ್ನಗಳು' (Thousand and one gems) — ಇವೇ ಮೊದಲಾದವುಗಳ ಅಭ್ಯಾಸ ಫಲದಿಂದ ಈ ಗೀತೆಗಳು ಬಂದಿರುವದರಿಂದ ಇಲ್ಲಿ ಬೀಕಲು ಫಲ ಒಂದೂ ಇಲ್ಲ. ಇಲ್ಲಿಯ ಪ್ರಣಯ ಗೀತೆಗಳ ಧಾಟಿಯಲ್ಲಿ ಅವರದರ್ಥ ತನ್ನದರ್ಥ ಎಂಬ ಧ್ವನಿ ಕೇಳಬರುವದು. ಉಳಿದ ಪದ್ಯಗಳಲ್ಲಿಯೂ ಹಾಗೆಯೆ. ವರ್ಡ್ಸ್‌ವರ್ತನು 'ಮುದ್ದು ಕುರಿಮರಿ' ಎಂಬ ಪದ್ಯದಲ್ಲಿ 'ಪದದೊಳ ವಳದರ್ಥ ಮಾತ್ರ ಅರ್ಥ ನನ್ನದೆನಿಸಿತು' ಹೀಗೆ ಹೇಳಿರುವನಷ್ಟೆ. 'ಶ್ರೀ'ಯವರು ನಿಃಶಂಕವಾಗಿ ಈ ಕವನಗಳಲ್ಲಿ ಅರ್ಥ ಭಾವ ತನ್ನದು ಎಂದು ಹೇಳಲು ಅಡ್ಡಿಯಿಲ್ಲ. ಇಲ್ಲಿಯ ಕಾವ್ಯರಸದಲ್ಲಿ ಇವರ ಜೀವರಸವು ಬೆರೆತು ಆದ ಹೊಸ ರಸಾಯನಕ್ಕೆ ಬೇರೊಂದು ರುಚಿಯೇ ಬಂದಿದೆ.

ಈ ಗೀತ ಸಂಗ್ರಹದ ವಸ್ತುರಚನೆಯಲ್ಲಿಯೂ ಒಂದು ತತ್ವವು ಧ್ವನಿತವಾಗುತ್ತದೆ. ಒಂದರ ಹಿಂದೊಂದು ಬರುವ ಈ ಗೀತಗಳಲ್ಲಿ ರಾಗಮಾಲಿಕೆಯಂತೆ ಸಂಗತಿಯಿದೆ; ಸಂವಾದವಿದೆ. ಮಾನವ ಭಾವಗಳೇ ಇಲ್ಲಿ ಇಂಗ್ಲಿಷಿನ ಮಾಟ ಬೆಡಗನ್ನು ತೊಟ್ಟಿದ್ದರೂ ಕನ್ನಡದ ಒಪ್ಪ ಧಾಟಿಯಲ್ಲಿ ನಡೆಯುತ್ತಿವೆ. ಭಾಷಾಂತರಕಾರನನ್ನು ಎರಡು ಹೆಂಡಿರ ಕಾಟದಿಂದ ಪೀಡಿತನಾದವನಿಗೆ ಹೋಲಿಸುವವರು ಹೋಲಿಸಲಿ. ಇಬ್ಬರು ಪ್ರಿಯತಮೆಯರೊಡನೆ ಸಮಾನಭಾವದಿಂದ ಸರಸವಾಡುವ ರಸಿಕನ ವಿಲಾಸದ ಹೋಲಿಕೆಯಿಂದ ಇಲ್ಲಿಯ ಕಾವ್ಯದ ಕಾಣಿಕೆ ಹೆಜ್ಜೆಯಿಕ್ಕುವದು. ಕಾಣಿಕೆಯ ಬಾಗಿಲು ತೆರೆದೊಡನೆಯೇ ಪ್ರಕೃತಿ ಸೌಂದರ್ಯದ ಗೀತೆಗಳ ಆಲಾಪನೆ ಕೇಳಬರುವದು. 'ಮುದ್ದಿನ ಕುರಿಮರಿ'ಯ ಚೆಲ್ಲಾಟವು, ಬಾನಾಡಿಯ ಹಾರಾಟವು ನಮ್ಮನ್ನು ನೆಲದೆದೆಯಿಂದ ಸ್ವರ್ಗದ ಅಂತರಂಗಕ್ಕೊಯ್ಯುವದು. ಜೀವನ ಬಿರಿಯ

ವಿಲಾಸಗೃಹವಲ್ಲ; ಕಾಳಗದ ಕಳ. ಕಾಳಗವು ಬರಿಯ ರೌದ್ರದ ರಣಾಂಗಣವಲ್ಲ: ಉತ್ಸಾಹದ ನೃತ್ಯರಂಗ, ತಾಂಡವದ ವಿರಾಟಗೃಹ. ಕಾಳಗದ ಗುರಿಯೇನೊ ವಿಜಯವೇ ಹೌದು. ಆದರೆ ವೀರಮರಣದಿಂದ ವಿಭೂಷಿತವಾಗದ ರಣವು ನೈವೇದ್ಯ ಪ್ರಸಾದಗಳಿಲ್ಲದ ಪೂಜೆಯಿದ್ದಂತೆ. ಅದು ಐಚ್ಛಿಕವಲ್ಲ, ಅನಿವಾರ್ಯ. ಆದರೂ ಆ ಅನಿವಾರ್ಯದಲ್ಲಿ ಅಗತಿಕತೆಯಿಲ್ಲ; ಸ್ವಚ್ಛಂದ ವಿಹಾರವಿದೆ. ವೀರಗಲ್ಲುಗಳಿಂದಲೇ ಕನ್ನಡನಾಡಿನ ಕಟ್ಟಡ ಆಗಿರುವಾಗ ಅವರ ಮಹತ್ವ ಕನ್ನಡಿಗರಿಗೆ ಬೇರೆ ಹೇಳಬೇಕಾಗಿಲ್ಲ. ಈ ಉತ್ಸಾಹ, ರೌದ್ರ, ಕಾರುಣ್ಯಗಳ ಮಧ್ಯದಲ್ಲಿ ಬ್ಲೆಸ್ ಓವರ್ ಕವನದ ಲಾವಣಿಯು, ದೇಶಸೇವಕನ ಹಾಡು ಬೇರೊಂದು ವ್ಯಂಗ್ಯವಿಲಾಸದಿಂದ ನಮ್ಮನ್ನು ಎಚ್ಚರಗೊಳಿಸುವವು. ಇಲ್ಲಿಯ ದೇಶಪ್ರೇಮದ ಗೀತೆಗಳು ಇಂಗ್ಲ್ಯಾಂಡ ದೇಶವನ್ನು ಕುರಿತವುಗಳಾದರೂ ಅಲ್ಲಿಯ ಹುರುಡು ಮಾನವರೆಲ್ಲರಿಗೂ ಸ್ವಾಭಾವಿಕವಾದುದು. ಯಾವ ದರ್ಪಕ್ಕೂ ಬಗ್ಗದ ಯಾವ ದುಃಖಕ್ಕೂ ತಗ್ಗದ 'ಬಡವನ ಹುರುಡು' ಉತ್ಸಾಹ ಗೀತದ ಜೀವಸ್ವರವಾಗಿ ಮಿಡಿಯುವದು. ಆಮೇಲೆ ಪ್ರೇಮದ ಹಾಡುಗಳಿಗೆ ಪ್ರಾರಂಭವಾಗುವದು. ಹೌದು: ಗೆಲುವಿನ ಮನೆಯಲ್ಲಿ ಪ್ರಣಯ ಒಂದು ಕ್ರೀಡೆ, ಲೀಲೆ. ಉಳಿದಲ್ಲಿ ಅದು ಆವೇಶ, ಹುಚ್ಚು. ಮಾದಮಾದಿ, ಕನಕಾಂಗಿ, ಮುದಿಯ ರಾಮುಗೌಡ, ದುಃಖಸೇತು, ಕಾರಿಹೆಗ್ಗಡೆಯ ಮಗಳು, ಚೋಳಕನ್ನಿಕೆಯರು—ಇವು ಆ ತಂಬೂರಿಯ ತಂತಿಗಳು. ಇವುಗಳ ಮಧ್ಯದಲ್ಲಿ ತಾನವಿತಾನವಾಗಿ ಬರುವುದು ಪ್ರಣಯದ ಮುಗ್ಧಮನೋಹರ ಭಾವಲಹರಿ. 'ಪದುಮ', 'ಅರೆಯಾವುದಿಲ್ಲಿ' ಎಂಬ ಗೀತೆಗಳು ಈ ಪ್ರಣಯದ ಚಿತ್ರಕ್ಕೆ ವಿರಹದ ಕುಂಚವನ್ನೆಳೆಯುವವು. ಮುಂದೆ ಬರುವ ಪದ್ಯ ಇರುಳುದೇವಿಯನ್ನು ಕುರಿತು. ಇಲ್ಲಿಂದ ಮುಂದೆ ಬೆಳಕು ಕತ್ತಲೆಗಳ ನೆರಳು ಬಿಸಿಲಾಟಕ್ಕೆ ಪ್ರಾರಂಭವಾಗುವದು. ಹಳೆಯ ಪಳಕೆಯ ಮುಖಗಳು ಚಿತ್ತದ ಚಿತ್ರಶಾಲೆಯಲ್ಲಿ ಹಾಯ್ದು ಹೋಗುವವು. ಪರಲೋಕದ ಸದ್ದು ಕಿವಿಗೆ ಬೀಳುವದು. ಬೇರೊಂದು ಕಡಲು ಹೊಯ್ಯುವದು, ನೆಮ್ಮುಗೆಯ ನಾಡ ಕನಸು ಕಾಣುವದು, ಪೆಡಸು ದಾರಿಯ ಬಿರುಸು ಕಾಲೊತ್ತುವದು. ಆದರೆ ಜೀವನವೇನೊ ತಟಕ್ಕನೆ ಸಾವಿನ ತಿರುಗಣೆಗೆ ನೆಗೆಯುವುದಿಲ್ಲ. ಹಾಗೂ ಹೀಗೂ ಎರಡು ಮನಸ್ಸು ಆಗುವದುಂಟು. ಹೋರಾಟದಲ್ಲಿಯೂ ಸವಿ ತೋರುವದುಂಟು. ಸತ್ತರೂ ಸಾಯದಿರುವ ಸಾಹಿತಿಗಳ ಸಂಗತಿಯು ಬೇರೊಂದು ಸಮಾಧಾನ ತರುವುದು. ಸುಖಜೀವನ ತತ್ವವು ಮುಕ್ತನ ಆತ್ಮತೃಪ್ತಿಯ ಮರ್ಮವನ್ನು ಹೇಳುವದು. ಜೀವನದಲ್ಲಿ ಸುಖದ ಕನಸು ತೀರ ಎಟುಕದ ಬದುಕಲ್ಲ ಎಂದು ಹೊಳೆಯುವದು. ಆದರೂ ಅಸ್ತಮಾನಕ್ಕೆ ಹೊರಟ ಜೀವವು ಪ್ರಾರ್ಥನೆಗಳಿಗೆ ಶರಣುಹೊಗುವದು. ಕರುಣಾಳು ಬೆಳಕಿನಲ್ಲಿ ನಂಬುಗೆ ಊರುವದು. ವೀರಜನ್ಮದ ಸೊಗಸು ಜೀವನವನ್ನ ಆವರಿಸುವದು. ಗೀತಗಳಿಗೆ ಇರುವಂತೆಯೇ ಜೀವನಕ್ಕೂ ಇದು ಒಳ್ಳೆಯ ಮುಕ್ತಾಯ. ಹೀಗೆ ಗೀತಗಳನ್ನು ಜೋಡಿಸಿರುವದೇ 'ಶ್ರೀ'ಯವರ ಜೀವನ ಪ್ರಗಾಥ, ಸ್ಫೂರ್ತಕವನ. ಇದರಲ್ಲಿ ವ್ಯಕ್ತಿತ್ವದ ಅಭಿವ್ಯಕ್ತಿಯಿದೆ. ಸಂಗ್ರಹದ ಕೊನೆಗಿರುವ ಎರಡು ದೇಶಭಕ್ತಿ ಗೀತೆಗಳು 'ಶ್ರೀ'ಯವರ ಕಂಠಶ್ರೀಯ ಪ್ರವಾಹಗಳು. ಇವುಗಳನ್ನು ಬರೆದ ಕವಿ ಸ್ವಂತವಾಗಿ ಏನನ್ನು ಬರೆಯಲಾರ? ಆದರೆ

ಅವರಿದ್ದ ಕಾಲ ವ್ಯಂಗ್ಯ ಮರ್ಯಾದೆಯ ಕಾಲ. ಇನ್ನೊಬ್ಬರ ಬಾಯಿಂದ ತನ್ನ ಭಾವವನ್ನು ಹೊರಪಡಿಸಿಕೊಳ್ಳುವಲ್ಲಿ ಸೊಗಸು ಕಾಣುವ ಕಾಲ. 'ಶ್ರೀ'ಯವರ ಉಳಿದ ಅನೇಕ ಕೃತಿಗಳೂ ಹೀಗೆಯೇ: ಸ್ವತಂತ್ರವೆಂದರೆ ಸ್ವತಂತ್ರ, ಪರತಂತ್ರ ವೆಂದರೆ ಪರತಂತ್ರ. ಆದರೆ ಕಡೆಗೂ ತನ್ನ ಮುದ್ರೆಯೊತ್ತಿ ತನ್ನದನ್ನಾಗಿ ಮಾಡಿಕೊಳ್ಳುವ ಕೌಶಲ್ಯ ಬೀರುವುವು.

ಈ ಗೀತಗಳ ಸಂಗ್ರಹದ 'ಮುನ್ನುಡಿ', 'ಅರಿಕೆ'ಗಳಲ್ಲಿ ಇವುಗಳ ಕೆಲವು ವೈಲಕ್ಷಣ್ಯಗಳು ಹೇಳಲಾಗಿದೆ. ಮೂಲ ಕವನಗಳ ಭಾವರಸಗಳು ಇವುಗಳಲ್ಲಿ ಬಹಳ ಮಟ್ಟಿಗೆ ಉಳಿದಿವೆಯೆಂದೂ ಇವು ಕನ್ನಡಕ್ಕೆ ಸ್ವಾಭಾವಿಕವಾಗಿರುವಂತೆ ಮಾರ್ಪಡಿಸ ಲಾಗಿರುವವೆಂದೂ ಇಲ್ಲಿಯ ಭಾಷೆ ಲಲಿತವೆಂದೂ ಇಲ್ಲಿಯ ಛಂದಸ್ಸು ಇಂಗ್ಲಿಷನ್ನು ಹೋಲುವವೆಂದೂ ಹೇಳಿದ್ದಾಗಿದೆ. ಅದೆಲ್ಲವೂ ನಿಜ. ಬಿಂಬ–ಪ್ರತಿಬಿಂಬವಾಗಿ ಈ ಕವನಗಳು ರಚಿತವಾಗಿವೆ ಎನ್ನುವಾಗ, ಇವುಗಳನ್ನು ಕನ್ನಡಿಸಿದ್ದಾರೆ ಎಂದು ಹೇಳಿದರೆ ಅದೂ ಒಂದು ಔಚಿತ್ಯವೆ. ಮೂಲ ಕವಿಗಳ ವ್ಯಕ್ತಿತ್ವವನ್ನೆ ಇವುಗಳಲ್ಲಿ ಅನುಸರಿಸ ಲಾಗಿದೆ ಎಂದು ಹೇಳಲಾಗಿದೆ. ರಾವುತರ ದಾಳಿ, ಕಾಳಗದ ಪದ, ವೀರಜನ್ಮ, ಹೊಯ್ ಹೊಯ್ — ಈ ಮೊದಲಾದ ಕವನಗಳಲ್ಲಿ ವ್ಯಕ್ತಿತ್ವವೇನೊ ಇದೆ. ಆದರೆ ಅದು ಕಾವ್ಯ ವೃತ್ತಿಗಳ ವಿಲಾಸ. 'ಶ್ರೀ'ಯವರ ಶೈಲಿಯ ಸಾಮ್ಯವು ಇವೆಲ್ಲವು ಗಳಲ್ಲಿಯೂ ಕಂಡುಬರುವದು. ವ್ಯಕ್ತಿವೈಷಮ್ಯವಿದ್ದರೆ ಅದು ಕಲೆಯ ಭ್ರಾಂತಿ ಮಾತ್ರ. ಈ ಕವನಗಳಲ್ಲಿ ಅರ್ಧಕ್ಕರ್ಧ ಶೃಂಗಾರಕ್ಕೆ ಸೇರಿದುವು. ಇಂಗ್ಲಿಷ ಕವಿಗಳು ಶೃಂಗಾರ ರಸವನ್ನು ಹೇಗೆ ಗಂಭೀರವಾಗಿಯೂ ಸೂಕ್ಷ್ಮವಾಗಿಯೂ ಸ್ವಾಭಾವಿಕವಾಗಿಯೂ ತೋರಿಸಿರುವರೆಂಬುದನ್ನು ತಿಳಿಸುವದಕ್ಕಾಗಿ ಅವುಗಳನ್ನು ಹೆಚ್ಚಾಗಿ ಸೇರಿಸಿದೆಯೆಂದು 'ಶ್ರೀ'ಯವರು ಹೇಳಿದ್ದಾರೆ. ಕನ್ನಡದ ಜಾನಪದ ಗೀತೆಗಳಲ್ಲಿ ಇದೇ ಗಾಂಭೀರ್ಯ, ಸೂಕ್ಷ್ಮತೆ, ಸ್ವಾಭಾವಿಕತೆ ಕಂಡುಬರುವದು. ನಮ್ಮ ಮಹಾಕಾವ್ಯಗಳ ಶೃಂಗಾರದಲ್ಲಿ ಮಾತ್ರ ರಾಣಿವಾಸದ ಬಿಗುಮಾನ, ಸಾಂಸ್ಕೃತಿಕ ಸೌಂದರ್ಯ, ಸಾಮಯಿಕ ಉತ್ಥಾನತೆಗಳೊಡನೆ ವೇಶ್ಯಾವಾಟದ ಹಗರಣದ ಸರಸವೂ, ನಿರಂಕುಶ ವ್ಯಂಗ್ಯವೂ. ದೇಶಿಯ ಧ್ವನಿಯೂ ಬರುವುದು. ದೇಶಿಯ ಪುನರುದ್ಧಾರದ ಕಾಲದಲ್ಲಿ ಈ ಆಂಗ್ಲ ಶೃಂಗಾರದ ಭಾವಗೀತೆಗಳು ನಮ್ಮ ದೇಶಿಯ ಸೊಬಗನ್ನೆ ಮತ್ತೆ ನೆನಪಿಗೆ ತಂದುಕೊಟ್ಟುದು ಹೊಸ ಕವನಗಳಿಗೆ ಉಪಕಾರಕವಾಯಿತು. ಈ ಗೀತಗಳ ನಿಜವಾದ ಮೇಲ್ಮೆಯೆಂದರೆ ಅದರ ಶೈಲಿಯ ಪಾಕಶಯ್ಯೆಯಲ್ಲಿಯೂ ಅದರ ಛಂದದ ಕುಣಿತಮಣಿತದಲ್ಲಿಯೂ ಇದೆ. ಈ ಎರಡು ಮಾತಿನಲ್ಲಿ ಈ ಸಂಗ್ರಹವು ಉಳಿದಾವ ಸ್ವಂತಕೃತಿಗಳಿಗೂ ಹಿಮ್ಮೆಟ್ಟುವಂತಿಲ್ಲ.

ಇಲ್ಲಿಯ ಶೈಲಿ ಕನ್ನಡ ಶೈಲಿಯೆಂದು ಹೇಳಿದರೆ 'ಅದೇನು ಮಹಾ!' ಎಂದು ತೋರಬಹುದು. ಅಶ್ವತ್ಥಾಮನ್ ಕೃತಿಯೂ ಕನ್ನಡವಷ್ಟೆ. ಆದರೆ ಆ ಕನ್ನಡಕ್ಕೆ ಏನಾದರೂ ವಿಶೇಷಣವನ್ನು ಹಚ್ಚಬೇಕಾಗುತ್ತದೆ. ನೀರಿಳಿಯದ ಗಂಟಲಲ್ಲಿ ಕಡುಬನ್ನು ತುರುಕಬಾರದು ಎಂದು ಹೇಳಿದ ಮುದ್ದಣನ ರಾಮಾಶ್ವಮೇಧವೂ ಕನ್ನಡವಷ್ಟೆ! ಆದರೆ ಆ ನೀರನ್ನು ಕುಡಿಯಬೇಕಾದರೆ ಸ್ವಲ್ಪ ಸಿದ್ಧತೆ ಮಾಡಬೇಕಾ ಗುತ್ತದೆ. ಪಾಂಡಿತ್ಯದ ಕನ್ನಡವು ಪೌರಾಣಿಕರ ಕನ್ನಡದಂತೆ ಪ್ರತ್ಯೆಯಗಳ

ಮುಪ್ರ ಪೋದರೆ ಮೂಲವಾವುದೊ ಹೇಳುವದು ಕಷ್ಟ. ಕನ್ನಡದ ಜಂಭದಲ್ಲಿ ಕಬ್ಬಿಗರ ಕಾವ ವಾಚಕರ ಜೀವ ಹಿಂಡಿದ್ದುಂಟು. ಆದರೆ ಇಂಗ್ಲಿಷ್ ಗೀತಗಳ ಕನ್ನಡವು ಬಳಕೆಯ ಕನ್ನಡ. ಅಲ್ಲಿಯ ಸಂಸ್ಕೃತವೂ ತದ್ಭವವೂ ಕನ್ನಡಕ್ಕೆ ಸಂಪಾದಿಯಾಗುವ ಜಾತಿಯದು. ಇಂಗ್ಲಿಷ್ ಗೀತಗಳ ಯಾವ ಪುಟವನ್ನೂ ತೆರೆದು ಅಲ್ಲಿಯ ನುಡಿಗಡಣವನ್ನು ಪಂಚಿ ನೋಡಿದರೆ ಈ ಮಾತು ಅನುಭವಕ್ಕೆ ಬರುವದು. ಎಂಬತ್ತೊಂದನೆಯ ಪುಟದಲ್ಲಿ ಬರುವ 'ದುಃಖ ಸಮಯ' ಎಂಬ ಎಂಟು ಹತ್ತು ಸಾಲಿನ ಕವನದಲ್ಲಿ ಹದಿನೈದು ಸಂಸ್ಕೃತ ಶಬ್ದಗಳಿವೆ. ಆದರೆ ಅವು—ಹೃದಯ, ಸಮಯ, ಕಾಲ, ಲೋಕ, ಜನ್ಮ, ವಸಂತ—ಇಂಥ ತೀರ ಬಳಕೆಯವು. ಎಂಬತ್ತೆಂಟನೆಯ ಪುಟದಲ್ಲಿ ಬರುವ ಹದಿನಾರು ಸಾಲಿನ ಪದ್ಯದಲ್ಲಿ ಕನ್ನಡವಲ್ಲದ ಪದಗಳೆಂದರೆ ಎರಡು ಮಾತ್ರ. ಅವು 'ಗಂಭೀರ' ಎಂಬ ಸಂಸ್ಕೃತಪದ; 'ಸಿರಿ' ಎಂಬ ತದ್ಭವಪದ. ಗೀತಗಳನ್ನು ಬಿಟ್ಟು ಕಂದಗಳಿಗೆ ಇಳಿದ ಕೂಡಲೆ ಸಂಸ್ಕೃತವು ತಾನಾಗಿಯೇ ನುಸುಳಿಕೊಳ್ಳುವದೊ ಏನೊ ಎನ್ನುವಂತೆ 'ಶ್ರೀ'ಯವರು ಇಂಗ್ಲಿಷ್ ಗೀತಗಳಿಗೆ ಮುಖವಾಗಿ ಬರೆದ ಸರಸ್ವತಿ ಸ್ತುತಿಯ ಒಂದು ಕಂದದಲ್ಲಿ ಏಳು ಸಂಸ್ಕೃತ ಪದಗಳಿವೆ. ಹೀಗೆ ಶೈಲಿಯನ್ನು ಬೆರೆದಾಡುವದು ಕೆಲವರಿಗೆ ರುಚಿಯಾಗಿ ತೋರಲಿಕ್ಕಿಲ್ಲ. ಆದರೂ ಗೀತಗಳ ಕನ್ನಡವು ಹೊಸ ಸಾಹಿತ್ಯಕ್ಕೆ ಹದವಾದ ಕನ್ನಡವೆಂದು ಹೇಳಬಹುದಾದರೆ ಅದು ಸಾಮಾನ್ಯವಾಗಲಿಲ್ಲ. ಅದು ಸ್ವೀಕರಣೀಯವೂ ಅನುಸರಣೀಯವೂ ಆದ ಶೈಲಿ. ಅದು ಅಚ್ಚಗನ್ನಡ. ಅದು ದೇಸಿ.

ಈ ಗೀತೆಗಳ ಛಂದವು ಕೂಡ ಕಂದವೃತ್ತಗಳ ಪರಂಪರೆಯವರಿಗೆ ಹಾದಿ ಬಿಟ್ಟುದಾಗಿ ತೋರಬಹುದು. ಮತ್ತೆ ಕೆಲವರಿಗೆ ಇಲ್ಲಿಯ ಛಂದಗಳೆಲ್ಲ ರಗಳೆ ಷಟ್ಪದಿಗಳಲ್ಲಿ ಕಂಡುಬರುವ ಮೂರು ನಾಲ್ಕು ಐದು ಮಾತ್ರೆಗಳ ಗಣಗಳಿಂದ ಕಟ್ಟಿದವುಗಳೆಂದೂ ತೋರಬಹುದು. ಆದರೆ ಅವುಗಳಲ್ಲಿ ಹುದುಗಿರುವ ಜಾನಪದ ಗೀತ ಸಹಜವಾದ ಸ್ವಚ್ಛಂದವಿಹಾರವು ಅವುಗಳ ವೈಲಕ್ಷಣ್ಯವಾಗಿದೆ. 'ಬಿಂಕದ ಸಿಂಗಾರಿ'ಯ ಜಾನಪದ ದೇಶಿಯ ಗತ್ತು, 'ಮೈಸೂರು ಮಕ್ಕಳ'ಲ್ಲಿ ಬರುವ ಉದ್ದ ಸಾಲಿನ ಅಂದ, 'ಭರತಮಾತೆ'ಯ ಕೋಲಿನ ಹಾಡಿನ ಗತಿ, 'ಪೆಡಸುದಾರಿ', 'ಜೋಳಕನ್ನೆಯರು'–ಇವುಗಳ ಚಿತ್ರಗತಿ, 'ರಾವುತರ ದಾಳಿ'ಯ ನುಗ್ಗಾಟ, 'ಕಾಳಗದ ಪದ'ದ ಹೆಜ್ಜೆಕುಣಿತ, ತಮ್ಮಟದ ತಾಳ—ಇವು ಒಂದೊಂದೂ ಒಂದೊಂದು ಗತಿಯ ಗತ್ತನ್ನು ತೋರಿಸುವವು. ಸಕೃತ್ಸ್ಪರ್ಶನಕ್ಕೆ 'ಮುದ್ದಿನ ಕುರಿಮರಿ', 'ಮುದಿಯ ರಾಮಗೌಡ' ಇವೆರಡೂ ತ್ರಿಮಾತ್ರಕಗಳಾಗಿ ಕಾಣಬಹುದು. ಆದರೆ 'ಮುದಿಯ ರಾಮಗೌಡ'ದಲ್ಲಿ ಮೂರು ಮಾತ್ರೆಯ ಗಣವನ್ನು ನಾಲ್ಕು ಮಾತ್ರೆಗಳಾಗಿ ಎಳೆದು ಹೇಳಬೇಕು ಎಂಬ ಸೂಚನೆಗಳು ಆ ಕವನದಲ್ಲಿಯೇ ಇವೆ. 'ದುಃಖಸಮಯ' ಎಂಬ ಪದ್ಯದಲ್ಲಿ ಭಾಮಿನಿಯ ಗತಿಯೇ ವಿಲಂಬಿತವಾಗಿ ಬಂದು ಹೊಸದೊಂದು ಅಂದವನ್ನು ಬೀರುವುದು. 'ಪ್ರೇಮದ ಸಂಕಟ' ಎಂಬ ಕವನದ ಮೊದಲನೆಯ ನುಡಿಯ ಛಂದದ ಔಚಿತ್ಯದ ಮುಂದೆ ಮುಂದಿನ ನುಡಿಗಳು ಮಂಕಾಗಿ ತೋರುವವು. ತ್ರಿಪದಿಯ ಗತಿಯ ಭಿನ್ನವಿಲಾಸವನ್ನು ನೋಡುವದಾದರೆ 'ಬಾನಾಡಿ'ಯನ್ನು 'ಹಳೆಯ ಪಳಕೆಯ ಮುಖಗಳೊಂ'ದಿಗೆ ಹೋಲಿಸಿ ಬಿಡಿಸಿ

ನೋಡಬೇಕು. ‘ಮಾದಮಾದಿ’ಯಲ್ಲಿ ‘ಹಹ್ಹ’ ಎಂಬ ಅತಿಮಾತ್ರೆಯೂ ‘ದುಃಖಸೇತು’ವಿನಲ್ಲಿಯ ಮೊದಲನೆಯ ಸಾಲಿನಲ್ಲಿ ಬರುವ ಹೆಚ್ಚಿನ ಅಕಾರವೂ ಅಲ್ಲಿಯ ಗತಿಗೆ ತರುವ ಸೊಗಸೇ ಬೇರೆ. ಕಾಳಗದ ಪದವಂತೂ ಛಂದೋಗತಿಯ ವಿವಿಧ ಭಂಗಿಗಳಿಂದ ತುಂಬಿದೆ. ಅಲ್ಲಿಯ ತಾಳ ಯತಿಗಳ ಆಂದೋಲನವು ಅತಿ ಹೃದಯಂಗಮವಾಗಿದೆ. ಉತ್ಸಾಹಕ್ಕೆ ಉಚಿತವಾಗಿದೆ. ಎರಡು ಮಾತ್ರೆಯ ಗಣವನ್ನು ಮೂರು ಮಾತ್ರೆಯ ಗಣವಾಗಿ ಹಿಗ್ಗಿಸುವದೂ, ಐದು ಮಾತ್ರೆಯ ಗಣವು ಮೂರು ಮಾತ್ರೆಯ ಎರಡು ಗಣಗಳಾಗಿ ಒಡೆಯಲಿಕ್ಕೆ ಬರುವಂತಾಗುವದೂ, ಜಾನಪದ ರೀತಿಯನ್ನು ನೆನಪಿಗೆ ತರುವದು. ‘ಬಿಂಕದ ಸಿಂಗಾರಿ’ಯಲ್ಲಿಯೂ ‘ಪೆಡಸುದಾರಿ’, ‘ಚೋಳಕನ್ನೆಯರು’ ಈ ಕವನಗಳಲ್ಲಿಯೂ ಕೆಲವೊಂದೆಡೆಗೆ ಬರುವ ನಿಯತ ಗುರುತ್ವವು ಮಾತ್ರಾಛಂದದಲ್ಲಿ ಅಕ್ಷರಗಣದ ಅಂದವನ್ನು ಸೂಸುವದು. ‘ಬ್ಲೆನ್‌ಹಿಮ್ ಕದನ’ ಎಂಬ ಕವನದಲ್ಲಿ ಅನೇಕ ಕಡೆಗೆ ಬರುವ ತಾಳದಾದಿಯ ದೀರ್ಘವು ಅಲ್ಲಿಯ ನೀಲಾಂಬರಿಯ ಆಲಾಪನೆಗೆ ಹದನಾಗುವದು. ‘ಇಂಗ್ಲೆಂಡ ನಾವಿಕರು’ ಎಂಬ ಕವನದ ಛಂದೋಜಸ್ಸು, ಮುರಿತ ತಿರುವುಗಳ ಅಂದ, ಗಮಕದಿಂದಲೇ ಪ್ರಕಟವಾಗಬೇಕು. ‘ಮುಪ್ಪು ಯೌವನ’, ‘ಬಡವನ ಹುರುಡು’, ‘ವೀರಜನ್ಮ’—ಇವುಗಳಲ್ಲಿ ಬರುವ ನಾಟ್ಯ ಕಾಕುಸ್ವರವು ಗಮಕಕ್ಕೆ ಸೇರಿದ್ದಾಗಿರುವದರಿಂದ ಅದು ಛಂದಸ್ಸಿನ ಅಂದದ ಭಾಗ. ಹೀಗೆಯೇ ಇಲ್ಲಿಯ ಛಂದೋಬಂಧವನ್ನು ಕುರಿತು ವಿಸ್ತಾರಮಾಡಬಹುದು. ಆದರೆ ಈ ದಿಗ್ದರ್ಶನವು ಅದರ ಮೇಲ್ಮೆಯನ್ನು ತೋರಿಸಲು ಸಾಕು.

ಈ ಗೀತಗಳ ಕೊರತೆ ಎಂದು ಒಂದು ಮಾತನ್ನು ಹೇಳಬಹುದು. ಅದು ಅಭಿಪ್ರಾಯ ಭೇದವೋ ಭಿನ್ನರುಚಿಯೋ ಇರಬಹುದು. ಸಂಸ್ಕೃತ ವೃತ್ತಗಳು ಪ್ರಾಸವನ್ನರಿಯವು. ಆದರೂ ಸಂಸ್ಕೃತ ಕವಿಗಳು ಗೀತಗಳನ್ನು ಬರೆಯುವಾಗ ಪ್ರಾಸಕ್ಕೆ ಶರಣುಹೋಗಿದ್ದಾರೆ. ಪ್ರಾಸವನ್ನು ಬಿಟ್ಟು ಬರೆಯುವ ಒಂದು ಅಂದ ಆಂಗ್ಲ ಸಾಹಿತ್ಯದಲ್ಲಿದ್ದರೂ ಇಂಗ್ಲಿಷ್ ಗೀತಗಳಲ್ಲಿ ಮೂಲದಲ್ಲಿ ಪ್ರಾಸ ಸಹಿತವಾಗಿ ಇರುವ ಪದ್ಯಗಳು ಇಲ್ಲಿ ಪ್ರಾಸರಹಿತವಾಗಿ ಏಕೆ ಮಾರ್ಪಟ್ಟಿವೆಯೋ ತಿಳಿಯದು. ಹಕ್ಕಿಯ ರೆಕ್ಕೆ ಕತ್ತರಿಸಿದ ಮಾತ್ರಕ್ಕೆ ಅದನ್ನು ಯಾರೂ ಪಶುವೆಂದು ಕರೆಯರು. ಅಥವಾ ಅದು ಮನುಷ್ಯನಾಗಲಾರದು. ಆದರೂ ಪಕ್ಕವಿಲ್ಲದ ಹಕ್ಕಿ ಎಂಬುವುದು ವದತೋವ್ಯಾಘಾತವಲ್ಲವೇ? ನುಡಿಮೇಳವಿಲ್ಲದ ಹಾಡು ಪಕ್ಕ ಕಳೆದ ಪಕ್ಷಿಯಂತೆ. ಪ್ರಾಸವಿಲ್ಲದ ಪದ್ಯವು ಕಾವ್ಯಗುಣವಿದ್ದರೆ ಕಾವ್ಯವೇ ಅಹುದು. ಆದರೂ ಭಾವದ ಬಿಸಿಗೆ ಹೊರಬಿದ್ದು ಎದ್ದ ವಾಣಿಯ ಉದ್ಗಾರವು ಬರಿಯ ಅನಿಯಲ್ಲ. ಅದು ಮಿಂಚಿ ಮಿಡಿಯುವ ಮೋಡ. ಗದ್ಯವು ಅತಿ ವೃತ್ತಗಂಧಿಯಾಗುವದು ಹೇಗೆ ಅದಕ್ಕೆ ಕೊರತೆಯೊ ಹಾಗೆಯೆ ಭಾವೋದ್ರೇಕದ ಪದ್ಯಗಳಲ್ಲಿ ಉಚಿತ ಪ್ರಾಸವಿಲ್ಲದಿರುವದು ಒಂದು ಕುಂದು. ತಾಳ ಗತ್ತು, ಗಮಕ ಯಮಕ, ಪ್ರಾಸ ಅನುರಣನಗಳು, ಭಾವವ್ಯಕ್ತಿಯಲ್ಲಿ ಭೂಷಣಗಳು. ಅಲಂಕಾರಗಳು ರೂಪಕ್ಕೆ ಹೊರತೆಂದೂ ಅದರಲ್ಲೂ ಶಬ್ದಾಲಂಕಾರಗಳಂತೂ ಬರಿಯ ಗಿಲೀಟೆಂದೂ ತಿಳಿಯುವವರು ತಿಳಿಯಲಿ. ಉಚಿತವಾದ ಅಲಂಕಾರಗಳು ಲಾವಣ್ಯದ ರೂಪರೇಖೆಗಳಾಗಿಯೂ ಯತಿ ತಾಳ

ಲಯಾನುಕಾರಿಯಾದ ಪ್ರಾಸಗಳು ಅವಯವಸ್ಪಷ್ಟತೆ, ಸಂಧಿಬಂಧಗಳಾಗಿಯೂ ಸೌಂದರ್ಯಾವಿರ್ಭಾವದ ಪಡಿಯಚ್ಚಿನಂತೆ ರಸಿಕರಿಗೆ ತೋರದಿರವು. ಇಲ್ಲಿಯ ಕೆಲ ಗೀತೆಗಳಲ್ಲಿ ಈ ಕೊರತೆಯು ಆಗೀಗ ಬಾಯಾರಿಕೆ ಉಂಟುಮಾಡುವದು. ಇಲ್ಲಿಯ ಶೈಲಿಯಲ್ಲಿ ನುಸುಳಿಕೊಂಡಿರುವ ಆಂಗ್ಲ ಛಾಯೆಯು ಹಸಿ ಕನ್ನಡಿಗರಿಗೆ ವಿಪರೀತವಾಗಿ ತೋರಿದರೂ ದಿನಬಳಕೆಯಿಂದ ಇದು ಮೈಯುಂಡು ಹೋಗುವುದು. ಇಂಗ್ಲಿಷ್ ಗೀತಗಳ ಕಾವ್ಯಗುಣಗಣದಲ್ಲಿ ಈ ಕೊರತೆಗಳು ಅಷ್ಟು ಹೆಚ್ಚಿಲ್ಲ.

ಈ ಸಂಗ್ರಹವು ‘ಶ್ರೀ’ಯವರ ಕೃತಿಯಾಗಿ, ಹೊಸ ಕವನಗಳಿಗೆ ಮಾರ್ಗದರ್ಶಕವಾಗಿ, ತರುಣರ ಮೆಚ್ಚಿಕೆಯದಾಗಿ, ಭಾವಗೀತೆಗಳ ಭಾಷಾಂತರಕ್ಕೊಂದು ಕೈಪಿಡಿಯಾಗಿ, ಅಕ್ಲಿಷ್ಟಪ್ರಸನ್ನ ಕಾವ್ಯಶೈಲಿಗೆ ಮಾದರಿಯಾಗಿ ನಿಲ್ಲುವದು. ಹೊಸ ಕವನಗಳ ಓಂಕಾರದಲ್ಲಿ ‘ಶ್ರೀ’ಯವರ ಈ ಶ್ರೀಕಾರವು ನಿತ್ಯ ನವೀನವಾಗಿ ಉಳಿಯಲಿ.

**ದತ್ತ. ರಾಮ. ಬೇಂದ್ರೆ**

# ಗದಾಯುದ್ಧ – ಕಾವ್ಯ, ನಾಟಕ

"ಪ್ರಕೃತಿಯ ಅಂತರಾಳದಲ್ಲಿ ಕಲೆ ಅವಿತುಕೊಂಡಿದೆ. ಅಲ್ಲಿಂದ ಹೊರಕ್ಕೆ ಯಾವನು ಅದನ್ನು ಎಳೆದು ತರಬಲ್ಲನೊ ಅವನಿಗೆ ಅದು ಸೊತ್ತು" ಎಂಬುದು ಚಿತ್ರಕಾರ ಆಲ್ಬರ್ಟ್ ಡ್ಯೂರರನ ಒಂದು ಸೂಕ್ತಿ. ಈ ತತ್ತ್ವವನ್ನು ಹಿಂದೆ ಸಂಪೂರ್ಣ ಸತ್ಯವೆಂದು ನಂಬಿದ್ದರು. ಮನಶ್ಶಾಸ್ತ್ರ ಬೆಳೆದು ಹಬ್ಬಿರುವ ನಮ್ಮ ಯುಗದಲ್ಲಿ ಅಂತಹ ನಂಬಿಕೆ ಅಸಾಧ್ಯ. ಪ್ರಕೃತಿ ಜೀವನ ಮಾನವ ಜೀವನದಲ್ಲಿ ಅಡಗಿರುವುದನ್ನು ಈಕ್ಷಿಸಿ, ಪರೀಕ್ಷಿಸಿ, ಭಾವಿಸಿ, ಪೋಷಿಸಿ, ಚೆಲುವನ್ನು ಎಬ್ಬಿಸಿ ನಿಲ್ಲಿಸುವುದು ಬಹು ಮಟ್ಟಿಗೆ ಕಲೆಗಾರನ ಮಾನಸಿಕ ವ್ಯವಸಾಯ. ಲಾವಣ್ಯವೆಂಬ ಅಭಿಪ್ರಾಯ ವಸ್ತುವನ್ನು ಕುರಿತು ರಸಜ್ಞನು ನುಡಿಯುವ ಒಂದು ಬಗೆಯ ತೀರ್ಪು ಎಂದು ಕೂಡ ಹೇಳುವವರುಂಟು. ಅಂತು ರಮ್ಯ ನಿರ್ಮಾಣದಲ್ಲಿ ಭಾವುಕನ ಕಂಗಳಿಗೆ, ಮನಸ್ಸಿಗೆ, ಕೌಶಲ್ಯಕ್ಕೆ ಮೊದಲ ಸ್ಥಾನ. ಅವನ ವ್ಯಕ್ತಿತ್ವಕ್ಕೆ ಹೊಂದಿಕೊಂಡು, ಅವನ ವ್ಯಕ್ತಿತ್ವದ ಬಾಹ್ಯಾಕಾರದಂತೆ, ಅವನ ವ್ಯಕ್ತಿತ್ವದಿಂದ ಪೂರ್ತಿ ಅಳೆಯಬಹುದಾದುದಾಗಿ, ಸೌಂದರ್ಯ ಉದ್ಭವಿಸುತ್ತದೆ. ಈ ವಿಧದ ಪ್ರಿಯಸೃಷ್ಟಿಗೆ ಮನುಷ್ಯ ಸಂಸಾರ ಪ್ರಕೃತಿ ಪ್ರಪಂಚಗಳಂತೆಯೇ ಮಹಾಕಾವ್ಯವೂ ಯುಕ್ತ ಆಕರ. ವಾಲ್ಮೀಕಿರಾಮಾಯಣ ವ್ಯಾಸಭಾರತ ಹೋಮರನ ಇಲಿಯಡ್ ಡಾಂಟೆಯ ಡಿವೈನ್ ಕಾಮೆಡಿಗಳು ಅವಧಿಯ ಮೇಲೆ ಅವಧಿ ಲೂಟಿಮಾಡಿದರೂ ಮನೋಹರ ಪ್ರೇರಣೆಗಳಿಂದ ಎಂದಿಗೂ ಬರಿದಾಗವು. ರನ್ನನ "ಸಾಹಸಭೀಮ ವಿಜಯ" ಮಹಾಕಾವ್ಯವೆನ್ನಿಸಿಕೊಳ್ಳಲು "ಶ್ರೀ"ಯವರ "ಗದಾಯುದ್ಧ ನಾಟಕಂ" ಒಂದು ಸಾಕ್ಷಿ.

ರನ್ನನ ಕೃತಿಯು ಕಾವ್ಯ; ರೂಪಕ ಲಕ್ಷಣಗಳು ಅದರಲ್ಲಿ ಎಷ್ಟೇ ಯಥೇಷ್ಟವಾಗಿದ್ದರೂ ಅದರ ಶೈಲಿಯಲ್ಲಿ ನೇಪಥ್ಯಕ್ಕನುಕೂಲವಾದ ವರ್ಚಸ್ಸು ಕಂಡು ಬಂದರೂ ಅದು ಮುಖ್ಯವಾಗಿ ಕಾವ್ಯ; ರನ್ನನ ನಿಷ್ಕಪಟ ಆಶಯದಂತೆ, ಅವನದೇ ಆದ ಗದ್ಯ ಪದ್ಯಗಳ ಸಲುವಾಗಿ, ಅವನ ಬೇಸಾಯದ ನಾನಾ ಬಿಡಿ ವಿವರಗಳಲ್ಲಿಯೂ, ಅವನಿಗೆ ಕೊನೆಯಲ್ಲಿ ದಕ್ಕಿದ ಕೊಯ್ಲಿನ ದೆಸೆಯಿಂದ. "ಗದಾಯುದ್ಧ"ವು ನಿಸ್ಸಂದೇಹವಾಗಿ ಒಂದು ಕಾವ್ಯ. ಹಾಗೆಯೇ "ಶ್ರೀ"ಯವರ ಸಂಯೋಜನೆ ನಿಶ್ಚಯವಾಗಿ ಒಂದು ನಾಟಕ. ಈ ಅಂಶವನ್ನು ಮರೆತರೆ ಯಥಾರ್ಥ ಶೋಧನೆಗೆ ಕಠಿಣ ಅಡಚಣೆ. ಅಂದರೆ ನಾಟಕ ಕಾವ್ಯದ ಸಂಗ್ರಹವಲ್ಲ; ಕಾವ್ಯವನ್ನು ಸಂಕ್ಷೇಪಿಸಿದರೆ ನಾಟಕವೂ, ನಾಟಕವನ್ನು ವಿಸ್ತರಿಸಿದರೆ ಕಾವ್ಯವೂ, ತಾನಾಗಿ ಉತ್ಪತ್ತಿಯಾಗದು. ಅವೆರಡರ ಬಾಂಧವ್ಯ ಮೊಗ್ಗು ಹೂಗಳ ಬಾಂಧವ್ಯವಲ್ಲ. ಅಲ್ಲದೆ ಕಾವ್ಯದ ಸ್ವಾರಸ್ಯಗಳಲ್ಲಿ ಒಂದೆರಡನ್ನು ನಾಟಕ ಪ್ರಕಟಗೊಳಿಸುವುದೇ ಹೊರತು ಕಾವ್ಯದ ಸಾರ ಸತ್ವವೆಲ್ಲವೂ ಪಾಕವಾಗಿ ಇಳಿದು ನಾಟಕದಲ್ಲಿ ಉಳಿದಿಲ್ಲ. ರನ್ನನ ಕಾವ್ಯ ಒಂದು ಅದ್ಭುತ ರಸ ಸಮುದ್ರ; "ಶ್ರೀ"ಯವರ ನಾಟಕ ಒಂದು ಮಧುರ ಶಾಂತಿ ಸರೋವರ. ಅವೆರಡರ ಹೋಲಿಕೆ ಭಿನ್ನತೆಗಳನ್ನು ಲಕ್ಷಿಸುವುದರಲ್ಲಿ ಫಲವುಂಟು.

ವಿಷಯ ಸಂವಿಧಾನ ಪಾತ್ರ ಪರಿಪುಷ್ಟಿ ಸಮಯ ಸನ್ನಿವೇಶ ನಿರ್ಧಾರ ಶ್ರೇಷ್ಠಾಕಾಂಕ್ಷೆ ಎಲ್ಲದರಲ್ಲಿಯೂ "ಗದಾಯುದ್ಧ ನಾಟಕ" ಅನುಸರಿಸುವ ಕ್ರಮ ಆದ್ಯಂತವಾಗಿ ಪ್ರಾಚೀನ ಗ್ರೀಕರ ರುದ್ರನಾಟಕ ಪದ್ಧತಿ. ಆರಂಭದಿಂದ ಫಲಾಗಮದವರೆಗೂ ಏಕವಸ್ತು ನೇರವಾಗಿ ನಡೆಯುತ್ತದೆ; ಯಾವ ಪ್ರಾಸಂಗಿಕ ಸಂಗತಿಗೂ ಎಡೆಯಿಲ್ಲ; ಎಲ್ಲ ಪ್ರವೇಶಗಳಲ್ಲಿಯೂ ವೇದಿಕೆಯಮೇಲೆ ಅಲ್ಪ ಸಂಖ್ಯೆಯ ಪಾತ್ರಗಳು: ಗದಾಯುದ್ಧ ಕಾಲದಲ್ಲಿ ಮಾತ್ರ ನಾಲ್ಕು, ವೇಣೀ ಸಂಹಾರಕ್ಕಾಗಿ ದ್ರೌಪದಿ ಬಂದಾಗ ಐದು, ಧೃತರಾಷ್ಟ್ರ ಗಾಂಧಾರಿಯರು ಮಗನನ್ನು ಸಂಧಿಸಿದಾಗ ಐದು, ಮಿಕ್ಕೆಲ್ಲ ಕಡೆಯಲ್ಲಿಯೂ ಎರಡು ಅಥವಾ ಮೂರು; ಅರ್ಜುನನಿಗಾಗಲೀ ಕೊನೆಗೆ ಬಲರಾಮನಿಗಾಗಲೀ ಅವಕಾಶ ದೊರಕದು. ಘಟನೆಗಳು ತೆಗೆದುಕೊಳ್ಳುವ ಕಾಲ ಬರಿಯ ಅರ್ಧ ದಿವಸ. ಅವು ಜರುಗುವ ಸ್ಥಳ ಕುರುಕ್ಷೇತ್ರ ಯುದ್ಧರಂಗ. ಪ್ರತಿಯೊಂದು ಪಾತ್ರದಲ್ಲಿಯೂ ಮೊದಲಿನಿಂದ ಕಡೆಯ ವರೆಗೂ ಒಂದೇ ಮನೋಧರ್ಮದ ಪ್ರಸಾರ: ಧರ್ಮರಾಜ ಕ್ಷಮೆಯ ಜಂಗಮ ಮೂರ್ತಿ: ಮುರವೈರಿ ಮಾಯಾವಿ; ಕ್ರೂರ ಸೇಡಿನ ಹಂಬಲಿಕೆಯೇ ಅಗ್ನಿಪುತ್ರ: ರೌದ್ರ ಪ್ರವೃತ್ತಿ ಘನೀಭೂತವಾಗಿ ಕೀಚಕಾಂತಕನೆಂಬ ಹೆಸರನ್ನು ತಾಳಿದೆ; ಅಭಿಮಾನವನ್ನು ಬಲ್ಪಿಡಿವಿಡಿದ ಏಕಾಂಗ ಸಾಹಸಿ ದುರ್ಯೋಧನ ಮಹಾನುಭಾವ. ಪುರಾತನ ಗ್ರೀಕರಲ್ಲಿ ನಟ ಮುಖವಾಡವನ್ನು ಧರಿಸಿಕೊಂಡು ಅಭಿನಯಿಸುತ್ತಿದ್ದ: ಈ ನಾಟಕದಲ್ಲಿ ಪ್ರತಿಪಾತ್ರಕ್ಕೂ ಜೋಡಿಸಿರುವ ಸರಳ ನಿಶ್ಚಲ ಮನೋಭಾವವೇ ಅದರ ಮುಖವಾಡ. ಹಾಸ್ಯ ಶೃಂಗಾರಗಳು ಒಂದೆರಡು ಕಡೆ ಕ್ಷಣ ಮಿಂಚಿ ಮಾಯವಾಗುತ್ತವೆ; ವೀರ ಕರುಣ ರಸಗಳ ಪ್ರಭಾವ ಹೆಚ್ಚು; ಆದರೂ ನಾಟಕದ ಹೊರಳಿಕೆ ಸ್ಫುಟವಾಗಿ ಶಾಂತಿಯ ಕಡೆಗೆ. ದುರಂತ ಕೃತ್ಯ ಕದನ ಕೊನೆಗೊಂಡಾಗ ಚಂಡ ಸೂರ್ಯ ಮುಳುಗುತ್ತಿರುವಾಗ ನಿಶ್ಶಬ್ದ ಸಂಧ್ಯಾ ಸಮಯದಲ್ಲಿ ತಪೋವನದ ಸ್ಮರಣೆಯನ್ನು ಕಲ್ಪಿಸುತ್ತ ನಾಟಕ ಮುಕ್ತಾಯ ಹೊಂದುತ್ತದೆ. ದೈವಬಲದ ಆಧಿಪತ್ಯವೇ ಆಧಿಪತ್ಯ: ಕೌರವ ಪ್ರತಿಕೂಲ ದೈವ; ತಾಯಿತಂದೆಗಳಿಗೆ "ನಮಸ್ಕರಿಸುವಂ ನಿರ್ಭಾಗ್ಯ"; ಸಮರಜಯ ದೈವಾಯತ್ತ; ಒದಗಿದ ಅನರ್ಥಗಳೆಲ್ಲವೂ ಕೌರವನ "ಕರ್ಮವಶ"; ಕಟ್ಟಕಡೆಯಲ್ಲಿ ಸುಯೋಧನನ ಮನಸ್ಸಿಗೆ ಅಂಟುವುದು "ಇದೆಲ್ಲಂ ಕೃಷ್ಣನ ಮಾಯೆ. ದೈವದ ಮುಂದೆ ನಾಮಲ್ತು" ಎಂಬ ಸಿದ್ಧಾಂತ; ಪಾಂಡವರು ನೀಲಾಚಲಕ್ಕೆ ಹೋಗಿ ಮಹಾಶಿವನನ್ನಾರಾಧಿಸಿ ಅನಾಗತ ಬಾಧೆಯನ್ನು ಕಳೆದುಕೊಳ್ಳಬೇಕು. ಕೇವಲ ಗ್ರೀಕರ ಆಚಾರಕ್ಕೆ ಸಮಂಜಸವಾದ "ಘೋರ ಮೂರ್ತಿಗಳು" (Furies) ಕೂಡ ಇಲ್ಲಿ "ವಿಜಯೋನ್ಮತ್ತ", "ಭೀಮನ ತಲೆಯ ಮೇಲೆ ಆಡು"ತ್ತಿವೆ. ಒಂದು ಮೇಳದ ಗುಂಪನ್ನು ಕೂಡಿಸಿದ್ದಲ್ಲಿ, ಗದಾಯುದ್ಧ ಮೂರ್ಛೆ ಕಿರೀಟಭಂಗ ಮರಣಗಳನ್ನು ಪ್ರತ್ಯಕ್ಷವಾಗಿ ತೋರಿಸದೇ ಇದ್ದಲ್ಲಿ, ಈ ನಾಟಕ ಚಾಚೂ ತಪ್ಪದೆ ಗ್ರೀಕ್ ನಾಟಕವಾಗುತ್ತಿದ್ದಿತು.

ರನ್ನ ಹಿಂದೂದೇಶದವನು: ಚಾಳುಕ್ಯ ರಾಜಾಸ್ಥಾನದ ಲೇಖಕ ಚಕ್ರವರ್ತಿ; ಜೈನಮತದಲ್ಲಿ ಅವನಿಗೆ ತೀವ್ರ ವಿಶ್ವಾಸ; ಗುರು ಹಂಪದೇವನ ಮಾರ್ಗವನ್ನು ಹಿಂಬಾಲಿಸಿ ಲೌಕಿಕವನ್ನು "ಗದಾಯುದ್ಧ" ಕಾವ್ಯದಲ್ಲಿ ಬೆಳಗಿದ ದೊಡ್ಡ ಕನ್ನಡ

ಕವಿ. ಅದರ ರಚನೆಯಲ್ಲಿ ಅವನ ದೃಷ್ಟಿ ಬೇರೆ. ಪ್ರಸಿದ್ಧ ಚಂಪೂ ಗ್ರಂಥದ ಮೂಲಕ ಆಶ್ರಯದಾತನಾದ ಸತ್ಯಾಶ್ರಯನಿಗೆ ವಂದನೆ ಹೊಗಳಿಕೆಗಳನ್ನು ಅರ್ಪಿಸುವುದು ಅವನ ಪ್ರಥಮೋದ್ದೇಶ. ಪಂಪನಿಗೆ ಅರ್ಜುನ ಪಾಂಡವ ಬಲದ ಪ್ರಾಕಾರ ವೀರ; ರನ್ನನಿಗೆ ಭೀಮಸೇನ. "ಮೊದಲೊಳ್ ಬದ್ಧ ವಿರೋಧದಿಂ ನೆಗಟ್ದ ಕುಂತೀಪುತ್ರರೊಳ್ ಭೀಮಂ ಅಂಕದ ಗಾಂಧಾರಿಯ ಪುತ್ರರೊಳ್ ಮೊದಲಿಗಂ ದುರ್ಯೋಧನಂ"; ಸಮದಂಡಿಯಲ್ಲಿ ಹೋರಾಡಬಲ್ಲ ಎರಡು ಐರಾವತಗಳು; ಅವರ ಅಂತಿಮ ದ್ವಂದ್ವ ಕಾಳಗವೇ ದ್ವಾಪರದ ರಾಮರಾವಣ ಸಂಗ್ರಾಮ. ಅಲ್ಲದೆ

ಒಳಪೊಕ್ಕು ನೋಡೆ ಭಾರತ।
ದೊಳಗಣ ಕಥೆಯೆಲ್ಲವಿಾ ಗದಾಯುದ್ಧದೊಳಂ॥
ತೊಳಕೊಂಡತ್ತೆನೆ ಸಿಂಹಾ।
ವಳೋಕನ ಕ್ರಮದಿನಱಿಪಿದಂ ಕವಿ ರನ್ನಂ।

ವಿವಿಧ ವಿಷಯಗಳೂ ನಾಲ್ಕೈದು ರಸಗಳೂ ಹತ್ತೆಂಟು ವರ್ಣನೆಗಳೂ ಕಾವ್ಯ ಪುಷ್ಟಿಗೆ ಅತ್ಯಗತ್ಯ. ಪರಮ ವಿದ್ವಾಂಸನೂ ಕವಿಶಿರೋಮಣಿಯೂ ಅದ್ವಿತೀಯ ಶಕ್ತಿಯುತನೂ ಎಂಟೆರ್ದೆಯವನೂ ಆದರೂ ರನ್ನ ತನ್ನ ಕಾಲದಲ್ಲಿ ನೆಲೆಸಿದ್ದ ಕವಿ ಸಂಪ್ರದಾಯದ ಒಳಗಿದ್ದುಕೊಂಡೇ ತನ್ನ ಸಾರಸ್ವತ ತಪಸ್ಸನ್ನು ಸಿದ್ಧಿಸಿಕೊಂಡ.

ಕಾವ್ಯಕ್ಕೂ ನಾಟಕಕ್ಕೂ ಇರುವ ಹಲಕೆಲವು ವ್ಯತ್ಯಾಸಗಳು ಎಲ್ಲರಿಗೂ ಸುಲಭವಾಗಿ ಗೋಚರ. ಕಾವ್ಯದ "ಎಂದು ನೊಂದು ನುಡಿಯೆ" ಎಂಬುದು ನಾಟಕದಲ್ಲಿ "ನೊಂದು ನುಡಿವಳ್ ತಂಗೆ" ಎಂದೂ, "ಕುರುಕುಲ ಮಾನಸ್ತಂಭಂ ಧೈರ್ಯಾವಷ್ಟಂಭನಾಗಿ ಬರುತ್ತುಂ" ಎಂಬುದು "ನಡೆ, ಎನ್ನ ಧೈರ್ಯಮುಂ ಕಲಂಕದಿರು" ಎಂದೂ, "ಎಂದು ಪಶ್ಚಾತ್ತಾಪಂಗೆಯ್ದು" ಎಂಬುದು "ಪ್ರಿಯಮೆನಗೆ ಈ ಪಶ್ಚಾತ್ತಾಪಂ" ಎಂದೂ ಆಗಿರುವುದು ಸಾಧಾರಣ ಮಾರ್ಪಾಟು. ಕಾವ್ಯದಲ್ಲಿ ಕವಿಯ ವರ್ಣನೆಯಾದ "ಕುರುಭೂಭೃದ್ಬಲಕೂಲತೂಲಪವನಂ", "ಇಡೆ ತೊಡೆಯನುಡಿದು ನೆಟ್ಟನೆ", "ಪಂಕಜಮುಂ ಸುಹೃದ್ವದನ ಪಂಕಜಮುಂ" ಎಂಬ ಕಂದ ವೃತ್ತಗಳು ನಾಟಕದಲ್ಲಿ ಕೃಷ್ಣ ಧರ್ಮರಾಜ ಅಶ್ವತ್ಥಾಮರ ವಾಣಿಯಾಗಿರುವುದು ಸರಿಯಾದ ಬದಲಾವಣೆ. ನರ್ಮಸಚಿವನಾದ ವಿದೂಷಕನ ವಿಡಂಬನವನ್ನು ಕೃಷ್ಣನ ಬಾಯಲ್ಲಿಯೂ ನಕುಲ ಪಾರ್ಥರ "ಅಂಕವಕಲಿ", "ಮಾನಧನನೆನಿಸಿ" ಎಂಬ ಮೂದಲಿಕೆಯನ್ನು ಧರ್ಮಪುತ್ರ ಪಾಂಡವ ಜೀವಿಗಳ ಬಾಯಲ್ಲಿಯೂ ಇಟ್ಟಿರುವುದರ ಯುಕ್ತತೆ ಸ್ವಯಂ ವೇದ್ಯ. ಕಾವ್ಯದ ಕೆಲವು ವಾಕ್ಯಗಳನ್ನು ಬಹು ವಿವೇಚನೆಯಿಂದ ಹೃದಯಂಗಮವಾಗಿ ತಿದ್ದಲಾಗಿದೆ: "ಕೋಪಾನಳನಂ ಮಸ್ಸಿಸಿ ನೀನುಂ ಗಳಾ ಗಳಿತಕೋಪನಿರ್ಪ ತೆಜದಿಂದಿರ್ಪೆ"; "ಮಾನಧನನಪ್ಪಾತನಂ ನಾವು ಕಾಡುವುದಲ್ತು"; "ತಲೆಗರೆದು ನೀರೊಳ್ ಕುನಿಯೆಸೆ ನೊಂದೆಂ ನದೀಜನಭ್ಯರ್ಥನೆಯಿಂ"; "ಭೀಮನ ತಲೆಯಂ ತಂದಪೆಯಾ?" "ಶ್ರೀ"ಯವರ ಪ್ರತಿಭೆ ಹೊಸದಾಗಿ ಸೇರಿಸಿರುವ ಕೆಲವು ವಚನಗಳು ವಿಶೇಷ ಸಮರ್ಪಕವಾಗಿವೆ; ಅವುಗಳ ಪುಷ್ಕಳ ಸೊಬಗನ್ನು ಇಷ್ಟೆಂದು ನಿರೂಪಿಸಿ ಮುಗಿಸಲು ಆಗದು: "ಎನ್ನ ಆರಾಧನೆಯ ಶಕ್ತಿ ಇವಳ್": "ನಡೆ, ಭೀಮನಂ

ತೋಱಿಜು"; "ಆಃ : ತಾಯೆ, ಪಿಂತಿರಿಂ, ಕಾರ್ಯಂ ಕೆಟ್ಟುದು"; "ಸಂಜಯ : ಮಹಾರಾಜ, ಇತ್ತ ಬಾರದಿರ್, ಬಾರದಿರ್"; "ವಿಜಯೋನ್ಮತ್ತರಿಪರ್ ಕಾಣರ್, ನಾಂ ಕಾಣ್ಬೆಂ, ಭೀಮನ ತಲೆಯ ಮೇಲಾಡುವ ಘೋರ ಮೂರ್ತಿಗಳಂ". ಇವು ಗಳಿಂದ ಪಾತ್ರಸನ್ನಿವೇಶಗಳಿಗೆ ಅರ್ಥಗೌರವವೂ ಭಾವಗೌರವವೂ ಉಚಿತವಾಗಿ ಹೆಚ್ಚಿವೆ.

ನಾಟಕವನ್ನು ಕಾವ್ಯದಿಂದ ಬಹು ಮಟ್ಟಿಗೆ ಬೇರ್ಪಡಿಸಿ, ಕೊಂಚಮಟ್ಟಿಗೆ ಅದನ್ನೊಂದು ಸ್ವತಂತ್ರ ಪ್ರಬಂಧವನ್ನೇ ಆಗಿಸಿಬಿಟ್ಟಿರುವ ಪ್ರಬಲ ಪರಿವರ್ತನ ಕಥಾನಾಯಕನ ವಿಚಾರ. ರನ್ನನ ಯೋಜನೆಯಲ್ಲಿ ನಾಯಕನಾರೆಂಬುದನ್ನು ಹೇಳಲೇಬೇಕಾಗಿಲ್ಲ. ಅವನ ಇಚ್ಛೆ ಆವೇಶ ಜ್ಞಾನಸಂಪತ್ತು ಭಾಷಾಸಾಮರ್ಥ್ಯ ಕಾವ್ಯಾಧಿಕಾರ ಕಲಾನೈಪುಣ್ಯವೆಲ್ಲವೂ ಬಕಧ್ವಂಸಿಗೆ ಮೊದಲು ನೈವೇದ್ಯ. "ಬಣ್ಣಿಸಲಭಿಯೋಗವಮಾಯ್ತೆನಗೆ ಸಾಹಸಭೀಮನ ಸಾಹಸಂಗಳಂ!" ಎಂದು ಅವನೇ ಸಂತೋಷದಿಂದ ಸಾರಿಲ್ಲವೆ? ಅವನ "ಕೃತಿಗೀಶ್ವರ ಚಕ್ರವರ್ತಿ ಸಾಹಸಭೀಮಂ." ಪ್ರತಿ ಆಶ್ವಾಸದ ಕೊನೆಯ ಗದ್ಯಟಿಪ್ಪಣಿ ಸೂಚಿಸುವಂತೆ ಕಾವ್ಯದ ನಿಜ ನಾಮಧೇಯ "ಸಾಹಸಭೀಮ ವಿಜಯ." ಕುರುಕುಲ ದವಾನಲನ ಭೀಕರ ಶಪಥದಿಂದ ಕಾವ್ಯ ಪ್ರಾರಂಭವಾಗಿ, ಅವನ ಆಟೋಪ ಆಡಂಬರಗಳಿಂದ ಬೆಳೆಯುತ್ತ, ಗದಾಯುದ್ಧದಲ್ಲಿ ಫಲಪ್ರಾಪ್ತಿಯನ್ನು ಪಡೆದು, ಭೀಮನ ಪಟ್ಟಬಂಧ ಮಹೋತ್ಸವದಿಂದ ಕೊನೆಗೊಳ್ಳುತ್ತದೆ. ಕಾವ್ಯದ ಅರ್ಧ ಭಾಗ ಎಂದರೆ ಐದು ಆಶ್ವಾಸ ಪೂರ್ತಿ ಭೀಮಪಾತ್ರ ತಾನೇ ತಾನು. ಕುರುಕ್ಷ್ಮಾಪಾಲನ ಪ್ರಲಾಪವನ್ನು ಚಿತ್ರಿಸುವ ಆಶ್ವಾಸಗಳಲ್ಲಿಯೂ ಭೀಮನ ಅಗಾಧ ಪರಾಕ್ರಮವನ್ನೂ ಮಹತ್ವದ ಕಾರ್ಯಗಳನ್ನೂ ಸಂಜಯ ಬಣ್ಣಿಸುತ್ತಾನೆ ಆಗಾಗ. ಅಂತು ಮರುದಾತ್ಮಜನ ಪುರುಷತೇಜಸ್ಸಿನಿಂದ ಕಾವ್ಯದ ಬಹು ಪ್ರದೇಶ ತುಂಬಿದೆ. ಅವನ ಗಂಡು ದಾಪಿಗೆ ಕಾವ್ಯ ಭೂಮಿ ತತ್ತರಿಸುತ್ತದೆ; ಮತ್ತೆ ಮತ್ತೆ "ಅನಿಲತನೂಜನ ಸಿಂಹಧ್ವನಿ"ಯೂ, ಅವನು ಎದುರಿಗಿಲ್ಲದಿರುವಾಗ ಅವರ ಪ್ರತಿಧ್ವನಿಯೂ ನಮ್ಮ ಕಿವಿಗಳನ್ನು ಭೇದಿಸುತ್ತವೆ. ಸ್ನೇಹಮೂರ್ತಿಯ ಮಹಾದುಃಖವೂ ಭೀಮನ ಕಲಿತನದ ಕನ್ನಡಿಯಲ್ಲವೆ? ನಾಟಕದಲ್ಲಾದರೋ ಕೌರವನಲ್ಲ ಪ್ರಧಾನಸ್ಥಾನದಿಂದ ಬಹು ದೂರ. ನಾಟಕದ ವೃಕೋದರ ಕೊಂಚಮಟ್ಟಿಗೆ ವಿನಯ ದರಿದ್ರ. ಕಾವ್ಯದಲ್ಲಿ ಭೀಮನ "ಆನುಂ ವಿಧೇಯನಲ್ಲಂ ನೀನುಂ ಗುರುವಲ್ಲಮಿಂದಿನೊಂದು ದಿವಸದೊಳ್" ಎಂಬ ವಜ್ರ ಸಂಕಲ್ಪಕ್ಕೆ ಮುಂಚೆ "ಅಜಾತಶತ್ರುಗೆ ಕುರುಕುಲ ಪ್ರಧಾನಶತ್ರುವೆನಿಸಿದ ಸಾಹಸ ಭೀಮಂ ಸಾಷ್ಟಾಂಗ ನಮಸ್ಕಾರಂ ಗೆಯ್ದಿಂತೆಂದಂ" ಎಂಬ ಹಿತಾರ್ಥ ಗರ್ಭಿತವಾದ ಪೀಠಿಕೆಯಿದೆ. ನಾಟಕದಲ್ಲಿ ಭೀಮಪರವಾದ ಈ ಸುಶೀಲ ಇಲ್ಲ. ಧರ್ಮರಾಜ "ಭೀಮ, ಈ ಮಸಕಂ ಮಸಗಲ್ ತಗದು!" ಎಂದು ಆಕ್ಷೇಪಿಸಲು, ಭೀಮ "ಓಹೊ ಧರ್ಮಶ್ರವಣಂ!" ಎಂದು ಅಣ್ಣನನ್ನು ತಕ್ಷಣ ಕಟುಮಾತಿನಿಂದ ಎದುರಿಗೆ ಹಂಗಿಸಿಬಿಡುವನು. ಕಾವ್ಯದಲ್ಲಿ ಸರೋಮಧ್ಯದಿಂದ ಲಂಘಿಸಿ "ನಿಜ ಭುಜಗದೆಯಂ ತೂಗುತ್ತಮಿರ್ದ ದಂದಶೂಕಪತಾಕನ ಸೆರಗಿಲ್ಲದ ಮೆಯ್ಗಲಿತನಕ್ಕೆ" ಭೀಮ "ಮೆಚ್ಚಿ ತಲೆಯಂ ತೂಗಿ"ದನೆಂದಿದೆ. ರಿಪುವಿನ ಮಹಿಮೆ

ಯನ್ನು ಮೆಚ್ಚುವ ಮಹಾತ್ಮ ಕಾವ್ಯದ ಭೀಮ. ಗದಾಯುದ್ಧ ಸನ್ನಿಹಿತವಾಗಿರುವಾಗ "ಸಾಹಸಭೀಮಂ ದ್ರೋಣಾಚಾರ್ಯಂಗೆ ಮನದೊಳ್ ನಮಸ್ಕಾರಂ ಮಾಡಿ" ತನ್ನ ಕಾಲದಂಡವನ್ನೆತ್ತುತ್ತಾನೆ. ಈ ಪ್ರಸ್ತಾವದಲ್ಲಿ ಕೃಷ್ಣಪಾತ್ರದ ವಿಮರ್ಶೆಯೂ ಅನಿವಾರ್ಯ. ಭಾರತದ ಕೃಷ್ಣನೆಂದರೇ ಚಿತ್ತ ಡೋಲಾಯಮಾನವಾಗುತ್ತದೆ. ಈ ನಾಟಕದ ಗೋಪಾಲ ಮೊದಲ ಪ್ರವೇಶದಲ್ಲಿಯೇ ಭೀಮನಿಗೆ "ಇಂದಿನ ನೇಸಱಿಂದೊಳಗೆ ವೈರಿಯನಿಕ್ಕದೆ ಮಾಣ್ದೆವಪ್ಪೊಡೆ ಇನ್ನೆಂದುಮಸಾಧ್ಯಂ" ಎಂದು ಎಚ್ಚರಿಕೆ ಈಯುವಂಥವನು. ದುರ್ಯೋಧನ ವೈಶಂಪಾಯನದಲ್ಲಿ ಮರೆಯಾಗಿದ್ದಾಗ "ಭೀಮ, ಮಾತಿನೊಳ್ ಕಾರ್ಯಮಾಗದು. ನೇಸಱ್ ಬೞಿಯುತಿರ್ಕುಂ. ಮುಂದಱಿಸುವಂ, ಬಾ" ಎಂದು ಭೀಮನನ್ನು ಬಲಾತ್ಕರಿಸಿ ಮುಂದೊಯ್ಯುವನು ಕೃಷ್ಣ. ಹಗೆತನವನ್ನು ಕಿತ್ತೊಗೆದು ಸಕಲ ಸಾಮ್ರಾಜ್ಯವನ್ನೂ ಧಾರ್ತರಾಷ್ಟ್ರನೇ ಆಳಬಹುದೆಂದು ಧರ್ಮರಾಯ ಬಿನ್ನವಿಸಲು, ಕೃಷ್ಣ ಆಡುವ "ದುರ್ಯೋಧನ, ಧರ್ಮಜಂ ಕೃಪೆಯಿಂದೊಳ್ಳಿತಂ ಪೇೞ್ದಪಂ; ಈಗಳುಂ ಕೇಳ್ದು ಬರ್ದುಕು" ಎಂಬ ಕಟಕಿಯ ಮಾತು ಅಸಮರ್ಪಕ. "ಈ ನೆಲನಿದು ಪಾೞ್ನೆಲನೆನಗೆ ದಿನಪಸುತನಂ ಕೊಲಿಸಿದ ನೆಲನೊಡನೆ ಮತ್ತೆ ಪುದುವಾೞ್ವೆನೇ?", "ಆರೊಡನೆ ರಾಜ್ಯಂಗೆಯ್ವೆಂ ಆರ್ಗೆನ್ನ ಸಂಪದಮಂ ತೋಱುವೆಂ?", "ಸತ್ತರ್ ಪುಟ್ಟರೆ?", "ಬಿಡಿಮೆನ್ನಂ" ಎಂಬ ಭಾಷೆಯ ಛಲದಂಕಮಲ್ಲನಿಗೆ "ಕೇಳ್ದು ಬರ್ದುಕು!" ಎಂಬ ಬುದ್ಧಿವಾದ ಸೊಗಸದು. ಗದಾಯುದ್ಧ ನಡೆಯುತ್ತಿರುವಾಗ "ಸತ್ಯಾಶ್ರಯ, ಊರುಭಂಗ ಪ್ರತಿಜ್ಞೆ ಏನಾಯ್ತು?" ಎಂದು ಭೀಮನಿಗೆ ಬಹಿರಂಗವಾಗಿ ಪಾಠ ಹೇಳಿಕೊಡುತ್ತಾನೆ ಶ್ರೀಕೃಷ್ಣ. ಇಂಥ ಮಾರ್ಪಾಡು ಹಲವು. ಇವಕ್ಕೆ ಕಾವ್ಯದಲ್ಲಿ ಆಧಾರವಿಲ್ಲ. "ವಿನಯಮನೆ ಮೆಱೆವ ದುರ್ಯೋಧನನಂ ನೀನೆನ್ನ ಮುಂದೆ ನುಡಿವುದೆ ಭೀಮಾ" ಎಂಬುದೂ "ಎನೆ ಹರಿಯೆಂದಂ ದುರ್ಯೋಧನ ಧರ್ಮತನೂಜನೊಳ್ಳಿತಂ ಪೇೞ್ದಪನಾತನ ಪೇೞ್ದುದೆಸಗಿ ನೀನರಸನಾಗಿ ವಸುಮತಿಯನಾಳ್ದುದಾವುದು ದೋಷಂ?" ಎಂಬುದೂ ರನ್ನನಲ್ಲಿ ನಾರಾಯಣನ ದೊಡ್ಡತನದ ಮಾತು. ಕಾವ್ಯದಲ್ಲಿ ಕೌರವನನ್ನು ಕದನಕ್ಕೆ ಪ್ರಚೋದಿಸುವುದು ಕೃಷ್ಣನ ಯಾವ ನಿಷವಾಕ್ಯೂ ಅಲ್ಲ; ಭೀಮಸೇನನ ಅನೃತಶ್ಲಾಘನೆ:

ನೀನಯ್ದು ಬಾಡದೊಳ್ಸಂ।
ಧಾನಂ ಮಾಡಲ್ಕೆ ಪೋದೊಡೊಲ್ಲದೆ ಮುನ್ನೀ ॥
ಮಾನಧನನೆಯ್ದೆ ನಿಜತನು ।
ಜಾನುಜರೞ್ಕಡೆ ಸಂಧಿಯಂ ಮಾಡುವನೇ ॥

"ದುರ್ಯೋಧನಂ ಭೀಮಸೇನನ ನುಡಿಯನೆ ಸಮರ್ಥಿ"ಸುವನು. ಊರುಭಂಗ ಸಂಕೇತದ ಸಂಗತಿ ಕಾವ್ಯದಲ್ಲಿ ಎಷ್ಟು ಲಲಿತವಾಗಿದೆ ನೋಡಿ:

"ಅಂತು ಮೂರ್ಛೆಯಿಂ ಮಾರುತಿಯೆಚ್ಚತ್ತಾಗಳ್
ಪೊಡೆಯಲ್ಕಾತಂ ರಾಗದೆ।
ತೊಡೆಯಂ ಪೊಯ್ದಾರ್ದು ನೆವದೆ ನೆಱನೀತಂಗೀ ॥ •

ಯೆಡೆಯೆಂದು ತೋಱು ಕುಡೆ ಪೊಲ ।
ಗಿಡಿದಱಿದಂ ಪರಮಪಂಡಿತಂ ಪವನ ಸುತಂ ॥''

ಕಾವ್ಯದ ಭೀಮನಲ್ಲಿ ಈ ತಲೆಮಾರಿನ ನಮಗೆ ನೆಮ್ಮದಿಯನ್ನು ಕಲಕುವ ನಡತೆ ಯೆಂದರೆ ಕೇಗೆ ಬಿದ್ದಿರುವ ಕೌರವನ ಕಿರೀಟವನ್ನು ಕಾಲಿನಿಂದೊದೆಯುವ ಮರ್ನಿಯ. ನಾಟಕದಲ್ಲಿ ಈ ಅಪಘಾತವನ್ನು ಬಿಟ್ಟುಬಿಟ್ಟು ಭೀಮಸೇನನಿಗೆ ವ್ಯಾಸರಿಂದ ಒಡಿದು ಅನುಸ್ಯೂತವಾಗಿ ಆಗಿರುವ ಅನ್ಯಾಯವನ್ನು ಇಳಿಸಲು ಅವಕಾಶವಿತ್ತು. ಕಾವ್ಯದಲ್ಲಿ ಮುಕುಟಭಂಗವೂ ಇಱುವಬೆಡಂಗನ ಒಂದು "ಪ್ರತಿಜ್ಞಾ ಭಾರ." ಅದೆಷ್ಟು ಗಹನದ ವಿಷಯವೆಂದರೆ ಕವಿ ಅದನ್ನು ತಿರುತಿರುಗಿ ಒತ್ತಿ ಉಚ್ಚರಿಸಬೇಕಾಗಿದೆ. "ಕುರುಪತ್ಯುರು ಕಿರೀಟಭಂಗಮುಂ ಪಡೆದು ಜಗತ್ಸ್ತುತ್ಯ ಕೃತಕೃತ್ಯನೆನಿಸದೆ" ನಿಂತರೆ ಸಾಹಸಭೀಮನ ಉದ್ಯಮಕ್ಕೆ ಬಾಳಿಕೆಗೆ ವ್ಯಕ್ತಿಪ್ರಕಾಶಕ್ಕೆ "ಪರಿಣಾಮ ರಮಣೀಯ"ತೆ ಎಂತು? ಈ ಸಂದರ್ಭದಲ್ಲಿ ಹೋಮರನ ಕಥಾಕಂಠೀರವ ಅಕೀಲಸ್ಸು ಹೆಕ್ಟರನ ಹೆಣವನ್ನು ತನ್ನ ರಥದ ಹಿಂದೆ ಕಟ್ಟಿ ಸ್ನೇಹಿತನ ಚಿತೆಯ ಸುತ್ತ ಕೆಲವಾರು ದಿವಸ ಅದನ್ನು ಹುಡಿಯಲ್ಲಿ ಎಳೆದಾಡಿದ ವೃತ್ತಾಂತ ನೆನಪಿಗೆ ಬರುತ್ತದೆ. ಅದು ಹೇಗಾದರೂ ಇರಲಿ. ಕಾವ್ಯದ ಸಮೀರ ಕುಮಾರ ಪುರುಷೋತ್ತಮರು ನಾಟಕದಲ್ಲಿ ರೂಪಾಂತರ ಹೊಂದಿದ್ದಾರೆ.

ಇದಕ್ಕೆ ಬಹುಶಃ ಎರಡು ಕಾರಣ. ಗ್ರೀಕ್ ರುದ್ರನಾಟಕದಮೇಲೆ "ಶ್ರೀ" ಯವರಿಗೆ ಇರುವ ಅಭಿಮಾನ ಮೊದಲನೆಯದು. "ಅಶ್ವತ್ಥಾಮನ್", "ಪಾರಸಿ ಕರು"ಗಳನ್ನು ರಚಿಸುವ ಮುನ್ನ ರನ್ನನ ಗದಾಯುದ್ಧವನ್ನು ಗ್ರೀಕ್ ನಾಟಕ ವಿನ್ಯಾಸಕ್ಕೆ ಹೊಂದಿಸಿ ನೋಡುವ ಕುತೂಹಲ ಅವರಲ್ಲಿ ಹುಟ್ಟಿದ್ದು ಸ್ವಾಭಾವಿಕವೇ. ದುರ್ಯೋಧನನನ್ನು ನಾಯಕನನ್ನಾಗಿ ಏರಿಸುವ ದರ್ಶನವೇ ಎರಡನೆಯ ಕಾರಣ. ಭೀಮ ಕೃಷ್ಣರನ್ನು ಕಾವ್ಯದಲ್ಲಿರುವಷ್ಟೇ ಸದ್ಗುಣಿಗಳನ್ನಾಗಿ ಇಟ್ಟಿದ್ದರೆ, ಕೊನೆಗೆ ಹೆಚ್ಚು ಉದಾತ್ತರನ್ನಾಗಿ ಕಟೆದಿದ್ದರೆ ದುರ್ಯೋಧನ ಪಾತ್ರದ ಉತ್ಕೃಷ್ಟತೆಗೆ ಊನವಾಗುತ್ತಿರಲಿಲ್ಲ. ಮಹಾನುಭಾವನೆಂಬುದು ರನ್ನನೇ ಸುಯೋಧನನಿಗೆ ಕೊಟ್ಟಿರುವ ಬಿರುದು. ಅದನ್ನು ಸಮರ್ಥಿಸುವ ಕೆಲಸ ಪ್ರಕೃತದಲ್ಲಿ ಅನವಶ್ಯಕ. ಆದರೂ ರನ್ನ ಅಲ್ಲಲ್ಲಿ ಧ್ವನಿಗೈಯುವ ಸೂಚನೆಗಳನ್ನು ಬದಿಗೊತ್ತಲಾಗದು. ಕೌರವ ಹೀಗೆ ಆಣೆಯಿಡುತ್ತಾನೆ:

ಅನುಜನ ನೆತ್ತರನೀಂಟಿದ ।
ವನ ನೆತ್ತರ ಜೀವಸಹಿತಮಿಾಂಟದೆ ದುರ್ಯೋ ॥
ಧನನೆಂಬ ಪೆಸರ್ಗೆ ಮುಯ್ಯಾಂ ।
ಪೆನೆ ದುಶ್ಯಾಸನನ ಬನ್ನಮುಂ ನೀಗುವೆನೇ ॥

ಕೂಡೆ ವಿರೋಧಿಯಂ ತಱಿದು ತದ್ರಸಮಾಂಸದೆ ಭೂತಭೋಜನಂ ।
ಮಾಡದೆ ವೈರಿವಾರವನಿತಾ ವದನಾಂಬುರುಹಂಗಳಂ ಬೆಳ ।
ರ್ಮಾಡದೆ..............
....ಸಂಧಿ ಮಾಡುವನೆ ಪಾಂಡವರೊಳ್ ಫಣಿರಾಜಕೇತನಂ ॥

ಶತ್ರುವಿನ ರುಧಿರ ಪಾನದಿಂದ ತನ್ನ ಮಹಾನುಭಾವತ್ವ ಕಳೆ ಕುಂದುವುದೆಂದು ಯಾವ ಭಾರತವೀರನೂ ಶಂಕೆಪಟ್ಟಂತೆ ತೋರುವುದಿಲ್ಲ! ಕೌರವಸ್ವಾಮಿ ದ್ರೋಣನಿಗೆ ಪ್ರದಕ್ಷಿಣೆಮಾಡಿ ಅಭಿಮನ್ಯುವಿಗೆ ಕೈ ಮುಗಿದು ಹೃದಯವನ್ನು ತೊಳೆದುಕೊಂಡು ತನ್ನ ಮೇಲ್ಮೆಯನ್ನು ಎತ್ತರಿಸುತ್ತಾನೆ; ನಿಜ. ಆದರೆ "ಕುರುಬಾಲ ಸಂಹರಣ ಮಾತ್ರದೆ ಮಾರುತಿ ಗಂಡನಾದನೆ?" ಎಂದು ಪ್ರತಿಕಕ್ಷಿಯನ್ನು ಹೀಯಾಳಿಸುತ್ತಾನೆಯೇ ಹೊರತು, ಎಲ್ಲಿಯಾದರೂ ತನ್ನ "ಸಾಹಸ ಗರ್ವಾಲಂಕೃತಿ"ಯನ್ನು ಭೀಮ ಒಪ್ಪುವಂತೆ, ನುತಿಸುವಂತೆ, ಭೀಮನ ಸಾಹಸವನ್ನು ತಾನು ನುತಿಸುವುದು ಹೋಗಲಿ, ಒಪ್ಪುತ್ತಾನೆಯೇ? ಕೌರವೇಶ್ವರನನ್ನು ಖಂಡಿತ ವಿಮರ್ಶೆಗೆ ಗುರಿಮಾಡುವಾಗ ರನ್ನನ ಈ ಪದ್ಯಗಳನ್ನು ಮರೆಯಲಾಗದು :

ಪಸೆಯೊಳ್ಪಸುರ್ವಂದರೊಳ ।
ಗ್ನಿ ಸಾಕ್ಷಿಯೊಳ್ಕೊಂಡ ಪಾಂಡುಪತಿಯಿರೆ ದೋಷಾ ॥
ವಸಥರ್ವಾದರದಿಂ ಜನಿ ।
ಯಿಸಿದರ್ಪಾಂಡವರೊಳಲ್ಲದೆಮ್ಮೊಳುಮುಂಟೇ ॥

ಒಂದೆರಡುಮುಂತರಂತರ ।
ದಿಂದಂ ಪೊಱಮಟ್ಟ ಪಜ್ಜೆಯೆಂಬುದನೆನಿಸಲ್ ॥
ಪಿಂದು ಪೆಱಗಾಗಿ ಪುಗೆ ಚೀ ! ।
ಎಂದವನಂ ರಾಜ್ಯಲಕ್ಷ್ಮಿ ಪೇಸಿ ಬಿಸುಟ್ಟಳ್ ॥



ತುಱುವಂ ಕಳಿಸುವ ಕೃಷ್ಣೆಯ ।
ನಿಱಿಯಂ ಪಿಡಿದುರ್ಚಿವೇೞ್ವ ಕೊಳನಂ ಪಿಂದುಂ ॥
ಪೆಱಗಾಗಿ ಪುಗುವ ದುರ್ನಯ ।
ಮಱಪವೆ ಕೌರವನ ರಾಜ್ಯದಾಯುವ ಕೇಡಂ ॥

ರನ್ನನ ಅಳತೆಯಲ್ಲಿ ಭೀಮ ದುರ್ಯೋಧನರು ಸ್ವಲ್ಪ ಹೆಚ್ಚು ಕಡಮೆ ಒಂದೇ ಜಾತಿಯ ರೀತಿ ನೀತಿಯವರು, ಗದಾಯುದ್ಧದ ನಾಯಕ ಪ್ರತಿನಾಯಕರು.

"ಸಾಹಸಭೀಮ ವಿಜಯ"ದ ತಿರುಳು ಇರುವುದು ಏಳು ಎಂಟನೆಯ ಆಶ್ವಾಸಗಳಲ್ಲಿ. ಕೌರವ ಎಲ್ಲಿ ಅಡಗಿಕೊಂಡನೊ ಸಿಕ್ಕುವನೊ ಇಲ್ಲವೊ ಎಂದು ಉಮ್ಮಳಿಸುವ ಭೀಮನ ಚಿತ್ತಕ್ಷೋಭೆ, ರನ್ನನಿಗಲ್ಲದೆ ಬೇರೊಬ್ಬನಿಗೆ ಅನಿರ್ವಚನೀಯವಾದ ಭೀಮ ದುರ್ಯೋಧನರ ಗದಾಯುದ್ಧ—ಇವೆರಡನ್ನು ಬಿಟ್ಟಲ್ಲಿ ಕಾವ್ಯದ ಸತ್ವ ಮುಕ್ಕಾಲುಪಾಲು ಕುಗ್ಗಿದಂತೆ. ಇದಾಗಲಿ ಅದಾಗಲಿ ನಾಟಕದಲ್ಲಿ ಬಹಳ ಬರುವಹಾಗಿಲ್ಲ; ಮೆಯ್ಸಿರಿಯ ಮಾತುಗಾರಿಕೆಯನ್ನು "ಇವನಂ ತಾರ್ ಬಲ್ಲ"ರೆಂದೆನ್ನಿಸುವ ರನ್ನನ ವಚನ ಪರಂಪರೆಯಲ್ಲಿ ಕೆಲವನ್ನು ಮಾತ್ರ ನಾಟಕ ಮಾದರಿಗಾಗಿ ಪ್ರದರ್ಶಿಸಬಲ್ಲದು, ಹಲವಕ್ಕೆ ಅಲ್ಲಿ ಸ್ಥಳವೇ ಇಲ್ಲ. ಇವು ಕಾವ್ಯದಲ್ಲಿ ಮಾತ್ರ ಲಭಿಸುವ ರಸಮಣಿಗಳು: "ಭೀಮಸೇನನಂತು ಆರೂಢ ಕೋಪನುಂ ಪ್ರತಿಜ್ಞಾರೂಢನುಮಾಗಿ", "ಅಱುತ್ತುಂ ಬಂದ ತನ್ನಂ ನಗುತ್ತುಂ ಪೋಪಂತೆ ಸಂತೋಷಂ ಮಾಡಿಸಿದುಪಕಾರಂಬಟ್ಟು", "ಕೆಲರಂ ಗುರ್ದಿಯುಂ ಮರ್ದಿಯುಂ ತಿರುಪಿಯುಂ ತೇದುಂ ಭುಜಾದಂಡದಿಂ". "ನಿನ್ನಂ ಪೆತ್ತಳ್ ಮೊಲೆ



ವೆತ್ತಳ್ ನೀರಜನನಿವೆಸರಂ ಪೆತ್ತಳ್", "ವಿಸ್ಮಯಮುತ್ತು ಮೆಚ್ಚಿ ಪೊಗೞ್ದಂ ಮಂದಾಕಿನೀ ನಂದನಂ", "ನೀನಿನಿತನೆಮಗೊಳ್ಳಿತ್ತೈ ಭೀಮ ಮಂಗು ಮುನ್ನೆಮ್ಮ ನೆಮ್ಮ ಸುತನಂ ಬೞಯಂ", "ಲಜ್ಜಾ ಭರದಿಂದ, ತಲೆಯನೆಱಗಿದಂ ಧರ್ಮಸುತಂ", "ತನ್ನ ತಮ್ಮನಂ ನೋಯಿಸಲಾಱದೆಯುಂ ದುರ್ಯೋಧನಂಗಾದವಸ್ಥೆಯಂ ನೋಡಲಾಱದೆಯುಂ ಬಲದೇವಂ ದ್ವಾರವತಿಗೆ ಪೋದಂ." ಕಡೆಯ ನುಡಿ. ಮಹಾಕೃತಿಯ ಈ ನಿದರ್ಶನಗಳು ನಾಟಕದಲ್ಲಿ ಬಂದಿಲ್ಲ: "ಆ ಕುರುಧರೆಯೊಳ್ ಕುರುಪತಿಯನಱಸಿದಂ ಪವನಸುತಂ", "ಕೋಪಾರಕ್ತ ನೇತ್ರಂ ನಿಜಭುಜಗದೆಯಂ ತೂಗಿದಂ ಧಾರ್ತರಾಷ್ಟ್ರಂ"

ಆ ರವಮಂ ನಿರ್ಜಿತ ಕಂ।
ಠೀರವ ರವಮಂ ನಿರಸ್ತ ಘನರವಮಂ ಕೋ॥
ಪಾರುಣನೇತ್ರಂ ಕೇಳ್ದಾ।
ನೀರೊಳಗಿರ್ದುಂ ಬೆಮರ್ತನುರಗ ಪತಾಕಂ॥

"ಅಂತು ಸುಯೋಧನಂಗೆ ಸ್ವೈಪು ಬರ್ಪಂತೆಯುಂ....ಜಂಗಮ ಹಿಮಾಚಲಮೆ ಬರ್ಪಂತೆಯುಂ ಬಂದು", "ನೀವಿದಂ ಸುಯೋಧನನೊಳ್ ಕೇಳ್ದು ನಂಬುವುದೆರಡ್ಡುಡಿಯಂ ಫಣಿರಾಜಕೇತನಂ", "ರಣೋತ್ಸವದಿಂದನಿಲಸುತಂ ತಾನೆ ಸವಱದಂ ಕೊಳುಗುಳಮಂ", "ಸ್ಮರಸಂಜೀವನೆ ಕೃಷ್ಣೆ ಪೂಮುಡಿದಳ್", "ಚಕ್ರಿ ತಾಂ ಕಾಲಚಕ್ರವರ್ತಿಯಪ್ಪುದಱಂ", "ಕುರುಕುಲ ಕುಟುಂಬನ ಘಟಚೇಟಿಯಂ ಕೊಂಡು ಪೋಪಂತೆ"

ಕುರುರಾಜಂ ತೊಡೆವೇನೆಗೆ।
ನರಳನೆ ಕುಱುವಾದ ತೊಡೆಯ ಬೇನೆಗೆ ಕಂಡರ್॥
ನರಳ್ವಂತೆ ನರಳದರಸಂ।
ವಿರೋಧದಿಂದಾದ ಮಾನಹಾನಿಗೆ ನೊಂದಂ॥

"ಬೀಡಂಮಂಜಿಱವಂತಿರುಳೊಳಿಱದನಶ್ವತ್ಥಾಮಂ", "ಪಾಂಡವ ಬಲ ಪ್ರಾಕಾರ ವೀರಂಗೆ ಸಾಹಸಭೀಮಂಗೆ ಮನೋ ಮುದಂ ಬೆರಸು ಕೃಷ್ಣಂ ಕಟ್ಟಿದಂ ಪಟ್ಟಮಂ."

ಈ ಚರ್ಚೆಯ ಸಾರಾಂಶವಿಷ್ಟೆ: "ಗದಾಯುದ್ಧ ನಾಟಕ"ವನ್ನು ಓದಿ "ಸಾಹಸಭೀಮ ವಿಜಯ"ದ ಸಂಪೂರ್ಣ ಪರಿಚಯ ದೊರಕಿತೆಂದು ಭಾವಿಸಲಾಗದು. ಆದರೆ ಕಾವ್ಯ ಸಾಕು, ನಮಗೆ ನಾಟಕ ಬೇಡವೆಂದು ಉಪೇಕ್ಷಿಸುವುದು ಮೌಢ್ಯ. ಎರಡನ್ನೂ ಸ್ವೀಕರಿಸಿ ಎರಡರ ಸ್ವಾರಸ್ಯಗಳನ್ನೂ ಅನುಭವಿಸುವುದು ಓದುಗರ ಕರ್ತವ್ಯ.

ಎಸ್. ವಿ. ರಂಗಣ್ಣ

# ಗದಾಯುದ್ಧ ಕಾವ್ಯವೂ—ಗದಾಯುದ್ಧ ನಾಟಕವೂ

ಗದಾಯುದ್ಧ ನಾಟಕವು ೫ ದೃಶ್ಯಗಳ ಒಂದು ಚಿಕ್ಕ ನಾಟಕ. ಈ ನಾಟಕದೊಳಗೆ ಉಪಯೋಗಿಸಿದ ಸಂನಿವೇಶಗಳು ಗದಾಯುದ್ಧ ಕಾವ್ಯದೊಳಗಿನವು. ಪದ್ಯಗಳೂ ಚಿಕ್ಕ ಚಿಕ್ಕ ಗದ್ಯಭಾಗಗಳೂ— ಒಂದು ಪದ್ಯ ಮತ್ತು ಕೆಲವು ಗದ್ಯಭಾಗಗಳನ್ನು ಬಿಟ್ಟು— ಎಲ್ಲವೂ ಕಾವ್ಯದಲ್ಲಿಯವೇ. ನಾಟಕದಲ್ಲೆಲ್ಲ ಪದ್ಯಭಾಗವೇ ಹೆಚ್ಚು. ಈ ನಾಟಕದಲ್ಲಿ ಒಟ್ಟು ೧೪೭ ಪದ್ಯಗಳಿವೆ. ಗದಾಯುದ್ಧ ಕಾವ್ಯದಲ್ಲಿ ಯಾವರೋ ೫೭೬ ಪದ್ಯಗಳೂ ದೀರ್ಘವಾದ ಎಷ್ಟೋ ವಚನಗಳೂ ಇವೆ. ಇಷ್ಟು ದೀರ್ಘವಾದ ಕಾವ್ಯದ ಸಾರವನ್ನು ಕೇವಲ ೧೪೭ ಪದ್ಯಗಳಲ್ಲಿಯೂ ಕೆಲವೊಂದು ಚಿಕ್ಕ ಚಿಕ್ಕ ವಚನಗಳಲ್ಲಿಯೂ ಸಂಗ್ರಹಿಸಿದ ಜಾಣ್ಮೆಯೇ ಮೊದಲು ನಮಗೆ ಆಶ್ಚರ್ಯವನ್ನುಂಟುಮಾಡುತ್ತದೆ. ನಾಟಕದಲ್ಲಿ ಕಾವ್ಯದ ಮುಖ್ಯವಾದ ಸಂನಿವೇಶಗಳೂ, ರನ್ನನ ಪ್ರತಿಭೆಯ ಪರಾಕಾಷ್ಠತೆಯನ್ನು ತೋರಿಸುವ ಬಹುತರ ಎಲ್ಲ ಪದ್ಯಗಳೂ, ರಸವತ್ತಾದ ಭಾಗಗಳೂ ಅಡಕವಾಗಿವೆ.

ಗದಾಯುದ್ಧ ಕಾವ್ಯದಿಂದ ಒಂದು ಉತ್ತಮ ದುರಂತ ನಾಟಕವನ್ನು ರನ್ನನ ಶಕ್ತಿಪೂರ್ಣವಾದ ನುಡಿಗಳಲ್ಲಿಯೇ ರಚಿಸುವುದು ಸಾಧ್ಯವಿದೆಯೆಂಬ ವಿಚಾರವು ಮೊದಲು ಹೊಳೆದದ್ದು ಶ್ರೀ॥ ಶ್ರೀಕಂಠಯ್ಯನವರಿಗೆ. ಪಾಶ್ಚಾತ್ಯರ ಪರಂಪರಾಪ್ರಾಪ್ತವಾದ ಕಥೆಯಲ್ಲಿ ಹೇಳಿದಂತೆ ಯಾರೊ ಒಬ್ಬರ ಕೈಯಲ್ಲಿ ಸೆರೆಸಿಕ್ಕು ತೊಳಲುತ್ತಿರುವ ರಾಜಪುತ್ರಿಯನ್ನು ಒಬ್ಬ ರಾಜಪುತ್ರನು (Prince Charming) ಬಿಡಿಸಿಕೊಂಡು ಬಂದ ಸಂಗತಿಯ ಉಪಮೆಯನ್ನು ಕೊಟ್ಟು 'ಶ್ರೀ'ಯವರು ಹೇಳಿದ್ದು ನನ್ನ ಸ್ಮರಣೆಯಲ್ಲಿದೆ. ಗದಾಯುದ್ಧ ಕಾವ್ಯದಲ್ಲಿ ಒಂದು ನಾಟಕವು ಸಿಕ್ಕಿಕೊಂಡಿದೆ, ಅದನ್ನು ತಾವು ಬಿಡಿಸಬೇಕು ಎಂಬ ವಿಚಾರವು ಅವರಿಗೆ ಬಹಳ ದಿನಗಳಿಂದ ಇದ್ದಿತಂತೆ. ಆದರೆ ಆ ರಾಜಪುತ್ರಿಯನ್ನು ಸೆರೆಬಿಡಿಸುವ ಯೋಗವು ೧೯೩೫ನೆಯ ಇಸವಿಯ ವರೆಗೂ ಬರಲಿಲ್ಲ. ಆ ವರುಷ ಮೈಸೂರು ಕಾಲೇಜಿನ ಕರ್ನಾಟಕ ಸಂಘದವರು ತಾವು ಆಡಲಿಕ್ಕೆ ಒಂದು ನಾಟಕ ಬೇಕೆಂದು ಕೇಳಿದಾಗ ರನ್ನನ ಗದಾಯುದ್ಧವನ್ನು ನಾಟಕ ರೂಪಕ್ಕೆ ತಿರುಗಿಸಿಕೊಟ್ಟರು. ಆಮೇಲೆ ಆ ನಾಟಕವು ಕರ್ನಾಟಕದ ಹಲವು ಪಟ್ಟಣಗಳಲ್ಲಿ ಕೆಲವು ಸಾರಿ ಪ್ರದರ್ಶಿಸಲ್ಪಟ್ಟಿದೆ; ಜನರ ಮೆಚ್ಚುಗೆಯನ್ನು ಪಡೆದಿದೆ.

ಗದಾಯುದ್ಧ ಕಾವ್ಯವೇ, ಇಲ್ಲ ನಾಟಕವೆ? ಅದರಲ್ಲಿ ನಾಟಕದ ಅಂಶಗಳು ಎಷ್ಟುಮಟ್ಟಿಗೆ ಕಂಡುಬರುತ್ತವೆ? ಎಂಬ ವಿಚಾರವನ್ನು ಮೊದಲು ಮಾಡಬೇಕು. ರನ್ನನು ಮೊದಲು ಇದನ್ನು ಒಂದು ನಾಟಕವೆಂದು ಬರೆದು ಆಮೇಲೆ ಒಂದು ಕಾವ್ಯವನ್ನಾಗಿ ಮಾರ್ಪಡಿಸಿರಬಹುದೆಂದು ಕೆಲಜನ ಪಂಡಿತರು ಅಭಿಪ್ರಾಯಪಡುತ್ತಾರೆ. ರನ್ನನು ತನ್ನ ಕಾವ್ಯಕ್ಕೆ ಅಪೂರ್ವವಾದ, ರಸವತ್ತಾಗಿ ಚಿತ್ರಿಸಲಿಕ್ಕೆ ಯೋಗ್ಯವಾದ, ತೀರ ಸ್ವಲ್ಪ ಕಾಲಾವಧಿಯಲ್ಲಿಯೇ ಮಹತ್ತ್ವದ ಭವ್ಯ ಘಟನೆಗಳು ಸಂಭವಿಸುವ, ನಾಟಕೀಯವಾದ ಸಂನಿವೇಶಗಳಿಂದ ತುಂಬಿದ ಒಂದು ಪ್ರಸಂಗವನ್ನು

ಆರಿಸಿಕೊಂಡಿದ್ದಾನೆ. ಒಂದು ಅರ್ಧ ದಿನದ ಅವಧಿಯಲ್ಲಿ ವ್ಯಕ್ತಿಗಳ ಮತ್ತು ಸಮಷ್ಟಿಯ ಜೀವನದಲ್ಲಿ ಎಂತಹ ಘಟನೆಗಳು? ಎಂತಹ ಮಾರ್ಪಾಟುಗಳು? ಇವು ನಾಟಕದಲ್ಲಿ ಚಿತ್ರಿಸಲಿಕ್ಕೆ ಬಹಳ ಯೋಗ್ಯವಾಗಿವೆ. ರನ್ನನಾದರೂ ನಾಟಕದ ರೀತಿಯಲ್ಲಿಯೇ ತನ್ನ ಕಾವ್ಯವನ್ನು ಬರೆದಿದ್ದಾನೆ. ಗದಾಯುದ್ಧದಲ್ಲೆಲ್ಲ ಹೆಚ್ಚಾಗಿ ಸಂಭಾಷಣೆಗಳಿರುವುದೂ, ನಾಟಕೋಚಿತವಾದ ಕ್ರಿಯೆ ಸಂನಿವೇಶಗಳು ಇರುವುದೂ, ಉಳಿದ ಚಂಪೂ ಕಾವ್ಯಗಳಲ್ಲಿ ಕಾಣಬಾರದ ವಿದೂಷಕನ ಪ್ರವೇಶವೂ, ಇದು ಮೊದಲು ನಾಟಕವಿದ್ದಿತೆಂಬ ಅಭಿಪ್ರಾಯಕ್ಕೆ ಪುಷ್ಟಿಕೊಡುತ್ತವೆ. ಆದರೆ ಈ ಕಾರಣಗಳಿಂದಲೇ ಇದು ಮೊದಲು ನಾಟಕವಾಗಿದ್ದಿತೆಂದು ಹೇಳುವುದು ಸಮಂಜಸವೆನಿಸಲಾರದು. ಹೀಗೆ ಇದ್ದಲ್ಲಿ ಅದರ ಉಲ್ಲೇಖವು ಗದಾಯುದ್ಧದಲ್ಲಿಯಾಗಲೀ, ಇನ್ನಿತರ ಕಡೆಗಳಲ್ಲಿಯಾಗಲೀ ಏಕೆ ಕಾಣುವುದಿಲ್ಲ? ಆದರೆ ಈ ಕಾವ್ಯದ ತುಂಬೆಲ್ಲ ನಾಟಕಯೋಗ್ಯವಾದ ಗುಣಗಳು ಉಂಟೆಂದು ಸ್ಪಷ್ಟವಿದೆ. ನಾಟಕೀಯ ರೀತಿಯಲ್ಲಿ ಬರೆದ ಕಾವ್ಯಗಳನ್ನೂ ಕಾವ್ಯದ ರೀತಿಯಲ್ಲಿ ಬರೆದ ನಾಟಕಗಳನ್ನೂ ನಾವು ಬೇರೆ ಬೇರೆ ಸಾಹಿತ್ಯಗಳಲ್ಲಿ ಕಾಣಬಹುದು. ರನ್ನನಲ್ಲಿ ನಾಟಕವನ್ನು ಬರೆಯುವ ಯೋಗ್ಯತೆ ಪ್ರತಿಭೆ ಸಾಕಷ್ಟು ಇದ್ದಿತೆಂದು ಗದಾಯುದ್ಧದಿಂದ ಸ್ಫುಟವಾಗಿ ಕಾಣುತ್ತದೆ. ರನ್ನನು ಮನಸ್ಸು ಮಾಡಿದ್ದರೆ ಒಂದು ಉದಾತ್ತ ನಾಟಕವನ್ನು ಬರೆಯಬಹುದಾಗಿತ್ತು. ಗದಾಯುದ್ಧವು ಸಂಸ್ಕೃತ ಸಾಹಿತ್ಯದಲ್ಲಿಯೂ ಕಾಣಬಾರದ ಗುಣ ವೈಶಿಷ್ಟ್ಯಗಳುಳ್ಳ ನಾಟಕವಾಗುತ್ತಿತ್ತು. ಕನ್ನಡ ಸಾಹಿತ್ಯದಲ್ಲಿ ನಾಟಕಗಳೇ ಇಲ್ಲವೆಂಬ ಒಂದು ದೊಡ್ಡ ಕೊರತೆ ಇಲ್ಲದಂತಾಗಬಹುದಾಗಿತ್ತು. ಆದರೆ, ಆ ಕಾಲದ ಜನರ ರುಚಿ ವೈಚಿತ್ರ್ಯವೊ, ಪೋಷಕನಾದ ಚಕ್ರವರ್ತಿಯ ಒಂದು ಒಲವೊ, ಏನು ಕಾರಣವೊ, ರನ್ನನು ನಾಟಕವನ್ನು ಬರೆಯದೆ ಚಂಪೂ ಕಾವ್ಯವನ್ನು ಬರೆದನು. ಆದುದರಿಂದ ಗದಾಯುದ್ಧ ಕಾವ್ಯದಿಂದ ರುದ್ರನಾಟಕವೊಂದನ್ನು ಸಿದ್ಧಪಡಿಸಬೇಕೆಂಬ ವಿಚಾರವು 'ಶ್ರೀ'ಯವರದೇ. ಇದರ ಶ್ರೇಯವು ಇತರರಿಗೆ— ರನ್ನನಿಗೂ ಕೂಡ— ಸಲ್ಲಲಾರದು.

ಗದಾಯುದ್ಧ ನಾಟಕಕ್ಕೆ ದುರ್ಯೋಧನನೇ ನಾಯಕನು. ನಾಟಕವು ದುರ್ಯೋಧನನ ದುರಂತ ಮರಣದಲ್ಲಿ ಕೊನೆಗಾಣುತ್ತದೆ. ನಾಟಕದ ದುರ್ಯೋಧನನಲ್ಲಿ ದುರಂತನಾಯಕನ (Tragic hero) ಗುಣಗಳು ಕಂಡುಬರುತ್ತವೆ. ನಾಟಕದ ಉದ್ದಕ್ಕೂ ದುರ್ಯೋಧನನೆ ಮುಖ್ಯ ವ್ಯಕ್ತಿಯಾಗಿದ್ದಾನೆ. ಅವನ ಕಷ್ಟಗಳು, ಅವನ ಅವಸ್ಥೆ, ಅವನ ಗುಣಗಳು, ಅವನ ಛಲ—ಇವುಗಳಲ್ಲಿ ನಾವು ಮಗ್ನರಾಗುತ್ತೇವೆ. ಆದರೆ ಗದಾಯುದ್ಧ ಕಾವ್ಯದ ನಾಯಕನಾರು? ದುರ್ಯೋಧನನು ಉದಾತ್ತನೆ? ಮಹಾನುಭಾವನೆ? ಈ ಕೆಲವು ಪ್ರಶ್ನೆಗಳ ವಿಚಾರವಾಗಿ ಪಂಡಿತರಲ್ಲಿ ಭಿನ್ನಾಭಿಪ್ರಾಯಗಳಿವೆ. ನನ್ನ ಅಭಿಪ್ರಾಯದಂತೆ ಕಾವ್ಯದ ನಾಯಕನು ಭೀಮನೆ; ದುರ್ಯೋಧನನು ಉದಾತ್ತನಾಯಕನಲ್ಲ. ಇದರ ಸಂಬಂಧವಾಗಿ ನಾನು ಕೆಲವು ವರ್ಷಗಳ ಹಿಂದೆ ಬರೆದ ಒಂದು ಲೇಖದಲ್ಲಿಯ ವಿಚಾರಗಳನ್ನೆ ಇಲ್ಲಿಯೂ ಸ್ವಲ್ಪದಲ್ಲಿ ಹೇಳುವೆನು. ರನ್ನನನ್ನು ಕೇಳಿದರೆ ತನ್ನ ಕಾವ್ಯದ ನಾಯಕನು ಭೀಮನೆಂದು ತಟ್ಟನೆ ಉತ್ತರ ಕೊಡುತ್ತಾನೆ.

ಎನಿಸಿದ ಸತ್ಯಾಶ್ರಯದೇ
ವನೆ ಪೃಥ್ವೀವಲ್ಲಭಂ ಕಥಾನಾಯಕನಾ।
ಗನಿಲಜನೊಳ್ಪೋಲಿಸಿ ಪೇ
ೞ್ದನೀ ಗದಾಯುದ್ಧಮಂ ಕವಿ ರನ್ನಂ ॥

ಎಂದಮೇಲೆ ದುರ್ಯೋಧನನು ನಾಯಕನೆಂದು ಹೇಳಲಿಕ್ಕೆ ನಮಗೇನು ಅಧಿಕಾರ?

ರನ್ನನು ಭೀಮನನ್ನು ನಾಯಕನೆಂದು ಇಟ್ಟುಕೊಂಡಿದ್ದರೂ ದುರ್ಯೋಧನನೆ ಗದಾಯುದ್ಧ ಕಾವ್ಯದ ಬಹು ಭಾಗವನ್ನು ಆಕ್ರಮಿಸಿದ್ದಾನೆ. ಭೀಮನ ಸ್ವಭಾವ ನಿರೂಪಣೆಗಿಂತ ದುರ್ಯೋಧನನ ಸ್ವಭಾವನಿರೂಪಣೆಗೆ ರನ್ನನು ಹೆಚ್ಚಾಗಿ ಗಮನಕೊಟ್ಟಿದ್ದಾನೆ. ರನ್ನನು ಆರಿಸಿಕೊಂಡ ಕಥಾ ಭಾಗವೇ ದುರ್ಯೋಧನನಿಗೆ ಪ್ರಾಶಸ್ತ್ಯಕೊಡುವಂತಹದಾಗಿದೆ. ಭೀಮಸೇನನ ಉದಾತ್ತ ಗುಣಗಳು ಬೆಳಗುವ ಸಂನಿವೇಶಗಳು ಗದಾಯುದ್ಧದಲ್ಲಿ ಬಹಳ ಕಡಮೆ. ಆದರೆ ಅವಿನೀತವೆಂದು ತೋರುವ ಅವನ ನಡವಳಿಯ ಮರ್ಮವನ್ನು ನಾವು ತಿಳಿದುಕೊಳ್ಳಬೇಕಾಗಿದ್ದರೆ ಹಿಂದೆ ನಡೆದುಹೋದ ಸಂಗತಿಗಳನ್ನು ನೆನಪಿಗೆ ತಂದುಕೊಳ್ಳಬೇಕು. 'ವಿಷ ವಿಶೇಷಾಲಿಪ್ತಗುಪ್ತಾನ್ನ', 'ಜತುಗೇಹಾನಲದಾಹ', 'ಕೃತಕದ್ಯೂತ', 'ಕೃಷ್ಣಾಂಬರ ಕೇಶಾಕೃಷ್ಟಿ', 'ಹರಿಸಂಧಾನಕ್ಕೆ ವಂದಂದನಗಡಿಸಿದಹಂಕಾರ' ಮೊದಲಾದ ದುರ್ಯೋಧನನ ಕುಹಕ ಕೃತ್ಯಗಳನ್ನೂ ಅನಾರ್ಯ ವರ್ತನೆಯನ್ನೂ ನಾವು ನೆನೆದರೆ ಭೀಮನ ಕೋಪಾಟೋಪದ ಅರ್ಥವಾಗುವುದು.

ದುರ್ಯೋಧನನ ಹೀನಕಾರ್ಯಗಳೆಲ್ಲ ಕಾವ್ಯಪ್ರಾರಂಭವಾಗುವುದಕ್ಕೆ ಮೊದಲೆ ನಡೆದುಹೋಗಿದ್ದುದರಿಂದ ದುರ್ಯೋಧನನ ವಿಕಳಾವಸ್ಥೆಯಲ್ಲಿ ವಾಚಕರ ಸಹಾನುಭೂತಿಯು ಹುಟ್ಟುವಂತಾಗುತ್ತದೆ. ತುಂಬಿದ ಸಭೆಯಲ್ಲಿ ಕುಲಸ್ತ್ರೀಯ ವಸ್ತ್ರಗಳನ್ನು ಸೆಳೆದು ಮಾನಭಂಗಮಾಡಲು ಯತ್ನಿಸುವುದು ಮೊದಲಾದ ದುರ್ಯೋಧನನ ಹೇಯಕಾರ್ಯಗಳು ಈ ಕಾವ್ಯದಲ್ಲಿಯೇ ವರ್ಣಿತವಾಗಿದ್ದರೆ — ರನ್ನನ ಅಸಾಧಾರಣ ಪ್ರತಿಭೆಯಿಂದ ವರ್ಣಿತವಾಗಿದ್ದರೆ — ದುರ್ಯೋಧನನಲ್ಲಿ ನಮಗೆ ಸಹಾನುಭೂತಿಯೂ ಕನಿಕರವೂ ಹುಟ್ಟುತ್ತಿರಲಿಲ್ಲ. ರನ್ನನು ಸಂದರ್ಭ ಸಿಕ್ಕಾಗೆಲ್ಲ ದುರ್ಯೋಧನನ ದುಷ್ಟಕಾರ್ಯಗಳನ್ನು ನಮ್ಮ ಗಮನಕ್ಕೆ ತಂದೇ ತರುತ್ತಾನೆ. ಭೀಮಸೇನನು ಇಂತಹ ಕುಕಾರ್ಯಗಳನ್ನು ನೆನೆದು ಅರ್ಭಟಿಸುತ್ತಲೇ ಇರುತ್ತಾನೆ. ಭೀಮನ ಮಾತುಗಳು ಆ ಪಾತ್ರಕ್ಕೆ ಉಚಿತವಾಗಿವೆಯೆಂದೂ ಅವುಗಳಿಂದ ದುರ್ಯೋಧನನ ಸ್ವಭಾವದ ಬಗ್ಗೆ ರನ್ನನ ಅಭಿಪ್ರಾಯವು ಹೊರಬೀಳುವುದಿಲ್ಲವೆಂದೂ ಕೆಲವರು ಹೇಳಬಹುದು. ರನ್ನನು ಎಲ್ಲ ಕಥೆಯನ್ನು ಹೆಚ್ಚಾಗಿ ಪಾತ್ರಗಳ ಭಾಷಣಗಳ ಮುಖಾಂತರವಾಗಿಯೇ ಹೇಳಿದ್ದರೂ ಈ ವಿಷಯದಲ್ಲಿ ಆತನ ಅಭಿಪ್ರಾಯವನ್ನು ಸ್ಪಷ್ಟರೀತಿಯಲ್ಲಿ ಸೂಚಿಸುವ ಪದ್ಯಗಳು ಎರಡು ಮೂರು ಇವೆ. ದುರ್ಯೋಧನನು "ಪಿಂದುಂ ಪೆಜಗಾಗಿ" ವೈಶಂಪಾಯನ ಸರೋವರದಲ್ಲಿ ಪ್ರವೇಶಿಸಿದ ಕೂಡಲೆ ಕವಿಯೇ ಆತನ ಹೇಡಿತನದ ನಡೆಗೆ ಅಸಹ್ಯಪಟ್ಟುಕೊಂಡು ಈ ರೀತಿ ನುಡಿದಿದ್ದಾನೆ:

ಒಂದೆಱಡುಮುಂತರಂತರ
ದಿಂದಂ ಪೊೞಿಮಟ್ಟ ಪಜ್ಜೆಯೆಂಬುದನೆನಿಸಲ್ ।
ಪಿಂದು ಪೆಱಗಾಗಿ ಪುಗೆ ಚೀ
ಎಂದವನಂ ರಾಜ್ಯಲಕ್ಷ್ಮಿ ಪೇಸಿ ಬಿಸುಟ್ಟಳ್ ॥

ತುಱುವಂ ಕಳಿಸುವ ಕೃಷ್ಣೆಯ
ನಿಱಿಯಂ ಪಿಡಿದುರ್ಚವೇಟ್ವ ಕೊಳನಂ ಪಿಂದುಂ ।
ಪೆಱಗಾಗಿ ಪುಗುವ ದುರ್ನಯ
ಮಱಿಪವೆ ಕೌರವನ ರಾಜ್ಯದಾಯುವ ಕೇಡಂ ॥

ಈ ಪದ್ಯಗಳಿಂದ ರನ್ನನು ದುರ್ಯೋಧನನನ್ನು ಉದಾತ್ತ ಸ್ವಭಾವದ ಮಹಾನುಭಾವನೆಂದು ಬಗೆದಿರಲಿಲ್ಲವೆಂದು ನಿಚ್ಚಳವಾಗುತ್ತದೆ. ಕೆಲವು ಪಂಡಿತರೂ ವಿಮರ್ಶಕರೂ ಗದಾಯುದ್ಧಕ್ಕೆ ವೀರಕೌರವನೇ ನಾಯಕನೆಂದೂ, ಆತನು ಎಲ್ಲ ಉದಾತ್ತ ಗುಣಗಳಿಂದ ಕೂಡಿದವನೆಂದೂ, ಛಲವೊಂದು ಮಾತ್ರ ಆತನ ದುರ್ಗುಣ ವೆಂದೂ, ಭೀಮನು ಉದಾತ್ತಗುಣರಹಿತನೆಂದೂ, ಅಧರ್ಮಿಯೆಂದೂ, ಅವಿನೀತ ನೆಂದೂ ಸಾಧಿಸುವುದಕ್ಕೆ ಕಷ್ಟಪಟ್ಟಿದ್ದಾರೆ. ಆದರೆ ರನ್ನನ ಉದ್ದೇಶವು ಹೀಗೆ ಇದ್ದಿತೆಂದು ನನಗೆ ತೋರುವುದಿಲ್ಲ.

ಭೀಮನಿಗಿಂತಲೂ ದುರ್ಯೋಧನನ ವ್ಯಕ್ತಿತ್ವವು ಈ ಕಾವ್ಯದಲ್ಲಿ ಹೆಚ್ಚು ಸ್ಫುಟವಾಗಿ ಮೂಡಿದೆ. ಪಂಪ ರನ್ನರ ದುರ್ಯೋಧನನು ಕೇವಲ ಪಾಪ ಕರ್ಮನಿರತನಾದ ರಾಕ್ಷಸನಲ್ಲ. ಆತನೊಬ್ಬ ಪ್ರಭಾವಶಾಲಿಯಾದ ಮಾನವನು. ಎಲ್ಲ ಮಾನವರಲ್ಲಿರುವಂತೆ ಆತನಲ್ಲಿ ದುರ್ಗುಣಗಳೂ ಸುಗುಣಗಳೂ ಮನೆಮಾಡಿ ಕೊಂಡಿದ್ದುವು. ವ್ಯಾಸಭಾರತದಲ್ಲಿಯಾದರೂ ದುರ್ಯೋಧನನು ಕೇವಲ ದುರ್ಗುಣಗಳ ಮೂರ್ತಿಯೆಂದು ಚಿತ್ರಿಸಲ್ಪಟ್ಟಿಲ್ಲವೆಂದು ನಾನು ಇಲ್ಲಿ ಹೇಳ ಬಯಸುತ್ತೇನೆ. ವ್ಯಾಸರ ದುರ್ಯೋಧನನಲ್ಲಿಯೂ ಸುಗುಣಗಳಿವೆ; ಉದಾತ್ತ ವೆನಿಸುವ ಸುಗುಣಗಳಿವೆ. ಇವಕ್ಕೆ ಮಹಾಭಾರತದ ತುಂಬೆಲ್ಲ ನಿದರ್ಶನಗಳುಂಟು. ಆದರೆ ವ್ಯಾಸಭಾರತದಲ್ಲಿಯ ಗದಾಸೌಪ್ತಿಕ ಪರ್ವಗಳ ಕಥೆಯನ್ನೂ ಪಂಪಭಾರತ ಗದಾಯುದ್ಧಗಳಲ್ಲಿ ವರ್ಣಿತವಾದ ಅವೇ ಕಥೆಯನ್ನೂ ನಾವು ಹೋಲಿಸಿ ನೋಡಿದರೆ, ಪಂಪ ರನ್ನರ ದುರ್ಯೋಧನನು ಮಾನವತೆಯಲ್ಲಿಯೂ ಉದಾತ್ತ ಸ್ವಭಾವದಲ್ಲಿಯೂ ಮಿಗಿಲಾಗಿದ್ದಾನೆ. ಗದಾಯುದ್ಧ ನಾಟಕದ ದುರ್ಯೋಧನನು — ಇಲ್ಲವೆ 'ಶ್ರೀ' ಯವರ ದುರ್ಯೋಧನನು — ಪಂಪ ರನ್ನರ ದುರ್ಯೋಧನನಿಗಿಂತ ಮಾನವತೆ ಯಲ್ಲಿಯೂ ಉದಾತ್ತ ಸ್ವಭಾವದಲ್ಲಿಯೂ ಒಂದು ತೂಕ ಹೆಚ್ಚಾಗಿಯೇ ಇದ್ದಾನೆ. ಗದಾಯುದ್ಧ ನಾಟಕದ ಪ್ರಭಾವದಿಂದಲೇ ಕೆಲವು ಜನ ಪಂಡಿತರು ರನ್ನನ ದುರ್ಯೋಧನನೂ ಅತಿ ಉದಾತ್ತನೆಂದೂ ಆತನೇ ನಾಯಕನೆಂದೂ ತಿಳಿವಳಿಕೆ ಮಾಡಿಕೊಂಡಿರಬಹುದು.

ದುರ್ಯೋಧನನ ಸ್ವಭಾವವು ಹೆಚ್ಚು ಉದಾತ್ತವೆನಿಸುವಂತೆ ತೋರಿಸುವು ದಕ್ಕಾಗಿ 'ಶ್ರೀ' ಯವರು ಮಾಡಿಕೊಂಡ ಕೆಲವು ಮಾರ್ಪಾಟುಗಳನ್ನು ಇಲ್ಲಿ ಸೂಚಿಸ ಬಹುದು. ೨ನೆಯ ರಂಗದಲ್ಲಿ ಸಂಜಯನು ಹೇಳುವ "....ಭೀಷ್ಮದ್ರೋಣಾಚಾರ್ಯರ

ನುಡಿ ತಪ್ಪು ಗಡ ಅಕಾರ್ಯರ್ಂಗಹಿಕೇತನಂಗೆ ವಿಧಿವಿಳಸನದಿಂ" ಎಂಬುದು ಮೂಲದಲ್ಲಿ "....ಅನಾರ್ಯರ್ಂಗಹಿಕೇತನಂಗೆ...." ಎಂದು ಇದೆ. ಸಂಜಯನ ಬಾಯಿಂದ ದುರ್ಯೋಧನನಿಗೆ ಅನಾರ್ಯನೆಂದು ಎನ್ನಿಸುವುದು ಅಷ್ಟು ಯೋಗ್ಯ ವೆನ್ನಿಸುವುದಿಲ್ಲ. ಒನೆಯ ರಂಗದ ಕೊನೆಯಲ್ಲಿ ದುರ್ಯೋಧನನು ಹೇಳುವ,

ದಿನಕರ ತನಯುನ ದುಶ್ಶಾ
ಸನನ ವಿಯೋಗದೊಳಮಿನಿತುವರೆಗಂ ನೋವಿ।
ಲ್ಲೆನಗೆ ತಲೆಗರೆದು ನೀರೊಳ್
ಕುನಿಯೆನೆ ನೊಂದೆಂ ನದೀಜನಭ್ಯರ್ಥನೆಯಿಂ ॥

ಎಂಬ ಪದ್ಯದ ಕೊನೆಯ ಎರಡು ಸಾಲುಗಳು ಮೂಲದಲ್ಲಿ ಹೀಗೆ ಇವೆ:

ಎನಗಹಿತರೊಡನೆ ಪುದುವಾ
ೞಿನೆ ನೊಂದೆಂ......

ದುರ್ಯೋಧನನು ತನ್ನ ಮನಸ್ಸಿಗೆ ವಿರುದ್ಧವಾಗಿ ಹಿರಿಯರ ಅಪ್ಪಣೆಯೆಂದು ಕೊಳದಲ್ಲಿ ಅವಿತುಕೊಳ್ಳುತ್ತಾನೆ; ಅದರಿಂದ ಆತನಿಗೆ ಬಹಳ ಅವಮಾ ಧಾನವಾಗಿದೆಯೆಂದು ನಾಟಕದಲ್ಲಿ ಸೂಚನೆಯಿದೆ. ಇದರಿಂದ ದುರ್ಯೋಧನನ ಶೌರ್ಯ ಧೈರ್ಯಗಳು ಪ್ರದರ್ಶಿತವಾಗುತ್ತವೆ. ಈ ಮೊದಲೆ ಉದ್ಧೃತವಾದ "ತುಱುವಂ ಕಳಿಸುವ...." ಎಂಬ ಪದ್ಯವನ್ನು ಕೃಷ್ಣನ ಮುಖದಿಂದ ಒನೆಯ ರಂಗದಲ್ಲಿ ಹೇಳಿಸಿರುವುದರಿಂದ ಮೂಲದಲ್ಲಿಯ ಮಹತ್ವವು ಆ ಪದ್ಯಕ್ಕೆ ಇಲ್ಲಿ ಇಲ್ಲ. ಕೃಷ್ಣನು ಹೇಗಾದರೂ ದುರ್ಯೋಧನನ ದೋಷಗಳನ್ನು ಎಣಿಸುವವನೇ. ದುರ್ಯೋಧನನು ಕೊಳದಿಂದ ಮೇಲಕ್ಕೆದ್ದಮೇಲೆ ಭೀಮನನ್ನು ಮೂದಲಿಸುವಾಗ ಈ ರೀತಿ ಹೇಳುತ್ತಾನೆ:

ಯಮರಾಜ ಪ್ರಿಯಸೂನುಗಂ ನಿನಗಮಾ ಗಾಂಡೀವ ಧನ್ವಂಗಮಾ
ಯಮಳರ್ಗಂ ಪ್ರಿಯೆಯಪ್ಪ ಕೃಷ್ಣೆಯ ಕಚ ಪ್ರಾರಂಭಮಂ ಬಾಹುವಿ
ಕ್ರಮಿ ದುಃಶಾಸನ ನಿನ್ನ ಮುಂದೆ ತೆಗೆವಂದೆಲ್ಲಿರ್ದೆಯೋ ಗಂಡ
ಗರ್ವಮುಮಂದೆಲ್ಲಿಗೆ ಪೋಯ್ತು ಷಂಡ ನಿನಗಿಂತೀ ಗಂಡನಾರ್ ಮಾಡಿದರ್

ಹೀಗೆ ಹಿಂದೆ ತಾನು ಮಾಡಿದ ಹೇಯವಾದ ಕಾರ್ಯವನ್ನು ಕುರಿತು ಜಂಭ ಕೊಚ್ಚಿಕೊಳ್ಳುವ ಈ ಮಾತನ್ನೂ ಇಂಥ ಬೇರೆ ಕೆಲವು ಮಾತುಗಳನ್ನೂ ನಾಟಕದಲ್ಲಿ ಬಿಟ್ಟುಬಿಟ್ಟಿದ್ದಾರೆ. ದುರ್ಯೋಧನನ ಗುಣಗಳನ್ನು ಹೊಗಳುವ ಪಂಪನ ಸುಂದರವಾದ ಪದ್ಯವೊಂದನ್ನು ಲಕ್ಷ್ಮಿಯ ಮುಖದಿಂದ ನಾಟಕದಲ್ಲಿ ಕೊನೆಗೆ ಹೇಳಿಸಿದ್ದಾರೆ:

ನುಡಿದುದನೆಯ್ದೆ ತುತ್ತ ತುದಿಯೆಯ್ದುವಿನಂ ನುಡಿದಂ ಚಲಂ ಚಲಂ
ಬಿಡಿದುದನೆಯ್ದೆ ಮುಂ ಪಿಡಿದುದಂ ಸಲೆ ಪೂಣ್ದುಪೂಣ್ಕೆ ನೇ
ರ್ಪಡೆ ನಡೆವನ್ನೆಗಂ ನಡೆದನಳ್ಕದೆ ಬಳ್ಕದೆ ತನ್ನೊಡಲ್ ಪಡ
ಲ್ವಡುವಿನಮುಣ್ಮುಗುಂದದೆನಲೇನಭಿಮಾನಧನಂ ಸುಯೋಧನಂ

ಈ ಸುಂದರವಾದ ಪದ್ಯದಲ್ಲಿ ನಿರ್ದೇಶಿಸಿದ ಉದಾತ್ತ ಗುಣಗಳು ದುರ್ಯೋಧನನಲ್ಲಿ ಇವೆ ಎಂಬ ಭಾವನೆಯು ನಾಟಕವನ್ನು ನೋಡಿದವರಲ್ಲಿ ಉಂಟಾಗುತ್ತದೆ. ನಾಟಕ

ರಚಿಸಿದವರ ಆಶಯವೂ ಇಂಥ ಭಾವನೆಯನ್ನು ಹುಟ್ಟಿಸಬೇಕೆಂಬುದೇ ಇದ್ದುದರಿಂದ ಅವರ ಉದ್ದೇಶವು ಫಲಿಸಿದೆಯೆಂದು ನಾವು ಹೇಳಬೇಕು.

ದುರ್ಯೋಧನನು ಸಾಯುವ ಮುಂದೆ ಅಶ್ವತ್ಥಾಮನಿಗೆ ಹೇಳುವ "ಇದೆಲ್ಲಂ ಕೃಷ್ಣನ ಮಾಯೆ! ಹರಿಹರಿ! ಹೋಗು. ಇದರ್ಕೆ ಪ್ರಾಯಶ್ಚಿತ್ತಂ ಮಾಡು. ದೈವದ ಮುಂದೆ ನಾವುಲ್ತು" ಎಂಬ ಮಾತುಗಳನ್ನು 'ಶ್ರೀ'ಯವರೇ ಹಾಕಿದ್ದಾರೆ. ಈ ಅರ್ಥದ ಮಾತುಗಳು ಗದಾಯುದ್ಧದಲ್ಲಿಯಾಗಲೀ ಪಂಪ ಭಾರತದಲ್ಲಿಯಾಗಲೀ ಬಂದಿಲ್ಲ. ಆದರೆ ರುದ್ರನಾಟಕದ ದೃಷ್ಟಿಯಿಂದಲೂ ರುದ್ರನಾಯಕನ ಸ್ವಭಾವ ನಿರೂಪಣೆಯ ದೃಷ್ಟಿಯಿಂದಲೂ ಈ ಒಂದೆರಡು ಚಿಕ್ಕ ವಾಕ್ಯಗಳು ಬಹು ಮಹತ್ತ್ವ ಉಳ್ಳವು. ಏಕೆಂದರೆ ಇದರಲ್ಲಿ ದುರ್ಯೋಧನನ ಪಶ್ಚಾತ್ತಾಪದ ಸೂಚನೆಯಿದೆ. "ದೈವದ ಮುಂದೆ ನಾವುಲ್ತು" ಎಂಬ ಮಾತು ಅಶ್ವತ್ಥಾಮನ ಪಾಪಕೃತ್ಯಕ್ಕಲ್ಲದೆ ತನ್ನ ಕೃತ್ಯಗಳಿಗೂ ಅನ್ವಯಿಸುವಂತಿದೆ. ತಾನು ಮಾಡಿದ ಪಾಪಕಾರ್ಯಗಳಿಗೆ ಪಶ್ಚಾತ್ತಾಪಪಡದೆ, ದೇವರ ಸ್ಮರಣೆ ಮಾಡದೆ ದುರ್ಯೋಧನನು ಮೂಲ ಕಾವ್ಯದಲ್ಲಿ ಸಾಯುವಂತೆ ಸತ್ತಿದ್ದರೆ, ನಾಟಕದಲ್ಲಿ ಕಾಣುವ ಆ ಪಾತ್ರದ ರುದ್ರಭವ್ಯತೆಯು ಇಷ್ಟುಮಟ್ಟಿಗೆ ಕಂಡುಬರುತ್ತಿರಲಿಲ್ಲ.

ಗದಾಯುದ್ಧ ನಾಟಕದಲ್ಲಿ ದುರಂತ ದುರ್ಯೋಧನನ ಸೃಷ್ಟಿಯಾದಮೇಲೆ, ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ದುರಂತ ಪಾತ್ರಗಳನ್ನು ಹುಡುಕುವ ಸಂಪ್ರದಾಯವೊಂದು ವಿಮರ್ಶಕರಲ್ಲಿ ಬೆಳೆದುಬಂದಿದೆ. ದುರಂತ ರಾವಣ, ದುರಂತ ಕರ್ಣ, ದುರಂತ ಕೀಚಕ— ಹೀಗೆ ಬೇರೆಬೇರೆ ಪಾತ್ರಗಳ ದುರಂತತೆಯನ್ನು ತೋರಿಸುವ ಯತ್ನವು ಅನೇಕ ಸಲ ಕಾಣಬರುತ್ತದೆ. ಈ ಪದ್ಧತಿಯಿಂದ ನಮ್ಮ ಸಾಹಿತ್ಯವನ್ನು ಹೊಸ ದೃಷ್ಟಿಯಿಂದಲೂ, ಒಂದು ಹೊಸ ಬಗೆಯ ಸಹಾನುಭೂತಿಯಿಂದಲೂ ನೋಡುವುದಕ್ಕೆ ಮೊದಲಾಯಿತೆಂದು ಹೇಳಬಹುದು. ಆದುದರಿಂದ ಈ ನೂತನ ಮಾರ್ಗವು ನಮ್ಮ ಸಾಹಿತ್ಯ ವಿಮರ್ಶೆಯಲ್ಲಿ ಒಟ್ಟಿನಮೇಲೆ ಒಳ್ಳೆಯ ಪರಿಣಾಮವನ್ನು ಉಂಟುಮಾಡಿದೆಯೆಂದು ನಾವು ಹೇಳಬಹುದಾದರೂ ಒಮ್ಮೊಮ್ಮೆ, ಪಾಶ್ಚಾತ್ಯ ದುರಂತ ನಾಟಕ ತತ್ತ್ವಗಳನ್ನು ನಮ್ಮ ಪೂರ್ವದ ಕಾವ್ಯಗಳಿಗೆ ಪೂರ್ತಿಯಾಗಿ ಅನ್ವಯಿಸುವಂತೆ ಮಾಡುವುದು ಸಮಂಜಸವಲ್ಲವೆನಿಸುವ ವಿಮರ್ಶೆಯ ಮಾದರಿಗಳೂ ಕಾಣಬರುತ್ತವೆ. ಈ ಲೇಖದಲ್ಲಿ ಈ ಚರ್ಚೆ ಅಪ್ರಸ್ತುತ. ನಾವು ಗಮನಿಸಬೇಕಾದುದು ಇಷ್ಟೆ: ಈ ನೂತನ ವಿಮರ್ಶಾಮಾರ್ಗಪ್ರವರ್ತಕರು 'ಶ್ರೀ'ಯವರು. ಈ ಮಾರ್ಗವು ಗದಾಯುದ್ಧ ನಾಟಕದಿಂದ ಪ್ರಾರಂಭವಾಯಿತು. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಗದಾಯುದ್ಧ ನಾಟಕದ ಮಹತ್ತ್ವವು ಇದೂ ಒಂದು.

ಗದಾಯುದ್ಧ ನಾಟಕದ ರಚನಾಕ್ರಮದ ವಿಷಯವಾಗಿ ಇಲ್ಲಿ ಅತಿ ಸಂಕ್ಷೇಪವಾಗಿ ವಿವೇಚಿಸಬೇಕಾಗಿದೆ. ಇದು ೫ ರಂಗಗಳ ಒಂದು ಚಿಕ್ಕ ನಾಟಕ—ಆದರೂ ಬಹಳ ಪರಿಣಾಮಕಾರಿಯಾದ ನಾಟಕ. ಈ ದುರಂತ ನಾಟಕದ ಸಂನಿವೇಶಗಳೂ ನಾಟಕಕ್ರಿಯೆಗಳೂ ಬಹುತರವಾಗಿ ಮೂಲ ಕಾವ್ಯದ ರಚನಾಕ್ರಮವನ್ನೇ ಅನುಸರಿಸುತ್ತವೆ. ಆದರೆ ನಾಟಕವು "ಕುರುಕುಲಾರ್ಕನುಮರ್ಕನುಮಸ್ತಮಯಿಸಿದ" ಕೂಡಲೆ ಕೊನೆಗಾಣುತ್ತದೆ. ಕಾವ್ಯದ ಹತ್ತನೆಯ ಆಶ್ವಾಸದಲ್ಲಿ

ವರ್ಣಿತವಾದ ಭೀಮಸೇನ ಪಟ್ಟಾಭಿಷೇಕವು ಇಲ್ಲಿ ಬಂದಿಲ್ಲ. ಇದು ಯಥೋಚಿತವೇ ಆಗಿದೆ. ಏಕೆಂದರೆ, ಕಾವ್ಯಕ್ಕೆ ನಾಯಕನು ಭೀಮ; ನಾಟಕಕ್ಕೆ ನಾಯಕ ದುರ್ಯೋಧನ. ರನ್ನನ ಕಾವ್ಯವೇನೂ ದುರಂತವಲ್ಲ; 'ಶ್ರೀ'ಯವರ ನಾಟಕವು ದುರಂತ ನಾಟಕ, ರುದ್ರ ನಾಟಕ. ಈ ವಿಷಯಗಳನ್ನು ನಾವು ಲಕ್ಷ್ಯದಲ್ಲಿಡಬೇಕು. ದುರ್ಯೋಧನನ ಪಾತ್ರಪೋಷಣೆಗೂ, ಆತನು ಉದಾತ್ತನೆಂದು ತೋರಿಸುವುದಕ್ಕೂ ಸಹಾಯಕಾರಿಯಾದ ಕಾವ್ಯದಲ್ಲಿಯ ಎಲ್ಲ ಸಂನಿವೇಶಗಳೂ ನಾಟಕದಲ್ಲಿ ಬಂದಿವೆ; ಭೀಮನ ಪರಾಕ್ರಮವನ್ನು ಹೊಗಳುವ, ಆತನ ಕೃತ್ಯಗಳನ್ನು ವರ್ಣಿಸುವ ಕೆಲವು ಸಂನಿವೇಶಗಳು ಇಲ್ಲಿ ಬಿಟ್ಟುಹೋಗಿವೆ.

ಈ ನಾಟಕದಲ್ಲಿ ಗ್ರೀಕ್ ನಾಟಕಶಾಸ್ತ್ರದಲ್ಲಿ ಹೇಳಿದ ಮೂರೂ ಏಕತೆಗಳು (Unities—time, place and action) ಇವೆ. ಇಲ್ಲಿಯ ಯಾವ ಪಾತ್ರವೂ ಯಾವ ಮಾತೂ ಅನಾವಶ್ಯಕವೆನ್ನಿಸುವುದಿಲ್ಲ. ಎಲ್ಲವೂ ನಾಟಕದ ಮುಖ್ಯ ಉದ್ದೇಶಕ್ಕೆ ಸಹಾಯಕಾರಿಯಾಗಿವೆ. ಪಾತ್ರಗಳನ್ನು ಯೋಜಿಸುವುದರಲ್ಲಿಯೂ ಮಾತುಗಳನ್ನು ಬಳಸುವಲ್ಲಿಯೂ 'ಶ್ರೀ'ಯವರು ಶ್ರೇಷ್ಠತರವಾದ ಕೌಶಲವನ್ನೂ ಯಥೋಚಿತವಾದ ಮಿತಿಯನ್ನೂ ತೋರ್ಪಡಿಸಿದ್ದಾರೆ. ಇದಕ್ಕೆ ಉದಾಹರಣೆಯೆಂದು ಭೀಮ ದುರ್ಯೋಧನರ ಗದಾಯುದ್ಧದ ದೃಶ್ಯವನ್ನೇ ತೆಗೆದುಕೊಳ್ಳಬಹುದು. ಮೂಲ ಕಾವ್ಯದಲ್ಲಿ ಭೀಮ ದುರ್ಯೋಧನರ ಮೂದಲಿಕೆಯ ಮಾತುಗಳೂ ಧರ್ಮರಾಜ, ಕೃಷ್ಣ, ಅರ್ಜುನ ಇವರ ಮಾತುಗಳೂ ಬಹಳವಾಗಿ ಬೆಳೆದುಹೋಗಿವೆ. ಒಮ್ಮೊಮ್ಮೆ ಮೊದಲು ಹೇಳಿದ್ದನ್ನೆ ಬೇರೆ ಶಬ್ದಗಳಲ್ಲಿ ಮತ್ತೆ ಹೇಳುತ್ತಾರೆ. ಗದಾಯುದ್ಧ ನಾಟಕದಲ್ಲಿ, ಇವನ್ನೆಲ್ಲ ಬಹಳ ಮಟ್ಟಿಗೆ ಕಡಮೆಮಾಡಿ ಮುಖ್ಯಮುಖ್ಯವಾದ ಮಾತುಗಳನ್ನೇ, ಪುನರುಚ್ಚಾರಣೆಯಾಗದಂತೆ ನೋಡಿಕೊಂಡು ಬಳಸಲಾಗಿದೆ.

ನಾಟಕದ ಪರಿಣಾಮವನ್ನೂ ಮೇಲ್ಮೆಯನ್ನೂ ಪೂರ್ತಿಯಾಗಿ ತಿಳಿದುಕೊಳ್ಳಬೇಕಾದರೆ ರಂಗಸ್ಥಳದಲ್ಲಿ ಅದರ ಪ್ರಯೋಗವನ್ನು ನೋಡಬೇಕು. ಆಗ ಅದರ ಗುಣದೋಷಗಳು ಚೆನ್ನಾಗಿ ವಿದಿತವಾಗುತ್ತವೆ. ಗದಾಯುದ್ಧ ನಾಟಕವು ರಂಗಸ್ಥಳದ ಪರೀಕ್ಷೆಯಲ್ಲಿ ನಿಲ್ಲತಕ್ಕ— ಪ್ರಥಮಶ್ರೇಣಿಯಲ್ಲಿ ನಿಲ್ಲತಕ್ಕ— ನಾಟಕವಾಗಿದೆ. ನಾಟಕದಲ್ಲಿ ಮೊದಲಿನಿಂದ ಕೊನೆಯವರೆಗೆ ಸಾಮಾಜಿಕರ ಎಂದರೆ ಪ್ರೇಕ್ಷಕರ ಅಭಿರುಚಿಯು ಎಲ್ಲಿಯೂ ಕುಂದುವುದಿಲ್ಲ. ಕ್ರಿಯೆಯೇ ನಾಟಕಕ್ಕೆ ಜೀವಾಳವೆಂದು ಹೇಳುತ್ತಾರೆ. ಗದಾಯುದ್ಧ ನಾಟಕವು ಕ್ರಿಯೆಯಿಂದ ತುಂಬಿದೆ. ಪ್ರೇಕ್ಷಕರ ಮನಸ್ಸನ್ನು ಹಿಡಿಯುವ, ಅವರ ಹೃದಯವನ್ನು ಕಲಕುವ, ರಸವತ್ತಾದ ಸಂನಿವೇಶಗಳು ಈ ನಾಟಕದಲ್ಲಿವೆ. ಎರಡನೆಯ ರಂಗದಲ್ಲಿ ಪ್ರೇಕ್ಷಕರು ದುರ್ಯೋಧನನ ಉಪಹಾಸಯುತವಾದ ಮೂದಲಿಕೆಯನ್ನು ಕೇಳುತ್ತಿರುವಷ್ಟರಲ್ಲಿಯೆ, ಆತನ ಅಂಧ ಮಾತಾಪಿತರ ಪ್ರವೇಶವಾಗುತ್ತದೆ. ಗಾಂಧಾರಿ ಧೃತರಾಷ್ಟ್ರರ ಪ್ರವೇಶವು ಆ ಕ್ಷಣಕ್ಕಾಗದೆ ಇನ್ನಾವ ಕ್ಷಣಕ್ಕಾಗಿದ್ದರೂ ಇಷ್ಟು ಉಚಿತವೆನಿಸುತ್ತಿರಲಿಲ್ಲ, ಇಷ್ಟು ಪರಿಣಾಮಕಾರಿಯಾಗಿರುತ್ತಿರಲಿಲ್ಲ. ಇದು ಎಷ್ಟು ನಾಟಕಯೋಗ್ಯವಾಗಿದೆ (Dramatic) ಎಂಬುದನ್ನು ನಾವು ಗಮನಿಸಬೇಕು. ಮೂರನೆಯ ರಂಗದಲ್ಲಿ, ಮುದುಕರುಗಳು ಕೇವಲ ಎರಡು ಮೂರು ನಿಮಿಷಗಳವರೆಗೆ ಮಾತ್ರ ರಂಗಸ್ಥಳದಲ್ಲಿದ್ದರೂ ಒಡಿದೆರಡೇ

ಮಾತುಗಳನ್ನು ಆಡಿದ್ದರೂ ಪ್ರೇಕ್ಷಕರಮೇಲೆ ವಿಲಕ್ಷಣವಾದ ಪರಿಣಾಮವುಂಟಾಗುತ್ತದೆ. ಮರುಳುಗಳ ಆಟವನ್ನು ನೋಡಿ ಮೊದಲು ನಗುತ್ತಿದ್ದ ಸಾಮಾಜಿಕರು ಅವು ನಿಷ್ಕ್ರಮಿಸುವ ವೇಳೆಗೆ ಏನೋ ಒಂದು ಗಂಭೀರವಾದ ವ್ಯಾಕುಲ ಭಾವವನ್ನು ತಾಳುತ್ತಾರೆ. ಹೀಗೆ ಈ ನಾಟಕದಲ್ಲಿ ಮಾನವನ ಹೃದಯದ ಬೇರೆಬೇರೆ ಭಾವಗಳನ್ನು ಕೆರಳಿಸುವ ದೃಶ್ಯಗಳಿವೆ. ಲಕ್ಷ್ಮಣಕುಮಾರ, ದುಃಶಾಸನ, ಕರ್ಣ ಮೊದಲಾದವರನ್ನು ಕಂಡ ದುರ್ಯೋಧನನ ಪ್ರಲಾಪವು ಪ್ರೇಕ್ಷಕರನ್ನು ಶೋಕರಸದಲ್ಲಿ ಮುಳುಗಿಸುತ್ತದೆ. ಗದಾಯುದ್ಧ, ಅಶ್ವತ್ಥಾಮನ ಲಕ್ಷ್ಮೀವಿಡಂಬನ ಇವು ಹೃದಯಂಗಮವಾಗಿವೆ.

ನಾಟಕದ ಕೊನೆಯ ದೃಶ್ಯವಾದ ದುರ್ಯೋಧನನ ಮರಣವು ಸಾಮಾಜಿಕರಲ್ಲಿ ಏನೋ ಒಂದು ಅನಿರ್ವಚನೀಯವಾದ ಭಾವವನ್ನು ಹುಟ್ಟಿಸುತ್ತದೆ. ಇದು ಶೋಕವಲ್ಲ; ಹರ್ಷವಂತೂ ಮೊದಲೇ ಅಲ್ಲ. ದುರ್ಯೋಧನನು—'ಶ್ರೀ'ಯುವರ ದುರ್ಯೋಧನನು—ವೀರ; ದೈವದುರ್ವಿಲಾಸದಿಂದಲೂ, ಚಲ ಅಭಿಮಾನ ಮೊದಲಾದ ತನ್ನ "ದುರ್ಗುಣ"ಗಳಿಂದಲೂ ಪ್ರಾಣಕ್ಕೆ ಎರವಾದವ. ಮರಣವೆಂದರೆ ಆತನಿಗೆ ಭಯವಿಲ್ಲ; ಒಂದು ಬಗೆಯಿಂದ ಮರಣವೇ ಆತನಿಗೆ ಇಷ್ಟ. ಇಷ್ಟೆಲ್ಲ ಅವಸ್ಥೆಪಟ್ಟ ದುರ್ಯೋಧನನು ಇನ್ನೂ ಜೀವಿಸಿದ್ದರೇನೆ ಶೋಕಕ್ಕೆ ಕಾರಣವಾಗುತ್ತಿದ್ದಿತು. ಆದುದರಿಂದ ಆ ಧೀರನ ಮರಣದಲ್ಲಿ ನಮಗೆ ಶೋಕವಿಲ್ಲ. ಇಂಥ ಧೀರನ ಬಗ್ಗೆ ಕರುಣೆ ತೋರಿಸಲಿಕ್ಕೆ ನಾವಾರು? ಆತನು ಕರುಣಾಸ್ಪದನಲ್ಲ. ಕರ್ಣ ದುಃಶಾಸನರ ಕಳೇಬರಗಳನ್ನು ನೋಡಿ ಗೋಳಿಡುವ ದುರ್ಯೋಧನನು ಕರುಣಾಸ್ಪದನು. "ಅಳ್ಕದೆ ಬಳ್ಕದೆ ತನ್ನೊಡಲ್ಪಡಲ್ಪಡುವಿನ ಮಣ್ಮುಗುಂದದಲೆ" ನಡೆದ ಅಭಿಮಾನಧನನಾದ ಸುಯೋಧನನು ಮರಣದಲ್ಲಿ ಕರುಣಾಸ್ಪದನಲ್ಲ. ನಾಟಕದ ಕೊನೆಗೆ ವರ್ಣಿಸಲಿಕ್ಕೆ ಬಾರದ ಏನೋ ಒಂದು ಗಂಭೀರವಾದ ಅದ್ಭುತ ಭಾವವು ನಮ್ಮ ಹೃದಯವನ್ನು ಆವರಿಸುತ್ತದೆ. ಇಂಥ ಭಾವವು ನಮ್ಮಲ್ಲಿ ಉಂಟಾದರೆ ದುರಂತನಾಟಕವು ಯಶಸ್ವಿಯಾಯಿತೆಂದು ಹೇಳಬಹುದು. ಈ ಸಂದರ್ಭದಲ್ಲಿ ದುರಂತ ನಾಟಕಗಳ ಉದ್ದೇಶದ ವಿಷಯವಾಗಿ ಒಬ್ಬ ಪ್ರಸಿದ್ಧ ಇಂಗ್ಲಿಷ ವಿಮರ್ಶಕನ ಮಾತುಗಳನ್ನು ಇಲ್ಲಿ ಹೇಳಬಹುದು:

"Tragedy then, we may say, has for its aim not the arousing of pity, but the conjuring up of a feeling of awe allied to terror."

— Allardyce Nicoll

ಹಳಗನ್ನಡವನ್ನು ಪೂರ್ತಿಯಾಗಿ ಅರ್ಥಮಾಡಿಕೊಳ್ಳದವರೂ ಈ ನಾಟಕವನ್ನು ನೋಡಿ ರಸಗ್ರಹಣಮಾಡಿ ಸಂತೋಷಿಸುತ್ತಾರೆ. ಹೀಗಾಗುವುದಕ್ಕೆ ನಾಟಕದ ಕಥೆಯು ಎಲ್ಲರಿಗೂ ಪರಿಚಿತವಿರುವದೊಂದು ಕಾರಣವಲ್ಲದೆ, ರನ್ನನ ಅಸಾಧಾರಣ ವಾಗ್ವೈಖರಿಯೂ ಕಾರಣವೆಂದು ನಾನು ಬಗೆಯುತ್ತೇನೆ. ರನ್ನನ ಸ್ನಿಗ್ಧಗಂಭೀರ ನಿನಾದವುಳ್ಳ ಶಬ್ದಪ್ರಯೋಗಗಳು ಯಾರ ಮನಸ್ಸನ್ನಾದರೂ ಆಕರ್ಷಿಸುವವು. ಭಾವ ಭಾಷೆಗಳಲ್ಲಿ ಒಂದು ಬಗೆಯ ಸಾಮರಸ್ಯವಿದ್ದುದನ್ನು ಗದಾಯುದ್ಧದಲ್ಲೆಲ್ಲ ನಾವು ಕಾಣಬಹುದು. ರನ್ನನ ಶೈಲಿ ವೀರ್ಯವತ್ತಾದ ಶೈಲಿ; ಅರ್ಥವು ಸ್ಫುಟವಾಗಿ

ತಟ್ಟನೆ ಮನಸ್ಸಿಗೆ ನೇರವಾಗಿ ಸೇರುವ ಉದಾತ್ತ ಶೈಲಿ. ಈ ಶೈಲಿಯ ಪ್ರಭಾವದಿಂದ ಅರ್ಥವು ಪೂರ್ತಿಯಾಗಿ ತಿಳಿಯದವರೂ ನಾಟಕವನ್ನು ನೋಡುತ್ತಾರೆ; ಭಾವವನ್ನು ಗ್ರಹಿಸುತ್ತಾರೆ. ರನ್ನನ ಶೈಲಿಯ ವಿಷಯವಾಗಿ ಎಷ್ಟೋ ಪಂಡಿತರು ವಿವೇಚಿಸಿದ್ದರಿಂದ ನಾನು ಇಲ್ಲಿ ಹೆಚ್ಚು ಹೇಳಬಯಸುವುದಿಲ್ಲ.

ಗದಾಯುದ್ಧ ನಾಟಕವು ಕನ್ನಡ ಸಾಹಿತ್ಯಕ್ಕೆ 'ಶ್ರೀ'ಯವರ ಒಂದು ಶ್ರೇಷ್ಠವಾದ ಕಾಣಿಕೆ. 'ಶ್ರೀ'ಯವರ ಕೃತಿಗಳನ್ನು ಎಣಿಸುವಾಗ ನಾವು ಈ ನಾಟಕವನ್ನು ಬಿಡಬಾರದು. ಅವರ ಜಾಣ್ಮೆಯೂ ಅಭ್ಯಾಸವೂ ರಸಿಕತೆಯೂ ಈ ನಾಟಕದಲ್ಲಿ ಕಂಡುಬರುತ್ತವೆ. ಈ ನಾಟಕದಿಂದ 'ಶ್ರೀ'ಯವರು ಕನ್ನಡ ಸಾಹಿತ್ಯದಲ್ಲಿ ವಿಮರ್ಶೆಯ ಒಂದು ಹೊಸ ಮಾರ್ಗವನ್ನು ತೋರಿಸಿಕೊಟ್ಟಿದ್ದಾರೆ; ಒಂದು ಹೊಸ ರೀತಿಯ ನಾಟಕ ರಚನಾ ಕ್ರಮವನ್ನು ತೋರಿಸಿದ್ದಾರೆ. ಗದಾಯುದ್ಧ ನಾಟಕಕ್ಕಾಗಿ ನಾವು 'ಆಧುನಿಕ ಕರ್ನಾಟ ಕಾವ್ಯಕುಲಪತಿ'ಗಳಿಗೆ ಕೃತಜ್ಞರಾಗಿದ್ದೇವೆ; ಮಹಾಕವಿ ರನ್ನನಿಗಂತೂ ಸರಿಯೆ.

**ವೆಂಕಟೇಶ ಗೋ. ಕುಲಕರ್ಣಿ**

ಗೋಳಾಟದಲ್ಲಿ ಕೊನೆಗಾಣುವ ನಾಟಕಗಳಿಗೆ ರುದ್ರನಾಟಕಗಳೆನ್ನುವರು. ಕನ್ನಡ ನಾಡಿನವರು ಆಡುತಿರುವ ಬಯಲಾಟಗಳಲ್ಲಿ 'ಕುಮಾರರಾಮನ ಆಟ, ಪಕ್ಷಬ್ರಹ್ಮನ ಆಟ, ಸಂಗ್ಯಾ–ಬಾಳ್ಯಾನ ಆಟ' ಮುಂತಾದ ನಾಟಕಗಳು ಈ ಬಗೆಯವೆಂದು ಹೇಳಬಹುದು. ಸಂಸ್ಕೃತ ಸಾಹಿತ್ಯದಲ್ಲಿ ಹೆಸರುಗೊಂಡಿರುವ ನಾಟಕಗಳಲ್ಲಿ ಯಾವುದೊಂದೂ ರುದ್ರನಾಟಕವಿಲ್ಲ. ಈ ನಾಟಕಗಳ ನಡುವಿನ ಭಾಗಗಳಲ್ಲಿ ಶೋಕರಸವು ಕಂಡುಬಂದರೂ ಕೊನೆಗೆ ನೋಟಕರ ಬಗೆಗಳನ್ನು ನೋಯಿಸದಂತೆಯೆ ಇವುಗಳೆಲ್ಲವೂ ಮುಗಿಯುವುವು. ರುದ್ರನು ಭಾರತದ ದೇವರುಗಳಲ್ಲಿ ಅತಿ ಭಯಂಕರನು; ಈತನನ್ನು ಸಂತಸಗೊಳಿಸಬೇಕಾದರೆ ಪಶುಗಳ ವಧೆಯನ್ನೇ ಮಾಡಬೇಕಾಗುವುದೆಂದು ಜನಸಾಮಾನ್ಯರ ತಿಳುವಳಿಕೆ; 'ಪಶುನಾ ರುದ್ರಂ ಯಜತೇ' ಎಂಬ ಮಾತಿನಿಂದ ಇದು ಕಂಡುಬರುವುದು. ತೀರ ಹಿಂದಿನ ಕಾಲದ ಗ್ರೀಕ ಜನಾಂಗದವರಲ್ಲಿಯೂ ಈ ಬಗೆಯ ತಿಳುವಳಿಕೆಯೆ ಹಲವು ರೌದ್ರ ದೇವರುಗಳ ವಿಷಯದಲ್ಲಿ ಇದ್ದಿತು; ಇವರಾದರೂ ಭಾರತೀಯರಂತೆಯೆ ತಮ್ಮಲ್ಲಿಯ ಭಯಾನಕ ದೇವರುಗಳ ತೃಪ್ತಿಗಾಗಿ ಆಡು (ಮೇಕೆ)ಗಳನ್ನು ಬಲಿಯನ್ನಾಗಿ ಕೊಡುತಿದ್ದರು. ಈ ಬಗೆಯ ಬಲಿದಾನದ ಸಮಯದಲ್ಲಿ ಪ್ರಾಚೀನಕಾಲದ ಗ್ರೀಕರು ಹಾಡುತಿದ್ದ 'ಗೀತೆ'ಗೆ 'Tragedy' (ರುದ್ರಗೀತ) ಎಂದು ಹೆಸರಿದ್ದಿತು. ಈ ರುದ್ರಗೀತವೇ ಗ್ರೀಕ ಸಾಹಿತ್ಯದಲ್ಲಿ ಹೆಸರುಗೊಂಡಿರುವ ರುದ್ರನಾಟಕಗಳ 'ಬಿತ್ತು' ಎಂದು ಹೇಳಬಹುದು; ಇದು ಗಿಡವಾಗಿ ಬೆಳೆದು, ಆಯಾ ದೇಶಗಳಲ್ಲಿರುವ ಜನಾಂಗಗಳ ಸಂಸ್ಕೃತಿಯನ್ನನುಸರಿಸಿ ದೊಡ್ಡದಾಗಿ, ಈಗ ನಾವು ರುದ್ರನಾಟಕಗಳೆಂದು ಹೇಳುತಿರುವ ನಾಟಕಗಳ ರೂಪವನ್ನು ತಳೆದಿದೆ. ಗ್ರೀಕ ಜನಾಂಗದಲ್ಲಿ ಈ ರುದ್ರಗೀತವನ್ನು ಹಲವರು ಮೇಳವಾಗಿ ಹಾಡುತಿದ್ದರು. ಈ ಮೇಳದವರ ಮುಂದಾಳು ಉಳಿದವರೆಲ್ಲರಿಗೂ ಆ ಹಾಡಿನಲ್ಲಿರುವ ಭಾವಗಳನ್ನು ತೋರ್ಪಡಿಸುವ ಅಭಿನಯವನ್ನು ಕಲಿಸಿಕೊಡುತಿದ್ದನು. ಕೆಲವೊಂದು ಕಾಲವು ಸರಿದುಹೋಗಲು, ಈ ರುದ್ರಗೀತದಲ್ಲಿ ಇನ್ನೊಂದೆರಡು ಪಾತ್ರಗಳು ಹಾಡುವ ಹಾಡುಗಳೂ ಸೇರಿದುವು. ಈ ಬಗೆಯಾಗಿ ಗ್ರೀಕರ ರುದ್ರನಾಟಕಗಳು ಹೆಚ್ಚಾಗಿ ಹಾಡುಗಳಿಂದಲೇ ಬರೆಯಲಾದುವು. ಆದರೆ, ಈಗ ನಾವು ರುದ್ರನಾಟಕಗಳೆಂದು ಕರೆಯುತಿರುವ ನಾಟಕಗಳಲ್ಲಿ ಅವಶ್ಯವಾಗಿ ಇರಬೇಕಾದ ಪಾತ್ರಗಳ ವಿವಿಧತೆಯೂ, 'ವಸ್ತು'ಗಳ ವ್ಯಾಪ್ತಿಯೂ, ಹಿಂದಿನ ಗ್ರೀಕರು ಬರೆದ ರುದ್ರನಾಟಕಗಳಿಗೆ ಎಂದಿಗೂ ಇರಲಿಲ್ಲ; ಬರಲಿಲ್ಲ.

ನಮ್ಮ ನಾಡಿನಲ್ಲಿಯ ಹಳ್ಳಿಗರು ಆಡುತಿರುವ ರುದ್ರನಾಟಕಗಳಲ್ಲಿಯೂ ಹಾಡು–ಮಾತುಗಳ ಸರಿಬೆರಕೆಯು ಕಂಡುಬರುವುದು. ಹಾಡುಗಳಿಂದ ನಾಟಕದಲ್ಲಿಯ ವಸ್ತು–ಪಾತ್ರ–ರಸ ಪೋಷಣೆಗೆ ತಡೆಯುಂಟಾಗುವುದೆಂದು ಇಂದಿನವರ ಸಿದ್ಧಾಂತ. ಆದರೆ ಹಿಂದಿನ ಗ್ರೀಕ ಕವಿಗಳು ಬರೆದಿರುವ ರುದ್ರನಾಟಕಗಳು

ಹೆಚ್ಚಾಗಿ ಹಾಡುಗಳಿಂದಲೇ ತುಂಬಿವೆ. ಈ ಬಗೆಯಾದ ರುದ್ರನಾಟಕಗಳನ್ನು ಓದಿ ಅರಗಿಸಿಕೊಂಡು 'ಶ್ರೀ'ಯವರು ಮೂರು ರುದ್ರನಾಟಕಗಳನ್ನು ಕನ್ನಡದಲ್ಲಿ ಬರೆದಿದ್ದಾರೆ. ಇವುಗಳಲ್ಲಿ ಮೊದಲನೆಯದು 'ಗದಾಯುದ್ಧ ನಾಟಕ'; ರನ್ನ ಕವಿಯ ಗದಾಯುದ್ಧ ಕಾವ್ಯದಲ್ಲಿಯ ಪದ್ಯಗಳನ್ನು ಬಳಸಿಕೊಂಡೇ ಈ ನಾಟಕವು ಬರೆಯಲಾಗಿದೆ. ಆದುದರಿಂದ 'ಶ್ರೀ'ಯವರ ಪ್ರತಿಭೆಗೆ ಇದರಲ್ಲಿ ಅವಕಾಶ ಅಷ್ಟು ಇರಲಿಲ್ಲ. 'ಅಶ್ವತ್ಥಾಮನ್' ಎಂಬ ರುದ್ರನಾಟಕವು ಎರಡನೆಯದು; "ಗ್ರೀಕ ಮಹಾಕವಿ ಸಾಫೋಕ್ಲೀಸನ 'ಏಜಾಕ್ಸ್' ಎಂಬ ರುದ್ರನಾಟಕವನ್ನು ಆಶ್ರಯಿಸಿ, ಮಹಾಭಾರತದ ಸೌಪ್ತಿಕಪರ್ವದ ಕಥೆಯನ್ನು ಅದರೊಡನೆ ಹೊಂದಿಸಿ ಕೊಂಡು, ಈ ನಾಟಕವನ್ನು ರಚಿಸಿರುತ್ತದೆ" ಎಂದು 'ಶ್ರೀ'ಯವರೇ ಬರೆದಿದ್ದಾರೆ. ಈ ನಾಟಕದ ಮೇಲ್ಮೆಯ ಬಗೆಗೆ ನನಗಿಂತಲೂ ಬಲ್ಲಿದರಾದ ಬೇರೆಯವರು ಬರೆಹಗಳನ್ನು ಬರೆದಿರುವರು. ಆದರೆ, ಈ ನಾಟಕವನ್ನು ಹಲವರು ರಂಗಭೂಮಿಯ ಮೇಲೆ ಆಡಿ ತೋರಿಸಿದೊಡನೆಯೆ ಇದರಲ್ಲಿಯ ಪ್ರಧಾನ ಪಾತ್ರವಾದ 'ಅಶ್ವತ್ಥಾಮನ್' ಎಂಬಾತನ ವಿಷಯದಲ್ಲಿ ಪಂಡಿತ ಪಾಮರರ ಮನದಲ್ಲಿ ಉಂಟಾದ ಕ್ಷೋಭೆಯನ್ನು ಕುರಿತು ಎರಡು ಮಾತುಗಳನ್ನು ಹೇಳಬೇಕಾಗಿದೆ. ಭಾರತೀ ಯರು ಬಹು ಕಾಲದಿಂದ ಚಿರಂಜೀವಿಗಳೆಂದು ತಿಳಿದುಕೊಂಡಿರುವ ಏಳು ಮಂದಿ ಮಹಾಪುರುಷರಲ್ಲಿ ಅಶ್ವತ್ಥಾಮನೊಬ್ಬನು. ತಾವು ಬರೆದಿರುವ ನಾಟಕದಲ್ಲಿ 'ಶ್ರೀ'ಯವರು ಅಶ್ವತ್ಥಾಮನೂ ಕೊನೆಗೆ ಸತ್ತುಹೋದಂತೆ ತೋರಿಸಿದ್ದಾರೆ. ಈ ಸಂಗತಿಯೆ ಜನರಲ್ಲಿಯುಂಟಾದ ಕ್ಷೋಭೆಗೆ ಮುಖ್ಯ ಕಾರಣವಾಗಿದೆ. ರಣದಲ್ಲಿ ಧರ್ಮರಾಜನು ನುಡಿದ "ಅಶ್ವತ್ಥಾಮೋ ಹತಃ" ಎಂಬ ಶಬ್ದಗಳನ್ನು ಕೇಳಿ ದೊಡನೆಯೆ, ಶಸ್ತ್ರಾಸ್ತ್ರಗಳನ್ನು ಕೆಳಗಿರಿಸಿ, ಮಗನ ಸಾವಿಗಾಗಿ ಮರುಗಿದ ದ್ರೋಣಾಚಾರ್ಯರೇ ಅಶ್ವತ್ಥಾಮನು ಚಿರಂಜೀವಿಯಾಗಿರಲಿಲ್ಲವೆಂಬುದನ್ನು ಸ್ಪಷ್ಟ ವಾಗಿ ಸಾರಿರುವಾಗ, ನಾಟಕದಲ್ಲಿಯ ಅಶ್ವತ್ಥಾಮನು ಸತ್ತುಹೋದುದಕೆ ಇಷ್ಟೇಕೆ ಕ್ಷೋಭೆಯೋ ತಿಳಿಯದು.

'ಪಾರಸಿಕರು' ಎಂಬುದು 'ಶ್ರೀ'ಯವರು ಬರೆದಿರುವ ಮೂರನೆಯ ರುದ್ರ ನಾಟಕ. ಇದನ್ನು ಗ್ರೀಕ ಮಹಾಕವಿಯಾದ ಅಯ್‌ಸ್ಕಿಲಸ್ (Aeschylus) ಎಂಬವನು ರಚಿಸಿದನು. 'ಶ್ರೀ'ಯವರು ಕನ್ನಡದಲ್ಲಿ ಈ ನಾಟಕದ ಪರಿವರ್ತನೆ ಯನ್ನು ಬಲು ಚೆನ್ನಾಗಿ ಮಾಡಿರುವರು. ವಾಡಿಕೆಯಾಗಿ ಗ್ರೀಕ ಮಹಾಕವಿಗಳು ರಚಿಸಿರುವ ರುದ್ರನಾಟಕಗಳಿಗೆ ಅವರ ಪುರಾಣಗಳಲ್ಲಿಯ ವಸ್ತು-ಪಾತ್ರಗಳೇ ಮೂಲವಾಗಿವೆ. 'ಪಾರಸಿಕರು' ನಾಟಕದಲ್ಲಿಯ ವಸ್ತು-ಪಾತ್ರಗಳು ಗ್ರೀಕರ ಚರಿತ್ರೆಯಿಂದ (ಇತಿಹಾಸದಿಂದ) ಆಯ್ದುಕೊಂಡುವು; ಈ ಸಂಗತಿಯು ಈ ನಾಟಕದಲ್ಲಿರುವ ವಿಶೇಷ.

ಹೆರವರ ನುಡಿಗಳಿಂದ ಮೇಲ್ಮೆಯ ಬರೆಹಗಳನ್ನು ಇನ್ನೊಂದು ನುಡಿಯಲ್ಲಿ ತರುವ ಬಗೆಗಳು ಎರಡು: ಪರಿವರ್ತನೆಯೊಂದು; ಅನುವಾದವಿನ್ನೊಂದು; ಇದಕ್ಕೆ ರೂಪಾಂತರವೆಂದೂ ಹೆಸರುಂಟು. ಕಲಿತವರಾದ ಕನ್ನಡಿಗರಲ್ಲಿ ಕೇವಲ ಪರಿವರ್ತನೆಯ ಪಕ್ಷಪಾತಿಗಳೂ ಹಲವರಿದ್ದಾರೆ; ರೂಪಾಂತರಕ್ಕೆ ಮೆಚ್ಚಿದವರೂ

ಕೆಲವರಿದ್ದಾರೆ. ಇವೆರಡು ಬಗೆಗಳಲ್ಲಿ ಯಾವುದು ನಮ್ಮ ನುಡಿಗೆ ಹಿರಿಮೆಯನ್ನು ತರುವುದೆಂಬುವದ ವಿಷಯದಲ್ಲಿ ಇನ್ನೂ ಒಮ್ಮತವಾಗಿಲ್ಲ. 'ಶ್ರೀ'ಯವರ 'ಪಾರಸಿಕರು' ನಾಟಕವು ಪರಿವರ್ತನೆಯಾಗಿದ್ದರೂ, ಪಾತ್ರಗಳ ಹೆಸರುಗಳನ್ನು ಬಿಟ್ಟರೆ, ಅದು ಮೇಲ್ಮೆಯ ರೂಪಾಂತರವಾಗಿದೆಯೆಂದೇ ಹೇಳಬೇಕು. "ಅನುವಾದವನ್ನು ಮಾಡುವವರಿಗೂ ಪ್ರತಿಭೆ, ಭಾಷಾಶಕ್ತಿ, ಸೃಷ್ಟಿಶಕ್ತಿ, ಕಲಾಮರ್ಮಜ್ಞತೆ ಮುಂತಾದ ಗುಣಗಳು ಬೇಕು" ಎನ್ನುವುದಕ್ಕೆ ಈ ನಾಟಕ ನಿದರ್ಶನವಾಗಿದೆ.

## ಇತಿವೃತ್ತ (ವಸ್ತು)

ಈ ನಾಟಕದಲ್ಲಿಯ ವಸ್ತು ಸರ್ವ ಕಾಲದಲ್ಲಿಯೂ ಸರ್ವ ಜನಾಂಗಗಳ ಬಗೆಗಳನ್ನು ಸೆಳೆದುಕೊಳ್ಳುವಂತಹದಾಗಿದೆ. ವಾಡಿಕೆಯಾಗಿ ಕಸುವಿನ ಜನರಿರುವ ನಾಡುಗಳ ಅಣ್ಮರು. ಇಲ್ಲವೆ, ಸಂಪನ್ನ ದೇಶಗಳ ಸರ್ವಾಧಿಕಾರಿಗಳು ತಮ್ಮ ಸುತ್ತು ಮುತ್ತಲಿರುವ ಹೆರವರ ನಾಡುಗಳನ್ನು ಗೆದ್ದುಕೊಂಡು ಸಾಮ್ರಾಜ್ಯವನ್ನು ಕಟ್ಟಬೇಕೆಂಬ ಕಟ್ಟಾಸೆಯನ್ನು ಅನಾದಿಕಾಲದಿಂದಲೂ ಮಾಡುತಬಂದಿದ್ದಾರೆ. ಪ್ರಾಚೀನ ಕಾಲದ ಪಾರಸಿಕರೂ, ಗ್ರೀಕರೂ ಒಂದೇ ಬುಡಕಟ್ಟಿನವರಾಗಿದ್ದರು. ಈಗ ನಾವು ಇರಾನವೆಂದು ಕರೆಯುವ ದೇಶದಲ್ಲಿ ೨೩ ಶತಮಾನಗಳ ಹಿಂದೆ ಪಾರಸಿಕರ ರಾಜವಂಶವೊಂದು ಬಲು ಸಡಗರದಿಂದ ಆಳುತಿದ್ದಿತು. ಆ ಸಮಯದಲ್ಲಿಯೆ, ಅಥೆನ್ಸ್ ನಗರಿಯನ್ನು ಆಡಳಿತದ ಕೇಂದ್ರವನ್ನಾಗಿ ಮಾಡಿಕೊಂಡು ಗ್ರೀಕರು ಪ್ರಜಾಪ್ರಭುತ್ವವನ್ನು ನೆಲೆಗೊಳಿಸಿದ್ದರು. ಇವೆರಡು ದೇಶಗಳು ವೀರ್ಯ–ಧೈರ್ಯಗಳಿಗೂ, ಲಲಿತ ಕಲೆಗಳಿಗೂ, ಧನಸಂಪತ್ತಿಗೂ ತವರುಮನೆಯಾಗಿದ್ದುವು. ಇವುಗಳಲ್ಲಿಯ ಜನರ ಬಾಳು ಸೊಗಸಾಗಿದ್ದಿತು.

ಪಾರಸಿಕರ ರಾಜನಾದ ದರ್ಯವುಷನೆಂಬವನಿಗೆ ಸಾಮ್ರಾಜ್ಯದ ಲಾಲಸೆಯುಂಟಾಗಲು, ಗ್ರೀಕರನ್ನು ಗೆಲ್ಲಲೆಂದು ಆತನು ಸೈನ್ಯ ಸಿದ್ಧತೆಯನ್ನು ಮಾಡಿರಿಸಿದ್ದನು. ಈತನ ಮಗನಾದ ಕ್ಷಿಯಾರ್ಷನಿಗೂ ಗ್ರೀಕ ಜನಾಂಗದವರ ಏಳಿಗೆಯನ್ನು ಕಂಡು ಹೊಟ್ಟೆಯುರಿಯುಂಟಾಯಿತು. ತನ್ನ 'ಸಾಮ್ರಾಜ್ಯ–ಸೌರಂಭ–ಶಕ್ತಿ–ಭುಕ್ತಿಗಳೆಲ್ಲವನ್ನೂ' ಕಲಿಹಾಕಿ ಈತನು ಅಥೆನ್ಸ್ ನಗರಿಯ ದಾಳಿಯನ್ನು ಕೈಕೊಂಡನು. ಸಾಲಮಿಸ್ ಎಂಬಲ್ಲಿ ಹಿರಿಯ ಕಾಳಗ ನಡೆಯಿತು. ಇದರಲ್ಲಿ ಗ್ರೀಕರು ಪಾರಸಿಕರನ್ನು ಸದೆಬಡಿದರು. ಪಾರಸಿಕರ ಸಾಮ್ರಾಜ್ಯ ವೈಭವವು ಮಣ್ಣುಗೂಡಿತು; ಈ ಕಾಳಗದ ಕತೆಯನ್ನೆ ವಸ್ತುವನ್ನಾಗಿರಿಸಿಕೊಂಡು ಅಯ್‌ಸ್ಕಿಲಸ್ ಕವಿಯು 'ಪಾರಸಿಕರು' ನಾಟಕವನ್ನು ರಚಿಸಿದ್ದಾನೆ. ಒಂದು ಮಹಾಸಾಮ್ರಾಜ್ಯದ ಏಳುಬೀಳುಗಳು ಸರ್ವ ಕಾಲದಲ್ಲಿಯೂ ಸರ್ವ ದೇಶಗಳ ಜನರನ್ನೂ ತನ್ನ ಕಡೆಗೆ ತಿರುಗಿ ನೋಡುವಂತೆ ಮಾಡುವುವು. ಪಾರಸಿಕರ ಬೀಳನ್ನು ಕುರಿತು ಈ ಗ್ರೀಕ ಕವಿಯು ಬಲುಹಿಗ್ಗಿನಿಂದ ಹೆಮ್ಮೆಯ ನುಡಿಗಳನ್ನು (ಪಾರಸಿಕರನ್ನು ಸೋಲಿಸಿದವರಾದ ಗ್ರೀಕರ ವಿಷಯದಲ್ಲಿ) ಹೇಳುವುದಿಲ್ಲ. ಆದರೆ ಪಾರಸಿಕರ ಸ್ವಾರ್ಥಪರಾಯಣತೆಯನ್ನೂ ಅವಿವೇಕವನ್ನೂ ದುರ್ದೈವವನ್ನೂ ಬಗೆದು, ಮರುಗಿ ತನ್ನವರಾದ ಗ್ರೀಕರಾದರೂ ಗೆಲುವಿನಿಂದ ಕೊಬ್ಬಿ, ಸಾಮ್ರಾಜ್ಯಲಾಲಸೆಯಿಂದ ಇಂತಹ ಅವಿವೇಕಗಳಿಗೀಡಾಗಿ ಮಣ್ಣುಪಾಲಾಗಬಾರದೆಂದು ಎಚ್ಚರಿಕೆಯನ್ನು ಕೊಟ್ಟಿದಾನೆ.

ಇಳೆಯ ಮೇಲಿರುವ ರಾಜರೂ ಸರ್ವಾಧಿಕಾರಿಗಳೂ ಈ ಪಾಠವನ್ನು ಚೆನ್ನಾಗಿ ಕಲಿತುಕೊಂಡು, ಅದನ್ನು ಮನವಾರೆ ಬಳಕೆಯಲ್ಲಿ ತಂದರೆ, ಎಲ್ಲೆಡೆಗಳಲ್ಲಿಯೂ ಈಗ ಕೇಡನುಂಟುಮಾಡುತಿರುವಂತಹ ಹೆಗ್ಗಾಳಗಗಳು ಮಾಯವಾಗಿ, ಭೂಲೋಕವು ಸುಖಶಾಂತಿಗಳ ಬೀಡಾಗುವುದು.

ಈ ನಾಟಕದಲ್ಲಿ ಇನ್ನೊಂದು ವಿಶೇಷವಿದೆ: ವಾಡಿಕೆಯಾಗಿ ಗ್ರೀಕ ಮಹಾ ಕವಿಗಳ ರುದ್ರನಾಟಕಗಳು ನಾಯಕ–ನಾಯಿಕೆಯರ ಸಾವಿನಲ್ಲಿ ಮುಗಿಯುತ್ತಿವೆ; ಈ ನಾಟಕದಲ್ಲಿ ನಾಯಕನಾಗಿರುವ ಶ್ರೀಕ್ಷಯಾರ್ಷನ ದೇಹ ಮರಣವಾಗಿಲ್ಲ; ಆತನ ಮನದ ಮುರಿತ ಮಾತ್ರ ಚಿತ್ರಿತವಾಗಿದೆ.

ಇನ್ನು ಅನುವಾದದಲ್ಲಿರುವ ಹಲವು ಗುಣಗಳ ಬಗೆಗೆ ನಾಲ್ಕು ಮಾತುಗಳನ್ನು ಹೇಳುವೆನು. 'ಶ್ರೀ'ಯವರು ಗ್ರೀಕ ಭಾಷೆಯನ್ನು ಸರಿಯಾಗಿ ಅರಿತುಕೊಂಡವರು. ಮೂಲ ನಾಟಕದಲ್ಲಿ ಈಗ ನಮಗೆ ನೀರಸವಾಗಿ ತೋರುವ ಬಹು ಭಾಗಗಳನ್ನು ಅನುವಾದದಲ್ಲಿ ಬಿಡಲಾಗಿದೆ. ಮೂಲದಲ್ಲಿರುವ ಹೆಚ್ಚು ಕಡಮೆ ೧,೨೦೦ ಸಾಲುಗಳನ್ನು ಅನುವಾದದಲ್ಲಿ ೯೦೦ ಸಾಲುಗಳಿಗೆ ತಂದಿದ್ದಾರೆ. ಹೀಗಿದ್ದರೂ ಮೂಲದಲ್ಲಿಯ ರಸವು ಅನುವಾದದಲ್ಲಿ ಮಧುರತರವಾಗುವಂತೆ ಇಳಿದುಬಂದಿದೆ.

ನಾಣ್ಣುಡಿಗಳ ಮಾಟದಿಂದ ಕಿರಿದಾಗಿರುವ ತಿರುಳಿನ ಹಿರಿಮೆಯಿಂದ ತುಂಬಿ ಹೊರಸೂಸುತಿರುವ, ಇಂಚರದ ಮೆಲ್ನಡೆಯ ಮೇಲ್ಮೆಯನು ಪಡೆದಿರುವ, ನುಡಿಯು ನಾಡಿಗೊಂದು ಹೆಮ್ಮೆ. 'ಪಾರಸಿಕರು' ನಾಟಕದಲ್ಲಿ ನಮ್ಮ ಹಿರಿಯಯ್ಯನವರು ಇಂತಹ ನುಡಿಗಳನ್ನೇ ಬಳಸಿ, ಕನ್ನಡದಲ್ಲಿರುವ ಮೆಲ್ಪನ್ನೂ ಬಲ್ಪನ್ನೂ ಸೊಂಪನ್ನೂ ಎತ್ತಿ ತೋರಿಸಿದ್ದಾರೆ. ಈ ನಾಟಕದ ಹೊತ್ತಗೆಯ ಒಂದೊಂದು ಪುಟದಲ್ಲಿಯೂ ಇಂತಹ ಮಾತುಗಳು ಕಂಗೊಳಿಸುತಿವೆ; ಇವುಗಳಲ್ಲಿಯ ಕೆಲವನ್ನು ಇಲ್ಲಿ ಕಾಣಿಸಿರುವೆನು:

(೧) ಓಲೆಯಟ್ಟೆ ದೊರೆಯ ದೊರೆ, ತಲೆಯೊಳಿಟ್ಟು ನಡೆದು ಬರೆ
ಗಾಳಿ ಬೀಸೆ, ಕೆರಳಿ ತೆರೆ, ಹೊಮ್ಮಿ, ಚಿಮ್ಮಿ, ಮಿನುಗೆ ನೊರೆ,
ಬೀಸಿ ಬರ್ಪ ಕಡಲ ಪೊನಲ್, ನೆಲನ ನುಂಗಿಕೊಳುವುದೆನಲ್,
ನಾಡ ನಾಡ ರಾಯರೆಲ್ಲ ಕೂಡ ಕೂಡ ನೆರೆದರೆಲ್ಲ.

ಸಾಮ್ರಾಜ್ಯದ ಸೈನ್ಯವೆಲ್ಲವನ್ನೂ ಪಾರಸಿಕರ ದೊರೆಯು ಕಲೆಹಾಕಿದ ರೀತಿಯಿದು; ಗ್ರೀಕರ ಮೇಲೆ ದಾಳಿಯಿಡಲೆಂದು ಹೊರಡಲನುವಾದ ದಂಡಿನ ವರ್ಣನೆಯಿದು.

(೨) ಗ್ರೀಕರು ಈ ದಂಡೆಲ್ಲವನ್ನು ಸದೆಬಡಿದಿರಬಹುದೆಂಬ ಅಂಜಿಕೆಯಿಂದ ಮೇಳದವರು ನುಡಿದರು:

ಆದೊಡೆಯು, ದೈವ ವಂಚಿಸಲು, ಬುದ್ಧಿಬಲದಿಂದಾರು ಬದುಕಬಹುದು?
ಒಡ್ಡಿದಾ ಹೆಬ್ಬಲೆಯ ಹಾರಬಹುದು? ತನ್ನ ಬಿಡುಗಡೆಗೋಡಿ ತೂರಬಹುದು?

(೩) ಶ್ರೀಕ್ಷಯಾರ್ಷನ ತಾಯಿ 'ಹುತೌಸ' ತನ್ನ ಮಗನು ಸೊಕ್ಕಿನಿಂದ ಮಾಡಿದ ದಾಳಿಯಿಂದ ಸಾಮ್ರಾಜ್ಯಕ್ಕೆ ಉಂಟಾಗಿರಬಹುದಾದ ಕೇಡನ್ನು ಬಗೆದು,

ಬಾಳದು ಆಳಿಲ್ಲದ ಸಿರಿ, ಸಿರಿಯಿಲ್ಲದ ಮನೆಯದು.
ಸಿರಿಯೊ ನಮಗೆ ತುಂಬಿರುವುದು; ಆಳ ಕಾಣೆ ಕಾಯಲು.
ಅರಮನೆಯೊಳ್ ಮುತ್ತಬ್ಬೆಯ ಕಂಣ ಬೆಳಕು ಕಾಣನು.

ಎಂದು ದುಗುಡದಿಂದ ನುಡಿದಳು.

(೪) ತನ್ನ ಮಗನು ದಾಳಿಗೆಂದು ಒಯ್ದ ದಂಡೆಲ್ಲವೂ ಹಾಳಾಗಿ ಹೋದುದನ್ನು ದೂತನಿಂದ ಕೇಳ್ದು,

....ಈ ಪರಿಯ ಕೇಡಿಂಗೆ
ಮಾತು ಹೊಮ್ಮದೆ ಬಿಗುತು ಮೂಗಿಯಾದೆನು ನಾನು
ದೇವರ್ಕಳೆಡರ ಕೊಡೆ, ಹೊರಬೇಕು ತಾಳ್ಮೆಯಲಿ
ಮರ್ತ್ಯರಾದವರು

ಎಂದುಸುರಿದಳು.

(೫) ತನ್ನ ಮಗನು ಬದುಕಿ ಮರಳಿ ಬಂದಿರುವನೆಂದು ದೂತನಿಂದ ತಿಳಿದು,
ಈ ಎಡರಿನೊಳ್ ನಿಮ್ಮ ನಲ್ವೆಸನ್, ಜನಮಂಜದಂತೊಳ್ಪನುಡಿದು
ನಂಬುಗೆಯನುಳಿಸುವುದು; ದ್ರೋಹಮೆಣೆಪರನೆಲ್ಲ ಕಾದು ತಡೆಯುವುದು
ಒಳಗಣಿನ್ ನಾನ್ ಬರ್ಪ ಮುನ್ನಮೇ, ಮಗನಿಲ್ಲಿಗೈತಂದೊಡವನನ್
ಸಂತೈಸಿ ಮೆಲ್ನುಡಿಗಳಿನ್ ಮನೆಗೆ ಕರೆತನ್ನಿ: ಕೇಡಡಸಿದಾಗಳ್,
ಕೇಡಿಂಗೆ ಕೇಡನೇ ಕೂಡಿಸುವುದೆಮ್ಮರಿವು: ಅಂತಾಗಬಾರದು.

ಎಂದು ಹುತಾಶ ತಾಯಿ ನಾಡಿನ ಹಿರಿಯರನ್ನು ಬಿನ್ನಯಿಸಿಕೊಳ್ಳುವಳು.

(೬) ಹೊಸ ಒಲುಮೆ ಹೂವಾಗಿ ಹಣ್ಣಾಗದಾ ಮುನ್ನೆ,
ತನ್ನವನ ಕಳೆದುಕೊಂಡಿನಿಯಳ್
ಬಸವಳಿದು ಸಿರಿಮಂಚದಾ ನಲಿವನುಣ್ಣದೆಯೆ
ತನ್ನೊಳೇ ಬಾಡುವಳು ತನಿಯಳ್.

ಎಂದು, ಕೊರಳನು ಬಿಗಿದು ತಡೆದಿರುವ ಬನ್ನದಿಂದ ಮೇಳದವರು ಹಾಡಿರುವ ನುಡಿಗಳು, 'ಪರ್ಸ'ನಾಡಿಗೆ ಬಂದಿರುವ ಅಳಲಿನ ಆಳವನ್ನು ಸಾರುತಿವೆ.

(೭) ನಿಟ್ಟುಸಿರ ಬಿಟ್ಟುಬಿಟ್ಟಳಲೆಲ್ಲ ಕೊರಳಿಂದ ಹೊರಳಿ ಹೊರಳಿ
ಕೆಟ್ಟ ಕೇಡೆದೆಯೊಳಗೆ ಮಡುಗಟ್ಟಿ, ಕೋಡಿಬಿದ್ದುರುಳಿ, ಉರುಳಿ,
ಉಕ್ಕುಕ್ಕಿ, ಅಳಿ, ಬನ್ನಿ, ಓ, ಓ.

ಎಂದು ಮೇಳದವರು ನಾಡಿನಲ್ಲಿ ಇರುವವರೆಲ್ಲರನು ಕರೆದಿರುವರು.

(೮) ದರ್ಯವುಷನ ಬಿಂಬವನ್ನು ತನಿಗಳಿಂದ ತಣಿಯಿಸಿ ಮಡಿದವರು ತೆರಳಿರುವ ಲೋಕದಿಂದ ಆತನನ್ನು ಮತ್ತೆ ಮರ್ತ್ಯಲೋಕಕೆ ಕರೆತಂದು, ಮಗನ ಹಮ್ಮಿಯಿಂದ ನಾಡಿಗೆ ಬಂದಿರುವ ಬನ್ನವನು ಹುತಾಶ ತಾಯಿ ಬಿತ್ತರಿಸಿ ಅವನಿಗೆ ಹೇಳಿದೊಡನೆಯೆ,

ಕೇಡಿಗೋಡಲೆಳಸಲೊಬ್ಬ, ದೈವವವನ ತಳ್ಳುವುದು.
ಈಗ ನಮಗೆ, ನಮ್ಮ ಕೆಳೆಗೆ ಕೇಡ ಹಳ್ಳ ಹರಿವುದು.



ಮತ್ತೆ ಮುಂದೆ,

"ಆವೊನುಂ ಹೆಬ್ಬಯಕೆಗಲವತ್ತು, ನಿತಿನಿಾರಿ,
ಕಯ್ಗೆ ಬಾರದ ಗುರಿಗೆ ಕಟ್ಟೊಲ್ಮೆಯನ್ ತೆತ್ತು,
ಕಳೆಯಬಾರದು ದೇವರಿತ್ತೊಂದು ಭಾಗ್ಯವನ್,
ಗಗನಕ್ಕೆ ನೆಗೆದಡರುವರ ಹಮ್ಮುಗಳ ಮೆಟ್ಟಿ,
ತಕ್ಕ ಕಾಲದೆ ಕೊಬ್ಬನಿಳಿಸದಿರನಾ ಝ್ಯೂಸ್."

ಎಂದು ದರ್ಯವುಷನುಸುರಿದ ನುಡಿಗಳು ಎಂದೆಂದಿಗೂ ದಿಟವಾದುವುಗಳೇ.

'ಬಾಯ್ಬಲ್ಲಿ'ನಲ್ಲಿರುವ ಆಂಗ್ಲ ಭಾಷೆ ಮಾದರಿಯ ಸೊಗಸಿನ ನುಡಿಯೆಂದು ಬಲ್ಲವರು ಹೇಳುವರು. ಗೀತೆಯಲ್ಲಿರುವ ಸಂಸ್ಕೃತವೂ ಅಂತಹ ಸೊಗಸಿನ ನುಡಿಯೆಂದೇ ಹೇಳಬಹುದು. 'ಶ್ರೀ'ಯವರ ಕನ್ನಡವೂ ಮಾದರಿಯ ಸೊಬಗಿನ ನುಡಿ. "ಬಂಣಬಂಣದ ಬಟ್ಟೆಗಳ ಚಿನ್ನರನ್ನಗಳ ತೊಡವುಗಳ ತೊಡಕು ಬೆಡಗುಗಳಿಂದ ನೋಟಕರ ಕಣ್ಣಿಗೆ ಬೇಟವನು ಮಾಡಲೆಳಸವೆಯ, ಮನಂಗೊಳಿಸುವ ಮನವನ್ನಿಯ ನಲ್ಸೊಬಗೇ ಗ್ರೀಕರ ಸವಿನುಡಿಯ ಹಿರಿಯ ಕುರುಹು" ಎಂದು ಬಲ್ಲವರು ಹೇಳಿರುವರು. ಲೋಕವನು ಹಾರುವ ಸೂಳೆಯ ಪುಸಿಗಾಡಿ ಕಾಣದಂತೆ ಗ್ರೀಕರ ಸಾಹಿತ್ಯದಲ್ಲಿ; ಆನರೆ, ಬಲು ಚೆಲ್ವಿನ ಗರತಿಯರ— ಸೀತೆ ಶಕುಂತಲೆಯಂತಹವರ —ತೋರಿಕೆಯ ಮಾಟವಿನಿತಿಲ್ಲದ ಮನೋಹರತೆಯನು ಮನವಣಿಯ ಕಾಣಬಹುದಂತೆ ಅವರಲ್ಲಿ. 'ಶ್ರೀ'ಯವರ ಬರೆಹಗಳಲ್ಲಿ 'ಸುಲಿದ ಬಾಳೆಯ ಹಣ್ಣಿನಂದ'ದ ಕನ್ನಡವನ್ನು ಓದುಗರು ಮನವಾರೆ ಉಂಡು ತಣಿಯಬಹುದು. 'ಸೊಗಯಿಪ ಸಕ್ಕದಂ' ಬೆರಸದೆಯೆ, 'ಕನ್ನಡದಲ್ಲಿ ಕಬ್ಬಮುಂ ಬಗೆಗೊಳೆ' ಪೇಳುವೆನೆಂದು ಪೂಣ್ದು, 'ಕನ್ನಡದೊಳ್ಪಿನ ನುಡಿ'ಗಳಿಂದ ನಲ್ಗಬ್ಬವನೊಂದನು ಬರೆದು, 'ಕಬ್ಬಿಗರ ಕಾವ'ನೆಂಬ ಬಿರುದನು ಪಡೆದು ಮೊದಲಿಗನಾದವನು ಆಂಡಯ್ಯನು. ಆತನ ಪೂಣ್ಕೆಯನ್ನೇ ಕೈಕೊಂಡು ಮುನ್ನಡೆಯುತಿರುವರು ನಮ್ಮಯ್ಯನವರು. ಇವರ ಬರೆವಣಿಗೆಯ ಬಗೆಯು 'ಪೂಗಳ ಪೊಸಗಂಪಿನೊಳ್ ಪೂರೆದು ತೀಡುವ ತಂಬೆಲರಂತೆ' ನಮ್ಮ ಬಗೆಗಳನು ಸೊಗಯಿಸುತಿರುವಂತೆಯೆ, ಅವರ ಮಾತುಗಾರಿಕೆ ಯಾದರೂ ಕೇಳುವವರ ಕಿವಿಮನಗಳನು ತಣಿಸುವಂತಹದಾಗಿದೆ. ಇಂದಿನ ಕನ್ನಡ ನಾಡಿನಲ್ಲಿ 'ಶ್ರೀ'ಯವರು ನೃಪತುಂಗನು ಹೇಳಿರುವ 'ಮಾತರಿವ'ರಲ್ಲಿ ಮೊದಲಿಗರಾಗಿದ್ದಾರೆ. ಎರಡು ನಾಟಕಗಳಲ್ಲಿಯೂ ಇವರು ಬಳಸಿದ ಬಗೆಬಗೆಯ ಹೊಸ ಮಾದರಿಯ ಛಂದಸ್ಸುಗಳ ಓಟವೂ, ಕುಣಿತವೂ ಬಲು ಚೆಂದವಾಗಿವೆ. "ನಾಡನಾಡೀ ಮೊಳಗಿ ರೋಮಾಂಚಗೊಳ್ಳುವಂತೆ ರಸವನ್ನ, ಇಂಪನ್ನ, ನಯವನ್ನ, ಲಯವನ್ನ, ತಾನವನ್ನ, ಮಾತಿನ ಹರಹನ್ನ, ಛಂದಸ್ಸಿನ ಕುಣಿತವನ್ನ ಲೀಲಾಜಾಲವಾಗಿ ಹೊಮ್ಮಿಸಿ ಹರಯಿಸಿದ ಮಾಟಗಾರ", "ಕಿವಿ ಹೊಗುವುವೇ ತಡ— ಪರವಶ! ಕೊಚ್ಚುವ ಪ್ರವಾಹ: ಇಂದಿಗೂ ನಮ್ಮ ಕರುಳಿನಿಂದ ಬಂದು ನಾಲಗೆಯಲ್ಲಿ ನಲಿಯುವ ಕನ್ನಡ: ಆ ಮಾತು, ಆ ಶೈಲಿ, ಆ ಮಾತ್ರೆಗಳ ವಿನ್ಯಾಸ, ಭಾವ, ರಸ, ವೈಮರೆತ!" ಎಂಬ ಪೊಗಳ್ತೆಯನು 'ಶ್ರೀ'ಯವರು ನಾರಾಯಣಪ್ಪನ ಕಾವ್ಯವನ್ನು ಕುರಿತು ಹೆಮ್ಮೆಯಿಂದ ಮಾಡಿದ್ದಾರೆ. ಈ ಮಾತುಗಳಲ್ಲಿಯ ಹಲವನ್ನು— ಎಲ್ಲವನ್ನೂ— 'ಶ್ರೀ'ಯವರ ಸಾಹಿತ್ಯದ ವಿಷಯವಾಗಿ ನಾವೂ ಹೆಮ್ಮೆಯಿಂದ ಹೇಳಬಹುದು.

**ರಂಗಪ್ಪ ಭೀ. ಪೋದ್ದಾರ**

# ಅಶ್ವತ್ಥಾಮನ್

## ರುದ್ರಾವತಾರಂ ಗಡ! ನೊಸಲೊಳ್ ಕಣ್ ಗಡ!

'ಶ್ರೀ' ಅವರು ಬರೆದಿರುವ ಗ್ರಂಥಗಳಲ್ಲಿ 'ಅಶ್ವತ್ಥಾಮನ್' ಎಂಬ ನಾಟಕ ಕನ್ನಡ ನಾಡಿನಲ್ಲಿ ಉಂಟುಮಾಡಿದಷ್ಟು ಕೋಲಾಹಲವನ್ನು ಬಹುಶಃ ಅವರ ಮತ್ತೆ ಯಾವ ಗ್ರಂಥವೂ ಮಾಡಿಲ್ಲವೆಂದು ಹೇಳಬಹುದು. ಇದಕ್ಕೆ ಮುಖ್ಯ ಕಾರಣ 'ಚಿರಂಜೀವಿ' ಎಂದು ಪುರಾಣನಂಬಿಕೆಯ ಅಶ್ವತ್ಥಾಮ ಆ ನಾಟಕದಲ್ಲಿ ಆತ್ಮಹತ್ಯಮಾಡಿಕೊಂಡಿರುವುದು. ಕೋಲಾಹಲವನ್ನು ಎಬ್ಬಿಸಿದವರು ಕೆಲವರು, ಆ ನಾಟಕವನ್ನು ಓದದೆಯೇ ಆ ಕೋಲಾಹಲದಲ್ಲಿ ಭಾಗಿಗಳಾದವರು ಹಲವರು. ನಾಟಕ ಹಳಗನ್ನಡದಲ್ಲಿದೆ. ಆದುದರಿಂದ ಓದಲಾರದವರಿಗೆ ನೆಪವೂ ಇದೆ.

ಕಾವ್ಯಗಳಲ್ಲಿಯೂ ನಾಟಕಗಳಲ್ಲಿಯೂ ಸತ್ತವರೆಷ್ಟೋ ಮಂದಿ. ಉಳಿದವರೆಷ್ಟೋ ಮಂದಿ. ವಾಲ್ಮೀಕಿ ರಾಮಾಯಣದಲ್ಲಿ ಸೀತಾಪಹರಣಮಾಡಿದ ರಾವಣನೊಬ್ಬನೇ ಅಲ್ಲದೆ ಕುಂಭಕರ್ಣಾದಿಗಳೆಲ್ಲ ಸಾಯುತ್ತಾರೆ. ನಾಗಚಂದ್ರನ ರಾಮಾಯಣವನ್ನು ನೋಡಿದರೆ ರಾವಣನೊಬ್ಬನೇ ಸಾಯುತ್ತಾನೆ; ನಿರಪರಾಧಿಗಳ ಕೊಲೆ ಅಲ್ಲಿ ಆಗುವುದಿಲ್ಲ. ಭಾಸ ಕವಿಯ ಪಾಂಚರಾತ್ರವನ್ನು ನೋಡಿದರೆ ಮಹಾಭಾರತದ ಮಹಾಯುದ್ಧ ಆದಂತೆಯೇ ತೋರುವುದಿಲ್ಲ. ಅಲ್ಲಿ ಎಲ್ಲರೂ ಚಿರಂಜೀವಿಗಳಾಗಿ ಕಾಣುತ್ತಾರೆ. ಇಷ್ಟರಮೇಲೆ ಅಶ್ವತ್ಥಾಮನಿಗೆ ಚಿರಂಜೀವಿ ಪಟ್ಟವೂ, ರುದ್ರಾವತಾರ ಪಟ್ಟವೂ ಹೇಗೆ ಬಂತೆಂಬುದು ದೊಡ್ಡ ಸಮಸ್ಯೆ. ವಿಚಾರಿಸ ಹೋದರೆ ಒಳಗೆ ಹುರುಳಿಲ್ಲ, ತಿರುಳಿಲ್ಲ ಎಂದಾಗುವುದೋ ಏನೋ. ಆ **'ಚಿರಂಜೀವಿ'** ಯಾದ ಅಶ್ವತ್ಥಾಮ ಸತ್ತುಹೋದನೆಂದು ದ್ರೋಣಾಚಾರ್ಯರ ಕಿವಿಗೆ ಬಿದ್ದಾಗ ಅವರು ಅದನ್ನು ಸಹಜವಾಗಿ ನಂಬಿದರೇ ಹೊರತು ಚಿರಂಜೀವಿಯಾದವನು ಹೇಗೆ ಸಾಯುವನೆಂದು ತರ್ಕಿಸಲಿಲ್ಲ. ತಂದೆಯಾದ ದ್ರೋಣಾಚಾರ್ಯರೇ **ಚಿರಂಜೀವಿ** ಯಾದ ಅಶ್ವತ್ಥಾಮ ಸತ್ತನೆಂದು ನಂಬಿ ಶಸ್ತ್ರಸಂನ್ಯಾಸಮಾಡಿರುವಾಗ, ಇತರರು ಅಶ್ವತ್ಥಾಮನ ಪರವಾಗಿ ಶಸ್ತ್ರಾಸ್ತ್ರಗಳನ್ನು ಏತಕ್ಕೆ ಎತ್ತಬೇಕು ಎಂಬ ಪ್ರಶ್ನೆ ಬರುತ್ತದೆ.

ಮಹಾಭಾರತದಲ್ಲಿ ರುದ್ರನೂ ವಿಷ್ಣುವೂ ಪಾಂಡವರ ಕಡೆಯೇ ಇದ್ದಾರೆ. ವಿಷ್ಣುವಿನ ವಿಚಾರ ತಿಳಿದಿದೆ ಇದೇ—ಪಾರ್ಥಸಾರಥಿಯಾಗಿ ಕುಳಿತಿದ್ದಾನೆ. ರುದ್ರನು ಅರ್ಜುನನಿಗೆ ಪಾಶುಪತಾಸ್ತ್ರವನ್ನು ಕರುಣಿಸಿ ಸೈಂಧವನಿಗೆ ನಿರಾಕರಿಸಿದುದೊಂದೇ ಅಲ್ಲ. ಪಾಂಡವರ ಕಡೆಯಿದ್ದು ಯುದ್ಧಮಾಡುತ್ತಿದ್ದ ವಿರಾಟಪುತ್ರನಾದ ಶ್ವೇತನ ಧನುಸ್ಸಿನಲ್ಲಿ* ರುದ್ರನು ಪ್ರತ್ಯಕ್ಷನಾಗಿದ್ದನು. ಆ ಕಾರಣದಿಂದಲೇ ಅವನು ಅಜೇಯನಾಗಿದ್ದನು. ಭೀಷ್ಮರೆದುರಿಗೆ ಶ್ವೇತನು ಯುದ್ಧಕ್ಕೆ ನಿಂತಾಗ ಭೀಷ್ಮರು ನಮಸ್ಕಾರ ಮಾಡಿದರು. ಭೀಷ್ಮರು ತನಗೆ ಶರಣಾಗತರಾದರೆಂದು ತಿಳಿದು ಶ್ವೇತನು ಅವರನ್ನು ಮೂದಲಿಸಲು ನಿನ್ನ ಬಿಲ್ಲಿನಲ್ಲಿರುವ ರುದ್ರನಿಗೆ ನಮಸ್ಕಾರ ಮಾಡಿದೆನು,

---

* ಪಂಪ ಭಾರತ.

ನಿನಗಲ್ಲ ಎಂದು ಭೀಷ್ಮರು ಹೇಳಿದರು. ಶ್ವೇತನು ಜಂಬದಿಂದ ಆ ಬಿಲ್ಲನ್ನು ಬಿಟ್ಟು ಬೇರೊಂದನ್ನು ತೆಗೆದುಕೊಂಡು ಬಾಣಸಂಧಾನ ಮಾಡುತ್ತಿದ್ದಾಗ ಒಂದೇ ಬಾಣದಿಂದ ಶ್ವೇತನ ತಲೆಯನ್ನು ಭೀಷ್ಮರು ಕತ್ತರಿಸಿಹಾಕಿದರು. ಆ ಅಹಂಭಾವ ಆ ದೈವ ತಿರಸ್ಕಾರ ಶ್ವೇತನನ್ನು ಧ್ವಂಸಮಾಡಿದುವು. ದ್ರೋಣಪರ್ವದಲ್ಲಿ ಅರ್ಜುನನು ವ್ಯಾಸರನ್ನು ಕುರಿತು 'ನಾನು ಯುದ್ಧಮಾಡುತ್ತಿದ್ದಾಗ ಒಬ್ಬ ಮಹಾನುಭಾವನು ಮುಂದೆ ಮುಂದೆ ಹೋಗಿ ಮೊದಲೇ ಶತ್ರುಸಂಹಾರ ಮಾಡುತ್ತಿದ್ದಂತೆ ಕಂಡೆ. ಆ ಮಹಾನುಭಾವ ಯಾರು?' ಎಂದು ಕೇಳಲು 'ಆ ಮಹಾನುಭಾವನು ರುದ್ರ, ನಿನ್ನ ಮೇಲಿನ ಅನುಗ್ರಹದಿಂದ ಶತ್ರುಸಂಹಾರ ಮಾಡುತ್ತಿದಾನೆ. ನೀನು ನೆಪಮಾತ್ರ' ಎಂದು ಅವರು ಉತ್ತರ ಕೊಡುತ್ತಾರೆ. ಆದುದರಿಂದ, ಶ್ರೀಕೃಷ್ಣನು ಗೀತೋಪದೇಶಕಾಲದಲ್ಲಿ 'ಅರ್ಜುನ! ನೀನು ನೆಪಮಾತ್ರ, ನಾನು ಆಗಲೇ ಶತ್ರು ಸಂಹಾರಮಾಡಿದ್ದೇನೆ' ಎಂದಹಾಗೆಯೇ ರುದ್ರನ ಕಾರ್ಯವಾದರೂ ಆಗಿದೆ. ಹೀಗೆ ವಿಷ್ಣು ರುದ್ರರಿಬ್ಬರೂ ಒಂದೇ ಕಡೆ— ಪಾಂಡವರ ಕಡೆ— ಇದ್ದು ಕೌರವ ರನ್ನು ಧ್ವಂಸಮಾಡುತಿದ್ದಾಗ, ಕೌರವರ ಕಡೆ ಯಾವ **ರುದ್ರಾವತಾರ**ನಿದ್ದನೆಂದು ಕೇಳಬೇಕಾಗುತ್ತದೆ. ಒಂದುವೇಳೆ ರುದ್ರನೋ ರುದ್ರಾವತಾರನೋ ಪ್ರತಿಪಕ್ಷವನ್ನು ವಹಿಸಿದ್ದರೆ ಮಹಾಭಾರತದ ಯುದ್ಧ ವಿಷ್ಣು ರುದ್ರರ ಯುದ್ಧವಾಗಿ ಪರಿಣಾಮ ಹೊಂದುತ್ತಿತ್ತು; ಜಯಾಪಜಯಗಳನ್ನು ನಿಷ್ಕರ್ಷಿಸಿ ಹೇಳುವುದು ಅಷ್ಟಾದಶ ಪುರಾಣ ಕರ್ತೃಗಳಾದ ವ್ಯಾಸರಿಗೆ ಕಷ್ಟವೇ ಆಗುತ್ತಿತ್ತು.

ಆದುದರಿಂದ ಅಶ್ವತ್ಥಾಮನ **ರುದ್ರಾವತಾರ**ವನ್ನು ಸಮಸ್ಯೆಯಾಗಿಟ್ಟು ಕೊಳ್ಳಬೇಕಾಗಿದೆ. ಮಹಾಭಾರತದಲ್ಲಿ ಅಶ್ವತ್ಥಾಮನ ಪಾತ್ರ ಗಂಭೀರವಾದುದೂ ಅಲ್ಲ, ಪ್ರಬಲವಾದುದೂ ಅಲ್ಲ. ಉದ್ಯೋಗಪರ್ವದಲ್ಲಿ ತನ್ನ ಮಕ್ಕಳಿಗೆ ಯಾರಿಂದ ಅಪಾಯವೊದಗಬಹುದೆಂದು ಕುಂತಿ ಭೀತಿಪಟ್ಟು ಆಲೋಚಿಸಿದಾಗ ಆಕೆಗೆ ಭೀಷ್ಮ, ದ್ರೋಣ ಮತ್ತು ಕರ್ಣ— ಇವರು ಮನಸ್ಸಿಗೆ ಹೊಳೆದರೇ ಹೊರತು ಅಶ್ವತ್ಥಾಮನ ನೆಳಲು ಕೂಡ ಬೀಳಲಿಲ್ಲ. ಆದುದರಿಂದ ಕೌರವರ ಕಡೆ ಮಹಾ ಪ್ರಬಲರಾದವರು ಈ ಮೂವರು. ರುದ್ರಾವತಾರನನ್ನು ಸ್ಮರಿಸದೆಹೋದುದಕ್ಕೆ ಆ ರುದ್ರಾವತಾರತ್ವವಿಲ್ಲದುದೇ ಕಾರಣವಾಗಿರಬೇಕು. ತಂದೆಯಾದ ದ್ರೋಣಾ ಚಾರ್ಯರ ಶಿರಶ್ಛೇದನವನ್ನು ಧೃಷ್ಟದ್ಯುಮ್ನನು ಮಾಡಿದಮೇಲೆ ಮಹಾಕ್ರೋಧ ಸಂತಪ್ತನಾದ ಅಶ್ವತ್ಥಾಮ **ನಾರಾಯಣಾಸ್ತ್ರ**ವನ್ನು ಪ್ರಯೋಗಿಸಿದನು! ಶ್ರೀಕೃಷ್ಣ ಮಾಡಿದ ಉಪಾಯದಿಂದ ಪಾಂಡವರು ಉಳಿದುಕೊಂಡರು— ನಾರಾಯಣಾಸ್ತ್ರ ತಣ್ಣಗಾಯಿತು. 'ನೊಸಲೊಳ್ ಕಣ್ ಗಡ' ಆದ ಅಶ್ವತ್ಥಾಮ ಮುಂದೆ ಏನು ಮಾಡಿದನು? ಕಡೆಯಲ್ಲಿ ದುರ್ಯೋಧನನಿಗೆ ಪ್ರೀತಿಯನ್ನುಂಟುಮಾಡುವುದಕ್ಕೂ ಪಾಂಡವರಮೇಲಿನ ತನ್ನ ಛಲವನ್ನು ತೀರಿಸಿಕೊಳ್ಳುವುದಕ್ಕೂ ಆ ರಾತ್ರಿ ಶತ್ರು ಪಾಳೆಯದಲ್ಲಿ ನುಗ್ಗಿ ಮಲಗಿದ್ದ ಯೋಧರನ್ನು ಕೊಂದು ಪಿಶಾಚರ ವ್ಯಾಪಾರವನ್ನು ನಡಸಿದವನನ್ನು ಮಹಾಪರಾಕ್ರಮಿಯೆಂದೂ ರುದ್ರಾವತಾರನೆಂದೂ ಹೇಗೆ ಹೇಳುವುದು? ತಾನು ಮಾಡಿದ ಪಾಪಕೃತ್ಯಕ್ಕೆ ಪ್ರಾಯಶ್ಚಿತ್ತರೂಪವಾಗಿ ತಪಸ್ಸು ಮಾಡಬೇಕೆಂದು ಹೊರಟರೆ ಆ ರುದ್ರಾವತಾರನನ್ನು ಭೀಮನು ಬೆನ್ನಟ್ಟಿಹೋದನು.

ಕಡೆಗೆ ಕೃಷ್ಣಾರ್ಜುನರೂ ಅಲ್ಲಿ ಸೇರಿದರು. ಅಶ್ವತ್ಥಾಮನಿಗಾದ ಪ್ರಾಯಶ್ಚಿತ್ತ ವೇನು? ಹಿಂದೆ ದ್ರೌಪದೀ ಮೋಹದಿಂದ ಬಂದ ಸೈಂಧವನಿಗೆ ತಲೆಯಲ್ಲಿ ಮೂರು ಪಟ್ಟೆಗಳನ್ನು ಕೆತ್ತಿ ಕಳುಹಿದಂತೆ, ದ್ರೌಪದೀ ಪುತ್ರರನ್ನು ಕೊಂದ ಅಶ್ವತ್ಥಾಮನಿಗೆ ಇಂದು ಶಿರೋರತ್ನವನ್ನು ಕಿತ್ತುಕೊಂಡು ಅಪಮಾನಗೊಳಿಸಿ, ತಲೆಯ ಹುಣ್ಣು ಬೇಗ ಆರದಂತೆಯೂ, ಮೂರು ಸಾಹಿರ ವರ್ಷಗಳ ಕಾಲ ಸುಮ್ಮನೆ ದೇಶ ದೇಶ ಸುತ್ತುತ್ತಿರುವಂತೆಯೂ ಶಪಿಸಿ ಓಡಿಸಿಬಿಟ್ಟರು. ಇನ್ನು ಇದಕ್ಕಿಂತ ಅಪಮಾನ ವುಂಟೇ? ಆ ತ್ರಿಪುರಧ್ವಂಸಿಯೆಲ್ಲಿ? ಕಾಮಸಂಹಾರನೆಲ್ಲಿ? ಈ ರುದ್ರಾವತಾರಂ ಗಡ – ನೊಸಲೊಳ್ ಕಣ್ ಗಡ – ಅಶ್ವತ್ಥಾಮನೆಲ್ಲಿ?

ಪುರಾಣಗಳ, ಸಂಪ್ರದಾಯ ನಂಬಿಕೆಗಳ ಮಾತು ಹೇಗಾದರೂ ಇರಲಿ. ಕವಿಗೆ ಅವುಗಳನ್ನು ನಂಬಿ ಬರೆಯುವ ಅಥವಾ ಮಾರ್ಪಡಿಸಿ ಬರೆಯುವ ಸ್ವಾತಂತ್ರ್ಯ ಇದ್ದೇ ಇರುತ್ತದೆ. 'ಶ್ರೀ' ಅವರು ಒಂದು ದೃಷ್ಟಿಯಿಂದ ಬರೆದಿದ್ದಾರೆ; ಬೇರೆ ಯವರು ಮತ್ತೊಂದು ದೃಷ್ಟಿಯಿಂದ ಬರೆಯಬಹುದು. ಗದಾಯುದ್ಧ ನಾಟಕದಲ್ಲಿ ದುರ್ಯೋಧನನಿಗಾದ ಅನ್ಯಾಯವನ್ನು ರನ್ನನ ಮಾತುಗಳಿಂದ ತೋರಿಸಿ ಕನ್ನಡದ ಒಂದು ಉದ್ಗ್ರಂಥವನ್ನು ಕನ್ನಡಿಗರಿಗೆ ಚೆನ್ನಾಗಿ ಪರಿಚಯಮಾಡಿಕೊಟ್ಟರು. ಅಲ್ಲಿ ಸ್ವಾಮಿ ಕಾರ್ಯಧುರಂಧರನಾಗಿ ಅಶ್ವತ್ಥಾಮ ಮಹಾಪಾಪಕಾರ್ಯವನ್ನು ಮಾಡಿದನು. ಆ ವೀರನು ಅದನ್ನೇಕೆ ಮಾಡಿದನು? ಅದರ ಪರಿಣಾಮ ಅವನ ಮನಸ್ಸಿನಮೇಲೆ ಏನಾಯಿತು? ಕಪಟನಾಟಕ ಸೂತ್ರಧಾರನೆಂದೂ, ತಂತ್ರಿ ಯೆಂದೂ ಪ್ರಖ್ಯಾತನಾದ ಶ್ರೀಕೃಷ್ಣನ ಹೃದಯ ಎಂತಹುದು? ಎಂಬುದನ್ನು ತೋರಿಸುವುದಕ್ಕೆ ಅಶ್ವತ್ಥಾಮನ್ ನಾಟಕದಲ್ಲಿ 'ಶ್ರೀ' ಅವರು ಪ್ರಯತ್ನಿಸಿದರೆಂದು ಹೇಳಬಹುದು. ಆದುದರಿಂದ ಈ ಎರಡು ನಾಟಕಗಳೂ ಒಂದೇ ನಾಟಕದ ಪೂರ್ವಾರ್ಧ ಮತ್ತು ಉತ್ತರಾರ್ಧಗಳೆಂದು ಇಟ್ಟುಕೊಳ್ಳಬೇಕು.

ರಾಮಾಯಣ, ಮಹಾಭಾರತಗಳಲ್ಲಿ ದೇವರುಗಳ, ದೇವತೆಗಳ ಕೈವಾಡ ಇದ್ದೇ ಇದೆ. 'As flies to wanton boys are we to the gods, they kill us for their sport' ಎಂಬುದು ಗ್ರೀಕ್ ಮತ್ತು ರೋಮನ್ ಪುರಾಣಗಳ ಪ್ರಭಾವ ದಿಂದ ಷೇಕ್ಸ್‌ಪಿಯರ್ ಮಾತ್ರ ಹೇಳಿದನೆಂದಲ್ಲ, ಅದು ನಮ್ಮ ಇತಿಹಾಸಗಳಲ್ಲೂ ಕಂಡುಬರುತ್ತದೆ. ರಾಮಾಯಣದಲ್ಲಿ ಸೂರ್ಯಪುತ್ರನಾದ ಸುಗ್ರೀವನು ಇಂದ್ರ ಪುತ್ರನಾದ ವಾಲಿಯನ್ನು ಸಂಹರಿಸಿದನು. ಮಹಾಭಾರತದಲ್ಲಿ ಇಂದ್ರಪುತ್ರನಾದ ಅರ್ಜುನನು ಸೂರ್ಯಪುತ್ರನಾದ ಕರ್ಣನನ್ನು ಸಂಹಾರಮಾಡಿದನು. ತನ್ನ ಮಗನನ್ನು ಉಳಿಸುವುದಕ್ಕಾಗಿ ಇಂದ್ರನು ಕರ್ಣನಿಗೆ ಮಾಡಿದ ಮೋಸವನ್ನು ಯಾರು ಮರೆಯ ಬಲ್ಲರು? ದೇವತೆಗಳ ಪ್ರೇಮಾದರಗಳೂ ದ್ವೇಷಾಸೂಯೆಗಳೂ ಹೇಗೂ ಮಾನವನಿಗೆ ಮೃತ್ಯು. ಅವರು ಮಾಡುವುದನ್ನೆಲ್ಲ ಒಪ್ಪಿಕೊಂಡು, ಅವರು ಕೊಡುವುದನ್ನೆಲ್ಲ ಸಹಿಸಿಕೊಂಡು, ವಿಧೇಯರಾಗಿದ್ದರೆ ಮನುಷ್ಯನ ಬಾಳು ಒಂದು ಬಾಳು, ಹಾಗಲ್ಲದೆ ಮನುಷ್ಯನಾದವನು ಸ್ವಲ್ಪ ಸ್ವಾತಂತ್ರ್ಯವಹಿಸಿ ಆ ದೇವರುಗಳ ನ್ಯಾಯಾನ್ಯಾಯ ಗಳನ್ನು ವಿಮರ್ಶಿಸತೊಡಗುವುದಾದರೆ ತನ್ನದೂ ಒಂದು ಶಕ್ತಿಯಿದೆಯೆಂದು ಮೆರೆಯುವುದಾದರೆ ಆ ಮನುಷ್ಯನ ಪತನ ಖಂಡಿತ. ದೇವರು ಈ ಮನುಷ್ಯ

ಸ್ವಾತಂತ್ರ್ಯವನ್ನೂ ಶಕ್ತಿಯನ್ನೂ ಸಹಿಸುವುದಿಲ್ಲ. ಗದಾಯುದ್ಧದಲ್ಲಿ ತನ್ನ ಸ್ವಾಮಿಯಾದ ದುರ್ಯೋಧನನಿಗೆ ಆದ ಅನ್ಯಾಯವನ್ನು ಅಶ್ವತ್ಥಾಮ ನೋಡಿದನು. ಮಹಾಭಾರತದಲ್ಲಿ ಕೌರವರಿಗೆ ಶತ್ರುಗಳು ಪಾಂಡವರಲ್ಲ, ಶ್ರೀ ಕೃಷ್ಣ ಪರಮಶತ್ರು. ಕೌರವರಿಗೆ ಕೇಡಾದದ್ದು ಶ್ರೀ ಕೃಷ್ಣನಿಂದ. ಈಗಲೂ ಶ್ರೀ ಕೃಷ್ಣನಿಂದಲೇ ದುರ್ಯೋಧನನು ಸತ್ತುಬಿದ್ದದ್ದು. ಸ್ವಾಮಿಯಾದ ದುರ್ಯೋಧನನು ತನಗೆ ಹಿಂದೆ ಸೇನಾಧಿಪತ್ಯವನ್ನು ಕೊಡದೆ ಕರ್ಣನಿಗೆ ಕೊಟ್ಟು, ತನ್ನನ್ನು ತಿರಸ್ಕರಿಸಿದ್ದರೂ, ಸ್ವಾಮಿನಿಷ್ಠೆಯುಳ್ಳ ಅಶ್ವತ್ಥಾಮ ಪಾಂಡವರನ್ನು ಕೊಂದು ಅವರ ತಲೆಗಳನ್ನು ತಂದು ತೋರುವೆನೆಂದು ಮಾತುಕೊಟ್ಟು ರುದ್ರನನ್ನು ವಿಶೇಷವಾಗಿ ಆರಾಧಿಸಿ ರಾತ್ರಿಯಲ್ಲಿ ಪಾಳಯವನ್ನು ಹೊಕ್ಕರೆ, ರುದ್ರನು ಮಾಡಿದ ಸಹಾಯವಾದರೂ ಏನು? ತನಗೆ ಪಾಪರಾಶಿಯನ್ನು ತಂದುಹಾಕಿದ್ದು. ತನ್ನ ಆರಾಧ್ಯದೇವನೇ ಹೀಗೆ ಅನ್ಯಾಯಮಾಡಿದರೆ ಇನ್ನು ಯಾವ ದೇವರನ್ನು ನಂಬುವುದು, ಯಾವ ದೇವರನ್ನು ಕುರಿತು ತಪಸ್ಸು ಮಾಡುವುದು?

"ದೈವಂ
ತಪ್ಪಾಗಿ ನಡಸುವೊಡೆ, ಕಲಿ ಎಡಪುವನ್, ಪೇಡಿ ಬರ್ದುಕುವನ್, ನಗುವನ್.—
ಈಗಳ್ ಏನ್‌ಗೆಯ್ವೆನ್? ಕಂಡಂತೆ, ದೇವರ್ಕಳ್ ಒಲ್ಲದನ್; ಬೀರರ್
ನಗುವ ಪಾಡಾದವನ್; ಈ ಎಲ್ಲಮನ್ ಪೊಱುವ ತಾಯ್ ಮುಟ್ಟೆ ಮುನಿವನ್."

ಭಾರತದ ಅಶ್ವತ್ಥಾಮ ವೀರನಹುದು, ಸರ್ವಾಸ್ತ್ರ ಸಂಪನ್ನನೂ ಅಹುದು. ಆದರೆ ದುರಹಂಕಾರಿ, ಪೂರ್ಣಸ್ವಾಭಿಮಾನಿ. ರುದ್ರಾವತಾರನೆಂದು ತನ್ನನ್ನು ತಾನು ತಿಳಿದನೊ ಏನೊ! ಪರಿಣಾಮವಾಗಿ ರುದ್ರನ ಒಲುಮೆಯೂ ಇಲ್ಲದೆ, ರುದ್ರನ ಕೋಪವೇ ಅವನ ಮೇಲಿದ್ದಿರಬೇಕೆಂದು ತೋರುತ್ತದೆ. ಅದಕ್ಕೆ ನಿಜವಾದ ಕಾರಣ ನಮಗೆ ಗೊತ್ತಿಲ್ಲ. ಅಶ್ವತ್ಥಾಮನ್ ನಾಟಕದಲ್ಲಿ ಹೇಳಿರುವುದನ್ನು ನೋಡೋಣ:

"ಏಗಳ್ ಮನುಷ್ಯನ್
ತಾನ್ ಮನುಷ್ಯನೆ ಎಂಬುದನ್ ಮಱೆತು, ಕಡುಕೊರ್ಬಿ, ಒಳ್ಳಿತರ್ಕಿಲ್ಲನ್,
ಆಗಳೇ ದೇವರ್ಕಳ್ ಅವನ ಬಾೞ್ಗೆ ಡರೊಡ್ಡಿ ಕೆಬಗುರುಳೆ ಪೊಯ್ವರ್.
ಎಂದುಂ ಅಶ್ವತ್ಥಾಮನ್ ಈ ಪಾಂಗೆ! ಎಳವೆಯೊಳೆ, ಪರಸುತ್ತೆ ತಂದೆ
ಬಿಲ್‌ಜಾಣನಾದೆ, ಗೆಲ್: ಮೊದಲ್ ಎೞಗಿ ದೇವತೆಗೆ, ಪೌರುಷದೆ ನೀನ್ ಗೆಲ್—
ಅಯ್ಯನ್ ಇಂತೆನೆ, ಸೊರ್ಕಿ, ಮಗನ್ ಎನ್ದನ್—ದೇವತೆಯ ಬಲಮ್ ಇರ್ದೊಡಯ್ಯ,
ಪೇಡಿಯುಂ ಗೆಲ್ದಪನ್. ಅವರ್ಗಳ ನೆರಂಬಾರದಾ ಗೆಲ್ಲವೆಣ್ಣ
ಮುಂದಲೆಯನ್ ಈೞ್ವೆನ್! ಏನ್ ಗರ್ಬಂ! ಇನ್ನೊರ್ಮೆ ಮಹದೇವ ರುದ್ರನ್
ಯುದ್ಧದೊಳ್ ಮೇಲಿರ್ದು, ಇತ್ತಪಗೆ, ಇತ್ತ ಪೋಯ್, ಕೊಳ್ ಗೆಲವನ್ ಇತ್ತೆನ್,
ಎಂದುರ್ಬಿಸುತ್ತೆ ಬರೆ, ಸಿಡುಕಿನಿಂದಾಳ್ ಆಡಬಾರದುದನ್ ಆಡಿ,
ಎಲೆ ರುದ್ರ, ಅದೊ ಅವರ ಬೆಂಬಲಂ ಪೋಗು; ಅಶ್ವತ್ಥಾಮನ್ ಇರ್ದ
ಮೊನೆ ಮುಱಿಯದೆಂದನ್. ಇಂತಪ್ಪ ನುಡಿಗಳಿನ್, ಆಳಾಗಿ ಪುಟ್ಟಿ
ಆಳ್ಗೆ ಮೀಱಿದ ಪೆರ್ಮೆ ಬಗೆಗಳಿನ್, ರುದ್ರನ ಕನಲ್ಕೆಯನ್ ತಲೆಗೆ
ತಂದುಕೊಂಡನ್."



ಆದುದರಿಂದ ರುದ್ರನ ಕನಲ್ಕೆ ಅಶ್ವತ್ಥಾಮನನ್ನು ಆಹುತಿ ತೆಗೆದುಕೊಂಡಲ್ಲದೆ ಬಿಡದು. ಅಶ್ವತ್ಥಾಮನು ಕೂಡ "ಅಱಿಯೆಯಾ ದೇವತೆಗಮೆನಗಮ್ ಇರ್ದಾ ಋಣಂ ಪಱಿದುಪ್ಪೋಯ್ತೆಂಬುದನ್" ಎಂಬ ಛಲಸಾಧಕನು. ಭಾರ್ಗವಿ "ಸಾಲ್ಗುಂ ಈ ಕ್ಷಾತ್ರಂ, ತವರಡವಿ ನೆೞಲೊಳ್ ಸಮುಜುಪಂ ಮುಱಿದೆಱಕೆಯಾತ್ಮಮುನ್, ತಪಮೆಸಗಿ" ಎಂದು ಸಮಾಧಾನ ಹೇಳುವಾಗ, ಮಹಾಭಾರತದಲ್ಲಿ ಬರುವ ತಪಸ್ಸಿನ ಮಾತು ಬಾರದೇ ಇಲ್ಲ. ಆದರೆ ಅಶ್ವತ್ಥಾಮ 'ತಪಂ! ಏನ್ ತಪಂ! ಏತಱ್ಕೆ? ಆರ್ಗೆ?" ಎಂದು ಜರೆದುಬಿಡುತ್ತಾನೆ. ಈ ತಿರಸ್ಕಾರ ಹೆಚ್ಚಿದಷ್ಟೂ ರುದ್ರನ ಕನಲ್ಕೆಯೂ ಹೆಚ್ಚುತ್ತದೆ. "ದೇವರ್ ಇತ್ತಂತೆಯೇ ನಾಮ್ ನಗುವುದಟ್ವುದು" ಎಂದು ಮೋಳನಾಯಕನು ಹೇಳಿದ ತತ್ತ್ವವನ್ನು ಒಪ್ಪಿಕೊಂಡರೆ ಅಶ್ವತ್ಥಾಮನ ಆತ್ಮಹತ್ಯಾಪ್ರಕರಣಕ್ಕೆ ರುದ್ರನೇ ಕಾರಣನಾಗುತ್ತಾನೆ.

ಮಹಾಭಾರತದಲ್ಲಿ ಆತ್ಮಹತ್ಯಾಪ್ರಕರಣವಿಲ್ಲ. ಏಜಾಕ್ಸ್‌ನಾಟಕದಲ್ಲಿ ಅಶ್ವತ್ಥಾಮಾದಿ ಹೆಸರುಗಳಿಲ್ಲ. ಆದರೆ ಆ ನಾಟಕದ ಕಥಾವಸ್ತುವಿಗೆ ನಮಗೆ ಪರಿಚಿತವಾದ ಭಾರತವೀರರ ಹೆಸರುಗಳನ್ನು ಜೋಡಿಸಿದರೆ ಏಜಾಕ್ಸ್ ನಾಟಕ ನಮ್ಮದೆಂದೇ, ಭಾರತದ ಒಂದು ಪ್ರಕರಣವೆಂದೇ ಭಾಸವಾಗುವಷ್ಟರ ಮಟ್ಟಿಗೆ ಕಥಾಸಾಮ್ಯವಿರುವುದು ಆಶ್ಚರ್ಯವಲ್ಲವೆ? ಇದನ್ನು 'ಶ್ರೀ' ಅವರು ತೋರಿಸಿಕೊಟ್ಟದ್ದರಿಂದಲೇ ಆ ಕೋಲಾಹಲ ನಾಡಿನಲ್ಲೆಲ್ಲ ವ್ಯಾಪಿಸಿತು. ಅಶ್ವತ್ಥಾಮನ್ ನಾಟಕದ ಬಹು ಭಾಗ ಏಜಾಕ್ಸ್ ನಾಟಕದ ಬಹು ಭಾಗದ ಭಾಷಾಂತರ. ಗ್ರೀಕ್ ನಾಟಕಗಳಲ್ಲಿ ಕೆಲವು ಕಥಾ ಸಂದರ್ಭಗಳು ನಮ್ಮ ಪುರಾಣೇತಿಹಾಸಗಳ ಕಥಾ ಸಂದರ್ಭಗಳಂತೆಯೇ ಇರುವುದನ್ನು ನೋಡಬೇಕು. ಹೀಗೆ ಏಕಿವೆ ಎಂಬುದನ್ನು ಆಲೋಚನೆಮಾಡಬೇಕು, ಗ್ರೀಕರಿಗೂ ಭಾರತೀಯರಿಗೂ ಕ್ರಿಸ್ತಪೂರ್ವದಲ್ಲಿಯೇ ಸಾಂಸ್ಕೃತಿಕ ಸಂಬಂಧ ನಿಕಟವಾಗಿ ಬೆಳೆದುಬಂದುದರ ಪರಿಣಾಮ ಏನಾಗಿರಬಹುದು ಎಂಬುದನ್ನು ತರ್ಕಿಸಬೇಕು—ಎಂದು 'ಶ್ರೀ'ಅವರು ಹೇಳುತ್ತಾರೆ. ಅವರು ಬಾಯಿ ಬಿಟ್ಟು ಅಷ್ಟು ಮಾತುಗಳಲ್ಲಿ ಹೇಳದಿದ್ದರೂ ಅಶ್ವತ್ಥಾಮನ್ ನಾಟಕದ ಮೂಲಕ ಅವನ್ನು ಸೂಚಿಸಿದ್ದಾರೆ. 'ಏಜಾಕ್ಸ್ ನಾಟಕ' ಎಂದು ಹೆಸರಿಟ್ಟು ಅದರಲ್ಲಿರುವ ಮೂಲ ಪಾತ್ರಗಳ ಹೆಸರುಗಳನ್ನು ಹಾಗೆಯೇ ಉಪಯೋಗಿಸಿಕೊಂಡು ಕನ್ನಡದಲ್ಲಿ ನಾಟಕವನ್ನು ಬರೆದಿದ್ದರೆ, ಸುರೇಂದ್ರಬಾಬು, ನಳಿನೀರಂಜನ, ರಾಧಾಮಣಿ, ಸೂರ್ಯಮುಖಿ ಮೊದಲಾದ ಬಂಗಾಳಿ ಹೆಸರುಗಳ ಬಂಗಾಳಿಯ ಕಾದಂಬರಿಗಳನ್ನು ಓದಿದಷ್ಟು ಉತ್ಸುಕತೆಯಿಂದ ಏಜಾಕ್ಸ್ ನಾಟಕವನ್ನೂ ಓದುತ್ತಿದ್ದೆವೆಂದು ಹೇಳುವುದು ಕಷ್ಟ. ಆದುದರಿಂದ ಕಥಾ ಸಂದರ್ಭ ನಮ್ಮದರ ಹಾಗಿದೆ, ಪಾತ್ರಗಳೂ ನಮ್ಮವರಾಗಿರಲಿ ಎಂದು ಅಶ್ವತ್ಥಾಮನ್ ಎಂಬ ಹೆಸರಿನಿಂದ ನಾಟಕವನ್ನು ಭಾಷಾಂತರಿಸಿದರೆ, ಅದರಿಂದ ಒಂದು ದೊಡ್ಡ ಅವಾಂತರವೆದ್ದು, 'ಶ್ರೀ' ಅವರ ಮನೋಭಿಪ್ರಾಯವನ್ನು ಆ ಅವಾಂತರ ಮುಳುಗಿಸಿಬಿಟ್ಟದ್ದು ಒಂದು ದುರದೃಷ್ಟ. ಆದುದರಿಂದ ಅಶ್ವತ್ಥಾಮನ್ ನಾಟಕದಲ್ಲಿ ಅಶ್ವತ್ಥಾಮನ ಚಿರಂಜೀವಿತ್ವಕ್ಕೆ ಲೋಪಬಂದದ್ದು ಮುಖ್ಯವಲ್ಲ. ಒಂದು ಕಡೆ ದೇವತೆಗಳ ಪ್ರಭಾವ, ಮತ್ತೊಂದು ಕಡೆ ಪಿಷ್ಣು ರುದ್ರರ ಸಂಬಂಧ, ರುದ್ರಾವತಾರನಲ್ಲಿಯೇ ರುದ್ರನ ಕನಲ್ಕೆ— ಇವು

ಮಹಾಭಾರತದಲ್ಲಿ ಕಂಡಂತೆಯೇ ಮತ್ತೊಂದು ಪುರಾತನ ಜನಾಂಗದ ಸಾಹಿತ್ಯ ದಲ್ಲಿಯೂ ಕಂಡುಬರುತ್ತವೆ ಎಂಬುವನ್ನು ನೋಡಬೇಕು. ಮೇಳನಾಯಕನು

"ಓ ಕೃಷ್ಣ, ಧರ್ಮದೇವತೆಯೆ ನೀನ್! ಅಱಿಯದರ್
ದೂಱುವರ್. ನಾಮಿಂದು ಸತ್ಯಮನ್ ಕಂಡೊವು"

ಎಂದು ಶ್ರೀಕೃಷ್ಣನ ವಿಚಾರದಲ್ಲಿ ಹೇಳಿರುವುದು 'ಶ್ರೀ' ಅವರ ಅಭಿಪ್ರಾಯ ವೆಂದೇ ನಮಗೆ ತೋರುತ್ತದೆ. ಶ್ರೀ ಕೃಷ್ಣನನ್ನು ಸರಿಯಾಗಿ ಅರ್ಥಮಾಡಿಕೊಂಡು, ಆತನ ನೈಜಸ್ವರೂಪವನ್ನು ನಮ್ಮ ಮುಂದಿಟ್ಟಿರುವುದು ವೈದಿಕರಿಗೂ ಮೆಚ್ಚಿಗೆ ಯಾಗುವುದೆಂದು ನಾವು ತಿಳಿಯುತ್ತೇವೆ. ಅಶ್ವತ್ಥಾಮನಾದರೋ ಸುಮ್ಮನೆ ಕೊರಲಿಗೆ ಉರುಲುಹಾಕಿಕೊಂಡ ಹೇಡಿಯಲ್ಲ.

"ವೀರರೊಳ್ ವೀರಂಗೆ, ರುದ್ರಾವತಾರಂಗೆ,
ರುದ್ರನೊಳ್ ಪೋರ್ದಂಗೆ, ರುದ್ರನೊಳೆ ಸೇರ್ದಂಗೆ,
ಸೇವೆಯನ್ ಮಾಳ್ಪಂ,
ಪೂಜೆಯನ್ ಮಾಳ್ಪಂ."

ಎಂಬ ಏಕಲವ್ಯನ ಮಾತುಗಳು 'ಶ್ರೀ' ಅವರು ಅಶ್ವತ್ಥಾಮನ ವಿಷಯದಲ್ಲಿ ಇಟ್ಟಿರುವ ಗೌರವವನ್ನು ತೋರಿಸುತ್ತವೆಯೆಂದು ನಾವು ತಿಳಿಯುತ್ತೇವೆ. ಕನ್ನಡ ನಾಡಿನ ಪ್ರೇಮವನ್ನು ಪುಟ ಪುಟದಲ್ಲಿಯೂ ಸೂಸಿ, ಕನ್ನಡ ನಾಡಿನ ವೀರರತ್ನ ವನ್ನಾಗಿ ಅಶ್ವತ್ಥಾಮನನ್ನು ಚಿತ್ರಿಸಿದ 'ಶ್ರೀ' ಅವರು ಆ ಅಶ್ವತ್ಥಾಮನಿಗೆ ಕಳಂಕ ವನ್ನು ಹಚ್ಚಿದರೆಂದು ಹೇಳುವುದು ಸಾಧುವಲ್ಲ. ಸಾಹಿತ್ಯದಲ್ಲಿ ಅದೊಂದು ಪ್ರಯೋಗ. ಸಾಹಿತ್ಯದೃಷ್ಟಿಯಿಂದ ಅದನ್ನು ನೋಡಬೇಕು, ಪುರಾಣ ದೃಷ್ಟಿಯನ್ನು ಬಿಡಬೇಕು; ಆ ನಾಟಕದ ದೆಸೆಯಿಂದ ಏಳುವ ಸಮಸ್ಯೆಗಳನ್ನು ವಿಚಾರ ಮಾಡಬೇಕು.

"ಇಂದೇನೊ, ಮುಂದೇನೊ, ಮುನ್ನೆ ಆಳ್ ಕಾಣನ್.
ಬಂದುದನೆ ಕೊಂಡುಂಡು ತಾಳ್ದವನೆ ಜಾಣನ್.
ರುದ್ರನ್ ಒಲ್ದೊಡೆ ಉಱುವು,
ಒಲ್ಲದೊಡೆ ಒಡನಱುವು;
ತಟ್ಟಿ ನಡೆದೊಡೆ ರುದ್ರನ್ ಒಲ್ಲದೆಯೆ ಮಾಣನ್,
ಆಳವಱಿತು ನಡೆಯೆ ಶಿವನ್ ಒಲ್ಲದೆಯೆ ಮಾಣನ್"

ಎಂಬುದನ್ನು ಮನನಮಾಡಬೇಕು.

ಎಂ. ಆರ್. ಶ್ರೀನಿವಾಸಮೂರ್ತಿ

# ಕನ್ನಡವನ್ನುದ್ಧರಿಸಿದ ಪುಣ್ಯಪುರುಷರು

ಧಾರವಾಡ— ನನ್ನ ನಚ್ಚು ಮೆಚ್ಚಿನ ಧಾರವಾಡ— ಚಿಕ್ಕಂದಿನಲ್ಲಿ ನಾನು ಚಿಣಿಕೋಲು ಚೆಂಡು ಬೊಗರಿಗಳನ್ನಾಡುತ್ತ ನಲಿದಾಡಿದ ಧಾರವಾಡ— ಬರವಣಿಗೆಯ ಅಕ್ಷರಗಳನ್ನು ಮೊದಲಿಗೆ ಕಲಿತು ಮುಂದೆ ನಾಲ್ಕನೆಯ ವರ್ಗದಲ್ಲಿ ಮಹಾರಾಷ್ಟ್ರದ ಚರಿತ್ರೆಯನ್ನೇ ಕನ್ನಡದಲ್ಲಿ ಓದಿ ದೊಡ್ಡವನಾದ ಧಾರವಾಡ— ಇಂಗ್ಲಿಷ ಶಾಲೆಯಲ್ಲಿ ಅಭ್ಯಾಸ ಮಾಡುವಾಗ ಇಂಗ್ಲಿಷವನ್ನೂ ಜೊತೆಗೆ ನಸು ತುಸು ಸಂಸ್ಕೃತವನ್ನೂ ಗುರುಮುಖದಿಂದ ಅಧ್ಯಯನ ಮಾಡಿ ನಾನು "ಮರಪಂಡಿತ"ನಾದ ಧಾರವಾಡ— ಇಲ್ಲಿ ಆ ಕಾಲದಲ್ಲಿ ನಡೆಯುತ್ತಿದ್ದ ಸಭೆ ಪರಿಷತ್ತುಗಳಲ್ಲೆಲ್ಲ ಮರಾಠೀ ಭಾಷೆಯ ಭಾಷಣಗಳ ಸುರಿಮಳೆಯು ಕೇಸರಿಡುತ್ತಿದ್ದ ಧಾರವಾಡ— ಇಂದು, ಹೊಸಗನ್ನಡದ ಮೈಸಿರಿಯು ತುಂಬಾ ಬೆಳೆಯುತ್ತ ನಡೆದಿರುವ ಈ ಹೊಸಗಾಲದಲ್ಲಿ, ಕನ್ನಡ ನಾಡಿನ ಬಡಗು ಸೀಮೆಯಲ್ಲೆಲ್ಲ ಕನ್ನಡ ಸಂಸ್ಕೃತಿಯ ಗಂಡುಮೆಟ್ಟೆಂಬ ಹೆಸರು ಹೊಂದಿದೆ; ಕನ್ನಡ "ಸರಸತಿಯ ನಿಲುದಾಣ"ವೆಂಬ ಕೀರ್ತಿವೆತ್ತಿದೆ. ನನ್ನ ಜೀವಮಾನದೊಳಗಿನ ಅರುವತ್ತು ವರುಷಗಳನ್ನು ಧಾರವಾಡದಲ್ಲಿಯೇ ಬಹುಶಃ ಕಳೆಯುವ ಪ್ರಸಂಗವು ಬಂದ ನನಗೆ ಇಲ್ಲಿ ನಡೆದುಹೋದ ಕನ್ನಡದ ಬಗ್ಗು ತಗ್ಗು ಕುಗ್ಗು ಮುಗ್ಗುಗಳೆಲ್ಲ ಕಣ್ಣಿಗೆ ಕಟ್ಟಿರುವುದರಿಂದ ಇಂದು ಇಲ್ಲಿ ಕಾಣುವ ಅದರ ಸುಗ್ಗಿಯ ಸೌಭಾಗ್ಯವು ಸಗ್ಗದ ಸುಖದಂತೆ ಹಿಗ್ಗಿನ ಹೆಚ್ಚಳವಾಗಿದೆ. ಸಾವಿರ ವರುಷಗಳಿಂದಲೂ ನಮ್ಮ ಹಿರಿಯ ಕನ್ನಡ ಕವಿಗಳು "ತಿರುಳುಗನ್ನಡ ನಾಡು" ಎಂದು ಬಣ್ಣಿಸಿರುವ ಪ್ರದೇಶದೊಳಗಿನ ನಡುವೂರಾಗಿ ನಿಂತಿರುವ ಈ ನಮ್ಮ ಧಾರವಾಡವು ಅಂದಿನಿಂದ ಇಂದಿನವರೆಗೆ ಒಂದೇಸವನೆ ಕನ್ನಡದ ಹಿರಿಮೆಯನ್ನು ಕಾಯ್ದು ಹಿಡಿದುಕೊಂಡೇ ಬಂದಿರುವುದೆಂದು ಮಾತ್ರ ಯಾರೂ ತಿಳಿಯಕೂಡದು. ಇಂದು ತಿಳಿಯುತ್ತಿರುವಂತೆ ಉತ್ತರದ ಸಿಂಧುವಿನ ನೆರೆಹೊರೆಯಿಂದಲೋ ನಡುವಣ ವಿಂಧ್ಯಾದ್ರಿ ನರ್ಮದೆಯ ಎಡಬಲದಿಂದಲೋ ಎಲ್ಲಿಂದಲೋ ಎಂದಿನಿಂದಲೋ ಕೆಳಕ್ಕೆ ಇಳಿಯುತ್ತ ಬಂದಿರುವ ನಮ್ಮ ಕನ್ನಡ ನುಡಿಯು ಗೋದಾವರಿಯ ಅಕ್ಕಪಕ್ಕಗಳಿಂದಲೂ ದೂರದೂಡಲ್ಪಟ್ಟು ಇಂದಿಗೆ ಸುಮಸುಮಾರು ಕೃಷ್ಣಾ ಭೀಮಾ ನದಿಗಳ ತೆಂಕಣ ದಿಕ್ಕಿನಲ್ಲಿ ಜೀವ ಹಿಡಿದುಕೊಂಡು ನಿಂತಿದೆ. ಅದು ಹೀಗೆ ನಿಲ್ಲುವುದಕ್ಕೆ ಅದರ ಕೆಲವು ಜನ ಕೆಚ್ಚೆದೆಯ ಬಂಟರು ಕಳೆದ ೬೦ ವರ್ಷಗಳಲ್ಲಿ ಅಸಿಮಿಸಿ ಇಲ್ಲದೆ ಮಾಡಿದ ಅಖಂಡ ಪ್ರಯತ್ನವೂ ನಡಸಿದ ಹೋರಾಟವೂ ಕಾರಣವಾಗಿವೆ. ಕನ್ನಡದ ಬಂಟರ ಈ ಪಡೆಯು ಪರಂಪರೆಯು ಈ ಭಾಗದಲ್ಲಿ ಹುಟ್ಟಿ ಬೆಳೆದು ಮುಂದುವರಿಯದಿದ್ದರೆ ಇನ್ನೂ ಕೆಳಗೆ ತುಂಗಭದ್ರೆಯ ವರೆಗೆ ಕನ್ನಡವು ಬದುಕಿ ಬಾಳುವುದಕ್ಕೆ ಅವಕಾಶವೇ ದೊರೆಯುತ್ತಿರಲಿಲ್ಲವೆಂಬುದು ಖಂಡಿತ. ನಮ್ಮ ಉತ್ತರ ಕರ್ನಾಟಕದಲ್ಲಿ ಇಂದಿಗೂ ಪರಭಾಷೆಗಳ ಹಾವಳಿಗೆ ಎಡೆಯಾಗಿ ಅಲ್ಲಿಯ ಕನ್ನಡ ಹಿರಿಯರ ಹುರುಳು ಕರುಳಿಲ್ಲದ ಬರಡು ಬಾಳುವೆಯಿಂದ ತಮ್ಮ ಹುಟ್ಟುಗನ್ನಡತನಕ್ಕೇ ಎರವಾಗುವಂತಹ ಪರಿಸ್ಥಿತಿಗೆ ಇನ್ನೂ ಒಳಗಾಗಿರುವ ಪ್ರದೇಶಗಳನ್ನು ನಾವು

ನೋಡುತ್ತೇವಷ್ಟೆ? ಇತ್ತಕಡೆಗೂ ಅದೇ ಅವಸ್ಥೆಯಾಗುವಂತಹ ಸಂದರ್ಭ ಒದಗಿದಾಗ ಕನ್ನಡದ ಉಳಿವಿಗಾಗಿ ಬೇಡಿ ಕಾಡಿ ಕಾದಿ ಹೋರಾಡಿದ ಮಹಾನುಭಾವರು ಕೆಲವರು ಈ ಭಾಗದಲ್ಲಿ ಹುಟ್ಟಿ, ಕನ್ನಡಕ್ಕೆ ಇಲ್ಲಿ ಬಂದಿದ್ದ ಹೆರವರ ಎದ್ದಲಗಾಟವನ್ನು ತಪ್ಪಿಸಿ, ಅದಕ್ಕೆ ಇಲ್ಲಿ ಚೆನ್ನಾಗಿ ಕಾಲೂರಿ ನಿಲ್ಲಲು ಎಡೆಯುನ್ನುಂಟುಮಾಡಿ ಕೊಟ್ಟಿದ್ದಾರೆ. ಗತಕಾಲದ ಇಂತಹ ಕನ್ನಡದ ಕಲಿಗಳೇ ಈ ಕಾಲದ ಇತ್ತಕಡೆಯ ಕನ್ನಡ ಸಂತತಿಗೆ ಪ್ರಾತಃಸ್ಮರಣೀಯರಾದ "ಪುಣ್ಯಪುರುಷ"ರಾಗಿದ್ದಾರೆಂದರೆ ತಪ್ಪಲ್ಲವಷ್ಟೆ?

ವಿಜಯನಗರ ಸಾಮ್ರಾಜ್ಯ ವಿನಾಶದಿಂದ ಈ "ತಿರುಳ್ಗನ್ನಡ" ನಾಡಿಗೆ ಕನ್ನಡ ರಾಜ್ಯಲಕ್ಷ್ಮಿಯ ಆಸರ ತಪ್ಪಿದಂತಾಯಿತು. ವಿಜಾಪುರದ "ಅದೀಲಶಾಹೀ" ರಾಜ್ಯದಲ್ಲಿಯೂ, "ಮಹಾರಾಷ್ಟ್ರ ಸರದಾರ"ರ ರಾಜಕೀಯ ವರ್ಚಸ್ಸವೇ ವ್ಯವಹಾರದಲ್ಲಿ ಬೆಳೆದುಬಂದುದರಿಂದ ಇತ್ತಕಡೆಯ ಹುಟ್ಟುಗನ್ನಡ ಮಾಂಡಲಿಕರಾಗಿದ್ದ ದೇಸಾಯಿ ದೇಶಪಾಂಡೆ ಮೊದಲಾದ ಮನೆತನಗಳಲ್ಲಿ ಮರಾಠಿಯ ಪ್ರಭಾವವು ಹಬ್ಬಲನುವಾಯಿತು. ಮುಂದೆ ಮರಾಟರ ಅಭ್ಯುದಯದ ಕಾಲಕ್ಕೆ ಇತ್ತಕಡೆಯ ನಾಡ ಮುಖಂಡರಲ್ಲಿ ಅದೇ ಬೆಳೆದು ಬಲಿತು ಪ್ರಬಲವಾಗಹತ್ತಿತು. ಮಹಾರಾಷ್ಟ್ರ ಸಾಮ್ರಾಜ್ಯದ ಕಡೆಗಾಲದಲ್ಲಿ ಕರ್ನಾಟಕದ ಕೊನೆಯ "ಸುಲ್ತಾನ"ನಾಗಿದ್ದ ಟೀಪುವಿಗೂ ಇತ್ತ ಪೇಶ್ವೆಯರಿಗೂ ನಡೆದ ರಾಜಕೀಯ ಏರಾಟದ ಹೋರಾಟದಲ್ಲಿ ಈ ಭಾಗವು ಎಡೆಬಿಡದೆ ಕಾಳಗದ ಕಳವೇ ಆಗಿ ನಿಂತುದರಿಂದ ಪೇಶ್ವೆಯರ ಮರಾಠೀ ದಂಡನಾಯಕರು ಇಲ್ಲಿ ಗಡಿ ದುರ್ಗಗಳನ್ನು ಮಾಡಿಕೊಂಡು ಅಲ್ಲಲ್ಲಿ ನೆಲಸಿದುದರಿಂದ ಹಳ್ಳಿಪಳ್ಳಿಗಳ ಗೌಡ ಶಾನುಭೋಗರಲ್ಲಿಯೂ ಮರಾಠಿಯ ರಾಜಕೀಯ ವರ್ಚಸ್ಸುವು ನೆಲೆಯೂರಲು ಆಸ್ಪದವಾಯಿತು. ಈ ಮೋಹಕ್ಕೆ ಬಲಿಬಿದ್ದವರಲ್ಲಿ ಬ್ರಾಹ್ಮಣ ಕುಲದ ಉಂಬುಳಿಗಾರ ದೇಸಾಯಿ ದೇಶಪಾಂಡೆ ಕುಲಕರ್ಣಿಗಳ ಮನೆತನಗಳೇ ಪ್ರಮುಖವಾದುವುಗಳೆಂದು ಹೇಳಬಹುದು. ಈ ಇಪ್ಪತ್ತೈದು ವರ್ಷಗಳ ಅವ್ಯಾಹತ ಪರಿಶ್ರಮದ ಫಲವಾಗಿ ಈ ಭಾಗದಲ್ಲಿ ಕನ್ನಡವು ಬಲುಮಟ್ಟಿಗೆ ತನ್ನ ಪ್ರಭುತ್ವವನ್ನು ಪ್ರಸ್ಥಾಪಿಸಿರುವುದು ಕಂಡುಬರುತ್ತಿರುವುದಾದರೂ ಬೆಳಗಾಂವಿ ಜಿಲ್ಹೆಯ ಪಡುವಣ ಗಡಿಯಲ್ಲಿ ಇಂದಿಗೂ ಕನ್ನಡಕ್ಕೆ ಕಾಲ್ತೊಡಕುಗಳು ಬಹುಶಃ ಇವೇ ಮನೆತನಗಳಿಂದ ಉಂಟಾಗುತ್ತಿರುವುದು ನಿದರ್ಶನಕ್ಕೆ ಬರುತ್ತದೆ. ಮುಂದೆ ಮರಾಟರ ಸಾಮ್ರಾಜ್ಯವು ನಿರ್ನಾಮವಾಗಿ ಇಂಗ್ಲಿಷರ ಈಸ್ಟ್ ಇಂಡಿಯಾ ಕಂಪನಿಯ ಆಳಿಕೆಗೆ ಆರಂಭವಾಗಲು ಇತ್ತಕಡೆಯ ಜನರ ನುಡಿಯು ಕನ್ನಡವೆಂಬ ಅರಿವು ಕೂಡ ಆಗಿನ ಪ್ರಮುಖ ರಾಜ್ಯಾಧಿಕಾರಿಗಳಿಗೆ ಇಲ್ಲದಾಗಿ ಇಲ್ಲಿಯ ಜನಜೀವನದ ಭಾಷೆ ಮರಾಠಿಯೆಂಬ ಭ್ರಮೆಯಿಂದ ಇಲ್ಲಿಯ ಸಾರ್ವಜನಿಕ ಶಿಕ್ಷಣವು ಮರಾಠಿಯಲ್ಲಿಯೇ ಆರಂಭಿಸಲ್ಪಟ್ಟಿತು. ಸುಮಾರು ೨೫ ವರ್ಷಗಳಿಗಿಂತ ಹೆಚ್ಚು ಕಾಲ ಈ ಅನವಸ್ಥೆಯಲ್ಲಿ ಹೋದನಂತರ ಧಾರವಾಡದ "ಡೆಪ್ಯೂಟೀ" ಚೆನ್ನಬಸಪ್ಪನವರೆಂಬ ಮಹಾನುಭಾವರೊಬ್ಬರು ಇಲ್ಲಿಯ ವಸ್ತುಸ್ಥಿತಿಯನ್ನು ಆ ಕಾಲದ ಶಿಕ್ಷಣಾಧಿಕಾರಿಗಳಿಗೆ ಮನವಟ್ಟು ಮಾಡಿಕೊಟ್ಟು ಮುಂಬಯಿ ಸರಕಾರದೊಂದಿಗೆ ಹೋರಾಟವನ್ನೇ ಹೂಡಿ ಇಲ್ಲಿ ಕನ್ನಡ ಶಾಲೆಗಳಾಗುವಂತೆ ಮಾಡಿದರು. ಆಗ "ಸಂನ್ಯಾಸಿಯ ಮದುವೆಗೆ

ಜುಟ್ಟು ಜನಿವಾರಗಳಿಂದ ಆರಂಭ''ವಾಗಬೇಕಾಗುವಂತೆ ಕನ್ನಡ "ಅಂಕ ಲಿಪಿ" ಅಂದರೆ ಈಗಿನ "ಬಾಲಬೋಧಿನಿ"ಯಿಂದ ಎಲ್ಲ ತರಗತಿಯ ಶಾಲೆಯ ಪುಸ್ತಕಗಳೂ ಹುಟ್ಟಿ ಬೆಳೆಯಬೇಕಾಯಿತು. ಆಗ ಚೆನ್ನಬಸಪ್ಪನವರ ನೆರವಿಗೆ ನಿಂತ ಗಂಗಾಧರ ಮಡಿವಾಳೇಶ್ವರ ತೂರಮರಿಯವರೂ, ವೀರಭದ್ರ ಮಡಿವಾಳೇಶ್ವರ ಪಂಡಿತರೂ, ಶಾಂತವೀರ ರಾಚಿದೇವ ಕಿತ್ತೂರವರೂ, ವೆಂಕಟರಂಗೋ ಕಟ್ಟಿಯವರೂ ಶಾಲೆಗಳಿಗೆ ಬೇಕಾಗುವ ಕ್ರಮಿಕ ಪಠ್ಯ ಪುಸ್ತಕಗಳನ್ನೂ ಇತಿಹಾಸ ಭೂಗೋಲ ವ್ಯಾಕರಣ ಗಣಿತ ಮೊದಲಾದ ಶಾಸ್ತ್ರೀಯ ವಿಷಯಗಳ ಅಭ್ಯಾಸಕ್ಕೆ ಬೇಕಾಗುವ ಎಲ್ಲ ಬಗೆಯ "ಶಾಲೋಪಯೋಗೀ" ಪುಸ್ತಕಗಳನ್ನೂ ಬರೆದು ಸಜ್ಜುಗೊಳಿಸಿದರು. ಪುಸ್ತಕಗಳು ಬರೆದು ಸಿದ್ಧವಾದರೂ ಅವುಗಳನ್ನು ಮುದ್ರಿಸುವುದಕ್ಕೆ ಗತಿಯೇನು? ಕೊನೆಗೆ ಈ ಭಾಗದ ಎಜ್ಯುಕೇಶನಲ್ ಇನ್ಸಪೆಕ್ಟರರಾಗಿದ್ದ ರಸೆಲ್ ಅವರು ಇಂಗ್ಲಂಡ ಜರ್ಮನಿಗಳ ಮುದ್ರಕರೊಡನೆ ಸಂಧಾನ ಹಚ್ಚಿ ಮುಂಬಯಿಯ "ಎಜ್ಯುಕೇಶನ್ ಸೊಸೈಟಿಯ ಮುದ್ರಣಾಲಯ" ದಲ್ಲಿ ಕನ್ನಡ ಪುಸ್ತಕಗಳ ಮುದ್ರಣಕ್ಕೆ ಅವಕಾಶವನ್ನು ಕಲ್ಪಿಸಿಕೊಳ್ಳಬೇಕಾಯಿತು. ಈ ಕೆಲಸದಲ್ಲಿ ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್ಸಿನ ಉಪಯೋಗವನ್ನು ನಮ್ಮಿತ್ತಕಡೆಯವರು ಬಹಳವಾಗಿ ಹೊಂದಿದರು. ಈಗಿನಂತೆ ರೈಲು ಮೋಟಾರುಗಳ ಪ್ರವಾಸದ ಅನುಕೂಲವಿಲ್ಲದ ಆ ಕಾಲದಲ್ಲಿ ಇತ್ತ ಮುಂಬಯಿ ಅತ್ತ ಮಂಗಳೂರುಗಳ ಅಂತರದ ಅನಾನುಕೂಲತೆಯನ್ನು ಮನಗಂಡು ವೆಂಕಟರಂಗೋ ಕಟ್ಟಿಯವರು ತಮ್ಮ ಸ್ವಂತ ಪರಿಶ್ರಮದಿಂದ ಕನ್ನಡ ಅಕ್ಷರಗಳ ಮಾತೃಕೆಗಳನ್ನು ಇಲ್ಲಿಯೇ ಮಾಡಿಸಿ ಒಂದು ಮುದ್ರಣಾಲಯವನ್ನು "ಜ್ಞಾನವರ್ಧಕ ಪ್ರೆಸ್" ಎಂಬ ಹೆಸರಿನಿಂದ ನಿರ್ಮಾಣ ಮಾಡಿದರು.

ಕನ್ನಡದ ಪುನರುಜ್ಜೀವನಕ್ಕೆ ಈ ಬಗೆಯ ಸಾಹಸವು ಇಲ್ಲಿ ನಡೆದಾಗಲೂ ಮರಾಠಿಯ ನುಗ್ಗಾಟವು ತೆರಪಿಲ್ಲದೆ ನಡೆದೇ ಇತ್ತು. ಶಿಕ್ಷಣ ಶಾಖೆಯ ವರಿಷ್ಠ ಅಧಿಕಾರಿಗಳೆಲ್ಲರೂ ಆಡಳಿತೆಯ ಕೇಂದ್ರವಾದ ಪುಣೆಯಿಂದಲೇ ಬರಬೇಕು. ಕನ್ನಡ ಶಿಕ್ಷಕರ ಶಿಕ್ಷಣಾಲಯವು "ನಾರ್ಮಲ್ ಸ್ಕೂಲ್" ಎಂಬ ಹೆಸರಿನಿಂದ ಬೆಳಗಾಂವಿಯಲ್ಲಿ ಪ್ರಾರಂಭಿಸಲ್ಪಟ್ಟಾಗ ಅದಕ್ಕೆ ಮುಖ್ಯಾಧ್ಯಾಪಕರೂ ಒಬ್ಬ ಮರಾಠೀ ಮನುಷ್ಯರೇ ಬಂದರು. ಮೇಲೆ ಹೇಳಿದ ವೆಂಕಟರಂಗೋ ಕಟ್ಟಿಯವರೂ ಪುಣೆಯ ಮರಾಠೀ ಟ್ರೇನಿಂಗ ಸ್ಕೂಲಿನಲ್ಲಿ ಶಿಕ್ಷಕರಾಗಿದ್ದವರೇ. ಇವರು ಮುಧೋಳದವರಾಗಿದ್ದುದರಿಂದ, ಇವರಿಗೆ ಕನ್ನಡ ಮಾತನಾಡಲು ಬರುತ್ತಿದ್ದುದರಿಂದ, ಕನ್ನಡ ನಾರ್ಮಲ್ ಸ್ಕೂಲಿನಲ್ಲಿ ಇವರಿಗೂ ಸ್ಥಾನ ದೊರೆಯಿತು. ಇಲ್ಲಿಯ ಬೇರೆ ಕನ್ನಡ ಪಂಡಿತರ ಪರಿಚಯ ಸಹವಾಸಗಳಿಂದ ಇವರೂ ಹೊಸಗನ್ನಡದ ಶ್ರೇಷ್ಠ ನಿರ್ಮಾಣ ಕರ್ತರುಗಳಲ್ಲೊಬ್ಬರಾದರು. ಇವರು ಬರೆದ ಆರನೆಯ ಪುಸ್ತಕ, ಲಘುವ್ಯಾಕರಣ, ಪ್ರಾಕೃತಿಕ ಭೂಗೋಲ, ಮುಂಬಯಿ ಇಲಾಖೆಯ ಹಿಂದುಸ್ಥಾನ ಹಾಗು ಜಗತ್ತಿನ "ಭೂಗೋಲವಿದ್ಯೆ"ಯ ಮೂರು ಭಾಗಗಳು ಇನ್ನೂ ಅಲ್ಲಲ್ಲಿ ಕಣ್ಣಿಗೆ ಬೀಳುತ್ತವೆ. ಕನ್ನಡ ಶಾಲೆಗಳಲ್ಲಿ ಮಹಾರಾಷ್ಟ್ರದ ಇತಿಹಾಸವನ್ನೇ ನಾನು ಕಲಿತದ್ದನ್ನು ಮೇಲೆ ಹೇಳಿದೆನಷ್ಟೆ? ಇತ್ತಕಡೆಯ ಪ್ರದೇಶಕ್ಕೆಲ್ಲ ಕಂಪನೀ ಸರಕಾರದ ಆಡಳಿತೆಯಲ್ಲಿ

ಮೊದಲು ಕೊಡಲಾಗಿದ್ದ "ದಕ್ಷಿಣ ಮಹಾರಾಷ್ಟ್ರ"ವೆಂಬ ಹಂಡಬಂಡ ಹೆಸರಿನ ಪ್ರಭಾವವೇ ಇದಕ್ಕೆ ಕಾರಣವೆಂಬುದು ಸ್ಪಷ್ಟವಾಗಿದೆ. ಈ ಪ್ರದೇಶವೆಲ್ಲ ಕರ್ನಾಟಕದ ಭಾಗ; ಇಲ್ಲಿ ಶಾಲೆಗಳಲ್ಲಿ ಪ್ರಾಂತಿಕ ಇತಿಹಾಸವೆಂಬುದು ಕರ್ನಾಟಕದ್ದೇ ಕಲಿಸಲಾಗಬೇಕೆಂಬ ಭಾವನೆಯಿಂದ "ಸಂಕ್ಷಿಪ್ತ ಕರ್ನಾಟಕದ ಇತಿಹಾಸ"ವನ್ನು ಮೊದಲು ಬರೆದವರು ಇವರೇ. ಬೆಳಗಾಂವಿಯ ನಾರ್ಮಲ್ ಸ್ಕೂಲು ಟ್ರೇನಿಂಗ ಕಾಲೇಜಾಗಿ ಧಾರವಾಡಕ್ಕೆ ಬರಲು ಹುಯಿಲಗೋಳ ಭುಜಂಗ ರಾಯರು ಪ್ರಿನ್ಸಿಪಾಲರಾಗಿಯೂ ವೆಂಕಟರಂಗೋ ಕಟ್ಟಿಯವರು ಕನ್ನಡ ಟ್ರಾನ್ಸ ಲೇಟರರಾಗಿಯೂ ಇಲ್ಲಿಗೆ ಬಂದನಂತರ ಇತ್ತಕಡೆಗೆಲ್ಲ ಕನ್ನಡಕ್ಕೆ ಚೆನ್ನಾಗಿಯೇ ಕಳೆಕಟ್ಟ ಹತ್ತಿತು. ಅಲ್ಲಿಯವರೆಗೂ ಕನ್ನಡಶಾಲೆಗಳ ಶಿಕ್ಷಕರೂ ಮೇಲ್ವಿಚಾರಕರೂ ಪರೀಕ್ಷಕರೂ ಬಹುಶಃ ಮರಾಠಿಗರೇ ಇರುತ್ತಿದ್ದರೆಂಬ ಸಂಗತಿಯು ಆಗಿನ ಕಾಲದ ವರಿಷ್ಠಾಧಿಕಾರಿಗಳ ವರದಿಯಲ್ಲಿಯೇ ನಿರ್ದೇಶಿಸಲಾಗಿದೆ.

ಇಂತಹ ಪ್ರತಿಕೂಲಸ್ಥಿತಿಯಲ್ಲಿಯೂ ಕನ್ನಡವನ್ನು ಬದುಕಿಸಲು ಮಿತಿಮೀರಿ ಹೆಣಗಿದ ಸತ್ಪುರುಷರ ಸಾಹಸವೆಂತಹುದಿರಬಹುದೆಂಬುದನ್ನು ನಾವು ತಿಳಿದು ನೋಡಬೇಕು. ಹೊಸಗನ್ನಡದ "ಆದಿಪುರುಷ" ಚೆನ್ನಬಸಪ್ಪನವರು ಆಗಲೂ "ಕನ್ನಡದ ಹುಲಿ" ಎಂದು ಹೆಸರಾಗಿದ್ದರು. ಕೈಕೆಳಗಿನ ಶಿಕ್ಷಕರು ತಮ್ಮ ಸಂಬಳದ ಹೆಚ್ಚಳವನ್ನು ಬೇಡಿಕೊಳ್ಳಲು ಬಂದಾಗ "ಪಗಾರ" ಅಂದರೆ "ಸಂಬಳ ಅನ್ನು." ಎಂದು ಅವರು ಹೇಳುತ್ತಿದ್ದರು. ಸಂಬಳದ ಸಂಖ್ಯೆಯನ್ನು "ದಹಾ", "ಬಾರ" ಎಂದು ಮರಾಠೀ ಅಂಕಿಗಳಲ್ಲಿ ಹೇಳಿದರೆ "ಹತ್ತು", "ಹನ್ನೆರಡು" ಎಂದು ಹೇಳಲು ಕಲಿಸುತ್ತಿದ್ದರಂತೆ! ನಾಲ್ಕೆಂಟು ಸಾರೆ ಎಚ್ಚರ ಕೊಟ್ಟರೂ ವೈಮರಿತ ಶಿಕ್ಷಕರಿಗೆ ಒಂದೆರಡು ಆಣೆಗಳ ದಂಡವನ್ನೂ ಕಟ್ಟಿ ಅವರನ್ನು ಹಾದಿಗೆ ತರುತ್ತಿದ್ದರಂತೆ! ಚೆನ್ನಬಸಪ್ಪನವರ ಕೈ ಕೆಳಗೆ ಕೆಲಸ ಮಾಡುತ್ತಿದ್ದ ಬೀಳಗೀ ರುದ್ರಪ್ಪನವರು ಕನ್ನಡದ ಅಭಿಮಾನದಲ್ಲಿ ಹೆಚ್ಚಿನವರಾಗಿದ್ದ ರೆಂದು ಚೆನ್ನಬಸಪ್ಪನವರ ತರುವಾಯ ಡೆಪ್ಯೂಟೀ ಇನ್ಸಪೆಕ್ಟರರಾಗಿದ್ದ ರೊದ್ದಾ ಶ್ರೀನಿವಾಸರಾಯರು ಹೇಳುತ್ತಿದ್ದರು. ಇವರೂ ಹಿಂದಿನ ಪರಂಪರೆಯನ್ನು ಚೆನ್ನಾಗಿಯೇ ಎತ್ತಿಹಿಡಿದು ಧಾರವಾಡ ಜಿಲ್ಹೆಯಲ್ಲಿ ಕನ್ನಡ ಶಾಲೆಗಳನ್ನು ಬಹುವಾಗಿ ಹೆಚ್ಚಿಸಿ, ಮುಂದೆ ಟ್ರೇನಿಂಗ ಕಾಲೇಜಿನ ಪ್ರಿನ್ಸಿಪಾಲರಾದಾಗ ಅದನ್ನೂ ಬಹಳ ವಾಗಿ ಬೆಳಸಿ ಕೀರ್ತಿಯನ್ನು ಗಳಿಸಿದರು. "ಶಾಂತಕವಿ"ಗಳೆಂದು ಪ್ರಸಿದ್ಧರಾಗಿರುವ ಸಕ್ಕರೀ ಬಾಳಾಚಾರ್ಯರು, ಘೊಂಡೋನರಸಿಂಹ ಮುಳಬಾಗಿಲರವರು, ವಲ್ಲಭ ಮಹಾಲಿಂಗ ತಟ್ಟಿಯವರು, ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿಯವರು, ವೆಂಕಟೇಶ ತಿರಕೋ ಕುಲಕರ್ಣಿ ಗಳಗನಾಥರವರು—ಇವರೇ ಮೊದಲಾದ ಹೊಸ ಗನ್ನಡದ ಗದ್ಯ ಪದ್ಯಲೇಖಕರು ಧಾರವಾಡದ ಟ್ರೇನಿಂಗ ಕಾಲೇಜಿನಿಂದ ಹೊಸದಾಗಿ ಹೊರಬಿದ್ದ ಹೊಸ ಹುರುಪಿನ ಕನ್ನಡ ವೀರರಾಗಿದ್ದರು.

ಸರಕಾರದ ಶಿಕ್ಷಣ ಖಾತೆಯಲ್ಲಿ ಕನ್ನಡವು ಹೀಗೆ ಬೆಳೆಯುತ್ತ ನಡೆದಂತೆಯೇ ಇತ್ತಕಡೆಯ ಜನಜೀವನದಲ್ಲಿಯೂ ಕನ್ನಡದ ಅಭಿಮಾನವು ತಲೆಯೆತ್ತಲಾರಂಭಿ ಸಿತ್ತು. ತೂರಮುರಿ ಶೇಷಗಿರಿರಾಯರು ಕಾಲಿದಾಸನ ಶಾಕುಂತಲ ನಾಟಕವನ್ನು

ಈ ಭಾಗದಲ್ಲಿ ಆಗ ಪ್ರಚಾರದಲ್ಲಿದ್ದ "ದೇಸೀ" ಶೈಲಿಯನ್ನೇ ಅನುಸರಿಸಿ ಕನ್ನಡಕ್ಕೆ ಭಾಷಾಂತರಿಸಿ ೧೮೬೧ರಲ್ಲಿ ಮುಂಬಯಿ ಎಜ್ಯುಕೇಶನ್ ಸೊಸೈಟಿಯ ಮುದ್ರಣಾಲಯದಲ್ಲಿ ಮುದ್ರಿಸಿ ಪ್ರಸಿದ್ಧ ಮಾಡಿದರು. ಈ ತಮ್ಮ ಕೃತಿಗೆ ಅವರು ಜೋಡಿಸಿದ ಪ್ರಸ್ತಾವನೆಯಲ್ಲಿ "ಇದಭಿಜ್ಞಾನ ಶಕುಂತಲೆಂಬ ಕೃತಿಯುಂ ಭಾಷಾಂತರಂ ತಮ್ಮ ತಮ್ಮದರೊಳ್ ಮಾಡಿದರೆಲ್ಲ ನಾಡಿನ ಜನರ್ ಕರ್ನಾಟದೋಳಿಲ್ಲೆಲ್ರೈ" ಎಂದು ಉಸುರುಗರೆದು ಕನ್ನಡಿಗರಿಗಾಗಿ ತಾವು "ಸಿಕ್ಕಿದ ಶಬ್ದಗಳನ್ನಿಟ್ಟು ಶೀಘ್ರತರದಿಂದೀ ಕೃತ್ಯಮಂಗೈದೆನಾಂ" ಎಂದು ಹೇಳಿದ್ದಾರೆ. ಸರಕಾರದ ವ್ಯವಹಾರದಲ್ಲಿ ಈ ಭಾಗವು "ಕಾಲುಚಾಚಿದ ಮಹಾರಾಷ್ಟ್ರ" ಎಂಬ ಭಾವಬೋಧಕವಾದ ರೀತಿಯಲ್ಲಿ ಹೆಸರಿಸಲಾಗಿದ್ದರೂ ಇದೂ ಕರ್ನಾಟಕದ ಭಾಗವೇ ಎಂಬ ಅರಿವು ಆಗಿನ ಕಾಲದ ಸುಸಂಸ್ಕೃತ ಜನಾಂಗದಲ್ಲಿ ಕೂಡ ಇದ್ದಿತೆಂಬುದಕ್ಕೆ ಈ ಮಾತು ಸಾಕ್ಷಿಯಾಗಿದೆ. ೧೮ನೆಯ ಶತಮಾನದ ತಮ್ಮ ಸಾಮ್ರಾಜ್ಯ ವಿಸ್ತರಣದಮ್ಮತಮಹತ್ವಾಕಾಂಕ್ಷೆಯನ್ನು ಇನ್ನೂ ವರೆಗೆ ಎದೆಗವಚಿಕೊಂಡು "ತುಂಗಭದ್ರೆಯ ವರೆಗೆ ಮಹಾರಾಷ್ಟ್ರವು ಹಿಂದಿನಿಂದಲೂ ಇತ್ತು; ಇಂದಿಗೂ ಉಂಟು" ಎಂದು ಹಟಮಾರಿತನದಿಂದ ಸಾಧಿಸುತ್ತಿರುವ ಇಂದಿನ ಮರಾಠೀ ಪ್ರೇಮಿಗಳು ಈ ಮಾತನ್ನು ಅಗತ್ಯ ಗಮನಿಸಬೇಕು. ಹಾಗೆಯೇ ಬ್ರಾಹ್ಮಣ ಕುಲದಲ್ಲಿ ಹುಟ್ಟಿದ್ದ ಶೇಷಗಿರಿರಾಯರು ತಮ್ಮ ಈ ಕಾವ್ಯ ಕೃತಿಯನ್ನು ತಮ್ಮ ವಿದ್ಯಾಗುರುಗಳಾಗಿದ್ದ ಡೆಪ್ಯೂಟೀ ಚೆನ್ನಬಸಪ್ಪನವರಿಗೆ ಕಾಣಿಕೆಯಾಗಿ ಸಲ್ಲಿಸುತ್ತ,

> ಕಡು ಗುರುಭಕ್ತಿಯಿಂ ತುರಮುರೀತ್ಯುಪನಾಮಕ ರಾಮಚಂದ್ರಜಂ ।
> ಜಡಮತಿ ಕಬ್ಬಿ ಶೇಷಗಿರಿಯೆಂಬವನೀ ಕೃತಿಗೈದು ಮಾಡಿದಂ ॥
> ಬಡವರ ವಿದ್ಯೆಕಾಗಿ ತನುವಿಂ ಮನದಿಂ ಧನದಿಂದೆ ಸಾಹಸಂ ।
> ಬಡುತಿಹ ಧೀರ ಚೆನ್ನಬಸವೇಶ್ವರ ದಿವ್ಯರ ಪಾದಭೂಷಣಂ ॥

ಎಂದು ಅಸದೃಶವಾದ ಗುರುಭಕ್ತಿ ಭಾವವನ್ನು ತಮ್ಮ ಪ್ರಸ್ತಾವನೆಯ ಕೊನೆಯಲ್ಲಿ ವ್ಯಕ್ತಗೊಳಿಸಿರುವುದರಿಂದ ಆಗಿನ ಕಾಲದ ಬ್ರಾಹ್ಮಣ ಲಿಂಗಾಯತ ಜನಾಂಗಗಳಲ್ಲಿ ಯಾವ ಉಚ್ಚತರದ ಸುಹೃದ್ಭಾವನೆಯಿದ್ದಿತೆಂಬುದು ಈಗಿನವರಿಗೆ ಚೆನ್ನಾಗಿಯೇ ಬುದ್ಧಿಗಲಿಸುವ ಪ್ರಮಾಣವಾಕ್ಯವಲ್ಲವೆ? ಗಂಗಾಧರ ಮಡಿವಾಳೇಶ್ವರ ತೂರಮುರಿಯವರು ಬಾಣಕವಿಯ ಸಂಸ್ಕೃತ ಕಾದಂಬರಿಯ ಕಥೆಯನ್ನೂ ಅತ್ಯಂತ ಹೃದಯಂಗಮವಾದ ಹೊಸಗನ್ನಡದಲ್ಲಿ ಸಂಕ್ಷೇಪವಾಗಿ ಬರೆದು ಮುದ್ರಿಸಿದರು. ಕನ್ನಡ "ಶಬ್ದಮಂಜರೀ" ಎಂಬ ಈಗಿನ "ಡಿಕ್ಶನರೀ" ಮಾದರಿಯ ಶಬ್ದಕೋಶವನ್ನು ಇವರೇ ಸಿದ್ಧಪಡಿಸಿ ಪ್ರಸಿದ್ಧಿಸಿದ್ದುಂಟು. ಶಾಂತವೀರ ರಾಚಿದೇವ ಕಿತ್ತೂರವರು ಷಡಕ್ಷರಿಯ ರಾಜಶೇಖರವಿಳಾಸಕ್ಕೆ ಟೀಕೆ ಬರೆದದ್ದುಂಟು. ಧೋಂಡೋ ನರಸಿಂಹ ಮುಳಬಾಗಿಲರವರು ಶೂದ್ರಕನ "ಮೃಚ್ಛಕಟಿಕ", ಭವಭೂತಿಯ "ಉತ್ತರ ರಾಮಚರಿತ್ರ", ಕಾಲಿದಾಸನ "ಮಾಲವಿಕಾಗ್ನಿಮಿತ್ರ" ನಾಟಕಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ. ಇದಲ್ಲದೆ "ಕನ್ನಡ ನುಡಿಗಟ್ಟು", "ಕನ್ನಡ ಕೈಪಿಡಿ" ಎಂಬ ಎರಡು ವ್ಯಾಕರಣ ಗ್ರಂಥಗಳೂ ಇವರಿಂದ ರಚಿತವಾಗಿವೆ. ಇವರೇ ಬರೆದು ಕರ್ನಾಟಕ ವಿದ್ಯಾವರ್ಧಕ ಸಂಘದ ಮುಖಪತ್ರವಾಗಿದ್ದ "ವಾಗ್ಭೂಷಣ"ದಲ್ಲಿ

ಕ್ರಮಶಃ ಪ್ರಕಟಿಸುತ್ತಿದ್ದ ಸಂಸ್ಕೃತ "ಹಿತೋಪದೇಶ"ದ ಕನ್ನಡ ಅನುವಾದವು ಇವರ ಅವಸಾನದ ಮೂಲಕ ಅರ್ಧಕ್ಕೆ ನಿಲ್ಲಲು, ಅದನ್ನೇ ಮುಂದೆ ಶಿವರುದ್ರಪ್ಪ ಸೋಮಪ್ಪ ಕುಲಕರ್ಣಿಯೆಂಬವರು ಮುಂದೆ ಸಾಗಿಸಿ ಮುಗಿಸಿದ್ದೂ ಉಂಟು. ಹೊನ್ನಾಪುರ ಮಠ ಗದಿಗೆಯ್ಯನವರು "ಬಾಲಭಾರತ", "ಬಾಲರಾಮಾಯಣ", "ರಾಮದಾಸ ಸ್ವಾಮಿಗಳ ಚರಿತ್ರೆ" ಮೊದಲಾದ ಅನೇಕ ಕೃತಿಗಳನ್ನು ಬರೆದುದಲ್ಲದೆ ಇಂಗ್ಲಿಷದ "ದಿ ಸ್ಕೂಲ್ ಫಾರ್ ಸ್ಕ್ಯಾಂಡಲ್" ನಾಟಕವನ್ನು "ನಿಂದಕರ ನಡವಳಿ" ಎಂದೂ ಶೇಕ್ಸಪಿಯರನ "ಟೇಮಿಂಗ್ ಆಫ್ ದಿ ಶ್ರೂ" ನಾಟಕವನ್ನು "ತಾಟಿಕೆ" ಎಂದೂ ಕನ್ನಡಕ್ಕೆ ಪರಿವರ್ತಿಸಿದ್ದೂ ಉಂಟು. ವಿಜಾಪುರದಲ್ಲಿ ಈಗ "ಶಿವಾನುಭವ", "ನವಕರ್ನಾಟಕ" ಪತ್ರಿಕೆಗಳ ಮೂಲಕ ಅಖಂಡವಾದ ಸೇವೆಯನ್ನು ಸಲ್ಲಿಸುತ್ತಿರುವ ಹಳಕಟ್ಟೀ ಫಕೀರಪ್ಪನವರ ತಂದೆಯವರಾದ ಗುರುಬಸಪ್ಪನವರ ನಿಃಸೀಮ ಕನ್ನಡ ಭಕ್ತಿಯ ಫಲವಾಗಿ ಅನೇಕ ಗ್ರಂಥಗಳು ಅವರಿಂದ ನಿರ್ಮಾಣವಾಗಿವೆ. ಗೋಡೆ ಜೀವಣರಾಯರು ಜಾನ್‌ಸನ್ನನ "ರಾಸೆಲಾಸ್" ಕಾದಂಬರಿಯನ್ನೂ ಶೇಕ್ಸಪಿಯರನ ಹ್ಯಾಮ್‌ಲೆಟ್ ನಾಟಕವನ್ನೂ ಕನ್ನಡಕ್ಕೆ ಅನುವಾದಿಸಿದ್ದಾರೆ. ಇಲ್ಲಿಯ ಕನ್ನಡತನದ ಜೀವಾಳವಾದ ಕರ್ನಾಟಕ ವಿದ್ಯಾವರ್ಧಕ ಸಂಘವನ್ನು ಸ್ಥಾಪಿಸಿ ಕನ್ನಡದ ಏಳ್ಗಿಗೆ ಕನ್ನಡಿಗರ ಸಾಮೂಹಿಕ ಪ್ರಯತ್ನದ ಕಸುವಿನಿಂದ ಬಲವನ್ನೊದಗಿಸಲು ಮುಂದಾದ ರಾಮಚಂದ್ರ ಹಣಮಂತ ದೇಶಪಾಂಡೆಯವರು ಅನೇಕ ಗ್ರಂಥಗಳನ್ನು ಬರೆದಿರುವುದಲ್ಲದೆ ನಮ್ಮ ಉತ್ತರ ಕರ್ನಾಟಕದಲ್ಲಿ ಕನ್ನಡದ ಪುನರುಜ್ಜೀವನಕ್ಕಾಗಿ ಹೆಣಗಿದ ಮಹನೀಯರೆಲ್ಲರ ಚಿರಂತನ ಸ್ಮಾರಕವನ್ನೇ ಮೂರ್ತಿಮತ್ತಾಗಿ ನಿಲ್ಲಿಸಿದ್ದಾರೆ. ಇದಕ್ಕೆ ಹೆಚ್ಚು ಹೆಚ್ಚಾಗಿ ಜೀವಕಳೆಯನ್ನೂ ಶಕ್ತಿ ಸಾಮರ್ಥ್ಯವನ್ನೂ ತಂದುಕೊಡುತ್ತ ಇದನ್ನು ಬೆಳಸುವುದಕ್ಕೆ ಪರಿಶ್ರಮಪಟ್ಟ ಕರಿಗುದರೀ ನಾರಾಯಣರಾಯರು, ಘಾಟಕ ಗುರುನಾಥರಾಯರು, ಜೋಶೀ ವಿನಾಯಕರಾಯರು ಮೊದಲಾದ ಅನೇಕ ಮಹನೀಯರ ಅಪಾರ ಸೇವೆಯನ್ನು ಕನ್ನಡ ಜನಾಂಗವು ಎಂದಿಗೂ ಮರೆಯಲಾರದು.

ನುಡಿಯ ಮುನ್ನಡಿಗೆ ಗ್ರಂಥಗಳಿಗಿಂತಲೂ ಪತ್ರಿಕೆಗಳು ಹೆಚ್ಚಾಗಿ ಗತಿಕೊಡುವವೆಂಬ ಸಂಗತಿಯನ್ನು ಯಾರೂ ಅಲ್ಲಗಳೆಯಲಾರರು. ಇಲ್ಲಿ ಹೊರಟಿದ್ದ ಮರಾಠೀ ಪತ್ರಿಕೆಗಳ ಪ್ರಸಾರದಿಂದ ಕನ್ನಡವು ಹಿಮ್ಮೆಟ್ಟಲವಕಾಶವಾಗಬಹುದೆಂಬ ಶಂಕೆಯಿಂದ ಮಾದನಸೆಟ್ಟಿ ಕಲ್ಯಾಣಪ್ಪನವರು, ವಿಭೂತೀ ಹುಚ್ಚಯ್ಯನವರು ಕಲ್ಲಿನ ಅಚ್ಚುಕೂಟಗಳನ್ನು ಸ್ಥಾಪಿಸಿ "ಪುಷ್ಪಮಾಲಿಕೆ", "ಚಂದ್ರೋದಯ" ಪತ್ರಿಕೆಗಳನ್ನು ಪ್ರಕಟಿಸಹತ್ತಿದರು. ದೇಸಾಯಿ ಶಿವನಪ್ಪನವರು "ಕರ್ನಾಟಕ ಪತ್ರ"ವನ್ನು ಆರಂಭಿಸಿದರು. ಇಲ್ಲಿಯ ಮಿತ್ರಸಮಾಜದ ಮುಖಪತ್ರವೆಂದು ವೆಂಕಟರಂಗೋ ಕಟ್ಟಿಯವರು "ಲೋಕಶಿಕ್ಷಕ" ಮಾಸಪತ್ರಿಕೆಯನ್ನು ಹೊರಡಿಸಿದರು. ಅಲ್ಲಿಂದ ಮುಂದೆ ೧೮೮೫ರಲ್ಲಿಯೇ "ಕರ್ನಾಟಕ ಬುಕ್ಕ ಡಿಪೋ ಪ್ರೆಸ್" ಎಂಬ ದೊಡ್ಡ ಮುದ್ರಣಾಲಯವನ್ನು ಸ್ಥಾಪಿಸಿದ ಅನಾಡ ಚೆನ್ನವೀರಪ್ಪನವರು "ಕರ್ನಾಟಕ ವೃತ್ತ"ವನ್ನು ಹೊರಡಿಸಿದರು. ಮಮದಾಪುರ ಗುರುರಾಯರು ತಮ್ಮ "ಪ್ರಸಾದ ರಾಘವ" ಮುದ್ರಾಲಯದಿಂದ "ಲೋಕಬಂಧು"ವನ್ನು ಪ್ರಕಟಿಸಹತ್ತಿದರು.

"ಹಿಂದೂ ಪ್ರಿಂಟಿಂಗ ವರ್ಕ್ಸ್" ಮುದ್ರಣಾಲಯದಲ್ಲಿ ವಕೀಲ ಬಳ್ಳಾರಿ ರಾಮರಾಯರು "ರಾಜಹಂಸ" ವಾರಪತ್ರಿಕೆಯನ್ನು ಹೊರಡಿಸಿದರು. "ರಾಜಹಂಸ"ದ ಮೂಲಕ ಬರೆಹಗಾರತನದಲ್ಲಿ ದರಗಂಡ ಹೊಸಕೇರೀ ಅಣ್ಣಾಚಾರ್ಯರು "ಧನಂಜಯ" ಪತ್ರಿಕೆಗೆ ಜನ್ಮ ಕೊಟ್ಟರು. ಹುಬ್ಬಳ್ಳಿಯಲ್ಲಿ "ಕನ್ನಡಕೇಸರಿ" ವಾರಪತ್ರಿಕೆಯೂ "ಸಚಿತ್ರ ಭಾರತ" ಮಾಸಿಕವೂ ಬಾಗಲಕೋಟೆಯ ಕೆರೂರ ವಾಸುದೇವಾ ಚಾರ್ಯರ ಸಂಪಾದಕತ್ವದಲ್ಲಿ ಹೊರಟವು. ವಾಸುದೇವಾಚಾರ್ಯರ ಸ್ವಯಂಸ್ಫೂರ್ಣ ಪ್ರತಿಭೆಯಿಂದ ಅನೇಕ ಕಾದಂಬರಿಗಳೂ ನಾಟಕಗಳೂ ಹುಟ್ಟಿ ಬೆಳಕು ಕಂಡಿವೆ; ಇನ್ನೂ ಕಾಣತಕ್ಕವುಗಳಿವೆ. ಇವರಿಂದಲೇ ಮುಂದೆ ಧಾರವಾಡವು "ಶುಭೋದಯ" ವನ್ನು ಕಂಡಿತು. ಅಲ್ಲಿಂದ ಮುಂದೆ ದಿವಾಕರ ರಂಗರಾಯರೂ ಕಬ್ಬೂರ ಮಧ್ವರಾಯರೂ "ಕರ್ಮವೀರ"ಕ್ಕೆ ಜನಕರಾದರು. ಗದುಗಿನಲ್ಲಿ ಉಮಚಗೀ ಸೀನಪ್ಪನವರು "ರಸಿಕರಂಜಿನಿ"ಯೆಂಬ ವಾರಪತ್ರಿಕೆಯ ಸಂಪಾದಕರಾಗಿದ್ದರು. "ಕರ್ನಾಟಕ ವೈಭವ"ವು ಇದೇ ಕಾಲಕ್ಕೆ ವಿಜಾಪುರದಲ್ಲಿ ಉದಯವಾಯಿತು. ಹುನಗುಂದ ಕೃಷ್ಣರಾಯರೇ ಮೊದಲಾದ ಮೂವರು "ಭಾಷಾಸೇವಕ"ವೆಂಬ ಮಾಸಪತ್ರಿಕೆಯನ್ನು ಹೊರಡಿಸಿ ಸಂಸ್ಕೃತದ ಮಾಲತೀ ಮಾಧವ ಮತ್ತು ಶಕುಂತಲ ನಾಟಕಗಳ ಕಥೆಗಳನ್ನು "ಕುರುಹಿನ ಬಕುಳಹಾರ", "ಕೇಡುತಂದ ಉಂಗುರ" ಎಂಬ ಹೆಸರುಗಳಿಂದ ಕನ್ನಡಿಗರಿಗೆ ಒದಗಿಸಿಕೊಟ್ಟರು. ಬೆಳಗಾಂವಿಯಲ್ಲಿ ಕರಗುಪ್ಪೀ ಕೃಷ್ಣರಾಯರು "ಮಾತೃಭೂಮಿ"ಯೆಂಬ ಮಾಸಪತ್ರಿಕೆಯನ್ನು ಹೊರಡಿಸಿದರು. ಡಾಕ್ಟರ ಸವಣೂರ ಹಣಮಂತರಾಯರ ಪರಿಶ್ರಮದ ಫಲವಾಗಿ ಬೆಳಗಾಂವಿಯಲ್ಲಿ "ಕರ್ನಾಟಕಮಿತ್ರ"ವು ಹುಟ್ಟಿತು. ಕುಮಠೆಯಲ್ಲಿ "ಕರ್ನಾಟಕ ಧುರೀಣ"ದ ಅವತಾರವಾಯಿತು. "ಕಾನಡಾ ವೃತ್ತ"ವು ಇನ್ನೂ ಅತ್ತಕಡೆಯ ಕನ್ನಡತನವನ್ನು ಕಾಯುತ್ತ ನಿಂತಿರುವ ಕಾಹುಗಾರವಾಗಿದೆ. ಇವೆಲ್ಲ ಪತ್ರಿಕೆಗಳ ಸಂಸ್ಥಾಪಕರೂ ಸಂಪಾದಕರೂ ಇತ್ತಕಡೆಯ ಕನ್ನಡದ ಬೆಳವಣಿಗೆಗೆ ಕಾರಣಪುರುಷ ರಾಗಿದ್ದಾರೆ.

ಹೀಗೆ ನಮ್ಮಾ ಉತ್ತರ ಕರ್ನಾಟಕದಲ್ಲಿ ಕನ್ನಡದ ಹುಟ್ಟು ಅಡಗುವ ಹೊತ್ತು ಬಂದಾಗಿನಿಂದ ಅದನ್ನು ಉಳಿಸಲೂ ಬೆಳಸಲೂ ಅದಕ್ಕೆ ಕಳೆಯೇರಿಸಲೂ ಅನೇಕ ಜನ ಮಹಾನುಭಾವರು ಬಗೆಬಗೆಯಿಂದ ಪ್ರಯತ್ನಮಾಡಿ ಅನೇಕ ವಿಧದ ಸೇವೆ ಯನ್ನು ಸಲ್ಲಿಸಿ ಪರಿಶ್ರಮಪಟ್ಟ ಇತಿಹಾಸವು ಬಲು ದೊಡ್ಡದಾಗಿದೆ. ಹೀಗೆ ಅಖಂಡ ವಾಗಿ ನಡೆದ ಕನ್ನಡ ಶರಣರ ತಪಸ್ಸಿನ ಪುಣ್ಯಪ್ರಭಾವದಿಂದ ಇತ್ತಕಡೆಗೆ ಕನ್ನಡದ ಬೆಳವಣಿಗೆಯಾಗುತ್ತ ನಡೆದರೂ ಅದಕ್ಕೆ ಸಾರ್ವಜನಿಕ ಜೀವನದಲ್ಲಿ ಮನ್ನಣೆ ಯೆಂಬುದು ಅಷ್ಟಕಷ್ಟೆ ಉಂಟಾದುದು ಕಂಡುಬರುತ್ತಿತ್ತು. ಸರಕಾರದ ಅಧಿಕಾರ ಗಳಲ್ಲಿಯೂ ಸಾರ್ವಜನಿಕ ಚಟುವಟಿಕೆಗಳಲ್ಲಿಯೂ ಮಹಾರಾಷ್ಟ್ರದತ್ತಕಡೆಯಿಂದ ಬರುತ್ತಿದ್ದ ಮರಾಠೀ ಜನರ ಪ್ರಾಬಲ್ಯವೇ ವಿಶೇಷವಾಗಿರುತ್ತಿದ್ದುದರಿಂದ ಇಲ್ಲಿಯ ಸಾರ್ವಜನಿಕ ಜೀವನದಲ್ಲಿ ಮರಾಠಿಗೇ ಪ್ರಮುಖಸ್ಥಾನ.— ಕನ್ನಡವು ಅದರ ತೊತ್ತಿನಂತೆ ನಡುನಡುವೆ ತಲೆ ಚಾಚಬೇಕು. ಇತ್ತಕಡೆಯ ಕನ್ನಡಿಗ ಪ್ರಮುಖ ಕಾರ್ಯಕರ್ತರಲ್ಲಿಯೂ ನೆಲೆಗೊಂಡಿದ್ದ ಈ ಆತ್ಮವಂಚಕ ಹೀನಾಯಭಾವನೆಯನ್ನು

ಬೇರು ಸಹಿತ ಕಿತ್ತು ಬಿಸುಟಿದ ವೀರರು ಆಲೂರ ವೆಂಕಟರಾಯರು. ಇವರ ವಿದ್ಯಾರಣ್ಯರ ಚರಿತ್ರೆಯೂ ಕರ್ನಾಟಕದ "ಗತವೈಭವ"ವೂ ಆ ಕಾಲದ ಕನ್ನಡ ತರುಣರ ಅಭಿಮಾನದ ಕಿಡಿಯನ್ನು ಹೊತ್ತಿಸಿ ಪ್ರಜ್ವಲಿಸುವಂತೆ ಮಾಡಿದವು. ಕರ್ನಾಟಕದ ಸಾರ್ವಜನಿಕ ಜೀವನದಲ್ಲಿ ಕನ್ನಡಕ್ಕೇ ಪ್ರಥಮ ಸ್ಥಾನವಿರಬೇಕೆಂಬ ಹಟದಿಂದ ಲೋಕಮಾನ್ಯ ತಿಲಕರೊಂದಿಗೆ ಕೂಡ ಹೋರಾಡಿ ಅವರ ಪ್ರಭಾವಳಿಯೊಳಗಿನ ಮರಾಠಿಗೆ ಮನಸೋತ "ಕರ್ನಾಟಕ ಧುರಂಧರ"ರ ದುರ್ಭೇದ್ಯ ಮುತ್ತಿಗೆಯನ್ನು ಭೇದಿಸಿ ಮೊದಲಿನ ವಿಜಯವನ್ನು ಸಂಪಾದಿಸಿದವರು ಆಲೂರ ವೆಂಕಟರಾಯರು. ಲೋಕಮಾನ್ಯರ "ಹೋಮರೂಲ" ಚಳುವಳಿಯಲ್ಲಿ ಕರ್ನಾಟಕ ಪ್ರಾಂತಕ್ಕೇ ಸ್ವತಂತ್ರ ಶಾಖೆಯನ್ನು ದೊರಕಿಸಿದ ಶ್ರೇಯಸ್ಸು ವೆಂಕಟರಾಯರದು. ಆಗಿನಿಂದ ಇತ್ತಕಡೆಯ ಕನ್ನಡ ಚಟುವಟಿಕೆಗಳ ಬಣ್ಣವೇ ಬದಲಾಯಿತು. ಕನ್ನಡಕ್ಕೆ ಸ್ವತಂತ್ರಸ್ಥಾನದ ಮನ್ನಣೆ ದೊರೆಯಲನುವಾಯಿತು. ಶಾಂತಕವಿಗಳ ವಿದ್ಯಾರಣ್ಯರ ಚರಿತ್ರ ಕೀರ್ತನೆಯ ದಿವ್ಯ ವಾಣಿಯಿಂದ ಈ ಮನ್ನಣೆಯ ಪ್ರಭಾವವು ದಿನದಿನಕ್ಕೆ ಬೆಳೆಯಲಾರಂಭಿಸಿತು. ಕನ್ನಡ ಜನಾಂಗವನ್ನೊಂದುಗೂಡಿಸಿ ಹೊಸಗನ್ನಡದ ನಾಡನ್ನು ಸ್ವತಂತ್ರವಾಗಿ ಕಟ್ಟಬೇಕೆಂಬ ಸಂಕಲ್ಪವನ್ನು ಕೈಗೊಂಡು ಕನ್ನಡದ ಧ್ವಜವನ್ನೆತ್ತಿ ಹಿಡಿದು ಹುಮ್ಮಸ್ಸಿನಿಂದ ಮುಂದುವರಿದ ಕಡಪಾ ರಾಘವೇಂದ್ರ ರಾಯರ ಪ್ರಭಾವಶಾಲಿಯಾದ ಕರ್ತೃತ್ವವು ಇತ್ತಕಡೆಗೆಲ್ಲ ಕ್ರಾಂತಿಯನ್ನೇ ಎಬ್ಬಿಸಿಬಿಟ್ಟಿತು. ಕರ್ನಾಟಕದ ಜನಜೀವನದಲ್ಲಿ ಕರ್ನಾಟಕದ ಮುಖಂಡರೂ ಕಾರ್ಯಕರ್ತರೂ ಎನಿಸುವವರ ಸಾರ್ವಜನಿಕ ನಡೆನುಡಿಗಳಲ್ಲಿ ಕನ್ನಡಕ್ಕಲ್ಲದೆ ಬೇರೆ ಹೊರ ನುಡಿಗಳಿಗೆ ಅವಕಾಶವೇ ಇರಕೂಡದೆಂಬ ಸೂತ್ರವು ರಾಘವೇಂದ್ರರಾಯರಿಂದ ಪ್ರತಿಪಾದಿತವಾಗಿ ಸರ್ವಮಾನ್ಯವಾಗಿ ಅಂಗೀಕರಿಸಲಾಯಿತು. ಕನ್ನಡಿಗರ ಸ್ವಾತಂತ್ರ್ಯಕ್ಕೂ ಕನ್ನಡದ ಅಪ್ರತಿಬಂಧ ಬೆಳವಣಿಗೆಗೂ ಕರ್ನಾಟಕ ಸಂಸ್ಕೃತಿಯ ನಿರಾಬಾಧಕ ಸಂರಕ್ಷಣೆಗೂ ಮೂಲಾಧಾರವಾದ ಈ ಸೂತ್ರವನ್ನೇ ಅನುಸರಿಸಿ ನಡೆಯುವ ದೃಢನಿಶ್ಚಯದಿಂದ ಮುಂದುವರಿಯುವಾಗ ಅನೇಕ ಚಕಮಕಿಗಳಾದವು; ಬಡಿದಾಟ ಹೊಡೆದಾಟಗಳಾದವು; ಎಷ್ಟೊಂದು ಸಾರ್ವಜನಿಕ ಸಭೆಗಳು ಮುರಿದವು! ಪರಿಷತ್ತು ಸಮ್ಮೇಳನಗಳಲ್ಲಿ ಕೂಗಿನ ಕೋಲಾಹಲ ಕೈ ಮೈಗಳ ಕಾದಾಟಗಳಿದ್ದವು! ಇಷ್ಟೆಲ್ಲ ವಿಪರೀತವಾದ ವಿರೋಧವನ್ನು ಎದೆಗೊಟ್ಟು ಎದುರಿಸಿ, ಎದುರಾಳಿಗಳನ್ನೆಲ್ಲ ಚೆದರಿಸಿ, ಕನ್ನಡದ ಮುನ್ನಡೆಗೆ ಕಾಲ್ತೊಡಕಾಗಿದ್ದ ಪರಭಾಷೆಗಳ ಪ್ರಭಾವವನ್ನು ಬದಿಗೆ ಸರಿಸಿ, ಕನ್ನಡ ಜನಾಂಗವು ತನ್ನ ಉನ್ನತಿಯ ಹಾದಿಯನ್ನು ನಿಷ್ಕಂಟಕವಾಗಿ ಹದಗೊಳಿಸಿ, ಗೆಲುವನ್ನು ದೊರಕಿಸುತ್ತ ಮುಂದಾಗಬೇಕಾಯಿತು. ಇತ್ತಕಡೆಯ ಕನ್ನಡಿಗರ ಸ್ವಸಂರಕ್ಷಣೆಯ, ಆತ್ಮೋದ್ಧಾರದ ಹೋರಾಟದ ಅತ್ಯಂತ ಸಂಕ್ಷಿಪ್ತವಾದ ವಿವರಣೆಯು ಹೀಗೆಂದು ಕೈಯೆತ್ತಿ ಹೇಳಬಹುದಾಗಿದೆ. ಈ ಹೋರಾಟದಲ್ಲಿ ಪಾಲುಗಾರರಾಗಿದ್ದ ಕನ್ನಡ ಕುಲದೀಪಕರೆಲ್ಲರೂ ಮುಂದಿನ ಕನ್ನಡ ಜನಾಂಗಕ್ಕೆ ನಿಜವಾಗಿ "ಪುಣ್ಯಪುರುಷರು".

**ಮುದವೀಡು ಕೃಷ್ಣರಾಯ**



# ನುಡಿ — ನಾಡು

## ಕರ್ನಾಟಕ — ಭಾರತ

ಕರ್ನಾಟಕದ ಜಾಗೃತಿಯು ಈಗ ಒಂದು ಮಟ್ಟಿಗೆ ಬಂದಿದೆ. ಇನ್ನೂ ಆಗ ತಕ್ಕ ಕೆಲಸವು ಬಹಳವಿದೆ ಎಂಬ ಮಾತು ನಿಜ. ಆದರೆ ಅದೆಲ್ಲ ಆದೀತೆಂಬ ಭರವಸೆ ಈಗ ಹುಟ್ಟಲು ಅವಕಾಶವಾಗಿದೆ. ಆದುದರಿಂದ ಈ ಸಮಯದಲ್ಲಿ ಕರ್ನಾಟಕದ ಹಿಂದಿನ, ಇಂದಿನ, ಮುಂದಿನ ಸ್ಥಿತಿಗತಿಗಳನ್ನು ರೇಖಿಸಲು ಯಾರಾದ ರೊಬ್ಬರು ಕೈಯಿಟ್ಟರೆ ಕಾಲೋಚಿತವೆ ಆಗಬಹುದು. ಕರ್ನಾಟಕದ ಗತವೈಭವ ವನ್ನೆ ವರ್ಣಿಸುತ್ತ ಕೂಡುವದೊಂದು ಕಾಲವಿತ್ತು. ಉಜ್ವಲ ಭೂತಕಾಲದ ಎಚ್ಚರ ಗೊಟ್ಟು ಮಲಗಿದ ಕನ್ನಡಿಗರನ್ನು ಆಗ ಎಚ್ಚರಿಸಬೇಕಾಗಿತ್ತು. ಅವರಲ್ಲಿ ಆತ್ಮ ಜ್ಞಾನದ ಬೀಜವನ್ನು ಊರಬೇಕಾಗಿತ್ತು. ಈಗ ನಾಡಿನ ತುಂಬ ಉಂಟಾದ ನವ ಜಾಗೃತಿಯನ್ನು ಬಣ್ಣಿಸಿ, ಜನರಲ್ಲಿ ಆತ್ಮವಿಶ್ವಾಸವನ್ನುಂಟುಮಾಡಿ, ಮುಂದಿನ ಹೆಜ್ಜೆಗಳನ್ನಿಡುವ ಹಾತೋಟೆಯನ್ನು ಹೇಳುವ ಜಾಣರು ಬೇಕು. ಆ ಕೆಲಸವೀಗ ನಡೆದಿದೆ. ಅದು ಇನ್ನೂ ಹೆಚ್ಚಾಗಬೇಕು ಎಂಬುದು ನಿಜವಿದ್ದರೂ ಅದು ಅಲ್ಪ ಮಟ್ಟಿಗಾದರೂ ಚೆನ್ನಾಗಿ ನಡೆದಿದೆ ಎಂಬುದು ನಿರ್ವಿವಾದವು.

ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ರೀತಿಯಿಂದ ಹೊಸ ಜಾಗೃತಿಯು ಉಂಟಾ ಗುವುದೆಂಬುದು ಆಯಾ ದೇಶಗಳ ಇತಿಹಾಸದಿಂದ ಕಂಡುಬರುವದು. ಆಸ್ಟ್ರಿಯದ ಆಡಳಿತಕ್ಕೆ ಒಳಗಾಗಿ ನುಚ್ಚುನುರಿಯಾಗುತಿದ್ದ ಇಟಲಿಯಲ್ಲಿ ಮೊದಲು ನುಡಿಯ ಬಗ್ಗೆ ಜಾಗೃತಿಯುಂಟಾಯಿತು. ಮುಂದೆ ಅದು ನಾಡಿನ ಬಗ್ಗೆ, ನಾಡಿನ ಸ್ವಾತಂತ್ರ್ಯದ ಬಗ್ಗೆ ಜಾಗೃತಿಯನ್ನುಂಟುಮಾಡಿತು. ಕರ್ನಾಟಕದಲ್ಲಿ ಅದೇ ರೀತಿ ಆಗಿದೆ ಎಂದು ಹೇಳಬಹುದು. ನುಡಿಯ ಮೂಲಕ ಹಾಗೂ ನುಡಿಯ ಬಗ್ಗೆ ಮೊದಲು ನಮ್ಮಲ್ಲಿ ಎಚ್ಚರ ಹುಟ್ಟಿತು. ಮುಂದೆ ನುಡಿಗುಂಟ ಸಾಗಿ ಈಗ ನಮಗೊಂದು ನಾಡು ಬೇಕು ಎಂದು ಯತ್ನಿಸುತ್ತಿದ್ದೇವೆ. ಜಾಗೃತಿ ಎಂಬ ಮಾತೇ ಹಾಗಿದೆ. ಯಾವದೊಂದು ದೇಶದಲ್ಲಿ ಯಾವದೇ ಒಂದು ಮಾತಿನ ಬಗ್ಗೆ ಜಾಗೃತಿ ಉಂಟಾದರೂ ಅದು ದೇಶದಲ್ಲೆಲ್ಲ ಹೊಸಚೈತನ್ಯವನ್ನು ಹರಡುವದು; ಹಾಗೂ, ಪ್ರತಿಯೊಂದು ವಿಷಯದಲ್ಲಿಯೂ ಎಚ್ಚರವನ್ನುಂಟುಮಾಡುವದು. ಒಮ್ಮೆ ಎಚ್ಚತ್ತವನು ಎಲ್ಲ ಬಗೆಯಿಂದಲೂ ಎಚ್ಚರುಳ್ಳವನಾಗುವನು. ಹಿಂದುಸ್ಥಾನದಲ್ಲಿ ರಾಜಕೀಯ ಜಾಗೃತಿ ಮೊದಲು ಉಂಟಾಯಿತು. ಬಳಿಕ ಸಾಂಸ್ಕೃತಿಕ ಹಾಗೂ ಭಾಷಾವಿಷಯಕ ಜಾಗೃತಿಯು ತಲೆದೋರಲಾರಂಭಿಸಿತು. ಕರ್ನಾಟಕದಲ್ಲಿ ನುಡಿಯ ಬಗ್ಗೆ ಜಾಗೃತಿಯಾದಂತೆಲ್ಲ, ಕನ್ನಡ ನುಡಿ ಮಾತಾಡುವವರೆಲ್ಲ ಒಂದೇ ನಾಡಿನಲ್ಲಿರಬೇಕು, ನಾವು ಒಂದೇ ನಾಡಾಗಬೇಕು, ಎಂಬ ಎಚ್ಚರವು ಹೆಚ್ಚು ಬಲ ವುಳ್ಳದ್ದಾಗಲಾರಂಭಿಸಿತು. ನಾವು ಹಾಗೆ ಒಂದಾಗದಿದ್ದರೆ ನಾವು, ನಮ್ಮ ನುಡಿ, ಇವಾವೂ ಉಳಿಯವು, ಬೆಳೆಯವು ಎಂದೆನಿಸಿತು. ಕೇವಲ ಕನ್ನಡ ನುಡಿ, ಮತ್ತು ಆ ನುಡಿಯನ್ನಾಡುವ ಜನ ಸ್ವಸಂರಕ್ಷಣೆಗಾಗಿ ಕನ್ನಡ ನಾಡಿನ ಮಾತನ್ನೆತ್ತ ಬೇಕಾಯಿತು. ಯಥಾರ್ಥವಾಗಿ ನೋಡಿದರೂ ಹೀಗೆ ಮಾಡುವದು ಯೋಗ್ಯವೆಂದು

ಒಪ್ಪಬೇಕಾಗುವದು. ನುಡಿ ಎಂಬುದು ಬದುಕಿ ಬಾಳಿ ಬೆಳೆಯುವುದಾದರೆ ಅದಕೊಂದು ನೆಲೆ ಬೇಕು, ನೆಲ ಬೇಕು; ಅರ್ಥಾತ್ ತನ್ನದೆಂಬುದೊಂದು ನಾಡು ಬೇಕು. ಕರ್ನಾಟಕವು ವಿಶಾಲ ಭಾರತದ ಒಂದು ಪ್ರಾಂತ, ಒಂದು ಭಾಗವಿಶೇಷ ವಾದುದರಿಂದ ನಮಗೊಂದು ಪ್ರಾಂತ ಬೇಕು ಎಂದು ಬೇಡುತಿದೇವೆ, ಅದಕ್ಕಾಗಿ ಯತ್ನಿಸುತಿದೇವೆ.

ಸಾವಿರಾರು ವರುಷಗಳಿಂದ ಹಿಂದೀ ರಾಷ್ಟ್ರವೆಂಬ ದೊಡ್ಡದೊಂದು ಜನಾಂಗವು ಆಸೇತು ಹಿಮಾಚಲ ಏಕರೀತಿಯಾಗಿ ತನ್ನ ಜೀವನವನ್ನು ಸಾಗಿಸುತ್ತ ಬಂದಿದೆ. ತನಗೆ ಬಂದ ಸಂಕಟಪರಂಪರೆಗಳನ್ನು, ಉಕ್ಕುವ ಸಮುದ್ರದ ತೆರೆಗಳನ್ನು ದಂಡೆಯು ಬಂಡೆಯೊಂದು ಎದುರಿಸುವಂತೆ, ಭಾರತವು ಎದುರಿಸುತ್ತ ಬಂದಿತು. ವಿವಿಧ ಜನಾಂಗಗಳನ್ನು ಸಂಸ್ಕೃತಿಗಳನ್ನು ತನ್ನ ಹೊಟ್ಟೆಯೊಳಗೆ ಹಾಕಿಕೊಂಡು ಅವುಗಳನ್ನು ನಷ್ಟಪಡಿಸುವ ಗೋಜಿಗೆ ಹೋಗದೆ ಅವುಗಳಿಗೆ ತಕ್ಕ ಸ್ಥಾನಮಾನಗಳನ್ನು ಕೊಡುತ್ತ, ಅವುಗಳಲ್ಲಿಯ ಸಾಧುಭಾಗವನ್ನರಗಿಸುತ್ತ ಹಿಂದುಸ್ಥಾನವು ಈ ಹೊತ್ತು ಒಂದು ಭವ್ಯವಾದ ರಾಷ್ಟ್ರವಾಗಿ ನಿಂತಿದೆ. ಅದನ್ನು ಯಾವದೇ ಕಾರಣದಿಂದ ತುಂಡರಿಸು ವುದು ಅತ್ಯಂತ ಘಾತಕವಾದುದೆಂಬದನ್ನು ಹೇಳಲವಶ್ಯವಿಲ್ಲ. ಜಾತಿ ಧರ್ಮಗಳ ಮೂಲಕವಾಗಲಿ, ಭಾಷೆಗಳ ಮೂಲಕವಾಗಲಿ ಭಾರತ ರಾಷ್ಟ್ರದಲ್ಲಿ ಸ್ವತಂತ್ರ ವಿಭಾಗಗಳನ್ನು ಮಾಡುವುದೆಂದರೆ ಒಂದೇ ದೇಹವನ್ನು ಕತ್ತರಿಸಿ ದಿಕ್ಕುದಿಕ್ಕಿಗೆ ಚೆಲ್ಲಿದಂತೆ. ಹಾಗೆ ಮಾಡಿದರೆ ಅದು ಒಂದು ರಾಷ್ಟ್ರವಾಗಿ ಉಳಿಯಲಾರದು. ಜಗತ್ತಿನ ಚರಿತ್ರದಲ್ಲಿಯೆ ಅದೊಂದು ಅತ್ಯಂತ ಪ್ರಚಂಡ ದುರಂತವೆನಿಸುವದು. ಈಗ ಹಲವರು ಪ್ರತಿಪಾದಿಸುತಿರುವಂತೆ ಈ ದೊಡ್ಡ ರಾಷ್ಟ್ರವನ್ನು ಇಸ್ಲಾಮಸ್ಥಾನ, ಹಿಂದುಸ್ಥಾನ, ಶೀಖಸ್ಥಾನ ಎಂದು ಮುಂತಾಗಿ ವಿಂಗಡಿಸಿ ಪ್ರತ್ಯೇಕ ಜನಾಂಗ ಗಳನ್ನು ನಿರ್ಮಿಸಿದರೆ ಅವುಗಳಲ್ಲಿ ಮತ್ಸರ, ಸಂಶಯ, ದ್ವೇಷಾಸೂಯೆ ಹುಟ್ಟಿ ಅವು ಪರಸ್ಪರ ಹೋರಾಡಿ ಪರಕೀಯರಿಗೆ ಅನಂತಕಾಲದ ವರೆಗೆ ಆಮಂತ್ರಣ ಕೊಟ್ಟಿಡುವವೆಂಬಲ್ಲಿ ಸಂಶಯವು ತೋರುವುದಿಲ್ಲ. ಅದೇ ರೀತಿ ಈ ಒಂದೇ ಒಂದು ರಾಷ್ಟ್ರದಲ್ಲಿ ಭಾಷಾನುಗುಣ ಪ್ರತ್ಯೇಕ ಸ್ವತಂತ್ರ ರಾಷ್ಟ್ರಗಳನ್ನು ನಿರ್ಮಿಸಿದರೆ ಈಗಿನ ಯೂರೋಪ ಖಂಡದ, ಚರಿತ್ರದ ಪುನರಾವರ್ತನವಾಗುವದು! ಹೀಗಿರುವಾಗ ಹಿಂದೀ ರಾಷ್ಟ್ರದ ಏಕತೆಗೆ ಯಾವುದೇ ಬಗೆಯ ಕುಂದು ಬಾರದಂತೆ ಆಯಾ ಭಾಷಾ ಪ್ರಾಂತಗಳಿಗೆ ತಕ್ಕಷ್ಟು ಸ್ವಾಯತ್ತತೆ ಕೊಟ್ಟು ಅಲ್ಲಲ್ಲಿಯ ನುಡಿ, ವಾಙ್ಮಯ, ಕಲೆ ಮುಂತಾದವುಗಳಿಗೆ ವಿಕಾಸಾವಕಾಶವನ್ನು ಕಲ್ಪಿಸಿಕೊಡುವುದೆ ಉತ್ತಮ ಪಕ್ಷ ಎಂಬುದು ಸ್ಪಷ್ಟವಿದೆ. ಅರ್ಥಾತ್ ಇಡೀ ಹಿಂದುಸ್ಥಾನದ ರಾಜಕೀಯ ಹಾಗೂ ಆರ್ಥಿಕ ಹಿತಸಂಬಂಧಗಳು ಒಂದೇ ಎಂಬುದು ಸಿದ್ಧಾಂತವೆಂದು ತಿಳಿದು, ಜಗತ್ತಿನಲ್ಲಿ ಹಿಂದೀ ರಾಷ್ಟ್ರವೆಂಬುದೊಂದು ಪ್ರತ್ಯೇಕ ರಾಷ್ಟ್ರವಿರತಕ್ಕದ್ದು ಎಂಬು ದನ್ನು ಒಪ್ಪಿಕೊಂಡು ನಾವು ಮುಂದೆ ಹೆಜ್ಜೆ ಇಡಬೇಕಾಗುವದು. ಹಿಂದೀ ರಾಷ್ಟ್ರ ದಲ್ಲಿ ನಾವು ಮಾಡಿಕೊಳ್ಳಬಹುದಾದ ಇತರ ಎಲ್ಲ ವ್ಯವಸ್ಥೆಗಳು ತದಂತರ್ಗತ ವಾದವುಗಳು ಹಾಗೂ ಆನುಷಂಗಿಕವಾದವುಗಳು ಎಂಬುದನ್ನು ನಾವು ಅರಿತು ಕೊಳ್ಳಲಿಕ್ಕೆ ಬೇಕಾದ ಮಾತು. ಈ ದೃಷ್ಟಿಯಿಂದ ನೋಡಿದರೆ ಈ ಹಿಂದೀ

ರಾಷ್ಟ್ರದಲ್ಲಿರುವವರೆಲ್ಲರೂ ತಾವು ಒಂದೇ ಒಂದು ರಾಷ್ಟ್ರದವರು ಎಂಬ ಭಾವನೆ ಯಿಂದ ನಡೆಯಬೇಕಾಗಿ ಬರುವದು. ಈ ಭಾವನೆ ಇಲ್ಲದ ಮೂಲಕವೆ ಇಲ್ಲಿ ಪರಚಕ್ರದ ಪ್ರವೇಶವಾಯಿತು. ಈ ಭಾವನೆ ಸಾಕಷ್ಟು ಬಲಿತ ದಿನವೆ ಪರಚಕ್ರವು ಪಲಾಯನಮಾಡುವುದು. ಇಡೀ ಹಿಂದುಸ್ಥಾನದಲ್ಲಿ 'ಇದು ತನ್ನ ಭೂಮಿ, ತನ್ನ ಮಾತೃಭೂಮಿ, ತನ್ನ ಪಿತೃಭೂಮಿ, ತನ್ನ ಧರ್ಮಭೂಮಿ, ತನ್ನ ಕರ್ಮ ಭೂಮಿ' ಎಂದು ಅನ್ನುವವರೆಲ್ಲರೂ ಬಾಂಧವರು, ನೆರೆಯವರು. ಇವರಲ್ಲಿ ಪರರು ಯಾರೂ ಇಲ್ಲ, ಪರಕೀಯರಾರೂ ಇಲ್ಲ. ಯಾವದೇ ಧರ್ಮದವರಿರಲಿ, ಜಾತಿಯವರಿರಲಿ, ಭಾಷೆಯವರಿರಲಿ— ಎಲ್ಲರೂ ನೆರೆಯವರು, ಬಾಂಧವರು, ಕೊನೆಯವರೆಗೆ ಬಾಂಧವ್ಯದಿಂದ ಇರಲು ಬದ್ಧರು. ಆಸೇತು ಹಿಮಾಚಲದಲ್ಲಿ ಒಬ್ಬನು ಎಲ್ಲಿಯೆ ಹುಟ್ಟಿರಲಿ, ಯಾವದೇ ಜಾತಿಯವನಿರಲಿ, ಯಾವದೇ ಧರ್ಮದವನಿರಲಿ, ಯಾವದೇ ನುಡಿಯನ್ನಾಡುತ್ತಿರಲಿ, ಅವನು ಇಡೀ ಹಿಂದುಸ್ಥಾನವು ತನ್ನ ಮಾತೃಭೂಮಿ ಎಂದೇ ಎಣಿಸಬೇಕು; ಹಿಂದವಾಸಿಯರೆಲ್ಲ ತನ್ನ ಬಾಂಧವರು, ತನ್ನ ನೆರೆಯವ ರೆಂದೇ ಭಾವಿಸಬೇಕು. ಹಿಂದುಸ್ಥಾನದಲ್ಲಿ ಎಷ್ಟೇ ವಿವಿಧತೆ ಇದ್ದರೂ ಅಲ್ಲಲ್ಲಿ ಯವರು ಯಾವದೇ ಬೇರೆ ಬೇರೆ ಭಾಷೆಗಳನ್ನಾಡುತ್ತಿದ್ದರೂ ಅವು ನಮಗೆ ಪರವಲ್ಲ, ನೆರೆಯವು.

ಹಿಂದುಸ್ಥಾನದ ಸಂಸ್ಕೃತಿ ಸ್ರೋತವಾದರೂ ಇದೇ ಬಗೆಯಾಗಿ ಬೆಳೆಯುತ್ತ ಬಂದಿದೆ. ಬೇರೆ ಬೇರೆ ಪ್ರಾಂತದವರು ಬೇರೆ ಬೇರೆ ಕಾಲಕ್ಕೆ ಬೇರೆ ಬೇರೆ ರೀತಿಯಿಂದ ಈ ಭಾರತೀಯ ಸಂಸ್ಕೃತಿ ಮಂದಿರವನ್ನು ಕಟ್ಟಲು ನೆರವಾಗಿದ್ದಾರೆ. ಈಗ ನಮ್ಮಲ್ಲಿ ವಿವಿಧ ನುಡಿಗಳ ಪ್ರಾಬಲ್ಯವು ಹೆಚ್ಚುತ್ತ ಬಂದಿದ್ದರೂ ಈಗ ನಾಲ್ಕಾರು ಶತಕ ಗಳಾಚೆ ಸಂಸ್ಕೃತವೆ ಹಿಂದುಸ್ಥಾನದಲ್ಲಿ ವಿಚಾರಿಗಳ, ಪಂಡಿತರ, ಸಾಮಾನ್ಯ ಭಾಷೆ ಯಾಗಿತ್ತು. ಹಿಂದುಸ್ಥಾನದ ಪ್ರತಿಯೊಂದು ಪ್ರಾಂತದವರೂ ಬೇರೆ ಬೇರೆ ಕಾಲಕ್ಕೆ ಸಂಸ್ಕೃತ ಗ್ರಂಥಗಳನ್ನು ಬರೆದು ಹಿಂದುಸ್ಥಾನದ ಸಾಹಿತ್ಯಕ್ಕೆ ನೆರವಾಗಿದ್ದಾರೆ. ಹೀಗೆಯೆ ಕಲೆ, ಶಿಲ್ಪ, ಉದ್ಯೋಗ, ವ್ಯಾಪಾರ, ವ್ಯವಹಾರ, ಶೌರ್ಯ, ವೀರ್ಯ, ಮುಂತಾದ ವಿಷಯಗಳಲ್ಲಿಯೂ ಪ್ರತಿಪ್ರಾಂತದವರೂ ತಮ್ಮ ಮುಡಿಪನ್ನು ಭಾರತ ಮಾತೆಗೆ ಅರ್ಪಿಸಿದ್ದಾರೆ. ಕರ್ನಾಟಕವು ತನ್ನ ಕರ್ತವ್ಯವನ್ನು ಈ ಸಂದರ್ಭದಲ್ಲಿ ಅತ್ಯುತ್ತಮ ರೀತಿಯಾಗಿ ಮಾಡಿದೆ. ಈಗಲೂ ಹಾಗೆ ಮಾಡಲು ತನಗೆ ಅವಕಾಶ ದೊರೆಯಬೇಕೆಂದು ಅದು ಹಾತೊರೆಯುತಿದೆ. ಇದೇ ಆತುರತೆಯೆ ಈ ನವ ಕರ್ನಾಟಕದ ಮೂಲ ಪ್ರೇರಣೆ. ಈ ಪ್ರೇರಣೆಯಂತೆ ನಡೆಯಲು ಕನ್ನಡಿಗರಿಗೆ ಅಡ್ಡಿಯಾದುದರಿಂದಲೆ ಅವರು ತಮಗೆ ನಾಡು ಬೇಕು ಎಂದು ಅದರ ಬೆನ್ನು ಬಿದ್ದುದು. ಚೆದರಿದ ಕನ್ನಡ ಜನಾಂಗವನ್ನು ಕೂಡಿಸದೆ ತಮ್ಮಿಂದ ಒಳ್ಳೆಯ ಸೇವೆ ಸಲ್ಲಿಸುವುದಾಗಲಿಕ್ಕಿಲ್ಲವೆಂದು ಅವರು ಒಂದುಗೂಡಲು ಯತ್ನಿಸುತಿರುವುದು. ಸದ್ಯಕ್ಕೆ ಒಂದು ಕೋಟಿ ಇಪ್ಪತ್ತು ಲಕ್ಷ ಕನ್ನಡಿಗರಿದ್ದರೂ ಅವರು ವಿಂಗಡಿಸಲ್ಪ ಟ್ಟದ್ದರಿಂದ ಅವರ ರಾಜಕೀಯ, ಆರ್ಥಿಕ, ಭೂಗೋಲಿಕ ವಿಭಾಗಗಳಾಗಿ ಹಿತ ಸಂಬಂಧಗಳೂ ಬೇರೆಯಾಗಿವೆ. ಅವರೆಲ್ಲರಿಗೂ ಸಾಮಾನ್ಯವಾದ ಹಿತಸಂಬಂಧವೂ ಒಂದೇ ಒಂದು. ಅದೆಂದರೆ ಕನ್ನಡ ನುಡಿ. ಆ ಒಂದು ಸೂತ್ರವನ್ನು ಹಿಡಿದು

ಕೊಂಡು ಇಡೀ ಕನ್ನಡ ಜನಾಂಗವನ್ನು ಕಟ್ಟುವ ಕೆಲಸವು ಈಗ ನಡೆಯಬೇಕು, ನಡೆದಿದೆ. ಕೇವಲ ಒಂದು ನುಡಿಯು ಏಳ್ಗೆ ಮಾಡಲು ಎಷ್ಟು ಯತ್ನಿಸಿದರೂ ಅದು ಪೂರ್ಣ ಸಫಲವಾಗಲರಿಯದು. ಯಾಕೆಂದರೆ ಆ ನುಡಿ ಅಲ್ಲಲ್ಲಿಯ ಆಘಾತ ಗಳಿಗೆ ಸಿಕ್ಕಿ ಸಣ್ಣಾಗಿಹೋಗುವದು. ಅದಕ್ಕೊಂದು ನೆಲೆ ದೊರೆತರೆ ಅದು ದೃಢವಾಗಿ ನಿಂತು ಮುಂದುವರಿಯಲು ಸಮರ್ಥವಾಗುವದು. ನುಡಿವೆಣ್ಣು ಬ್ರಹ್ಮಸಂಕಲ್ಪ ದಿಂದ ಆಕಾಶದಲ್ಲಿ ಹುಟ್ಟಿದರೂ ನಾಲಗೆಯ ತುದಿಯಮೇಲೆ ಕುಣಿಕುಣಿದು ನಲಿ ದರೂ ಲೆಕ್ಕಣಿಕೆಯ ಮೊನೆಯಲ್ಲಿ ನಿಂತು ಮುನ್ನಡೆಯಲು ಯತ್ನಿಸಿದರೂ ಆಕೆಗೊಂದು ಮನೆ, ನೆಲೆ, ತನ್ನದೆಂಬ ನೆಲ ಬೇಕು. ಇಲ್ಲದಿದ್ದರೆ ಆಕೆ ಅನಾಥಳಂತೆ, ಬೀದಿಯ ಪರದೇಶಿಯಂತೆ ಕೊನೆಯುವರೆಗೂ ಬಳಲುವ ಪ್ರಸಂಗವು ಬರುವದು. ಕೇವಲ ನುಡಿಯ ಸೇವೆಗೆಂದು ಹೊರಟವರು ಸಹ ಈ ಎಲ್ಲ ವಿಚಾರ ಪ್ರಣಾಲಿಯನ್ನು ಗುರುತಿಸು ವುದು ಅವಶ್ಯವು. ಹಾಗೆ ಗುರುತಿಸಿದರೆ ಮಾತ್ರ ಕರ್ನಾಟಕದಲ್ಲಿ, ಅದೇ ರೀತಿ ಭಾರತದಲ್ಲಿ, ನಡೆದ ಚಟುವಟಿಕೆಗಳ ಪೂರ್ಣ ಅರ್ಥವು ನಮಗೆ ತಿಳಿಯಬಲ್ಲದು. ಆ ಚಟುವಟಿಕೆಗಳ ಪರಸ್ಪರ ಸಂಬಂಧವನ್ನು ನಾವು ಅರಿಯಬಲ್ಲೆವು. ಎಲ್ಲ ಚಟುವಟಿಕೆಗಳಲ್ಲಿಯೂ ಯೋಗ್ಯವಾದ ಭಾಗವನ್ನು ವಹಿಸಬಲ್ಲೆವು. ಇಲ್ಲದಿದ್ದರೆ ಅವ್ಯವಸ್ಥಿತವಾದ ಯಾವುದೊಂದು ಸಮಾರಂಭ ಇಲ್ಲವೆ ಸಮಾರಾಧನೆಯ ಕಾಲಕ್ಕೆ ನಡೆದ ಕಾರ್ಯಕಲಾಪಗಳಂತೆ ಎಲ್ಲರೂ ಸದುದ್ದೇಶಗಳಿಂದ ಪ್ರೇರಿತರಿದ್ದರೂ ಅರ್ಥ ತೊಡಕು, ತಪ್ಪು ತಿಳಿವಳಿಕೆ, ಚರ್ವಿತ ಚರ್ವಣ ಮುಂತಾದವುಗಳಿಗೆ ಎಡೆಕೊಡುವ ಪರಿಸ್ಥಿತಿಯುಂಟಾಗುವದು.

ಈ ಮೇಲಿನ ಎಲ್ಲ ವಿಚಾರಗಳತ್ತ ಗಮನಿಸಿ, ಸ್ವತಂತ್ರ ಭಾರತ ಹಾಗೂ ಏಕ ತಂತ್ರ ಕರ್ನಾಟಕ, ಇದೇ ನಮ್ಮ ಮಂತ್ರವಾಗಬೇಕೆಂದೂ, ಅದು ಹಾಗೆ ಆಗುವ ವರೆಗೆ ನಮ್ಮಿಂದ ನಮ್ಮ ಪೂರ್ಣ ಕರ್ತವ್ಯವಾಗಲಾರದೆಂದೂ ನಾನು ನಂಬಿರುವೆನು. ಒಂದು ದಂಡು ಮುಂದೆ ಸಾಗುವ ಕಾಲಕ್ಕೆ ಅದರಲ್ಲಿಯ ಪ್ರತಿ ಸೈನಿಕನಿಗೆ ಆ ಸಾಗಿನ ಧ್ಯೇಯಧೋರಣೆಗಳು ಗೊತ್ತಿರದಿದ್ದರೂ ದಂಡನಾಯಕನೆದುರು ಅದರ ಪೂರ್ಣ ನಕ್ಷೆ ಯೋಜನೆಗಳಿರಬೇಕಾಗುವದು. ಅದೇ ರೀತಿ ಈಗ ಜಾಗ್ರತವಾಗಿ ದ್ರುತಗತಿಯಿಂದ ಮುನ್ನುಗ್ಗುತ್ತಿರುವ ಕನ್ನಡ ಜನಾಂಗದಲ್ಲಿ ಎಲ್ಲರಿಗೂ ಈ ಜ್ಞಾನ ಮುಂತಾದವು ಗಳಿರದಿದ್ದರೂ ಮುಖಂಡರೂ ಜ್ಞಾನಪೂರ್ಣರೂ ಎಚ್ಚರದಿಂದ ಸಾಗುವವರೂ ಇದ್ದರೆ ಸಾಕು. ಕನ್ನಡದ, ಕನ್ನಡಿಗರ, ಕನ್ನಡ ಜನಾಂಗದ, ಕರ್ನಾಟಕದ ಹಡಗು ತನ್ನ ಪರ್ಯಟನವನ್ನು ಸುಖರೂಪ ಮುಗಿಸುವದೆಂಬ ಭರವಸೆ ನನಗಿದೆ. ಇನ್ನು ಇದೀಗ ನಮ್ಮ ಪ್ರವಾಸ ಪ್ರಾರಂಭಿಸಿದೆ ಎಂದು ಹೇಳಬಹುದು. ಇತರ ಹಲವು ಪ್ರಾಂತಗಳಿಗಿಂತ ನಮ್ಮ ಸಮಸ್ಯೆಗಳು ಹೆಚ್ಚು ತೊಡಕಿನವೂ ಇರುವವೆಂಬುದು ನಿಃಸಂಶಯ. ಹೀಗಿದ್ದರೂ ಕನ್ನಡ ನಾಡು ನುಡಿಗಳು ಪುನಃ ಒಮ್ಮೆ ಭಾರತರಂಗ ದಲ್ಲಿ ನಿಃಸಂಶಯವಾಗಿ ಉಜ್ವಲ ರೀತಿಯಿಂದ ಮೆರೆದು ತಮ್ಮ ಸೇವೆಯನ್ನರ್ಪಿಸುವ ವೆಂದು ನಾನು ನಂಬಿದ್ದೇನೆ.

**ರಂಗನಾಥ ದಿವಾಕರ**

# ಕನ್ನಡ ನಾಡಿನ ಭೂಪಟ

ನಮ್ಮ ಮಾತೃಭೂಮಿಯಾದ ಭಾರತವು ಭಾಷೆಗಳ ಸಂತೆಯೆಂದು ಪಾಶ್ಚಾತ್ಯರನೇಕರು ಪರಿಹಾಸ್ಯಮಾಡಿದ್ದಾರೆ. ಆದರೆ ವಿಸ್ತೀರ್ಣದಲ್ಲೂ, ಜನಸಂಖ್ಯೆಯಲ್ಲೂ ಯೂರೋಪನ್ನು ಹೋಲುವ ಇಷ್ಟು ದೊಡ್ಡ ದೇಶದಲ್ಲಿ ಅನೇಕ ಭಾಷೆಗಳಿರುವುದು ಏನೂ ಆಶ್ಚರ್ಯಕರವಲ್ಲ. ಇದಲ್ಲದೆ ಆಯಾ ಗುಂಪಿನ ಜನರ ಸಂಸ್ಕೃತಿಗೆ ಸಾಧ್ಯವಾದಷ್ಟು ಮಟ್ಟಿಗೆ ಬಲಾತ್ಕಾರವನ್ನು ಕಡಿಮೆಮಾಡಿ ಸ್ವಾತಂತ್ರ್ಯವನ್ನು ಕೊಡುವುದೇ ಭಾರತದ ಸಂಸ್ಕೃತಿಯ ಮೂಲತತ್ವವಾಗಿರುವುದರಿಂದ ನಮ್ಮ ದೇಶದಲ್ಲಿ ನೂರಾರು ಭಾಷೆಗಳು ಬದುಕಿರುವುದು ಸ್ವಾಭಾವಿಕವೇ ಆಗಿದೆ. ಇಲ್ಲಿಯ ಭಾಷೆಗಳಲ್ಲಿ ಹೆಚ್ಚು ಸಂಖ್ಯೆಯ ಜನರು ಆಡುವುದು ಸುಮಾರು ಹನ್ನೆರಡು ಭಾಷೆಗಳಾಗಬಹುದು. ೧೯೩೧ರಲ್ಲಿ ಇವುಗಳ ಜನಸಂಖ್ಯೆ ಹೀಗಿತ್ತು:

೧. ಹಿಂದುಸ್ಥಾನಿ ೧,೨೦೦ ಲಕ್ಷ    ೭. ಕನ್ನಡ ೧೧೭ ಲಕ್ಷ
೨. ಬಂಗಾಳಿ ೫೩೦ ,,    ೮. ಗುಜರಾತಿ ೧೦೬ ,,
೩. ತೆಲುಗು ೨೬೦ ,,    ೯. ಒರಿಯ ೧೦೯ ,,
೪. ಮರಾಠಿ ೨೦ ,,    ೧೦. ಮಲೆಯಾಳ ೯೧ ,,
೫. ತಮಿಳು ೨೦೦ ,,    ೧೧. ಸಿಂಧಿ ೩೯ ,,
೬. ಪಂಜಾಬಿ ೧೬ ,,    ೧೨. ಅಸ್ಸಾಮಿ ೨೦ ,,

೧೯೪೧ರ ಹೊಸ ಜನಗಣನೆಯ ಲೆಕ್ಕಗಳು ಇನ್ನೂ ಸಿಕ್ಕದಿರುವುದರಿಂದ ಈ ನುಡಿಗಳ ಈಗಿನ ಸಂಖ್ಯೆಗಳನ್ನು ಈ ಲೇಖನದಲ್ಲಿ ಕೊಟ್ಟಿಲ್ಲ. ಈ ಭಾರತೀಯ ಭಾಷೆಗಳಲ್ಲಿ ಕನ್ನಡಕ್ಕೆ ಜನಸಂಖ್ಯೆಯಲ್ಲಿ ಏಳನೆಯ ಸ್ಥಾನ ದೊರೆಯುವಂತೆ ತೋರುತ್ತದೆ. ಮುಖ್ಯ ಭಾಷೆಗಳಲ್ಲಿ ಆರು ಇದಕ್ಕಿಂತಲೂ ದೊಡ್ಡವಾಗಿಯೂ ಐದು ಇದಕ್ಕಿಂತಲೂ ಸಣ್ಣವಾಗಿಯೂ ಕಾಣಬರುತ್ತವೆ. ಪ್ರಾಚೀನತೆಯಲ್ಲಿ ಕನ್ನಡಕ್ಕೆ ನಾಲ್ಕನೆಯ ಸ್ಥಾನವನ್ನು ಕೊಡಬೇಕು. ಈಗ ಜನರು ಆಡದೆ ಇರುವ ಸಂಸ್ಕೃತ, ಪ್ರಾಕೃತಗಳನ್ನುಳಿದರೆ ತಮಿಳು, ಕನ್ನಡಗಳಿಗೆ ಅಗ್ರಸ್ಥಾನಗಳು ದೊರೆಯಬೇಕಾಗುತ್ತದೆ. ಇಂತಹ ನಮ್ಮ ಕನ್ನಡ ನುಡಿಯ ವ್ಯಾಪ್ತಿಯು ಈಗ ಎಷ್ಟರ ಮಟ್ಟಿಗೆ ಇರುವುದೆಂಬುದನ್ನು ಜನಗಣನೆಗಳ ಲೆಕ್ಕಗಳಿಂದ ಗೊತ್ತುಮಾಡಿ ಅದನ್ನು ಚೆನ್ನಾಗಿ ಗೋಚರವಾಗುವಂತೆ ತೋರ್ಪಡಿಸುವುದಕ್ಕೆ ಈಗ ಪ್ರಕಟಿಸಿರುವ ಭೂಪಟವನ್ನು ಬರೆದಿದೆ. ಈ ಭೂಪಟಕ್ಕೆ ಸಂಬಂಧಪಟ್ಟಂತೆ ನಮ್ಮ ಭಾಷೆಯ ವ್ಯಾಪ್ತಿಯನ್ನು ಇಲ್ಲಿ ವಿವರಿಸಿದೆ.

ಪ್ರಾಚೀನ ದಕ್ಷಿಣ ಭಾರತದ ಇತಿಹಾಸವನ್ನು ಪರಿಶೀಲಿಸಿ ನೋಡಿದರೆ ಕನ್ನಡ ಮಾತನಾಡುವ ಜನರು ಇಂತಹ ಎಲ್ಲೆಯವರೆಗೂ ಇದ್ದರೆಂದು ಸುಮಾರಾಗಿ ನಿರ್ಧರಿಸಬಹುದು. ಕನ್ನಡಿಗರು ಕಟ್ಟಿ ಆಳಿದ ಸಾಮ್ರಾಜ್ಯಗಳಿಗೆ ಕನ್ನಡವಲ್ಲದ ಇತರ ಭಾಷೆಗಳನ್ನಾಡುವ ಪ್ರಾಂತಗಳೂ ಅನೇಕವೇಳೆ ಸೇರಿದ್ದುವು. ಬಾದಾಮಿಯ ಚಾಲುಕ್ಯರು ನರ್ಮದಾ ನದಿಯಿಂದ ಕಾವೇರಿಯವರೆಗೂ ವಿಸ್ತರಿಸಿರುವ ದಕ್ಷಿಣ ದೇಶಕ್ಕೆ ಕ್ರಿ. ಶ. ಏಳು ಎಂಟನೆಯ ಶತಮಾನಗಳಲ್ಲಿ ಅಧಿಪತಿಗಳಾಗಿದ್ದರು

ಮಾನ್ಯಖೇಟದ ರಾಷ್ಟ್ರಕೂಟರು ಗುಜರಾತ್, ಮಾಳವಗಳನ್ನು ಕೂಡ ಅಧೀನಮಾಡಿ ಕೊಂಡು ಕ್ರಿ. ಶ. ಒಂಬತ್ತು ಹತ್ತನೆಯ ಶತಮಾನಗಳಲ್ಲಿ ಭಾರತಕ್ಕೆಲ್ಲ ಮುಖಂಡ ರಾಗಿದ್ದರು. ಕಲ್ಯಾಣಿಯ ಚಾಲುಕ್ಯರ ಅಧೀನದಲ್ಲಿ ಚಾಲುಕ್ಯರ ಮತ್ತೊಂದು ಮನೆತನವು ದಖನ್ನಿನಲ್ಲಿ ಮಾತ್ರವಲ್ಲದೆ ಗುಜರಾತ್ ಪ್ರಾಂತದಲ್ಲೂ ಬಹುಕಾಲ ಆಳುತ್ತಿತ್ತು. ಆದರೆ ಕನ್ನಡಿಗರು ಹಿಂದೆ ಆಳಿದ ದೇಶಗಳಲ್ಲೆಲ್ಲಾ ಸಾಮಾನ್ಯ ಜನರು ಕನ್ನಡವನ್ನೇ ಆಡುತ್ತಿದ್ದರೆಂದು ಹೇಳುವುದು ಸರಿಯಲ್ಲ. ರಾಜವಂಶೀ ಯರೂ, ಅಧಿಕಾರಿಗಳೂ, ವಿದ್ವಾಂಸರನೇಕರೂ ಕನ್ನಡಿಗರಾಗಿದ್ದರೂ ಸಾಮಾನ್ಯ ಜನರು ತಮ್ಮ ತಮ್ಮ ಸ್ವಭಾಷೆಗಳನ್ನೆ ಆಡಿಕೊಳ್ಳುತ್ತಿದ್ದಂತೆ ತೋರುತ್ತದೆ. ಆದರೂ ಪೂರ್ವದಲ್ಲಿ ಕನ್ನಡವನ್ನೇ ತಾಯ್ನುಡಿಯಾಗಿ ಆಡುತ್ತಿದ್ದ ಜನರು ಬಹು ಸಂಖ್ಯಾತರಾಗಿ ಈಗಿನ ನೈಜಾಂ ಆಧಿಪತ್ಯದ ಮರಾಠವಾಡವೆಂಬ ವಾಯುವ್ಯ ಭಾಗದಲ್ಲೂ ಮುಂಬಯಿ ಆಧಿಪತ್ಯದ ದಕ್ಷಿಣ ಮತ್ತು ಪೂರ್ವ ಭಾಗಗಳಿಗೆ ಸೇರಿದ ಅನೇಕ ಜಿಲ್ಲೆಗಳಲ್ಲೂ ವ್ಯಾಪಿಸಿದಂತೆ ತೋರುತ್ತದೆ. ದಖನ್ನಿನ ಈ ಮಧ್ಯಭಾಗದಲ್ಲಿ ಅನೇಕ ಹಳೆಯ ಗ್ರಾಮಗಳ ಹೆಸರುಗಳು ಕನ್ನಡದಲ್ಲಿಯೇ ಇವೆ. ಬೀಡುಜಿಲ್ಲೆ, ಕನ್ನಡ ತಹಸೀಲ್, ಏಲೂರುಗ್ರಾಮ ಮೊದಲಾದ ಹೆಸರುಗಳು ಇದಕ್ಕೆ ಉದಾಹರಣೆ ಗಳಾಗಿವೆ. ಇಂತಹ ಹೆಸರುಗಳು ಹೆಚ್ಚಾಗಿ ಸಿಗುವುದು ಈಗಿನ ನೈಜಾಮೀರಾಜ್ಯದ ಉಸ್ಮಾನಾಬಾದ್, ಬೀಡ್, ಔರಂಗಾಬಾದ್, ಪರಭಣಿ ಮತ್ತು ಮುಂಬಯಿ ಪ್ರಾಂತದ ಅಹ್ಮದ್‌ನಗರ, ಪುಣೆ, ಸೊಲ್ಲಾಪುರ, ಸತಾರ ಈ ಜಿಲ್ಲೆಗಳಲ್ಲಿ. ಅಂದರೆ ಹಿಂದಿನ ಕಾಲದಲ್ಲಿ ಉತ್ತರದ ಕಡೆ ಗೋದಾವರಿ ತೀರವನ್ನೊಳಗೊಂಡು ವಿದರ್ಭ ದೇಶದ ತೆಂಕಣ ಎಲ್ಲೆಯವರೆಗೂ ಸಾಮಾನ್ಯ ಜನರು ಕನ್ನಡವನ್ನೇ ತಾಯ್ನುಡಿಯಾಗಿ ಆಡುತ್ತಿದ್ದರೆಂದು ಊಹಿಸುವುದಕ್ಕೆ ಅವಕಾಶವಿದೆ. ಈ ಜಿಲ್ಲೆಗಳಲ್ಲಿ ಬಹು ಭಾಗವು ಈಗ ಮರಾಠಿ ಭಾಷೆಯನ್ನು ಆಡುತ್ತಿದೆ.

ಇದೇ ರೀತಿಯಲ್ಲಿ ದಕ್ಷಿಣದ ಕಡೆ ಕನ್ನಡಿಗರ ಅಧಿಕಾರವು ಬಹು ದೂರ ವ್ಯಾಪಿಸಿದ್ದುದು ಕಾಣಬರುತ್ತದೆ.

ಈಗಿನ ತೆಲುಗು, ತಮಿಳು ಮತ್ತು ಮಲೆಯಾಳ ನಾಡುಗಳ ಅನೇಕ ಭಾಗ ಗಳಲ್ಲೂ ಕನ್ನಡಿಗರಾದ ಗಂಗ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯ ನಗರ ಮತ್ತು ಮೈಸೂರು ರಾಜವಂಶದವರು ತಮ್ಮ ತಮ್ಮ ಕಾಲದಲ್ಲಿ ಅನೇಕ ತಲೆ ಮೊರೆಗಳವರೆಗೆ ಆಳುತ್ತಿದ್ದರು. ಇದರಿಂದ ಈ ನಾಡುಗಳಲ್ಲಿ ಕನ್ನಡ ಅಧಿಕಾರಿ ಗಳೂ, ಪಾಳೆಯಗಾರರೂ ತಂಡ ತಂಡವಾಗಿ ಹೋಗಿ ನೆಲಸುತ್ತಿದ್ದರು. ವಿಜಯ ನಗರ ಸಾಮ್ರಾಜ್ಯದ ಕಾಲದಲ್ಲಿ ಕನ್ನಡಿಗರಿಂದ ಸ್ಥಾಪಿಸಲ್ಪಟ್ಟ ಆ ರಾಜ್ಯಕ್ಕೆ ಕರ್ಣಾಟಕ ಸಾಮ್ರಾಜ್ಯವೆಂಬ ಪ್ರಸಿದ್ಧಿ ಇತ್ತು. ದಕ್ಷಿಣ ದೇಶವೆಲ್ಲಾ ಈ ಸಾಮ್ರಾಜ್ಯಕ್ಕೆ ಅಧೀನವಾಗಿದ್ದುದರಿಂದ ಮೊಗಲಾಯರೇ ಮೊದಲಾದ ಔತ್ತರೇ ಯರು ತೆಲುಗು, ತಮಿಳು ಮತ್ತು ಕನ್ನಡಗಳನ್ನೊಳಗೊಂಡ ಇಡೀ ದಕ್ಷಿಣ ದೇಶಕ್ಕೆ ಕರ್ಣಾಟಕವೆಂಬ ಹೆಸರನ್ನು ಉಪಯೋಗಿಸುತ್ತಿದ್ದರು. ಇದರಿಂದ ಕ್ರಿ. ಶ. ೧೮ನೆಯ ಶತಮಾನದಲ್ಲಿ ಈಗಿನ ಮದ್ರಾಸ್ ಪ್ರಾಂತದ ಅನೇಕ ಭಾಗಗಳಿಗೆ ಕರ್ಣಾಟಕ ವೆಂಬ ತಪ್ಪು ಹೆಸರು ಬಂದಿತ್ತು. ಇದರಿಂದ ಆ ಭಾಗಗಳಲ್ಲೆಲ್ಲಾ ಕನ್ನಡವೇ

ಮುಖ್ಯ ಭಾಷೆಯಾಗಿತ್ತೆಂದು ತಿಳಿಯುವುದಕ್ಕಾಗುವುದಿಲ್ಲ. ಆದರೆ ಗಂಗರ ಕಾಲದಿಂದ ಮೈಸೂರರಸರ ಕಾಲದವರೆಗೆ ಕನ್ನಡಿಗರ ಅಧೀನದಲ್ಲಿದ್ದ ಶಾಲ್ಯ, ಕೊಯಮುತ್ತೂರು ಮತ್ತು ಮಧುರೆ ಜಿಲ್ಲೆಯ ಉತ್ತರಭಾಗ— ಇವುಗಳಲ್ಲಿ ಕನ್ನಡವನ್ನಾಡುವ ಜನರು ಗುಂಪು ಗುಂಪಾಗಿ ಜೀವಿಸುತ್ತಿದ್ದಾರೆ. ಹೀಗೆ ಚರಿತ್ರೆಯ ವಿಮರ್ಶೆಯಿಂದ ನಮಗೆ ತಿಳಿದುಬರುವ ಅಂಶವನ್ನು ವಿಮರ್ಶಿಸಿದರೆ ಕನ್ನಡ ನಾಡಿನ ಪ್ರಾಚೀನ ವ್ಯಾಪ್ತಿಯು ಹೀಗೆ ಇದ್ದಂತೆ ತೋರುತ್ತದೆ: ಕೊಯಮುತ್ತೂರು ಜಿಲ್ಲೆಯ ಉತ್ತರದ ಬೆಟ್ಟಗಳಿಂದ ಪ್ರಾರಂಭಿಸಿ, ನೀಲಗಿರಿಯನ್ನೊಳಗೊಂಡು ದಖನ್ ಪ್ರಾಂತದ ಪಶ್ಚಿಮಾರ್ಧದಲ್ಲಿ ನಮ್ಮ ನುಡಿಯು ಕಾವೇರಿ, ತುಂಗಭದ್ರ, ಕೃಷ್ಣ, ಗೋದಾವರಿ ನದಿಗಳ ತೀರಪ್ರದೇಶಗಳನ್ನೊಳಗೊಂಡು ಉತ್ತರದಲ್ಲಿ ವಿದರ್ಭದೇಶ ಮತ್ತು ಸಾತ್ಪುರಾ ಬೆಟ್ಟಗಳವರೆಗೂ ಬಹಳ ಹಿಂದಿನ ಕಾಲದಲ್ಲಿ ಹರಡಿದ್ದಂತೆ ತೋರುತ್ತದೆ. ಕಾಲಕ್ರಮೇಣ ಉತ್ತರದಲ್ಲಿ ಮರಾಠಿಯೂ, ದಕ್ಷಿಣದಲ್ಲಿ ತಮಿಳೂ, ಪೂರ್ವದಲ್ಲಿ ತೆಲುಗೂ ಇದನ್ನು ಹಿಂದಕ್ಕೆ ತಳ್ಳಿದುವು. ಇದರಲ್ಲಿ ವಿದರ್ಭ ದೇಶದಲ್ಲಿ ಹುಟ್ಟಿ ನೈರುತ್ಯಕ್ಕೆ ನುಗ್ಗಿದ ಮರಾಠಿಯ ಆಕ್ರಮಣವೇ ಅತ್ಯಂತ ಬಲವಾದ್ದು. ಕನ್ನಡದ ಎಲ್ಲೆಯು ಹಿಂದಕ್ಕೆ ಸರಿಸರಿಯುತ್ತ ಈಗಿನ ಸ್ಥಿತಿಗೆ ಬಂದಿರುತ್ತದೆ. ಈಗಲೂ ಸಹ ಈ ಭಾಷಾ ಚಲನೆಗಳು ನಡೆಯುತ್ತಲೇ ಇವೆ.

ಹೀಗೆ ಕನ್ನಡವು ಕ್ಷಯಿಸುವುದಕ್ಕೆ ಮುಖ್ಯವಾದ ಕಾರಣವು ಗಡಿನಾಡುಗಳಲ್ಲಿ ಈ ನುಡಿಗೆ ರಾಜಕೀಯ ಮತ್ತು ಸಾಮಾಜಿಕ ಬೆಂಬಲವಿಲ್ಲದಿರುವುದೇ ಎಂದು ವಿಶದವಾಗುತ್ತದೆ. ಮುಂಬಯಿ ಆಧಿಪತ್ಯದ ದಕ್ಷಿಣದಲ್ಲಿರುವ ಮಹಾರಾಷ್ಟ್ರ ರಾಜ್ಯಗಳಲ್ಲೂ, ಇವುಗಳ ಪಕ್ಕದ ಬ್ರಿಟಿಷ್ ತಾಲ್ಲೂಕುಗಳಲ್ಲೂ ಮರಾಠಿಯೇ ರಾಜಕೀಯ ಮತ್ತು ವಿದ್ಯಾಭ್ಯಾಸದ ಭಾಷೆಯಾಗಿದೆ. ಹೈದರಾಬಾದಿನ ಉಸ್ಮಾನಾಬಾದ್, ಕಲುಬುರ್ಗಿ ಮತ್ತು ಬಿದರೆ ಜಿಲ್ಲೆಗಳಲ್ಲಿ ರಾಜಭಾಷೆಯಾದ ಉರ್ದುವೂ, ಸುಸಂಸ್ಕೃತರ ವ್ಯವಹಾರ ಭಾಷೆಯಾದ ಮರಾಠಿಯೂ ಮುಂಬರಿಯುತ್ತಿವೆ. ಇದೇ ರೀತಿಯಲ್ಲಿ ಬಳ್ಳಾರಿ ಅನಂತಪುರ ಜಿಲ್ಲೆಗಳಲ್ಲಿ ತೆಲುಗೂ ಶಾಲ್ಯ, ಕೊಯಮುತ್ತೂರು, ನೀಲಗಿರಿ ಜಿಲ್ಲೆಗಳಲ್ಲಿ ತಮಿಳೂ ಮುಂದಕ್ಕೆ ನುಗ್ಗುತ್ತಿವೆ. ಪ್ರತಿ ಹತ್ತು ವರ್ಷಕ್ಕೂ ತೆಗೆಯುತ್ತಿರುವ ಜನಗಣನೆಯನ್ನು ನೋಡಿದರೆ ಕ್ರಿ. ಶ. ೧೯೦೧ ರಿಂದ ಸುಮಾರು ಈ ಅಂಚುಗಳಲ್ಲಿ ಹತ್ತು ವರ್ಷಕ್ಕೆ ಸರಾಸರಿ ೧೦ ಮೈಲಿಗಳಷ್ಟು ದೂರ ನಮ್ಮ ನಾಡು ಕರಗಿ ಬಿದ್ದುಹೋಗುತ್ತಿರುವುದು ಕಾಣಬರುತ್ತದೆ. ನಾಲ್ವತ್ತು ವರ್ಷಗಳ ಕೆಳಗೆ ಕನ್ನಡಿಗರು ಬಹು ಸಂಖ್ಯಾತರಾಗಿದ್ದ ಹಲವು ತಾಲ್ಲೂಕುಗಳಲ್ಲಿ ಈಗ ಕನ್ನಡವು ಅಲ್ಪಸಂಖ್ಯಾತರಿಂದ ಮಾತ್ರ ಮಾತನಾಡಲ್ಪಡುತ್ತಿದೆ. ಹೀಗೆಯೇ ಇನ್ನೂ ಎರಡು ಮೂರು ತಲೆಮೊರೆಗಳು ನಡೆದರೆ ಈಗಿನ ಕನ್ನಡ ನಾಡಿನಲ್ಲಿ ಅರ್ಧವೂ ಕೂಡ ಕನ್ನಡ ಭಾಷೆಗೆ ಉಳಿಯುವಂತೆ ತೋರಬರುವುದಿಲ್ಲ. ಈ ರೀತಿಯಾಗಿ ಕನ್ನಡ ಭಾಷೆಯು ಕ್ಷಯಿಸುತ್ತ ಬರುವುದು ಯಾರಿಗೆತಾನೆ ಶೋಚನೀಯವಾಗಿ ಕಾಣಬರುವುದಿಲ್ಲ? ಇತರ ಮಾತುಗಳನ್ನಾಡುವ ಆಂಗ್ಲರು, ಹಿಂದುಸ್ಥಾನಿಗಳು, ತಮಿಳರು, ತೆಲುಗರು, ಮರಾಠರು ಕೂಡ ಕನ್ನಡದ ಶೋಚನೀಯ ಸ್ಥಿತಿಯನ್ನು ನೋಡಿ ತಮ್ಮ ಸಹಾನುಭೂತಿಯನ್ನು ತೋರ್ಪಡಿಸಿರುವರು.

ಕನ್ನಡ ನಾಡಿನ ಎಲ್ಲೆಯನ್ನು ಹೇಗೆ ಗೊತ್ತುಮಾಡಬೇಕು ಎಂದು ವಿಚಾರ ಮಾಡುವಾಗ ಈ ಲೇಖನವು ಸ್ವಭಾಷೆ, ವಿದ್ಯಾಭ್ಯಾಸ ಮತ್ತು ಸಂಸ್ಕೃತಿ ಇವುಗಳಿಗೆ ಮಾತ್ರ ಸಾಮಾನ್ಯವಾಗಿ ಅನ್ವಯಿಸತಕ್ಕುದೆಂದು ನಾವು ಜ್ಞಾಪಕದಲ್ಲಿಡಬೇಕು. ಈ ದೃಷ್ಟಿಯಿಂದ, ಕನ್ನಡಿಗರು ಅಲ್ಪಸಂಖ್ಯಾತರಾದರೂ ಮನೆಯಲ್ಲಿ ಈ ನುಡಿಯನ್ನು ಆಡುತ್ತ ಜನಗಣನೆಯಲ್ಲಿ ಗಣ್ಯಸ್ಥಾನವನ್ನು ಹೊಂದಿದ್ದರೆ ಅಂತಹ ದ್ವಿಭಾಷಾ ತಾಲ್ಲೂಕುಗಳನ್ನೂ, ಅಥವಾ ಗ್ರಾಮಗಳ ಗುಂಪುಗಳನ್ನೂ ಸದ್ಯಕ್ಕೆ ಕನ್ನಡ ನಾಡೊಳಗೆ ಗಣಿಸುವುದು ಆವಶ್ಯಕವೆಂದು ತೋರುತ್ತದೆ. ಈ ದೃಷ್ಟಿಯಿಂದ ನಾವು ಕನ್ನಡದ ಬೇರೆ ಬೇರೆ ಪ್ರಾಂತಗಳನ್ನು ವಿಮರ್ಶಿಸಬೇಕಾಗಿದೆ.

ಈಗಿನ ಕನ್ನಡ ನಾಡಿಗೆ ಮುಖ್ಯ ಬೆಂಬಲವಿರುವುದು ಮೈಸೂರು ರಾಜ್ಯದಲ್ಲಿ. ಈ ರಾಜ್ಯದ ೭೨ ಲಕ್ಷ ಜನರಲ್ಲಿ ವಿಶೇಷವಾಗಿ ಕನ್ನಡವನ್ನು ಆಡುವವರೇ ಬಹಳ ಹೆಚ್ಚು. ಇತರ ಭಾಷೆಗಳನ್ನು ಆಡುವ ಜನರು ಗುಂಪುಗುಂಪಾಗಿ ನೆಲಸಿರುವುದು ಒಂದು ಕಡೆ ಮಾತ್ರ. ಕೋಲಾರ ಜಿಲ್ಲೆಯಲ್ಲಿ ಅನೇಕ ಭಾಗದ ಜನರು ಮನೆಗಳಲ್ಲಿ ತೆಲುಗನ್ನು ಆಡುತ್ತಾರೆ. ಬಾಗೇಪಲ್ಲಿ, ಶ್ರೀನಿವಾಸಪುರ, ಮುಳಬಾಗಿಲು, ಬೌರಿಂಗ್‌ಪೇಟೆ ಮೊದಲಾದ ತಾಲ್ಲೂಕುಗಳ ರೈತರು ಹೆಚ್ಚಾಗಿ ತೆಲುಗರೇ ಆಗಿರುತ್ತಾರೆ. ಬಹು ಸಂಖ್ಯೆಯ ದೃಷ್ಟಿಯಿಂದ ನೋಡಿದ ಪಕ್ಷದಲ್ಲಿ ಕೋಲಾರದ ಪೂರ್ವಭಾಗವು ಆಂಧ್ರದೇಶಕ್ಕೆ ಸೇರತಕ್ಕುದಾಗಿದೆ. ಆದರೆ ಕೋಲಾರವು ಮೈಸೂರು ರಾಜ್ಯಕ್ಕೆ ಸೇರಿರುವುದರಿಂದಲೂ, ಇಲ್ಲಿಯ ಜನರು ಈಗ್ಗೆ ಒಂದೂವರೆ ಸಾವಿರ ವರ್ಷಗಳಿಂದ ಆಳುತ್ತಿದ್ದ ಕನ್ನಡಿಗರೊಂದಿಗೇ ಹೆಚ್ಚಾದ ವ್ಯವಹಾರವನ್ನು ಇಟ್ಟುಕೊಂಡಿರುವುದರಿಂದಲೂ ಈ ತಾಲ್ಲೂಕುಗಳು ಕನ್ನಡ ನಾಡಿನೊಳಗೆ ಸೇರಕೂಡದೆಂದು ಎಣಿಸುವುದಕ್ಕೆ ನಮಗೆ ಅಧಿಕಾರವಿಲ್ಲ. ಪ್ರಕೃತ ಭೂಪಟದಲ್ಲಿ ಮೈಸೂರು ರಾಜ್ಯವನ್ನು ಒಂದೇ ಗಟ್ಟಿಯೆಂದು ತಿಳಿದು ಕೋಲಾರವನ್ನೂ ಕನ್ನಡ ನಾಡಿನ ದ್ವಿಭಾಷಾ ಭಾಗದಲ್ಲಿ ಎಣಿಕೆಗೆ ತೆಗೆದುಕೊಂಡಿದೆ.

ಮೈಸೂರನ್ನು ಬಿಟ್ಟರೆ ಕನ್ನಡಕ್ಕೆ ಉಳಿದಿರುವ ಮುಖ್ಯ ತವರುಭಾಗವು ಮುಂಬಯಿ ಕರ್ಣಾಟಕದ ಧಾರವಾಡ, ಬಿಜಾಪುರ, ಬೆಳಗಾಂವಿ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ. ಈ ನಾಲ್ಕು ಜಿಲ್ಲೆಗಳು ಕನ್ನಡಕ್ಕೆ ಬಲಿಷ್ಠಸ್ಥಾನಗಳೆಂಬುದರಲ್ಲಿ ಈಗ ಯಾವ ಸಂದೇಹವೂ ಇಲ್ಲ. ಉತ್ತರ ಕನ್ನಡ ಜಿಲ್ಲೆಯಲ್ಲಿ ವಾಸಮಾಡುವ ಜನರಲ್ಲಿ ಕೆಲವರು ಮನೆಯಲ್ಲಿ ಪ್ರಾಚೀನ ಮಹಾರಾಷ್ಟ್ರ ಭಾಷೆಯ ಅಪಭ್ರಂಶವಾದ ಕೊಂಕಣಿಯನ್ನು ಆಡುತ್ತಿದ್ದರೂ ಈ ಕೊಂಕಣಿಗೆ ಗ್ರಂಥಗಳಲ್ಲೂ ವ್ಯವಹಾರದಲ್ಲೂ ಗಣ್ಯಸ್ಥಾನವು ಇಲ್ಲದೆ ಇರುವುದರಿಂದ ತಮ್ಮ ನೆರೆಯವರು ಆಡುವ ಕನ್ನಡವನ್ನೇ ತಮ್ಮ ವಿದ್ಯಾಭ್ಯಾಸದ ಮತ್ತು ವ್ಯವಹಾರದ ಭಾಷೆಯನ್ನಾಗಿ ಉಪಯೋಗಿಸುತ್ತಿದ್ದಾರೆ. ಬೆಳಗಾಂವಿ ಜಿಲ್ಲೆಯಲ್ಲಿ ವಿದ್ಯಾವಂತರೂ ವ್ಯಾಪಾರಿಗಳೂ ಆದ ಅನೇಕ ಮಂದಿ ಮಹಾರಾಷ್ಟ್ರೀಯರು ಬಂದು ನೆಲಸಿರುವರು. ಆದರೆ ಈ ಜಿಲ್ಲೆಯ ರೈತರೂ, ಬಹುಸಂಖ್ಯಾತರೂ ಆಡುವ ಮಾತು ಕನ್ನಡ. ಬೆಳಗಾಂವಿ ಜಿಲ್ಲೆಯ ವಾಯವ್ಯದಲ್ಲಿರುವ ಚಿಕ್ಕೋಡಿ ಮತ್ತು ಅಥಣಿ ತಾಲ್ಲೂಕುಗಳಲ್ಲಿ ಸಹ ಗ್ರಾಮಗಳಲ್ಲಿ ಬಹು ಸಂಖ್ಯಾತರು ಆಡುವ ಭಾಷೆ ಕನ್ನಡವೇ ಆಗಿರುತ್ತದೆ. ಈ ನಾಲ್ಕು ಜಿಲ್ಲೆಗಳು ಮಾತ್ರವಲ್ಲದೆ

ಸತಾರ ಜಿಲ್ಲೆಯ ತಾಸ್‌ಗಾಂ ತಹಸೀಲು, ಸೊಲ್ಲಾಪುರದ ಜಿಲ್ಲೆಗೆ ಸೇರಿದ ಸೊಲ್ಲಾಪುರ ಮತ್ತು ಸಂಗೋಳಿ ತಹಸೀಲುಗಳಲ್ಲಿ ಕೂಡ ಕನ್ನಡವು ಗ್ರಾಮಸ್ಥರ ಭಾಷೆಯಾಗಿದೆ. ದಕ್ಷಿಣ ಮಹಾರಾಷ್ಟ್ರದ ದೇಶೀಯ ರಾಜ್ಯಗಳಲ್ಲಿ ರಾಮದುರ್ಗ, ಮುಧೋಳ, ಜಮಖಂಡಿ, ಅಕ್ಕಲಕೋಟೆ ಮುಂತಾದುವು ಶುದ್ಧ ಕನ್ನಡ ಭಾಗಗಳಾಗಿವೆ. ಕೊಲ್ಲಾಪುರ, ವಾಡಿ, ಸಾಂಗ್ಲಿ, ಮಿರಜ್, ಜತ್ತ, ಔಂಧ್ ಮೊದಲಾದ ರಾಜ್ಯಗಳಲ್ಲಿ ಕೆಲವು ಭಾಗ ಕನ್ನಡವನ್ನೂ, ಕೆಲವು ಭಾಗ ಮರಾಠಿಯನ್ನೂ ಆಡುತ್ತವೆ. ಹೀಗೆ ಮುಂಬಯಿ ಆಧಿಪತ್ಯದಲ್ಲಿ ಕನ್ನಡದ ಎಲ್ಲೆಯು ಪಶ್ಚಿಮಘಟ್ಟಗಳಿಂದ ಕೊಲ್ಹಾಪುರ, ಸಾಂಗ್ಲಿ, ಔಂಧ್, ಸೊಲ್ಲಾಪುರ — ಇವುಗಳ ಸಮೀಪದಲ್ಲಿ ಹರಿಯುತ್ತದೆ.

ಈಗ ಪೋರ್ಚುಗೀಸರ ಕೈಕೆಳಗಿರುವ ಗೋವೆ ಪ್ರಾಂತವು ಸಂಸ್ಕೃತಿ ಮತ್ತು ವ್ಯವಹಾರಗಳ ದೃಷ್ಟಿಯಿಂದ ಕನ್ನಡ ನಾಡಿನಲ್ಲೇ ಭಾಗಿಯಾಗಬೇಕೆಂಬುದು ಭೂಪಟದಿಂದಲೇ ವ್ಯಕ್ತವಾಗುತ್ತದೆ. ಇಲ್ಲಿಯ ಜನರ ಭಾಷೆಯು ಕೊಂಕಣಿ, ರಾಜಕೀಯ ಭಾಷೆಯು ಪೋರ್ಚುಗೀಸ್. ಬರಿಯ ಭಾಷಾದೃಷ್ಟಿಯಿಂದ ನೋಡಿದರೆ ಈಗಿನ ಗೋವೆ ಪಟ್ಟಣವು ಕರ್ಣಾಟಕಕ್ಕೇ ಆಗಲಿ ಅಥವಾ ಮಹಾರಾಷ್ಟ್ರಕ್ಕೇ ಆಗಲಿ ಸೇರುವುದಿಲ್ಲ. ಆದರೆ ಚರಿತ್ರಕಾಲದಲ್ಲಿ ಕನ್ನಡ ನಾಡಿನ ಪಶ್ಚಿಮ ಭಾಗಕ್ಕೆ ರಾಜಧಾನಿಯಾಗಿದ್ದು, ಪೂರ್ವದಲ್ಲೂ ಮತ್ತು ಈಗಲೂ ಸಹ ಮುಂಬಯಿ ಕರ್ಣಾಟಕದ ಮುಖ್ಯ ಬಂದರಾದ ಗೋವೆಯು ಕನ್ನಡ ನಾಡಿನ ಕೇಂದ್ರಸ್ಥಾನಗಳಲ್ಲಿ ಒಂದೆಂದು ನಾವು ಗಣಿಸಲೇಬೇಕಾಗಿದೆ. ಈಗಿನ ಗೋವೆ ಪ್ರಾಂತದ ದಕ್ಷಿಣಾರ್ಧ ಭಾಗದಲ್ಲಿ ಸಂಗಮ, ಕನಕೋನ ಮೊದಲಾದೆಡೆಗಳಲ್ಲೂ, ಆಗ್ನೇಯದ ಗ್ರಾಮಗಳಲ್ಲೂ ಜನರ ಭಾಷೆಯು ಈಗಲೂ ಸಹ ಕನ್ನಡವೇ ಎಂದು ತಿಳಿಯಬರುತ್ತದೆ.

ನೈಜಾಮೀರಾಜ್ಯದ ಪಶ್ಚಿಮಾರ್ಧವು, ಅಂದರೆ ಈಗಿನ ಹೈದರಾಬಾದು ಪಟ್ಟಣದ ಪಶ್ಚಿಮಕ್ಕಿರುವ ಪ್ರದೇಶವು, ಪೂರ್ವದಲ್ಲಿ ಕನ್ನಡಕ್ಕೆ ಪ್ರಬಲವಾದ ಸ್ವಸ್ಥಾನವಾಗಿತ್ತು. ಈಗ ಇಲ್ಲಿಯ ವಾಯುವ್ಯ ಜಿಲ್ಲೆಗಳಲ್ಲಿ ಮರಾಠಿಯು ಪ್ರಬಲವಾಗಿ ಕನ್ನಡಿಗರು ಅಲ್ಪಸಂಖ್ಯಾತರಾಗಿದ್ದಾರೆ. ಮೇಲೆ ಹೇಳಿದಂತೆ ಮಾನ್ಯಖೇಟದ ರಾಷ್ಟ್ರಕೂಟರೂ ಮತ್ತು ಕಲ್ಯಾಣಿ ಚಾಲುಕ್ಯರೂ, ಕಲಚೂರ್ಯರೂ ಆಳುತ್ತಿದ್ದ ಕಾಲದಲ್ಲಿ ಈಗಿನ ಬೀಡು (ಭೀರ್), ಉಸ್ಮಾನಾಬಾದ್, ಪರಭಣಿ ಜಿಲ್ಲೆಗಳಲ್ಲಿ ಕನ್ನಡ ಬಹಳವಾಗಿ ವ್ಯಾಪಿಸಿತ್ತೆಂದೂ, ಮರಾಠಿಯು ಇಲ್ಲಿಯ ಜನರ ಭಾಷೆಯಾಗಿರಲಿಲ್ಲವೆಂದೂ ಅಲ್ಲಿಯ ಶಾಸನಗಳ ವಿಮರ್ಶೆಯಿಂದ ಗೊತ್ತಾಗುತ್ತದೆ. ಇಲ್ಲಿಯ ಪ್ರಾಚೀನ ಶಾಸನಗಳು ಸಂಸ್ಕೃತ ಮತ್ತು ಕನ್ನಡ ಭಾಷೆಗಳಲ್ಲಿರುವವೇ ಹೊರತು ಮರಾಠಿಯಲ್ಲಿ ಕಾಣಬರುವುದಿಲ್ಲ. ದೇವಗಿರಿಯಲ್ಲಿ ಆಳಿದ ಯಾದವರಾಜರೂ ಸಹ ಮೊದಲು ಮನೆಯಲ್ಲಿ ಕನ್ನಡ ಮಾತನಾಡುತ್ತಿದ್ದವರು. ಆದರೆ ಇವರ ಕಾಲದಲ್ಲಿ ರಾಜ್ಯವು ಉತ್ತರಕ್ಕೆ ಹಬ್ಬಿ ಮರಾಠಿಯನ್ನಾಡುವ ದೇಶವು ಇವರಿಗೆ ಕೇಂದ್ರಸ್ಥಾನವಾದುದರಿಂದ ಮರಾಠಿ ಭಾಷೆಯು ವೃದ್ಧಿಗೆ ಬಂದಿತು. ಭೌನ್ಸ್ಲೆಗಳು, ಪೇಷ್ವೆಗಳು ಮೊದಲಾದವರ ಕೈಕೆಳಗೆ ಮಹಾರಾಷ್ಟ್ರ ರಾಜ್ಯವು ವೃದ್ಧಿಹೊಂದುತ್ತ ಬಂದಾಗ ಈ ಕನ್ನಡ ಜಿಲ್ಲೆಗಳ ಜನರು ಮರಾಠಿಯನ್ನಾಡುವುದಕ್ಕೆ ಪ್ರಾರಂಭಿಸಿದರು,

ಮತ್ತು ಮರಾಠಿಗರು ಸಹ ಬಹುವಾಗಿ ಬಂದು ನೆಲಸಹತ್ತಿದರು. ಇದರಿಂದ
ಈ ಜಿಲ್ಲೆಗಳಲ್ಲಿ ಕನ್ನಡವು ಅಲ್ಪಸಂಖ್ಯಾತರ ಭಾಷೆಯಾಯಿತು. ಈಗಲೂ ಉಸ್ಮಾನಾ
ಬಾದ್ ಜಿಲ್ಲೆಯ ಆಗ್ನೇಯದಲ್ಲಿ, ಅಂದರೆ ನಲದುರ್ಗ, ಮೋರವೀ ಮೊದಲಾದೆಡೆ
ಗಳಲ್ಲಿ ಕನ್ನಡವೇ ಗ್ರಾಮಸ್ಥರ ಭಾಷೆಯಾಗಿದೆ. ನಾಂದೇಡ ಜಿಲ್ಲೆಯ ದೇಗಲೂರು
ತಾಲ್ಲೂಕಿನಲ್ಲೂ ಕನ್ನಡವೇ ಹಳ್ಳಿಗಳ ಭಾಷೆಯೆಂದು ತಿಳಿಯುತ್ತೇವೆ. ಬಿದರೆ
ಜಿಲ್ಲೆಯಲ್ಲಿ ಬಿದರೆ ಊರನ್ನು ಒಳಗೊಂಡ ದಕ್ಷಿಣ ಭಾಗವು ಕನ್ನಡವನ್ನೂ, ಔಸದ
ಕಡೆಯ ವಾಯವ್ಯಭಾಗವು ಮರಾಠಿಯನ್ನೂ, ಪೂರ್ವದ ಅಂಚಿನ ಗ್ರಾಮಗಳು
ತೆಲುಗನ್ನೂ ಆಡುತ್ತವೆ. ಈಗ್ಗೆ ನಾಲ್ವತ್ತು ವರ್ಷಗಳ ಕೆಳಗೆ ಈ ಜಿಲ್ಲೆಯಲ್ಲಿ
ಕನ್ನಡಕ್ಕೆ ಪ್ರಥಮ ಸ್ಥಾನವಿತ್ತು. ಈಗ ಕನ್ನಡಿಗರಿಗಿಂತಲೂ ಮರಾಠಿ ಆಡುವವರ
ಸಂಖ್ಯೆಯು ಸ್ವಲ್ಪ ಹೆಚ್ಚಾಗಿರುವಂತೆ ತೋರುತ್ತದೆ. ಇದರ ನಿಜಾಂಶವು ಇನ್ನೂ
ವಿಚಾರ ಮಾಡತಕ್ಕದ್ದಾಗಿದೆ. ಕಲುಬುರ್ಗಿ ಅಥವಾ ಗುಲ್ಬರ್ಗ ಜಿಲ್ಲೆಯಲ್ಲಿ
ಕನ್ನಡವೇ ಬಹುಸಂಖ್ಯಾತರ ಭಾಷೆಯಾದರೂ, ಮರಾಠಿಯು ಕ್ರಮೇಣ ವೃದ್ಧಿಗೆ
ಬರುತ್ತಿದೆ. ರಾಯಚೂರು ಜಿಲ್ಲೆಯಲ್ಲಿ ಗದ್ವಾಲ್ ಆಲಂಪುರಗಳನ್ನು ಒಳಗೊಂಡ
ಪೂರ್ವದ ಕೊನೆಯು ತೆಲುಗಿಗೆ ಸೇರಿದೆ. ಆದರೆ ಗದ್ವಾಲಿನ ಪಶ್ಚಿಮಕ್ಕೆ ವಿಸ್ತರಿಸಿರುವ
ಈ ದೊಡ್ಡ ಜಿಲ್ಲೆಯಲ್ಲಿ ನಿಸ್ಸಂಶಯವಾಗಿ ಕನ್ನಡವು ಜನರ ಭಾಷೆಯಾಗಿದೆ.
ಅಂದರೆ ನೈಜಾಮೀರಾಜ್ಯದಲ್ಲಿ ರಾಯಚೂರು ಕಲುಬುರ್ಗಿ ಜಿಲ್ಲೆಗಳೂ, ಬಿದರೆಯ
ದಕ್ಷಿಣಾರ್ಧವೂ, ಉಸ್ಮಾನಾಬಾದಿನ ಆಗ್ನೇಯ ಭಾಗವೂ, ಕನ್ನಡ ನಾಡಿನಲ್ಲಿ
ಸೇರತಕ್ಕವು. ಇಲ್ಲಿಯ ಕನ್ನಡಿಗರ ಸ್ಥಿತಿಯು ಇತ್ತೀಚಿನವರೆಗೂ ಬಹಳ ಶೋಚ
ನೀಯವಾಗಿತ್ತು. ಈಗ ನೈಜಾಮೀ ಸರ್ಕಾರದವರು ಅಲ್ಲಲ್ಲೆ ಕನ್ನಡ ಶಾಲೆಗಳನ್ನು
ಸ್ಥಾಪಿಸಿ ಪ್ರಾಥಮಿಕ ವಿದ್ಯಾಭ್ಯಾಸವನ್ನು ನಮ್ಮ ನುಡಿಯಲ್ಲೇ ಕೊಡಬೇಕೆಂದು
ಉದ್ದೇಶಿಸಿರುವುದರಿಂದ ಕನ್ನಡದ ಕಥೆಯು ಮುಂದೆ ಸಂತೋಷಕರವಾಗಬಹುದು.

ಮದರಾಸ್ ಪ್ರಾಂತಕ್ಕೆ ಸೇರಿದ ಕನ್ನಡ ಭಾಗಗಳು ಮೂರು ಚೂರುಗಳಾಗಿ
ಒಡೆದುಹೋಗಿವೆ. ಇವುಗಳಲ್ಲಿ ರಾಯರ ಸೀಮೆಯೆಂದು ಹೆಸರಾಗಿರುವ ಪ್ರಾಂತ
ದಲ್ಲಿ ಗುಂತಕಲ್ಲಿನಿಂದ ಪಶ್ಚಿಮಕ್ಕಿರುವ ಭಾಗವೆಲ್ಲಾ ಹಿಂದೆ ಕನ್ನಡವನ್ನೇ ಆಡು
ತ್ತಿದ್ದಿತು. ಪೆನುಗೊಂಡೆಯ ರಾಜರ ಕಾಲದಲ್ಲೂ, ಈಚೆಗೆ ಬ್ರಿಟಿಷರ ಕಾಲದಲ್ಲೂ
ಅಧಿಕಾರ ಮತ್ತು ವ್ಯಾಪಾರಗಳ ನಿಮಿತ್ತವಾಗಿ ತೆಲುಗರು ಬಂದು ಈ ಕನ್ನಡ
ನಾಡಿನಲ್ಲಿ ಸೇರಿಕೊಂಡರು. ಈಗ ಹಿಂದೂಪುರ, ಕಲ್ಯಾಣದುರ್ಗ, ರಾಯದುರ್ಗ,
ಆಲೂರು, ಆದವಾನಿ ಈ ತಾಲ್ಲೂಕುಗಳಲ್ಲಿ ಜನರು ಎರಡು ಭಾಷೆಗಳನ್ನೂ ಆಡು
ತ್ತಾರೆ. ವ್ಯಾವಹಾರಿಕ ಬೆಂಬಲವು ತೆಲುಗಿಗೆ ಇರುವುದರಿಂದ ಕನ್ನಡವು ಹಿಂದಕ್ಕೆ
ಸರಿಯುತ್ತಿದೆ. ಮದರಾಸ್ ಪ್ರಾಂತಕ್ಕೆ ಸೇರಿರುವ ಇನ್ನೊಂದು ಚೂರು ಹಿಂದಿನ
ಕಾಲದಲ್ಲಿ ಗಂಗವಾಡಿಗೆ ಸೇರಿದ ಕೊಯಮತ್ತೂರು, ಶಾಲ್ಯ ಮತ್ತು ನೀಲಗಿರಿ
ಜಿಲ್ಲೆಗಳನ್ನು ಒಳಗೊಂಡಿದೆ. ಶಾಲ್ಯದ ಹೊಸೂರು ತಾಲ್ಲೂಕಿನಲ್ಲಿ ಈಶಾನ್ಯದ
ಮೂಲೆ ಹೊರತು ಮಿಕ್ಕ ಡೆಂಕಣಿಕೋಟೆ ಮೊದಲಾದ ಭಾಗವೂ ಕೊಯಮತ್ತೂರು
ಜಿಲ್ಲೆಯ ಉತ್ತರದಲ್ಲಿ ಸತ್ಯಮಂಗಲದ ವರೆಗೂ ಚಾಚಿಕೊಂಡಿರುವ ಕೊಳ್ಳೇಗಾಲ
ಮೊದಲಾದ ಭಾಗಗಳೂ, ನೀಲಗಿರಿಯೂ ಕನ್ನಡ ಪ್ರದೇಶಗಳೇ ಆಗಿವೆ. ನಮ್ಮ
ಭಾಷೆಯು ಈ ಪ್ರಾಂತದಲ್ಲಿ ಕೃಷ್ಣಗಿರಿ, ಆಗ್ನೇಯದಲ್ಲಿ ಸತ್ಯಮಂಗಲ, ದಕ್ಷಿಣದಲ್ಲಿ

ಅವನಾಶಿ, ಕೊಯಮುತ್ತೂರು, ನೈರುತ್ಯದಲ್ಲಿ ಸುಲ್ತಾನ್ ಬತೇರಿ— ಇವುಗಳನ್ನು ಒಳಗೊಂಡಿದೆ. ಕನ್ನಡವನ್ನು ಆಡುವ ಜನರು ಅಲ್ಪಸಂಖ್ಯಾತರಾಗಿ ಮಧುರೆಯ ಜಿಲ್ಲೆಯವರೆಗೂ ಹರಡಿಕೊಂಡಿದ್ದಾರೆ.

ಮದರಾಸ್ ಪ್ರಾಂತದ ಮೂರನೆಯ ಕನ್ನಡ ಭಾಗವು ದಕ್ಷಿಣ ಕನ್ನಡ ಜಿಲ್ಲೆ. ಇದರ ವಿಷಯವಾಗಿ ಭಿನ್ನಾಭಿಪ್ರಾಯಗಳಿರುವುದರಿಂದ ಇಲ್ಲಿ ಸ್ವಲ್ಪ ವಿಚಾರ ಮಾಡುವುದು ಆವಶ್ಯಕವಾಗಿದೆ. ಈ ಜಿಲ್ಲೆಯ ದಕ್ಷಿಣದಲ್ಲಿರುವ ಕಾಸರಗೋಡು ತಾಲ್ಲೂಕಿನಲ್ಲಿ ಮಲೆಯಾಳವೇ ಪ್ರಬಲ. ಆದರೆ ಈ ಜಿಲ್ಲೆಯ ಮುಖ್ಯ ಭಾಷೆಯು ತುಳುವಾಗಿದೆ. ತುಳುವರು ಮಂಗಳೂರಿಂದ ಕುಂದಾಪುರದವರೆಗಿರುವ ತಾಲ್ಲೂಕುಗಳಲ್ಲಿ ಮಾತ್ರ ವಾಸಿಸುವುದರಿಂದಲೂ, ಈ ಜನರೂ ಇವರ ಜತೆಯಲ್ಲಿ ವಾಸಿಸುವ ಕೊಂಕಣಿ ಜನರೂ ವ್ಯವಹಾರದಲ್ಲಿಯೂ ವಿದ್ಯಾಭ್ಯಾಸದಲ್ಲಿಯೂ ಕನ್ನಡವನ್ನೇ ತಮ್ಮ ಭಾಷೆಯನ್ನಾಗಿ ಉಪಯೋಗಿಸುವುದರಿಂದಲೂ ದಕ್ಷಿಣ ಕನ್ನಡ ಜಿಲ್ಲೆಯು ಕನ್ನಡ ಭಾಷೆಗೆ ಸೇರಿದುದೆಂಬುದಕ್ಕೆ ಸಂಶಯವೇ ಇಲ್ಲ. ತುಳವರು, ಕೊಂಕಣಿಗಳು ಕನ್ನಡ ಭಾಷೆಗೆ ಅಮೋಘವಾದ ಸೇವೆಯನ್ನು ಮಾಡಿರುತ್ತಾರೆ.

ಇನ್ನು ಉಳಿದುದು ಕೊಡಗು. ಈ ಪ್ರಾಂತದಲ್ಲಿ ಕನ್ನಡವೇ ಬಹುಸಂಖ್ಯಾತರ ಭಾಷೆಯಾಗಿದೆ. ಕೊಡವರು ಕನ್ನಡವನ್ನೇ ವಿದ್ಯಾಭ್ಯಾಸಕ್ಕೂ ವ್ಯವಹಾರಕ್ಕೂ ಉಪಯೋಗಿಸುತ್ತಾರೆ.

ಮೇಲೆ ಹೇಳಿದಂತೆ ವಿಚಾರಮಾಡಿ ನೋಡುವಲ್ಲಿ ಕನ್ನಡ ನಾಡಿನ ಎಲ್ಲೆಯು ಗೋವೆಯಿಂದ ಪ್ರಾರಂಭಿಸಿ ಕೊಲ್ಹಾಪುರ, ಸಾಂಗ್ಲಿ, ಔಂಧ್, ಸೊಲ್ಲಾಪುರಗಳ ಬಳಿ ಹರಿದು, ಬಿದರೆಯನ್ನು ಸುತ್ತಿಕೊಂಡು, ಗದ್ವಾಲಿನ ಪಶ್ಚಿಮದಲ್ಲಿ ಕೃಷ್ಣಾ ತುಂಗಭದ್ರಾ ನದಿಗಳನ್ನು ದಾಟಿ, ಗುಂತಕಲ್ಲಿನ ಪಶ್ಚಿಮದಲ್ಲಿ ದಕ್ಷಿಣಕ್ಕೆ ಇಳಿದು, ಹಿಂದೂಪುರ ಕೋಲಾರಗಳನ್ನು ಬಳಸಿಕೊಂಡು ಕೃಷ್ಣಗಿರಿ ಭವಾನಿಗಳ ಪಶ್ಚಿಮದಲ್ಲಿ ಪ್ರವಹಿಸಿ, ಸತ್ಯಮಂಗಲವನ್ನೂ ನೀಲಗಿರಿಯನ್ನೂ ಕೊಡಗನ್ನೂ ಸುತ್ತಿಕೊಂಡು, ಕಾಸರಗೋಡಿನ ಸಮೀಪದಲ್ಲಿ ಸಮುದ್ರ ತೀರವನ್ನು ಮುಟ್ಟುತ್ತದೆ. ಇದರ ಅಂಚಿನ ತಾಲ್ಲೂಕುಗಳಲ್ಲಿ ಉದ್ದಕ್ಕೂ ಇತರ ಭಾಷೆಗಳನ್ನಾಡುವ ಜನರು ಅಲ್ಪಸಂಖ್ಯಾತರಾಗಿ ವಾಸಿಸುತ್ತಾರೆ. ಇವುಗಳ ಹೊರಪಕ್ಕದ ತಾಲ್ಲೂಕುಗಳಲ್ಲಿ ಕನ್ನಡವನ್ನಾಡುವ ಜನರು ಅಲ್ಪಸಂಖ್ಯಾತರಾಗಿದ್ದಾರೆ. ಈ ದ್ವಿಭಾಷಾ ಪ್ರಾಂತವು ಸರಾಸರಿ ಇಪ್ಪತ್ತು ಮೈಲಿಗಳ ಅಗಲ ಉಳ್ಳದ್ದಾಗಿದೆ. ಇದನ್ನೇ ನಾವು ಕನ್ನಡದ ಗಡಿನಾಡಾಗಿಟ್ಟುಕೊಳ್ಳಬಹುದು. ಇದರ ಒಳಗಿರುವ ದೇಶವೆಲ್ಲ ಶುದ್ಧ ಕನ್ನಡ ದೇಶವೆಂದು ಹೇಳಬಹುದು.

ಹೀಗೆ ವಿಸ್ತರಿಸಿರುವ ಕನ್ನಡ ನಾಡು ಸುಮಾರು ಎಪ್ಪತ್ತೈದು ಸಾವಿರ ಚದರ ಮೈಲಿಗಳುಳ್ಳದ್ದಾಗಿಯೂ, ಹಿಂದಿನ ಜನಗಣನೆಗಳಂತೆ ಒಂದು ಕೋಟಿ ಮೂವತ್ತು ಲಕ್ಷ ಜನಸಂಖ್ಯೆಯುಳ್ಳದ್ದಾಗಿಯೂ ಇದೆ.

ಮೇಲ್ಕಂಡ ವಿಮರ್ಶೆಯನ್ನು ಭಾಷೆ, ಸಂಸ್ಕೃತಿ ಮತ್ತು ಚರಿತ್ರೆಯ ದೃಷ್ಟಿಯಿಂದ ಮಾತ್ರ ಮಾಡಿದೆ. ಕನ್ನಡವನ್ನಾಡುವ ಜನರು ಭಾಷಾ ಸೇವೆಯಲ್ಲೂ. ಸಂಸ್ಕೃತಿಯ ಸೇವೆಯಲ್ಲೂ ಒಂದಾಗಿ ಪರಸ್ಪರ ವಿಶ್ವಾಸವನ್ನು ವೃದ್ಧಿಪಡಿಸಿಕೊಳ್ಳಲಿ ಎಂಬುದೇ ಈ ಲೇಖನದ ಉದ್ದೇಶ.

ಎಂ. ಎಚ್. ಕೃಷ್ಣ

# ಕರ್ಣಾಟಕದ ಏಕೀಕರಣ

> ಕಾವೇರಿಯಿಂದಮಾ ಗೋ। ದಾವರಿವರಮಿರ್ದ ನಾಡದಾ ಕನ್ನಡದೊಳ್
> ಭಾವಿಸಿದ ಜನಪದಂ ವಸು। ಧಾವಳಯ ವಿಲೀನ ವಿಶದ ವಿಷಯ ವಿಶೇಷಂ

ಎಂಬುದಾಗಿ ಕ್ರಿ.ಶ. ೯ನೆಯ ಶತಮಾನದ ಉತ್ತರಾರ್ಧದಲ್ಲಿ ರಾಷ್ಟ್ರಕೂಟವಂಶದ ದೊರೆಯೂ ಮಹಾಕವಿಯೂ ಆದ ನೃಪತುಂಗನು ತನ್ನ 'ಕವಿರಾಜಮಾರ್ಗ'ವೆಂಬ ಲಕ್ಷಣಗ್ರಂಥದಲ್ಲಿ ಉದ್ಘೋಷಿಸಿರುವನು. ಇವನ ಅನಂತರದಲ್ಲಿಯೂ ಈ ಕುರಿತು ಬರೆದ ಬೇರೆಬೇರೆ ಕವಿಗಳು ಕೂಡ ಇವನ್ನೇ ಕರ್ಣಾಟಕ ದೇಶದ ಎಲ್ಲೆಗಳೆಂದು ನಿರೂಪಿಸಿರುವಂತೆ ಕಂಡುಬರುತ್ತಿದೆ. ಈ ಎರಡು ನದಿಗಳೊಳಗೆ ಕಾವೇರೀ ನದಿಯು ಕನ್ನಡ ದೇಶದಲ್ಲಿಯೇ ಕೊಡಗಿನಲ್ಲಿ ತುಲಾ ಕಾವೇರಿಯೆಂಬಲ್ಲಿ ಹುಟ್ಟಿ ಬಹು ಭಾಗವೆಲ್ಲ ಕರ್ಣಾಟ ರಾಷ್ಟ್ರದೊಳಗೇ ಹರಿದು ಶಿವಸಮುದ್ರದ ಬಳಿ ದ್ರಾವಿಡ ದೇಶಕ್ಕಿಳಿದು ಶ್ರೀರಂಗ ಕ್ಷೇತ್ರದ ಬಳಿ ಪೂರ್ವ ಸಮುದ್ರವನ್ನು ಸೇರುತ್ತದೆ. ಹೀಗೆ ಕಾವೇರೀ ನದಿಯು ಒಂದು ರೀತಿಯಾಗಿ ಕರ್ಣಾಟಕ ದೇಶದ ದಕ್ಷಿಣದ ಎಲ್ಲೆಯಾಗಿರುವುದನ್ನು ನಾವು ಈ ಹೊತ್ತಿಗೂ ಕಾಣುತ್ತಲಿದ್ದೇವೆ. ಆದರೆ ಗೋದಾವರೀ ನದಿಯು ಮಾತ್ರ ಈ ಹೊತ್ತು ಕನ್ನಡನಾಡೆನ್ನಿಸುವ ಯಾವ ಭೂಭಾಗವನ್ನೂ ಮುಟ್ಟುವುದಿಲ್ಲವಾದ ಪ್ರಯುಕ್ತ ಇದನ್ನು ಕನ್ನಡ ನಾಡಿನ ಉತ್ತರ ಗಡಿಯೆನ್ನಲು ಕವಿವಚನವೇ ವಿನಾ ಪ್ರಬಲವಾದ ಯುಕ್ತಿಯುಕ್ತವಾದ ಬೇರೆ ಆಧಾರಗಳಿರುವುವೆಂದು ನಾನು ಎಣಿಸಲಾರೆ. ಇಂಡಿಯಾ ದೇಶದ ಭೂಪಟವನ್ನು ಪರಿಶೀಲಿಸಿದರೆ ವಾಸ್ತವವಾಗಿ ಈ ಭಾಗ್ಯವು ಕೃಷ್ಣಾ ನದಿಗೆ ಪ್ರಾಪ್ತವಾಗುತ್ತದೆಂದು ನನ್ನ ಭಾವನೆ. ಅದು ಹೇಗಿದ್ದರೂ ಇರಲಿ. ನಮ್ಮ ತಾಯಿನಾಡು ಸುಮಾರು ೫೬ ಸಾವಿರ ಚಚ್ಚೌಕ ಮೈಲಿಯಷ್ಟು ವಿಸ್ತಾರವಾದ, ಸುಮಾರು ೨೦೦ ಮೈಲಿಯಷ್ಟು ಸುದೀರ್ಘವಾದ ಸಮುದ್ರ ತೀರವನ್ನುಳ್ಳ, ನಯನ ಮನೋಹರವಾದ ಒಂದು ಭೂಪ್ರದೇಶ ಎಂಬ ವಿಷಯದಲ್ಲಿ ಯಾರೊಬ್ಬರೂ ಭಿನ್ನಾಭಿಪ್ರಾಯವಿಟ್ಟುಕೊಳ್ಳಲು ಕಾರಣವಿಲ್ಲ.

ಕರ್ಣಾಟಕವೆಂಬುದು ಉನ್ನತವಾದ ಪ್ರಸ್ಥಭೂಮಿಯನ್ನುಳ್ಳ ದೇಶ; ಎತ್ತರವಾದ ಪರ್ವತಶ್ರೇಣಿಗಳಿರುವ ದೇಶ; ಎಲ್ಲೆಲ್ಲಿಯೂ ಹರಿದು ಭೂಮಿಯನ್ನು ಫಲವತ್ತಾಗಿ ಮಾಡತಕ್ಕ ಚಿಕ್ಕ ದೊಡ್ಡ ಪುಣ್ಯನದಿಗಳುಳ್ಳ ದೇಶ; ವಿಧವಿಧವಾದ ಪ್ರಾಣಿಜಾತಿಗಳಿಂದಲೂ ವೃಕ್ಷವಿಶೇಷಗಳಿಂದಲೂ ಕೂಡಿ ಮೆರೆವ ಅರಣ್ಯಗಳುಳ್ಳ ದೇಶ; ಹಲವು ಬಗೆಯ ಹಣ್ಣು, ಹೂವು, ಧಾನ್ಯ, ಲೋಹಗಳಿಂದ ಸಮೃದ್ಧವಾದ ದೇಶ; ಭಿನ್ನ ಭಿನ್ನ ವಾಯುಗುಣದಿಂದಲೂ, ಜನಸಮುದಾಯಗಳಿಂದಲೂ ಲಕ್ಷಿತವಾದ ದೇಶ; ಎಷ್ಟೋ ಶತಮಾನಗಳಕಾಲ ದೊಡ್ಡ ದೊಡ್ಡ ಸಾಮ್ರಾಜ್ಯಗಳನ್ನು ಕಟ್ಟಿ ಆಡಳಿತ ಮಾಡಿದ ದೇಶ; ಕಾಲಾನುಕಾಲಗಳಲ್ಲಿ ಪರಧರ್ಮೀಯರಾದ ವಿದೇಶಿಯರ ದಾಳಿಗಳಿಂದ ಹಾನಿ ತಟ್ಟದಂತೆ ಆರ್ಯಧರ್ಮವನ್ನೂ ಸಂಸ್ಕೃತಿಯನ್ನೂ ಕಾಪಾಡಿ ಪೋಷಿಸಿದ ದೇಶ; ಸಂಗೀತ ಸಾಹಿತ್ಯಾದಿ ಲಲಿತ ಕಲೆಗಳಿಗೆ ಮಾತೃಸ್ಥಾನವಾದ ದೇಶ; "ಕುರಿತೋದದೆಯುಂ ಪರಿಣತಮತಿ"

ಗಳಾದ ಸತ್ಪುತ್ರ ಪುತ್ರಿಯರನ್ನು ಪಡೆದ ದೇಶ; ಕವಿಶ್ರೇಷ್ಠರಿಗೂ ಧರ್ಮಗುರು ಗಳಿಗೂ ಗೌರವಾದರಗಳೊಡನೆ ಆಸರೆಯಿತ್ತ ದೇಶ; ವಿಸ್ತಾರವಾದ ಪ್ರಮಾಣದಲ್ಲಿ ಕೈಗಾರಿಕೆಗಳನ್ನೂ ವಾಣಿಜ್ಯ ವ್ಯವಹಾರಗಳನ್ನೂ ನಡೆಸುತ್ತಿದ್ದ ದೇಶ; ದೇಶಾಭಿ ಮಾನಿಗಳಾದ ವೀರಪ್ರವೀರರುಗಳನ್ನು ಹೆತ್ತು ಕೀರ್ತಿಗೊಂಡ ದೇಶ; ಬಹು ಪ್ರಾಚೀನಕಾಲದಿಂದಲೂ ಸ್ವಾವಲಂಬಿಯಾಗಿ, ತಾನೇತಾನಾಗಿ ಯಶೋವಂತ ವಾಗಿ ಮೆರೆದ ದೇಶ; ಇಷ್ಟೇ ಅಲ್ಲದೆ, ಭೂಗರ್ಭಶಾಸ್ತ್ರವೇತ್ತರ ಅಭಿಪ್ರಾಯದಂತೆ ಅನೇಕ ಕೋಟಿ ವರ್ಷಗಳ ಹಿಂದೆ ಭಾರತವರ್ಷದೊಳಗೆ ಮೊತ್ತಮೊದಲು ಭೂ ಸ್ವರೂಪವನ್ನು ತಾಳಿ ಬಾಳಿದ ದೇಶ. ಅಲಂಕಾರ ಭಾಷೆಯಿಂದ ಹೇಳುವುದಾದರೆ, ಭೂಮಂಡಲದ ಮೇಲಣ ಸ್ವರ್ಗವೇ ನಮ್ಮ ಕನ್ನಡದ ನಾಡೆಂದು, ಅದರ ಭೂ ರಚನೆ, ಚರಿತ್ರೆ, ಸಂಸ್ಕೃತಿಗಳನ್ನು ಅರಿತ ಸಮಸ್ತರೂ ಏಕಾಭಿಪ್ರಾಯದಿಂದ ಒಪ್ಪ ಬೇಕಾಗಿರುವುದು. ಇಂತಹ ಸೊಬಗುಳ್ಳ ಈ ಮಹಾದೇಶವು ಇಂದು ಸಮಸ್ತ ಸೌಭಾಗ್ಯಗಳನ್ನು ಕಳೆದುಕೊಂಡು, ದಾರಿದ್ರ್ಯಕ್ಕೆ ತವರ್ಮನೆಯಾಗಿ, ಕಂದಿ, ಕುಂದಿ, ಮುರಿದು, ಬಿರಿದು, ಹರಿದು, ಹಂಚಿಹೋಗಿ ನೆರೆಹೊರೆಯವರ ಉಪಹಾಸಕ್ಕೆ ಗುರಿಯಾಗಿ, ಗುಟುಕುಜೀವದೊಡನೆ, ಹೇಗೋ ಹಾಗೆ ಬದುಕಿಕೊಂಡಿರಬೇಕಾಗಿ ಬಂದಿರುವುದು, ಅದೂ ಒಂದು ದೈವದುರ್ವಿಪಾಕವಲ್ಲದೆ ಇನ್ನೇನು?

ಕರ್ಣಾಟಕ ದೇಶವು ಅಂದಿನಿಂದ ಇಂದಿನ ವರೆಗೆ ನಿರಂತರವಾಗಿ ಒಂದೇ ಆಡಳಿತಕ್ಕೊಳಪಟ್ಟಿದ್ದಿತೆಂದು ಹೇಳಲಾಗುವುದಿಲ್ಲ. ಆದರೆ ಹಿಂದಿನ ದಿನಗಳಲ್ಲಿ ಪ್ರತಿ ಗ್ರಾಮವೂ ಸ್ವಯಂಸಂಪೂರ್ಣವಾದ ಆಡಳಿತವುಳ್ಳದಾಗಿ, ಲೌಕಿಕವ್ಯವಹಾರ ಸಂಬಂಧವಾದ ಸಮಸ್ತ ವಿಷಯಗಳಲ್ಲಿಯೂ ಒಂದು ವಿಧವಾದ ಸ್ವಾತಂತ್ರ್ಯ ವನ್ನನುಭವಿಸುತ್ತಿದ್ದಿತು. ಕೇಂದ್ರಸ್ಥಾನದವರ ಅಧಿಕಾರವು ಅವುಗಳಿಗೆ ನಾಮ ಮಾತ್ರಕ್ಕೇ ಮುಟ್ಟುತ್ತಿದ್ದಿತು. ಸಮಸ್ತ ಕಾರ್ಯಭಾರವು ಪ್ರಕೃತಿ ಸಹಜವಾದ ರೀತಿಯಿಂದ ನಡೆಯುತಿದ್ದಿತು. ಪ್ರಯಾಣ ಸೌಕರ್ಯಗಳು ಈಗಳಿನಷ್ಟು ಅನು ಕೂಲವಾಗಿರಲಿಲ್ಲವಾಗಿ, ದೂರದೇಶ ಪ್ರಯಾಣಗಳನ್ನು ಜನರು ಕ್ವಚಿತ್ತಾಗಿ ಮಾತ್ರ ಕೈಕೊಳ್ಳುತ್ತಿದ್ದರು. ಹೀಗಾದುದರಿಂದ, ಹಿಂದಿನ ಶತಮಾನಗಳಲ್ಲಿ ಯಾವುದೊಂದು ದೇಶವು ಹಲವೆಲ್ಲ ಆಡಳಿತಗಳಿಗೆ ಒಳಪಟ್ಟಿದ್ದರೂ, ಅದರ ಪರಿಣಾಮವಾಗಿ ಆ ದೇಶವು ಈಗಳಿನಷ್ಟು ತ್ವರೆಯಾಗಿಯೂ ವಿಸ್ತಾರವಾದ ಪ್ರಮಾಣದಲ್ಲಿಯೂ ಕುಲಗೆಟ್ಟು ಹೋಗಲು ಅಷ್ಟೊಂದು ಅವಕಾಶವಿರಲಿಲ್ಲ. ಹೀಗಿದ್ದೂ ಕೂಡ, ಮುಸಲ್ಮಾನರು ಮರಾಠರು ಮುಂತಾದ ಭಿನ್ನಭಾಷೆಗಳನ್ನಾಡುವ ಭಿನ್ನಸಂಸ್ಕೃತಿಯ ಜನಕುಲದವರ ಆಡಳಿತಕ್ಕೊಳಪಟ್ಟ ಕರ್ಣಾಟಕ ದೇಶದ ಉತ್ತರದ ಭಾಗಗಳ ಜನರು ಮೆಲ್ಲಮೆಲ್ಲನೆ ತಮ್ಮ ಸತ್ವವನ್ನು ಕಳೆದುಕೊಂಡು, ತಮ್ಮ ಕಟ್ಟಳೆಗಳಲ್ಲಿಯೂ ನಡೆನುಡಿಗಳಲ್ಲಿಯೂ, ವೇಷಭೂಷಣಗಳಲ್ಲಿಯೂ—ಹೆಚ್ಚೇಕೆ—ಆಹಾರ ಮನೋ ಭಾವನೆಗಳ ವಿಷಯದಲ್ಲಿ ಕೂಡ ಸ್ವಜನರಿಂದ ದೂರವಾಗುತ್ತಲೂ ಪರ ಭಾಷೆ–ಸಂಸ್ಕೃತಿಗಳಲ್ಲಿ ಅಭಿಮಾನ ತಾಳುತ್ತಲೂ ಹೋಗುವವರಾದರು. ಕನ್ನಡಿಗರೆನ್ನಿಸಿ ಕೊಳ್ಳುವುದು ಅಥವಾ ಕನ್ನಡವನ್ನಾಡುವುದು ಕೂಡ ಒಂದು ಅಪಮಾನದ ವಿಷಯ ವೆಂದು ಅವರು ತಿಳಿಯತೊಡಗಿದರು. ಹೀಗಾಗಿ ಕನ್ನಡ ಸಂಸ್ಕೃತಿಯು ಉತ್ತರ

ಕರ್ಣಾಟಕದಲ್ಲಿ ಮಲಿನವಾಗಿ, ದಕ್ಷಿಣ ಭಾಗದಲ್ಲಿ, ಎಂದರೆ ಕನ್ನಡವೇ ಮನೆಮಾತಾಗಿರುವ ಮೈಸೂರು ದೊರೆಗಳ ರಾಜ್ಯದಲ್ಲಿ ಮಾತ್ರ ಅಚ್ಚಳಿಯದೆ ನಿಲ್ಲುವುದಾಯಿತು.

ಕ್ರಿ.ಶ. ೧೮ನೆಯ ಶತಮಾನದಲ್ಲಿ ನಮ್ಮ ಕರ್ಣಾಟಕ ದೇಶವು ಪೂರ್ತಿಯಾಗಿ, ಪರಂತು ಬೇರೆಬೇರೆ ಕಾಲಗಳಲ್ಲಿ ತುಂಡು ತುಂಡುಗಳಾಗಿ, ಬ್ರಿಟಿಷರ ಆಡಳಿತದ ಕೆಳಗೆ ಬಂದಿತು. ಮತ್ತು ಅವರು ಅದರ ಒಂದು ಭಾಗವನ್ನು ತಮ್ಮ ನೇರಾದ ಆಡಳಿತದಲ್ಲಿಟ್ಟುಕೊಂಡು, ಉಳಿದುದನ್ನೆಲ್ಲ ೨೫–೩೦ ದೇಶೀಯ ರಾಜರುಗಳ ಮತ್ತು ಪ್ರಭುಗಳ ವಶದಲ್ಲಿ ಇರಗೊಟ್ಟು, ಮೇಲ್ವಿಚಾರವನ್ನು ಮಾತ್ರ ತಾವು ಇಟ್ಟುಕೊಂಡರು. ತಮ್ಮ ಸ್ವಂತ ಆಡಳಿತಕ್ಕೊಳಪಟ್ಟ ದೇಶಭಾಗವು ಕೂಡ ಬೇರೆ ಬೇರೆ ಕಾಲಗಳಲ್ಲಿ ಸಂಪಾದಿಸಲ್ಪಟ್ಟುದರ ಪರಿಣಾಮವಾಗಿಯೂ ಕೆಲಕೆಲವು ಸಂಗತಿಗಳಲ್ಲಿ ಅವು ಕನ್ನಡ ದೇಶವಲ್ಲವೆಂಬ ತಮ್ಮ ತಪ್ಪು ಭಾವನೆಯ ದೆಸೆಯಿಂದಲೂ, ಬೇರೆ ಬೇರೆ ೬–೭ ಆಧಿಪತ್ಯಗಳಿಗೆ ಒಳಪಡಿಸಲಾದುವು. ಮತ್ತು ಕೇವಲ ಕೇಂದ್ರೀಕೃತವಾದ (Highly centralized) ರಾಜ್ಯಭಾರಕ್ರಮವು ಸಲುವಳಿಯಲ್ಲಿ ತರಲಾಯಿತು. ಇದರ ಜತೆಗೆ ವಿದ್ಯಾಭ್ಯಾಸಕ್ರಮವೂ ಮಾರ್ಪಟ್ಟು ಮಕ್ಕಳಿಗೆ ಇಂಗ್ಲಿಷ್ ಭಾಷೆಯು ಚಿಕ್ಕವಯಸ್ಸಿನಿಂದಲೇ ಶಿಕ್ಷಣದ ಮುಖವಾಗಿ ಮಾಡಲಾಯಿತು. ಇವೆರಡರ ಪರಿಣಾಮವಾಗಿ ಮದ್ರಾಸು ಮುಂಬಯಿಯಂಥ ರಾಜಧಾನಿ ಪಟ್ಟಣಗಳೂ ಅವುಗಳ ಸಮೀಪದ ದೇಶ ಭಾಗಗಳೂ ಅಲ್ಲಿನ ಜನತೆಯೂ ಭಾಷೆಗಳೂ ಮುಂದಕ್ಕೆ ಬಂದು, ಸರ್ಕಾರದಲ್ಲಿಯೂ ವಾಣಿಜ್ಯಾದಿ ವ್ಯವಹಾರಗಳಲ್ಲಿಯೂ ಅಪಾರವಾಗಿ ಬೆಳೆದು ಧನಸಂಪನ್ನವಾಗಿ ಪ್ರತಿಷ್ಠೆ ಪಡೆದು ಮೆರೆಯತೊಡಗಿದುವು. ವಿಸ್ತಾರದಲ್ಲಿ ಕನ್ನಡ ನಾಡಿನ ಹೆಚ್ಚುಕಡಮೆ ಅರ್ಧದಷ್ಟು ದೊಡ್ಡದಾದ ಮೈಸೂರು ಸೀಮೆಯೊಂದು ಮಾತ್ರ ಇಂತಹ ದೈನ್ಯಾವಸ್ಥೆಗೆ ಇಳಿಯದೆ, ಪ್ರತಿಷೇಧವಾಗಿ ಉಳಿದು, ದಿನಕ್ರಮವಾಗಿ ಪ್ರವರ್ಧಮಾನವಾಗುತ್ತ ಪ್ರಗತಿಪರವಾದ ಆಡಳಿತದಲ್ಲಿ ಭಾರತವರ್ಷಕ್ಕೇ ಒಂದು ಮೇಲ್ಪಂಕ್ತಿಯಾಗಿ ಕೀರ್ತಿಗೊಂಡಿರುವುದು ಕನ್ನಡಿಗರಿಗೆ ಪ್ರೋತ್ಸಾಹಕರವೂ ಅಭಿಮಾನದ ವಿಷಯವೂ ಆಗಿದೆ. ಹೀಗೆ ಕನ್ನಡಿಗರ ಈ 'ಕರ್ಮಕಥೆ'ಯನ್ನು ಕುರಿತು ಎಷ್ಟು ಹೇಳಿದರೂ ಸಾಲದಂತಿದೆ— ಒಂದು "ಮಹಾಭಾರತ"ವನ್ನೇ ಬರೆಯಬಹುದಾಗಿದೆ.

ಈ ಮೇರೆಗೆ ನಮ್ಮ ಕನ್ನಡ ನಾಡು ಛಿನ್ನವಿಚ್ಛಿನ್ನವಾಗಿ ಹೋಗಿರುವುದರ ಕಾರಣಗಳನ್ನೂ ಅದರ ಅತ್ಯಂತ ಕ್ರೂರವಾದ ಪರಿಣಾಮವು ಬ್ರಿಟಿಷರ ಕೈಗೆ ಬಂದ ಬಳಿಕ ಆದಷ್ಟು ತೀವ್ರವಾಗಿ ಹಿಂದೆ ಎಂದೂ ಆಗಿರಲಿಲ್ಲವೆಂಬುದನ್ನೂ ಮೇಲೆ ಸಂಗ್ರಹವಾಗಿ ತಿಳಿಯಪಡಿಸಿದೆನು. ಪರಂತು ಒಂದು ಸಂಗತಿಯನ್ನು ಮಾತ್ರ ಇಲ್ಲಿ ಹೇಳದೆ ಇರಲಾರೆನು. ಇಂಡಿಯದೊಳಗಣ ಸಮಸ್ತ ಉಪಜನಾಂಗಗಳನ್ನೂ ಬ್ರಿಟಿಷರು ಒಂದೇ ರೀತಿಯಾಗಿ ನಿಷ್ಪಕ್ಷಪಾತಬುದ್ಧಿಯಿಂದ ನಡೆಯಿಸಿಕೊಂಡುಬಂದಿದ್ದಾರೆ. ಮತ್ತು, ರಾಜ್ಯದ ಆಡಳಿತದ ಸೌಕರ್ಯವೊಂದನ್ನೇ ತಮ್ಮ ಕಣ್ಣೆದಿರಿಗೆ ಇಟ್ಟುಕೊಂಡು, ಕಾಲಾನುಕಾಲಗಳಲ್ಲಿ ಸೂಕ್ತವೆಂದು ತಮಗೆ ತೋರಿಬಂದಂತೆ ದೇಶ ವಿಭಾಗಗಳನ್ನು ಏರ್ಪಡಿಸಿಕೊಂಡಿರುವರು. ಹೀಗೆ ಮಾಡಿರುವಲ್ಲಿ ಕನ್ನಡ ನಾಡು

ತುಂಡು ತುಂಡಾಗಿ ಹೋಗಬೇಕೆಂದೂ, ಕನ್ನಡ ಜನರು ಹಿಂದೆ ಬಿದ್ದು ನಶಿಸಿ ಹೋಗಬೇಕೆಂದೂ ಉದ್ದೇಶಪೂರ್ವಕವಾಗಿ ಅವರು ಮಾಡಿಲ್ಲವೆಂದು ನಾನು ಖಚಿತ ವಾಗಿ ಹೇಳಬಲ್ಲೆನು. ಮತ್ತು ಈ ಭಾವನೆಯು ನನ್ನಲ್ಲಿ ಬಲವಾಗಿ ಮೂಡಿರುವುದ ರಿಂದಲೇ, ತಕ್ಕಂತೆ ಕಾರಣಗಳನ್ನು ಕೊಟ್ಟು ಮುಂದಟ್ಟಾಗಿಸಿದರೆ ಪುನಃ ಕರ್ಣಾಟಕದ ಏಕೀಕರಣ ಕಾರ್ಯವು ಅವರ ಮುಖವಾಗಿಯೇ ಪೂರಯಿಸಲ್ಪಡದಿರದೆಂಬ ದೃಢ ವಿಶ್ವಾಸವಿರುವುದರಿಂದಲೇ ಕರ್ಣಾಟಕದ ಏಕೀಕರಣವೊಂದನ್ನೇ ನನ್ನ ಜೀವನದ ಹೆಗ್ಗುರಿಯಾಗಿ ಇಟ್ಟುಕೊಂಡು, ಯಥಾಶಕ್ತಿಯಾಗಿ ದುಡಿಯುತ್ತಲೂ ಕನ್ನಡ ಜನತೆಯನ್ನು ಹುರಿದುಂಬಿಸುತ್ತಲೂ ಇರುವೆನು.

ಕನ್ನಡ ನಾಡಿಗೆ ಕಳೆದ ಅರ್ಧ ಶತಮಾನದ ಕಾಲದಲ್ಲಿ ಉಂಟಾಗಿರುವ ದೈನ್ಯಾ ವಸ್ಥೆಯು ವರ್ಣಿಸಿ ಹೇಳುವಂತಿಲ್ಲ. ಕನ್ನಡಿಗರು ಒಂದೊಂದು ಸಂಗತಿಯಲ್ಲಿಯೂ ಹಿಂದೆಬಿದ್ದಿರುವರು. ಹೈದರಾಬಾದಿನ ಮಾತು ಹಾಗಿರಲಿ; ಬೊಂಬಾಯಿ, ಮದ್ರಾಸುಗಳಲ್ಲಿ ಕೂಡ ಅಲ್ಪಸಂಖ್ಯಾತರಾಗಿ ಎಲ್ಲೋ ಒಂದು ಮೂಲೆಯಲ್ಲಿರುವ ಇವರಿಗೂ ಇವರ ಭಾಷೆಗೂ ಆ ಆ ಸರ್ಕಾರಗಳಲ್ಲಿ ತಕ್ಕಷ್ಟು ಗೌರವ ಪ್ರತಿಷ್ಠೆಗಳಿಲ್ಲ. ವಿದ್ಯೆಯಲ್ಲಿ ಹಿಂದುಳಿದಿರುವರು; ವ್ಯಾಪಾರ ವಾಣಿಜ್ಯಾದಿಗಳು ಹಾಳಾಗಿವೆ. ಧನ ಬಲವು ಕಡಮೆಯಾಗಿದೆ. ಸಾಹಿತ್ಯ ಪತ್ರಿಕಾ ವ್ಯವಸಾಯಾದಿಗಳಿಗೆ ಆಶ್ರಯ ಸಾಲದು. ಲಲಿತ ಕಲೆ ಕೇಳುವವರಿಲ್ಲ. ದೇಶದ ಸಂಪದಭಿವೃದ್ಧಿ ಸಾಧನಗಳು ತಕ್ಕಂತೆ ರೂಢಿಸಲ್ಪಡುತ್ತಿಲ್ಲ. ಒಂದೊಂದು ಭಾಗದ ಕನ್ನಡಿಗರಿಗೂ ಇತರ ಭಾಗಗಳ ಲ್ಲಿರುವ ತಮ್ಮ ಬಾಂಧವರ ನಡೆನುಡಿ ಮುಂತಾದ ವಿಷಯದಲ್ಲಿ ತಿರಸ್ಕಾರ ಭೇದ ಬುದ್ಧಿಯೇ ವಿನಾ ನಾವೆಲ್ಲರೂ ಒಂದು ಕುಲದವರೆಂಬ ಭಾವವಿರುವುದಿಲ್ಲ. ಹೀಗಾಗಿ ಕನ್ನಡದ ಸಂಸ್ಕೃತಿಯು ತನ್ನ ವಿಶಿಷ್ಟ ಸ್ವರೂಪವನ್ನು ಕಳೆದುಕೊಂಡು ಪರಾಧೀನ ವಾಗುತ್ತಲಿದೆ. ಮತ್ತು ಒಂದೊಂದು ವಿಷಯದಲ್ಲಿಯೂ ಪರಾಶ್ರಯದಿಂದಲೇ ಕಿಂಚಿನ್ಮಾತ್ರ ಅಭಿವೃದ್ಧಿ ಹೊಂದಬೇಕಾಗಿರುವ ಕನ್ನಡಿಗರು ಪರಜನತೆಯ ಗೌರವ ವನ್ನಷ್ಟೇ ಅಲ್ಲದೆ ತಮ್ಮ ಸ್ವಾಭಿಮಾನವನ್ನು ಕೂಡ ಕಳೆದುಕೊಳ್ಳುತ್ತಲಿರುವರು. ಈ ಮುಂದಾದರೂ ಕನ್ನಡ ನಾಡು ಒಮ್ಮುಖವಾಗಿ, ಒಂದು ಕುಲವಾಗಿ ಸಮಸ್ತ ದಿಕ್ಕುಗಳಿಂದಲೂ ಅಭಿವೃದ್ಧಿ ಹೊಂದಿ, ಲೋಕದ ಗೌರವಕ್ಕೆ ಪಾತ್ರವಾಗಿ, ಇತರ ಉಪಜನಾಂಗಗಳೊಡನೆ ಸಮಾನಸ್ಕಂಧವೆನಿಸಿ, ತಲೆಯೆತ್ತಿ ಮೆರೆಯಬೇಕಾದರೆ ಅದಕ್ಕೆ ಇರುವ ರಾಮಬಾಣ ಔಷಧವೊಂದೇ— **ಕರ್ಣಾಟಕದ ರಾಜಕೀಯ ಏಕೀಕರಣ**— ಎಂದರೆ, ಭಾರತವರ್ಷದೊಳಗಣ ಹಲವೆಲ್ಲ ಜನಾಂಗಗಳೊಳಗೆ ಒಂದಾಗಿ, ಮಧ್ಯವರ್ತಿ ಆಡಳಿತಕ್ಕೊಳಪಟ್ಟರು ಕೂಡ, ಕರ್ಣಾಟಕ ದೇಶವನ್ನು ಮುಖ್ಯಾಂಶದಲ್ಲಿ ಕನ್ನಡ ಜನತೆಯ ಹಿತಾರ್ಥವಾಗಿ, ಕನ್ನಡಿಗರೇ (ಎಂದರೆ ಕನ್ನಡ ದೇಶದಲ್ಲಿ ಶಾಶ್ವತವಾಗಿ ನೆಲಸಿನಿಂತಿರುವ ಸಮಸ್ತ ಪಂಗಡಗಳ ಜನರೇ) ರಾಜ್ಯ ಸೂತ್ರಗಳನ್ನು ತಮ್ಮ ಆವಶ್ಯಕತೆಗಳಿಗೂ ಅಪೇಕ್ಷೆಗಳಿಗೂ ಅನುಗುಣವಾಗಿ ನಡೆಸಿ ಕೊಂಡಿರುವಂತೆ ಮಾಡಿ ಕನ್ನಡಿಗರ ಸಂಘಶಕ್ತಿ ಬೆಳೆಸೋಣವು. ಮತ್ತು ಇದು ಕೂಡ ಆದಷ್ಟು ಕ್ಷಿಪ್ರವಾಗಿ, ಬ್ರಿಟಿಷರ ಕೈಯೊಳಗಿರುವ ರಾಜ್ಯಸೂತ್ರಗಳು ಸ್ವದೇಶೀಯರ ಕೈಗೆ ಒಪ್ಪಿಸಲ್ಪಡುವುದಕ್ಕೆ ಮೊದಲೇ ನೆರವೇರಬೇಕೆಂದು ನನಗೆ ತೋರುತ್ತಲಿದೆ.

ಕಾಲಸ್ಥಿತಿಯು ಈ ಮೇರೆಗೆ ವಿಪರೀತವಾಗಿ ಪರಿಣಮಿಸಿರುವಲ್ಲಿ ಕೂಡ, ಒಂದು ಸಂಗತಿಯಲ್ಲಿ ಮಟ್ಟಿಗೆ ಕೆಲವು ವರ್ಷಗಳಿಂದೀಚೆಗೆ ಸ್ವಲ್ಪ ಅನುಕೂಲವಾಗುತ್ತಲಿದೆಯೆಂದು ಆಶೆ ತೋರತೊಡಗಿದೆ; ಮತ್ತು ವಾಜ್ಮಯಾಭಿವೃದ್ಧಿಯ ಮೂಲಕವಾಗಿಯಾದರೂ, ಕನ್ನಡಿಗರಲ್ಲಿ ನಾವೆಲ್ಲ ಒಂದೆಂಬ ಭಾವನೆಯು ಬೆಳೆಯುತ್ತಲಿದೆಯೆಂದು ತಿಳಿಯಲು ಅವಕಾಶವುಂಟಾಗಿದೆ. ಆ ಕಲ್ಪನೆಯು ನನ್ನ ಮನಸ್ಸಿಗೆ ಬಂದೊಡನೆ ನನ್ನ ನೆನಪು ಸುಮಾರು ಅರ್ಧ ಶತಮಾನದಷ್ಟು ಹಿಂದಕ್ಕೆ, ವಿಶೇಷತಃ ಉತ್ತರ ಕರ್ಣಾಟಕದ ಕಡೆಗೆ ಹರಿಯತೊಡಗುತ್ತದೆ. ಈ ಕಾಲದಲ್ಲಿ ಕನ್ನಡಿಗರಾದ ಅರಸರಿಂದ ಆಳಲ್ಪಡುತ್ತಬಂದಿರುವ ಮೈಸೂರು ರಾಜ್ಯವೊಂದರಲ್ಲಿ ಮಾತ್ರ, ರಾಜಾಶ್ರಯದಲ್ಲಿ ಪೂರ್ವ ಸಂಪ್ರದಾಯಾನುಸಾರವಾಗಿ ನಡೆದುಬಂದ ಕನ್ನಡ ಸಂಸ್ಕೃತ ಪಾಂಡಿತ್ಯವು ನಡೆದುಬರುತ್ತಿದ್ದಿತು. ಕನ್ನಡ ನಾಡಿನ ಇತರ ಯಾವ ಭಾಗದಲ್ಲಿಯೂ ಕನ್ನಡ ಪಾಂಡಿತ್ಯವೆಂಬುದು ಹೆಸರಿಗೂ ಇರಲಿಲ್ಲ. ಅರ್ವಾಚೀನ ವಿದ್ಯಾಭ್ಯಾಸ ಪಡೆದ ಕನ್ನಡಿಗರು ಎಲ್ಲೆಲ್ಲಿಯೂ ಪೌರ್ವಾತ್ಯ ಸಂಸ್ಕೃತಿಯ ಮತ್ತು ಮಾತೃಭಾಷೆಯ ವಿಷಯದಲ್ಲಿ ಕೇವಲ ತಿರಸ್ಕಾರ ಭಾವವನ್ನು ವಹಿಸಿದ್ದರು. ಕನ್ನಡದ ವಿಷಯದಲ್ಲಿ ಮಮತೆ, ಕನ್ನಡ ಗ್ರಂಥಲೇಖನ, ಪತ್ರಿಕೆ ಮಾಸಿಕೆಗಳನ್ನು ನಡೆಸೋಣ, ಕನ್ನಡದಲ್ಲಿ ಮಾತನಾಡೋಣವೆಂಬಿವೇ ಮೊದಲಾದುವುಗಳನ್ನು ಮಾಡುವವರು ಸದಾ ಸರ್ವದಾ "ವಿದ್ಯಾವಂತ"ರುಗಳ ಅವಹೇಳನೆಗೆ ಗುರಿಯಾಗಬೇಕಾಗುತ್ತಿದ್ದಿತು. ಯಾವನಾದರೂ ಕನ್ನಡದಲ್ಲಿ ತನ್ನ ವ್ಯವಹಾರಗಳನ್ನು ನಡೆಸಿದನಾದರೆ, ಆತನಿಗೆ ಇಂಗ್ಲಿಷ್ ತಿಳಿಯದೆಂದೇ ಅದರ ಅರ್ಥವಿತ್ತು. "ನನಗೆ ಕನ್ನಡದಲ್ಲಿ ಮಾತನಾಡಲು ಬರುವುದಿಲ್ಲ, ಬರೆಯಲು ತಿಳಿಯದು" ಎಂದು ಸಾರ್ವಜನಿಕ ಸಭೆಗಳಲ್ಲಿ ಹೇಳುವುದೇ ಇಂಗ್ಲಿಷ್ "ವಿದ್ಯಾವಂತ"ರಿಗೆ ಒಂದು ದೊಡ್ಡ ಭೂಷಣವಾಗಿ ತಿಳಿಯಲ್ಪಡುತ್ತಿದ್ದಿತು. ಇಂತಹ ಸ್ಥಿತಿಯು ಎಲ್ಲೆಲ್ಲಿಯೂ ಇದ್ದಿತಾದರೂ ನಮ್ಮ ಉತ್ತರ ಕರ್ಣಾಟಕದಲ್ಲಿ ಅತ್ಯಂತ ತೀವ್ರಾವಸ್ಥೆಯಲ್ಲಿದ್ದಿತು. ಸಾಲದುದಕ್ಕೆ ಈ ಪ್ರಾಂತದ ಕನ್ನಡಿಗರನ್ನು, ಒಂದಿಷ್ಟು ಮುಂದುವರಿದಿದ್ದ ಮರಾಠಿಯ ಮೋಹವೂ ಮುಸುಕಿದ್ದಿತು. ಮೊತ್ತಮೊದಲು ಈ ಪ್ರದೇಶವು ಬ್ರಿಟಿಷರ ವಶಕ್ಕೆ ಬಂದಾಗ ಅದು **ದಕ್ಷಿಣ ಮಹಾರಾಷ್ಟ್ರ**ವೆಂಬ ಹೆಸರುಳ್ಳುದಾಗಿ ಶಾಲೆ, ಕೋರ್ಟು ಕಚೇರಿಗಳೇ ಮುಂತಾದ ಎಲ್ಲೆಡೆಗಳಲ್ಲಿಯೂ ಕೇವಲ ಮರಾಠೀ ಭಾಷೆಯೇ "ದೇಶಭಾಷೆ"ಯಾಗಿ ವರ್ತಿಸಲ್ಪಡುತ್ತಿದ್ದಿತು. ಮುಂದೆ ಒಂದೆರಡು ತಲೆ ದಾಟಿದ ತರುವಾಯ ಕನ್ನಡಿಗರಲ್ಲಿ ಒಂದಿಷ್ಟು ಆತ್ಮಜ್ಞಾನವುಂಟಾಗಿ, ಕೆಲಕೆಲವು ವೀರಶೈವ ಮತ್ತು ಬ್ರಾಹ್ಮಣ ಮುಖಂಡರುಗಳ ಸತತಪ್ರಯತ್ನಗಳಿಂದ ಈ ದೈನ್ಯಾವಸ್ಥೆಯು ಕೊಂಚ ಮಟ್ಟಿಗೆ ಪರಿಹಾರವಾಗಿ ಕನ್ನಡಕ್ಕೂ ಒಂದು ಅಲ್ಪಸ್ಥಾನವು ದೊರೆಯಿತಾದರೂ, ಮರಾಠಿಯ ಪ್ರಭಾವವು ಮಾತ್ರ ಅದರಿಂದ ಕುಂದಿತೆಂದು ಹೇಳಬರುವಂತಿರಲಿಲ್ಲ. ಕ್ರಿ.ಶ. ೧೮೯೦ರಲ್ಲಿ, ಎಂದರೆ ಇಂದಿಗೆ ಸರಿಯಾಗಿ ಅಯಿವತ್ತು ವರ್ಷಗಳಿಗೆ ಹಿಂದೆ ಅಲ್ಲಿನ ಕನ್ನಡಿಗರು ಉತ್ತರ ಕರ್ಣಾಟಕದ ಕೇಂದ್ರಸ್ಥಾನವಾದ ಧಾರವಾಡದಲ್ಲಿ **ಕರ್ನಾಟಕ ವಿದ್ಯಾವರ್ಧಕ ಸಂಘ**ವೆಂಬ ಒಂದು ಸಂಸ್ಥೆಯನ್ನು ಹೊರಡಿಸಿ, ಕನ್ನಡದ ಬಾವುಟವನ್ನು ನೆಟ್ಟು ಹಾರಿಸಿ, ತಮ್ಮ ಸ್ವಾತಂತ್ರ್ಯವನ್ನು ಜಗತ್ತಿಗೆ

ಸಾರಿದರು. ಇದುವೇ, ಕನ್ನಡಿಗರು ಸುಸಂಘಟಿತರಾಗಿ ಕರ್ನಾಟಕ ಏಕೀಕರಣದ ಮಾರ್ಗದಲ್ಲಿಟ್ಟ ಮೊದಲನೆಯ ಹಜ್ಜೆಯೆನ್ನಬಹುದು. ಅದರ ಸ್ಥಾಪನೆಯಲ್ಲಿಯೂ ಬೆಳವಣಿಗೆಯಲ್ಲಿಯೂ ಭಾಗವಹಿಸಿ ಕೀರ್ತಿಶೇಷರಾದ ಮಹನೀಯರನೇಕರ ಮತ್ತು ಈ ಹೊತ್ತಿಗೂ ನಮ್ಮ ಪುಣ್ಯದಿಂದ ಬದುಕಿರುವ ಕೆಲಕೆಲವು ಹಿರಿಯರ ಹೆಸರನ್ನೂ ಅಮೋಘವಾದ ಸೇವೆಯನ್ನೂ ಕನ್ನಡಿಗರು ಎಂದೆಂದಿಗೂ ಮರೆಯುವಂತಿಲ್ಲ. ಈ ಸಂಘವು ಕಾಲಕ್ರಮವಾಗಿ ಬೆಳೆಯುತ್ತ ಹೋಗಿ, ಕನ್ನಡದ ಅಭಿಮಾನವನ್ನು ಆ ಭಾಗದ ಮಹಾಜನರಲ್ಲಿ ಹಬ್ಬಿಸಿತು, ಮತ್ತು ಕನ್ನಡಿಗರ ಸ್ವಾತಂತ್ರ್ಯವನ್ನೂ ಉತ್ಕರ್ಷವನ್ನೂ ಸಹಿಸಲಾರದವರಿಗೆ ಹೃದಯಶೂಲವಾಗಿ ಪರಿಣಮಿಸಿತು. ಇದರ ಆಶ್ರಯದಲ್ಲಿ ಚಿಕ್ಕ ದೊಡ್ಡ ನೂರಾರು ಕನ್ನಡ ಗ್ರಂಥಗಳು ಪ್ರಚುರವಾದುವು. ಸಾವಿರಾರು ಗ್ರಂಥಕರ್ತೃಗಳಿಗೆ ಧನಸಹಾಯ, ಸಂಭಾವನೆಗಳು ದೊರೆತುವು. ಕನ್ನಡದ ಪರೀಕ್ಷೆಗಳೂ, ಸ್ಪರ್ಧೆಗಳೂ ಏರ್ಪಟ್ಟು ಬಾಲಕರೂ ಬಾಲಕಿಯರೂ ಪಾರಿತೋಷಿಕಗಳನ್ನು ಪಡೆಯತೊಡಗಿದರು. ಸಂಘದಲ್ಲಿ ದೊಡ್ಡದೊಂದು ಪುಸ್ತಕಾಲಯವು ನಿರ್ಮಾಣವಾಯಿತು. ಸಂಗ್ರಹವಾಗಿ ಹೇಳುವುದಾದರೆ, ಈಗ ಕನ್ನಡ ಸಾಹಿತ್ಯ ಪರಿಷತ್ತಿನವರ ಮುಖವಾಗಿ ಯಾವ ಯಾವ ದೇಶಸೇವೆ ಭಾಷಾಸೇವೆ ಕಾರ್ಯಗಳು ನಡೆಯುತ್ತಲಿವೆಯೋ ಅವೆಲ್ಲ—ಸಣ್ಣ ಪ್ರಮಾಣದಲ್ಲಾದರೂ—ಅಲ್ಲಿ ನಡೆಯತೊಡಗಿದುವು. ಆ ಕಾಲದಲ್ಲಿ ಕೂಡ, ಆ ಸಂಘದ ಚಾಲಕರು ಆ ಭಾಗ ಈ ಭಾಗ ಎಂಬ ಭೇದ ಬುದ್ಧಿಯನ್ನಿಟ್ಟುಕೊಳ್ಳದೆ, ಸಮಸ್ತ ಕನ್ನಡಿಗರನ್ನೂ ಪ್ರೋತ್ಸಾಹ, ಸಂಭಾವನೆ ಮುಂತಾದ ವಿಷಯಗಳಲ್ಲಿ ಸಮಾನವಾದ ರೀತಿಯಲ್ಲಿ ನಡೆಸುತ್ತಿದ್ದರೆಂಬ ಸಂಗತಿಯನ್ನು ಇಲ್ಲಿ ಸಂತೋಷದಿಂದ ಉಲ್ಲೇಖಿಸದೆ ಇರಲಾರೆನು. ತಥಾಪಿ, ಸದಸ್ಯರಾಗಿ ಸೇರಿ ಅದನ್ನು ಪ್ರಾಬಲ್ಯಕ್ಕೆ ತರುವ ವಿಷಯದಲ್ಲಿ, ಕರ್ನಾಟಕ ಏಕೀಕರಣದ ಕಲ್ಪನೆ ಸ್ಪಷ್ಟವಾಗಿ ಇಲ್ಲದಿದ್ದ ಆ ಕಾಲದಲ್ಲಿ ಇತರ ಭಾಗಗಳ ಕನ್ನಡಿಗರಿಂದ ಅದಕ್ಕೆ ತಕ್ಕಂತೆ ಪ್ರೋತ್ಸಾಹ ದೊರೆಯದೆಹೋಯಿತು. ಮತ್ತು ಅದೊಂದು ಸಮಸ್ತ ಕರ್ನಾಟಕಕ್ಕೆ ಸೇರಿದ ಸಂಸ್ಥೆಯೆಂಬ ಭಾವನೆಯು ಕೂಡ ಯಾರಲ್ಲಿಯೂ ಮೂಡಲಿಲ್ಲ. ಬಹಳ ಮಟ್ಟಿಗೆ ಬೊಂಬಾಯಿ ಸರ್ಕಾರದವರು ದಯೆಪಾಲಿಸುತ್ತಿದ್ದ ಅಲ್ಪಸ್ವಲ್ಪ ಸಹಾಯದ ಬಲದಿಂದಲೇ ಅದು ನಡೆಯುತ್ತಲಿದ್ದಿತು. ಆದರೆ, ಮೈಸೂರು ಮಂಗಳೂರು ಮುಂತಾದ ಪ್ರಾಂತಗಳ ಮಹಾಜನರ ಸಹಾಯವು ಅದಕ್ಕೆ ಸಿಕ್ಕಲಿಲ್ಲವಾದರೂ ಮೈಸೂರು ಪ್ರಭುಗಳೂ ಸರ್ಕಾರದವರೂ ಮಾತ್ರ ಧನರೂಪವಾಗಿಯೂ ಅನ್ಯರೀತಿಗಳಿಂದಲೂ ಉದಾರವಾದ ಸಹಾಯಮಾಡಿರುವ ಮತ್ತು ಈಗಲೂ ಮಾಡುತ್ತಲಿರುವ ಸಂಗತಿಯನ್ನು ಕೃತಜ್ಞತೆಯೊಡನೆ ಸ್ಮರಿಸಬೇಕಾಗಿದೆ.

ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಈ ಸಂಘವು ಉತ್ತಮೋತ್ತಮವಾಗಿ ಕೆಲಸಮಾಡಿ ಉತ್ತರ ಕರ್ನಾಟಕದ ಜನತೆಯನ್ನು ಪ್ರಚೋದಿಸಲು ತುಂಬ ಸಹಕಾರಿಯಾಯಿತು. ಕನ್ನಡ ನಾಡಿನ ಏಕೀಕರಣದ ಭಾವನೆಯು ಧಾರವಾಡ ಪ್ರಾಂತದಲ್ಲಿ ಚೆನ್ನಾಗಿ ಬೇರೂರಿ, ಕನ್ನಡಿಗರಲ್ಲಿ ಒಂದು ಹೊಸಚೈತನ್ಯವುಂಟಾಯಿತು. ಸಮಸ್ತ ಭಾಗಗಳ ಸಮಸ್ತ ಕನ್ನಡಿಗರೂ ನಿರಾತಂಕವಾಗಿ ಸಹಕರಿಸಿ ಭೇದಭಾವ

ನಿಲ್ಲದೆ ಕೆಲಸಮಾಡಲು ಸಾಧ್ಯವಾದುದು ಮುಖ್ಯವಾಗಿ ಸಾಹಿತ್ಯ ಕ್ಷೇತ್ರವೆಂದೂ, ಅಂಥ ಒಂದು ಅಖಿಲ ಕರ್ಣಾಟಕ ಸಂಸ್ಥೆಯು ಹೊರಡಿಸಲ್ಪಡಬೇಕೆಂದೂ ಪ್ರಬಲ ವಾದ ಪ್ರೇರಣೆಯುಂಟಾಯಿತು. ಧಾರವಾಡ ಪ್ರಾಂತದ ಅಭಿಮಾನಶಾಲಿಗಳಾದ ಕೆಲಕೆಲವು ಕನ್ನಡಿಗರು ಆಗ ಮೈಸೂರು ರಾಜ್ಯದ ದಿವಾನರಾಗಿದ್ದು ರಾಜ್ಯದ ಸಂಪನ್ನತೆಯನ್ನು ಸರ್ವತೋಮುಖವಾಗಿ ಅಭಿವೃದ್ಧಿಗೊಳಿಸಲು ದೀಕ್ಷಾಬದ್ಧರಾಗಿ ಅಹೋರಾತ್ರಿ ದುಡಿಯುತ್ತಲಿದ್ದ ಸರ್ ಮೋಕ್ಷಗುಂಡಂ ವಿಶ್ವೇಶ್ವರಯ್ಯನವರನ್ನು ಕಂಡು, ಅವರ ಮನಸ್ಸೊಲಿಸಿ, ೧೯೧೫ರಲ್ಲಿ ಬೆಂಗಳೂರಿನಲ್ಲಿ **ಕರ್ಣಾಟಕ ಸಾಹಿತ್ಯ ಸಮ್ಮೇಳನ**ವನ್ನು ನೆರೆಯಿಸಲು ಕಾರಣರಾದರು. ಯಾವತ್ತೂ ಭಾಗಗಳ ಕನ್ನಡಿಗರು ಮೈಸೂರು ಸರ್ಕಾರದವರ ಆದರಪುರಸ್ಸರವಾದ ಆಮಂತ್ರಣವನ್ನು ಸ್ವೀಕರಿಸಿ ಬಂದು ಮೂರು ದಿನಗಳ ಕಾಲ ಅಧಿವೇಶನವನ್ನು ನಡೆಯಿಸಿ, ಏತತ್ಫಲವಾಗಿ **ಕರ್ಣಾಟಕ ಸಾಹಿತ್ಯ ಪರಿಷತ್ತು** ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಮೈಸೂರಿನ ಆಳಿದ ಮಹಾಸ್ವಾಮಿಯವರಾದ ಶ್ರೀ ಕೃಷ್ಣರಾಜ ಒಡೆಯರವರೂ, ಯುವರಾಜರಾಗಿದ್ದ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ, ವಿದ್ಯಮಾನ ಮಹಾರಾಜರಾಗಿರುವ ಶ್ರೀಮಜ್ಜಯ ಚಾಮರಾಜ ಒಡೆಯರವರೂ ಈ ಸಂಘದ ಪುರೋಭಿವೃದ್ಧಿಯಲ್ಲಿ ನಿರಂತರವಾದ ಆಸಕ್ತಿಯನ್ನು ವಹಿಸಿ ಹಲವೆಲ್ಲ ರೀತಿಗಳಿಂದ ಸಹಾಯಮಾಡಿದ್ದಾರೆ, ಮಾಡುತ್ತಲಿದ್ದಾರೆ. ಸರ್ ವಿಶ್ವೇಶ್ವರಯ್ಯನವರು ಮೊದ ಲಾಗಿ ಇಂದಿನ ಪರ್ಯಂತ ಅಧಿಕಾರ ಮಾಡಿದ ದಿವಾನರುಗಳೂ ಇತರ ಉನ್ನತಾಧಿ ಕಾರಿಗಳೂ ಪರಿಷತ್ತಿನ ವಿಷಯದಲ್ಲಿ ಉದಾರವಾಗಿ ವರ್ತಿಸಿದ್ದಾರೆ. ಪ್ರಕೃತದಲ್ಲಿ ದಿವಾನರಾದ ಸರ್ ಮಿರ್ಜಾ ಇಸ್ಮಾಯಿಲರಂತೂ ಪರಿಷತ್ತಿನ ಸಂಬಂಧದಿಂದ ತೋರುತ್ತಲಿರುವ ಅಭಿಮಾನವು ಅಷ್ಟಿಷ್ಟೆಂದು ವರ್ಣಿಸಿ ಹೇಳಲಳವಲ್ಲ. ಹೀಗೆ, ಇವರುಗಳೂ ಇತರ ಖಾಸಗಿಯ ದೊಡ್ಡ ಮನುಷ್ಯರುಗಳೂ ಮಹಿಳಾಮಣಿಯರೂ ಮಾಡಿದ ಅಖಂಡವಾದ ಸೇವೆಯ ಫಲವಾಗಿ ಕಳೆದ ಇಪ್ಪತ್ತೈದು ವರ್ಷಗಳಲ್ಲಿ ನಮ್ಮ ಪರಿಷತ್ತು ಹೊಂದಿರುವ ನಿರಂತರವಾದ ಅಭಿವೃದ್ಧಿಯೂ ನೆರವೇರಿಸಿರುವ ಕಾರ್ಯಕಲಾಪಗಳೂ ಅತ್ಯಾಶ್ಚರ್ಯಕರವಾಗಿವೆ. ನನಗೆ ತಿಳಿದ ಮಟ್ಟಿಗೆ ಇಷ್ಟು ಸ್ವಲ್ಪ ಕಾಲದೊಳಗಾಗಿ ಇಷ್ಟೊಂದು ಯಶಸ್ಸು ಸಂಪಾದಿಸಲು ಭಾರತವರ್ಷ ದೊಳಗಣ ಬೇರೆ ಯಾವ ಭಾಷೆಯ ಸಾಹಿತ್ಯ ಸಂಘವೂ ಸಮರ್ಥವಾಗಲಿಲ್ಲವೆಂದು ನಾನು ಹೆಮ್ಮೆಯೊಡನೆ ಹೇಳಬಲ್ಲೆನು.

ಹುಟ್ಟಿದಂದಿನಿಂದ ಸುಮಾರು ಅಯಿದು ವರ್ಷಕಾಲ ಶ್ರೀಮಾನ್ ರಾಜ ಕಾರ್ಯಪ್ರಸಕ್ತ ಎಂ. ಶ್ಯಾಮರಾಯರವರೂ ಆ ಮುಂದೆ ೧೩ ವರ್ಷ ಪರ್ಯಂತ ಶ್ರೀಮಾನ್ ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾಯರೂ ಪರಿಷತ್ತಿನ ಉಪಾಧ್ಯಕ್ಷ ಪದವಿಯನ್ನು ವಹಿಸಿ ಸತತವಾಗಿ ಮನೋವಾಕ್ಕಾಯಗಳಿಂದ ಪರಿಷತ್ತಿನ ಸೇವೆ ನಡೆಸಿ, ಕನ್ನಡದ ಉನ್ನತಿಗೆ ಬಹು ವಿಧವಾದ ಪ್ರಯೋಜನ ವನ್ನುಂಟುಮಾಡಿಕೊಟ್ಟು ಕೃತಕೃತ್ಯರಾದರು. ತಥಾಪಿ, ಪರಿಷತ್ತೆಂಬುದು ಆಗ ಒಂದು "ಪಂಡಿತ ಸಂಸ್ಥೆ"ಯಾಗಿದ್ದಿತೇ ವಿನಾ, ಮಹಾಜನ ಸಮುದಾಯವು ಅದರ ವಿಷಯದಲ್ಲಿ ಅಷ್ಟಾಗಿ ಆಸಕ್ತಿಹೊಂದಿರುತ್ತಿದ್ದಂತೆ ತೋರಲಿಲ್ಲ. ತದನಂತರ

ಉಪಾಧ್ಯಕ್ಷರಾಗಿ ಬಂದ ಶ್ರೀಮಾನ್ ಡಿ. ವಿ. ಗುಂಡಪ್ಪನವರ ಕಾಲದಲ್ಲಿ (೧೯೩೪ ರಿಂದ ೧೯೩೮) ಈ ಪರಿಸ್ಥಿತಿಯು ತೊಲಗಿ, ಪರಿಷತ್ತಿಗೆ ನಿಜವಾದ ಸಾರ್ವಜನಿಕ ಸ್ವರೂಪವುಂಟಾಯಿತು. ಅನೇಕ ವಿಧವಾದ ನೂತನ ಕಾರ್ಯಕಲಾಪಗಳನ್ನು ಕೈಕೊಂಡುದರ ದೆಸೆಯಿಂದ ಅರ್ವಾಚೀನ ವಿದ್ಯಾವಂತರುಗಳಿಗೂ ಪರಿಷತ್ತಿನ ವಿಷಯದಲ್ಲಿ ಆತ್ಮೀಯತಾಭಾವವು ಬೆಳೆಯತೊಡಗಿತು. ಸದಸ್ಯರ ಸಂಖ್ಯೆಯೂ ಹೆಚ್ಚಾಯಿತು. ಒಂದೇ ಮಾತಿನಲ್ಲಿ ಹೇಳುವುದಾದರೆ, ಈ ಮಹನೀಯರ ಅಧಿಕಾ ರಾವಧಿಯಲ್ಲಿ ನಮ್ಮ ವಾಙ್ಮಯ ಪ್ರಪಂಚದಲ್ಲಿ ಒಂದು ಹೊಸ ಯುಗವೇ ಪ್ರಾರಂಭ ವಾಯಿತೆಂದು ಧೈರ್ಯವಾಗಿ ಹೇಳಬಹುದು. ಪರಿಷತ್ತಿನ ಚಟುವಟಿಕೆಗಳಲ್ಲಿ ಕರ್ಣಾಟಕ ಏಕೀಕರಣ ತತ್ತ್ವವೂ ದೃಷ್ಟಿಯೂ ಈ ಕಾಲದಲ್ಲಿಯೆ ಮೊತ್ತಮೊದಲು ಮಿನುಗತೊಡಗಿತೆಂಬ ನನ್ನ ಅಭಿಪ್ರಾಯವನ್ನು ಕೂಡ ಇಲ್ಲಿ ತಿಳಿಯಪಡಿಸದೆ ಇರಲಾರೆನು. ಈ ವಿಷಯಗಳೆಲ್ಲ ಪರಿಷತ್ತಿನ ಬೆಳ್ಳಿಯ ಹಬ್ಬದ ಕಾಲಕ್ಕೆ ಪ್ರಚುರ ಗೊಳಿಸಲಾದ "ಬೆಳ್ಳಿಯ ಹಬ್ಬದ ಸವಿನೆನಪು" ಎಂಬ ಪುಸ್ತಕದಲ್ಲಿ ವಿವರವಾಗಿ ವರ್ಣಿಸಲಾಗಿರುವುದರಿಂದ, ವಿಸ್ತಾರ ಭಯದಿಂದ ಇಲ್ಲಿ ಇಷ್ಟು ಮಾತ್ರ ಸಂಗ್ರಹ ವಾಗಿ ಹೇಳಿರುವೆನು.

೧೯೩೮ರಿಂದೀಚೆಗೆ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯ ನವರು ಪರಿಷತ್ತಿನ ಉಪಾಧ್ಯಕ್ಷರಾಗಿ ಆರಿಸಿ ಬಂದು ಅಮೋಘವಾದ ಸೇವೆ ಸಲ್ಲಿಸುತ್ತಲಿರುವರು. ಮತ್ತು ತಮ್ಮ ತನುಮನಧನಗಳನ್ನು ಪರಿಷತ್ತಿಗಾಗಿಯೇ ಧಾರೆಯೆರೆದುಬಿಟ್ಟಿದ್ದಾರೆ. ಇಂದು ಪರಿಷತ್ತಿನ ಚಟುವಟಿಕೆಗಳ ರೀತಿ ನೀತಿ ವಿಸ್ತಾರದ ಪ್ರಮಾಣಗಳಲ್ಲಿ ಅನೇಕ ವಿಧವಾದ ಅನುಕೂಲ ಸಂಸ್ಕರಣಗಳಾಗಿವೆ. ಕನ್ನಡಿಗರ ಸಾಹಿತ್ಯ ಸಂಸ್ಕೃತಿಗಳ ತೀವ್ರವಾದ, ದೃಢವಾದ ಉನ್ನತಿಗೆ ಕರ್ಣಾಟಕದ ರಾಜಕೀಯ ಏಕೀಕರಣವಾಗಬೇಕಾದುದೇ ಮುಖ್ಯವೆಂಬ ತತ್ತ್ವವನ್ನು ಅವರು ನಿರಂತರವೂ ನಿರ್ಭಯವಾಗಿ ಸಾರುತ್ತಲಿದ್ದಾರೆ. ಮತ್ತು ವಾಙ್ಮಯ ಮೂಲಕವಾಗಿ ಕನ್ನಡ ಸಾಹಿತ್ಯ ಪರಿಷತ್ತಿನ ಸಮಸ್ತ ಸಹಕಾರವನ್ನು ಏಕೀಕರಣ ಸಾಧನೆಗೆ ನೀಡುತ್ತಲಿದ್ದಾರೆ. ಪರಿಷತ್ತಿನ ರಚನೆಯನ್ನು **ಪ್ರಾಂತಿಕ ಸ್ವಾತಂತ್ರ್ಯ** ರೂಪವಾಗಿ ವಿಸ್ತೃತವಾಗುವಂತೆ ಮಾಡಿದ್ದಾರೆ. ಮತ್ತು ಕನ್ನಡದ ಬಾವುಟವು ಗೌರವದೊಡನೆ ಉನ್ನತೋನ್ನತವಾಗಿ ಹಾರಾಡಬೇಕೆಂಬ ಪ್ರಬಲವಾದ ಆಶೆ ಯನ್ನಿಟ್ಟುಕೊಂಡು, ತಮ್ಮ ಇಳಿವಯಸ್ಸನ್ನೂ ಆರೋಗ್ಯವನ್ನೂ ಕೂಡ ಲೆಕ್ಕಿಸದೆ, ಹಗಲೂ ರಾತ್ರಿಯೂ ತ್ರಿಕರಣಪೂರ್ವಕವಾಗಿ ದುಡಿಯುತ್ತಲಿದ್ದಾರೆ. ಇನ್ನೂ ಅನೇಕ ವರ್ಷಗಳ ಪರ್ಯಂತ ಪರಿಷತ್ತಿನ ಮತ್ತು ಕನ್ನಡ ಜನತೆಯ ಸೇವೆಯನ್ನು ಸಫಲವಾಗಿಮಾಡುವ ಭಾಗ್ಯವು ಪರಮಾತ್ಮನ ಕೃಪೆಯಿಂದ 'ಶ್ರೀ'ಯವರಿಗೆ ಲಭಿಸ ಲೆಂದು ಮನಃಪೂರ್ತಿಯಾಗಿ ಹಾರೈಸುತ್ತೇನೆ.

**ಸಿರಿಗನ್ನಡಂ ಗೆಲ್ಗೆ**

**ಬೆನಗಲ್ ರಾಮರಾವ್**

# ಕನ್ನಡಕ್ಕಿರುವ ಕಾಲ್ತೊಡಕುಗಳು

ಕನ್ನಡ ಚಳವಳಿಯು ೫೦ ವರ್ಷ ಅವ್ಯಾಹತವಾಗಿ ಸಾಗಿಪ್ಪರೂ ಕನ್ನಡದ ಬೆಳೆಯು ಬರಬೇಕಾದಷ್ಟು ಹುಲುಸಾಗಿ ಬರಲೊಲ್ಲದು. ಈ ಚಳವಳಿಗೆ ಕೈಯಿಕ್ಕಿದವರೆಲ್ಲರೂ ಒಂದಿಲ್ಲೊಂದು ಬಗೆಯಿಂದ ಅಸಂತುಷ್ಟರಿರುವರು. ಇದರ ಕಾರಣಗಳೇನಿರಬಹುದು? ಮಾಡುವ ಪ್ರಯತ್ನದ ತಳಹದಿಯೇ ಸರಿಯಾಗಿಲ್ಲವೇ? ಅಥವಾ ಈ ಪ್ರಯತ್ನವೇ ಅನಾವಶ್ಯಕವೇ? ಈ ಚಳವಳಿಯು ಯೋಗ್ಯವೂ ಅಗತ್ಯವೂ ಇದ್ದಲ್ಲಿ ಇವರ ಮಾರ್ಗದಲ್ಲಿರುವ ತೊಂದರೆಗಳಾವವು? ಅವುಗಳನ್ನು ಎದುರಿಸುವದೆಂತು? ಈ ಎಲ್ಲ ಪ್ರಶ್ನೆಗಳನ್ನು ಕನ್ನಡ ಜನಾಂಗವು ಇಂದು ವಿಚಾರಿಸುವ ಸಮಯವು ಬಂದೊದಗಿದೆ.

ಕನ್ನಡ ನುಡಿಯು ಯಾರ ಸ್ವತ್ತು? ಇದು ನನ್ನದು ಎಂದು ಹೆಮ್ಮೆಯಿಂದ ಹೇಳಿಕೊಳ್ಳುವ, ಅದಕ್ಕಾಗಿ ಹೋರಾಡುವ ಒಡೆಯರು ಕರ್ನಾಟಕದಲ್ಲಿ ಯಾರಾದರೂ ಇರುವರೇ? ಎಂದು ಕೇಳಿದರೆ ಇದು ವಿಚಿತ್ರಪ್ರಶ್ನೆ ಎನಿಸಬಹುದು. ಆದರೆ ಇದನ್ನು ವಿಮರ್ಶಿಸಿ ನೋಡಿದರೆ ಹಲವು ಸೋಜಿಗದ ಸಂಗತಿಗಳು ಕಂಡುಬರುವವು. ನಮ್ಮಲ್ಲಿ ಇನ್ನೂ ಜಾತಿ ಮತಗಳಿಗೆ ಹೆಚ್ಚಿನ ಪ್ರಾಶಸ್ತ್ಯವಿದೆಯೇ ವಿನಾ ನಾಡು ನುಡಿಗಳಿಗಿಲ್ಲ. ಕೆಲವರಿಗೆ ಕನ್ನಡವು ಅಪವಿತ್ರವಾದ ಅನಾರ್ಯರ ಭಾಷೆ ಎಂದು ಇನ್ನೂ ಭಾವನೆ. ಉಣ್ಣುವಾಗ, ದೇವರ ಪೂಜೆಯನ್ನು ಮಾಡುವಾಗ, ಮಡಿಯಿಂದ ಇರುವಾಗ ಕನ್ನಡ ಮಾತನಾಡಿದರೆ ಇವರಿಗೆ ಮೈಲಿಗೆ. ಕೆಲವು ಧರ್ಮಪೀಠಗಳಲ್ಲಿ ಕನ್ನಡಕ್ಕೆ ಯಾವ ಮನ್ನಣೆಯಿದೆ ಎಂಬುದು ಎಲ್ಲರಿಗೂ ಗೊತ್ತು. ಕನ್ನಡ, ಕನ್ನಡ, ಎಂದು ಏಕೆ ಬಡಿದುಕೊಳ್ಳುವಿರಿ! ಅದು ಏನು ನಿಮಗೆ ಮೋಕ್ಷವನ್ನು ಕೊಡುವುದೇ? ಧರ್ಮವನ್ನು ಬೋಧಿಸುವುದೇ? ಕನ್ನಡ ನುಡಿಯಿಲ್ಲದೆ ನಾವು ನಮ್ಮ ಸಂಸ್ಕೃತಿಯನ್ನೂ ಧರ್ಮವನ್ನೂ ಕಾಯ್ದುಕೊಂಡು ಸುಖವಾಗಿ ಬಾಳಬಹುದು. ನಾವೇಕೆ ಕನ್ನಡವನ್ನು ಇಷ್ಟು ಎತ್ತಿ ಹಿಡಿಯಬೇಕು? ಎಂದು ಕೆಲವರ ವಾದ. ಮತ್ತೆ ಕೆಲವರಲ್ಲಿ ಕನ್ನಡವು ತಮ್ಮ ಧಾರ್ಮಿಕ ಭಾಷೆಯೆಂಬ ಅಭಿಮಾನವಿದೆಯೇ ವಿನಾ ಅದು ತಮ್ಮ ನಾಡಿನ ಭಾಷೆ, ಅದು ಸರ್ವತೋಮುಖವಾಗಿ ಬೆಳೆಯಬೇಕು, ಪೂರ್ಣಕಳೆಯಿಂದ ಬೆಳಗಬೇಕು ಎಂಬ ಅಭಿಮಾನವೂ ವಿಶಾಲ ದೃಷ್ಟಿಯೂ ಇನ್ನೂ ಬೇರೂರಿಲ್ಲ. ಇನ್ನೂ ಸ್ವಲ್ಪ ಆಳವಾಗಿ ವಿಚಾರಿಸಿದರೆ, ಇದಕ್ಕಿಂತ ಸೋಜಿಗದ ಸಂಗತಿಗಳನ್ನು ಕಾಣುವೆವು. ಇಂದು ಶುದ್ಧ ಕನ್ನಡವಿದ್ದ ಮನೆತನಗಳು ತಮ್ಮ ಮತ-ಪರಿವರ್ತನೆಯನ್ನು ಮಾಡಿದೊಡನೆಯೇ ತಮ್ಮ ನುಡಿಯನ್ನೂ ಅದರ ಅಭಿಮಾನವನ್ನೂ ಕಳೆದುಕೊಳ್ಳುತ್ತಿರುವುದನ್ನು ನಾವು ನೋಡುತ್ತಲಿದ್ದೇವೆ. ಕ್ರೈಸ್ತಧರ್ಮವನ್ನು ಸ್ವೀಕರಿಸಿದೊಡನೆಯೇ ಮನೆಯಲ್ಲಿ ಕನ್ನಡಕ್ಕೆ ಅರ್ಧಚಂದ್ರ ಬಂದು ಅದರ ಸ್ಥಾನವನ್ನು ಇಂಗ್ಲೀಷು ಆಕ್ರಮಿಸುವದು. ಕನ್ನಡದ ಅಭಿಮಾನವು ಶೂನ್ಯವಾಗಿ ಅದಕ್ಕೆ ವಿರೋಧಮಾಡುವ ಪ್ರವೃತ್ತಿಯೂ ಕೂಡ ಹಲವೆಡೆಗಳಲ್ಲಿ ಕಂಡುಬಂದಿದೆ. ಇದರಂತೆಯೇ ಮುಸಲ್ಮಾನ ಧರ್ಮವನ್ನು ಸ್ವೀಕರಿಸಿದವರ ಸ್ಥಿತಿ.

ಹೀಗೆ ಕನ್ನಡದ ಬೆಳವಣಿಗೆಯ ಮಾರ್ಗದಲ್ಲಿ ಮತ-ಜಾತಿಗಳು ಕಾಲ್ತೊಡಕಾಗಿ ಕೂತಿವೆ.

ಕನ್ನಡ ನಾಡು ವಿವಿಧ ಜಾತಿ-ಮತಗಳ ಬೀಡಾದಂತೆ, ವಿವಿಧ ಜನಾಂಗಗಳ ನೆಲೆವೀಡಾಗಿದೆ. ಕನ್ನಡ ಜನಾಂಗದ ಔದಾರ್ಯದ ಮೂಲಕವೂ ಐತಿಹಾಸಿಕ ಘಟನೆಗಳ ಮೂಲಕವೂ ಅನೇಕ ಪರಭಾಷೆಯ ಜನಾಂಗಗಳು ಬಂದು ಇಲ್ಲಿ ಒಕ್ಕಲಾಗಿ ನಿಂತಿವೆ. ಈ ಜನಾಂಗಗಳು ಕನ್ನಡ ಜನಾಂಗದೊಡನೆ ತಾದಾತ್ಮ್ಯ ವಾಗದೆ, ಕನ್ನಡ ನುಡಿಯನ್ನು ತಮ್ಮದನ್ನಾಗಿ ಮಾಡಿಕೊಳ್ಳದೆ, ಅದರ ಬದಲಾಗಿ ಕನ್ನಡದ ವರ್ಚಸ್ಸನ್ನೇ ಕಡಿಮೆಮಾಡುವ ಪ್ರಯತ್ನಗಳಿಗೆ ಕೈಯಿಕ್ಕಿದವು. ಕನ್ನಡಿಗರ ಪರತಂತ್ರತೆಯ ಮೂಲಕವೂ ಯಾವ ಭಾಷೆಯಾದರೇನು ಎಂಬ ಉದಾಸೀನತೆ ಆಲಸ್ಯಗಳ ಮೂಲಕವೂ ಅವರ ಪ್ರಯತ್ನಗಳಿಗೆ ಯಶದೊರೆತು ಇದು ಕನ್ನಡ ನಾಡೇ ಎಂದು ಸಂಶಯಬರುವಷ್ಟು ಪರಕೀಯರು ಪ್ರಬಲರಾದರು; ತಮ್ಮ ವರ್ಚಸ್ಸನ್ನು ಕೂಡಿಸಿದರು; ಎಲ್ಲ ಕ್ಷೇತ್ರಗಳನ್ನೂ ವ್ಯಾಪಿಸಿದರು. ಇಂದಿಗೂ ಬಳ್ಳಾರಿ, ಕಾರವಾರ ಜಿಲ್ಲೆಗಳನ್ನು ನೋಡಿದರೆ, ಈ ಮಾತಿನ ಯಥಾರ್ಥತೆಯು ಕಂಡುಬರುವುದು. ಕನ್ನಡ ಜನಾಂಗವು ಜಾಗ್ರತವಾಗಿ ತನ್ನ ನಾಡು ನುಡಿಗಳ ಬಗ್ಗೆ ಯತ್ನಿಸಿದಂತೆ, ತಮ್ಮ ವರ್ಚಸ್ಸನ್ನು ಉಳಿಸಿಕೊಳ್ಳಲು ಇವರ ವಿರೋಧವು ಪ್ರಾರಂಭವಾಯಿತು. ಆ ವಿರೋಧವು ಇಂದು ವಿವಿಧ ಮುಖಗಳಿಂದ ಹೊರಬೀಳಹತ್ತಿದೆ. "ನಮ್ಮ ಮಾತೃಭಾಷೆಯ ರಕ್ಷಣೆಯು ಆಗಲೇಬೇಕು; ನಮ್ಮ ಭಾಷೆಯ ಪ್ರಸಾರಮಾಡುವ ಹಕ್ಕು ನನಗಿದೆ; ಒಂದು ಕಾಲಕ್ಕೆ ನಾವು ಇಲ್ಲಿ ರಕ್ತವನ್ನು ಸುರಿಸಿದ್ದೇವೆ: ನಾವು ನಮ್ಮ ಹಕ್ಕುಬಾಧ್ಯತೆಗಳಿಗಾಗಿ ಹೋರಾಡ ತಕ್ಕವರೇ" ಎಂಬೀ ಅರಾಷ್ಟ್ರೀಯವಾದ ಅವಾಸ್ತವವಾದ ಬಂಡನ್ನು ಎಬ್ಬಿಸಿ ಕನ್ನಡಕ್ಕೆ ವಿರೋಧವನ್ನು ಒಡ್ಡುತ್ತಲಿದ್ದಾರೆ. ಇತ್ತೀಚಿನ ನೆರೆಹೊರೆಯ ಪ್ರಾಂತಗಳ ಆಕ್ರಮಣಶೀಲಬುದ್ಧಿಯಿಂದ ಈ ಚಳವಳಿಗಳಿಗೆ ಉತ್ತೇಜನವು ದೊರೆಯುತ್ತಲಿದೆ. ಪರಪ್ರಾಂತೀಯರ ಆಕ್ರಮಣಕ್ಕೆ, ಇಲ್ಲಿ ವಾಸಿಸುವ ಪರಪ್ರಾಂತೀಯರಲ್ಲಿ ಹಲವರು 'ಪಂಚಮದಳ'ವಾಗಿ (ಗೂಢ ಸಂಚುಕಾರರಾಗಿ) ಕಾರ್ಯಮಾಡುತ್ತಲಿದ್ದಾರೆ.

ಕನ್ನಡ ನಾಡು ಹರಿದು ಹಂಚಿಹೋಗಿ ವಿವಿಧ ರಾಜಕೀಯ ಆಡಳಿತ ಗಳಿಗೆ ಒಳಗಾಗಿರುವದರಿಂದ ಕನ್ನಡ ನುಡಿಯು ಸಾಕಷ್ಟು ಮನ್ನಣೆಯಿಲ್ಲದೆ ಅಲೆಯುತ್ತಲಿದೆ. ಬ್ರಿಟಿಶ್ ಕರ್ನಾಟಕದ ರಾಜಧಾನಿಗಳು ಮಹಾರಾಷ್ಟ್ರ ಹಾಗೂ ತೆಲುಗು ತಮಿಳು ನಾಡುಗಳಲ್ಲಿ. ರಾಜಧಾನಿಗಳಿಂದ ಕರ್ನಾಟಕವು ಎಲ್ಲಿಡೆಯಲ್ಲಿಯೂ ಕಡೆಯ ಅಂಚಿನಲ್ಲಿ. ರಾಜಧಾನಿಯ ಕೇಂದ್ರದಲ್ಲಿ ಪ್ರಬಲರಿದ್ದವರಿಗೇ ಸರಕಾರದ ಎಲ್ಲ ಅನುಕೂಲತೆಗಳೂ ಮೇಲಧಿಕಾರಗಳೂ ದೊರೆಯುವುದು ಸ್ವಾಭಾವಿಕ. ಹೀಗಾಗಿ ಕರ್ನಾಟಕಕ್ಕೆ ಬರುವ ಮೇಲಧಿಕಾರಿಗಳೆಲ್ಲರೂ ಬಹುತರವಾಗಿ ಪರಭಾಷೆ ಯವರೇ! ಮುಂಬಯಿ ಕರ್ನಾಟಕದಲ್ಲಿ ಮರಾಠಿಗರೂ, ಮದ್ರಾಸ ಕರ್ನಾಟಕದಲ್ಲಿ ತಮಿಳರೂ ತೆಲುಗರೂ ಮುಲಿಯಾಳಿಗಳೂ ಅಧಿಕಾರಿಗಳಾಗಿ ಬರುತ್ತಿರುವುದು ನಿತ್ಯದ ಅನುಭವವು. ಅವರು ಎಷ್ಟೇ ಒಳ್ಳೆಯವರೂ ಉದಾತ್ತ ವಿಚಾರಿಗಳೂ ಇದ್ದರೂ ಕನ್ನಡಿಗರಾದ ಅಧಿಕಾರಿಗಳಿಂದ ಕನ್ನಡಕ್ಕೆ ದೊರೆಯುವ ಪ್ರೋತ್ಸಾಹ,

ಮನ್ನಣೆಗಳು ಇವರಿಂದ ದೊರೆಯಲಾರವೆಂಬುದು ಯಾರೂ ಒಪ್ಪತಕ್ಕ ಮಾತು. ತಮ್ಮ ದೇಶಭಾಷೆಯಂತೆ ಕನ್ನಡವು ಎಂದೂ ಅವರಿಗೆ ಆತ್ಮೀಯವೆನಿಸಲಾರದು. ಆದುದರಿಂದಲೆ, ಕರ್ನಾಟಕದಲ್ಲಿ ಬ್ರಿಟಿಶರ ರಾಜ್ಯವು ಪ್ರಾರಂಭವಾಗಿ ೧೫೦ ವರ್ಷಗಳಾದರೂ ಸರಕಾರದಿಂದ ಕನ್ನಡಕ್ಕೆ ದೊರೆಯಬೇಕಾದಷ್ಟು ಮನ್ನಣೆಯು ಇನ್ನೂ ದೊರೆತಿಲ್ಲ. (ಅದೇ ಆಂಧ್ರ, ಮಹಾರಾಷ್ಟ್ರಗಳನ್ನು ನೋಡಿರಿ.) ಇಷ್ಟೇ ಅಲ್ಲ. ಹಲವು ಅಧಿಕಾರಿಗಳು ಕನ್ನಡವು ತಲೆಯೆತ್ತದಂತೆ ಪ್ರಯತ್ನಿಸಿದ ಉದಾಹರಣೆಗಳೂ ಉಂಟು. ಇತ್ತೀಚಿಗಂತೂ ಬೃಹನ್‌ಮಹಾರಾಷ್ಟ್ರ, ರಾಯಲಸೀಮೆ, ಆಂಧ್ರ, ಮಲೆಯಾಳ ಪ್ರಾಂತಗಳ ನಿರ್ಮಾಣದ ಪ್ರೇರಣೆಯಿಂದ ಪ್ರೇರಿತರಾಗಿ ಬಂದ ಅಧಿಕಾರಿಗಳಿದ್ದರಂತೂ ದೇವರೇ ಗತಿ. ಇವರಿಂದ ಕನ್ನಡದ ಬೆಳವಣಿಗೆಗೆ ಏನೂ ನೆರವು ದೊರೆಯದೆ ಅದರ ವಿರುದ್ಧವಾಗಿ ಕರ್ನಾಟಕದಲ್ಲಿ ವಾಸಿಸುವ ನೆರೆನಾಡಿನ 'ಪಂಚಮದಳ'ದವರಿಗೆ ಅಪ್ರತ್ಯಕ್ಷವಾಗಿ ಉತ್ತೇಜನ ದೊರೆಯುತ್ತಲಿದೆ. ಇದು ಬ್ರಿಟಿಶ್ ಕರ್ನಾಟಕದ ಸ್ಥಿತಿ. ಉತ್ತರ ಕರ್ನಾಟಕದ ಸಂಸ್ಥಾನದ ಕನ್ನಡಕ್ಕಂತೂ ದೇವರೇ ಗತಿ. ಕನ್ನಡ ನುಡಿಯು ತನ್ನ ದೇಶದಲ್ಲಿಯೇ ತಾನು ಸೆರೆಯಾಳು. ನೂರಕ್ಕೆ ನೂರರಷ್ಟು ಪ್ರಜೆಗಳು ಕನ್ನಡವಿದ್ದರೂ, ಅಧಿಕಾರಿವರ್ಗವು ಮರಾಠಿ, ದರ್ಬಾರದ ಭಾಷೆ ಮರಾಠಿ, ಶಿಕ್ಷಣ ಮರಾಠಿ. ಹೀಗೆ ಪರಭಾಷೆಯ ಅಧಿಕಾರಿವರ್ಗವು ಕನ್ನಡದ ಬೆಳವಣಿಗೆಯ ಮಾರ್ಗದಲ್ಲಿ ದೊಡ್ಡದೊಂದು ತೊಡಕು.

ಪ್ರಜಾಪ್ರಭುತ್ವದ ಈ ಯುಗದಲ್ಲಿ ಇಷ್ಟೊಂದು ಸರಕಾರದ ಅವಲಂಬನವೇಕೆ? ಸಾರ್ವಜನಿಕ ಸಂಸ್ಥೆಗಳ ಮುಖಾಂತರವಾಗಿ ಆಂದೋಲನವನ್ನೇಕೆ ನಡೆಯಿಸಬಾರದು? ಈ ಪ್ರಶ್ನೆಯು ಹೇಳಲು ಹಗುರ ಇದ್ದಷ್ಟು ಕಾರ್ಯರೂಪದಲ್ಲಿ ತರಲು ಕಠಿಣ. ನಿಜವಾಗಿಯೂ ಈ ಪ್ರಶ್ನೆಯು ವಿಚಾರಾರ್ಹವಿದೆ. ಇಂದಿನ ಕನ್ನಡ ನಾಡೊಳಗಿನ ಸಾರ್ವಜನಿಕ ಸಂಸ್ಥೆಗಳು ಕರ್ನಾಟಕಸ್ಥರಿಂದಲೇ ನಡೆಯಿಸಲ್ಪಡುತ್ತವೆಂಬುದು ನಿಜ. ಆದರೆ ಬಹು ಸಂಖ್ಯಾಕ ಸಾರ್ವಜನಿಕ ಸಂಸ್ಥೆಗಳ ಆಯಕಟ್ಟಿನ ಸ್ಥಳಗಳೆಲ್ಲವೂ ಪರಭಾಷೆಯವರಿಂದಲೂ, ಪರಭಾಷೆಯ ಮೋಹವುಳ್ಳ ಜನರಿಂದಲೂ ಆಕ್ರಮಿಸಲ್ಪಟ್ಟುದು ಕಂಡುಬರುತ್ತದೆ. ಹಲವು ಸಂಸ್ಥೆಗಳ ಮುಖಂಡರಿಗೆ ಕರ್ನಾಟಕತ್ವದ ವಿಶಾಲದೃಷ್ಟಿಯೇ ಇಲ್ಲ. ಪ್ರಸಂಗ ವಿಶೇಷದಲ್ಲಿ ನಮ್ಮ ಸಂಸ್ಥೆಗಳನ್ನೇ ನಮ್ಮ ವಿರುದ್ಧವಾಗಿ ನಿಲ್ಲಿಸುವ ಆಟವಾಡುವದನ್ನೂ ನಾವು ನೋಡುತ್ತಲಿದ್ದೇವೆ. ಕನ್ನಡಿಗರು ದಾಕ್ಷಿಣ್ಯದಿಂದಲೋ, ಇಲ್ಲವೇ ಸಂಸ್ಥೆಗೆ ವಿರೋಧವುಂಟಾಗುವದೆಂಬ ಭಯದಿಂದಲೋ, ಕನ್ನಡದ ಯೋಗ್ಯವಾದ ಮುನ್ನಡೆಗೆ ಹಿಂದು ಮುಂದೆ ನೋಡುವರು. ಹೀಗೆ ಹಲವು ಸಂಸ್ಥೆಗಳು ಪರಭಾಷೆಯವರ ಪ್ರಭಾವಕ್ಕೆ ತುತ್ತಾಗಿವೆ. ಪರಭಾಷೆಯವರ ಪ್ರಭಾವವು ನಮ್ಮ ಸಂಸ್ಥೆಗಳಲ್ಲಿ ಕಡಿಮೆಯಾಗುವವರೆಗೂ ಕನ್ನಡವು ಮುಂದೆ ನಡೆಯಲಾರದು.

ಇದು ಜಾಗ್ರತ ಕರ್ನಾಟಕದ ಸ್ಥಿತಿಯಾಯಿತು. ಗಡಿನಾಡುಗಳಲ್ಲಂತೂ ವಿಚಿತ್ರ ಪರಿಸ್ಥಿತಿಯಿದೆ. ಪರಭಾಷೆಯ ಪರಕೀಯ ಅಧಿಕಾರಿಗಳ ಪಾಶದಲ್ಲಿ ಕನ್ನಡಿಗರು ಪೂರ್ಣವಾಗಿ ಸಿಕ್ಕಿಹೋಗಿದ್ದಾರೆ. ಇವರಿಗೆ ಕನ್ನಡವು ನಮ್ಮ ಭಾಷೆ, ನಾವು ಕಲಿಯಬೇಕು ಎಂಬ ಅಭಿಮಾನವುಂಟಾದರೂ ಕಲಿಯಲು ಕನ್ನಡ

ಶಾಲೆಗಳಿಲ್ಲ. ಇಷ್ಟೇ ಅಲ್ಲ. ಕೇವಲ ಹೊಟ್ಟೆಗಾಗಿ ಅನ್ಯಭಾಷೆಯನ್ನು ಕಲಿಯುವ ಪ್ರಸಂಗವು, ಆಪತ್ತು, ಅವರಿಗೆ ಒದಗಿದೆ. ಬಳ್ಳಾರಿ ಸೊಲ್ಲಾಪುರ ಮೊದಲಾದ ವುಗಳು ಆಂಧ್ರ–ಮಹಾರಾಷ್ಟ್ರ ಪ್ರಾಂತಗಳಿಗೆ ಜೋಡಿಸಲ್ಪಟ್ಟದ್ದರಿಂದಲೂ, ಆಯಾ ಪ್ರಾಂತಗಳಲ್ಲಿಯೇ ಸರಕಾರೀ ಉದ್ಯೋಗಗಳಿಗೆ ಅವರು ಹೋಗಬೇಕಾದ ಪ್ರಸಂಗ ವಿರುವದರಿಂದಲೂ ಅನಿವಾರ್ಯವಾಗಿ ತೆಲುಗು, ಮರಾಠಿಗಳನ್ನು ಕಲಿಯುವ ಪ್ರಸಂಗ ಬಂದು ಕನ್ನಡತನವನ್ನು ಕಳೆದುಕೊಳ್ಳಹತ್ತಿದ್ದಾರೆ. ಹೀಗೆ ಆರ್ಥಿಕ ಪರಿಸ್ಥಿತಿಯು ಸುಮಾರು ೧೬ ಲಕ್ಷ ಕನ್ನಡಿಗರನ್ನು ಕನ್ನಡಕ್ಕೆ ಎರವುಮಾಡುತ್ತಲಿದೆ. ಕನ್ನಡವು ಒಂದು ಪ್ರಾಂತವಾಗುವ ವರೆಗೆ ಈ ಸಮಸ್ಯೆಗಳು ಪೂರ್ಣವಾಗಿ ಬಗೆಹರಿ ಯುವದಿಲ್ಲೆಂಬುದು ನಿಜ. ಆದರೆ ಬ್ರಿಟಿಶ್ ಕರ್ನಾಟಕದಲ್ಲಿರುವ ಕನ್ನಡಿಗರಿಗೆ, ಅವರು ಮದ್ರಾಸ ಪ್ರಾಂತದಲ್ಲಿಯೇ ಇರಲಿ, ಮುಂಬಯಿ ಪ್ರಾಂತದಲ್ಲಿಯೇ ಇರಲಿ ಕರ್ನಾಟಕದಲ್ಲಿ ಉದ್ಯೋಗಗಳನ್ನು ಕಲ್ಪಿಸಿಕೊಡುವುದು ಸರಕಾರದ ಕರ್ತವ್ಯವು. ಈ ಬಗೆಯ ಆಶ್ವಾಸನವು ಸರಕಾರದಿಂದ ದೊರೆತರೆ, ಅಳಿಯುತ್ತಿರುವ ಕನ್ನಡವು ತನ್ನಷ್ಟಕ್ಕೆ ತಾನೆ ಬೆಳೆದು ಬಾಳುವದೆಂಬುದನ್ನು ಹೇಳಲಿಕ್ಕೇ ಬೇಡ.

ನಾಡಿನ ಮುನ್ನಡೆಯು ಮುಂದಾಳುಗಳನ್ನು ಬಹುಮಟ್ಟಿಗೆ ಅವಲಂಬಿಸಿದೆ. ಮಹಾತ್ಮಾಗಾಂಧಿ, ಲೋಕಮಾನ್ಯ ತಿಲಕರಂಥ ರಾಷ್ಟ್ರೀಯತ್ವದ ತಿರುಳನ್ನು ತಿಳಿದು ತಮ್ಮ ನಾಡು ನುಡಿಗಳ ಯೋಗ್ಯ ಅಭಿಮಾನವನ್ನು ತಳೆದು ಕಾರ್ಯಪ್ರವೃತ್ತರಾದ ಮುಂದಾಳುಗಳು ನಮ್ಮಲ್ಲಿ ಇನ್ನೂ ಮುಂದೆ ಬಂದಿಲ್ಲ. ಇಂಥವರಿಂದಲೇ ನಾಡಿನ ಪ್ರಗತಿಯು ಸರ್ವತೋಮುಖವಾಗಿ ಆಗುವುದು. ನಮ್ಮ ಈಗಿನ ಮುಂದಾಳು ಗಳಲ್ಲಿ ಕೆಲವರಿಗೆ ಕರ್ನಾಟಕತ್ವದ ದೃಷ್ಟಿಯೇ ಇಲ್ಲ. ಕೆಲವರಿಗೆ ರಾಷ್ಟ್ರೀಯತ್ವದ ಕಲ್ಪನೆಯೇ ಸರಿಯಾಗಿ ಇಲ್ಲದ್ದರಿಂದ ಕನ್ನಡಕ್ಕೆ ಇಂಥವರಿಂದ ತಡೆಯಾಗ ತೊಡಗಿದೆ. ಇನ್ನೂ ಕೆಲವರಿಗೆ ಕರ್ನಾಟಕತ್ವದ ದೃಷ್ಟಿಯಿದ್ದರೂ ಮೇಲಿನವರು ಎಲ್ಲಿ ತಮಗೆ ಸಂಕುಚಿತ ದೃಷ್ಟಿಯವರೆನ್ನುವರೋ ಎಂಬ ಭೀತಿ. ಕೆಲವರು ಯೋಗ್ಯವಾದ ತಿಳಿವಳಿಕೆಯುಳ್ಳವರು ಇದ್ದರೂ ಅಖಂಡ ಕರ್ನಾಟಕವನ್ನು ಆಳುವ ಸಾಮರ್ಥ್ಯವು ಇನ್ನೂ ಅವರಿಗಿಲ್ಲ. ಕನ್ನಡದ ಕೆಚ್ಚಿನಿಂದ ರಾಷ್ಟ್ರೀಯತ್ವದ ವಿಶಾಲ ದೃಷ್ಟಿಯಿಂದ, ಆತ್ಮವಿಶ್ವಾಸದಿಂದ, ಪವಿತ್ರವಾದ ಜೀವನದಿಂದ, ದೈವೀಶಕ್ತಿಯಿಂದ ಪ್ರೇರಿತನಾದ ಕನ್ನಡ ವೀರನ ಬರವನ್ನು ಕನ್ನಡವು ನಿರೀಕ್ಷಿಸುತ್ತಲಿದೆ.

ಇಷ್ಟೆಲ್ಲ ಇದ್ದರೂ ನಾವು ನಿರಾಶರಾಗುವ ಕಾರಣವಿಲ್ಲ. ಕರ್ನಾಟಕದ ಜನಸಾಮಾನ್ಯವೆಲ್ಲವೂ ಜಾಗ್ರತವಾಗಿದೆ. ಕನ್ನಡ ನಾಡಿನ ಮೂಲೆಮೂಲೆಗಳಲ್ಲಿ ಕೂಡ ಕನ್ನಡ ಶಕ್ತಿಯು ಮಿಂಚಿನಂತೆ ಹೊಳೆಯಹತ್ತಿದೆ. 'ಕನ್ನಡಿಗರಿಗಿಂದೊಂದೇ ಸ್ಮರಣ। ಕನ್ನಡ ನಾಡಿನ ಏಕೀಕರಣ' ಎಂದು ಜನಜೀವನವು ಹುರಿಗೊಳ್ಳುತ್ತಲಿದೆ. ಕರ್ನಾಟಕದ ಕವಿಗಳೆಲ್ಲರೂ ಕನ್ನಡದ ವೀರಗೀತೆಗಳನ್ನು ಹಾಡಿ ಜನಾಂಗವನ್ನು ಹುರಿದುಂಬಿಸಹತ್ತಿದ್ದಾರೆ. ಅಲ್ಲಲ್ಲಿ ಕನ್ನಡ ತರುಣ ಉತ್ಸಾಹಿಗಳು ಧೈರ್ಯದಿಂದ ಮುಂದೆ ಬಂದು ಕರ್ನಾಟಕ ಸಂಘಗಳನ್ನು ಕಟ್ಟಹತ್ತಿದ್ದಾರೆ. ಎಲ್ಲ ಸಿಟ್ಟಿನಲ್ಲಿಯೂ ಉದಯವಾಗುತ್ತಿರುವ ಈ ದೈವೀಶಕ್ತಿಯು ನಮ್ಮ ನಿರಾಶೆಗಳನ್ನೆಲ್ಲ ಹಾರಿಸಿ ಬಿಡುತ್ತಲಿದೆ. ಈ ಶಕ್ತಿಯನ್ನು ತಡೆಗಟ್ಟುವವರಾರು? ನಾಡಿನಲ್ಲಿ ಉಂಟಾದ ಈ

ದಿವ್ಯಶಕ್ತಿಯನ್ನು ಸಂಘಟಿಸಿ, ಯೋಗ್ಯರೀತಿಯಿಂದ ಯೋಜಿಸುವ ಯೋಗೇಶ್ವರನ ಅವತಾರದ ಕಾಲವು ಸಮಾಪಿಸಹತ್ತಿದೆ. ಆದುದರಿಂದಲೇ ಕನ್ನಡ ನಾಡಿನಲ್ಲಿ ಇಷ್ಟೊಂದು ತಳಮಳವುಂಟಾಗಿದೆ.

ಯೋಗೇಶ್ವರನ ಅವತಾರಕ್ಕೆ ನಮ್ಮ ಭೂಮಿಯು ಯೋಗ್ಯವಾಗಬೇಕಾದರೆ, ಕರ್ನಾಟಕ ಸಂಘಗಳು ಕನ್ನಡಿಗರಲ್ಲಿ ಸಂಘಟನೆಯನ್ನುಂಟುಮಾಡಬೇಕು, ನಾಡು ನುಡಿಗಳ ಬಗ್ಗೆ ಪ್ರೀತಿವಿಶ್ವಾಸಗಳುಂಟಾಗುವಂತೆ ಪ್ರಚಾರಕಾರ್ಯವನ್ನು ಕೈಕೊಳ್ಳಬೇಕು. ಕನ್ನಡಿಗರಲ್ಲಿ ಕರ್ನಾಟಕತ್ವದ ಜ್ಞಾನವುಂಟಾಗುವಂತೆ, ಅಭ್ಯಾಸಮಂಡಲಗಳನ್ನೂ ವಾಚನಾಲಯಗಳನ್ನೂ ಸ್ಥಾಪಿಸಬೇಕು. ಕನ್ನಡದ ಅಭ್ಯಾಸವನ್ನು ಆಳವಾಗಿ ಮಾಡುವ, ಕನ್ನಡಕ್ಕಾಗಿ ಸ್ವಾರ್ಥತ್ಯಾಗಪೂರ್ವಕವಾಗಿ ಹೋರಾಡುವ, ಪ್ರವೃತ್ತಿಯನ್ನುಂಟುಮಾಡಬೇಕು. ಕರ್ನಾಟಕತ್ವದ ವಿಶಾಲದೃಷ್ಟಿಯುಳ್ಳ ಕನ್ನಡಕ್ಕಾಗಿ ಹೋರಾಡುವ ಗಂಡುಗಲಿಗಳೇ ಎಲ್ಲ ಕ್ಷೇತ್ರಗಳಲ್ಲಿಯೂ ತಲೆಯೆತ್ತಿ ಬಾಳುವಂತೆ ಪ್ರಯತ್ನಿಸಬೇಕು. ಎಲ್ಲಿ ನೋಡಿದರಲ್ಲಿ ಕನ್ನಡಮಯವಾಗಬೇಕು ನಮ್ಮ ನಾಡು. ನಮ್ಮ ಬೆಳವಣಿಗೆಯೆಂದರೆ ನಮ್ಮ ನಾಡಿನ ಬೆಳವಣಿಗೆ. ಇದರಲ್ಲಿ ಯಾವ ಸಂಸ್ಕೃತಿಯ ಮೇಲೆಯೂ ಯಾವ ನುಡಿಯ ಮೇಲೆಯೂ ಆಕ್ರಮಣವಿಲ್ಲೆಂದೂ, ಆಯಾ ನಾಡುಗಳಲ್ಲಿ ಆಯಾ ನಾಡುನುಡಿಗಳೊಡನೆ ತಾದಾತ್ಮ್ಯರಾಗುವದೇ ನಿಜವಾದ ರಾಷ್ಟ್ರೀಯತೆಯೆಂದೂ ನಮ್ಮ ನೆರೆನಾಡಿನ ಬಾಂಧವರಿಗೆ ಮನಗಾಣಿಸಿಕೊಟ್ಟು ನಮ್ಮ ಪ್ರಗತಿಪಥದಲ್ಲಿ ಅವರು ನೆರವಾಗುವಂತೆ ಮಾಡಿಕೊಳ್ಳಬೇಕು.

ಹೀಗೆ ಕರ್ನಾಟಕ ಸಂಘಗಳು ವಿಶಾಲದೃಷ್ಟಿಯನ್ನಿಟ್ಟುಕೊಂಡು ಕನ್ನಡ ನಾಡನ್ನು ಕಟ್ಟುವ ಉದ್ಯಮಕ್ಕೆ ಮೀಸಲಾದರೆ, ಕನ್ನಡ ನಾಡು ಒಂದಾಗಿ ಕನ್ನಡ ನುಡಿದೇವಿಗೆ ರಾಜಪಟ್ಟವನ್ನು ಕಟ್ಟುವ ಸುದಿನಗಳು ಬೇಗನೆ ಬರಬಹುದು.

**ಬುರ್ಲಿ ಬಿಂದುಮಾಧವ**



# ಕನ್ನಡ ನುಡಿ ಮತ್ತು ಕರ್ನಾಟಕದ ಮುಹಮ್ಮದೀಯರು

ಕ್ರಾಂತಿ — ಸಾಹಿತ್ಯ, ವಿಜ್ಞಾನ, ಧರ್ಮ, ರಾಜಕೀಯ, ಇಡಿಯ ಜನಜೀವನ, — ಎಲ್ಲೆಲ್ಲೂ, ಕ್ರಾಂತಿ. ಕ್ರಾಂತಿ ಮುಟ್ಟದ ಎಲ್ಲೆ ಇಲ್ಲ, ನೆಲೆಯಿಲ್ಲ, ಮಟ್ಟವಿಲ್ಲ. ಇದರ ಬಿರುಗಾಳಿ ತಾಗದ ಜನಜೀವನವಿಲ್ಲ. ಇದು ಮಾನವ ಜೀವನವನ್ನೇ ಕುಲುಕಿ ಕಲಕಿ, ಭ್ರಾಂತಿಯ ಸಾಗರದಲ್ಲಿ ಮುಳುಗಿಸಿದೆ. ಪ್ರಗತಿ ದಾಯಕ ಹೊಸ ದೃಷ್ಟಿ, ಹೊಸ ಚೈತನ್ಯದ ಕಡೆತದಿಂದ ಮೂಡುವ ಶಾಂತಿಯ ಆಶೆ ನಮ್ಮೆಲ್ಲರಲ್ಲೂ ಮೂಡಿದೆ. ಯಾರೂ ಮೂಕರಂತೆ ಕರ್ತವ್ಯಹೀನರಾಗಿ ಕೂಡುವ ಸಮಯವಲ್ಲ, ಮಂದರಗಿರಿಯನ್ನು ಹಿಡಿದು ನಾವೂ ಕಡೆಯಬೇಕು. ದೇವತೆಗಳಂತೆ (ದಾನವರಂತಲ್ಲ) ನಾವೂ ಕ್ರಾಂತಿಯ ಆದಿಶೇಷನನ್ನು ಹಿಡಿದು ಶ್ರಮಿಸಿ ದುಡಿಯಬೇಕು. ತನ್ಮೂಲಕ ಹೊರಡುವ ಶಾಂತಿಯ ಬೆಣ್ಣೆಗೆ ಭಾಗಿಗಳಾಗ ಬೇಕು. ನಮ್ಮದು ಅನೇಕ ಜನಾಂಗಗಳ ಒಂದು ಜನಾಂಗ; ಅನೇಕ ಪ್ರಾಂತಗಳ ಒಂದು ದೇಶ. ನಮ್ಮ ಸಂಸ್ಥಾನದ ಅಭಿವೃದ್ಧಿಗೆ ದುಡಿದರೆ ಇಡಿಯ ದೇಶಕ್ಕಾಗಿ ದುಡಿದಂತೆಯೇ ಸರಿ. ಬೇರೆ ಬೇರೆ ಸಮಸ್ಯೆಗಳನ್ನು ಬೇರೆ ಬೇರೆ ವಿಧವಾಗಿ ಆಯಾ ದೇಶ ಭಾಗಗಳಲ್ಲಿ ಪರಿಹರಿಸಬೇಕು. ಆಗಲೇ ಇಡಿಯ ದೇಶದ ಕಲ್ಯಾಣವು ಸುಲಭವಾಗಿ ಫಲಿಸುವುದು. ನಮ್ಮ ನಾಡಿನ ಸಮಸ್ಯೆಗಳನ್ನು ಹೊರಗಿನವರ ಗೂಟಕ್ಕೆ ತಗುಲಹಾಕುವಷ್ಟು ಗುಲಾಮರು ನಾವಾಗಬಾರದು.

ನಮ್ಮ ಅಚ್ಚುಮೆಚ್ಚಿನ ಮಾದರಿಯ ಮೈಸೂರಿನಲ್ಲಿ ಮೈಸೂರು ಮಕ್ಕಳ, ಒಟ್ಟು ಕನ್ನಡ ಮಕ್ಕಳ, ಕಲ್ಯಾಣಕ್ಕಾಗಿ ಸರ್ವಮತ ಸಮನ್ವಯ ದೃಷ್ಟಿಯಿಂದ ದುಡಿಯುವ ಸಂಸ್ಥೆ ಎಂದರೆ ಕನ್ನಡ ಸಾಹಿತ್ಯ ಪರಿಷತ್ತು. ಕನ್ನಡ ಸಾಹಿತ್ಯಕ್ಕೂ, ಕನ್ನಡ ಪ್ರಜೆಗಳಿಗೂ ಸೇವೆಸಲ್ಲಿಸಲು ಬದ್ಧಕಂಕಣವಾಗಿ ನಿಂತಿದೆ ಇದು. ಈ ಸಂಸ್ಥೆಯ ಪಿತಾಮಹರೆಂದರೆ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು. ಅವರು ಕನ್ನಡ ನುಡಿಯ ಸೇವೆಯಿಂದ ಮಾತ್ರ ತೃಪ್ತರಾಗದೆ, ಭಾಷಾ ಸೇವೆಯ ಮೂಲಕ ದೇಶಸೇವೆ ರಾಜಸೇವೆ ಮತ್ತು ಈಶಸೇವೆಯನ್ನು ಸಲ್ಲಿಸಲು ದುಡಿಯು ತ್ತಿರುವರು. ಕೆಲವು ದಿನಗಳ ಹಿಂದೆ ಅವರು ಕುರಾನಿನ ಕೆಲವು ಭಾಗಗಳನ್ನು, ಹಜರತ್ ಮುಹಮ್ಮದ್ ಅವರ (ಅವರ ಆತ್ಮಕ್ಕೆ ಶಾಂತಿಯಾಗಲಿ) ಪವಿತ್ರಜೀವನ ಚರಿತ್ರೆಯಲ್ಲಿ ಕೆಲವು ಮುಖ್ಯಭಾಗಗಳನ್ನು ಸರಳವಾದ ಶೈಲಿಯಲ್ಲಿ ಕನ್ನಡಿಸಿ ಓದಿಸಿದರು. ಆ ಪುಣ್ಯದಿನದ ದೃಶ್ಯವನ್ನು ಈಗಲೂ ನೆನೆನೆನೆದು ಆನಂದಿಸುತ್ತೇನೆ. ಅಲ್ಲಿ ನೆರೆದಿದ್ದ ಸಾಹಿತಿಗಳೂ ಮತ್ತು ವಿದ್ವನ್ಮಣಿಗಳೂ ಆ ಪವಿತ್ರಗ್ರಂಥದ ಕನ್ನಡ ಅನುವಾದವನ್ನು ಕೇಳಿ ತಲೆದೂಗಿದರು. ಆ ದಿವಸ ಸಭಿಕರಮೇಲೆ ಆದ ಪರಿಣಾಮವೂ ಅನಿರ್ವಚನೀಯವಾದದ್ದು. "ತಮ್ಮ ನೆರೆಯಲ್ಲಿ ಜೀವಿಸುವ ಮುಸಲ್ಮಾನ ಸಹೋದರರ ಧರ್ಮದ ರಹಸ್ಯವನ್ನು ನಮ್ಮ ನುಡಿಯಲ್ಲಿ ಹಾಡಿ— ಕುಣಿಸುವ ಆ ಸುದಿನದ ಹೊಂಗನಸನ್ನು ನೋಡಲು ಬಯಸುತ್ತಿದೆ ನಮ್ಮ ಪರಿಷತ್ತು" ಎಂದು ಘೋಷಿಸಿದರು ನಮ್ಮ 'ಶ್ರೀ'ಯವರು. ಅಂದಿನಿಂದ ನನ್ನ

ಮತೀಯ ಸಹೋದರರು ಕನ್ನಡ ನಾಡಿಗಾಗಿ ಮಾಡುವ ಸೇವೆ ಎಂಥದು ಎಂಬುದನ್ನು ನನ್ನ ದೃಷ್ಟಿಪಥದಲ್ಲಿಟ್ಟು ನನಗೆ ತಿಳಿದ ಕೆಲವು ವಿಚಾರಗಳನ್ನು ಮಾತ್ರ ವಿಮರ್ಶಿಸಿ ಒಂದು ಸಿದ್ಧಾಂತಕ್ಕೆ ಬರಲು ಪ್ರಯತ್ನಿಸಿರುವೆನು.

ನಮ್ಮ ಈ ಸಾಮಾಜಿಕ ದುರ್ದೆಸೆ, ಆರ್ಥಿಕ ಅಧಃಪತನ, ರಾಜಕೀಯ ದುರ್ದೆಸೆಗಳಿಗೆ ಕೋಮುವಾರು ಸಂಸ್ಥೆಗಳೇ ಕಾರಣ. ಕೋಮುವಾರು ಭಾವನೆಗಿಂತ ಹೆಚ್ಚು ಘಾತಕವಾದದ್ದು ಯಾವುದೂ ಇಲ್ಲ. ಇದರಿಂದ ನಮ್ಮ ದೇಶಕ್ಕೆ ಆಗುವ ಹಾನಿಗಳನ್ನು ವಿವರಿಸಬೇಕಾಗಿಲ್ಲ. ಇದು ಎಲ್ಲಾ ಪ್ರಗತಿಗಳಿಗೂ ಕುಠಾರವಿದ್ದಂತೆ. ಸಾಹಿತ್ಯ ಗೋಷ್ಠಿಗಳಲ್ಲಿ, ರಾಜಕೀಯ ರಂಗದಲ್ಲಿ, ಸಾಮಾಜಿಕ ವೇದಿಕೆಗಳಲ್ಲಿ ಕೋಮುವಾರು ಐಕ್ಯತೆಗಾಗಿ, ಶಾಂತಿಗಾಗಿ ಅನೇಕರು ದುಡಿಯುತ್ತಿದ್ದಾರೆ. ಕೇವಲ ಸ್ವಾರ್ಥಕ್ಕಾಗಿ ತೋರಿಸುವ ಕೃತ್ರಿಮದ, ವೇಷದ ಶಾಂತಿ ತಾತ್ಕಾಲಿಕವಾಗಿ ಮೂಡುವ ತೊಡಕುಗಳನ್ನು ಬಿಡಿಸಿ ಪದವಿಗಳನ್ನು ಗಳಿಸಲು ತೋರಿಸುವ ಬಹಿರಾಡಂಬರದ ಬೂಟಾಟಿಕೆಯ ಶಾಂತಿ ಮಾತ್ರ. ಇಂಥಾ ಕೃತಕ ಶಾಂತಿಯಿಂದ ಒಂದಲ್ಲ ಒಂದು ದಿನ ಅಶಾಂತಿ, ಅಸಮಾಧಾನಗಳು ತಲೆದೋರದಿರವು. ಆದರೆ ನಾವು ದುಡಿಯುವ ಶಾಂತಿಯ ಮಟ್ಟವೇ ಬೇರೆ, ನೆಲೆ ಬೇರೆ, ಅಂತಸ್ತು ಬೇರೆ. ನಮ್ಮಲ್ಲಿ ಹೊಸ ದೃಷ್ಟಿ, ಹೊಸ ಸಹನೆ ಮೂಡಬೇಕು. ಆಧ್ಯಾತ್ಮಿಕ, ನೈತಿಕ ಶಕ್ತಿಗಳು ಅಪಾರವಾಗಿ ಬೆಳೆಯಬೇಕು. ಅಂತಃಕರಣಶುದ್ಧಿ, ಚಿತ್ತಶುದ್ಧಿ ಆಗಬೇಕು. ಇಂಥ ಚಿರಶಾಂತಿ ಪರಸ್ಪರ ಸಂಸ್ಕೃತಿಗಳ ಸಮ್ಮಿಳಿತದಿಂದಲೇ ಆಗಬೇಕು. ಆಗಲೇ ಸಾಮರಸ್ಯ; ಆಗಲೇ ಭ್ರಾಂತಿ ಮಾಯವಾಗಿ ಸೌಹಾರ್ದತೆ ಮತ್ತು ಸಹೋದರಭಾವ ಹುಟ್ಟಿ ಚಿರಶಾಂತಿ ನೆಲಸುವುದು. ಭಾಷೆಯಿಂದ ಕೃತಿ, ಕೃತಿಯಿಂದ ಸಂಸ್ಕೃತಿ ಬೆಳೆಯುವುದು. ನಮ್ಮ ಮನೆಮಾತಿನಲ್ಲಿ ನಮ್ಮ ನಮ್ಮ ಪರಸ್ಪರ ಆಚಾರ ವ್ಯವಹಾರ, ಧರ್ಮಗಳನ್ನು ತಿಳಿದು ಗೌರವಭಾವ ಮೂಡಬೇಕು. ಇಲ್ಲಿ ಭಾಷೆಗಳ ಸಮಸ್ಯೆಗಳನ್ನು ಪರಿಹರಿಸಲು ಪ್ರಯತ್ನಿಸುವುದಿಲ್ಲ. ಈ ಮಹತ್ಕಾರ್ಯವು ನಮ್ಮ ದೇಶದ ಮುಸಲ್ಮಾನ ವಿದ್ಯಾಭ್ಯಾಸ ಸಲಹಾ ಸಮಿತಿಗೆ ಸೇರಿದ್ದು. ನಾನು ಕೊಡುತ್ತಿರುವುದು ಕೇವಲ ಸೂಚನೆ. ಇಷ್ಟು ಮಾತ್ರ ಹೇಳಲು ಬಯಸುತ್ತೇನೆ. ಆಯಾ ಪ್ರಾಂತದಲ್ಲಿ ಆಯಾ ಭಾಷೆಗೆ ಪ್ರಾಮುಖ್ಯತೆ ಇರಬೇಕು. ನಾವು ಅಲ್ಪಸಂಖ್ಯಾತರು. ನಮಗೆ ಬೇಕಾದ ಭಾಗಗಳಲ್ಲಿ, ನಮ್ಮ ಮನೆಯ ಮಾತಿನಲ್ಲಿ ಬೇಕಾದಷ್ಟು ಶಿಕ್ಷಣ ದೊರೆಯುತ್ತಿದೆ. ನಾವು ಯಾವ ದೇಶದಲ್ಲಿ ಯಾವ ಜನಗಳ ನಡುವೆ ಹುಟ್ಟಿ ಬೆಳೆದು ಜೀವಿಸಬೇಕೆನ್ನುವೆವೊ ಅವರೊಡನೆ ನಮ್ಮ ವ್ಯಕ್ತಿತ್ವವನ್ನು ಕಳೆದುಕೊಳ್ಳದೆ ಏಕರೂಪವಾಗಲು ದುಡಿಯಬೇಕು. ಇದಕ್ಕೆ ದೇಶಭಾಷೆಗಿಂತ ದೊಡ್ಡ ಸಾಧನ ಇಲ್ಲ.

ನಾವು ನವಯುಗದ ಸುಧಾರಣೆಗಳ ಬೆಳಕಿನಲ್ಲಿ ನಡೆಯಬೇಕು, ನುಡಿಯಬೇಕು, ದುಡಿಯಬೇಕು. ತುರ್ಕಿಸ್ಥಾನದಲ್ಲಿ ಘಾಜಿವೀರ ಕಮಾಲಪಾಷಾ ಅವರ ಸುಧಾರಣೆ, ಇರಾನಿನ ಷಾರವರ ಸುಧಾರಣೆಗಳ ಕಡೆ ನೋಡಿ ಪಾಠ ಕಲಿಯಬೇಕು. ನಮ್ಮ ನಡೆ, ನುಡಿ, ಸಾಹಿತ್ಯ ಮತ್ತು ಸಂಸ್ಕೃತಿಗಳನ್ನು ನಾವು ಕಾಪಾಡಿಕೊಳ್ಳುವ ಹಕ್ಕು ನಮ್ಮಲ್ಲಿ ಇದ್ದೇ ಇದೆ. ನಮ್ಮ ಸಂಸ್ಕೃತಿ ಭದ್ರವಾದ ಶಾಂತಿಯ ತಳಹದಿಯ ಮೇಲೆ ನಿಂತಿದೆ. ನಮ್ಮ ಧರ್ಮ ಮತ್ತು ನಮ್ಮ ಸಾಹಿತ್ಯಗಳ ಅಗಾಧವಾದ

ಸಂಪತ್ತು ಉತ್ತಮವಾದ ಸಂಸ್ಕೃತಿ ಅನುಪಮವಾದ ಸೌಂದರ್ಯಗಳನ್ನು ನಾವು ನಮ್ಮ ನಾಡಿನ ನುಡಿಯನ್ನು ಕಲಿತು ಬೆಳೆಯಿಸಿ ಹರಡಬೇಕು. ಇಂಥಾ ಯೋಜನೆಯಿಂದ ನಮ್ಮ ಸಂಸ್ಕೃತಿಗಾಗಲಿ ಧರ್ಮಕ್ಕಾಗಲೀ ಎಂದಿಗೂ ಧಕ್ಕೆ ತಾಗದು. ಅಂತೂ ಪರಸ್ಪರ ತ್ಯಾಗಬುದ್ಧಿಯಿಂದಲ್ಲದೆ ಪಕ್ವವಾದ ಸಂಪೂರ್ಣವಾದ ಶಾಂತಿ ದೊರೆಯಲಾರದು.

ನಮ್ಮ ನಾಡಿನ ನಮ್ಮ ಜನಸಂಖ್ಯೆಯೇನು? ನಾವು ಜೀವನವನ್ನು ನಮ್ಮ ಸಹೋದರರೊಡನೆ ಸರ್ವಸಮಾನತೆ, ಸರ್ವಸೋದರತೆಯ ತತ್ವಗಳ ಮೇಲೆ ಹೇಗೆ ನಡಸಲು ಸಾಧ್ಯ? ಈ ಪ್ರಶ್ನೆಗಳಿಗೆ ಉತ್ತರ ನಾವೇ ಹುಡುಕಬೇಕು. ಮುಸಲ್ಮಾನನು ದೃಶ್ಯಲೋಕವನ್ನು ಸೂರೆಗೊಳ್ಳುವ ಕರ್ಮಯೋಗಿ, ಅವನು ಸ್ವಪ್ನಜೀವಿಯಲ್ಲ. ವಸ್ತುತಃ ಇರುವ ಸದ್ಯಃಸ್ಥಿತಿಯನ್ನು ಅರಿತು ತನ್ನ ಸಕಲ ಕಾರ್ಯಗಳನ್ನು ಶಾಂತಿಯ ಅಡಿಗಲ್ಲಿನಮೇಲೆ ನಿಲಿಸಿ ತನ್ನ ಜೀವನವನ್ನು ರೂಪಗೊಳಿಸಬೇಕು. ಇಲ್ಲದಿದ್ದರೆ ಅವನದು ಶುಷ್ಕಜೀವನ. ವಿಜ್ಞಾನ, ಸಾಹಿತ್ಯ, ಸಂಸ್ಕೃತಿಗಳಲ್ಲಿ ಆಸಕ್ತಿ ಹೆಚ್ಚಿಸಬೇಕು. ವಿಶಾಲವಾದ ಹೊಸ ಸಹನೆ ಮೂಡಬೇಕು. ನಮ್ಮದೊಂದು ನೂರಾರು ವರ್ಷಗಳಿಂದ ಬೆಳೆದುಕೊಂಡುಬಂದಿರುವ ಹಿರಿಯ ಸಂಸ್ಕೃತಿ. ನಮ್ಮ ಹಿಂದೂ ಸಹೋದರರದು ಇಲ್ಲೇ ಹುಟ್ಟಿ ಬೆಳೆದು ಬಂದ ದೊಡ್ಡ ಸಂಸ್ಕೃತಿ. ಇವೆರಡರ ಸಮ್ಮೇಳನದಿಂದ ಹುಟ್ಟಿದ ಮಹಾಸಂಸ್ಕೃತಿಯನ್ನು ಇಡಿಯ ಪ್ರಪಂಚವೇ ಎದುರುನೋಡುತ್ತಿದೆ. ಇದರಿಂದಲೇ ನಮ್ಮ ನಾಡಿನ ಶಾಂತಿ, ದೇಶದ ಶಾಂತಿ, ಇಡಿಯ ಲೋಕಕ್ಕೆ ಕಲ್ಯಾಣ.

'ಶ್ರೀ'ಯವರು ಕೇಂದ್ರ ಸಂಸ್ಥೆಯಾದ ಸಾಹಿತ್ಯ ಪರಿಷತ್ತಿನ ಮೂಲಕ ದೇಶದ ಕಲ್ಯಾಣಕ್ಕಾಗಿ ದುಡಿಯುತ್ತಿದ್ದಾರೆ. ನಾವು ನಮ್ಮ ಸೇವೆಯನ್ನು ಸಲ್ಲಿಸೋಣ. ನಮ್ಮ ಭಂಡಾರವನ್ನು ಕೊಟ್ಟು ಕನ್ನಡ ಸಾಹಿತ್ಯದ ಭಂಡಾರವನ್ನು ನಮ್ಮ ಭಾಷೆಯ ಬೆಳವಣಿಗೆಗಾಗಿ ಸೂರೆಗೊಳ್ಳೋಣ. ಪರಸ್ಪರ ಸಾಹಿತ್ಯ ಭಂಡಾರಗಳ ಸೂರೆಯಾದ ದಿನ ನಮ್ಮೆಲ್ಲರ ಕಲ್ಯಾಣ, ಚಿರಶಾಂತಿ.

ಟಿ. ಎಂ. ಅಮೀರ್

# ಕ್ರೈಸ್ತರೂ ಕನ್ನಡವೂ

ನಮ್ಮ ಕನ್ನಡ ನಾಡಿನ ಮತಗಳಲ್ಲಿ ಕ್ರೈಸ್ತ ಮತವೇ ಎಳೆಯದು. ಇದನ್ನು ನಮ್ಮ ದೇಶದಲ್ಲಿ ನೆಟ್ಟು ಇನ್ನೂ ಒಂದುನೂರು ವರುಷ ಕೂಡ ಆಗಿಲ್ಲ. ಬಹು ಮಟ್ಟಿಗೆ ಮೈಸೂರು ದೇಶದಲ್ಲಿ ಮೊತ್ತಮೊದಲು ಕನ್ನಡಿಗನು ಕ್ರೈಸ್ತನಾದುದೆಂದರೆ ಸುಮಾರು ಎಂಬತ್ತು ವರ್ಷಗಳ ಹಿಂದೆ. ಅನಂತರವೂ ಕೂಡ ಕ್ರೈಸ್ತ ಮತಸ್ಥರ ಸಂಖ್ಯೆಯು ವೇಗವಾಗಿ ಹೆಚ್ಚಲಿಲ್ಲ. ಹಿಂದಿನ ಘೋರಕ್ಷಾಮವೇ ಈ ಅಂಕಿಯ ಬೆಳವಣಿಗೆಗೆ ಮುಖ್ಯ ಕಾರಣವಾಯಿತು. ತಿನ್ನುವುದಕ್ಕಿಲ್ಲದೆ ಸಾಯುವುದರಲ್ಲಿದ್ದ ಅನೇಕರನ್ನು ಆಗಿನ ವಿದೇಶಿ ಕ್ರೈಸ್ತ ಮಿಷನರಿಗಳು ಕನಿಕರಿಸಿ, ಊಟ ಉಪಚಾರ ಗಳನ್ನು ನೀಡಿ ಕಾಪಾಡಿದರು. ಇವರ ಪ್ರೀತಿಯ ಉಪಚಾರ, ನಿರ್ಮಲವಾದ ಮನಸ್ಸು, ಅದರಿಂದ ಹರಿದ ನಿಚ್ಚಟವಾದ ಕರುಣೆಯ ಮಾತುಗಳು, ಇವರ ಉಪದೇಶ, ಎಲ್ಲಕ್ಕಿಂತ ಹೆಚ್ಚಾಗಿ ಇವರ ತ್ಯಾಗದ, ಭಕ್ತಿಯ, ದೇವರನ್ನು ಪ್ರತಿಬಿಂಬಿ ಸುವ ಬಾಳು, ಇವುಗಳು ರಕ್ಷಿತರಾದವರ ಹೃದಯಗಳನ್ನು ಸೆರೆಹಿಡಿದವು.

ಕೆಲವರು ತಮ್ಮ ಸ್ವಂತದವರನ್ನು ಬರದಲ್ಲಿ ಕಳೆದುಕೊಂಡು, ದಿಕ್ಕಿಲ್ಲದೆ ಇವರಲ್ಲಿಯೇ ಉಳಿದು ಕ್ರಮೇಣ ಇವರ ಉಪದೇಶವನ್ನು ನಂಬಿ ಕ್ರೈಸ್ತರಾದರು. ಅಂದಿನಿಂದೀಚೆಗೆ ಈ ಮತವು ಬೇರೂರಿ ಕೊಂಬೆಗಳನ್ನು ಸ್ವಲ್ಪ ಸ್ವಲ್ಪವಾಗಿ ದೂರ ದೂರ ಚಾಚುತ್ತ ಬೆಳೆಯುತ್ತಲೇ ಇದೆ. ಈ ಮೊದಲ ಕ್ರೈಸ್ತರು ಬಹಳ ಮಟ್ಟಿಗೆ ಜನದ ಕೆಳಮಟ್ಟದಿಂದ ಬಂದವರು: ಎಂದಮೇಲೆ, ಬಡವರು, ವಿದ್ಯವಿಲ್ಲದವರು. ಮುಂದೆ ಕ್ರೈಸ್ತ ಮತವನ್ನು ಅಪ್ಪಿದವರೂ ಕೂಡ ತಮ್ಮ ಹಿರಿಯರಂತೆ ಸುಸಂಸ್ಕೃತರಲ್ಲ. ಹೀಗೆ ಪ್ರಾರಂಭವಾದ ಕ್ರೈಸ್ತ ಕೋಮಿನ ಕಾಯಕ, ಮಾನಸಿಕ, ಆಧ್ಯಾತ್ಮಿಕ ಬೆಳವಣಿಗೆಯ ಜವಾಬ್ದಾರಿಯು ಇವರನ್ನು ಕ್ರೈಸ್ತರನ್ನಾಗಿ ಮಾಡಿದ ವಿದೇಶಿ ಮಿಷನರಿ ಗಳ ಮೇಲೆ ಬಿದ್ದಿತು.

ತಮ್ಮ ಮುಖ್ಯ ಗುರಿಯು ಇವರನ್ನು ಒಳ್ಳೆಯ ಕ್ರೈಸ್ತದಾಸರನ್ನಾಗಿ ಮಾಡುವುದೆಂದು ತಿಳಿದು, ಆಧ್ಯಾತ್ಮಿಕ ವಿಷಯಗಳಿಗೇ ಹೆಚ್ಚು ಗಮನವನ್ನು ಕೊಟ್ಟು, ಇವರ ವಿದ್ಯಾಭ್ಯಾಸವನ್ನು ಎಂದರೆ ಓದುಬರಹವನ್ನು, ಅದಕ್ಕೆಷ್ಟೊ ಅಷ್ಟು ಮಾತ್ರ ಸಾಧನವಾಗಿ ಮಾಡಿಕೊಂಡರು. ಮಕ್ಕಳಿಗೆ, ಹೆಂಗಸರಿಗೆ ಓದು ಬರಹವನ್ನು ಕಲಿಸಿ ಕೊಟ್ಟರು. ಬೈಬಲ್ಲನ್ನೂ ತತ್ಸಂಬಂಧವಾದ ಕತೆಯ ಮತ್ತು ಇತರ ಪುಸ್ತಕಗಳನ್ನೂ ಓದುವಂತೆ ಮಾಡಿದರು. ಗಂಡಸರ ವಿದ್ಯವೂ ಉಳಿದವರದಕ್ಕಿಂತ ಹೆಚ್ಚು ಜೋರಿ ಯಾಗಿರಲಿಲ್ಲ. ಕೆಲವು ಕಾಲದಲ್ಲೇ ಕ್ರೈಸ್ತರು ಕನ್ನಡ ಲೋವರ್ ಸೆಕೆಂಡರಿ ಮಟ್ಟಕ್ಕೆ ಮುಟ್ಟಿದರು. ಇದಕ್ಕಿಂತ ಹೆಚ್ಚು ವಿದ್ಯೆಗೆ ಆಗಿನ ಮಿಷನರಿಗಳು ಅವಕಾಶ ಕೊಡಲಿಲ್ಲ. ಹಾಗೆ ಮಾಡಿದ್ದೂ ಒಂದು ರೀತಿಯಲ್ಲಿ ಕ್ಷಮ್ಯ; ಏಕೆಂದರೆ ಸ್ವದೇಶದ ಉಪದೇಶಕರ ಜರೂರು ಹೆಚ್ಚಾಯಿತು. ಹೇಗೆಂದರೆ, ಒಂದು ಕಡೆ ಕ್ರೈಸ್ತ ಕುಲದ ಸಂಖ್ಯೆ ಬೆಳೆಯುಹತ್ತಿತು; ಇನ್ನೊಂದು ಕಡೆ ಹೇರಳವಾಗಿದ್ದ ಅಕ್ರೈಸ್ತರಿಗೆ ಕ್ರೈಸ್ತ ಧರ್ಮವನ್ನು ಸಾರಬೇಕೆಂಬ ತವಕ. ಈ ಮೇಲಿನ ಎರಡು ಕೆಲಸಗಳೂ ಸ್ವದೇಶದ ಕ್ರೈಸ್ತ ಉಪದೇಶಕರಿಂದ ಹೆಚ್ಚು ಸಮರ್ಪಕವಾಗಿ ನಡೆಯುವುದೆಂಬ ತಿಳಿವು.

ಈ ಅವಸರವಾದ ಆವಶ್ಯಕತೆಗಾಗಿ ಆಗಿನ ಕ್ರೈಸ್ತರು ಪ್ರೌಢವಿದ್ಯೆಯನ್ನು ತ್ಯಾಗ ಮಾಡಬೇಕಾಯಿತು. ಹೀಗಾಗಿ ಭಾಷೆ, ಸಾಹಿತ್ಯಗಳಲ್ಲಿ ಹಿಂದುಳಿದರು.

ಆಗ ಹೊಸ ಕ್ರೈಸ್ತರಿಗೆ ಓದಲು ಕೊಟ್ಟ ಕ್ರೈಸ್ತಧರ್ಮದ ಪುಸ್ತಕಗಳೂ, ಕ್ರೈಸ್ತೇತರರಿಗೆಂದು ಬರೆದ ಪುಸ್ತಕಗಳೂ, ಬಹುಮಟ್ಟಿಗೆ ವಿದೇಶೀಯರಿಂದಲೇ ಆಗಿರಬೇಕು. ಪುಸ್ತಕಗಳ ಜತೆಗೆ ವೃತ್ತಪತ್ರಿಕೆಗಳನ್ನು ಪ್ರಕಟಿಸಲು ಮೊದಲುಮಾಡಿದರು. ಮಹಿಳಾಸಖಿ, ಬೋಧಕ ಬೋಧಿನಿ, ವೃತ್ತಾಂತ ಪತ್ರಿಕೆ, ಟ್ರೆಜರ್‌ಚೆಸ್ಟ್, ಸರ್ವರ ಮಿತ್ರ—ಇವು ವೃತ್ತಪತ್ರಿಕೆಗಳಲ್ಲಿ ಹಲವು. ಇಲ್ಲಿ ಹೇಳಿರುವ ಪುಸ್ತಕ ವೃತ್ತ ಪತ್ರಿಕೆಗಳ ಭಾಷೆಯ ವಿಚಾರ ಟೀಕಿಸುವುದು ಅನುಚಿತ; ಯಾಕೆಂದರೆ ಇವುಗಳನ್ನು ಬರೆದವರಲ್ಲಿ ಕೆಲವರ ತಾಯಿಮಾತು ಕನ್ನಡವಲ್ಲ ; ಉಳಿದವರ ಮನೆಮಾತು ಕನ್ನಡ ವಾಗಿದ್ದರೂ ಅದರಲ್ಲಿ ಪರಿಶ್ರಮಹೊಂದಿದವರಲ್ಲ. ಭಾಷೆಯ ಮೇಲಿನ ಪ್ರೀತಿಯಿಂದ ಬರೆದವರೂ ಕಡಿಮೆಯೇ ಇರಬೇಕು. ಸಂಬಳಕ್ಕಾಗಿ, ಇಲ್ಲವೇ ಧಣಿಗಳ ಅಪ್ಪಣೆ ಇಲ್ಲವೇ ಮೆಚ್ಚಿಕೆಗಾಗಿ ಬರೆದವು. ಇವೆಲ್ಲಕ್ಕಿಂತ ಹೆಚ್ಚಾಗಿ ವಿಷಯವೇ ಅವರಿಗೆ ಪ್ರಧಾನವಾಗಿತ್ತು.

ಕ್ರೈಸ್ತ ಮಂಡಲಿಯ, ಮುಖ್ಯವಾಗಿ ಇದರ ಬೋಧಕರ, ಉಪಯೋಗಕ್ಕಾಗಿ ಅನೇಕ ಪುಸ್ತಕಗಳು ಹೊರಬೀಳುತ್ತಲೇ ಇವೆ. ಪ್ರಾಯಶಃ ಇವಲ್ಲಿ ಸ್ವತಂತ್ರ ಗ್ರಂಥಗಳಿಲ್ಲ; ಎಲ್ಲವೂ ಇಂಗ್ಲಿಷ್ ಪುಸ್ತಕಗಳ ಭಾಷಾಂತರ, ಅನುವಾದ ಇಲ್ಲವೇ ಪ್ರೇರಣೆ. ಕ್ರೈಸ್ತರು ಸ್ವತಂತ್ರವಾದವುಗಳನ್ನು ಬರೆಯಲು ಪ್ರೋತ್ಸಾಹಿಸಬೇಕೆಂದು ಇತ್ತೀಚೆಗೆ ಪ್ರಬಂಧ ಸ್ಪರ್ಧೆಗಳನ್ನು ಹೂಡುತ್ತಿದ್ದಾರೆ. ಸಾಕಾದಷ್ಟು ಹಣದ ಬಹುಮಾನವನ್ನು ಒದಗಿಸುತ್ತಿದ್ದಾರೆ. ಹಿಂದಿನ ಕಾಲದ ವಿದೇಶಿ ಮಿಷನರಿಗಳು ನಿಘಂಟು, ವ್ಯಾಕರಣ ಇತ್ಯಾದಿಗಳನ್ನು ಪ್ರಕಟಿಸಿ ಮಾಡಿರುವ ಕನ್ನಡ ಸೇವೆಯನ್ನು ಈ ಪ್ರಬಂಧದಲ್ಲಿ ವಿವರಿಸಿಲ್ಲ. ಇವೆಲ್ಲವನ್ನು ಬಿಟ್ಟಮೇಲೂ ಕೂಡ ಕ್ರೈಸ್ತರು ಕನ್ನಡ ಭಾಷೆಯ ಗಿಡಕ್ಕೆ ಒಂದು ಚೆಂಬು ನೀರನ್ನಾದರೂ ಎರೆದಿದ್ದಾರೆ.

ಕ್ರೈಸ್ತರಿಗೂ ಕನ್ನಡ ಭಾಷೆಗೂ ಇರುವ ಸಂಬಂಧವನ್ನು ಹೇಳಿದಮೇಲೆ, ಇವರ ಸಾಹಿತ್ಯ ಸೇವೆಯ ವಿಚಾರ ಒಂದೆರಡು ಮಾತುಗಳನ್ನು ಹೇಳುವುದು ಆವಶ್ಯಕ. ಕನ್ನಡ ಸಾಹಿತ್ಯ ಸೇವೆಯನ್ನು ಮಾಡಿದವರು ಕ್ರೈಸ್ತರಲ್ಲಿ ಅತ್ಯಲ್ಪ. ಧಾರವಾಡ, ಮೈಸೂರು ಪ್ರಾಂತಗಳಲ್ಲಿ ಒಂದಿಬ್ಬರು ಇದ್ದಾರೆ. ಧಾರವಾಡದ ಶ್ರೀಮಾನ್ ಚೆನ್ನಪ್ಪ ಉತ್ತಂಗಿಯವರು ಸರ್ವಜ್ಞವಚನಗಳನ್ನು ಪರಿಷ್ಕರಿಸಿ, ಬಹುಕಾಲದ ತಮ್ಮ ವ್ಯವಸಾಯದ ಫಲವನ್ನು ದೀರ್ಘವಾದ ತಮ್ಮ ಪೀಠಿಕೆಯಲ್ಲಿಟ್ಟು ಕನ್ನಡಿಗರಿಗಾಗಲೇ ಪರಿಚಿತರಾಗಿದ್ದಾರೆ. ನಮ್ಮ ತರುಣ ಲೇಖಕನೊಬ್ಬನು ಜರ್ಮನಿಯಲ್ಲಿ ಕಣ್ಮರೆಯಾದನು. ಈತನು ವಿದ್ಯಾರ್ಥಿ ದೆಸೆಯಲ್ಲಿಯೇ ಬರೆದ ಕನ್ನಡ ಲೇಖನಗಳು ಹಿರಿಯ ಕನ್ನಡ ಸಾಹಿತಿಗಳ ಮೆಚ್ಚಿಕೆಗೆ ಪಾತ್ರವಾದವು. ಬರೆಯ ಬೇಕೆಂಬ ಆಸೆಯೂ ಅದಕ್ಕೆ ತಕ್ಕ ಶಕ್ತಿಯೂ ಆತನಿಗಿದ್ದವು. ಭಾಷೆಯಲ್ಲಿಯೇ ಹೆಚ್ಚು ಪಾಂಡಿತ್ಯವನ್ನು ಗಳಿಸಬೇಕೆಂದು ಜರ್ಮನಿಗೆ ಹೋಗಿ ಕೆಲವು ಕಾಲದಲ್ಲಿಯೇ ತೀರಿಕೊಂಡನು. ನಮ್ಮವರನೇಕರು ಆತನಿಂದ ಉತ್ತಮ ಸಾಹಿತ್ಯವನ್ನು ನಿರೀಕ್ಷಿಸುತ್ತಿದ್ದೆವು. ಆತನ ಹೆಸರು ಶ್ರೀ॥ ಇ. ಎ. ಭಾಸ್ಕರರಾವ್. ಕನ್ನಡ ಸಾಹಿತ್ಯ

ಪರಿಷತ್ತಿನಲ್ಲಿ ಒಂದು ಪ್ರಬಂಧ ಸ್ಪರ್ಧೆಯನ್ನು ಪ್ರತಿ ವರ್ಷವೂ ಏರ್ಪಡಿಸುತ್ತಿರುವುದು ಈತನ ನೆನಪಿನಲ್ಲಿ, ಈತನ ತಾಯಿ ಶ್ರೀಮತಿ ಎ. ಶೇಷಮ್ಮನವರು ಒದಗಿಸಿ ಕೊಟ್ಟಿರುವ ಹಣದ ಸಹಾಯದಿಂದ.

ಕ್ರೈಸ್ತರಲ್ಲಿ ಬಹುಭಾಗ ಜನತೆಯು ಕೆಳಭಾಗದಿಂದ ಬಂದವರು; ಈಚೆಗೆ ಅಕ್ಷರ ಕಲಿತವರು; ಇವರ ವಿದ್ಯೆಯ ಮಟ್ಟ ತಗ್ಗು; ಸಂಸ್ಕೃತಿಯಲ್ಲಿ ಪೂರ್ವಜರ ಆಸ್ತಿ ಇವರಿಗಿಲ್ಲ, ಎಂಬುವನ್ನು ಆಗಲೇ ಹೇಳಿದೆ. ತಮ್ಮ ಹಿಂದಿನ ಸಮಾಜವನ್ನು ಬಿಟ್ಟು ಕ್ರೈಸ್ತ ಸಭೆಗೆ ಸೇರಿದನಂತರ ಹೊರಗಿನ ಜನಪ ಸಂಪರ್ಕವನ್ನೇ ಬಿಟ್ಟು, ತಮ್ಮ ಚಿಕ್ಕ ಸಂಘದಲ್ಲಿಯೇ ಇವರು ಓಡಾಡಿಕೊಂಡು ಇದ್ದುಬಿಟ್ಟಿದ್ದಾರೆ. ಇದರಿಂದ ಇದ್ದ ಅಷ್ಟ ಸ್ವಲ್ಪ ಸಂಸ್ಕೃತಿಗೂ ಚ್ಯುತಿಬರುತ್ತದೆ. ಬಡತನಕ್ಕೂ ಸಾಹಿತ್ಯಕ್ಕೂ ಸಾಮಾನ್ಯವಾಗಿ ದೂರ. ಇವರು ತಮ್ಮ ಕಾಲವನ್ನೆಲ್ಲಾ ಹೊಟ್ಟೆ ಬಟ್ಟೆಯನ್ನು ಒದಗಿಸಿಕೊಳ್ಳುವುದರಲ್ಲಿ ಕಳೆಯಬೇಕಾಗಿದೆ. ಸಾಹಿತ್ಯಾದಿ ಕಲೆಗಳನ್ನು ಅಭ್ಯಾಸ ಮಾಡಿ ಆನಂದಿಸುವ ಅವಕಾಶವು ಇವರಿಗೆಲ್ಲಿ? ಇವಿಲ್ಲದೆ ಸಾಹಿತ್ಯ ಸೇವೆ ಎಲ್ಲಿ? ಈಚೆಗೆ ಈ ಅನುಕೂಲವಿರುವವರು ಕೆಲವರಿದ್ದಾರೆ ನಿಜ. ಆದರೆ ಇವರಲ್ಲಿ ಅನೇಕರು ಇಂಗ್ಲಿಷನ್ನು ಮೋಹಿಸಿ, ಇಲ್ಲವೇ ಇಂಗ್ಲಿಷೇ ನಾಗರಿಕರ ಭಾಷೆಯೆಂದು ಭ್ರಮಿಸಿ ಕನ್ನಡದ ಕಡೆ ಅತ್ಯಂತ ತಿರಸ್ಕಾರವನ್ನು ತೋರಿಸುತ್ತಿದ್ದಾರೆ. ಜತೆಯವರೊಂದಿಗೆ ಮಾತನಾಡುವಾಗ, ಕೂಟಗಳಲ್ಲಿ ಸಭೆಗಳಲ್ಲಿ ಚರ್ಚೆ ಇಲ್ಲವೇ ಉಪನ್ಯಾಸಗಳನ್ನು ಮಾಡುವಾಗ ಕನ್ನಡವನ್ನು ಉಪಯೋಗಿಸಲು ನಾಚುತ್ತಾರೆ. ಈ ಸ್ಥಿತಿಯು ಇಡಿಯ ಕನ್ನಡಿಗರಲ್ಲನೇಕರಲ್ಲಿತ್ತು. ಆದರೆ ಎಲ್ಲರೂ ಎಚ್ಚತ್ತು ತಮ್ಮ ತಪ್ಪನ್ನು ಬೇಗ ಬೇಗನೇ ತಿದ್ದಿಕೊಳ್ಳುತ್ತಿರುವ ಸಮಯದಲ್ಲೂ ನಮ್ಮ ಕ್ರೈಸ್ತ ಬಂಧುಗಳನೇಕರು ಜಾಗೃತಿಗೊಂಡಿಲ್ಲ. ಈ ಮಮತೆ ಮೂಡುವವರೆಗೆ ಸಾಹಿತ್ಯಕ್ಕೆ ದಾರಿಯಿಲ್ಲ. ಸಾಹಿತ್ಯ ಕಾಣಿಕೆ ಇಲ್ಲದಿರುವುದಕ್ಕೆ ಮತ್ತೊಂದು ಕಾರಣವೂ ಇದೆ. 'ಧರ್ಮ ಅಗ್ರಗಾಮಿ, ಸಾಹಿತ್ಯ ಅನುಗಾಮಿ' ಎಂದು ಯಾರೋ ಎಂದೋ ಅಂದದ್ದು ನೆನಪಿದೆ. ಇದು ವಾಸ್ತವ. ಮನಸ್ಸು ಧರ್ಮಮಯವಾಗಿ, ಹೃದಯದಲ್ಲಿ ಆವೇಶ ತುಂಬಿ ಹೊರಹರಿದಾಗ, ಹೇಳಿದ್ದೆಲ್ಲಾ ಸಾಹಿತ್ಯವಾಗುವುದು. ಕ್ರೈಸ್ತ ಧರ್ಮಕ್ಕೆ ಪರವಶವಾಗಿ ಹುಚ್ಚಿನಿಂದ ಕುಣಿದು ಹಾಡಿದ ಕನ್ನಡ ಕ್ರೈಸ್ತರು ಅಪರೂಪ. ಪ್ರಾಯಶಃ ಕ್ರೈಸ್ತಮತ ಸಾಕಷ್ಟು ಮಂದಿಯಲ್ಲಿ ರಕ್ತಗತವಾಗಿಲ್ಲ. ಆದಾಗ,—ಆ ದಿನವು ಬಹು ದೂರವಿಲ್ಲ—ಕ್ರೈಸ್ತರು ಕನ್ನಡ ಸಾಹಿತ್ಯ ತೋಟದಲ್ಲಿ ಒಂದು ಸಸಿಯನ್ನಾದರೂ ನೆಡುವರು. ನಮ್ಮ ಜನರಮೇಲೆ ಕವಿದಿರುವ ಜಡತೆ, ಅನನುರಾಗಗಳು ಹರಿದಾಗ ನಮ್ಮದೂ ಒಂದು ಸೇವೆಯನ್ನು ಸಲ್ಲಿಸುವೆವು.

**ಕೆ. ಆಂಬ್ರೋಸ್ ಆನಂದ**

# ಕನ್ನಡಕ್ಕೆ ರಾಜಾಶ್ರಯ

ಯಾವ ಭಾಷೆಯೇ ಆಗಲಿ ಏಳಿಗೆಗೆ ಬರಬೇಕಾದರೆ ರಾಜಾಶ್ರಯ ಅವಶ್ಯ ವೆಂಬುದನ್ನು ಯಾರೂ ಒಪ್ಪದೆ ಇರಲಾರರು. ಈ ತತ್ತ್ವವನ್ನು ಪಾಶ್ಚಿಮಾತ್ಯ ಅಥವಾ ಪೌರ್ವಾತ್ಯ ಭಾಷೆ ಯಾವುದಕ್ಕಾಗಲಿ ಧಾರಾಳವಾಗಿ ಅನ್ವಯಿಸಬಹುದು. ಉದಾಹರಣೆಗಾಗಿ ಇಂಡಿಯಾ ದೇಶದಲ್ಲಿ ರಾಜಭಾಷೆಯ ಪದವಿಗೇರಿರುವ ಇಂಗ್ಲಿಷ್ ಭಾಷೆಯನ್ನೇ ತೆಗೆದುಕೊಳ್ಳೋಣ. ಈ ಭಾಷೆ ಇಂತಹ ಉನ್ನತ ಪದವಿಗೆ ಏರಲಿಕ್ಕಾದರೂ ಕಾರಣವೇನು? ಇದು ಯಾವ ಜನರಿಗೆ ತಾಯ್ನುಡಿ ಎನ್ನಿಸಿ ಕೊಂಡಿದೆಯೋ ಆ ಇಂಗ್ಲಿಷ್ ಜನರು ಪ್ರಪಂಚದಲ್ಲೆಲ್ಲ ತಮ್ಮ ವ್ಯಾಪಾರ ವಾಣಿ ಜ್ಯಾದಿಗಳನ್ನು ಹರಡಿ ವಿಶ್ವವ್ಯಾಪಿಗಳೆನ್ನಿಸಿಕೊಂಡಿರುವುದರಿಂದ ಇವರೊಡನೆ ಸಂಪರ್ಕ ಬಳೆಯಿಸುವವರೆಲ್ಲ ಇವರ ಭಾಷೆಗೆ ಪ್ರಾಶಸ್ತ್ಯಕೊಡದೆ ಹೋದರೆ ವಿಧಿ ಇಲ್ಲದೆ ಇರಬಹುದು. ಅಲ್ಲದೆ ನವನಾಗರಿಕತೆಗೆ ಸಂಬಂಧಪಟ್ಟ ಉತ್ತಮ ಸಾಹಿತ್ಯ, ಶಾಸ್ತ್ರಭಾಗ, ದಾರ್ಶನಿಕ ಮತ್ತು ಧರ್ಮಗ್ರಂಥಗಳು ಮುಂತಾದುವು ಇಂಗ್ಲಿಷ್ ಭಾಷೆಯಲ್ಲಿರುವಷ್ಟು ವಿಪುಲವಾಗಿ ಬೇರೆ ಭಾಷೆಗಳಲ್ಲಿಲ್ಲದೆ ಇರುವುದರಿಂದ ಈ ಭಾಷೆಗೆ ಹೆಚ್ಚು ಪ್ರಾಮುಖ್ಯತೆಯನ್ನು ಕೊಟ್ಟೇ ಕೊಡಬೇಕಾಗಬಹುದು. ಆದರೂ ಈ ಭಾಷೆ ಸರ್ವಜನ ಗ್ರಾಹ್ಯವಾಗಿರುವುದಕ್ಕೆ ಮುಖ್ಯಕಾರಣವೆಂದರೆ ಇಂಡಿಯಾದೇಶ ಇಂಗ್ಲಿಷ್ ಜನರ ಚಕ್ರಾಧಿಪತ್ಯಕ್ಕೆ ಒಳಪಟ್ಟಿರತಕ್ಕದ್ದೇ ಎಂದು ಹೇಳಬೇಕಾದೀತು. ಇದಕ್ಕನುಸಾರವಾಗಿ ಇಂದಿಗೆ ನೂರು ವರ್ಷಗಳ ಹಿಂದೆ ಈ ದೇಶ ಈಸ್ಟ್ ಇಂಡಿಯಾ ಕಂಪೆನಿಯವರ ಆಡಳಿತಕ್ಕೆ ಒಳಪಟ್ಟಿದ್ದಾಗ ಲಾರ್ಡ್ ಮೆಕಾಲೇ ಎಂಬಾತನು ಇಂಗ್ಲಿಷ್ ಭಾಷೆಯನ್ನು ಈ ದೇಶದಲ್ಲಿ ಹೆಚ್ಚು ಪ್ರಾಚುರ್ಯಕ್ಕೆ ತರತಕ್ಕ ವಿಷಯದಲ್ಲಿ ಸಲಹೆ ಮಾಡಿ ಕೊಟ್ಟ ಯೋಜನೆಗೆ ಆಗಿನ ಕಾಲದ ಸರ್ಕಾರದವರು ಮುದ್ರೆಯ ನ್ನೊತ್ತಿದ್ದರಿಂದ ಆ ಭಾಷೆ ಹೆಚ್ಚು ಪ್ರಾಮುಖ್ಯ ಸ್ಥಿತಿಗೆ ಬರಲು ಕಾರಣವಾಯಿತು.

ಮೇಲೆ ಸೂಚಿಸಿದ ತತ್ತ್ವವನ್ನೇ ಇತರ ಪಾಶ್ಚಿಮಾತ್ಯ ಭಾಷೆಗಳ ವಿಚಾರ ದಲ್ಲಿಯೂ ಅನ್ವಯಿಸಬಹುದು. ಉದಾಹರಣೆಗಾಗಿ ಜರ್ಮನ್, ಫ್ರೆಂಚ್, ಇಟಾಲಿಯನ್ ಮುಂತಾದ ಭಾಷೆಗಳನ್ನು ತೆಗೆದುಕೊಳ್ಳೋಣ. ಇವುಗಳು ಆಯಾ ದೇಶಗಳಲ್ಲಿ ಉಚ್ಛ್ರಾಯ ಸ್ಥಿತಿಗೆ ಬಂದಿರಲು ಕಾರಣವಾದರೂ ಏನು? ಈ ಪ್ರಶ್ನೆಗೆ ಉತ್ತರವಾಗಿ ಆಯಾ ಭಾಷೆಗೆ ರಾಜಾಶ್ರಯ ದೊರೆತಿರುವುದೇ ಮುಖ್ಯಕಾರಣವೆಂದು ಹೇಳಬೇಕು. ಜರ್ಮನ್ ಚಕ್ರಾಧಿಪತ್ಯದ ಸರ್ವಾಧಿಕಾರಿಯಾದ ಹಿಟ್ಲರನು ಜರ್ಮನ್ ಭಾಷೆಯನ್ನಾಡುವ ಜನರು ಯಾವ ಪ್ರದೇಶದಲ್ಲಿಯೇ ಇರಲಿ ಅವರೆಲ್ಲರೂ ಒಂದೇ ಚಕ್ರಾಧಿಪತ್ಯಕ್ಕೆ ಸೇರಿದವರಾಗಿರಬೇಕೆನ್ನುವ ತತ್ತ್ವವನ್ನು ಪಾಲಿಸಬೇಕೆಂಬ ಉದ್ದೇಶದಿಂದಲೇ ಅಲ್ಲವೇ ಕೆಲವು ರಾಷ್ಟ್ರಗಳಮೇಲೆ ದಾಳಿಯನ್ನು ನಡೆಯಿಸಿ ಅವುಗಳನ್ನು ಜರ್ಮನ್ ಚಕ್ರಾಧಿಪತ್ಯಕ್ಕೆ ಸೇರಿಸಿಕೊಂಡದ್ದು. ಈ ರಾಜಾಶ್ರಯ ತತ್ತ್ವವನ್ನೇ ಪೌರ್ವಾತ್ಯ ಭಾಷೆಗಳಾದ ಜಪಾನೀ ಮತ್ತು ಚೀನೀ ಮುಂತಾದ ಭಾಷೆಗಳಿಗೂ ಧಾರಾಳವಾಗಿ ಅನ್ವಯಿಸಬಹುದು.

ಪೀಠಿಕಾರೂಪವಾಗಿ ಇಷ್ಟುಮಾತ್ರ ಹೇಳಿದನಂತರ ನಮ್ಮ ತಾಯ್ನುಡಿಯಾದ ಕನ್ನಡದ ವಿಚಾರವನ್ನು ತೆಗೆದುಕೊಳ್ಳೋಣ. ಈ ಭಾಷೆಯಾದರೂ ಎಷ್ಟರ ಮಟ್ಟಿಗೆ ರಾಜಾಶ್ರಯಕ್ಕೆ ಒಳಗಾಗಿರುವುದೆಂಬುದನ್ನು ವಿಚಾರಮಾಡಿದ್ದೇ ಆದರೆ ಮೇಲ್ಕಂಡ ತತ್ತ್ವವೇ ಸ್ಥಿರಪಡುವುದರಲ್ಲಿ ಸಂದೇಹವಿರಲಾರದು. ಇದಕ್ಕೆ ನಿದರ್ಶನವಾಗಿ ಈ ಭಾಷೆ ಇಂದಿಗೆ ಸುಮಾರು ಒಂದುಸಾವಿರ ವರ್ಷಗಳ ಹಿಂದೆ ಎಷ್ಟು ಉಚ್ಛ್ರಾಯ ಸ್ಥಿತಿಗೆ ಏರಿತ್ತು ಮತ್ತು ಹಾಗೆ ಏರಿರಲು ಮುಖ್ಯ ಕಾರಣವೇನು — ಎಂಬೀ ಪ್ರಶ್ನೆಗಳನ್ನು ವಿಮರ್ಶೆಮಾಡಿ ನೋಡಿದ್ದೇ ಆದರೆ ನಿಜಾಂಶ ವ್ಯಕ್ತಪಡಬಹುದು. ಕ್ರಿಸ್ತಶಕ ೯ನೆಯ ಶತಮಾನದಲ್ಲಿ ರಾಷ್ಟ್ರಕೂಟ ಚಕ್ರವರ್ತಿಯಾಗಿದ್ದ ನೃಪತುಂಗನೆಂಬ ಮಹಾಕವಿ 'ಕವಿರಾಜಮಾರ್ಗ'ವೆಂಬ ತನ್ನ ಗ್ರಂಥದಲ್ಲಿ ಕನ್ನಡನಾಡು ಕಾವೇರಿಯಿಂದ ಗೋದಾವರಿಯವರೆಗೆ ವಿಸ್ತರಿಸಿತ್ತೆಂತಲೂ 'ಆ ನಾಡವರ್ ಚದುರರ್, ಪದನಱಿದು ನುಡಿಯಲುಂ, ನುಡಿದುದನಱಿದಾರಯಲುಂ ಆರ್ಪರ್, ಅವರ್ ಕುಱಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್' ಎಂತಲೂ ವರ್ಣಿಸಿರುತ್ತಾನೆ. ಚಕ್ರವರ್ತಿಯಾದವನೇ ಗ್ರಂಥಕರ್ತೃವಾಗಿದ್ದುಕೊಂಡು ಇತರ ಕನ್ನಡ ಜನರ ವಿದ್ಯಾಕುಶಲತೆಯನ್ನು ಈ ರೀತಿ ವರ್ಣಿಸಿರಬೇಕಾದರೆ ಅಂತಹ ಇತರ ಕವಿಗಳಿಗೆಲ್ಲಾ ವಿಪುಲವಾದ ರಾಜಾಶ್ರಯ ದೊರೆಯುತ್ತಿತ್ತೆನ್ನುವುದರಲ್ಲಿ ಸಂಶಯವಿರಲಾರದು. ರಾಷ್ಟ್ರಕೂಟರಂತೆಯೇ ಚಾಲುಕ್ಯರು, ಹೊಯ್ಸಳರು, ವಿಜಯನಗರದ ಅರಸುಗಳು ಮತ್ತು ಮೈಸೂರಿನ ಪ್ರಭುಗಳು ಕನ್ನಡ ಸಾಹಿತ್ಯದ ಏಳಿಗೆಗೆ ಬಹುಮಟ್ಟಿಗೆ ಆಶ್ರಯದಾತರಾಗಿದ್ದರೆಂಬುದು ಚರಿತ್ರಪ್ರಸಿದ್ಧವಾದ ವಿಷಯ. ಅವರಲ್ಲಿ ಕೆಲವರು ಸ್ವಯಂ ಪಂಡಿತರೂ, ಕವಿಗಳೂ ಆಗಿದ್ದುದಲ್ಲದೆ ಎಲ್ಲರೂ ಕವಿಗಳ ಆಶ್ರಯದಾತರಾಗಿದ್ದರು. ಕನ್ನಡದಲ್ಲಿ ಆದಿ ಮಹಾಕವಿಯೆಂದು ಪ್ರಖ್ಯಾತನಾದ ಪಂಪನು ಚಾಳುಕ್ಯಕುಲ ಚಕ್ರವರ್ತಿಯಾದ ಎರಡನೆಯ ಅರಿಕೇಸರಿಯ ಉದಾರಾಶ್ರಯದಿಂದಲೇ ಅಲ್ಲವೇ 'ವಿಕ್ರಮಾರ್ಜುನ ವಿಜಯ'ವೆಂಬ ಸುಪ್ರಸಿದ್ಧ ಗ್ರಂಥವನ್ನು ಈಗ್ಗೆ ಸುಮಾರು ಒಂದುಸಾವಿರ ವರ್ಷಗಳ ಹಿಂದೆ ರಚಿಸಿದ್ದು ಮಾತ್ರವೇ ಅಲ್ಲದೆ ಅದನ್ನು ರಾಜಾಸ್ಥಾನದಲ್ಲಿ ರಾಜನೆದುರಿಗೆ ಓದಿ ಹೇಳಿ ಅನ್ಯಾದೃಶವಾದ ಪ್ರಶಸ್ತಿ ಮನ್ನಣೆಗಳನ್ನು ಪಡೆದು ಕೀರ್ತಿವಂತನಾಗಿ ಬಾಳಿದ್ದು.

ಇನ್ನೂ ಈಚಿನ ಕಾಲಕ್ಕೆ ಬಂದರೆ ಮೈಸೂರರಸರಲ್ಲಿ ಅನೇಕರು ಕನ್ನಡದ ಉತ್ಕರ್ಷಕ್ಕೆ ಬಹುಮಟ್ಟಿಗೆ ಸಹಾಯಕರಾಗಿದ್ದರೆಂಬುದು ವ್ಯಕ್ತವಾಗುವುದು. ಈಗ್ಗೆ ಸುಮಾರು ೩೦೦ ವರ್ಷಗಳ ಹಿಂದೆ ಮೈಸೂರಲ್ಲಿ ರಾಜ್ಯವಾಳುತ್ತಿದ್ದ ಚಿಕ್ಕದೇವರಾಜ ಒಡೆಯರು ಸ್ವತಃ ಸುಸಂಸ್ಕೃತರೂ ಕವಿಗಳೂ ಆಗಿದ್ದುದಲ್ಲದೆ ಅನೇಕ ಜನ ಕವಿಗಳಿಗೂ, ಕವಯಿತ್ರಿಗಳಿಗೂ ಆಶ್ರಯದಾತರಾಗಿದ್ದರು. ಅವರು "ಅಕ್ಕರಮನಱಿಯದೊಕ್ಕಲಿಗರ್ಗಂ ಪೆಣ್ಗಳ್ಗಂ ಸಕ್ಕದದಿಂ ತತ್ತ್ವಜ್ಞಾನಮುಪ್ಪುದರಿದೆಂದು ಭಾವಿಸಿ ಎಲ್ಲರುಮಱಿವಂತೆ ಕನ್ನಡವಾತಿನೊಳ್ ಮೆಲ್ನುಡಿಗಳಿಂದೆ ಅಖಿಲ ತತ್ತ್ವಾರ್ಥಂಗಳಂ ಸಂಗತಿಗೊಳಿಸಬೇಕೆಂದು" ನಿರ್ಧರಿಸಿ ಅದರಂತೆ ಗ್ರಂಥಗಳನ್ನು ರಚಿಸಿ ಪ್ರಖ್ಯಾತರಾದರು. ಚಿಕ್ಕದೇವರಾಜ ಒಡೆಯರಂತೆಯೇ ೬ನೆಯ ಚಾಮರಾಜ ಒಡೆಯರವರೂ, ದೊಡ್ಡಕೃಷ್ಣರಾಜ ಒಡೆಯರವರ ಧರ್ಮಪತ್ನಿಯವರಾದ ಚೆಲುವಾಂಬೆಯವರೂ

ಸ್ವಂತವಾಗಿ ಗ್ರಂಥರಚನೆ ಮಾಡಿ ಸಾಹಿತಿಗಳಿಗೆ ಪ್ರೋತ್ಸಾಹ ಕೊಟ್ಟು ಕರ್ನಾಟಕ ಸರಸ್ವತೀ ಭಂಡಾರವನ್ನಲಂಕರಿಸಿದ್ದಾರೆ. ಹಾಗೆಯೇ ಮುಮ್ಮಡಿ ಕೃಷ್ಣರಾಜ ಒಡೆಯರವರು ಅನೇಕ ಗ್ರಂಥಗಳನ್ನು ಬರೆದು ಮಹಾಭಾರತವೇ ಮುಂತಾದ ಪುರಾಣ ಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರ ಮಾಡಿಸಿ ಪರಮೋಪಕಾರ ಮಾಡಿರುವರು. ಅವರ ಅನಂತರ ರಾಜ್ಯಭಾರಕ್ಕೆ ಬಂದ ಚಾಮರಾಜ ಒಡೆಯರವರ ಕಾಲ ಕನ್ನಡದಲ್ಲಿ ಒಂದು ಹೊಸ ಯುಗದ ಅರುಣೋದಯವೆನ್ನಬಹುದು. ಅದಕ್ಕೆ ಹಿಂದೆ ೫೦ ವರ್ಷಕಾಲ ಮೈಸೂರು ರಾಜ್ಯ ಇಂಗ್ಲಿಷ್ ಜನರ ಆಡಳಿತಕ್ಕೆ ಒಳಪಟ್ಟಿದ್ದ ಪ್ರಯುಕ್ತ ಇಂಗ್ಲಿಷ್ ಭಾಷೆಗೇ ಸ್ವಾಭಾವಿಕವಾಗಿ ಹೆಚ್ಚು ಪ್ರಾಶಸ್ತ್ಯ ದೊರೆತಿದ್ದು ಕನ್ನಡ ಮೂಲೆಗೆ ಬೀಳುವ ಸ್ಥಿತಿಯೊದಗಿತ್ತು. ಅಂತಹ ಪರಿಸ್ಥಿತಿಯಲ್ಲಿ ಇಂಗ್ಲಿಷ್ ವಿದ್ಯಾಪರಿಣತರಾದ ಭಾಷಾಭಿಮಾನಿಗಳು ಕನ್ನಡದ ಪುನರುಜ್ಜೀವನ ಕಾರ್ಯಕ್ಕೆ ಕೈ ಹಾಕಿದಾಗ ಚಾಮರಾಜ ಒಡೆಯರವರು ಅವರಿಗೆ ಸಂಪೂರ್ಣ ಸಹಾಯ ಸಹಾನುಭೂತಿಗಳನ್ನು ನೀಡಿ ಕನ್ನಡ ಎಂದಿನಂತೆ ತಲೆಯೆತ್ತಿ ಮೆರೆಯುವಂತೆ ಮಾಡಿದರು.

ಅವರ ಅನಂತರ ರಾಜ್ಯಕ್ಕೆ ಬಂದ ಶ್ರೀ ಕೃಷ್ಣರಾಜ ಒಡೆಯರವರೂ, ಅವರ ಸಹೋದರರಾದ ಶ್ರೀ ಕಂಠೀರವ ನರಸಿಂಹರಾಜ ಒಡೆಯರವರೂ ಸಹ ಕನ್ನಡ ಸಾಹಿತ್ಯ ಪರಿಷತ್ತಿನ ಮಹಾಪೋಷಕರೂ, ಪೋಷಕರೂ ಆಗಿದ್ದು ಕನ್ನಡದ ಏಳಿಗೆಗೆ ನಾನಾ ವಿಧವಾಗಿ ಪ್ರೋತ್ಸಾಹವನ್ನು ದಯಪಾಲಿಸುತ್ತಾ ಬಂದರು. ಇವರುಗಳ ಪ್ರೋತ್ಸಾಹದ ಫಲವಾಗಿ ಹೊಸಗನ್ನಡ ಆಧುನಿಕ ಪರಿಸ್ಥಿತಿಯಲ್ಲಿ ಉಪಯೋಗಕ್ಕೆ ಬರುವಷ್ಟು ಮಟ್ಟಿಗೆ ನವೀನ ರೀತಿಯಲ್ಲಿ ಪರಿಪುಷ್ಟಿಹೊಂದಿತು. ಇದರಿಂದ ಆಧುನಿಕ ಕಲಾ ವಿಜ್ಞಾನಗಳ ಸಂಬಂಧದ ನವೀನ ವಿಚಾರಧೋರಣೆಗಳನ್ನೆಲ್ಲ ಕನ್ನಡದಲ್ಲಿ ಸ್ಪಷ್ಟವಾಗಿ ನಿರೂಪಿಸಲು ಸಾಧ್ಯವಾಯಿತು. ಅಲ್ಲದೆ ಆಧುನಿಕ ವೈಜ್ಞಾನಿಕ ವಿಚಾರಗಳಿಗೆ ಸಂಬಂಧಪಟ್ಟ ಅತ್ಯಂತ ಗಹನವಾದ ವಿಷಯಗಳನ್ನು ಕೂಡ ಕುರಿತು ಕನ್ನಡ ಭಾಷೆಯಲ್ಲಿ ಉಪನ್ಯಾಸಗಳು ಏರ್ಪಡುವಂತಾಯಿತು. ಹೈ ಸ್ಕೂಲ್ ತರಗತಿಗಳಲ್ಲಿ ಚರಿತ್ರೆ, ಭೂಗೋಳ, ಗಣಿತ, ವಿಜ್ಞಾನಶಾಸ್ತ್ರ ಮುಂತಾದ ಪಾಠಗಳು ಇಂಗ್ಲಿಷ್ ಭಾಷೆಯ ಮೂಲಕ ಬೋಧಿತವಾಗುತ್ತಿದ್ದುದು ತಪ್ಪಿ ಕನ್ನಡದಲ್ಲಿಯೇ ಬೋಧಿತವಾಗುವ ಏರ್ಪಾಡಾಯಿತು. ಅಲ್ಲದೆ ಕಥೆ, ಕಾದಂಬರಿ, ಕಾವ್ಯ, ನಾಟಕ, ಧಾರ್ಮಿಕ ವಿಚಾರ, ವಿಜ್ಞಾನ, ಚರಿತ್ರೆ ಮುಂತಾದ ನಾನಾ ಭಾಗಗಳನ್ನು ಕುರಿತ ಗ್ರಂಥಗಳು ಹೆಚ್ಚು ಹೆಚ್ಚಾಗಿ ಪ್ರಕಾಶಕ್ಕೆ ಬರಲು ಪ್ರೋತ್ಸಾಹವುಂಟಾಯಿತು.

ಮೈಸೂರು ದೇಶ ೫೦ ವರ್ಷಕಾಲ ಇಂಗ್ಲಿಷ್ ಕಮಿಷನರುಗಳ ಆಡಳಿತಕ್ಕೆ ಒಳಪಟ್ಟಿದ್ದಾಗಲೇನೋ ಸ್ವಾಭಾವಿಕವಾಗಿ ಇಂಗ್ಲಿಷ್ ಭಾಷೆಗೇನೇ ಹೆಚ್ಚು ಪ್ರಾಶಸ್ತ್ಯ ವಿದ್ದಿತು. ಈ ಆಡಳಿತ ಕೊನೆಗಂಡು ೧೮೮೧ನೆಯ ಇಸವಿಯಲ್ಲಿ ದೇಶ ಪುನಃ ಮೈಸೂರರಸರ ಆಳಿಕೆಗೆ ಒಳಪಟ್ಟನಂತರ ಪರಿಸ್ಥಿತಿ ಬಹಳ ಮಟ್ಟಿಗೆ ಬದಲಾಯಿತೆನ್ನಬಹುದು. ಮೊದಮೊದಲು ಸರ್ಕಾರದ ನಿರೂಪಗಳೆಲ್ಲವೂ ಇಂಗ್ಲಿಷ್ ಭಾಷೆಯಲ್ಲಿಯೇ ಇರುತ್ತಿದ್ದುವು. ಬರುಬರುತ ಅವುಗಳನ್ನು ಕನ್ನಡದಲ್ಲಿಯೂ ಹೊರಡಿಸುವಂತಾಯಿತು. ಪ್ರಜಾಪ್ರತಿನಿಧಿ ಸಭೆಯ ಕಾರ್ಯಕಲಾಪಗಳೆಲ್ಲವೂ ಕನ್ನಡದಲ್ಲಿ

ನಡೆಯುವಂತಾಯಿತು. ಇದೇರೀತಿ ಶಾಸನ ಸಭೆಯ ಕಾರ್ಯಕಲಾಪಗಳು ಇದುವರೆಗೆ ಇಂಗ್ಲಿಷ್ ಭಾಷೆಯಲ್ಲಿ ನಡೆಯುತ್ತಿದ್ದುದು ಈಚೆಗೆ ಸ್ವಲ್ಪ ಮಟ್ಟಿಗೆ ಕನ್ನಡದಲ್ಲಿಯೂ ನಡೆಯಲು ಪ್ರಾರಂಭವಾಗಿದೆ. ಪ್ರಜಾಸತ್ತಾತ್ಮಕವಾದ ಸುಧಾರಣೆಗಳು ರೂಢಿಗೆ ಬಂದಂತೆಲ್ಲ ರಾಜ್ಯಾಂಗಕ್ಕೆ ಸಂಬಂಧಪಟ್ಟ ಎಲ್ಲ ಸಂಸ್ಥೆಗಳ ಕಾರ್ಯಕಲಾಪಗಳೂ ಕನ್ನಡದಲ್ಲಿಯೇ ನಡೆಯುವಂತಾಗುವುದರಲ್ಲಿ ಯಾವ ಅಡ್ಡಿಯೂ ಇರಲಾರದು. ಕೋರ್ಟು ಕಚೇರಿಗಳಲ್ಲಿ ಸಾಮಾನ್ಯವಾಗಿ ಕನ್ನಡದಲ್ಲಿಯೇ ನಡವಳಿಕೆ ನಡೆಯುತ್ತಿದೆ. ಆದರೂ ಇವು ದರ್ಜೆಯಲ್ಲಿ ಹೆಚ್ಚಿದಂತೆಲ್ಲ ಇಂಗ್ಲಿಷ್ ಭಾಷೆಯ ಉಪಯೋಗವೇ ಹೆಚ್ಚು ರೂಢಿಯಲ್ಲಿದೆ. ನ್ಯಾಯಾಧೀಶರುಗಳ ತೀರ್ಪುಗಳು ಬಹು ಮಟ್ಟಿಗೆ ಇಂಗ್ಲಿಷ್ ಭಾಷೆಯಲ್ಲಿಯೇ ಬರೆಯಲ್ಪಡುತ್ತಿವೆ. ಈ ಭಾಗದಲ್ಲಿ ಸಾಕಾದಷ್ಟು ಸುಧಾರಣೆ ಆಗತಕ್ಕದ್ದು ಅಗತ್ಯ.

ಇಂದು ಮೈಸೂರಿನಲ್ಲಿ ವಿಶ್ವವಿದ್ಯಾನಿಲಯದ ಪದವೀಧರರಾದ ಶ್ರೀ ಜಯಚಾಮರಾಜ ಒಡೆಯರವರು ವಂಶಾನುಕ್ರಮವಾಗಿ ಬಂದ ರತ್ನಸಿಂಹಾಸನವನ್ನಲಂಕರಿಸಿದ್ದಾರೆ. ಇದು ಪ್ರಜಾಸತ್ತಾತ್ಮಕವಾದ ಸರ್ಕಾರ ರೂಢಿಗೆ ಬರುವ ಕಾಲ; ಪ್ರಜಾಪ್ರತಿನಿಧಿಗಳನ್ನೊಳಗೊಂಡ ಮಂತ್ರಿಮಂಡಲ ಆಡಳಿತ ಸೂತ್ರಗಳನ್ನು ವಹಿಸಿಕೊಳ್ಳುವ ಕಾಲ. ಇಂತಹ ಅನುಕೂಲ ಸನ್ನಿವೇಶದಲ್ಲಿ ದೇಶಭಾಷೆಗೆ ತಕ್ಕ ಸ್ಥಾನಮಾನಗಳು ದೊರೆಯದೆ ಹೋದಲ್ಲಿ ಬೇರೆ ಯಾವಾಗತಾನೇ ನಿರೀಕ್ಷಿಸಲಾದೀತು!

**ಡಿ. ಸಿ. ಸುಬ್ಬರಾಯಪ್ಪ**

## ಇತಿಹಾಸ

ನಮ್ಮಲ್ಲಿ ಸ್ವಾರಸ್ಯವಾದ ಒಳ್ಳೆಯ ಇತಿಹಾಸಗಳಿಲ್ಲವೆಂದು ಇಡಿಯ ಭರತ ಖಂಡವನ್ನೆ ಕುರಿತು ಹೇಳಬಹುದಾದಾಗ ಈ ಮಾತು ಕನ್ನಡಕ್ಕೂ ಸಲ್ಲುತ್ತದೆಂದು ಮತ್ತೆ ಬೇರೆ ಹೇಳಬೇಕಾಗಿಲ್ಲ. ಇಹಲೋಕದ ಸಂಗತಿಗಳ ಬಗ್ಗೆ ಪುರಾತನ ಕಾಲದಿಂದಲೂ ಭಾರತೀಯರಲ್ಲಿ ನೆಲಸಿದ ಅವಜ್ಞೆ ಈ ಪರಿಸ್ಥಿತಿಗೆ ಕಾರಣವಾಗಿರ ಬಹುದು; ಇಲ್ಲವೆ ಅಸ್ತಿತ್ವದಲ್ಲಿ ಇದ್ದಿರಬಹುದಾದ ಒಂದೆರಡು ಐತಿಹಾಸಿಕ ಗ್ರಂಥ ಗಳು ದೊರೆಯದೆ ಹೋಗಿರಬಹುದು. ಹಿಂದಣ ಕಾಲದಲ್ಲಿಯೂ ಅರಸರು ತಂತಮ್ಮ ಆಳಿಕೆಯಲ್ಲಿ ನಡೆದ ಸಂಗತಿಗಳನ್ನು ಬರೆಸುತ್ತಿದ್ದರೆಂದು ತೋರುತ್ತದೆ; ಆದರೆ ಆ ಕೆಲಸಕ್ಕೆ ತಮ್ಮ ಆಸ್ಥಾನದಲ್ಲಿದ್ದ ಕವಿಗಳನ್ನೆ ನಿಯೋಜಿಸುತ್ತಿದ್ದರೆಂದು ತರ್ಕಿಸ ಬಹುದೆ ಹೊರತು, ಅದಕ್ಕಾಗಿ ಬೇರೆ ಇತಿಹಾಸಕಾರರನ್ನು ಸಲಹಿದ ಉದಾಹರಣೆಗಳು ವಿರಳವೆಂದೇ ಹೇಳಬಹುದು. ನಮ್ಮ ರಾಷ್ಟ್ರೀಯ ಮಹಾಕಾವ್ಯಗಳಾದ ರಾಮಾಯಣ ಮಹಾಭಾರತಗಳು ಐತಿಹಾಸಿಕ ಸಂಗತಿಗಳಿಂದ ತುಂಬಿ ತುಳುಕುತ್ತಿದ್ದರೂ ನಿಜವಾದ ಇತಿಹಾಸಗಳಲ್ಲ—ಪದ್ಯಮಯವಾಗಿ ಬರೆಯಲ್ಪಟ್ಟವೆ ಎಂಬ ಕಾರಣ ದಿಂದಲ್ಲ, ಕಾವ್ಯಮಯವಾಗಿ ರಚಿತವಾಗಿವೆ ಎಂಬ ದೃಷ್ಟಿಯಿಂದ. ಹೀಗೆಯೆ ಸಂಸ್ಕೃತದಲ್ಲಿಯೂ ಹಲವು ದೇಶೀಯ ಭಾಷೆಗಳಲ್ಲಿಯೂ ರಚಿತವಾದ ಪುರಾಣಗಳಲ್ಲಿ ನಿಜವಾದ ಐತಿಹಾಸಿಕ ಸಂಗತಿಗಳೆಷ್ಟೋ ಅಡಕವಾಗಿದ್ದರೂ ಅವುಗಳಲ್ಲಿ ಹಲವು ಕಟ್ಟುಕಥೆಗಳೂ, ಅಮಾನುಷಕೃತಿಗಳೂ, ಮೂಢಕಲ್ಪನೆಗಳೂ, ಹಾಸುಹೊಕ್ಕಾಗಿ ಬೆರೆತಿರುವುದರಿಂದ ಆ ಕೃತಿಗಳನ್ನು ಇತಿಹಾಸವೆಂದು ಎಣಿಸಲಾಗುವುದಿಲ್ಲ. ಸಂಸ್ಕೃತದಲ್ಲಿ ದೊರೆಯುವ ಹರ್ಷಚರಿತ, ವಿಕ್ರಮಾಂಕ ಚರಿತ, ರಾಜತರಂಗಿಣಿ, ಮತ್ತು ಕನ್ನಡದಲ್ಲಿ ದೊರಕುವ ಚಿಕದೇವರಾಜ ವಿಜಯ, ಕೆಳದಿ ನೃಪವಿಜಯ, ಚಿಕದೇವರಾಜ ವಂಶಾವಳಿ—ಇವೇ ಮೊದಲಾದುವು ಬಹಳವಾದರೆ ಜೀವನ ಚರಿತ್ರೆಗಳೆಂದು ಗ್ರಹಿಸಲು ಬರಬಹುದೇ ಹೊರತು ಕೇವಲ ಇತಿಹಾಸಗಳೆಂದು ಹೇಳಲಾಗುವುದಿಲ್ಲ: ಆದರೆ ಅವುಗಳಲ್ಲಿಯೂ ಕಾವ್ಯದ ಅಂಶವೇ ಹೆಚ್ಚು.

ಇನ್ನು, ಇತಿಹಾಸವನ್ನು ರಚಿಸುವ ಬುದ್ಧಿ ಮಾನವಪ್ರಾಣಿಯಲ್ಲಿ ಮೊದಲಿಂದಲೂ ಸ್ವಭಾವಸಿದ್ಧವಾಗಿ ಬಂದಿದೆ ಎಂಬ ವಾದವನ್ನು ಒಪ್ಪುವುದಾದರೆ, ಪುರಾತನಕಾಲದಿಂದಲೂ ಭರತಖಂಡದಲ್ಲಿ ಎಲ್ಲೆಲ್ಲಿಯೂ ಗೋಚರವಾಗುವ ಬಗೆ ಬಗೆಯ ಗೋರಿಗಳೂ, ಅವುಗಳ ಮೇಲೆ ಕಟ್ಟಿದ ಸ್ತೂಪಗಳೂ, ನೆಡಸಿದ ಸ್ತಂಭಗಳೂ, ವೀರಗಲ್ಲುಗಳೂ, ಮಾಸತಿಕಲ್ಲುಗಳೂ, ಶಿಲಾಶಾಸನಗಳೂ, ತಾಮ್ರಪಟಗಳೂ, ಗುಡಿಗೋಪುರಗಳೂ, ಸ್ಮಾರಕ ಕಟ್ಟಡಗಳೂ, ಪ್ರಯಾಸದಿಂದ ಹುಡುಕಿದರೆ ಸಿಕ್ಕ ಬಹುದಾದ ಸ್ಥಳ ಪುರಾಣಗಳೂ, ಅನಾಯಾಸವಾಗಿ ಜನರ ಬಾಯಲ್ಲಿ ನಲಿಯುವ ಕಥೆಗಳೂ, ಹಾಡುಗಳೂ—ಇವೆಲ್ಲವನ್ನೂ ಇತಿಹಾಸವೆಂದು ಹೇಳಬಹುದು: ಆದರೆ ಇವು ನಿಜವಾಗಿಯೂ ಇತಿಹಾಸಕ್ಕೆ ಬೇಕಾಗುವ ಸಾಮಗ್ರಿಗಳಾಗಬಹುದೇ ಹೊರತು ಇತಿಹಾಸ ಗ್ರಂಥಗಳಾಗಲಾರವು.

ಇತ್ತೀಚೆಗೆ ಇತಿಹಾಸವು ವಿದ್ಯಾರ್ಥಿಗಳ ವಿದ್ಯಾಭ್ಯಾಸಕ್ರಮದಲ್ಲಿ ಸೇರ್ಪಡೆಯಾಗಿದೆ; ಪರೀಕ್ಷೆಯ ವಿಷಯವೆಂದು ಅಂಗೀಕೃತವಾಗಿದೆ; ಇದರ ಪರಿಣಾಮವಾಗಿ ಆಯಾ ಭಾಷೆಗಳಲ್ಲಿ ಹಲವು ಐತಿಹಾಸಿಕ ಗ್ರಂಥಗಳು ಅಸ್ತಿತ್ವದಲ್ಲಿ ಬಂದಿವೆ. ಆದರೆ ಇವೆಲ್ಲ ಪರೀಕ್ಷೆಯ ದೃಷ್ಟಿಯಿಂದ ಬರೆದುವಾದುದರಿಂದಲೂ ಬಹುತರ ವಿದೇಶೀಯ ಪಂಡಿತರ ಮೂಲಗ್ರಂಥಗಳ ಅನುವಾದಗಳೊ ಭಾಷಾಂತರಗಳೊ ಆಗಿರುವುದರಿಂದಲೂ ಇಲ್ಲಿ ಇವುಗಳ ವಿಚಾರವನ್ನು ಮಾಡುವ ಕಾರಣವಿಲ್ಲ.

ಭರತಖಂಡದಲ್ಲಿಯ ಈ ಪರಿಸ್ಥಿತಿಗೆ ವಿಪರೀತವಾಗಿ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಬಹು ಪ್ರಾಚೀನಕಾಲದಿಂದಲೂ ಇತಿಹಾಸಕ್ಕೆ ಉಚ್ಚತಮವಾದ ಸ್ಥಾನವನ್ನು ಕೊಡಲಾಗಿದೆ. ಅಲ್ಲಿ ಇತಿಹಾಸದ ಬರೆವಣಿಗೆಗೆ ಆವಶ್ಯಕವಾದ ಸಾಧನ ಸಂಪತ್ತಿ ವಿಪುಲವಾಗಿ ದೊರೆಯುವುದಲ್ಲದೆ ಶ್ರೇಷ್ಠವರ್ಗದ ಇತಿಹಾಸಗ್ರಂಥಗಳೂ ಹೇರಳವಾಗಿ ಉಪಲಬ್ಧವಾಗಿವೆ. ಗ್ರೀಕ್ ಮತ್ತು ರೋಮನ್ ರಾಜ್ಯಗಳಲ್ಲಿ ಜಗತ್ಪ್ರಸಿದ್ಧರಾದ ಇತಿಹಾಸಕಾರರು ಕ್ರಿಸ್ತಶಕ ಪೂರ್ವಕಾಲದಲ್ಲಿಯೆ ಉದಯಹೊಂದಿದ್ದಾರೆ. ಗ್ರೀಸಿನಲ್ಲಿ ಹಿಕೇಟಿಯಸ್, (ಇತಿಹಾಸದ ಜನಕನೆಂದು ಪ್ರಸಿದ್ಧನಾದ) ಹಿರೊಡೋಟಸ್, ಥ್ಯುಸಿಡೈಡಿಸ್—ಈ ಮುಂತಾದವರೂ, ರೋಮಿನಲ್ಲಿ (ಗ್ರೀಕನಾದರೂ ರೋಮಿನ ಇತಿಹಾಸವನ್ನು ಬರೆದ) ಪೊಲಿಬಿಯಸ್, (ಜಗಜ್ಜೇತೃಗಳಲ್ಲಿ ಶ್ರೇಷ್ಠನೆನಿಸಿಕೊಂಡ) ಜ್ಯೂಲಿಯಸ್ ಸೀಝರ್, ಅವನ ಸಮಕಾಲೀನನಾದ ಸ್ಯಾಲಸ್ಟ್, ಲಿವ್ವಿ, ಟ್ಯಾಸಿಟಸ್—ಈ ಮೊದಲಾದವರೂ ಆಯಾ ರಾಜ್ಯಗಳಲ್ಲಿ ನಡೆದ ಬೇರೆಬೇರೆ ಐತಿಹಾಸಿಕ ಪ್ರಸಂಗಗಳನ್ನು ಕುರಿತು ಬರೆದ ಇತಿಹಾಸಗ್ರಂಥಗಳು ಇನ್ನೂ ಓದುಗರ ನಿಚ್ಚಬೇಡಿಕೆಯಲ್ಲಿವೆ. ಹೀಗೆಯೆ ಫ್ರಾನ್ಸ್, ಜರ್ಮನಿ, ಇಟಲಿ ಇವೆ ಮೊದಲಾದ ದೇಶಗಳಲ್ಲಿಯೂ ಒಳ್ಳೊಳ್ಳೆ ಇತಿಹಾಸಕಾರರು ಜನಿಸಿದ್ದಾರೆ. ಇಂಗ್ಲಂಡಿನಲ್ಲಂತೂ ಹ್ಯೂಮ್, ಗಿಬನ್, ಲೆಕಿ, ಕಾರ್ಲೈಲ್, ಮೆಕಾಲೆ, ಗ್ರೀನ್, ಫಿಶರ್, ವೆಲ್ಸ್, ಟ್ರ್ಯಾವ್ಹೆಲಿಯನ್—ಇವರೇ ಪ್ರಮುಖರಾದ ಮೇಲ್ತರಗತಿಯ ಇತಿಹಾಸಕಾರರ ಅವಿಚ್ಛಿನ್ನ ಪರಂಪರೆಯೆ ನಡೆದುಬಂದಿದೆ. ಈ ಪ್ರಕಾರ 'ಇತಿಹಾಸ'ವೆಂಬ ಬರೆವಣಿಗೆಯು ಅದೊಂದು ಮಾದರಿ ಸುಮಾರು ಎರಡು ಸಾವಿರ ವರ್ಷಕಾಲ ಅನೇಕ ಪಾಶ್ಚಾತ್ಯ ಬರೆಹಗಾರರ ಕೈಯಲ್ಲಿ ಸಾಗಿಬಂದಿರುವುದರಿಂದ ಬರೆಯುವವರ ದೃಷ್ಟಿಕೋನವು ಬೇರೆಬೇರೆಯಾದಂತೆ ಇತಿಹಾಸದ ಸ್ವರೂಪವೂ ಉದ್ದೇಶವೂ ಕಾಲಕಾಲಕ್ಕೆ ಮಾರ್ಪಾಟಾಗುತ್ತ ಬಂದಿರುವುದರಲ್ಲಿ ಸಂದೇಹವಿಲ್ಲ. ಅಲ್ಲದೆ, ಇತಿಹಾಸಕಾರರೂ ಇತಿಹಾಸಪಂಡಿತರೂ ಇತಿಹಾಸದ ಗೊತ್ತುಗುರಿಗಳನ್ನೂ ಲೇಖನ ಪದ್ಧತಿಯನ್ನೂ ಕುರಿತು ವಿವೇಚನೆ, ವಾದವಿವಾದ, ಲೇಖನ ಮೊದಲಾದುವುಗಳನ್ನು ಪ್ರತ್ಯೇಕವಾಗಿಯೆ ಮಾಡಿದುದೂ ಕಂಡುಬರುತ್ತದೆ. ಆದುದರಿಂದ ಇನ್ನು ಮುಂದೆಯಾದರೂ ನಮ್ಮಲ್ಲಿ ಒಳ್ಳೆಯ ಇತಿಹಾಸಗಳು ಹುಟ್ಟಬೇಕೆನ್ನುವವರು ಇತಿಹಾಸದ ಬಗ್ಗೆ ಪಾಶ್ಚಾತ್ಯರ ಕಲ್ಪನೆಗಳೇನಿವೆಯೆಂಬುದನ್ನು, ಸಂಕ್ಷಿಪ್ತವಾಗಿಯೆ ಆಗಲೊಲ್ಲದೇಕೆ, ತಿಳಿದುಕೊಳ್ಳುವುದು ಅವಶ್ಯವಾಗಿದೆ.

'ಇತಿಹಾಸ' ಎಂಬ ಶಬ್ದವನ್ನು ಬರೆವಣಿಗೆಯಲ್ಲಿಯೂ ಮಾತಿನಲ್ಲಿಯೂ ಎರಡು ಬೇರೆಬೇರೆ ಅರ್ಥಗಳಲ್ಲಿ ಬಳಸುವುದುಂಟು. 'ನಮ್ಮ ದೇಶದಲ್ಲಿಯ

ಅನೈಕ್ಯತೆಗೆ ನಮ್ಮ ಇತಿಹಾಸವೇ ಕಾರಣ' ಎಂಬಲ್ಲಿ 'ಇತಿಹಾಸ' ಶಬ್ದಕ್ಕೆ 'ಇತಿಹಾಸ ಗ್ರಂಥಗಳು' ಎಂಬರ್ಥವಲ್ಲ: 'ಜರುಗಿದ ಸಂಗತಿಗಳು' ಎಂಬ ಅರ್ಥ. ಎರಡನೆಯದಾಗಿ, 'ಇಂಗ್ಲಂಡಿನ ಇತಿಹಾಸ, ಕರ್ನಾಟಕದ ಇತಿಹಾಸ' ಇತ್ಯಾದಿ ಸಂದರ್ಭಗಳಲ್ಲಿ 'ಇತಿಹಾಸ' ಎಂಬುದು 'ಆಯಾ ನಾಡುಗಳಲ್ಲಿ ಸಂಭವಿಸಿದ ಮಹತ್ವದ ಸಂಗತಿಗಳನ್ನು ಕುರಿತು ಬರೆದ ಗ್ರಂಥ' ಎಂಬರ್ಥವನ್ನು ಕೊಡುತ್ತದೆ. ಈ ಎರಡನೆಯ ಅರ್ಥವೆ ಸರಿಯಾದುದೆಂಬುದು 'ಇತಿಹಾಸ' ಶಬ್ದದ ಉತ್ಪತ್ತಿಯಿಂದಲೆ (ಇತಿ, ಹ, ಆಸ=ಹೀಗೆಯೆ ನಡೆಯಿತು) ಸೂಚಿತವಾಗುತ್ತದೆ. ಈ ಶಬ್ದಕ್ಕೆ ಇಂಗ್ಲಿಷಿನಲ್ಲಿ ಬಳಸುವ 'ಹಿಸ್ಟರಿ' (History) ಎಂಬುದು ಗ್ರೀಕ್ ಭಾಷೆಯ ಶಬ್ದದಿಂದ ಬಂದುದೆಂತಲೂ ಆ ಶಬ್ದದ ಮೂಲಾರ್ಥವು 'ವಿಚಾರ' (inquiry) ಎಂತಲೂ ಭಾಷಾ ಪಂಡಿತರು ಹೇಳುತ್ತಾರೆ. ಆದುದರಿಂದ ಒಟ್ಟಿನಲ್ಲಿ ಇತಿಹಾಸವು ಸತ್ಯಾನ್ವೇಷಣವನ್ನೆ ಸೂಚಿಸುತ್ತೆಂಬುದರಲ್ಲಿ ಸಂದೇಹವಿಲ್ಲ. ಇತಿಹಾಸವೆಂದರೆ ಯಾವುದೇ ಸಂಗತಿಯ ಯಥಾರ್ಥಜ್ಞಾನವೆಂದು ಹೇಳಬಹುದು.

ಇಲ್ಲಿ— ಇತಿಹಾಸದ ವಿಷಯವೇನು, ಯಾವುದನ್ನು ಕುರಿತು ಇತಿಹಾಸವು ಯಥಾರ್ಥಜ್ಞಾನವನ್ನು ಮಾಡಿಕೊಡುವ ಪ್ರಯತ್ನಮಾಡುತ್ತದೆ— ಎಂಬ ಪ್ರಶ್ನೆ ಉದ್ಭವಿಸುತ್ತದೆ. ನಿಜವಾಗಿ ನೋಡಿದರೆ ಇತಿಹಾಸಕ್ಕೆ ಇಂತಹದೆ ವಿಷಯವೆಂಬ ನಿಯಮವಿಲ್ಲ. ಕಾಲ ಹಾಗೂ ನೆಲ ಇವುಗಳ ಅವಧಿಯಲ್ಲಿ ಬರುವ ಯಾವುದಾದರೂ ಇತಿಹಾಸದ ವಿಷಯವಾಗಬಹುದು. 'ಜಗತ್ತಿನ ಇತಿಹಾಸ, ಜ್ಯೂ ಜನರ ಇತಿಹಾಸ, ಸತ್ಯಾಗ್ರಹದ ಇತಿಹಾಸ, ಗಣಿತಶಾಸ್ತ್ರದ ಇತಿಹಾಸ, ಇತಿಹಾಸದ ಇತಿಹಾಸ'—ಈಯಿಾ ಬಗೆಯಾಗಿ ಹೇಳುವಲ್ಲಿ ಆತಂಕವೇನೂ ಇಲ್ಲ. ಆದರೆ ರೂಢಿಯಲ್ಲಿ ಬರಿಯ 'ಇತಿಹಾಸ'ವೆಂದು ಹೇಳಿದಾಗ ಮಾನವಪ್ರಾಣಿಗಳನ್ನು ಕುರಿತ ಇತಿಹಾಸವೆಂದೇ ತಿಳಿವಳಿಕೆ. ಸಂಕುಚಿತವಾದ ಈ ಅರ್ಥದಲ್ಲಿಯಾದರೂ ಇತಿಹಾಸದ ಎಲ್ಲೆ ಬಹು ವಿಶಾಲವಾಗಿದೆ. ಮನುಷ್ಯನ ಅನುಭವದ ಹಿಡಿತಕ್ಕೆ ಸಿಕ್ಕುವ ಎಲ್ಲಾ ಸಂಗತಿಗಳೂ ಆತನ ಎಲ್ಲಾ ಕೃತಿಗಳೂ ಅವುಗಳ ಪರಿಣಾಮಗಳೂ ಇತಿಹಾಸದ ಪರಿವಿಡಿಯಲ್ಲಿ ಬರುತ್ತವೆ. ಆದುದರಿಂದ 'ಇತಿಹಾಸ' ಎಂಬ ಶಬ್ದಕ್ಕೆ ಬೇರೆಬೇರೆ ವಿಶೇಷಣಗಳನ್ನು ಜೋಡಿಸಿಯೆ ಆಯಾ ವಿಷಯಗಳನ್ನು ನಿರ್ಧರಿಸಬೇಕಾಗುತ್ತದೆ. ಆಗ 'ರಾಜಕೀಯ ಇತಿಹಾಸ, ಧಾರ್ಮಿಕ ಇತಿಹಾಸ, ಸಾಂಸ್ಕೃತಿಕ ಇತಿಹಾಸ' ಹೀಗೆ ಇತಿಹಾಸದ ಬೇರೆ ಬೇರೆ ಭಾಗಗಳು ಉಂಟಾಗುತ್ತವೆ. ಇನ್ನು ಯಾವುದಾದರೊಂದು ದೇಶದ ಇತಿಹಾಸವೆಂದು ಹೇಳಿದಾಗ ಆಯಾ ದೇಶದಲ್ಲಿ ಆಗಿಹೋದ ಅರಸರ ಚರಿತ್ರೆ, ಅವರು ಎಸಗಿದ ಯುದ್ಧ, ಅವುಗಳ ಪರಿಣಾಮ ಮುಂತಾದ ರಾಜಕೀಯ ಸಂಗತಿಗಳೇ ಅದರಲ್ಲಿ ಸೇರ್ಪಡೆಯಾಗುವುದು ವಾಡಿಕೆಯಾಗಿದೆ. ಆಯಾ ಕಾಲದ ಸಾಮಾಜಿಕ ಜೀವನ, ಆರ್ಥಿಕ ಆಂದೋಲನ, ಸಾಹಿತ್ಯ-ಕಲೆ-ಸಂಸ್ಕೃತಿ ಇವುಗಳ ಸ್ಥಿತಿಗತಿ— ಈ ಸಂಗತಿಗಳನ್ನೂ ಆಯಾ ದೇಶದ ಇತಿಹಾಸಗಳು ಒಳಕೊಂಡಿರಬೇಕೆಂಬ ತತ್ವ ಪಾಶ್ಚಾತ್ಯರಲ್ಲಿಯೂ ಇತ್ತೀಚೆಗೆ ಅಂಗೀಕೃತವಾಗಿದೆ.

ಬರೆಹಗಾರನ ದೃಷ್ಟಿಯಿಂದ ಇತಿಹಾಸದ ಗುರಿಯೇನು, ಓದುಗರ ನೋಟದಲ್ಲಿ

ಅದರ ಉದ್ದೇಶವೇನು — ಎಂಬೀ ಪ್ರಶ್ನೆಗಳ ವಿವೇಚನೆಯೊಡನೆಯೇ ಇತಿಹಾಸದ ನಿಜಸ್ವರೂಪವೇನು ಎಂಬ ಪ್ರಶ್ನೆಯ ವಿಚಾರವನ್ನೂ ಪಾಶ್ಚಾತ್ಯರು, ಅದರಲ್ಲಿಯೂ ಆಂಗ್ಲೇಯರು, ಕ್ರಿ. ಶ. ೧೯ನೆಯ ಶತಮಾನದಲ್ಲಿ ಕೈಕೊಂಡುದು ಕಂಡುಬರುತ್ತದೆ. ೧೯ನೆಯ ಶತಮಾನವೆ ಈಗಿನ ವೈಜ್ಞಾನಿಕ ಯುಗಕ್ಕೆ ಮೊದಲಾದುದರಿಂದ, ಎಲ್ಲ ಬಗೆಯ ವಿವೇಚಕರು ತಮ್ಮ ತಮ್ಮ ವಿಷಯಗಳನ್ನು ವಿಜ್ಞಾನದ ಒರೆಗೆ ಹಚ್ಚುವ ಪ್ರಯತ್ನಮಾಡಿದುದು ಆ ಶತಮಾನದ ಲಕ್ಷಣವಾಗಿದೆ. ಇತಿಹಾಸದ ನೆಲೆ-ಕಲೆಗಳನ್ನರಿಯಲು ಮಾಡಿದ ಆ ಕಾಲದ ವಿವೇಚನೆಯಲ್ಲಿಯೂ ಈ ಪರಿಣಾಮ ಕಂಡುಬರುತ್ತದೆ. ಆದುದರಿಂದ, 'ಇತಿಹಾಸವು ಕಾರ್ಯಕಾರಣಗಳ ಸಂಶೋಧನ ವನ್ನು ಮಾಡುವ ಶಾಸ್ತ್ರ' ಎಂದು ಕೆಲವರು; 'ಇತಿಹಾಸವು ಹಿಂದಣ ಸಂಗತಿಗಳ ಯಥಾರ್ಥಜ್ಞಾನವನ್ನು ಮಾಡಿಕೊಡುವುದಲ್ಲದೆ ಇಂದಿನ ಸಮಸ್ಯೆ ಗಳನ್ನು ಬಗೆಹರಿಸಬಲ್ಲುದು, ಮೇಲಾಗಿ ಮುಂದಿನ ಆಗುಹೋಗುಗಳನ್ನೂ ಸೂಚಿಸ ಬಲ್ಲದು, ಆದುದರಿಂದ ಅದು ವಿಜ್ಞಾನವರ್ಗಕ್ಕೆ ಸೇರಿದುದು' ಎಂದು ಬೇರೆ ಕೆಲವರು; 'ಇತಿಹಾಸವು ತತ್ತ್ವಜ್ಞಾನವನ್ನು ಉದಾಹರಣೆಗಳ ಮೂಲಕ ಕಲಿಸುವು ದಾದುದರಿಂದ ಅದೂ ತತ್ತ್ವಜ್ಞಾನವೇ' ಎಂದು ಮತ್ತೆ ಕೆಲವರು; 'ಇತಿಹಾಸವು ತತ್ತ್ವಜ್ಞಾನವಾಗಲಿ ವಿಜ್ಞಾನವಾಗಲಿ ಆಗಲಾರದು, ಹಿಂದಣ ಸಂಗತಿಗಳನ್ನು ಎದ್ದು ಕಾಣುವಂತೆ ಚಿತ್ರಿಸಬೇಕಾದರೆ ಒಳ್ಳೆಯ ಮಾರ್ಮಿಕವಾದ ಕಲೆ ಬೇಕು, ಆ ಕಲೆ ಚೆನ್ನಾಗಿ ಸಾಧಿಸಿದಲ್ಲಿ ಇತಿಹಾಸವು ಸಾಹಿತ್ಯವಾಗಬಹುದು' ಎಂದು ಇನ್ನೂ ಕೆಲವರು ವಾದಮಾಡಿದ್ದಾರೆ. ಇತಿಹಾಸವು ವಿಜ್ಞಾನ ಇಲ್ಲವೆ ಶಾಸ್ತ್ರ ಎಂಬ ಅಭಿಪ್ರಾಯವನ್ನು ಅನುಮೋದಿಸುವವರಲ್ಲಿ ಇತಿಹಾಸಪಂಡಿತರೆ ಹೆಚ್ಚು. ಈ ಬಗೆಯ ವಾದವಿವಾದ ಗಳು ಇನ್ನೂ ಪೂರ್ತಿಯಾಗಿ ನಿಂತಿಲ್ಲವಾದರೂ ಇವುಗಳ ಮಥಿತಾರ್ಥವು ಒಂದು ಸ್ಥಿಮಿತಕ್ಕೆ ಬಂದು ನಿಂತಂತಿದೆ.

'ಒಂದೇ ತೆರನಾದ ಹಲವು ಸಂಗತಿಗಳನ್ನು ಒಂದೆಡೆಮಾಡಿ, ಅವುಗಳಲ್ಲೆಲ್ಲ ತೋರಬಹುದಾದ ಅವುಗಳಿಗೆಲ್ಲ ಸಾಮಾನ್ಯವಾದ ಒಂದು ನಿಯಮವನ್ನೊ ಪ್ರಮೇಯವನ್ನೊ ಕಂಡುಹಿಡಿದು, ಆ ಪ್ರಮೇಯದ ಇಲ್ಲವೆ ನಿಯಮದ ಬಲದಿಂದ ಇಂತಿಂತಹ ಪರಿಸ್ಥಿತಿಯಲ್ಲಿ ಇಂತಹ ಸಂಗತಿಗಳೇ ಜರುಗಲಾಪುವು ಎಂಬ ಭವಿಷ್ಯವನ್ನು ಹೇಳುವ ಲಕ್ಷಣವುಳ್ಳುದೇ ವಿಜ್ಞಾನ' ಎಂದು ನಾವು ಎಣಿಸಿದಲ್ಲಿ, ಹಾಗೂ ವಿಜ್ಞಾನವು ಅನುಸರಿಸತಕ್ಕ ಪದ್ಧತಿಗಳಲ್ಲಿ ನಿರೀಕ್ಷಣ, ಪ್ರಯೋಗ ಇವುಗಳಿಗೆ ಮಹತ್ವವಿರುವು ದೆಂಬುದನ್ನು ಗಮನಿಸಿದಲ್ಲಿ ಇತಿಹಾಸವು ಈ ಬಗೆಯ ವಿಜ್ಞಾನವೆಂದಿಗೂ ಆಗಲಾರದು. ಏಕೆಂದರೆ, ಯಾವುದೊಂದು ಐತಿಹಾಸಿಕ ಪ್ರಸಂಗವನ್ನು ಕುರಿತು ಎಷ್ಟು ಆಧಾರ ಗಳನ್ನು ಕಲೆಹಾಕಿದರೂ ಎಲ್ಲ ಆಧಾರಗಳೂ ಇತಿಹಾಸಕಾರನಿಗೆ ದೊರಕಿದುವೆಂದು ಹೇಳಲಾಗುವುದಿಲ್ಲ. ಜಗತ್ತಿನ ಸ್ವರೂಪವನ್ನೆ ಮಾರ್ಪಡಿಸಿರಬಹುದಾದ ಸಂಭಾಷಣೆ ಗಳು ನಡೆದಿರಬಹುದು. ಅವುಗಳನ್ನು ಆಗಿಂದಾಗಳೆ ಯಾರೂ ಬರೆದಿಟ್ಟಿರಲಾರರು. ಹೀಗೆ ಪ್ರಸಂಗವು ಹೆಚ್ಚು ಪುರಾತನವಾದಂತೆ ಅದನ್ನು ಇದ್ದಕಿದ್ದಂತೆ ಚಿತ್ರಿಸುವುದು ಎಂತಹ ಪ್ರಾಮಾಣಿಕ ಇತಿಹಾಸಕಾರನಿಗೂ ಅಸಾಧ್ಯವಾಗುವುದು. ಅಲ್ಲದೆ ಯಾವು ದೊಂದು ಸಂಗತಿಗೆ ಗೊತ್ತಾಗಿದ್ದ ಒಂದೆರಡು ಕಾರಣಗಳು ನಿಜವಾದ ಇಲ್ಲವೆ

ಮುಖ್ಯವಾದ ಕಾರಣಗಳಿಂದು ಹೇಳಲಾಗುವುದಿಲ್ಲ. ಇದೂ ಅಲ್ಲದೆ ರಸಾಯನ ವಿಜ್ಞಾನದಂತೆ ಪ್ರಯೋಗವನ್ನೊ ಅಥವಾ ಖಗೋಲ ವಿಜ್ಞಾನದಂತೆ ನಿರೀಕ್ಷಣ ವನ್ನೊ ಇತಿಹಾಸ ರಚನೆಯ ರೀತಿಯೆಂದು ಅಂಗೀಕರಿಸಲಾಗುವುದಿಲ್ಲ.

ಆದರೆ ಆವುದಾದರೊಂದು ವಿಷಯವನ್ನು ಕುರಿತು ದೊರೆಯಬಹುದಾದ ತಿಳಿವಳಿಕೆಗಳನ್ನೆಲ್ಲ ಕಟ್ಟುನಿಟ್ಟುಗಳಿಗೆ ಒಳಪಡಿಸಿ ಕ್ರೋಡೀಕರಿಸಿರುವುದೂ ವಿಜ್ಞಾನ ವೆನಿಸುವುದೆಂದು ಹೇಳಲಾಗುತ್ತದೆ. ವಿಜ್ಞಾನದ ಈ ವಿಭಾಗಕ್ಕೆ 'ಶಾಸ್ತ್ರ'ವೆಂದು ಬೇಕಾದರೆ ಹೆಸರಿಡಬಹುದು. ಇಂತಹ ಶಾಸ್ತ್ರಕ್ಕೆ ಭೂಶಾಸ್ತ್ರವನ್ನು (Geology) ಉದಾಹರಣೆಯಾಗಿ ಕೊಡಬಹುದು. ಇತಿಹಾಸವೂ ಇದರಂತೆ ಬಂದ ವಿಮರ್ಶನ ಶಾಸ್ತ್ರವಾಗಬಹುದು. ಭೂಮಿಯ ಕಲ್ತರಗಳ ಮಧ್ಯದಲ್ಲಿ ಪ್ರಕೃತಿಯು ಲಕ್ಷೋಪ ಲಕ್ಷ ವರ್ಷಗಳಿಂದ ಒಟ್ಟಿಕೊಳ್ಳುತ್ತ ಬಂದಿದ್ದ ಅವಶೇಷಗಳ ರಾಶಿಗಳಲ್ಲಿ ತಮಗೆ ದೊರಕಬಹುದಾದ ಹಳೆಯುಳಿಮೆಗಳನ್ನು ಸಂಗ್ರಹಿಸಿ, ಪರಿಶೀಲಿಸಿ ಅವುಗಳ ದ್ವಾರಾ ಹಿಂದೆ ಜರುಗಿದ ಪ್ರಾಕೃತಿಕ ಕಾರ್ಯಗಳ ಸ್ವರೂಪ ಪರಿಣಾಮ ಮೊದಲಾದು ವುಗಳನ್ನು ಆ ಶಾಸ್ತ್ರಜ್ಞರು ಕಂಡುಹಿಡಿಯಲು ಯತ್ನಿಸುವಂತೆ, ಎಲ್ಲವನ್ನೂ ತಿಂದು ತೇಗುವ ಕಾಲನ ದವಡೆಗೆ ತುತ್ತಾಗದೆ ಉಳಿದಿದ್ದ ಕಾಗದಪತ್ರ, ಶಾಸನ, ಜಾನಪದ ವೃತ್ತಾಂತ ಮೊದಲಾದ ಸಾಧನ ಸಾಮುಗ್ರಿಗಳನ್ನು ಸಂಗ್ರಹಿಸಿ, ಅವಲೋಕಿಸಿ, ಪರೀಕ್ಷಿಸಿ ಅದರಿಂದ ದೊರೆತ ತಿಳಿವಳಿಕೆಗಳ ಅಸ್ತಿಭಾರದ ಮೇಲೆ ಇತಿಹಾಸದ ಕಟ್ಟಡಗಳನ್ನು ಕಟ್ಟಬೇಕಾಗುತ್ತದೆ. ಇಂತಹ ಸಾಧನಸಾಮುಗ್ರಿಗಳಿಗೆ ನೈಜ ಬೆಲೆಯಿಲ್ಲದಿದ್ದರೂ ಇವು ಇತಿಹಾಸರಚನೆಗೆ ಅವಶ್ಯವಾಗಿ ಬೇಕಾಗುವ ಮೂಲದ್ರವ್ಯ ಗಳಾದುದರಿಂದ ಇತಿಹಾಸಕಾರರು ಇವುಗಳನ್ನು ಶೇಖರಿಸುವುದಕ್ಕೆ ಬಹು ಪ್ರಯಾಸ ಪಡಬೇಕಾಗುವುದಲ್ಲದೆ, ಇವುಗಳಲ್ಲಿ ಸೇರ್ಪಡೆಯಾಗಿರಬಹುದಾದ ಹಲವು ಅಬದ್ಧ ಗಳನ್ನು ತೆಗೆದುಹಾಕುವುದಕ್ಕಾಗಿ ತಮ್ಮ ಕೈಯಿಂದಾದಮಟ್ಟಿಗೂ ಯತ್ನಿಸ ಬೇಕಾಗುತ್ತದೆ. ಇಷ್ಟಾದರೆ ಅವರ ಸಂಶೋಧನ ಕಾರ್ಯವು ಪೂರೈಸಿದಂತಾಗಲಿಲ್ಲ. ಇವೆಲ್ಲಕ್ಕಿಂತ ಹೆಚ್ಚಾಗಿ ಆಯಾ ಪ್ರಸಂಗಗಳಲ್ಲಿ ಪ್ರತ್ಯಕ್ಷ ಪಾತ್ರವಹಿಸಿದ, ಆಯಾ ಕೃತಿಗಳನ್ನು ಎಸಗಿದ, ಆಯಾ ನೆನಪುಗಳನ್ನು ಕಾಯ್ದಿರಿಸಿದ ಜನರ ಮನೋಭಾವನೆ, ಉದ್ದೇಶ, ಆಕಾಂಕ್ಷೆ ಏನಿದ್ದುವೆಂಬುದನ್ನೂ ಇತಿಹಾಸಕಾರರು ಕಂಡುಹಿಡಿಯಲು ಪ್ರಮಾಣಪೂರ್ವಕವಾಗಿ ಪ್ರಯತ್ನಿಸಬೇಕಾಗುತ್ತದೆ. ಇದು ಆಯಾ ಕಾಲದಲ್ಲಿದ್ದ ವರಿಗೂ ಕಷ್ಟಸಾಧ್ಯವಾದ ಕಾರ್ಯವಾದುದರಿಂದ ಹಿಂದಣಿಂದ ಬಂದ ಇತಿಹಾಸ ಕಾರರಿಗೆ ಇನ್ನೂ ಕಠಿಣವಾದುದೆಂಬುದರಲ್ಲಿ ಸಂದೇಹವಿಲ್ಲ. ಆದರೂ ಇದನ್ನು ಧ್ಯೇಯವಾಗಿಟ್ಟುಕೊಂಡು ಸಾಧಿಸಲು ತವಕಪಡುವುದು ಅವರ ಆದ್ಯಕರ್ತವ್ಯವಾಗಿದೆ.

ಇತಿಹಾಸಕಾರನು ಸಾಮಾನ್ಯವಾಗಿ ವರ್ತಮಾನಕಾಲವನ್ನು ಅನುಲಕ್ಷಿಸಿ ಇತಿಹಾಸರಚನೆಯ ಕಾರ್ಯವನ್ನು ಕೈಕೊಳ್ಳಬೇಕಾಗುತ್ತದೆ. ಏಕೆಂದರೆ, ಒಮ್ಮೆ ಆಗಿಹೋದ ವಸ್ತುಗಳು ಪುನಃ ನಮ್ಮ ಕೈಗೆ ಸಿಕ್ಕಲಾರವು. ಅವುಗಳ ಅವಶೇಷಗಳೊ, ಪರಿಣಾಮುಗಳೊ, ಅವುಗಳಿಂದ ಹುಟ್ಟಿದ ಈಗ ಅಸ್ತಿತ್ವದಲ್ಲಿದ್ದ ಇತರ ವಸ್ತುಗಳೊ— ಇವೆ ಇತಿಹಾಸದ ಸಾಮುಗ್ರಿಗಳಾಗುವುವು. ಆದುದರಿಂದ ಸದ್ಯಸ್ತರಿಗೆ ಅಗತ್ಯವೆಂದೆ ನಿಸುವ ಸಮಸ್ಯೆ, ಮಹತ್ವದುವೆಂದೆನಿಸುವ ಹಿತಸಂಬಂಧ—ಇವುಗಳ ವಿವೇಚನೆಯೆ

ತನ್ನ ಗುರಿಯೆಂದು ಇತಿಹಾಸಕಾರರು ಇಟ್ಟುಕೊಳ್ಳಬೇಕಾಗುತ್ತದೆ. ತನ್ನ ಸದ್ಯಃಪರಿಸ್ಥಿತಿಯ ಪೂರ್ಣ ಅವಜ್ಞೆ ಮಾಡುವುದು ಇತಿಹಾಸಕಾರರಿಗೆ ಅಸಾಧ್ಯವೆಂದೂ ಅಸಾಧುವೆಂದೂ ಎಣಿಸಲಾಗಿದೆ. "All history is contemporary history, and all true historians are willy-nilly philosophers" (ಎಲ್ಲಾ ಇತಿಹಾಸವು ಅದ್ಯತನ ಇತಿಹಾಸ; ಎಲ್ಲಾ ನಿಜ ಇತಿಹಾಸಕಾರರು ತತ್ತ್ವವೇತ್ತರೇ ವಿನಾ ಮತ್ತೆ ಬೇರೆ ಅಲ್ಲ) ಎಂದು ಬೆನೆಡೆಟ್ಟೊ ಕ್ರೋಚೆ (Benedetto Croce) ಎಂಬ ಸುಪ್ರಸಿದ್ಧ ತತ್ತ್ವಜ್ಞಾನಿಯು ಅಭಿಪ್ರಾಯಪಟ್ಟಿದ್ದಾನೆ.

ಇತಿಹಾಸಲೇಖನದ ಪೂರ್ವಸಿದ್ಧತೆಯನ್ನು ಇತಿಹಾಸಕಾರನು ಮೂರು ಹಂತಗಳಿಂದ ಮಾಡಿಕೊಳ್ಳಬೇಕಾಗುತ್ತದೆ: (೧) ತಾನು ಸಮಾಲೋಚಿಸಲಿಕ್ಕೆಂದು ಇಟ್ಟುಕೊಂಡ ವಿಷಯಕ್ಕೆ ಸಂಬಂಧಿಸಿದ ಸಂಗತಿಗಳನ್ನೆಲ್ಲ ಕೂಡಿಹಾಕುವುದು ಮೊದಲನೆಯದು. ಇಂತಹ ಸಂಗತಿಗಳು ಅಸಂಖ್ಯಾತವಾಗಿರಬಹುದು. ಯಾವುವೂ ನಿರರ್ಥಕವೆನಿಸದಿದ್ದರೂ ಎಷ್ಟೋ ಕ್ಷುಲ್ಲಕವಾಗಿರಬಹುದು. ಅಂಥವುಗಳನ್ನು ಬಿಟ್ಟು ಮಹತ್ವದುವೆನಿಸಿದ ಸಂಗತಿಗಳನ್ನು ಆಯ್ದುಕೊಳ್ಳುವುದು ಅವಶ್ಯವಾಗುತ್ತದೆ; ಇದಕ್ಕೆ ಯಾವುದಾದರೊಂದು ತತ್ತ್ವವನ್ನು ಅವಲಂಬಿಸಬೇಕಾಗುತ್ತದೆ. ಅಂತಹ ಆವ ತತ್ತ್ವವನ್ನು ಇದುವರೆಗಿನ ಇತಿಹಾಸಕಾರರು ಅವಲಂಬಿಸಿರುವರೆಂಬುದನ್ನು ನಿಶ್ಚಿತವಾಗಿ ಹೇಳಲಾಗುವುದಿಲ್ಲ. ಹಿಂದಣವರು ಅಸಾಧಾರಣವಾದ ಪರಿಸ್ಥಿತಿ, ದುರಂತವಾದ ಸಂಗತಿ, ಉದಾತ್ತವೆನಿಸಿದ ಚರಿತ್ರ—ಇವುಗಳನ್ನೆ ಎತ್ತಿಕೊಳ್ಳುತ್ತಿದ್ದರೆನ್ನಬಹುದು. ಆಧುನಿಕರು ಮನುಷ್ಯನ ಈಗಿನ ಸಮಾಜ ಪರಿಸ್ಥಿತಿಯನ್ನು ಅನುಲಕ್ಷಿಸಿ ಅದಕ್ಕೆ ಅನುಗುಣವಾದ ಸಂಗತಿಗಳನ್ನೆ ಆರಿಸಿಕೊಳ್ಳುವ ಪ್ರವೃತ್ತಿಯುಳ್ಳವರಾಗಿದ್ದಾರೆ ಎಂದು ಹೇಳಬಹುದು. ಇದು ದೃಷ್ಟಿಕೋನದಲ್ಲಿಯೆ ಆದ ಅಂತರವನ್ನು ಸೂಚಿಸುತ್ತದೆ. ಆದರೆ ಯಾವ ಗುರಿಯನ್ನಿಟ್ಟುಕೊಂಡರೂ ಉಪಯೋಗಮಾಡಬಹುದಾದ ಸಾಮುಗ್ರಿಗಳು ಮಾತ್ರ ನಿರ್ದುಷ್ಟವಾಗಿರಬೇಕೆಂಬಲ್ಲಿ ಯಾವ ಶಂಕೆಯೂ ಇಲ್ಲ. ಈ ಸಾಮುಗ್ರಿಗಳಲ್ಲಿ, ನಾವು ಹಿಂದೆ ಹೇಳಿದಂತೆ, ಆಯಾ ಕಾಲದ ಸಾಧನಗಳೂ ಆಯುಧಗಳೂ, ಸ್ಮಾರಕಗಳೂ ಕಟ್ಟಡಗಳೂ, ಚಿತ್ರಗಳೂ ಶಿಲ್ಪಗಳೂ, ಬಾಯ ಮಾತುಗಳೂ ಶಾಸನಗಳೂ ಕಾಗದಪತ್ರಗಳೂ —ಇವೇ ಮುಂತಾದುವುಗಳು ಸಮಾವೇಶವಾಗುತ್ತವೆ. (೨) ಆದುದರಿಂದ ಈ ಇತಿಹಾಸ ಸಾಮುಗ್ರಿಗಳನ್ನು ಬಳಸುವ ಮೊದಲು ಇವುಗಳ ಪ್ರಾಮಾಣಿಕತೆಯನ್ನು ಕುರಿತು ಯೋಗ್ಯ ವಿಮರ್ಶೆ ಮಾಡಬೇಕಾಗುತ್ತದೆ. ಅದರಲ್ಲಿಯೂ ಕಾಗದಪತ್ರಗಳು ಇತಿಹಾಸಕ್ಕೆ ಅತ್ಯಾವಶ್ಯಕವಾದ ಸಾಧನಗಳಾದುದರಿಂದ ಅವುಗಳು ನಂಬಲರ್ಹವಾದುವೇ, ಕೈಯಿಂದ ಕೈಗೆ ಬರುವಲ್ಲಿ ಅವಕ್ಕೆ ಯಾವ ಚ್ಯುತಿಯೂ ಉಂಟಾಗಿಲ್ಲವೇ, ಅವುಗಳಲ್ಲಿ ಸೇರ್ಪಡೆಯಾದ ಸಂಗತಿಗಳು ಸಟೆಯೆ ದಿಟವೇ, ಅವುಗಳನ್ನು ಬರೆದವರ ನೈತಿಕ-ಬೌದ್ಧಿಕ ಸ್ಥಿತಿಗತಿಗಳು ಸಮಾಧಾನಕರವಾಗಿದ್ದುವೇ—ಎಂಬೀ ಪ್ರಶ್ನೆಗಳನ್ನು ಸರಿಯಾಗಿ ನಿರ್ಣಯಿಸಿಕೊಳ್ಳಬೇಕಾಗುತ್ತದೆ. (೩) ಆಮೇಲೆ ಹೀಗೆ ಆರಿಸಿಕೊಂಡ ಆಧಾರಗಳ ಆಶಯವೇನು, ಅವುಗಳ ಪರಸ್ಪರ ಸಂಬಂಧದಿಂದ ಹೊರಡುವ ಇತ್ಯರ್ಥವೇನು—ಎಂಬುವನ್ನೂ ನಿರ್ಧರಿಸಬೇಕಾಗುತ್ತದೆ.

ಈ ಬಗೆಯಾಗಿ ಮಾಡಬೇಕಾದ ಅನುಮಾನಕಾರ್ಯ (interpretation) ಎಷ್ಟು ಮಹತ್ವದುದೋ ಅಷ್ಟೇ ಪ್ರಯಾಸಕರವಾದುದು. ಈ ಕಾರ್ಯಕ್ಕೆ ವೈಜ್ಞಾನಿಕರಿಗೂ ತತ್ವವೇತ್ತರಿಗೂ ಕೂಡಿಯೇ ಬೇಕಾಗುವ ಬುದ್ಧಿಸಾಮರ್ಥ್ಯ ಹಾಗೂ ಕಲ್ಪನಾಶಕ್ತಿ —ಇವುಗಳ ಹಿತವಾದ ಸಮ್ಮೇಳನವು ಅತ್ಯಾವಶ್ಯಕ. ಆದರೆ ಇವು ಸತ್ಯದ ಇಕ್ಕಟ್ಟಿನಲ್ಲಿ ಪ್ರವಹಿಸಬೇಕಾಗುತ್ತದೆ. ಮೇಲಾಗಿ, ನಡೆನುಡಿಗಳಲ್ಲಿ, ಆಚಾರ ವಿಚಾರಗಳಲ್ಲಿ ನಮ್ಮಿಂದ ತೀರ ಭಿನ್ನವಾದ ಪುರಾತನ ಕಾಲಗಳ ಇತಿಹಾಸ ರಚನೆಯಲ್ಲಂತೂ ಆಯಾ ಪರಿಸ್ಥಿತಿಗಳನ್ನು ಸರಿಯಾಗಿ ತಿಳಿದುಕೊಳ್ಳುವ ಸೌಹಾರ್ದ ಭಾವವೂ ಬೇಕಾಗುತ್ತದೆ. ಇತಿಹಾಸಕಾರನು ವೈಜ್ಞಾನಿಕರಂತೆ ನಿಷ್ಕಾಮ ನಿರೀಕ್ಷಣೆಯನ್ನು ಎಸಗಲಾರನು; 'ನಿಷ್ಪಕ್ಷಪಾತ'ವಾದ ಅಭಿಪ್ರಾಯವನ್ನು ಪ್ರಕಟಿಸಲಾರನು, ಆದುದರಿಂದ ಇವನಿಗೆ ಮೈತುಂಬ ಎಚ್ಚರಿಕೆ ಬೇಕು; ಸಂಪೂರ್ಣ ಪ್ರಾಮಾಣಿಕತನ ಬೇಕು. ಅದಕ್ಕಿಂತ, ಒಂದು ಸಂಗತಿಯ ನಿಜಸ್ವರೂಪವು ಓದುಗರಿಗೆ ತಿಳಿಯಬೇಕಾದರೆ ಬೇರೆ ಬೇರೆ ದೃಷ್ಟಿಗಳನ್ನಿಟ್ಟುಕೊಂಡು ಹಲವು ಇತಿಹಾಸಕಾರರೂ ಬೇಕು.

ಮೇಲ್ಕಂಡ ರೀತಿಯಲ್ಲಿ ತನಗೆ ಬೇಕಾದ ತಿಳಿವಳಿಕೆಗಳನ್ನೆಲ್ಲ ಸಂಗ್ರಹಿಸಿದ ಮೇಲೆ ಇತಿಹಾಸಕಾರನು ಕೊನೆಯದಾಗಿ ಇತಿಹಾಸಲೇಖನ ಕಾರ್ಯವನ್ನು ಕೈಕೊಳ್ಳಬೇಕಾಗುವುದು. ತಾನು ಊಹಿಸಿದ ಪ್ರಮೇಯಗಳನ್ನೂ ನಿರ್ಧರಿಸಿದ ಸಿದ್ಧಾಂತಗಳನ್ನೂ ಓದುಗರಿಗೆ ಮನದಟ್ಟಾಗುವಂತೆ ಪರಿಣಾಮಕಾರಕವಾದ ಶೈಲಿಯಲ್ಲಿ ಹೇಳಬೇಕಾಗುವುದು. ತಾನು ಚಿತ್ರಿಸಲು ಕೈಕೊಂಡ ಸಂಗತಿಗಳ ಕಾರ್ಯಕಾರಣ ಸಂಬಂಧವನ್ನು ತೋರಿಸುವಲ್ಲಿ, ಪರಿಣಾಮಗಳನ್ನು ವಿವರಿಸುವಲ್ಲಿ ಅಂಗಾಂಗಗಳಲ್ಲಿ ವಿರೋಧ ಬಾರದಂತೆ ಹೊಂದಿಕೆಯಾಗುವಂತೆ ರಚನೆಮಾಡುವಲ್ಲಿ ಇತಿಹಾಸಕಾರನಲ್ಲಿ ಗ್ರಥನ ಕೌಶಲವೂ ಬೇಕಾಗುವುದು. ಬಹುಪುರಾತನಕಾಲದ ಸಂಗತಿಗಳನ್ನು ಕುರಿತು ವಿವೇಚಿಸುವಾಗ ಕಾರ್ಯಕಾರಣ ಸಂಬಂಧವನ್ನು ಕಂಡು ಹಿಡಿಯುವುದು ಯಾವಾಗಲೂ ಸುಲಭವಲ್ಲ; ಅವುಗಳ ಪರಿಣಾಮಗಳು ಎಷ್ಟೋ ಕಡೆಗಳಲ್ಲಿ ಈ ಕಾಲದಲ್ಲಿಯೂ ಕಂಡುಬರುವ ಸಂಭವವಿರುವುದಿಲ್ಲ. ಅಂತಹ ಪರಿಸ್ಥಿತಿಯಲ್ಲಿ ಆ ಸಂಗತಿಗಳು (ಅಥವಾ ಕಾರ್ಯಗಳೂ, ಚರಿತ್ರೆಗಳೂ) ಕೇವಲ ಸಂಗತಿಗಳೆಂದೇ ಓದುಗರಿಗೆ ಇಷ್ಟವಾಗಿರುತ್ತವೆ. ಆಗ ಅವುಗಳನ್ನು ವರ್ಣಿಸುವಲ್ಲಿ ಇತಿಹಾಸಕಾರನ ಕಥನಸರಣಿಯು ಮೇಲ್ತರಗತಿಯದಾಗಿರಬೇಕು. ಅಂತೂ,

'ಪದಪದದಕ್ಕರಕ್ಕರದ ವಾಕ್ಯದ ವಾಕ್ಯದ ವಿಶ್ರಮಂ ಲಯಂ
ಪುದಿದ ಬೆಡಂಗಿನಿಂ ಪುರುಳಿದಿರ್ಚಿ ಪಳಚ್ಚನೆ ಮಿಂಚಿ ತೋರಿತತ್ತದು'

ಎಂಬಂತೆ ಬರೆಯುವ ಶಕ್ತಿ ಇತಿಹಾಸಕಾರನದೂ ಆಗಿರಬೇಕು. ಆದುದರಿಂದ ಇತಿಹಾಸವು ಒಳ್ಳೆಯ ಮಾರ್ಮಿಕವಾದ ಕಲೆಯೆಂದೇ ಹೇಳಬಹುದು. ಈ ಕಲೆ ಬಹು ಚೆನ್ನಾಗಿ ಸಾಧಿಸಿದರೆ ಇತಿಹಾಸವು ಸಾಹಿತ್ಯದ ಮಟ್ಟಕ್ಕೆ ಏರುವಲ್ಲಿ ಸಂದೇಹವಿಲ್ಲ. ಭರತಖಂಡದಲ್ಲಿ ಸಕಲ ವಿದ್ಯೆಗಳಿಗೆ ಭಾರತಿಯೊಬ್ಬಳೆ ಅಧಿದೇವತೆಯಾಗಿದ್ದಾಳೆ; ಆದರೆ ಪ್ರಾಚೀನ ಗ್ರೀಸಿನಲ್ಲಿ ಒಂಬತ್ತು ಬೇರೆ ಬೇರೆ 'ರಾಗಿಣಿ' (Muses) ಗಳೆಂಬ ದೇವತೆಗಳ ಕಲ್ಪನೆ ಇದ್ದಿತು. ಅವರಲ್ಲಿ ಒಬ್ಬಳಾದ 'ಕ್ಲಿಯೊ' (Clio) ಎಂಬವಳು ಇತಿಹಾಸದ ಮುಖ್ಯ ದೈವತವಾಗಿದ್ದಳು. ಈ ಕಲ್ಪನೆಯೂ ಇತಿಹಾಸವು ಶುದ್ಧ ಸಾಹಿತ್ಯದ ಭಾಗವಾಗಬಲ್ಲದೆಂಬ ಮಾತನ್ನೆ ಸಮರ್ಥಿಸುತ್ತದೆ.

ಹೀಗೆ ಇತಿಹಾಸದಲ್ಲಿ ವಿಜ್ಞಾನದ, ಕಲೆಯ, ಸಾಹಿತ್ಯದ ಒಳ್ಳೆಯ ಲಕ್ಷಣಗಳು ಬೆರೆತಿರುವುದರಿಂದ, ಬರೆಯುವವರೂ ಓದುಗರೂ ಕೂಡಿಯೆ ತಂತಮ್ಮ ದೃಷ್ಟಿಗೆ ಗೋಚರವಾದಂತೆ ಅದನ್ನು ಬೇರೆ ಬೇರೆಯಾಗಿ ಭಾವಿಸುತ್ತ ಬಂದಿರುವುದರಲ್ಲಿ ಆಶ್ಚರ್ಯವಿಲ್ಲ. ಈ ಎಲ್ಲ ಲಕ್ಷಣಗಳೂ ಹಿಂದೆ ಆಗಿಹೋದ ಆವನೊಬ್ಬ ಇತಿಹಾಸಕಾರನಲ್ಲಿ ಇಲ್ಲವೆ ಒಂದು ಇತಿಹಾಸಗ್ರಂಥದಲ್ಲಿ ಕಾಣದಿದ್ದರೂ ನಿಜವಾದ ಇತಿಹಾಸದಲ್ಲಿ ಈ ಲಕ್ಷಣಗಳೆಲ್ಲವೂ ಇರಬೇಕೆಂಬುದೇ ಈಗಿನವರ ಮತ. ಈ ದೃಷ್ಟಿಯಿಂದಲೆ ಇನ್ನು ಮುಂದೆ ಇತಿಹಾಸಗಳು ಕನ್ನಡದಲ್ಲಿಯೂ ರಚಿತವಾಗಬೇಕೆಂಬುದೇ ಈ ಲೇಖನದ ಉದ್ದೇಶ.

**ಶಿ. ಶಿ. ಬಸವನಾಳ್**





# ಚರಿತ್ರೆಯ ರೀತಿ

"ಚರಿತ್ರೆಯೆಂಬುದು ಶಾಸ್ತ್ರವೇ ಕಲೆಯೇ?" ಎಂಬ ಪ್ರಶ್ನೆಗೆ ಟೇಯ್ಟ್ ಸಾಹೇಬರು ಪರೀಕ್ಷಕರಾಗಿದ್ದರೆ 'ಶಾಸ್ತ್ರವಲ್ಲ'ವೆಂದೇ ಸಮರ್ಥಿಸಬೇಕಾಗಿದ್ದಿತಂತೆ. ಕಾರಣವೇನೆಂದರೆ ಆ ಸಾಹೇಬರು ಶಾಸ್ತ್ರಾಭ್ಯಾಸದ ನೆಲೆಗೆ ಅಧ್ಯಕ್ಷರಾಗಿದ್ದುದು; ಅದಲ್ಲದಿದ್ದರೆ ಆ ಸಾಹೇಬರ ವಿರೋಧಿಗಳು "ಚರಿತ್ರೆಯೆಂಬುದು ಶಾಸ್ತ್ರ"ವೆಂದು ಹೇಳಿದುದು! ಪರೀಕ್ಷಕರ ಪ್ರಭಾವವೆಂಬ ಮೋಹಪ್ರಪಂಚದಲ್ಲಿ ಒದ್ದಾಡುವಾಗ ಯಥಾರ್ಥವಾದ ಉತ್ತರ ಯಾರಿಗೆ ಬೇಕು? ಮೋಹಪ್ರಪಂಚದಿಂದ ಹೊರಬಿದ್ದ ತರುವಾಯ ಚರಿತ್ರೆಯಲ್ಲಿ ಶಾಸ್ತ್ರಕಲೆಗಳೆರಡೂ ಸೇರಿರುವ ಅಂಶ ಗೋಚರವಾಯಿತು. ಸತ್ಯಪರೀಕ್ಷೆಯಿಂದ ಶುದ್ಧವಾಗಿಯೂ ಒಂದುಕ್ರಮಕ್ಕೊಗ್ಗಿ ಪರಿಷ್ಕೃತವಾಗಿಯೂ ಇರತಕ್ಕ ರೀತಿ ಹುಟ್ಟುವುದು ಶಾಸ್ತ್ರದಿಂದ. ನಿರೂಪಣೆಯಲ್ಲಿ ರಸವತ್ತಾಗಿರತಕ್ಕ ರೀತಿ ತೋರುವುದು ಕಲಾಭ್ಯಾಸದಿಂದ. ಇಷ್ಟು ಮಾತ್ರ ತಿಳಿದು ಸಾಹಿತ್ಯದಲ್ಲಿ ಚರಿತ್ರೆಗೆ ಪ್ರವೇಶವುಂಟೆಂದು ಹೇಳಿಕೊಳ್ಳುವ ವೇಳೆಗೆ ಸ್ವರ್ಗದಿಂದ ದೇವತೆಗಳಿಳಿದು ಬಂದು ಕಾಣಿಸಿಕೊಂಡಂತಾಯಿತು.

"ಏನಿರುತ್ತೆ ಚರಿತ್ರೆಯಲ್ಲಿ? ಅವನೆದ್ದ, ಇವನು ಬಿದ್ದ! ಆ ರಾಜನಿಗೆ ತಲೆ ಬೋಳು, ಈ ರಾಜನಿಗೆ ಜಗಳದ ಗೀಳು! ಈ ಕದನದಲ್ಲಿ ಇಷ್ಟು ಜನರನ್ನು ನರುಕಿದರು, ಆ ಲಡಾಯಿಯಲ್ಲಿ ಅಷ್ಟು ಮಂದಿ ಪರಾರಿಯಾದರು! ಅವನು ಹುಟ್ಟಿದ್ದು ಇಷ್ಟನೆ ಇಸವಿ, ಇವನು ಸತ್ತದ್ದು ಅಷ್ಟನೆ ಇಸವಿ! ಬರಿಯ ಬಗುಳೆ!" ಎನ್ನುತ್ತ ಸ್ವಂತ ದೃಷ್ಟಿಯಲ್ಲಿ ಜಾಣರಾದವರು ಒದರುವುದು ಸಾಮಾನ್ಯವಾಗಿಯೇ ಇರಬಹುದು. ಅಂತಹ ಜಾಣನಲ್ಲದ ಡಾಕ್ಟರ್ ಜಾನ್ಸನ್ ಕೂಡ "ಚರಿತ್ರಕಾರನಲ್ಲಿ ಯೋಗ್ಯತೆ ಯೇನೂ ಇಲ್ಲ. ನಿಜ ಹೇಳಿದಾಗ ಇತರರು ಹೇಳಿದ್ದನ್ನೇ ಹೇಳುವ ಕಿಸುಬಾಯಿದಾಸ ನಾಗಿರುತ್ತಾನೆ; ನಿಜ ಹೇಳದಿದ್ದಾಗ ಸುಳ್ಳುಗಾರನಾಗಿರುತ್ತಾನೆ" ಎಂದನಂತೆ. ಆತನ ಮೇಲೆ ಮಕಾಲೆಯಂತಹ ಎಷ್ಟೋ ಪಂಡಿತರು ತಮ್ಮ ಧ್ವಜವನ್ನೆತ್ತಿ ಆ ಮಾತುಗಳನ್ನು ಖಂಡಿಸಿ ಧ್ವಂಸಮಾಡಿದರು. ಆದರೆ ಚರಿತ್ರೆಬರೆದವರಲ್ಲಿಯೂ ಮೇಲು ಬೀಳುಗಳಿರುವುದರಿಂದ ಕೆಲವರು ಯಥಾ ಅಶಕ್ತಿ ಕಿಸುಬಾಯಿದಾಸರಾಗಿರ ಬಹುದು. ಮೇಲೆನಿಸಿಕೊಂಡವರಲ್ಲಿ ಕವಿಯ ಭಾವನಾಶಕ್ತಿ, ರಸಜ್ಞನ ರಸಾಸ್ವಾದನೆ, ತತ್ತ್ವಜ್ಞನ ಮರ್ಮಭೇದನ, ಕಾಲಜ್ಞನ ವಿಶಾಲದೃಷ್ಟಿಗಳಿಲ್ಲದಿದ್ದರೆ ಸಾಗುವುದಿಲ್ಲ. ರವೀಂದ್ರನಾಥರೋ, ಜವಾಹಿರಲಾಲರೋ ಚರಿತ್ರೆಯ ಸಂಬಂಧವಾದ ವಿಮರ್ಶೆಯ ನ್ನಾಗಲಿ ಪ್ರಬಂಧವನ್ನಾಗಲಿ ಬರೆದಾಗ ಬೆಳಕು ಬೀರುವುದು ಅದರಿಂದಲೇ. ಕಾಂಭೋಜಿ ರಾಗವೆಲ್ಲರಿಗೂ ಗೊತ್ತು. "ಏಮಿ ಮಾಯಮು" ಮನಸ್ಸಿನಲ್ಲಿಟ್ಟು ಮೂಲ್ಗುವವರೆಲ್ಲರೂ ಕಿಸುಬಾಯಿದಾಸರೇ. ಆದರೆ ಅದನ್ನೇ ಶ್ರೀ ಮುತ್ತಯ್ಯ ಭಾಗವತರೋ, ಟೈಗರ್ ವರದಾಚಾರ್ಯರೋ ಎತ್ತಿಕೊಂಡು ವಿಸ್ತರಿಸಿದಾಗ ಎಷ್ಟು ಹೊಸ ಜಗತ್ತು ಮನಸ್ಸಿಗೆ ಗೋಚರವಾಗಬಹುದು! ತಾನು ಮಾತನಾಡಿದ ವಿಷಯ ಜಾನ್ಸನ್ನನಿಗೆ ಗೊತ್ತಿರಲಿಲ್ಲ. ಜಾಣರೆಂದ ಗೆಳೆಯರಿಗೆ ವಿಷಯ ಗೊತ್ತಾಗಿಯೂ

ಇಲ್ಲ, ಗೊತ್ತಿಲ್ಲವೆಂಬುದೂ ಗೊತ್ತಾಗಿಲ್ಲ. "ಸಂಗೀತದಲ್ಲಿ ಕೆರೆಯು ನೀರಿದೆ" ಎಂದಹಾಗೆ.

ರಾಜರ ವೃತ್ತಾಂತಗಳಿಲ್ಲದ ಚರಿತ್ರೆಯ ಪುಸ್ತಕಗಳನ್ನು ಕಾಣಲಾಗುವುದಿಲ್ಲ. ಯುದ್ಧಗಳ ಸ್ಮರಣೆಯಿಲ್ಲದ ಚರಿತ್ರೆಗಳು ಔಷಧಕ್ಕೆ ಬೇಕೆಂದರೂ ಸಿಕ್ಕುವುದಿಲ್ಲ. ಚರಿತ್ರೆಯಲ್ಲಿ ಅವುಗಳೇಕಿರಬೇಕೆನ್ನುವುದಕ್ಕೆ ಪ್ರತ್ಯುತ್ತರ "ಜನರು ಜಗಳವಾಡುವುದೇಕೆ? ರಾಜರನ್ನು ನಿರ್ಮಿಸಿಟ್ಟುಕೊಂಡುದೇಕೆ?" ಎಂಬ ಪ್ರತಿಪ್ರಶ್ನೆ. ಯಾವನೋ ಒಬ್ಬನ ಚರಿತ್ರೆಯಾದರೂ ಯಾವುದೋ ಒಂದು ಗುಂಪಿನ ಚರಿತ್ರೆಯಾದರೂ ಉದ್ಯಮ ಪರಿಣಾಮಗಳನ್ನು ಹಿಡಿದು ಅವುಗಳ ರೂಪರೇಖೆಗಳನ್ನು ವಿವರಿಸಿಟ್ಟುಕೊಂಡು ಉದ್ಯಮಪೂರ್ವವಾದ ಕಾರಣಗಳನ್ನು ಹೊರಗೆಳೆದುಕೆಡವಿ ಮಾನವಜೀವನದ ಆಸೆ ದುರಾಸೆಗಳನ್ನೂ ನ್ಯಾಯಾನ್ಯಾಯಗಳನ್ನೂ ಪುಣ್ಯಪುರುಷಾರ್ಥಗಳನ್ನೂ ವಿವರಿಸಿ ತರ್ಕಿಸುವ ಕೆಲಸ ಚರಿತ್ರಕಾರನದು. ಪೃಥ್ವಿಯಲ್ಲಿ ನರನೆಂಬ ಜೀವಿಯು ಕಾಣಿಸಿಕೊಂಡನೇಲೇನಾಯಿತು? ಗುಂಪುಗಳೇಕೆ ತೋರಿದವು? ಗುಂಪು ಕಟ್ಟಿದ್ದು ಹೇಗೆ? ಗುಂಪಿನ ನಿಯಮಗಳೇನು? ನಿಯಮಗಳು ನಿಂತವೇ, ಬದಲಾದವೇ, ಸಿಂತೇ ಹೋದವೇ? ನರನಲ್ಲಿ ಹುಟ್ಟಿದ ಆಸೆಗಳೇನೇನು? ಯಾವ ಆಸೆ ಎಷ್ಟು ಮಾತ್ರ ಸಫಲವಾಯಿತು?— ಇತ್ಯಾದಿ ಪುಂಖಾನುಪುಂಖವಾದ ಪ್ರಶ್ನೆಗಳಿಗೆ ಸಮಾಧಾನವನ್ನೊಡ್ಡುವ ಕೆಲಸ ಚರಿತ್ರಕಾರನದು. ಅಶೋಕನೋ ಔರಂಗಜ್ಜೇಬನೋ ಒಬ್ಬಾತನ ವೃತ್ತಾಂತವಾದರೂ ಸರಿಯೆ, ದಶನಾಮಿ ಸಂನ್ಯಾಸಿಗಳೋ ಜೆಸೂಯಿತ ವ್ರತಿಗಳೋ ಒಂದು ಗುಂಪಿನ ಇತಿಹಾಸವಾದರೂ ಸರಿಯೆ— ಮಾನವವರ್ತನೆಯೇ ಚರಿತ್ರಕಾರನ ಕ್ಷೇತ್ರ.

ಮಾನವವರ್ತನೆ ಎಷ್ಟು ವಿಚಿತ್ರ, ಎಷ್ಟು ವಿಸ್ಮಯಕರ, ಎಷ್ಟು ವಿಪರೀತವೆಂದು ಸ್ವಲ್ಪದೂರ ಸಾಗುವುದರಲ್ಲಿಯೇ ಭಾಸವಾಗುವುದು. ದುಷ್ಟನಾದವನು ದುಷ್ಟನೇಕಾದನು? ಶಿಷ್ಟನಾದವನು ಶಿಷ್ಟನೇಕಾದನು? ಬಡವನು ಬಡವನೇಕಾದನು? ಯಾವನೋ ಒಬ್ಬ ಕುಂಟನು ನಾನಾ ದೇಶಗಳ ಜನರನ್ನು ನಡುಗಿಸಿದನೇ? ಮತ್ತೊಬ್ಬ ದೊರೆಯು ಬೆಳಗ್ಗೆ ಎದ್ದು ಒಂದು ಲೋಟಾ ವಿಷವನ್ನು ಕುಡಿಯುತ್ತಿದ್ದನೇ? ಲಡಾಯಿಯೇ! ಪರಸ್ಪರವಾಗಿ ನರುಕುವುದನ್ನು ಕರ್ತವ್ಯವೆಂದರೇ? ಅಧರ್ಮವನ್ನು ಧರ್ಮವೆಂದುಕೊಂಡರೇ? ನ್ಯಾಯವೆಂದು ಅನ್ಯಾಯವನ್ನು ಹಿಡಿದರೇ? ದುರಾಸೆಯಿಂದ ಹೀಗಾಗುವುದೇ? ಮತನಿಷ್ಠೆ ವಿಪರೀತವಾದರೆ ವಿಷ ಸಮಾನವೇ! ಒಂದು ಕಾಲದಲ್ಲಿ ಸುಗುಣವಾಗಿ ಶೋಭಿಸಿದ್ದುದು ಮತ್ತೊಂದು ಕಾಲದಲ್ಲಿ ದುರ್ಗುಣವೆನ್ನಿಸಿತೇ? ಇತ್ಯಾದಿಯಾಗಿ ವಿವೇಚನೆ, ತಾರತಮ್ಯಜ್ಞಾನ, ಲೋಕಾನುಭವಗಳು ಉಂಟಾಗುವುವು.

ವಿವೇಚನೆಯುನ್ನುಂಟುಮಾಡಿಕೊಡುವುದಲ್ಲದೆ ಚರಿತ್ರೆಯಲ್ಲಿ ರಸಾನುಭವವೆಷ್ಟು! ಭಾರತೀಯರಾದ ನಮಗೆ ಭಾರತವು ಕಾವ್ಯರೂಪದಲ್ಲಿರುವ ಇತಿಹಾಸ. ಮನಸ್ಸಿನ ಶಾಂತಿಸಮಾಧಾನಗಳಿಗಾಗಿಯೋ ಜನಸಾಮಾನ್ಯರ ರಂಜನೆಗಾಗಿಯೋ ಅನುಸಂಹಿತರಾದ ದೇವದೇವತೆಗಳನ್ನು ಬಿಟ್ಟರೆ ಚರಿತ್ರೆಯ ದಿವ್ಯಗ್ರಂಥ. ಕುರುಪಾಂಚಾಲರ ವೃತ್ತಾಂತವನ್ನು ರಸವತ್ತಾಗಿ ನಿರೂಪಿಸಿದ ಕಾವ್ಯ. ಫರಾನ್ಸೀ

ರಾಷ್ಟ್ರಪಲ್ಲಟವನ್ನು ಹಾಗೆಯೇ ರಸವತ್ತಾಗಿ ಬರೆದರೆ ಮಹಾಭಾರತದಂತಹ ನವರಸಭರಿತ ಕಾವ್ಯವಾಗಲಾರದೆ? ತಾರತಮ್ಯಜ್ಞಾನವನ್ನು ಒದಗಿಸಿಕೊಡುವುದಲ್ಲದೆ ರಸಾಸ್ವಾದನೆಗೆ ಮಹಾಸಾಗರದಂತಿರುವುದರಿಂದ ಚರಿತ್ರೆ ಎಲ್ಲರಿಗೂ ಬೇಕು. ನೀತಿ ತತ್ತ್ವಗಳನ್ನು ಹುಡುಕುವವನು ಚರಿತ್ರೆಯಲ್ಲಿ ಈಜಾಡಬೇಕು. ಗಣಿತಶಾಸ್ತ್ರವನ್ನು ಅಭ್ಯಾಸಮಾಡುವವನಿಗೂ ಗಣಿತದ ಚರಿತ್ರೆ ಬೇಕು. ತನ್ನ ಕೃತಿಗೆ ವಸ್ತುವ ನ್ನರಸುವ ಕಥೆಗಾರನಿಗೂ ನಾಟಕಕರ್ತನಿಗೂ ಚರಿತ್ರೆ ದೊಡ್ಡ ಖನಿಯ ಹಾಗೆ. ಸಾಮಾನ್ಯಜೀವನದಲ್ಲಿಯೂ ವೈದ್ಯನಿಗೆ ರೋಗಿಯ ಚರಿತ್ರೆ ಬೇಕು, ರೈತನಿಗೆ ನೆಲದ ಚರಿತ್ರೆ ಬೇಕು, ನ್ಯಾಯವಾದಿಗೆ ಫಿರ್ಯಾದಿಯ ಚರಿತ್ರೆಯಲ್ಲದೆ ಶಾಸನನಿಯಮಗಳ ಚರಿತ್ರೆಯೂ ಬೇಕು, ಕಡೆಗೆ ತಿರುಕರ ಸಮಸ್ಯೆಯನ್ನು ಪರಿಹರಿಸಲು ಯೋಚಿಸುವ ಸಭಿಕನಿಗೆ ತಿರುಪದ ಚರಿತ್ರೆ ಬೇಕು.

ಈ ರೀತಿಯಲ್ಲಿ ಎಲ್ಲರಿಗೂ ಬೇಕಾಗುವ ಚರಿತ್ರೆಯನ್ನು ಐರೋಪ್ಯರು ಬರೆದು ಕೊಳ್ಳುತ್ತ ಬೆಳಸುತ್ತ ಭಾರತೀಯಸಾಹಿತ್ಯರಾಶಿಯನ್ನು ಗೊತ್ತುಮಾಡಿಕೊಂಡಾಗ ಚರಿತ್ರೆಯೆಂಬುದೇ ಆ ರಾಶಿಯಲ್ಲಿಲ್ಲವೆಂದು ಕಂಡು ಆಕ್ಷೇಪಣೆಮಾಡಿದರು. ಈ ಆಕ್ಷೇಪಣೆಗೆ ಸಮಾಧಾನವೇನೆಂಬ ವಿಚಾರವು ಹಾಗಿರಲಿ. ಐರೋಪ್ಯರೇ ಭಾರತೀಯ ಚರಿತ್ರೆಯನ್ನು ಶೋಧಿಸಿ ಬರೆಯಲು ಮೊದಲಿಟ್ಟರು. ಅನೇಕಾನೇಕ ಗ್ರಂಥಗಳು ಸಿದ್ಧವಾದವು. ಆದರೆ ಭಾರತೀಯ ಚರಿತ್ರೆಯೆಂಬುದು ಕಾಲಕಳೆದಂತೆ ಹಿಂದುಹಿಂದಕ್ಕೆ ಬೆಳೆಯುತ್ತಹೋಯಿತು. ಅಜ್ಞಾತ ಮೂಲೆಗಳಲ್ಲಿ ಅಡಗಿದ್ದ ವಸ್ತು ಗಳೋ, ಪುಸ್ತಕಗಳೋ ಹೊರಕ್ಕೆ ಕಾಣಿಸಿಕೊಂಡಂತೆಲ್ಲ ತಿದ್ದುಪಾಡು ಬೇಕಾಯಿತು. ಈ ಮಧ್ಯೆ ಐರೋಪ್ಯರು ನಿಷ್ಪಕ್ಷಪಾತವಾಗಿ ಬರೆಯಲಿಲ್ಲವೆಂಬುದನ್ನು ತಿಳಿದು ಭಾರತೀಯರು ತಮ್ಮ ಚರಿತ್ರೆಯನ್ನು ತಾವೇ ಬರೆಯಲು ತೊಡಗಿದರು. ಸದ್ಯದಲ್ಲಿ ಐರೋಪ್ಯರು ಭಾರತೀಯ ಚರಿತ್ರೆಯ ಸಂಬಂಧವಾಗಿ ಬರೆಯುವುದನ್ನು ಬಿಟ್ಟಿಲ್ಲ; ಭಾರತೀಯರು ತೃಪ್ತಿಕರವಾಗಿ ಬರೆಯುವಹಾಗಿಲ್ಲ. ಐರೋಪ್ಯರ ಮನಸ್ಸಿನಲ್ಲಿ ಸ್ವಾಭಿಮಾನವು ನೆಲಸಿ ಪಕ್ಷಪಾತಕ್ಕೋ ದೃಷ್ಟಿಸಂಕೋಚನಕ್ಕೋ ಕಾರಣವಾದಂತೆ ಭಾರತೀಯರಿಗೂ ಮನಸ್ಸಿನಲ್ಲಿ ಮತ್ತೊಂದು ಬಗೆಯ ಅಭಿಮಾನ ಬೆಳೆಯಿತು. ರಾಷ್ಟ್ರಭಕ್ತಿಯೋ ಜಾತಿಭಕ್ತಿಯೋ ಪ್ರಾಂತಭಕ್ತಿಯೋ ವಿಪರೀತ ರೂಪವನ್ನು ತಾಳುವುದು ಸಾಮಾನ್ಯ. ಸ್ವಾಭಿಮಾನ ಪೋಷಕವಾಗಿ ಬರೆಯುವುದು ಧರ್ಮವೆಂದು ಐರೋಪ್ಯರು ಗ್ರಹಿಸಿ ಮುಗ್ಧರಾದಂತೆ ನಮ್ಮವರೂ ಮುಗ್ಧರಾದರು.

ಈ ಮಧ್ಯೆ ಐರೋಪ್ಯರಲ್ಲಿಯೇ ಚರಿತ್ರೆಯ ನಿರೂಪಣೆಯ ವಿಷಯದಲ್ಲಿ ದೃಷ್ಟಿವಿಪರ್ಯಾಸವಾಗಲಾರಂಭವಾಗಿತ್ತು. ಮಾನವಪ್ರಯತ್ನವನ್ನು ಕಾರಣ ಪರಿಣಾಮಗಳ ಸಹಿತವಾಗಿ ಬರೆಯುತ್ತ ಇದು ರಾಜಕೀಯವೆಂದೂ ಅದು ಸಾಮಾಜಿಕವೆಂದೂ ಇನ್ನೊಂದು ಧಾರ್ಮಿಕವೆಂದೂ ಮತ್ತೊಂದು ಆರ್ಥಿಕವೆಂದೂ ವಿಂಗಡಿಸಿಕೊಳ್ಳುವಾಗ ಪರಸ್ಪರಸಂಬಂಧವನ್ನು ಮರೆಯಲಾಗದೆಂದು ತಿಳಿದರು. ಚರಿತ್ರೆಯಲ್ಲಿ ಕೇವಲ ರಾಜಕೀಯ ಘಟನೆಗಳನ್ನು ವರ್ಣಿಸಿಕೊಳ್ಳುವುದು ಒಂದಂಶ ಮಾತ್ರವಾಯಿತೆಂದುಕೊಂಡು ಜೀವನಸರ್ವಸ್ವವೂ ಚರಿತ್ರೆಯಲ್ಲಿ ಚಿತ್ರಿತವಾಗ ಬೇಕೆಂದು ಪ್ರಾರಂಭಿಸಿದರು. ಯುದ್ಧಗಳನ್ನೂ ಜಗಳಗಳನ್ನೂ ಕಾಣದಂತೆ ನಿರಾತಂಕ

ವಾಗಿ ಬಾಳುತ್ತ "ನಮ್ಮ ಚರಿತ್ರೆಯೇ ಇಲ್ಲ" ಎಂದು ಹೇಳಿಕೊಳ್ಳಬಲ್ಲ ಜನರಿದ್ದರೆ ಅವರೇ ಸುಖಿಗಳೆಂದು ಒಬ್ಬ ತತ್ತ್ವಜ್ಞನು ಬೇಸತ್ತು ಹೇಳಿಕೊಂಡನು. ಮತ್ತೊಬ್ಬ ಖ್ಯಾತನು "ಎಲ್ಲಕ್ಕೂ ಮೂಲ ಹೊಟ್ಟೆಯ ಚಿಂತೆ. ಆರ್ಥಿಕ ಸ್ಥಿತಿಯೇ ಮುಖ್ಯ. ಕಾರಣಪರಿಣಾಮ ವಿಚಾರದಲ್ಲಿ ಎಲ್ಲವೂ ಅದರ ಸಂಬಂಧವಾದುದೇ" ಎಂದು ನೊವಲಿಟ್ಟನು. ಹೀಗಾಗಿ ಹಾಗಾಗಿ ರಾಷ್ಟ್ರಭಕ್ತಿಯನ್ನು ಉದ್ರೇಕಿಸುವಂತಹ ಚರಿತ್ರೆಗಳೇ ದುಷ್ಟವೆಂಬ ತೀರ್ಮಾನಕ್ಕೆ ಬಂದರು. ಆದರೆ ಚರಿತ್ರೆ ಬರೆಯುವಾಗ ರಾಷ್ಟ್ರಯೋಜನೆಯನ್ನು ಬಿಡಲಾರದಾದರು. ತಾವು ಐರೋಪ್ಯರೆಂಬ ಜಾತ್ಯಭಿಮಾನ ತೊಲಗದಾಯಿತು. ಸ್ವಂತದೇಶದ ಚರಿತ್ರೆಯನ್ನಲ್ಲದೆ ಇತರ ದೇಶ ವಿದೇಶಗಳ ಚರಿತ್ರೆಯನ್ನು ಬರೆಯುವಾಗಲೂ ಜಾತಿಯ ಹೆಮ್ಮೆ ಬಿಡದಾಯಿತು. ಒಟ್ಟು ಜಗತ್ತಿನ ಚರಿತ್ರೆಯನ್ನೂ ಐರೋಪ್ಯರು ಬರೆದರು. ಆದರೆ ಸರ್ವತೃಪ್ತಿಯನ್ನು ಬೀರುವಂತಹ ಗ್ರಂಥಗಳು ವಿರಳವೇ ಆದವು.

ಐರೋಪ್ಯರೊಪ್ಪಿದ ಧರ್ಮದಲ್ಲಿ ಸಹನ ದೊಡ್ಡದಲ್ಲ. ಸರ್ವಮುಕ್ತಿಯೆಂಬ ಭಾವನೆಯು ಅವರಿಗೆ ಕನಸಿನ ಸರಕಾಗಿ ಕೂಡ ಬಹುಕಾಲದವರೆಗೂ ಕಾಣಲಿಲ್ಲ. ನಿಷ್ಪಕ್ಷಪಾತವಾದ ಧರ್ಮತತ್ತ್ವಗಳನ್ನು ಕಟ್ಟಿಕೊಂಡವರು ಭಾರತೀಯರೊಬ್ಬರೇ ಇರಬಹುದು. ಆ ತತ್ತ್ವ ರೂಢಿಯಾಗಿ ಚಿತ್ತ ಸ್ವಾಸ್ಥ್ಯಕ್ಕೆ ಬಂದಾಗ ಇತಿಹಾಸವನ್ನು ಬರೆದರೆ ನಿಷ್ಪಕ್ಷಪಾತವಾಗಿದ್ದೀತೇನೋ! ಐರೋಪ್ಯರ ಚರಿತ್ರೆಯನ್ನು ಭಾರತೀಯನು ದೂರದೃಷ್ಟಿಯಿಂದ ಬರೆದಾಗ ಬೇರೆಯಾಗಿರುವುದಿಲ್ಲವೆ? ನಾನೂರು ವರ್ಷಕಾಲದಲ್ಲಿ ಐರೋಪ್ಯರು ತಮ್ಮ ಮೂಲೆಯಿಂದ ಹೊರಟು ಇತರ ಭೂಭಾಗಗಳನ್ನು ಆಕ್ರಮಿಸಿಕೊಂಡ ವೃತ್ತಾಂತದಲ್ಲಿ ನ್ಯಾಯಾನ್ಯಾಯಗಳನ್ನು ಭಾರತೀಯನೋ ಚೀನೀಯನೋ ವಿಮರ್ಶೆ ಮಾಡಿದಹಾಗೆ ಪ್ರಾಯಶಃ ಮತ್ತಾರೂ ಮಾಡಲಾರರು. ಆದರೆ ಇನ್ನೂ ಭಾರತೀಯರು ಪರಂಗಿಜನರ ಚರಿತ್ರೆಯನ್ನು ಸ್ವತಂತ್ರ ಬುದ್ಧಿಯಿಂದ ಬರೆಯಲು ತೊಡಗಿಲ್ಲ. ಜವಾಹಿರಲಾಲರೊಬ್ಬರು ಯಾವುದೋ ಕಾರಣಕ್ಕಾಗಿ ತಮ್ಮ ದೃಷ್ಟಿಯನ್ನು ದೇಶವಿದೇಶಗಳ ಇತಿಹಾಸದಲ್ಲಿ ಬೀರಿದರು. ಆದರೆ ಅವರೇ ಹೇಳಿಕೊಂಡಂತೆ ಅವರು ಇತಿಹಾಸಪಂಡಿತರಲ್ಲ.

ಸರ್ವಧರ್ಮಸಮನ್ವಯವನ್ನು ನೆರವೇರಿಸಿಕೊಳ್ಳುವ ವಿಶಾಲದೃಷ್ಟಿಯಿಂದ ಕಾಲಜ್ಞರರೀತಿಯಲ್ಲಿ ಭಾರತೀಯರು ಭಾರತೀಯಚರಿತ್ರೆಯನ್ನಾಗಲಿ ಇತರರ ಚರಿತ್ರೆಯನ್ನಾಗಲಿ ವಿಸ್ತಾರವಾಗಿ ರೂಪಿಸಿಕೊಳ್ಳುವ ಕಾಲ ಮುಂದೆ ಬರಲಿದೆ. ರಾಕ್ಷಸೀಕೃತ್ಯಗಳನ್ನು ರಾಕ್ಷಸವೆಂದೂ, ದೈವೀ ಕೃತ್ಯಗಳನ್ನು ದಿವ್ಯವೆಂದೂ ವಿಂಗಡಿಸತಕ್ಕ ಯೋಗ್ಯತೆ ಭಾರತೀಯನಿಗೆ ಸಾಧ್ಯ. ಎಂದಿಗಾದರೂ ಮನುಷ್ಯನ ಉದ್ಯಮಗಳಲ್ಲಿ ದೈವತ್ವಪಡೆಯುವ ಸಾಧನೆ ದೊಡ್ಡದು. ಆ ಸಾಧನೆ ಎಲ್ಲಿ ಯಾವ ಬಗೆಯಲ್ಲಿ ನಡೆದರೂ ಗುರುತಿಸಿ ಬೆಲೆಕಟ್ಟಬಲ್ಲವನು ಭಾರತೀಯನಲ್ಲದೆ ಮತ್ತಾರು? ಮಹಾಪುರುಷರ ವೃತ್ತಾಂತವೇ ಚರಿತ್ರೆಯ ತಿರುಳೆಂದು ಬ್ರಿಟಿಷ್ ಋಷಿ ಕಾರ್ಲೈಲನು ಹೇಳಿಕೊಟ್ಟ ಸೂತ್ರದ ಅನುಸರಣೆಯಾಗಬೇಕಾದುದು ಭಾರತೀಯರಿಂದ.

ಅಕ್ಬರಬಾದಷಹನ ಚರಿತ್ರೆಯನ್ನು ಬರೆಯುತ್ತ ಸ್ಮಿತ್ ಎಂಬ ಚರಿತ್ರಕಾರನು "ಅಕ್ಬರನನ್ನು ಮಹಾಪುರುಷನೆನ್ನುವುದಕ್ಕಿಂತ ಆತನ ಸಮಕಾಲೀನನಾದ

ತುಲಸೀದಾಸನನ್ನು ಮಹಾಪುರುಷನೆನ್ನಬೇಕು. ಅಕ್ಬರನಿಂದ ನಡೆದ ಕೆಲಸವನ್ನೂ ತುಲಸೀದಾಸನಿಂದ ನಡೆದ ಕೆಲಸವನ್ನೂ ಪರೀಕ್ಷಿಸಿ ನೋಡಿದವರಿಗೆಲ್ಲ ತುಲಸೀದಾಸನು ಎಷ್ಟು ಮಹತ್ವವುಳ್ಳವನೆಂದು ಮನಸ್ಸಿಗೆ ಭಾಸವಾಗುತ್ತದೆ'' ಎಂದು ಬರೆದನು. ಆತನು ಬರೆದ ಗ್ರಂಥಗಳೆಷ್ಟೋ ಆದರೂ ಆ ಒಂದು ಗ್ರಂಥವೇ ಸಮರ್ಪಕವೆನಿಸಿದುದು. ಆ ಗ್ರಂಥದಲ್ಲಿಯೂ ಈ ಒಂದು ವಾಕ್ಯ ಬರೆದ ಕ್ಷಣದಲ್ಲಿ ಆತನ ಮನಸ್ಸಿನಲ್ಲಿ ಪೌರಸ್ತ್ಯ ಪಾಶ್ಚಾತ್ಯಗಳನ್ನು ಮೀರಿದ ಚಿತ್ತವೃತ್ತಿ ತೋರಿತ್ತು. ಅದೇ ಭಾರತೀಯ ಚರಿತ್ರೆಯನ್ನು ಹ್ಯಾವೆಲ್ ಬರೆದುದನ್ನು ಕಂಡರೆ ಸ್ಮಿತ್ ಸಾಹೇಬನ ಚಿತ್ತವೃತ್ತಿಯೆಷ್ಟು ಕಠಿನದರ್ಪದಿಂದ ಕೂಡಿತ್ತೆಂಬುದು ಸ್ಪಷ್ಟವಾಗುವುದು. ಸಂಕಲ್ಪಶುದ್ಧಿಯುಳ್ಳ ಐರೋಪ್ಯರು ಭಾರತೀಯಚರಿತ್ರೆಯನ್ನು ಕೇಂಬ್ರಿಡ್ಜ್ ಹೆಸರಿಟ್ಟು ಆರು ಸಂಪುಟಗಳಾಗಿ ಬರೆದರು. ನಮ್ಮ ಭಾರತೀಯರಿಗೆ ಆ ಪುಸ್ತಕಗಳಲ್ಲಿ ಹೇರಳವಾದ ತಪ್ಪುಗಳು ಕಂಡುಬಂದರೂ ಇತ್ತೀಚೆಗೆ ಮಾತ್ರ ತಾವೇ ಪ್ರಯತ್ನದಲ್ಲಿ ತೊಡಗಿದ್ದಾರೆ.

ಭಾರತೀಯರು ತಮ್ಮ ದೇಶದ ಚರಿತ್ರೆಯನ್ನಲ್ಲದೆ ಇತರ ದೇಶಗಳ ಚರಿತ್ರೆಗಳನ್ನೂ ಸ್ವತಂತ್ರ ದೃಷ್ಟಿಯಿಂದ ಬರೆಯುವ ಕರ್ತವ್ಯವನ್ನು ತಾಳಬೇಕು. ಸ್ಥೂಲದೃಷ್ಟಿಯಿಂದ ಜಗನ್ಮಂಡಲವನ್ನು ಕಂಡು ಅದರ ಮಧ್ಯೆ ಭಾರತೀಯಸಂಸ್ಕೃತಿಯ ಸ್ಥಾನವನ್ನು ನಿರ್ಣಯಿಸಿಕೊಳ್ಳಬೇಕು. ನಿವೇದಿತಾ ಎಂಬ ಹೆಸರನ್ನಿಟ್ಟುಕೊಂಡು ನವಜನ್ಮವನ್ನು ತಾಳಿದ ಇಂಗ್ಲಿಷ್‌ಜಾತಿಯ ವಿದುಷೀಮಣಿಯಂತೆ ತಾವೂ ನವಜನ್ಮವನ್ನು ತಾಳಿ ಆಕೆ ಮೊದಲಿಟ್ಟ ಕೆಲಸವನ್ನು ಮುಂದುವರಿಸಬೇಕು.

**ಕಂದಾಡೆ ಕೃಷ್ಣಯ್ಯಂಗಾರ್**

# ವೀರಗಲ್ಲು — ಮಾಸ್ತಿಗಲ್ಲು

## (೧)

## ವೀರಗಲ್

ಒಂದೊಂದು ಕಾಲದಲ್ಲಿ ಒಂದೊಂದು ವಿಚಾರಕ್ಕೆ, ಆಚಾರಕ್ಕೆ, ತತ್ತ್ವಕ್ಕೆ ಒಂದೊಂದು ಬೆಲೆಯುಂಟು. ಜನರ ಮನೋಧರ್ಮಗಳು ಕಾಲಕಾಲಕ್ಕೆ ಬದಲಾವಣೆ ಹೊಂದುತ್ತ ಹೋಗುತ್ತವೆ. ಒಂದು ಕಾಲದ ಧರ್ಮ, ಆಚಾರ, ತತ್ತ್ವ ಇನ್ನೊಂದು ಕಾಲಕ್ಕೆ ಒಪ್ಪುವುದಿಲ್ಲ. ವೇದ ಕಾಲದ ದೇವರುಗಳೇ ಬೇರೆ; ಪುರಾಣ ಕಾಲದ ದೇವರುಗಳೇ ಬೇರೆ. ಒಂದು ಕಾಲದಲ್ಲಿ ದೇವರನ್ನು ಕುರಿತು ಶುದ್ಧ ಮನಸ್ಸಿನಿಂದ ಧ್ಯಾನಮಾಡಿದರೆ ಸಾಕಾಗಿತ್ತು. ಇನ್ನೊಂದು ಕಾಲದಲ್ಲಿ ಸರ್ವಸ್ವವನ್ನು ತ್ಯಾಗಮಾಡುವುದೇ ಪರಮಧರ್ಮವೆನಿಸಿತ್ತು. ಮತ್ತೊಂದು ಕಾಲ ಬಂತು; ತನ್ನ ದೇವರಿಗಾಗಿ, ತನ್ನ ಸ್ವಾಮಿಗಾಗಿ, ಸತ್ಕಾರ್ಯಕ್ಕಾಗಿ ಜೀವವನ್ನೂ ಕೊಡುವುದೇ ಪರಮೋತ್ತಮವಾದ ಧರ್ಮವೆಂಬ ನಂಬಿಕೆ ಜನರಲ್ಲಿ ಬೇರೂರಿತು; ಹಾಗೆ ಬಲಿದಾನಮಾಡುವ ಮನೋಧರ್ಮವೇ ಮಹಾಧರ್ಮವಾಗಿ ಕರ್ಣಾಟಕ ದೇಶದಲ್ಲಿ ಅದು ಜನರ ಪರಮಾಚಾರವಾಗಿದ್ದ ಕಾಲವೊಂದಿತ್ತು. ಆ ಕಾಲವನ್ನು ಕ್ಷಾತ್ರಯುಗವೆನ್ನಿ, ವೀರಯುಗವೆನ್ನಿ. ಕ್ರಿಸ್ತ ಶಕ ೬–೭ನೆಯ ಶತಮಾನದಿಂದ ಮೊದಲ್ಗೊಂಡು ಸರಿಸುಮಾರು ೧೩–೧೪ನೆಯ ಶತಮಾನದವರೆಗೂ ನಮ್ಮ ನಾಡು ವೀರಜೀವನಕ್ಕೇ ಹೆಚ್ಚು ಬೆಲೆ ಕೊಟ್ಟ ಹಾಗೆ ಕಂಡುಬರುತ್ತದೆ.

ಜೈನರಲ್ಲಿ 'ಸಲ್ಲೇಖನ'ವೆಂಬ ಒಂದು ವ್ರತವುಂಟು. ಇದಕ್ಕೆ ನಿರಶನ ವ್ರತವೆಂದೂ ಹೆಸರು. ಅವಸಾನಕಾಲ ಸಮಾಪಿಸಿತೆಂದು ಮನಸ್ಸಿಗೆ ತೋರಿದರೆ ಜೈನರು ಯಾವುದಾದರೊಂದು ಪವಿತ್ರ ಕ್ಷೇತ್ರಕ್ಕೆ ಹೋಗಿ ಧ್ಯಾನಮಾಡುತ್ತ ಕೂತುಬಿಡುವರು. ಊಟ ಮಾಡುವುದಿಲ್ಲ, ನೀರು ಕುಡಿಯುವುದಿಲ್ಲ. ದೇಹ ಬಿಟ್ಟು ಪ್ರಾಣ ತೊಲಗುವವರೆಗೂ ಕೂತೇ ಇರುವರು! ಜೀವನದಲ್ಲಿ ಬೇಸರವುಂಟಾದರೆ, ಚಿಕಿತ್ಸೆಗೆ ಮೀರಿದ ವ್ಯಾಧಿಗಳು ಬಂದರೆ, ಮತ್ತೆ ಯಾವುದಾದರೂ ವಿಪತ್ತೊದಗಿದರೆ ಜೈನರು 'ಸಲ್ಲೇಖನ'ಮಾಡುತ್ತಿದ್ದರು. [1]ಶ್ರವಣಬೆಳ್ಗೊಳದಲ್ಲಿ ಇಂತಹ 'ಸಲ್ಲೇಖನ'ದ ಅನೇಕ ಕಲ್ಲುಗಳನ್ನು ನೋಡಬಹುದು. ಆ ಕಲ್ಲುಗಳಲ್ಲಿ ಕೊರೆದಿರುವ ಶಾಸನಗಳು ಸಲ್ಲೇಖನ ಮಾಡಿದವರ ಕತೆಗಳನ್ನು ಹೇಳುತ್ತವೆ.

'ಕೀಳ್ಗುಂಟೆ'ಯೆಂಬುದು ಮತ್ತೊಂದು ಪದ್ಧತಿ. ಈ ಪದ್ಧತಿಯ ವಿವರಗಳನ್ನು ತಿಳಿಸಲು ಸಾಕಾದಷ್ಟು ಸಾಧನಗಳಿಲ್ಲವಾದರೂ ಇಂತಹ ಪದ್ಧತಿಯೊಂದಿತ್ತೆಂಬುದನ್ನು ಸೂಚಿಸುವ ಉದಾಹರಣೆಗಳು ಒಂದೆರಡಿವೆ. ದೊಡ್ಡಹುಂಡಿ[2]ಯ ಕಲ್ಲಿನಲ್ಲಿ (ತಿರುಮಕೂಡಲುನರಸೀಪುರದ ತಾಲ್ಲೂಕು ಶಾಸನ) ಗಂಗರಾಜ ನೀತಿಮಾರ್ಗನು ಇಹಲೋಕವನ್ನು ತ್ಯಜಿಸುವ ಚಿತ್ರವೊಂದಿದೆ. ಆ ಕಲ್ಲಿನ ಶಾಸನದಿಂದ

[1] *Epigraphia Carnatica*, Sravanabelgola Volume.
[2] ,, ,, Mysore Dist. Tn. No. 91.

ಅವನ 'ಮನೆಮಗರ್ತಿ'ಯೊಬ್ಬನು — ಸಮುಖದ ಉದ್ಯೋಗಿಯು ತನ್ನೊಡೆಯ ನೊಂದಿಗೇ ಪ್ರಾಣಬಿಟ್ಟನೆಂದು ತಿಳಿದುಬರುತ್ತದೆ. ಅರಸನು ಸಾಯಲು ಶವ ಸಂಸ್ಕಾರಮಾಡಿದರಷ್ಟೆ. ಆಗ 'ಮನೆಮಗರ್ತಿ'ಯೂ ತನ್ನ ಸ್ವಾಮಿಯೊಂದಿಗೇ ಸಜೀವವಾಗಿ ಹೂಳಲ್ಪಟ್ಟನು! [1]ದಾವಣಗೆರೆಯ ತಾಲ್ಲೂಕಿನ ಒಂದು ಶಾಸನದಿಂದ ಚಂಡಿಯಮ್ಮರಸನೆಂಬ ಗಂಗರಾಜನು ಸತ್ತನೆಂದೂ ಆಗ ಅವನ ಸೇವಕರಲ್ಲೊಬ್ಬನು 'ಕೀಳ್ಗುಂಟೆ'ಯಾದನೆಂದೂ ತಿಳಿದುಬರುತ್ತದೆ.

ಸ್ವಾಮಿಭಕ್ತಿಗಾಗಿ ಅಗ್ನಿಪ್ರವೇಶಮಾಡಿದಂತಹವರ ಉದಾಹರಣೆಗಳೂ ಇವೆ. [2]ಅರಕಲಗೂಡು ತಾಲ್ಲೂಕಿನ ಎರಡು ಶಾಸನಗಳಿಂದ ಗಂಗರಸ ರಾಚಮಲ್ಲನು ಸತ್ತಾಗ ಸ್ವಾಮಿಭಕ್ತರಿಬ್ಬರು ಅಗ್ನಿಪ್ರವೇಶ ಮಾಡಿದರೆಂದು ಗೊತ್ತಾಗುತ್ತದೆ. ತನ್ನೊಡೆಯ ನಾದ ಕದಂಬರಾಜ ತೈಲಪನು ಸ್ವರ್ಗಸ್ಥನಾದಾಗ ತಾನೂ ಜೀವ ತೆರುವುದಾಗಿ ಸಂಕಲ್ಪಮಾಡಿ ಅದರಂತೆ ನಡೆದವನ ವಿಷಯವೊಂದನ್ನು [3]ಹೊನ್ನಾಳಿಯ ತಾಲ್ಲೂಕಿನ ಒಂದು ಶಾಸನವು ತಿಳಿಸುತ್ತದೆ.

'ಗರುಡ' ಎಂಬ ಮತ್ತೊಂದು ಪದ್ಧತಿಯನ್ನಿಲ್ಲಿ ಹೇಳುವುದು ಸೂಕ್ತವಾಗಿದೆ. ಹೊಯ್ಸಳ ರಾಜರ ಕಾಲದಲ್ಲಿ ಅವರ ಸಮೀಪವರ್ತಿಗಳಾಗಿದ್ದ ಯೋಧರು (ಅಂಗರಕ್ಷಕರು) "ನಾವು ನಮ್ಮ ಒಡೆಯರ ಜತೆಯಲ್ಲಿ ಇರುತ್ತೇವೆ; ನಮ್ಮೊಡೆ ಯರ ಜತೆಯಲ್ಲಿ ಸಾಯುತ್ತೇವೆ" ಎಂದು ಸಂಕಲ್ಪ ಮಾಡುತ್ತಿದ್ದರು. ತಮ್ಮ ಅರಸನು ಸತ್ತನೆಂದರೆ ಪಡೆಪಡೆಯಾಗಿ ವೀರರೆಲ್ಲ ಒಟ್ಟಿಗೆ ತಮ್ಮ ಸತಿ ಸೇವಕ ಸೇವಕಿಯರೊಂದಿಗೆ ಪ್ರಾಣವನ್ನರ್ಪಿಸುತ್ತಿದ್ದರು. ಅತ್ಯಾಶ್ಚರ್ಯಕರವಾದ ಸ್ವಾಮಿ ಭಕ್ತಿ! ಕೊಪ್ಪದ ತಾಲ್ಲೂಕಿನ ಎರಡು [4]ಶಾಸನಗಳಿಂದಲೂ, ಬೇಲೂರು ತಾಲ್ಲೂಕಿನ ಒಂದು ಶಾಸನದಿಂದಲೂ ಈ 'ಗರುಡ'ನಿಗೆ ಸಂಬಂಧಪಟ್ಟ ವಿವರಗಳು ಕೊಂಚ ಮಟ್ಟಿಗೆ ತಿಳಿದುಬರುತ್ತವೆ. ಹೊಯ್ಸಳ ನಾರಸಿಂಹನು ಕಾಲವಾದನು. ಆ ಸಮಯದಲ್ಲಿ ರಾಜಪುತ್ರ ಲಕ್ಷ್ಮಣನೂ ಅವನ ಪಡೆಯ ಸಾವಿರ ಮಂದಿ ಯೋಧರೂ ಗರುಡನನ್ನಾಲಂಗಿಸಿ ವೀರಸ್ವರ್ಗ ಸೇರಿದರು. ಪರಮಾದ್ಭುತವಾದ ಸ್ವಾಮಿಭಕ್ತಿಯ ಈ ಸಂಗತಿಯು ಹಳೇಬೀಡು ಹೊಯ್ಸಳೇಶ್ವರ ದೇವಾಲಯದ ಬಳಿ ಇರುವ [5]ಕಂಭದ ಮೇಲೆ ಬರೆಯಲ್ಪಟಿದೆ.

ಆ ಕಾಲದಲ್ಲಿ ಜನಪದ ಹೃದಯವು ವೀರರಸದಿಂದ ತುಂಬಿ ತುಳುಕುತ್ತಿತ್ತು. ವೀರಸ್ವರ್ಗ ಹೊಗಲು ಜನರು ನಾಮುಂದು ತಾಮುಂದೆಂದು ಮುಂದೆ ನುಗ್ಗು ತ್ತಿದ್ದರು. ಜನರಾದರೂ ವೀರರನ್ನು ಗೌರವಿಸುತ್ತಿದ್ದರು, ಪೂಜಿಸುತ್ತಿದ್ದರು. ವೀರನೊಬ್ಬನು ಸತ್ತನೆಂದರೆ ಊರಿನವರೆಲ್ಲ ಸೇರಿ ಅವನ ಸ್ಮರಣೆಗಾಗಿ ಒಂದು ಕಲ್ಲನ್ನು ನಿಲ್ಲಿಸುತ್ತಿದ್ದರು. ಅದಕ್ಕೇ 'ವೀರಗಲ್' ಎಂದು ಹೆಸರು. ಕೆಲವು ವೀರಗಲ್ಲುಗಳಲ್ಲಿ

---

1 *Epigraphia Carnatica*, Chitaldrug Dist. Dg. No. 119.
2 ,, ,, Hassan Dist. Ag. Nos. 5 & 7.
3 ,, ,, Shimoga Dist. Hn. No. 41.
4 ,, ,, Kadur Dist. Kp. Nos. 9 & 10.
5 ,, ,, Hassan Dist. Bl. No. 112.

ಬರಿಯ ಚಿತ್ರಗಳಿರುತ್ತವೆ; ಮತ್ತೆ ಕೆಲವುಗಳಲ್ಲಿ ಚಿತ್ರಗಳಿರುವುದಿಲ್ಲ, ಶಾಸನವಿರುತ್ತದೆ. ವೀರನ ವಿಷಯುಗಳು ಆ ಶಾಸನದಲ್ಲಿರುತ್ತವೆ. ಮತ್ತೆ ಕೆಲವು ವೀರಗಲ್ಲುಗಳಲ್ಲಿ ಚಿತ್ರಗಳೂ ಇರುತ್ತವೆ, ಶಾಸನವೂ ಇರುತ್ತದೆ. ಈ ಶಾಸನಗಳು ಇಂತಹ ಮನುಷ್ಯನು ಈ ಕಾರಣಕ್ಕಾಗಿ ಇಂತಹ ಸ್ಥಳದಲ್ಲಿ ಕಾದಾಡಿ ಸತ್ತು ಸ್ವರ್ಗಕ್ಕೆ ಹೋದನೆಂಬುದಾಗಿ ತಿಳಿಸುತ್ತವೆ.

ಇಂತಹ ವೀರಗಲ್ಲುಗಳು ಸಾಮಾನ್ಯವಾಗಿ ದಕ್ಷಿಣ ದೇಶದಲ್ಲಿ, ವಿಶೇಷವಾಗಿ ಕನ್ನಡ ನಾಡಿನಲ್ಲಿ ಸಿಗುತ್ತವೆ. ನಮ್ಮ ಹಳ್ಳಿಹಳ್ಳಿಗಳಲ್ಲೂ ವೀರಗಲ್ಲುಗಳಿವೆ. ಅವುಗಳೇನೆಂಬುದು ಜನರಿಗೆ ಗೊತ್ತಿಲ್ಲ. ಕೆಲವು ವೀರಗಲ್ಲುಗಳಲ್ಲಿ ಚಿತ್ರಗಳಿರುವುವೆಂದು ತಿಳಿಸಿದ್ದಾಯಿತಷ್ಟೆ. ಆ ಚಿತ್ರವನ್ನು ಕಂಡು "ಇದು ಭೂತ. ಇದಕ್ಕೆ ಭೂತ ಕಲ್ಲೆಂದು ಹೆಸರು" ಎಂದು ಹಳ್ಳಿಗಾಡಿನವರು ಆಡಿಕೊಳ್ಳುತ್ತಾರೆ. ವೀರಗಲ್ಲುಗಳು ದೇವಾಲಯಗಳ ಬಳಿ, ಪಾಳು ನಿವೇಶನಗಳಲ್ಲಿ, ಹೊಲ ಗದ್ದೆಗಳಲ್ಲಿ, ಕೆರೆ ಕಟ್ಟೆಗಳ ಬಳಿ, ಊರ ಬಾಗಿಲ ಬಳಿ, ಎಲ್ಲೆಂದರಲ್ಲಿ ಇರುತ್ತವೆ.

### ೧. ತುರುವ ಕಾಯ್ದು ಬಿದ್ದ

"......[1]ಶ್ರೀ ಜಗತೇಸ್ವರ ದೇವರ ಪಾದಾರಾಧಕರಪ್ಪ ಬಾಸೆಬೋವನ ಮಗ ಹಲೆಯ ತುಂಬುಳಲು ತುಱುವ ಹಟ್ಟಿಯು ಕಾದಿ ತುಱುವಂ ಮಗುಳ್ಚಿ ತಾಂ ಬಿದ್ದಲ್ಲಿ ದೇವಕಂನಿಕೆಯರು ದೇವಲೋಕಕ್ಕೆ ಉಯ್ದರು......"

[ತುರು ಕರುಗಳನ್ನು ಹಿಡಿದೊಯ್ಯಲು ಶತ್ರುಗಳು ಬಂದು ತುಂಬುಳು ಗ್ರಾಮಕ್ಕೆ ಮುತ್ತಿಗೆ ಹಾಕಿದರು. ಆಗ ಬಾಸೆಬೋವನ ಮಗ ಹಲೆಯನೆಂಬವನು ಶತ್ರುಗಳಮೇಲೆ ಬಿದ್ದು, ಕಾದಾಡಿ ತುರು ಕರುಗಳನ್ನು ಕಾಪಾಡಿದನು. ಆದರೆ ಆ ಪ್ರಯತ್ನದಲ್ಲಿ ಅವನು ಮಡಿದನು. ದೇವಕನ್ಯೆಯರು ಬಂದು ಅವನನ್ನು ದೇವಲೋಕಕ್ಕೆ ಒಯ್ದರು.]

### ೨. ಆನೆಯೊಂದಿಗೆ ಹೋರಾಡಿದ

"[2]ಸ್ವಸ್ತಿ ಶ್ರೀ ನೀರ್ಗುನ್ದ ಗಾವುಣ್ಡ ತಪಸಿಯ ಪೋರಿಲ್ ಇಭದೆ ಕಾದಿ ಸತ್ತೊಡೆ ಆತಙ್ಗೆ ಕಲ್ಲನಿರಿಸಿದ ಮಂಗಳ ಮಹಾಶ್ರೀ"

[ತಪಸಿಯ ಯುದ್ಧದಲ್ಲಿ ನೀರ್ಗುಂದ ಗಾವುಂಡನು ಆನೆಯೊಂದಿಗೆ ಹೋರಾಡಿ ಸತ್ತನು. ಆತನ ನೆನವಿಗಾಗಿ ಈ ಕಲ್ಲನ್ನು (ವೀರಗಲ್ಲು) ನೆಟ್ಟರು.]

### ೩. ಮಹಿಳೆಯರ ಮಾನ ಕಾಯ್ದು

"........[3]ಶ್ರೀ ವೀರಬಲ್ಲಾಳ ದೇವರು ಪೃಥ್ವೀರಾಜ್ಯಂ ಗೆಯ್ಯುತ್ತಂ ಇರೆ ಹಾಲವರೆಯ ಅರಸಿನ ಗುಪ್ಪೆಯುಲು ಬಯಿಚೆಯ ಗೌಡನ ಮಗ ಮಾರೆಯ ಗಂಗವೆಗ್ಗಡೆ ವೀರ— ಇರಿದು ಹೆಣ್ಡಿರುಡೆ ವುರ್ಚುವಲ್ಲಿ ಕೆಲಬರಂ ಕೊಂದು.... ಸುರಲೋಕ ಪ್ರಾಪ್ತನಾದನ್"

[ಹೊಯಿಸಳ ವೀರ ಬಲ್ಲಾಳದೇವರು ರಾಜ್ಯಭಾರ ಮಾಡುತ್ತಿದ್ದ ಕಾಲದಲ್ಲಿ ಗಂಗವೆಗ್ಗಡೆಯೆಂಬವನು ಹಾಲವರೆಯ ಅರಸಿನಗುಪ್ಪೆ ಗ್ರಾಮದ ಮೇಲೆ ಮುತ್ತಿ

[1] *Archæological Survey of Mysore*, 1937, No. 7.
[2] *Mysore Archæological Report for* 1925-26—No. 113.
[3] ,, ,, 1927—No. 24.

ಬಂದು ಆವೂರ ಹೆಂಗಸರ ಮಾನಾಪಹಾರ ಮಾಡಲು ಪ್ರಯತ್ನಮಾಡಿದನು. ಆಗ ಬೈಚಗಾವುಂಡನ ಮಗ ಮಾರನೆಂಬುವನು ತನ್ನೂರ ಸ್ತ್ರೀಯರ ಮಾನ ಸಂರಕ್ಷಣೆಯ ಸಲುವಾಗಿ ಮುತ್ತಿದವರ ಮೇಲೆ ಬಿದ್ದು ಹಲವರನ್ನು ಕೊಂದು ತಾನೂ ಸತ್ತು ಸುರಲೋಕ ಸೇರಿದನು.]

### ೪. ಹುಲಿಯನ್ನು ಕೊಂದ

"[1]ಸ್ವಸ್ತಿ ಕಿರಿ ಇಜ್ಗಳದ ತಮ್ಮಗವುಣ್ಡನು ಪುಲಿಯನಿರಿದು ಸತ್ತೊಡೆ ಗಙ್ಗಪೆರ್ಮ್ಮಾಡಿ ಮೆಚ್ಚಿಗೊಟ್ಟುದೆಯ್ದು ಕಳಿನಿ ಇದಾನಳಿದೋನ್ ವಾರಣಾಸಿಯ ನಳಿದೋನ್"

[ಕಿರಿ ಇಂಗಳದ ತಮ್ಮಗೌಡನು ಹುಲಿಯನ್ನು ಕೊಂದು ಸತ್ತನು. ಗಂಗ ಪೆರ್ಮಾಡಿಯು ಅವನ ಸಾಹಸಕ್ಕೆ ಮೆಚ್ಚಿ ಐದು ಕಳನಿ ಭೂಮಿಯನ್ನು ದಾನ ಮಾಡಿದನು. ಈ ದಾನವನ್ನು ಕೆಡಿಸಿದವನು ವಾರಣಾಸಿಯನ್ನು ಕೆಡಿಸಿದ ಹಾಗೆ.]

### ೫. ಕಳ್ಳರ ಕೂಡೆ ಕಾದಿದ

"ಶ್ರೀಮನ್ಮಹಾರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಶ್ರೀ ವೀರಸದಾಶಿವರಾಯರ ಆಳ್ವಿಕೆಯಲು ರಾಚಗವುಣ್ಡನ ಮಗ ಕಳ್ಳರ ಕೂಡೆ ಕಾದಿ ಪ....ಸತ್ತು ಸುರಲೋಕ ಗತನಾದ ಮಂಗಳ ಮಹಾ ಶ್ರೀ ಶ್ರೀ ಶ್ರೀ"

### ೬. ಕಳ್ಳರು ತಾಗಿದರು

"[2]ಸಕವರಿಷ ೧೨೧೬ ವಿಜೆಯ ಸಂವತ್ಸರದ ಮಘ ಸು ೧೧ ವ ಅರಸಾಳು ಮದಯ್ಯ ಮಗ ಬಯಿಚಯ್ಯನು ಅರಸಿಯಕೆಱೆಯ ದಾರಿಲಿ ಕಳರು ತಾಗಿದಲಿ ರಣರಂಗ ವೀರನಾಗಿ ಕಾದಿ ಸುರಲೋಕಪ್ರಾಪ್ತನಾದ"

### ೭. ಸ್ವಾಮಿಕಾರ್ಯಕ್ಕೆ ಬಂದ

"......ಶ್ರೀ ಜಗದೇವ ಸಿಂಗದೇವರಸರು ದುಗ್ಗವೆಗ್ಗಡೆಯ ಮಗ ಬಮ್ಮಣ ಹೆಗ್ಗಡೆ ಸ್ವಾಮಿಕಾರ್ಯಕ್ಕೆ ಬನ್ದು ಮಳಲಿಯ ಸಿಂಗಜ್ಜನ ಕೂಡೆ ಕಾದಿ ಯಳಿಯಲು ದುಗ್ಗವೆಗ್ಗಡೆಗೆ ಬಿಟ್ಟ ಭೂಮಿ"

[೫, ೬, ೭ನೆಯ ಶಾಸನಗಳ ಭಾಷೆಯು ಹೊಸಗನ್ನಡ; ಸುಲಭವಾಗಿ ಅರ್ಥ ವಾಗುತ್ತದೆ.]

### ೮. ದಾಯಾದತನದಿ ಕನ್ನವನಿಕ್ಕಿದವನ ಕೊಂದ

"......[3]ನಾಳ್ಪ್ರಭು ಬೊಂಮ....ಆತನ ಮಗ ಮಾದರ್ಸನು ತಂಮ ಸೋಮಂಣನು ಆ....ರಿಗೆ ಮಸರೆಯಲಿ ಗಉಡನ ಮಕಳು ಕಾಳ ಬೊಂಮ ಸೋಮ ದಾಯಾದತನದಿಂ ಕಂನವನಿಕ್ಕಿಯಿಱಿಯೆ ತಮ್ಮ ಮಕ್ಕಳು ಹೆಂಡಿರ ಕೂಡಿ ಹುಯ್ಯಲನೆಬ್ಬಿಸಿ... ಕೊಂದು ತಾನುಂ ಶಿವಪಾದದೊಳ್ಳೈಕ್ಯನಾದಂ.."

[ಮಸರೆಹಳ್ಳಿಯ ಕಾಳ, ಬೊಮ್ಮ, ಸೋಮ ಮೊದಲಾದವರು ದಾಯಾದ ವೈರದಿಂದ ಬೊಮ್ಮನ ಮನೆಗೆ ಕನ್ನ ಹಾಕಿದರು. ಆಗ ಬೊಮ್ಮನು ಅವನ ಮಗ

[1] *Mysore Archæological Report* for 1927—No. 44.
[2] *Archæological Survey of Mysore*, 1937—No. 15
[3] *Mysore Archæological Report* for 1928—No. 77.

ಮಾದರಸ ಮತ್ತು ಅವನ ತಮ್ಮ ಸೋಮಣ್ಣ ಇವರೊಂದಿಗೆ ಆ ಕಳ್ಳ ದಾಯಾದಿಗಳ ಮೇಲೆ ಬಿದ್ದು, ಅವರನ್ನೆಲ್ಲ ಕೊಂದನು. ಆದರೆ ಆ ಪ್ರಯತ್ನದಲ್ಲಿ ತಾನೂ ಸತ್ತನು.]

### ೯. ಮಲ್ಲಯುದ್ಧದಲ್ಲಿ ಮಡಿದ

“[1]ಪಡೆಯೊಡೆ ಬೊಪ್ಪಂ ತಂನ ಕುದುರೆ ನೆಲವೂರಿ ವಿಟ್ಟೆ ನೆಕ್ಕಟಿ ಬಂದನೆಯ ಮಸದಯೊಡೆಯ ಸೂಱೆಗೊಣ್ಡು ಪುಯ್ಯಲ ಕೇಳ್ದು ಕಲಿ ಸಿಲ್ಲದೆ ಪರಿದು ತಾಗಿದ ಪಂಚೆಯರ್ಜುನನಾಗಳುಮಲೆದರಿ ಮಲ್ಲಯುದ್ಧದಲು ಬಾಗುಲಿ ಗರಗೌಡ ಮಯ ತಳುದಿಱಿದು ಬಿದ್ದ ಮಲ್ಲಯಂ ನಲಿನಲಿದುಯಿದಚ್ಚರಸಿಯರಾಗಲು ॥ “ಸ್ವಸ್ತಿ ಶ್ರೀಮಚ್ಚಾಳುಕ್ಯ ವಿಕ್ರಮವರುಶದ ಐದನೆಯ ಪ್ರಜಾಪತಿ ಸಂವತ್ಸರದ ಪುಶ್ಯ ಬಹುಳ ದಸಮಿ ಗುರುವಾರದಂದು ಸುರಲೋಕಕ್ಕೆ ಸಾರಿದಂ”

[ಬಂದನೆ ಗ್ರಾಮದ ಸೂರೆಯಾಗುತ್ತಿದೆ. ಶತ್ರುಗಳು ಹುಯ್ಯಲನೆಬ್ಬಿಸಿ ಬಂದರು. ಹಂಚೆಯ ಅರ್ಜುನನೆನಿಸಿದ ಬೊಪ್ಪನು ತನ್ನ ಸೈನ್ಯವನ್ನೂ ಕುದುರೆಯನ್ನೂ ಬಿಟ್ಟು ಮುಂದೆ ಸರಿದನು. ಮಲ್ಲಯನಿಗೂ ಬೊಪ್ಪನಿಗೂ ಮಲ್ಲಯುದ್ಧವಾಯಿತು. ಆ ಯುದ್ಧದಲ್ಲಿ ಬೊಪ್ಪನು ಸತ್ತು ಸುರಲೋಕ ಸೇರಿದ.]

### ೧೧. ಧರ್ಮವನ್ನುದ್ಧರಿಸಿದ

“......[2]ಮಾಲ್ಯನಾಡು ಮುವತಱ ಮೂಲಸ್ತಾನ ಹಲೆಯಬೀಡಿನ ಕಲಿ ದೇವರ ಸ್ತಾನಿಕ ವೀರರಾಮಯ್ಯನ ಮಗ ಕಲಯ್ಯನು ಆ ಕಲಿ ದೇವರ ಹೞಿಸಿಗಲೂರ ಸಿಧಾಯವ ಅರಕಾರಕ್ಕೆ ಧರ್ಮವ ಕಿಡಿಸಿ ಕಾರು ಸೂಱೆಗೊಂಬಲ್ಲಿ ಆ ಕಲ್ಲಯನು ಕೆಲಸವಮಾಡಿಕೊಂಡು ದೇವಲೋಕ ಪ್ರಾಪಿತನಾಗಿ ಧರ್ಮವನುಧರಿಸಿದನು ಅದಕೆ ನಟ ಕಂಬ”

[ಹೊಯ್ಸಳ ನರಸಿಂಹನ ಕಾಲದ ಶಾಸನವಿದು. ಹಳೆಯಬೀಡಿನ ಕಲಿ ದೇವರ ದೇವಸ್ಥಾನದ ಸ್ಥಾನಿಕ ವೀರರಾಮಯ್ಯನ ಮಗ ಕಲ್ಲಯ. ದೇವರಿಗೆ ಸೇರಿದ ಸಿಗಲೂರು ಸಿದ್ಧಾಯವನ್ನು ಕೆಲವರು ಸೂರೆಗೊಳ್ಳಲು ಪ್ರಯತ್ನಮಾಡಿದರು. ಆಗ ಹೊಡೆದಾಟವಾಗಿರಬೇಕು. ಆ ಹೊಡೆದಾಟದಲ್ಲಿ ಕಲ್ಲಯನು ಕೆಲಸಮಾಡಿ, ದೇವರ ಧರ್ಮವನ್ನುದ್ಧಾರಮಾಡಿ, ಸತ್ತು ಸ್ವರ್ಗ ಸೇರಿದನು.]

### ೧೨. ಅರಸನು ವೀರನ ಬೆನ್ನು ಮುಟ್ಟಿದ

“......[3]ಹೊಯ್ಸಳ ವೀರಬಲ್ಲಾಳ ದೇವರು
ಬೆಸಸಿ ವೀಳೆಯವ ಕೊಟ್ಟಡೆ ಸಂಕಮದೇವ
ನೊಡ್ಡಂ ಮಗುಟ್ಚಿ ಆನೆಯನಾನೆಯಮೇಲಿ
ಕ್ಕಿ ಕುದುರೆಯ ಕುದುರೆಯ ಮೇಲಿಕ್ಕಿ ಹೆಣಮಯವಾಗಿ
ಕೊಂಡಟ್ಟಿಗಳನಾಡಿ ತನ್ನ ಕಯ್ಯ ಹಸವೊಪಿನಂ
ತಱಿದು ನೆತ್ತರ ಕಡಲಂ ಹರಿಸಿ ಬ
ಲ್ಲಾಳ ದೇವನ ಬೆನ್ನ ಮೆಟ್ಟನೋಡಿ ಮೆಚ್ಚಿ ಮುಯ್ಪಂ
ಕೊಂಡಾಡೆ ಮಡೆವಳ್ಳಿಯ ಕಾಳಗದ

---

[1] *Mysore Archæological Report* for 1928—No. 100.
[2] ,, ,, 1927—No. 11.
[3] ,, ,, 1937—No. 31.

ರಣರಂಗದಲಿ ಬಿಳ್ದಾಗಳು ಅಚ್ಚರಗಣಿಕೆಯರು
ವಿಮಾನವ ಕೊಂಡು ಬಂದು
ಸುರಲೋಕಕ್ಕೆ ಒಟ್ಟಿಯ ಪಟ್ಟಸಾಹಣಿ ಅಚ್ಚಯಸಾಹಣಿ ಸುರಲೋ
ಕ ಪ್ರಾಪ್ತನಾದನು...................
..........................ಅಚ್ಚ
ಸಾಹಣಿಯಂಗನೆ ಮಾಡಿಸಿದಳು ವೀರಶಾಸನವನ್...."

[ಹೊಯ್ಸಳ ಮುಮ್ಮಡಿ ಬಳ್ಳಾಳನ (೧೨೯೧–೧೩೪೨) ಆಳ್ವಿಕೆಯ ಕಾಲ. ಸೇವುಣರಾಜ ಸಂಕಮನ ಸೇನೆಗೂ ಹೊಯ್ಸಳ ಸೇನೆಗೂ ಮಡವಳ್ಳಿಯ ಬಳಿ ಮಹಾಕಾಳಗವಾಯಿತು. ಆಗ ದಂಡನಾಯಕ—ಒಂಟಿಯ ಪಡೆಯೊಡೆಯ ಅಚ್ಚಸಾಹಣಿಯು ರಣರಂಗ ಪ್ರವೇಶಮಾಡಿ, ಸಂಕಮನನ್ನು ಸೋಲಿಸಿ, ರಣರಂಗದಲ್ಲಿ ಬಿದ್ದನು. ಪ್ರಭು ಬಳ್ಳಾಳನೇ ಬಂದು ವೀರನ ಬೆನ್ನುಮುಟ್ಟಿ ಮೆಚ್ಚಿದನು. ಅಚ್ಚಸಾಹಣಿಯ ಅಂಗನೆಯು ವೀರಶಾಸನವನ್ನು ಮಾಡಿಸಿದಳು.]

ಈ ಉದಾಹರಣೆಗಳು ಸಾಕು. ಇವುಗಳಿಂದ ತಕ್ಕಮಟ್ಟಿಗೆ ವೀರಜೀವನದ ಸ್ವರೂಪವೆಂತಹುದೆಂಬುದು ವ್ಯಕ್ತವಾಗುತ್ತದೆ. ವೀರಜೀವನವು ಸಮಾಜ ಸುಖಕ್ಕಾಗಿ, ಶಿಷ್ಟಜನಸಂರಕ್ಷಣೆಗಾಗಿ ಹೇಗೆ ವಿನಿಯೋಗವಾಗುತ್ತಿತ್ತೆಂಬುದು ಸ್ಪಷ್ಟವಾಗುತ್ತದೆ.

ಹಿಂದಿನ ಕಾಲದಲ್ಲಿ ಊರುಗಳ ಸಂರಕ್ಷಣೆಯ ಕಾರ್ಯವನ್ನು ಊರಿನವರೇ ಮಾಡಬೇಕಾಗಿತ್ತು. ಆ ಕಾಲದಲ್ಲಿ ಒಂದೂರಿನವರು ನೆರೆಯೂರಿನವರ ದನಕರು ಗಳನ್ನು ಕದಿಯುತ್ತಿದ್ದರು. ಇದಕ್ಕಾಗಿ ಎರಡು ಊರುಗಳವರಿಗೂ ಕಾದಾಟ ಕಡಿದಾಟಗಳಾಗುತ್ತಿದ್ದವು. ಇದಕ್ಕೆ 'ತುರುಕಾಳಗ'ವೆಂದು ಹೆಸರು. ತಮ್ಮೂರ ತುರು-ಕರುಗಳನ್ನು ಕಾಪಾಡುವ ಪ್ರಯತ್ನದಲ್ಲಿ ನೂರಾರಲ್ಲ ಸಾವಿರಾರು ವೀರರು ಸತ್ತು ಸ್ವರ್ಗಾಲಯವನ್ನು ಸೇರಿದ್ದಾರೆ.

ದುಷ್ಟಜನರು ಊರುಗಳಮೇಲೆ ಬೀಳುತ್ತಿದ್ದರು; ಮಾನಿನಿಯರ ಮಾನಾಪ ಹಾರ ಮಾಡುತ್ತಿದ್ದರು. ಅಂತಹ ಸಂದರ್ಭಗಳಲ್ಲಿ ವೀರರು ಮುಂದೆ ಬಂದು ದುಷ್ಟರನ್ನು ಸದೆಬಡಿದು, ಮಾನಿನಿಯ ಮಾನಸಂರಕ್ಷಣೆ ಮಾಡಿ, ಆ ಪ್ರಯತ್ನದಲ್ಲಿ ತಾವು ಪ್ರಾಣಬಿಟ್ಟಿದ್ದಾರೆ: ಕಳ್ಳಕಾಕರ ಭೀತಿಯಿಂದ ಊರ ಜನರನ್ನು ಕಾಪಾಡು ವಾಗ ಪ್ರಾಣಬಿಟ್ಟಿದ್ದಾರೆ.

ಎಲ್ಲ ಸಂದರ್ಭಗಳನ್ನು ವಿವರಿಸುವುದು ಸಾಧ್ಯವಿಲ್ಲ. ಸಮಾಜಸೇವೆಯೆಂದರೆ ವೀರರು ಸಿದ್ಧ. ದುಷ್ಟಶಿಕ್ಷಣವೆಂದರೆ ವೀರರು ಸಿದ್ಧ. ಸ್ವಾಮಿಕಾರ್ಯಕ್ಕೆಂದರೆ ವೀರರು ಸದಾ ಸಿದ್ಧ. ಅವರ ಜೀವ ಪರೋಪಕಾರಕ್ಕೆ ಮೀಸಲು!

"ಜಿತೇನ ಲಭ್ಯತೇ ಲಕ್ಷ್ಮೀ
ಹತೇನಾಪಿ ಸುರಾಂಗನಾ
ಕ್ಷಣ ವಿಧ್ವಂಸಿನೀ ಕಾಯೇ
ಕಾ ಚಿಂತಾ ಮರಣೇ ರಣೇ"

[ಗೆದ್ದರೆ ಜಯಲಕ್ಷ್ಮಿಯು ಸಿಗುವಳು. ಸತ್ತರೆ ಸುರನಾರಿಯು ಸಿಗುವಳು. ಕ್ಷಣ ಮಾತ್ರದಲ್ಲಿ ನಾಶವಾಗುವುದೀ ದೇಹ. ಸತ್ತರೇನು, ಸಂಗ್ರಾಮದಲ್ಲಿ ಉರುಳಿದರೇನು? ಚಿಂತೆಯೇಕೆ?]

ಇದು ವೀರನ ನಿತ್ಯಗೀತೆಯಾಗಿತ್ತು.

"ದ್ವಾವಿಮೌ ಪುರುಷೌ ಲೋಕೇ
ಸೂರ್ಯಮಂಡಲ ಭೇದಿನೌ
ಪರಿವ್ರಾಟ್ ಯೋಗ ಯುಕ್ತಶ್ಚ
ರಣೇಚಾಭಿಮುಖೇ ಹತಃ"

[ಸೂರ್ಯಮಂಡಲವನ್ನು ಭೇದಿಸಲು ಸಮರ್ಥರು ಈ ಲೋಕದಲ್ಲಿರುವವರು ಇಬ್ಬರೇ. ಯೋಗನಿಷ್ಠಾಗರಿಷ್ಠನಾದ ಸಂನ್ಯಾಸಿಯೊಬ್ಬ; ರಣರಂಗ ಪ್ರವೇಶಮಾಡಿ, ವೀರವನ್ನು ಬೆಳಗಿಸಿ ಸಾಯುವನೊಬ್ಬ.]

ಇದು ಜನರ ವೀರಗೀತೆಯಾಗಿತ್ತು!

ವೀರನು ಬಿದ್ದನಂದರೆ ಅವನ ಸತಿಯು ಅನೇಕ ಸಂದರ್ಭಗಳಲ್ಲಿ ವೀರನೊಂದಿಗೆ ಚಿತೆಯನ್ನೇರುತ್ತಿದ್ದಳು. ವೀರನು ಬಿದ್ದನಂದರೆ ಅವನ ಬಂಧು ಮಿತ್ರರೂ, ಊರಿನವರೂ ಎಲ್ಲರೂ ಸೇರಿ ವೀರವಸ್ತುವನ್ನು ಸ್ಥಾಪಿಸಿ ಅದರಮೇಲೆ ವೀರಗಲ್ಲನ್ನು ನೆಡುತ್ತಿದ್ದರು. ವೀರರ ಗುಡಿಗಳನ್ನು ಕಟ್ಟಿಸಿ ವೀರಪೂಜೆಗಾಗಿ ದತ್ತಿಗಳನ್ನು ಬಿಡುತ್ತಿದ್ದರು. ವೀರಪೂಜೆಗಾಗಿ ದತ್ತಿಗಳನ್ನು ಬಿಟ್ಟ ಉದಾಹರಣೆ ಗಳು ವಿರಳ. ಸಿಕ್ಕಿರುವ ಒಂದು ಶಾಸನವನ್ನಿಲ್ಲಿ ಕೊಡಲಾಗಿದೆ.

"[1]ಸ್ವಸ್ತಿ ಶ್ರೀಮತು ಸಕವರ್ಷ ೧೧೧೭ನೆಯ ರಾಕ್ಷಸ ಸಂವತ್ಸರದ ಮಾಘ ಸು ೧೦ ಬ್ರಿಹವಾರದಂದು ಚಟ್ಟಗೌಂಡರ ಮಾಳಯ್ಯನ ಮಗ ಸೋಮೆಯನು ಹಾರುವನ ಹಳ್ಳಿಯ ದಾರಿಯಲು ಹೆಮ್ಮಕ್ಕಳ ಉಡೆ ಉಚ್ಚರ್ಲೀಯದೆ ತಾನುಂ ತನ ಸಂಗಡದ ಬೆಚ್ಚೆಯ ಮಾವನುಂ ವೀರ ಕಾಳಗಂ ಕಾದಿ ಹೆಮ್ಮಕ್ಕಳ ಕಾದು ಕಳಿಹಿ ಕಳ್ಳರಂ ಕೊಂದು ತಾವು ಸುರಲೋಕಪ್ರಾಪ್ತರಾಗಿ ದೇವಕನ್ನೆಯರುಯ್ದ್ದರು ಆತ ನಿಲ್ಲದ ಹೆಜಿಗೆ ಆತನಿಂ ಹಿರಿಯಣ್ಣ ಕಲ್ಲೆಯನುಂ ಆತನ ತಂಮ ಬೆನಚೆಯನುಂ ಅವರ ಕಿಱಿಯಯ್ಯ ಕಟ್ಟದ ಹಳ್ಳಿಯ ಮಾದಿಗೌಡನುಂ ಇನ್ತೀ ಮೂವರುಂ ಆತನ ವೀರವಸ್ತುವಂ ನಿಲಿಸಿದ ಸಿಲಾಲೇಖೆ ಚಟ್ಟಗೌಡರ ಕೆಱೆಯ ಕೆಳಗೆ ತಂಮ ಕೆಱೆ ಮಣ್ಣಿನಲ್ಲಿ ಬೆನತೆಯನುಂ ಬಮ್ಮೆಯನು ಸೋಮಜೀಯನ ಕಾಲಂ ಕಚ್ಚಿ ವೀರಗಲ್ಲಿಂಗೆ ನಿವೇದ್ಯಕ್ಕಂ ಹೂ ಪತ್ರೆಗಂ ಧಾರಾಪೂರ್ವಕಂ ಮಾಡಿ ಬಿಟ್ಟಗದೆ ಕೋಳ ........"

ಸೋವಿಯ ನಾಯಕನು ಸ್ವಾಮಿಕಾರ್ಯಕ್ಕಾಗಿ ರಣರಂಗ ಪ್ರವೇಶಮಾಡಿ, ಬಲದೊಡನೆ ಕಾದಿ, ಸುರಲೋಕಪ್ರಾಪ್ತನಾದಾಗ ಅವನ ಸತಿ ಮಾಚಿಯಕ್ಕ 'ಮಣಿರತುನ ಖಚಿತಮಪ್ಪ ಮಣಿಮಯ ಮಂಟಪದಲಿ' ವೀರಗಲ್ಲನ್ನು ಇರಿಸಿದಳು! ಈ ಅಂಶವು ಅರಸೀಕೆರೆ ತಾಲ್ಲೂಕು ಚಿಕ್ಕಕೋಡಿಹಳ್ಳಿಯ[2] ವೀರಗಲ್ಲೊಂದರಲ್ಲಿ ಹೇಳಿದೆ.

---

[1] *Mysore Archæological Report* for 1925-26—No. 40.
[2] ,, ,, 1937—No. 9.

ಹಲವು ಸಂದರ್ಭಗಳಲ್ಲಿ ರಾಜಕವಿಗಳು ವೀರಪ್ರಶಸ್ತಿ ಹಾಡಿ ಕವಿತೆ ಕಟ್ಟುತ್ತಿದ್ದರು. ಲಿಪಿಕರರು ಆ ಪ್ರಶಸ್ತಿಯನ್ನು ವೀರಗಲ್ಲಿನಮೇಲೆ ಕೆತ್ತುತ್ತಿದ್ದರು. ವೀರ, ವೀರಕರ್ಮ, ವಿಮಾನಯಾನ, ಸ್ವರ್ಗಾರೋಹಣ ಮೊದಲಾದ ಚಿತ್ರಗಳನ್ನೆಲ್ಲ ವೀರಗಲ್ಲಿನಮೇಲೆ [1]ಶಿಲ್ಪಿಗಳು ಕಣ್ಡರಿಸುತ್ತಿದ್ದರು.

ಮಾನವನ ಜೀವನ ಮಹಾಯಾತ್ರೆಯಲ್ಲಿ ವೀರಗಲ್ಲುಗಳು ಒಂದು ಗಡಿಯನ್ನು ಸೂಚಿಸುತ್ತವೆ.

## (೨)

## ಮಾಸ್ತಿಗಲ್

'ಮಾಸ್ತಿ'ಯೆಂಬ ಮಾತು 'ಮಹಾಸತಿ'ಯ ತದ್ಭವ. ನಮ್ಮ ನಾಡಿನಲ್ಲಿ 'ವೀರಗಲ್ಲು'ಗಳಂತೆಯೇ 'ಮಾಸ್ತಿಗಲ್ಲು'ಗಳೂ ಇವೆ. ಹಲವು ಸಂದರ್ಭಗಳಲ್ಲಿ 'ವೀರಗಲ್ ಮಾಸ್ತಿಗಲ್'ಗಳೆರಡೂ ಒಂದಾಗಿಯೇ ಇರುತ್ತವೆ.

'ಸತಿ'ಯೆಂಬ ಮಾತಿನ ಸಾಮಾನ್ಯ ಅರ್ಥವು ಎಲ್ಲರಿಗೂ ಚೆನ್ನಾಗಿ ಗೊತ್ತಿದೆ. ಪತಿಯು ಸ್ವರ್ಗಸ್ಥನಾದಾಗ ಆತನೊಂದಿಗೇ ಚಿತೆಯನ್ನೇರಿ ಶಾಶ್ವತ ಸುಖವನ್ನು ಗಳಿಸುತ್ತಿದ್ದ ಸ್ತ್ರೀ ಜನರು ಹಿಂದೊಂದು ಕಾಲದಲ್ಲಿ ನಮ್ಮ ಹಿಂದೂ ಸಮಾಜದಲ್ಲಿದ್ದರು. ಅಂತಹ ಸ್ತ್ರೀಯರನ್ನು 'ಸತಿ'ಯೆಂದು ಬಹಳ ಪವಿತ್ರಬುದ್ಧಿಯಿಂದ, ಗೌರವದಿಂದ ಕರೆಯುತ್ತಿದ್ದರು. 'ಸತಿ'ಯ ಪೂಜೆ ಮಾಡಿದರೆ 'ಸದ್ಗತಿ'ಯೆಂಬ ನಂಬಿಕೆ ಹಿಂದೂ ಸ್ತ್ರೀಯರಿಗಿತ್ತು. 'ಸತಿ'ಯರಿಗಾಗಿ ಗುಡಿಗಳು ನಿರ್ಮಾಣವಾದವು. ಇಂದಿಗೂ ಅಲ್ಲಲ್ಲಿ [2]'ಮಾಸ್ತಿಗುಡಿ'ಗಳು ಮಾದರಿಗಾಗಿ ಕಾಣಬರುತ್ತವೆ.

'ಮಹಾಸತಿ'ಯ ಕಲ್ಪನೆಯು ಅಸಾಧಾರಣವಾದುದು. ತ್ಯಾಗ, ಬಲಿದಾನಗಳು 'ಸತಿ'ಯ ಮುಂದೆ ಸೂರ್ಯನೆದುರಿನ ಮಿಣುಕು ಹುಳುಗಳಂತೆ. ಪತಿಭಕ್ತಿಯ 'ಗೌರೀಶಂಕರ'ವೀ ಮಹಾಸತಿ!

"ಹಿಂದೂ ಸಮಾಜದಲ್ಲಿ, ಹಿಂದೂಧರ್ಮಾನುಯಾಯಿಗಳಲ್ಲಿ, ಭರತಖಂಡದಲ್ಲಿ ಮಾತ್ರ 'ಸತಿ'ಯು ಸಾಧ್ಯ, ಸಹಜ. ಈ ಕಲ್ಪನೆಯಲ್ಲಿ ಕಾಣಬರುವ ಧೈರ್ಯ, ದಾರ್ಢ್ಯ, ನಂಬಿಕೆ, ತ್ಯಾಗ ಮೊದಲಾದವುಗಳೊಂದೊಂದೂ ಮಾನವನ ಹೃದಯಗಳನ್ನೇಳಿಸುತ್ತವೆ. ಜೀವಲೋಕವನ್ನು ಬೆಳಿಸುತ್ತವೆ." ಹೀಗೆಂದು ಒಬ್ಬರು ಆನಂದಬಾಷ್ಪ ಸುರಿಸುತ್ತ ಹೇಳಿದ್ದಾರೆ.

'ಸತಿ'ಯು—'ಸಹಗಮನ'ವು ಈ ಕಾಲದವರಿಗೆ ಅನಾಗರಿಕವಾದ ಆಚಾರವೆಂದು ತೋರಿಬರುತ್ತದೆ. ಆದುದರಿಂದಲೇ ರಾಜಾರಾಮಮೋಹನರಾಯರೇ ಮುಂತಾದವರು ಬಹಳ ಪ್ರಯತ್ನಮಾಡಿ, ಸರಕಾರದವರಿಂದ ಈ ಪದ್ಧತಿಯನ್ನು ನಿಲ್ಲಿಸಿಬಿಟ್ಟರು.

ವೀರರ ಸ್ಮಾರಕಗಳಿಗೆ 'ವೀರಗಲ್'ಗಳೆಂದು ಹೆಸರಾದರೆ 'ಮಾಸ್ತಿಗಲ್'ಗಳು ಮಹಾಸತಿಯರ ಸ್ಮಾರಕಗಳು. [3]'ಮದವಳಿಗೆ ಕಲ್' ಎಂತಲೂ ಇದನ್ನು

---

[1] *Mysore Archaeological Report* for 1925—No. 120.
[2] ,, ,, 1925—No. 38.
[3] ,, ,, 1928—No. 88.

ಕರೆಯುವುದುಂಟು. ಮಾಸ್ತಿಗಲ್ಲುಗಳಲ್ಲಿ ಎರಡು ಬಗೆಯುಂಟು. ಒಂದು ವೀರಗಲ್ಲಿನ ಹಾಗೆಯೇ ಇರುತ್ತದೆ. ಅದರಲ್ಲಿ ಸತಿಯ ಮೂರ್ತಿಯಿರುತ್ತದೆ. ಸತಿಯು ಪದ್ಮಾಸನ ಹಾಕಿಕೊಂಡು ಕೂತಿರುತ್ತಾಳೆ. ಆಕೆಯ ಕೂದಲು ಜ್ವಾಲೆಗಳಂತೆ ಮೇಲಕ್ಕೆದ್ದಿರುತ್ತದೆ. ಬಲಗೈ ಬೆರಳುಗಳನ್ನು ಮೇಲಕ್ಕೆತ್ತಿ ಹಿಡಿದಿರುವ ಉದಾಹರಣೆಗಳೂ ಇವೆ. ಕೆಲವುಕಡೆ ಸತಿಯು ಹೆಬ್ಬೆಟ್ಟು ತರ್ಜನಿಗಳಲ್ಲಿ ನಿಂಬೆಯ ಹಣ್ಣನ್ನು ಹಿಡಿದಿರುತ್ತಾಳೆ. ಹಲವು ಕಲ್ಲುಗಳಲ್ಲಿ ಸತಿಪತಿಗಳಿಬ್ಬರೂ—ವೀರ, ಮಹಾಸತಿ—ವಿಮಾನದಲ್ಲಿ ಕೂತಿರುವಹಾಗೂ, ಚಾಮರಸೇವೆ ಮಾಡುತ್ತ ದೇವತೆಗಳು ಅವರನ್ನು ಸುರಲೋಕಕ್ಕೆ ಒಯ್ಯುತ್ತಿರುವಹಾಗೂ ಚಿತ್ರಗಳಿರುತ್ತವೆ.

ಇನ್ನೊಂದು ಜಾತಿಯ ಮಾಸ್ತಿಗಲ್ಲುಗಳಲ್ಲಿ ಸತಿಯ ಮೂರ್ತಿ ಇರುವುದಿಲ್ಲ. ಆಕೆಯ ಬಲಗೈ ಮಾತ್ರ ಕಂಡರಿಸಲ್ಪಟ್ಟಿರುತ್ತದೆ. ಭುಜದಿಂದ ಮೊಳಕೈವರೆಗೆ ಅಡ್ಡಡ್ಡಲಾಗಿಯೂ, ಮೊಳಕೈಯಿಂದ ಹಸ್ತದವರೆಗೆ ಉದ್ದುದ್ದವಾಗಿಯೂ ಸಮಕೋಣಾಕಾರದಲ್ಲಿ ಇರುತ್ತದೆ. ಬೆರಳುಗಳು ಮೇಲ್ಮುಖವಾಗಿರುತ್ತವೆ. 'ಸಹಗಮನ'ವನ್ನು 'ತೋಳು ಕೈ ಕೊಟ್ಟಳು' ಎಂಬದಾಗಿಯೂ ಕರೆಯುತ್ತಿದ್ದರು.

## ೧. ಸಹಾನುಭೂತಿ

"......[1]ಗಂಗದೇವನಾಳ್ವಿಕೆಯಲು......ಬವರದಲು ಸತಿ ಸಹಾನುಭೂತಿಯಂ ಪೊಂದೆ ಸುರಲೋಕಕ್ಕೆ ಸಂದಳು......"

ಕೋಲಾರ ಜಿಲ್ಲೆ; ಗೋರೀಬಿದನೂರು ತಾಲ್ಲೂಕು; ದೊಡ್ಡಕುರುಗೋಡು ಹೋಬಳಿ ಕರಿಗಾನ ಹಳ್ಳಿಯಲ್ಲಿ ಸಿಕ್ಕಿದ ಮಾಸ್ತಿಗಲ್ಲಿದು. ಶಾಸನದ ಹಲವು ಪಂಕ್ತಿಗಳಲ್ಲಿ ಅಕ್ಷರಗಳು ಅಳಿದುಹೋಗಿವೆ. ಇದು ಎಲ್ಲಿ ನಡೆದ ಬವರ (ಯುದ್ಧ) ವೆಂಬುದು, ಯಾರು ಯಾರಿಗೆ ನಡೆದ ಕದನವೆಂಬುದು ಗೊತ್ತಾಗುವಹಾಗಿಲ್ಲ. ಸತ್ತ ವೀರನ ಹೆಸರೂ ಇಲ್ಲ; ಮಹಾಸತಿಯ ಹೆಸರೂ ಇಲ್ಲ. ಪತಿಯು ರಣರಂಗದಲ್ಲಿ ಮೃತನಾದನೆಂದು ಸತಿಯು 'ಸಹಾನುಭೂತಿ'ಯಂ ಪೊಂದಿದಳು. 'ಸಹಾನುಭೂತಿ' ಯೆಂದರೂ 'ಸಹಗಮನ'ವೆಂದೇ ಅರ್ಥವಾಗುತ್ತದೆ.

## ೨. ಮದವಳಿಗೆ ಕಲ್

"[2]ಸ್ವಸ್ತಿ ಶ್ರೀಮನ್ಮಹಾಮಣ್ಡಲೇಶ್ವರ ರಾಜಾಧಿರಾಜ ಪರಮೇಶ್ವರ ಹರಿಹರ ರಾಯನ ರಾಜ್ಯೋದಯದ ಶಕ ೧೩೨೮ನೆಯ ಕ್ಷಯ ಸಂವತ್ಸರದ ವೈಶಾಖ ಶು ೮ ಸೋ ಶ್ರೀಮತು ಶ್ರೀವಡ್ಡ ವ್ಯವಹಾರಿ ಬಮ್ಮಿಸೆಟ್ಟಿಯ ಮಗ ಮೋಚಿದೇವನು ಕೇತಮಲ್ಲ ಕುಂತಳದೇಶವ ಗವುಡಿನಾಡ ತಮುಟೆಯ ಮೇಲೆ ಬಂದು ಹೆಣ್ಡಿರುಡೆ ....ವಾಗಿ ಕಾದಿ ಸತ್ತೊಡೆ ಆತನ ಸತಿ ವಿಜಯ....ಮಹಾಸತಿಯಾದಳು. ಶ್ರೀಮತು ಬಮ್ಮಗೌಡನ ಮಗ ಮಾದ....ಗವುಡ ಮಾಡಿಸಿದ ಮದವಳಿಗೆ ಕಲು ನೆಡಿಸಿದು ಮಂಗಳ ಮಹಾಶ್ರೀ"

ಕೇತಮಲ್ಲನೆಂಬವನು ತಮುಟ ಗ್ರಾಮದಮೇಲೆ ಬಿದ್ದು ಅಲ್ಲಿನ ಸ್ತ್ರೀಯರ ಮಾನಾಪಹಾರ ಮಾಡಲನುವಾದನು. ಆಗ ಬಮ್ಮಿಸೆಟ್ಟಿಯ ಮಗ ಮೋಚಿದೇವ

---

[1] *Mysore Archæological Report* for 1925—No. 83.
[2] " " 1928—No. 88.

ಕೇತಮಲ್ಲನೊಂದಿಗೆ ಕಾದಾಡಿ ಸತ್ತ. ಅವನ ಸತಿ ವಿಜಯದೇವಿಯು ಮಹಾಸತಿಯಾದಳು. ಆಕೆಯ ಸ್ಮಾರಕವಾಗಿ ಮದವಳಿಗೆ ಕಲ್ಲನ್ನು ಸ್ಥಾಪಿಸಿದರು.

### ೩. ತೋಳು ಕೈಗೊಟ್ಟಳು

ಕುಣಿಗಲ್ ತಾಲ್ಲೂಕು ಸಂತೆಮಾವತ್ತೂರಿನ ನರಸಿಂಹದೇವರ ಗುಡಿಯ ಪಶ್ಚಿಮ ದಿಕ್ಕಿನಲ್ಲಿ ಒಂದು ಒಕ್ಕೈ ಮಾಸ್ತಿಗಲ್ಲು ನಿಂತಿದೆ. ಅದರಲ್ಲಿ ಈ ನಾಲ್ಕು ಪಾದಗಳಿವೆ:

"ಮ ಉತರ ಗಂಗ ಗೌ।ಡನ ಸೊಸೆ ಮಗಸಿ।ತಿ ಪುರ ಊಡದಲಿ। ತೋಳು ಕೈ ಗೊಟ್ಟಳು."

ಮಾವತೂರ ಮುತ್ತಿಗೆಯಾಯಿತು. ಆ ಹೊಡೆದಾಟದಲ್ಲಿ ಗಂಗ ಗೌಡನ ಮಗ ವೀರಸ್ವರ್ಗವೇರಿದನು. ಅವನ ಸತಿ ಮಗಸಿತಿ ತೋಳುಕೈಗೊಟ್ಟಳು; ಅಂದರೆ ಮಹಾಸತಿಯಾದಳು.

### ೪. ಮಾಸ್ತಿ ಹಕ್ಕಲ್

ಶಿವಮೊಗ್ಗೆ ಜಿಲ್ಲೆಯ ಸಾಗರ ತಾಲ್ಲೂಕಿನಲ್ಲಿ ಮಾಲಂದೂರೆಂಬ ಊರೊಂದಿದೆ. ಅಲ್ಲಿ 'ಮಾಸ್ತಿ ಹಕ್ಕಲ್' ಎಂಬ ವಿಸ್ತಾರವಾದ ನಿವೇಶನವೊಂದಿದೆ. ಹಿಂದಿನ ಕಾಲದಲ್ಲಿ ಮಾಸ್ತಿ ಕಲ್ಲುಗಳನ್ನೆಲ್ಲ ಇಲ್ಲೇ ನೆಡುತ್ತಿದ್ದರೋ ಏನೋ.

"ಸ್ವಸ್ತಿ ಶ್ರೀಮತು ವೀರ ಹರಿಹರರಾಯ ಪೃಥ್ವೀ ರಾಜ್ಯವನಾಳ್ವಲಿ ಶಾ। ಶಕ.ರ್ಷ ೧೩೦೮ ಕ್ಷಯ ಸಂವಚ್ಛರ ಚ।ಬಹುಳ ದಶಮಿಾ ಗುರುವಾರಲಿ ಮಲೆಯನ್ನೂರ ಬೇಡ ಬೀರ ಜೀಲಿ ಜೀಯರ ಬೆಸದಾನ್ತಿರವಲಿ ಅಮರರೊಳು ಪೋಗೆ ಬೊಮ್ಮಕ್ಕನು ಮಹಾಸತಿಯಾಗಿ ದೇವಲೋಕ ಪ್ರಾಪ್ತರಾದರು."

ಈ ಶಾಸನವು ಆ ಮಾಸ್ತಿ ಹಕ್ಕಲಿನಲ್ಲಿದೆ.

### ೫. ಕೊಂಡಕೆ ನಡೆದ ಮಹಾಸತಿ ದೇಕಬ್ಬೆ

ಮಹಾಸತಿಯ ಮಹಾಕಾವ್ಯ ರೂಪದ ಶಾಸನವೊಂದಿದೆ. [1]ಅದು ಕವಿರಾಜ ಬಾಂಧವ ಮಲ್ಲನ ಬಂಧ. ವೀರ ಕರುಣಾದ್ಭುತ ರಸಗಳ ತೊರೆ. ಸ್ಥಳಾವಕಾಶವಿಲ್ಲವಾಗಿ ಅದನ್ನು ಇಲ್ಲಿ ಕೊಡಲಾಗಿಲ್ಲ. ಅದರ ಕಥಾವಸ್ತು: ನವಿಲೆ ನಾಡಧಿಪತಿ ಕುಜಿವನ್ದ ಕುಲದ ಏಚ. ನುಗುನಾಡಧಿಪತಿ ಕುಡಿಯುರವಲ್ಲಭ ರವಿಗ. ರವಿಗನ ಮಗಳು ದೇಕಬ್ಬೆ. ಏಚನಿಗೂ ದೇಕಬ್ಬೆಗೂ ಮದುವೆಯಾಯಿತು. ನುಗುನಾಡು ನವಿಲೆ ನಾಡವರೆಲ್ಲ ತಲೆಕಾಡು ಚೋಳರ ಸಾಮಂತರು. ಏಚನೊಮ್ಮೆ ತನ್ನ ದಾಯಾದಿ ಯೊಡನೆ ಕಾದು ಅವನನ್ನು ಕೊಂದನು. ಚೋಳರಾಜನು ಏಚನನ್ನು ತಲೆಕಾಡಿಗೆ ಹಿಡಿದು ತರಿಸಿ ಅವನನ್ನು ಕೊಂದನು. ದೇಕಬ್ಬೆಗೆ ಈ ಸಂಗತಿ ಗೊತ್ತಾಯಿತು. ಆ ತಾಯಿ ಸತಿಯಾಗಿ ಸ್ವರ್ಗಕ್ಕೇರಿದಳು.

ಆಕೆಯ ತಂದೆ ರವಿಗನು ಮಗಳ ಮೇಲಿನ ಪ್ರೇಮದಿಂದ ಶಿಲಾಸ್ತಂಭ ನೆಡಿಸಿದನು; ಶಾಸನ ಹಾಕಿಸಿದನು.

ತಿ. ನಾ. ಶರ್ಮ

[1] *Epigraphia Carnatica*, Vol. IV, Mysore Dist. HG. 18.

# ಉತ್ತರಕಾಲೀನ ಸಾತವಾಹನರು

## I

ಸಾತವಾಹನರ ಮೂಲಪುರುಷನಾದ ಸಿಮುಖನಿಂದ ಕಟ್ಟಕಡೆಯ ಪುಲೋಮಾವಿಯ ತನಕ ಆಳಿದ ಹೆಚ್ಚುಕಡಿಮೆ ೩೦ ಅರಸರಲ್ಲಿ ಗೌತಮೀಪುತ್ರ ಎಂಬವನಿಂದ ಕೊನೆಯವರೆಗಣ ವರಿಸೆಯನ್ನು ಪುರಾಣಗಳಲ್ಲಿ[1] ಹೀಗೆ ಹೇಳಿದೆ—

ರಾಜಾ ಚ ಗೌತಮೀಪುತ್ರ ಏಕವಿಂಶತ್ತತೋ ನೃಪಃ ।<br>
ಅಷ್ಟಾವಿಂಶಃ ಸುತಸ್ತಸ್ಯ ಪುಲೋಮಾ ವೈ ಭವಿಷ್ಯತಿ ॥ ೧ ॥<br>
ಏಕೋನತ್ರಿಂಶತಿಂ ಭಾವ್ಯಃ ಶಾತಕರ್ಣಿಸ್ತತೋ ನೃಪಃ ।<br>
ಶಿವಶ್ರೀರ್ವೈ ಪುಲೋಮಾತ್ತು ಚತಸ್ರೋ ಭವಿತಾ ನೃಪಃ ॥ ೨ ॥<br>
ಶಿವಸ್ಕಂಧ ಶಾತಕರ್ಣಾರ್ದ್ಭವಿತಾಸ್ಯಾತ್ಮಜಃ ಸಮಾಃ ।<br>
ನವವಿಂಶತಿ ವರ್ಷಾಣಿ ಯಜ್ಞ ಶ್ರೀಃ ಶಾತಕರ್ಣಿಕಃ ॥ ೩ ॥<br>
ಷಡೇವ ಭವಿತಾ ತಸ್ಮಾದ್ವಿಜಯಸ್ತು ಸಮಾ ನೃಪಃ ।<br>
ಚಂಡ ಶ್ರೀಃ ಶಾತಕರ್ಣಿಸ್ತು ತಸ್ಯ ಪುತ್ರಃ ಸಮಾದಶ ॥ ೪ ॥<br>
ಪುಲೋಮಾವಿಃ ಸಮಾಃಸಪ್ತ ಅಂತ್ಯಸ್ತೇಷಾಂ ಭವಿಷ್ಯತಿ ॥ ೫ ॥

ಪ್ರೊ॥ ಲೂಡರ್ಸರ ಪ್ರಾಕೃತ ಶಾಸನಗಳ ಪಟ್ಟಿಯಲ್ಲಿ (Lueders' *List of Brahmi Inscriptions*) ನಂ. 1123ನೆಯದೆಂದು ಅಂಕಿಸಿರುವ[2] ನಾಸಿಕದೊಂದು ಬೌದ್ಧ ಗುಹೆಯಲ್ಲಿಯ ಪ್ರಾಕೃತ ಭಾಷೆಯ ಶಾಸನದಿಂದ[3] ಮಹಾದೇವಿಯಾದ ಗೌತಮೀ ಬಲಶ್ರೀ ಎಂಬವಳು 'ರಾಜರಞೊ' (ಬಂತಿ ೧) = ರಾಜರಾಜನಾದ, ಅತಏವ ಸಮ್ರಾಜನಾದ, ಹಾಗೂ 'ಏಕಬಮ್ಹಣ' (ಬಂ. ೭) ಎಂಬುದರಿಂದ ಬ್ರಾಹ್ಮಣನಾದ, ಗೌತಮೀಪುತ್ರ ಶ್ರೀಶಾತಕರ್ಣಿಯ ತಾಯಿ ಎಂದೂ ಆ ಶಾಸನವು ಹುಟ್ಟಿದಂದಿನ ಆಳರಸನಾಗಿದ್ದ ವಾಸಿಷ್ಠೀಪುತ್ರ ಶ್ರೀ ಪುಳುಮಾಯಿಯ ಅಜ್ಜಿ ಎಂದೂ ತಿಳಿಯುವುದರಿಂದ, ಮೇಲೆ ೧ನೆಯ ಶ್ಲೋಕದಲ್ಲಿ ಗೌತಮೀಪುತ್ರ ಎಂದಿರುವಾತನ ಪೂರ್ಣ ಹೆಸರು ಗೌತಮೀಪುತ್ರ (ಶ್ರೀ) ಶಾತಕರ್ಣಿ ಎಂದೂ ಅವನ ಮಗನೆಂದು ಅದೇ ಶ್ಲೋಕದಲ್ಲಿ ಹೇಳಿರುವ ಪುಲೋಮ ಎಂಬವನ ಪೂರ್ಣ ಹೆಸರು ವಾಸಿಷ್ಠೀಪುತ್ರ (ಶ್ರೀ) ಪುಳುಮಾಯಿ ಎಂದೂ ಗೊತ್ತಾಗುತ್ತದೆ. ಗೌತಮೀಪುತ್ರನ ಆಳಿಕೆಯ ೧೮ನೆಯ ವರ್ಷದ ನಂ. 1125 ಹಾಗೂ ೨೪ನೆಯ ವರ್ಷದ ನಂ. 1126ನೆಯ ಶಾಸನಗಳಲ್ಲಿ ಅವನನ್ನು ಗೌತಮೀಪುತ್ರ ಶ್ರೀ ಶಾತಕರ್ಣಿ ಎಂದದೆ; ಅವನ ಮಗನಾದ ಪುಲೋಮನೆಂಬ ಪುಳುಮಾಯಿಯ ಆಳಿಕೆಯ ೩ನೆಯ ವರ್ಷದ ನಂ. 1147, ೭ನೆಯ ವರ್ಷದ ನಂ. 1110, ೧೯ನೆಯ ವರ್ಷದ ನಂ. 1123, ೨೨ನೆಯ ವರ್ಷದ ನಂ. 1124, ೨೪ನೆಯ ವರ್ಷದ ನಂ. 1106

[1] Pargiter: *Purana Text of the Dynasties of the Kali Age* (Pargiter), ಪುಟ 42-43. ಈ ಶ್ಲೋಕಗಳಲ್ಲಿಯ ಕೆಲವು ಶಬ್ದಗಳಿಗೆ ಆಯಾ ಪುರಾಣಗಳಲ್ಲಿ ಹಾಗೂ ಆ ಪುರಾಣಗಳ ಆಯಾ ಪ್ರತಿಗಳಲ್ಲಿ ಹಲವು ಪಾಠಾಂತರಗಳಿವೆ. ಅವನ್ನು ವಿಚಾರಿಸಿ ನನಗೆ ಸರಿಯೆಂದು ಕಂಡ ಪಾಠವನ್ನು ಇಲ್ಲಿ ಕೊಟ್ಟಿದೆ. ಅದೇಕೆ ಎಂಬ ಕಾರಣಗಳಾದರೊ ಈ ಲೇಖದ ಆಯವನ್ನು ಮೀರುವುದರಿಂದ, ಅವನ್ನಿಲ್ಲಿ ಕೊಟ್ಟಿಲ್ಲ.

[2] ಈ ಸಂಖ್ಯೆಯೂ ಈ ಲೇಖವಲ್ಲಿ ಮುಂದೆ ಬದಗುವ ಇಂಥವೇ ಶಾಸನ ಸಂಖ್ಯೆಗಳೂ *Epigraphia Indica* (*EI.*) Xನೆಯ ಸಂಪುಟದ ಅನುಬಂಧವಾದ (Appendix) ಲೂಡರ್ಸರ ಪ್ರಾಕೃತ ಶಾಸನಗಳ ಪಟ್ಟಿಯಲ್ಲಿಯ ಆಯಾ ಶಾಸನಗಳ ಸಂಖ್ಯೆಗಳಾಗಿವೆ.

[3] *EI.* VIII, ಪು. 60ರಲ್ಲಿ ಲೂಡರ್ಸರ ಪಟ್ಟಿಯ ನಂ. 1123ನೆಯ ಶಾಸನವನ್ನು ಸಮಗ್ರವಾಗಿ ಕೊಟ್ಟಿದೆ.

ಇತ್ಯಾದಿಯಲ್ಲಿಯೂ ಇವನ ನಾಣ್ಯಗಳಲ್ಲಿಯೂ[1] ಇವನನ್ನು ವಾಸಿಷ್ಠೀಪುತ್ರ ಶ್ರೀ ಪುಳುಮಾಯಿ(ವಿ) ಎಂದದೆ. ನಂ. 1126ನೆಯದು ಗೌತಮೀಪುತ್ರನ ಆಳಿಕೆಯ ೨೪ನೆಯ ವರ್ಷದ ಶಾಸನವಾಗಿರುವುದರಿಂದ, ಆತನು ಮೇಲಣ ೧ನೆಯ ಶ್ಲೋಕದ ಪೂರ್ವಾರ್ಧದಲ್ಲಿ ಆತನಿಗೆ ಹೇಳಿರುವ 'ಏಕವಿಂಶತ್'=೨೧ ವರ್ಷವಷ್ಟೇ ಅಲ್ಲ, ಅದಕ್ಕಿಂತ ಹೆಚ್ಚಿಗೆ ಆಳಿರಬೇಕು; ಅತಏವ 'ಏಕವಿಂಶತ್' ಎಂಬುದು ಪ್ರತ್ಯಕ್ಷತಃ 'ಏಕತ್ರಿಂಶತ್'=೩೧ ಎಂಬುದರ ಬದಲಿಗೆ ಸಂಪ್ರತಿಕಾರರಿಂದ ಆದ ತಪ್ಪೆನಿಸುವುದರಿಂದ, ಆತನು ೩೧ ವರ್ಷ ಆಳಿರಬೇಕೆಂದು ಸಯುಕ್ತಿಕವಾಗಿ ನಿರ್ಧರಿಸಬಹುದು.

ಗೌತಮೀಪುತ್ರನ ತರುವಾಯ ಅವನ ಮಗನಾದ ಪುಲೋಮನು (ಪುಳುಮಾಯಿ) ೨೮ ವರ್ಷವಾಳಿದ ಮೇಲೆ (ಶ್ಲೋ. ೧) ಅವನ ಬಳಿಕಲೇ ಅರಸನಾದ ಶಾತಕರ್ಣಿಯನ್ನು (ಶ್ಲೋ. ೨) ಪುಲೋಮನ ಮಗನೆಂದಿಲ್ಲದ ಕಾರಣ ಕಂಡಿತವಾಗಿಯೂ ಆತನ ತಮ್ಮನಾಗಿರಬೇಕಾದ ಈತನು ನಂ. 994ನೆಯ ಕಣ್ಹೇರಿಯ ಪಾನೀಯ ಭಾಜನದ ಶಾಸನದಲ್ಲಿ ಹೇಳಲ್ಪಟ್ಟಿರುವ ವಾಸಿಷ್ಠೀಪುತ್ರ ಶಾತಕರ್ಣಿಯೇ ಸರಿ ಎಂದು ವಾಸಿಷ್ಠೀಪುತ್ರ ಪುಳುಮಾಯಿ ಎಂಬ ಪುಲೋಮನಂತೆಯೇ ಈತನೂ ವಾಸಿಷ್ಠೀಪುತ್ರನು, ಅಂದರೆ ಅವರಿಬ್ಬರೂ ಗೌತಮೀಪುತ್ರನ ವಾಸಿಷ್ಠಿ ಎಂಬ ವಸಿಷ್ಠ ಗೋತ್ರದವಳಾದ ಅದೊಬ್ಬಳೇ ಮಹಾರಾಣಿಯ ಮಕ್ಕಳು ಎಂಬುದರಿಂದ ಖಚಿತವಾಗುತ್ತದೆ. ವಾಸಿಷ್ಠೀಪುತ್ರ ಶಾತಕರ್ಣಿಯ ಹೆಸರು ಶಿವಸ್ಕಂಧನೆಂದು ೩ನೆಯ ಶ್ಲೋಕದಲ್ಲಿಯ 'ಶಿವಸ್ಕಂಧ ಶಾತಕರ್ಣಾತ್' ಎಂಬುದರಿಂದ ತಿಳಿಯುತ್ತದೆ.

೨ನೆಯ ಶ್ಲೋಕದಲ್ಲಿ 'ಶಿವಶ್ರೀರ್ವೈ ಪುಲೋಮಾತ್' ಎಂಬುದರಿಂದ ಪುಲೋಮನೆಂಬ ವಾಸಿಷ್ಠೀಪುತ್ರ ಪುಳುಮಾಯಿಯ ಮಗನೆಂದು ತಿಳಿವ ಶಿವಶ್ರೀಯ ಹೆಸರನ್ನು ಶಿವಸ್ಕಂಧ ಶಾತಕರ್ಣಿಯ ಬಳಿಕ ಹೇಳಿರುವುದರಿಂದ, ಶಿವಶ್ರೀ (ತನ್ನ ತಂದೆಯ ಬಳಿಕಲೇ ಅಲ್ಲ) ತನ್ನ ಚಿಕ್ಕಪ್ಪನಾದ ಶಿವಸ್ಕಂಧನ ತರುವಾಯ ಆಳಿರಬೇಕು. ಶಿವಶ್ರೀಯ ನಾಣ್ಯಗಳಲ್ಲಿ[2] 'ವಾಸಿಠಿಪುತ ಸಿವ ಸಿರಿ ಸಾತಕಂಣಿ'= ವಾಸಿಷ್ಠೀಪುತ್ರ ಶಿವ ಶ್ರೀ ಶಾತಕರ್ಣಿ ಎಂದಿರುವುದರಿಂದ, ಅವನ ತಾಯಿಯೂ (ಅವನ ಪಿತಾಮಹಿಯಂತೆ) ವಸಿಷ್ಠ ಗೋತ್ರದವಳಾಗಿರಬೇಕು.

ಅವನ ಬಳಿಕ ಅವನ ಚಿಕ್ಕಪ್ಪನ ಮಗನಾದ ಯಜ್ಞ ಶ್ರೀಶಾತಕರ್ಣಿ ಆಳಿದನೆಂದು ೩ನೆಯ ಶ್ಲೋಕದಿಂದ ತಿಳಿಯುತ್ತದೆ. ಇವನ ಆಳಿಕೆಯ ೭ನೆಯ ವರ್ಷದ ನಂ. 1146, ೧೬ನೆಯ ವರ್ಷದ ನಂ. 1024, ೨೭ನೆಯ ವರ್ಷದ ನಂ. 1340 ಇತ್ಯಾದಿ ಶಾಸನಗಳಲ್ಲಿಯೂ ಇವನ ನಾಣ್ಯಗಳಲ್ಲಿಯೂ[3] ಇವನ ಪೂರ್ಣ ಹೆಸರು 'ಗೊತಮಿ ಪುತ ಸಿರಿ ಯಞ (ಯಜ್ಞ) ಸಾತಕಣಿ'=ಗೌತಮೀಪುತ್ರ ಶ್ರೀ ಯಜ್ಞ ಶಾತಕರ್ಣಿ ಎಂದಿರುವುದರಿಂದ, ಇವನ ತಾಯಿ ಗೌತಮ ಗೋತ್ರದವಳಾಗಿರಬೇಕು. ಆಮೇಲೆ ಆಳಿದ ಇವನ ಮಗನಾದ ವಿಜಯನ (ಶ್ಲೋ. ೪)

[1] Brown : *Coins of India* (*BCI.*), ಪು. 21.

[2] Jouveau-Dubreuil : *Ancient History of the Deccan* (*AHD.*), ಪು. 41.

[3] Rapson : *Indian Coins* (*RIC.*), ಪು. 23 (ಪಟ III-5).

ಶಾಸನಗಳಾಗಲಿ ನಾಣ್ಯಗಳಾಗಲಿ ಇದುವರೆಗೆ ದೊರಕಿಲ್ಲ. ವಿಜಯನ ಮಗನಾದ ಚಂಡಶ್ರೀಯು (ಶ್ಲೋ. ೪) ಪಿಟ್ಟಾಪುರದತ್ತಣ ಕೊಡವಲಿಯ ಶಿಲಾಲೇಖದಲ್ಲಿ[1] 'ವಾಸಿಠಿಪುತ ಸಿರಿ ಚಂಡ ಸಾತಿ' ಎಂದೂ ಅವನ ನಾಣ್ಯಗಳಲ್ಲಿ[2] 'ವಾಸಿಠಿಪುತ ಸಿರಿ ಚಡ ಸಾತಿ' ಎಂದೂ ಇರುವುದರಿಂದ, ಅವನ ಪೂರ್ಣ ಹೆಸರು ವಾಸಿಷ್ಠೀಪುತ್ರ ಶ್ರೀ ಚಂಡ ಶಾತಕರ್ಣಿ ಎಂದಿದ್ದು ಅವನು ವಸಿಷ್ಠ ಗೋತ್ರದ ಮಹಾರಾಣಿಯ ಮಗನಾಗಿರಬೇಕು.

'ರಞೋ ಸಾತವಹನಾನಂ ಸಿರಿ ಪುಳುಮಾವಿಸ' ಎಂದಿರುವ ಬಳ್ಳಾರಿ ಜಿಲ್ಲೆಯ ವ್ಯಾಕದೊನಿ ಎಂಬಲ್ಲಿಯ ಶಿಲಾಲೇಖದಲ್ಲಿ[3] ಸಾತವಾಹನ ಅರಸನಾದ ಆ ಪುಳುಮಾವಿಯನ್ನು ಬರೇ ಪುಳುಮಾವಿ ಎಂದಲ್ಲದೆ ವಾಸಿಷ್ಠೀಪುತ್ರ ಪುಳುಮಾವಿ ಎಂದಿಲ್ಲದಿರುವುದರಿಂದಲೂ ವಾಸಿಷ್ಠೀಪುತ್ರ ಪುಳುಮಾವಿಯ ಶಾಸನಗಳಲ್ಲಿ ಅವನನ್ನು ವಾಸಿಷ್ಠೀಪುತ್ರನೆಂದಲ್ಲದೆ ಬರೇ ಪುಳುಮಾವಿ ಎಂದಿಲ್ಲದಿರುವುದರಿಂದಲೂ, ವ್ಯಾಕದೊನಿಯ ಶಿಲಾಲೇಖದಾತನು ವಾಸಿಷ್ಠೀಪುತ್ರ ಪುಳುಮಾವಿಯಲ್ಲ, ಚಂಡಶ್ರೀಯ ಮಗನೆಂದು ಮೇಲಣ ೫ನೆಯ ಶ್ಲೋಕದಿಂದ ತಿಳಿವ ಆ ಕೊನೆಯ ಪುಲೋಮಾವಿಯಾಗಿರಬೇಕು. ಆದರೆ ವ್ಯಾಕದೊನಿಯ ಶಾಸನವು ಅವನ ಆಳಿಕೆಯ ೮ನೆಯ ವರ್ಷದಲ್ಲಿ ತೇದಿಸಲ್ಪಟ್ಟಿರುವುದರಿಂದ, ಅವನು ಪುರಾಣಗಳಲ್ಲಿ (ಶ್ಲೋ. ೫) ಹೇಳಿರುವಂತೆ ಸಪ್ತ=೭ ವರ್ಷವಲ್ಲ, ಕಡಮೇ ಅಂದರೆ ೮ ಆದರೂ ವರ್ಷ ಆಳಿರಬೇಕು.

- ೧. ಗೌತಮೀಪುತ್ರ ಶಾತಕರ್ಣಿ (೩೧ ವರ್ಷ)
  - ೨. ವಾಸಿಷ್ಠೀಪುತ್ರ ಪುಳುಮಾಯಿ(ವಿ) (೨೮ ವರ್ಷ)
    - ೪. ವಾಸಿಷ್ಠೀಪುತ್ರ ಶಿವ ಶ್ರೀ ಶಾತಕರ್ಣಿ (೪ ವರ್ಷ)
  - ೩. ವಾಸಿಷ್ಠೀಪುತ್ರ ಶಿವಸ್ಕಂಧ ಶಾತಕರ್ಣಿ (೨೯ ವರ್ಷ)
    - ೫. ಗೌತಮೀಪುತ್ರ ಯಜ್ಞ ಶ್ರೀ ಶಾತಕರ್ಣಿ (೨೯ ವರ್ಷ)
      - ೬. ವಿಜಯ (೬ ವರ್ಷ)
        - ೭. ವಾಸಿಷ್ಠೀಪುತ್ರ ಚಂಡ ಶ್ರೀ ಶಾತಕರ್ಣಿ (೧೦ ವರ್ಷ)
          - ೮. ಪುಳುಮಾವಿ (ಸು. ೮ ವರ್ಷ)

1 *EI.* XVIII, ಪು. 318.
2 *AHD.* ಪು. 42.
3 *EI.* XIV, ಪು. 155.

## II

ಮೇಲೆ ಕಂಡಿರುವ ನಂ. 994 ನೆಯ ಕಣ್ಹೇರಿಯ ಪಾನೀಯ ಭಾಜನದ ಲೇಖದಲ್ಲಿ ವಾಸಿಷ್ಠೀಪುತ್ರ (ಶಿವಸ್ಕಂಧ) ಶಾತಕರ್ಣಿಯ ದೇವಿ (=ರಾಣಿ) ಕಾರ್ದಮಕ ರಾಜವಂಶದ ಮಹಾಕ್ಷತ್ರಪನಾದ ರುದ್ರದಾಮನ ಮಗಳೆಂದದೆ.[1] ಉಜ್ಜಯಿನಿಯ ಮಹಾಕ್ಷತ್ರಪನಾದ[2] ಚಷ್ಟನ (Chastana) ಎಂಬವನ ಮೊಮ್ಮಗನೂ ಉತ್ತರಾಧಿಕಾರಿಯೂ ಆಗಿದ್ದ ರುದ್ರದಾಮನಾದರೊ ಮಹಾಕ್ಷತ್ರಪನೆಂಬ ಮಾತ್ರದಿಂದಲೆ ವೈದೇಶಿಕನೆಂದು ತಿಳಿವ ಶಕ (Scythian) ಜಾತಿಯವನಾಗಿದ್ದು ಭಾರತೀಯ ಆರ್ಯರ ಚಾತುರ್ವರ್ಣ್ಯದಲ್ಲಿ ಏತರವನೂ ಅಲ್ಲ, ಅತಏವ ದ್ವಿಜಾತಿಗಳಿಗೆ ಮಾತ್ರ ಸಲತಕ್ಕ ಯಾವ ಗೋತ್ರಕ್ಕೂ ಸೇರಿದವನಲ್ಲ ಎಂಬುದರಿಂದ, ಬ್ರಾಹ್ಮಣನಾದ ಆ ಸಾತವಾಹನ ಅರಸನು ಮದುವೆಯಾದ ಈತನ ಮಗಳು ಆತನ ಮಹಾದೇವಿ, ಅಂದರೆ ಪಟ್ಟರಾಣಿ, ಆಗಿರದೆ ಆತನ ಅನೇಕ ರಾಣಿ (=ದೇವಿ)ಯರಲ್ಲಿ ಒಬ್ಬಳಾಗಿದ್ದಳೆಂದು ಅವಳನ್ನು ಈ ಶಾಸನದಲ್ಲಿ ಮಹಾದೇವಿ ಎನ್ನದೆ ದೇವಿ ಎಂದಿರುವುದರಿಂದ ಸ್ಪಷ್ಟವಾಗುತ್ತದೆ. ಆದಕಾರಣ ಗೌತಮೀಪುತ್ರ ಎಂಬುದರಿಂದ ಗೌತಮ ಗೋತ್ರದವಳ ಮಗನೆಂದು ತಿಳಿವ ಯಜ್ಞ ಶ್ರೀ ಶಾತಕರ್ಣಿಯಾದರೊ ಶಿವಸ್ಕಂಧನ ಪ್ರಾಯಶಃ ಪಟ್ಟರಾಣಿಯಾದ ಗೌತಮಿಯ (ಅಂದರೆ ಗೌತಮ ಗೋತ್ರದವಳ) ಮಗನಲ್ಲದೆ, ರುದ್ರದಾಮನ ದೌಹಿತ್ರನಲ್ಲ.

'ವರ್ಷೇ ದ್ವಿಸಪ್ತತಿತಮೇ ೭೨' ಅಂದರೆ ಶಾಲಿವಾಹನ ಶಕದ ೭೨ನೆಯ ವರ್ಷದಲ್ಲಿ=ಕ್ರಿ. ಶ. 150–151ರಲ್ಲಿ ಹುಟ್ಟಿದ ಗಿರನಾರ ಶಿಲಾಲೇಖದಲ್ಲಿ[3] ರುದ್ರದಾಮನನ್ನು 'ದಕ್ಷಿಣಾಪಥ ಪತೇಃ ಸಾತಕರ್ಣೇರ್ದ್ವಿರಪಿ ನಿರ್ವ್ಯಾಜಮವಜಿತ್ಯಾವಜಿತ್ಯ ಸಂಬಂಧಾವಿದೂರತಯಾನುತ್ಸಾದನಾತ್ಪ್ರಾಪ್ತ ಯಶಸಾ' ಅಂದರೆ ದಕ್ಷಿಣಾಪಥದ ಒಡೆಯನಾದ ಸಾತಕರ್ಣಿಯನ್ನು ಎರಡು ಬಾರಿ ತೀರ ಸೋಲಿಸಿಯೂ ಅವನೊಂದಿಗೆ ತನಗಿದ್ದ ಅವಿದೂರವಾದ ಸಂಬಂಧದ ಕಾರಣದಿಂದ ಅವನನ್ನು ಉತ್ಸಾದಿಸಲಿಲ್ಲ (=ಕಿತ್ತುಬಿಡಲಿಲ್ಲ) ಎಂದು ಕೀರ್ತಿಗೊಂಡವನು ಎಂದಿರುವಲ್ಲಿ, ಆ ಸೋತ ಸಾತಕರ್ಣಿಯಾದರೊ ರುದ್ರದಾಮನ ಅಳಿಯನಾದ ವಾಸಿಷ್ಠೀಪುತ್ರ (ಶಿವಸ್ಕಂಧ) ಶಾತಕರ್ಣಿ ತಾನೆ ಎಂದು ವಿದ್ವಾಂಸರ ಅಭಿಪ್ರಾಯವದೆ. ಆದರೆ ಅದನ್ನು ಒಪ್ಪಲಾಗುವುದಿಲ್ಲ. ಏಕೆಂದರೆ 'ವಿದೂರ' ಅಂದರೆ 'ಬಹಳ ದೂರ', 'ಅವಿದೂರ' ಎಂದರೆ ಬಹಳ ದೂರವೂ ಅಲ್ಲ ಬಹಳ ಹತ್ತಿರವೂ ಅಲ್ಲ ಎಂಬುದರಿಂದ, ಅಷ್ಟು ಸಮೀಪದ ಸಂಬಂಧಿಕರಾದ ಆ ಅಳಿಯ ಮಾವಂದಿರ ಪರಸ್ಪರ ಸಂಬಂಧವನ್ನು ವ್ಯಕ್ತೀಕರಿಸುವಲ್ಲಿ ಪ್ರಯೋಗಿಸಲ್ಪಡತಕ್ಕ ವಿಶೇಷಣವಾದರೊ 'ಅವಿದೂರ' ಅಲ್ಲ, 'ಸಮೀಪ' ಅಥವಾ 'ನಿಕಟ' ಎಂಬುದಾಗಿರಬೇಕು ಎಂಬ ಕಾರಣದಿಂದ, ರುದ್ರದಾಮನಿಂದ ಸೋಲಿಸಲ್ಪಟ್ಟಾತನು ಅವನ ಅಳಿಯನೇ ಆಗಿದ್ದರೆ ಆತನನ್ನು

---

[1] *Indian Antiquary* (*IA.*), XLVII (1918), ಪು. 155.

[2] ಉತ್ತರಾಪಥದ ಮಥುರೆ, ಉಜ್ಜಯಿನಿ ಇತ್ಯಾದಿ ಪ್ರದೇಶಗಳಲ್ಲಿ ಆಳಿದ ಶಕ ಜಾತಿಯ ಅರಸರಲ್ಲಿ ಉಪರಾಜರಾಗಿದ್ದವರಿಗೆ ಕ್ಷತ್ರಪ (satrap) ಎಂದೂ ಮಹಾರಾಜರಾಗಿದ್ದವರಿಗೆ ಮಹಾಕ್ಷತ್ರಪ (great satrap) ಎಂದೂ ಆಯಾ ಅಧಿಕಾರಸೂಚಿಯಾದ ಉಪಾಧಿಗಳಿದ್ದುವು.

[3] *EI.* VIII, ಪು. 47.

ಕುರಿತು ರುದ್ರದಾಮನ ಈ (ಗದ್ಯಬದ್ಧವಾದ, ಅತಏವ ಛಂದಸ್ಸಿನ ನಿರ್ಬಂಧ ವಿಲ್ಲದ) ಶಾಸನದಲ್ಲಿ 'ಸಂಬಂಧ ಸಮೀಪತಯಾ' ಇಲ್ಲವೆ 'ಸಂಬಂಧ ನಿಕಟತಯಾ' ಎಂದಲ್ಲದೆ ಈಗ ಇರುವಂತೆ 'ಸಂಬಂಧಾವಿದೂರತಯಾ' ಎಂದು ಸರ್ವಥಾ ಇರುತ್ತಿದ್ದಿಲ್ಲ. ಆದಕಾರಣ ರುದ್ರದಾಮನಿಂದ ಪರಾಭೂತನಾದ ಶಾತಕರ್ಣಿ ಯಾದರೊ ಅವನ ಅಳಿಯನಾದ ಶಿವಸ್ಕಂಧನೆಂದಿಗೂ ಅಲ್ಲ. ಹಾಗೆಯೇ ಆತನು ಶಾತಕರ್ಣಿ ಎಂಬ ಉಪಾಧಿ ಇಲ್ಲದ, ಹಾಗೂ ಶಿವಸ್ಕಂಧ ಶಾತಕರ್ಣಿಯ ಅಣ್ಣನೂ ಮುಂದೆ ತಿಳಿವಂತೆ ರುದ್ರದಾಮನ ಅಜ್ಜನಾದ ಚಷ್ಟನನ ಸಮಸಾಮಯಿಕನೂ ಆದ ವಾಸಿಷ್ಠೀಪುತ್ರ ಪುಳುಮಾಯಿಯೂ ಅಲ್ಲ ಎಂಬುದರಿಂದ, ಆತನು ಶಿವಸ್ಕಂಧನ ಬಳಿಕ ಆಳಿದ ಶಿವ ಶ್ರೀ ಶಾತಕರ್ಣಿಯೊ ಅಥವಾ ಶಿವಸ್ಕಂಧನ ಮಗನಾದರೂ ರುದ್ರದಾಮನ ದೌಹಿತ್ರನಲ್ಲದ ಯಜ್ಞಶ್ರೀ ಶಾತಕರ್ಣಿಯೊ ಆಗಿರಬೇಕು. ಆದರೆ ಯಜ್ಞಶ್ರೀಯ ನಾಣ್ಯಗಳಲ್ಲಿ ರುದ್ರದಾಮನ ನಾಣ್ಯಗಳನ್ನು ಅನುಪ್ರತಿಸಿರುವ[1] ಕಾರಣ ಅವರೊಳಗೆ ಪರಸ್ಪರ ವಿರೋಧವು ಹೇಗೂ ಇದ್ದಿರಲಾರದಷ್ಟೇ, ಪ್ರತ್ಯುತ ಅವರಲ್ಲಿ ತುಂಬ ಮೈತ್ರಿ ಇದ್ದಿತೆಂದೂ ಯಜ್ಞಶ್ರೀ ಶಾತಕರ್ಣಿಗೆ ರುದ್ರದಾಮನಲ್ಲಿ ಧಾರಾಳವಾದ ಗೌರವವೂ ಇದ್ದಿರಬೇಕೆಂದೂ ಸುಲಭವಾಗಿ ತಿಳಿಯುವುದರಿಂದ, ರುದ್ರದಾಮನೊಂದಿಗೆ ಕಾದಾಡಿದ ಶಾತಕರ್ಣಿಯಾದರೊ ಯಜ್ಞಶ್ರೀಯೂ ಅಲ್ಲ. ಅತಏವ ರುದ್ರದಾಮನಿಂದ ಪರಾಜಿತನಾದಾತನು ಶಿವ ಶ್ರೀ ಶಾತಕರ್ಣಿಯೇ ಸರಿ ಎಂಬಲ್ಲಿ ಸಂಶಯವಿಲ್ಲ.

ರುದ್ರದಾಮನು ಶಿವ ಶ್ರೀ ಶಾತಕರ್ಣಿಯೊಂದಿಗೆ ಏತಕ್ಕೆ ಕಾದಾಡಿದನೆಂದು ವಿಚಾರಿಸಿದರೆ, ತನ್ನ ಅಳಿಯನಾದ ಶಿವಸ್ಕಂಧನು ಕಾಲವಾಗುತ್ತಲೆ ಅವನ ಹೆಂಡತಿ ಯಾದ ತನ್ನ ಮಗಳಿಗೆ ಪ್ರಾಯಶಃ ಮಕ್ಕಳಿಲ್ಲದ ಕಾರಣದಿಂದಲೊ ಅಥವಾ ಆಕೆ ಶಿವಸ್ಕಂಧನ ಪಟ್ಟರಾಣಿಯಲ್ಲದುದರಿಂದ ಆಕೆಯ ಮಕ್ಕಳು ಪಟ್ಟಕ್ಕೆ ಅನರ್ಹರೆಂಬ ಕಾರಣದಿಂದಲೊ, ಆತನ ಪಟ್ಟದಲ್ಲಿ ಆತನ ಮಗನಾದ ಯಜ್ಞಶ್ರೀಯನ್ನು ಕುಳ್ಳಿರಿಸುವ ಬಗ್ಗೆ, ಶಿವಸ್ಕಂಧನ ಅಣ್ಣನಾದ ಪುಳುಮಾಯಿಯ ಮಗನೆಂಬ ಹಿರಿಯ ತನದಿಂದ ಆ ಪಟ್ಟವೇರಿದ ಶಿವಶ್ರೀಯೊಂದಿಗೆ ರುದ್ರದಾಮನು ಯುದ್ಧಮಾಡಿರ ಬೇಕೆಂದು ಸಯುಕ್ತಿಕವಾಗಿ ನಿರ್ಣಯಿಸಲಾಗುವುದರಿಂದ, ತಾನು ಇಮ್ಮೆಯೂ ಸೋಲಿಸಿದ ಶಿವಶ್ರೀಯನ್ನು ಉತ್ಸಾದಿಸಲಿಲ್ಲ, ಅಂದರೆ ಪಟ್ಟದಿಂದ ತಳ್ಳಿಬಿಡಲಿಲ್ಲ, ಎಂದಿರುವ ರುದ್ರದಾಮನು ಶಿವಶ್ರೀಯ ತರುವಾಯ ಆ ಪಟ್ಟವು ಅವನ ಮಕ್ಕಳಿಗೆ ಹೋಗದೆ ಯಜ್ಞಶ್ರೀಗೆ ದೊರೆಯಬೇಕೆಂದು ಅವನೊಂದಿಗೆ ಒಪ್ಪಂದಮಾಡಿ ತಾನೆ ಆತನನ್ನು ಆಳಗೊಟ್ಟಿರಬೇಕು, ಹೀಗೆ ರುದ್ರದಾಮನ ಸಹಾಯದಿಂದ ಶಿವ ಶ್ರೀಯ ಬಳಿಕ ಅಸಪತ್ನನಾಗಿ ಆ ಪಟ್ಟವೇರಿದ ಯಜ್ಞಶ್ರೀಯೂ ತನಗೆ ಆ ಬಗ್ಗೆ ರುದ್ರದಾಮನಲ್ಲಿರುವ ಕೃತಜ್ಞತೆಯನ್ನು ತೋರ್ಪಡಿಸಲೆಂದೇ ಅವನ ನಾಣ್ಯಗಳನ್ನು ಅನುಕರಿಸಿ ತನ್ನವನ್ನು ಟಂಕಿಸಿರಬೇಕು ಎಂದು ಯಥೋಚಿತವಾಗಿ ನಿರ್ಧರಿಸ ಬಹುದು. ಹಾಗಾದರೆ ರುದ್ರದಾಮನ ಕ್ರಿ. ಶ. 150–151ನೆಯ ಇಸವಿಯ

---

[1] *AHD.* ಪುಟ 43; *Journal of the Bihar and Orissa Research Society* (*JBORS.*), XVI (1930), ಪು. 280.

ಈ ಗಿರನಾರದ ಶಾಸನಕಾಲದ ಒತ್ತಿನಲ್ಲಿ ಕೊಂಚವೇ ಹಿಂದೆ ಆಗಿರಬೇಕಾದ ಶಿವಶ್ರೀಯ ಅವೆರಡು ಪರಾಜಯಗಳಲ್ಲಿ ಮೊದಲನೆಯದು ಶಿವಶ್ರೀ ಪಟ್ಟವೇರಿದೊಡನೆಯೇ ಜರುಗಿರಬೇಕು, ಮತ್ತಿನದು ಅಲ್ಲಿಂದ ಕಿರುಗಾಲದೊಳಗೆ ಜರುಗಿರಬೇಕು ಎಂದು ಸ್ವಯಂಸಿದ್ಧವಾಗುವುದರಿಂದ, ೪ ವರ್ಷ ಆಳಿದನೆಂದು ಮೇಲಣ ೨ನೆಯ ಶ್ಲೋಕದಿಂದ ತಿಳಿವ ಶಿವಶ್ರೀಯ ಮೊದಲನೆಯ ಸೋಲು ಕ್ರಿ. ಶ. 148–149 ರಲ್ಲಿಯೂ ಎರಡನೆಯದು ಕ್ರಿ. ಶ. 149–150ರಲ್ಲಿಯೂ ಜರುಗಿರಬೇಕು, ಅಂದರೆ ಶಿವಶ್ರೀ ಶಾತಕರ್ಣಿ ಕ್ರಿ. ಶ. 148ರಿಂದ 152ರವರೆಗೆ ಆಳಿರಬೇಕು.

ಇವರೆಂಟು ಸಾತವಾಹನರಲ್ಲಿ ೪ನೆಯವನಾದ ಶಿವಶ್ರೀಯ ಆಳೊತ್ತನ್ನು ಹೀಗೆ ನಿಶ್ಚಯಿಸುತ್ತಲೆ, ಅವನ ಆಚೀಚೆಯವರ ಆಳೊತ್ತುಗಳನ್ನು ಸುಲಭವಾಗಿ ಈ ಮೇರೆಗೆ ತೇದಿಸಬಹುದು —

(೪) ಶಿವಶ್ರೀ ಶಾತಕರ್ಣಿ (೪ ವರ್ಷ) .. ಕ್ರಿ. ಶ. 148–152
(೩) ಶಿವಸ್ಕಂಧ ಶಾತಕರ್ಣಿ (೨೯ ವರ್ಷ) .. ,, 119–148
(೨) ವಾಸಿಷ್ಠೀಪುತ್ರ ಪುಳುಮಾಯಿ (೨೮ ವರ್ಷ) .. ,, 91–119
(೧) ಗೌತಮೀಪುತ್ರ ಶಾತಕರ್ಣಿ (೩೧ ವರ್ಷ) .. ,, 60– 91
(೫) ಯಜ್ಞಶ್ರೀ ಶಾತಕರ್ಣಿ (೨೯ ವರ್ಷ) .. ,, 152–181
(೬) ವಿಜಯ (೬ ವರ್ಷ) .. ,, 181–187
(೭) ಚಂಡ ಶ್ರೀ ಶಾತಕರ್ಣಿ (೧೦ ವರ್ಷ) .. ,, 187–197
(೮) ಪುಳುಮಾವಿ (ಸು. ೮ ವರ್ಷ) .. ,, 197–205

೧. ಗೌತಮೀಪುತ್ರ ಶಾತಕರ್ಣಿ
ಕ್ರಿ. ಶ. 60–91



## III

ಹೀಗೆ ಸಾತವಾಹನರ ಆಳಿಕೆ ಕ್ರಿ.ಶ. ೩ನೆಯ ಶತಕದ ಉಪಕ್ರಮದಲ್ಲಿಯೇ ಕೊನೆಗಂಡಿತೆಂದು ತಿಳಿಯುವುದರಿಂದ, ಅವರ ಆಸ್ಥಾನದಲ್ಲಿದ್ದ ಗುಣಾಢ್ಯನ ಬೃಹತ್ಕಥೆ[1] ಕ್ರಿ.ಶ. 200ರ ಆಚೆಯೂ ಅದರ ಕೊನೆಯ ೧೮ನೆಯ ಲಂಬಕದಲ್ಲಿ ಪ್ರಸಿದ್ಧ ವಿಕ್ರಮಾದಿತ್ಯನ ಕಥೆಯನ್ನು ಹೇಳಿರುವುದರಿಂದ ಅದು ಆತನು ಶಕರನ್ನು ಗೆದ್ದ ಕ್ರಿ.ಪೂ. 58ರ ಈಚೆಯೂ ರಚಿತವಾಗಿರಬೇಕು. ಅದರಲ್ಲಿ[2] ಸಾತವಾಹನರ ರಾಜಧಾನಿ ಪ್ರತಿಷ್ಠಾನಪುರವೆಂದು ಹೇಳಿದೆ.

ಕ್ರಿ.ಶ. 2ನೆಯ ಶತಕದಲ್ಲಿದ್ದ ಗ್ರೀಕ್ (Greek) ಭೌಗೋಲಿಕನಾದ ಪ್ಟೊಲೆಮಿ(Ptolemy)ಯು ಗ್ರಂಥದಲ್ಲಿ[3] ಅವನ ಸಮಸಾಮಯಿಕರಾದ Tiastanesನು Ozeneಯಲ್ಲಿಯೂ Siro Polemaiosನು Baithanaದಲ್ಲಿಯೂ ಆಳುತ್ತಿದ್ದರೆಂದು ಹೇಳಿರುವಲ್ಲಿ ಉಜ್ಜಯಿನಿ[4] (Ozene)ಯಲ್ಲಿ ರಾಜಧಾನಿ ಇದ್ದ Tiastanes ಎಂಬಾತನು ರುದ್ರದಾಮನ ಅಜ್ಜನಾದ ಚಷ್ಟನ[4]ನೆಂದೂ ಪೈಠಣ (Baithana) ಎಂಬ ಪ್ರತಿಷ್ಠಾನಪುರದಲ್ಲಿ ರಾಜಧಾನಿ ಇದ್ದ Siro Polemaios ಎಂಬವನು ಮೇಲಣ ೮ ಸಾತವಾಹನ ಅರಸರಲ್ಲಿ ೨ನೆಯವನಾದ ವಾಸಿಷ್ಠೀಪುತ್ರ ಶ್ರೀ ಪುಳುಮಾಯಿ (ಕಿ. ಶ. 91–119) ಎಂದೂ ಸ್ವಯಂ ವ್ಯಕ್ತವಿರುವುದರಿಂದ, ಕ್ರಿ. ಶ. 2ನೆಯ ಶತಮಾನದಲ್ಲಿ (ಈಗ ನಿಜಾಮ ಸರಕಾರದಲ್ಲಿರುವ ಪೈಠಣ ಎಂಬ) ಪ್ರತಿಷ್ಠಾನಪುರವು ಸಾತವಾಹನರ ರಾಜಧಾನಿಯಾಗಿತ್ತೆಂದೂ, ಅತಏವ ಪ್ರತಿಷ್ಠಾನ ಪುರವಿರುವ ಕುಂತಲದೇಶವು ಅವರ ರಾಜ್ಯದ ಕೇಂದ್ರವಾಗಿತ್ತೆಂದೂ ನಿಸ್ಸ್ಪಷ್ಟ ವಾಗುತ್ತದೆ.

ವಾಸಿಷ್ಠೀಪುತ್ರ ಪುಳುಮಾಯಿಯಿಂದ ಸುಮಾರು ೧೦೦ ವರ್ಷಗಳ ಹಿಂದೆ ಆಳಿದವನೆಂದು ಪುರಾಣಗಳಿಂದ[5] ಗೊತ್ತಾಗುವ ಹಾಲ ಎಂಬ ಸಾತವಾಹನ ಅರಸನ ಪ್ರಾಕೃತ ಭಾಷೆಯ 'ಗಾಥಾಸಪ್ತಶತಿ'ಯಲ್ಲಿ[6] ಆತನನ್ನು

**ರಾಏಣ ವಿರಇಆಏ ಕುಂತಲ ಜಣವಅ ಇಣೇಣ ಹಾಲೇಣ ।**

ಕುಂತಲ ಜಣವಅ ಇಣ=ಕುಂತಲ ಜನಪದ ಇನ, ಅಂದರೆ ಕುಂತಲ ಜನಪದೇಶ್ವರ ನೆಂದೂ 'ಕುಂತಲ ಜಾನಪದೇಶ್ವರ ಪ್ರತಿಷ್ಠಾನ ಪತ್ತನಾಧೀಶ......ಹಾಲಾದ್ಯುಪನಾಮಕ ಶ್ರೀ ಸಾತವಾಹನ ನರೇಂದ್ರ'ನೆಂದೂ ಹೇಳಿರುವುದರಿಂದ, ಆತನಿದ್ದ ಕ್ರಿ. ಶ. 1ನೆಯ ಶತಮಾನದಲ್ಲಿಯೂ ಕುಂತಲ ದೇಶದ ಪ್ರತಿಷ್ಠಾನಪುರವು ಸಾತವಾಹನರ ರಾಜಧಾನಿಯಾಗಿತ್ತೆಂದು ತಿಳಿಯುತ್ತದೆ.

ಹಾಲನಿಗಿಂತ ಸುಮಾರು ೬೦–೭೦ ವರ್ಷಗಳ ಹಿಂದಣವನೆಂದು ಪುರಾಣ ಗಳಿಂದ[5] ತಿಳಿವ ಕುಂತಲ ಶಾತಕರ್ಣಿ ಎಂಬ ಸಾತವಾಹನನ ಆ ಕುಂತಲ ಎಂಬ

---

1 'ಕಥಾಸರಿತ್ಸಾಗರ', I. 8; II. I. ೩.

2 'ಅದೇ', I. 8. ೧೦, ೧೨, ೧೩.

3 Mc Crindle : *Ancient India as described by Ptolemy*, Calcutta, 1927 (Ptolemy), ಪು. 154–155, 176–177.

4 ಗ್ರೀಕ್ ಭಾಷೆಯಲ್ಲಿ ಚ-ಕಾರವೂ ಇಲ್ಲ, ಜ-ಕಾರವೂ ಇಲ್ಲ.

5 *Pargiter*, ಪು. 40–41.

6 ನಿರ್ಣಯಸಾಗರ ಛಾಪಖಾನೆಯ ಪ್ರತಿ: ಪ್ರಸ್ತಾವನೆ, ಪು. ೧.

ಪ್ರಾಯಶಃ ಉಪನಾಮದಿಂದಲೆ ಅವನಿಗೂ ಕುಂತಲ ದೇಶಕ್ಕೂ ನಿಕಟವಾದ ಸಂಬಂಧವಿದ್ದಿರಬೇಕು, ಅಂದರೆ ಕುಂತಲ ದೇಶವು ಅವನ ರಾಜ್ಯದಲ್ಲಿ ಇದ್ದಿತೆಂದು ಮಾತ್ರವಲ್ಲ, ಅವನ ರಾಜಧಾನಿಯೂ ಕುಂತಲದಲ್ಲಿ ಇದ್ದಿರಬೇಕೆಂದು ಸಯುಕ್ತಿಕವಾಗಿ ಊಹಿಸಬಹುದಾದ ಕಾರಣ, ಅವನು ಆಳುತ್ತಿದ್ದ ಕ್ರಿ.ಪೂ. 1ನೆಯ ಶತಕದಲ್ಲಿಯೂ ಕುಂತಲದೇಶದ ಪ್ರತಿಷ್ಠಾನಪುರವು ಸಾತವಾಹನರ ರಾಜಧಾನಿಯಾಗಿತ್ತೆಂದು ನಿರ್ಣಯಿಸಬಹುದು.

ಅತಏವ ಬಹಳ ಹಳೆಯ ಕಾಲದಿಂದಲೂ ಕರ್ಣಾಟ ವಿಷಯದ ಪ್ರಧಾನ ಭಾಗವಾಗಿರುವ ಕುಂತಲ ದೇಶದಲ್ಲಿ ಕ್ರಿಸ್ತಪೂರ್ವದಿಂದಲೆ ರಾಜಧಾನಿ ಇದ್ದ ಈ ಸಾತವಾಹನರು ಕರ್ಣಾಟಕದ ಸಮ್ರಾಜರೆಂದು ಸ್ವತಃ ಸಿದ್ಧವಾಗುತ್ತದೆ. ಇತಿಹಾಸದಿಂದ ಬಲ್ಲಷ್ಟರ ಮಟ್ಟಿಗೆ ಸಾತವಾಹನರೇ ಕರ್ಣಾಟಕದ ಪ್ರಥಮ ಚಕ್ರವರ್ತಿಗಳಾಗಿರುತ್ತಾರೆ. ಅವರ ಆ ಹಿಂದಣ ಕಾಲದಲ್ಲಿಯೂ ಕುಂತಲದ ನಾಡ ನುಡಿ ಕನ್ನಡವೇ ಆಗಿತ್ತೆಂದು ಸವಿಸ್ತರವಾಗಿ ಅನ್ಯತ್ರ[1] ನಿರ್ಧರಿಸಿರುವುದರಿಂದ ಅದನ್ನಿಲ್ಲಿ ಮರಳಿ ಹೇಳಬೇಕೆಂದಿಲ್ಲ.

## IV

ಸುಮಾರು ೬೦ ವರ್ಷಗಳ ಹಿಂದೆ ಕೊಲ್ಹಾಪುರದ ವಾಯುವ್ಯಕ್ಕಿರುವ ಬ್ರಹ್ಮಪುರಿಯ ಗುಡ್ಡದ ಬಳಿಯಲ್ಲಿ, ಹಿಂದೊಮ್ಮೆ ಬೌದ್ಧಸ್ತೂಪವಾಗಿತ್ತೆಂದು ತೋರುವೆಡೆಯಲ್ಲಿ, ದೊರೆತ ಹಲವು ಸೀಸದ ಹಾಗೂ ತಾಮ್ರದ ನಾಣ್ಯಗಳಲ್ಲಿ ಬ್ರಾಹ್ಮೀ ಬರೆಹದ ಈ ಮೂರು ಒಕ್ಕಣೆಗಳಿವೆ—[2]

(೧) ರಞೊ ವಾಸಿಠೀಪುತಸ ವಿಳಿವಾಯಕುರಸ[3]

(೨) ರಞೊ ಮಾಢರೀಪುತಸ ಸಿವಲಕುರಸ

(೩) ರಞೊ ಗೊತಮಿಪುತಸ ವಿಳಿವಾಯಕುರಸ[3]

ಅಂದರೆ

(೧) ರಾಜ(ನಾದ) ವಾಸಿಷ್ಠೀಪುತ್ರ(ನಾದ) ವಿಳಿವಾಯಕುರನ[4]

(೨) ರಾಜ(ನಾದ) ಮಾಢರೀಪುತ್ರ(ನಾದ) ಸಿವಲಕುರನ[4]

(೩) ರಾಜ(ನಾದ) ಗೌತಮೀಪುತ್ರ(ನಾದ) ವಿಳಿವಾಯಕುರನ[4]

ಇವಲ್ಲಿ ವಾಸಿಷ್ಠೀ ಪುತ್ರ ವಿಳಿವಾಯಕುರನ ಕೆಲವು ನಾಣ್ಯಗಳನ್ನು ಮಾಢರೀ

---

1 ‘ಕಂಠೀರವ’ದ ದಸರಾ (1938) ಸಂಚಿಕೆ, ಪು. 53–56.

2 R. G. Bhandarkar : *Early History of the Dekkan* (*EHD.*), Calcutta (1928), ಪು. 34–35; *IA.* ಸಂ. XLIX (1920), ಪು. 31; ಕರ್ಣಾಟಕ ಸಾಹಿತ್ಯ ಪರಿಷತ್ಪತ್ರಿಕೆ, ಸಂ. XIV, ಪು. ೨೭೩–೨೭೪.

3 ಇವೆರಡೂ ನಾಣ್ಯಗಳಲ್ಲಿಯು ‘ವಿಳಿವಾಯಕುರಸ’ ಎಂಬುದರ ದ್ವಿತೀಯಾಕ್ಷರವು ‘ಳಿ’ಯೇ ವಿನಾ ‘ಲಿ’ ಅಲ್ಲವೆಂದು ಕ. ಸಾ. ಪ. ಪತ್ರಿಕೆಯ (XIV) ೨೭೩ನೆಯ ಪುಟದ ಎದುರ್ಗಡೆಯ ಪಟದಲ್ಲಿಯು ಬಲಗಡೆಯ ೩ನೆಯ ಚಿತ್ರದಿಂದ ಬಹಳ ಸ್ಪಷ್ಟವಾಗಿ (ಮತ್ತು ಎಡಗಡೆಯ ೪ನೆಯ ಚಿತ್ರದಿಂದ ತಕ್ಕಷ್ಟಾಗಿ) ತೋರುವುದರಿಂದ, ಆ ಹೆಸರುಗಳನ್ನು ಆ ಪತ್ರಿಕೆಯಲ್ಲಿ (ಪು. ೨೭೪) ‘ವಿಲಿವಾಯಕುರಸ’ ಎಂದು ಲಿ–ಕಾರಯುಕ್ತವಾಗಿ ಬರೆದಿರುವುದು ಸರಿಯಲ್ಲ. ಈ ನಾಣ್ಯಗಳನ್ನು ಓದಿದ ವಿದ್ವಾಂಸರೆಲ್ಲರೂ ಈ ಹೆಸರುಗಳನ್ನು ‘ವಿಳಿವಾಯಕುರಸ’ ಎಂದೇ ಓದಿರುತ್ತಾರೆ (*RIC.* ಪು. 23–24, ಪಟ III 4; *BCI.* ಪಟ I. 7; *EHD.* ಪು. 35; *IA.* ಸಂ. XLIX, ಪು. 31 ಇತ್ಯಾದಿ).

4 ಪ್ರಾಚೀನ ನಾಣ್ಯಗಳಲ್ಲಿ ಅವನ್ನು ಅಚ್ಚು ಹಾಕಿಸಿದ ಅರಸರ ಹೆಸರುಗಳು ಹೆಚ್ಚಾಗಿ ಷಷ್ಠೀವಿಭಕ್ತಿಯ ಏಕವಚನದಲ್ಲಿವೆ; ಇಂಥಾ ಅರಸನ ನಾಣ್ಯ ಅಥವಾ ಮುದ್ರೆ ಎಂದು ಅರ್ಥ.

ಪುತ್ರ ಸಿವಲಕುರನೂ ಆ ಸಿವಲಕುರನ ಕೆಲವು ನಾಣ್ಯಗಳನ್ನು ಗೌತಮಿಪುತ್ರ ವಿಳಿವಾಯಕುರನೂ ಪುನರ್ಮುದ್ರಿಸಿದರೆಂದು[1] ತಿಳಿಯುವುದರಿಂದ, ಈ ಮೂವರಲ್ಲಿ ಕಾಲಪ್ರಮಾಣದಿಂದ ವಾಸಿಷ್ಠೀಪುತ್ರ ವಿಳಿವಾಯಕುರನು ಮೊದಲನೆಯವನೆಂದೂ ಮಾಢರೀಪುತ್ರ ಸಿವಲಕುರನು ಆಮೇಲಣವನೆಂದೂ ಗೌತಮಿಪುತ್ರ ವಿಳಿವಾಯ ಕುರನು ಇನ್ನೂ ಬಳಿಕಣವನೆಂದೂ ಸಿದ್ಧವಾಗುತ್ತದೆ. ಈ ತ್ರಿಮೂರ್ತಿಗಳು ಯಾರು ?

ಇವರನ್ನು ಕುರಿತು ಹಲವು ವಿದ್ವಾಂಸರು ಹಲವು ಬಗೆಯಾಗಿ ಹೇಳಿರುತ್ತಾರೆ; ಆದರೆ ನನಗೆ ಹೀಗೆನಿಸುತ್ತದೆ—

ಪ್ತೊಲೆಮಿಯ ಕಾಲದಲ್ಲಿ ದಕ್ಷಿಣಾಪಥದ ಪಶ್ಚಿಮ ಕರಾವಳಿಯಿಂದ ಒಳಗಡೆಯ ದೇಶದ ಉತ್ತರ ಭಾಗದಲ್ಲಿ, ಆತನ ಗ್ರಂಥದಲ್ಲಿ ಬೆ(ೀ)ಂದಾ (Benda) ಅಥವಾ ಬಿಂದಾ (Binda) ಎಂದಿರುವ, ಹಾಗೂ ಈಗ ಭೀಮಾ ಎಂದು ಗೊತ್ತು ಹಚ್ಚಿರುವ, ನದಿಯ ಪಶ್ಚಿಮಕ್ಕಿರುವ ಪೈಠಣ (Baithana) ಎಂಬ ಪ್ರತಿಷ್ಠಾನಪುರ ದಲ್ಲಿ ಸಿರೊ ಪೊಲೆಮಾಯಿ (Siro Polemaios) ಎಂಬ ವಾಸಿಷ್ಠೀಪುತ್ರ ಶ್ರೀ ಪುಳು ಮಾಯಿ ಆಳುತ್ತಿದ್ದಂದು ಆ ಒಳದೇಶದ ದಕ್ಷಿಣ ಭಾಗದಲ್ಲಿ ಅದೇ ಭೀಮಾ ನದಿಯ ಪಶ್ಚಿಮಕ್ಕಿರುವ ಹಿಪ್ಪೊಕುರ (Hippokoura) ಎಂದು ಓದಿರುವ ಹೆಸರಿನ ಊರಲ್ಲಿ ಬಲೆಒಕುರ (Baleokoura) ಎಂಬ ಅರಸನು ಆಳುತ್ತಿದ್ದನೆಂದು ಆ ಗ್ರಂಥ ದಲ್ಲಿ ಹೇಳಿದೆ.[2] ವ-ಕಾರಕ್ಕೆ ಸ್ವತಂತ್ರ ವರ್ಣವಿಲ್ಲದ ಗ್ರೀಕ್ ಭಾಷೆಯಲ್ಲಿ ಆ ಸ್ವರ ವನ್ನು ಬ (b) ಹಾಗೂ ಒ (o) ಎಂಬ ವರ್ಣಗಳಿಂದ ಸೂಚಿಸುತ್ತಿದ್ದಕಾರಣ, ಮೇಲಣ ನಾಣ್ಯಗಳ 'ವಿಳಿವಾಯಕುರ'ವೇ ಗ್ರೀಕಿನಲ್ಲಿ 'ಬಲೆಒಕುರ' ಎಂದು ವಿಕರಿಸಿದೆ ಎಂದು ವಿದ್ವಾಂಸರೆಲ್ಲರೂ ಒಪ್ಪಿರುತ್ತಾರೆ.[3]

ಮೇಲೆ ಕಂಡಿರುವಂತೆ ಸಾತವಾಹನ ಅರಸನಾದ ಹಾಲನ ಗಾಥಾಸಪ್ತಶತಿ ಯಿಂದಲೂ (ಕಥಾಸರಿತ್ಸಾಗರದಿಂದಲೂ ಅಂದರೆ) ಸಾತವಾಹನರ ಆಸ್ಥಾನದಲ್ಲಿ ತಾನೆ ರಚಿತವಾದ ಅದರ ಮೂಲಬೃಹತ್ಕಥೆಯಿಂದಲೂ ಪ್ತೊಲೆಮಿಯ ಗ್ರಂಥದಿಂದಲೂ ಬಹಳ ಪೂರ್ವಕಾಲದಿಂದ, ಏವಂಚ ಹಾಲನ ಕಾಲದಿಂದಾದರೂ, ಹೇಗೂ ಪ್ತೊಲೆ ಮಿಯ ಸಮಸಾಮಯಿಕನಾದ ವಾಸಿಷ್ಠೀಪುತ್ರ ಪುಳುಮಾಯಿಯ ಆಳಿಕೆಯಲ್ಲಿ, ಪ್ರತಿ ಷ್ಠಾನಪುರವೇ ಸಾತವಾಹನರ ರಾಜಧಾನಿಯಾಗಿತ್ತೆಂದು ನಿಸ್ಸಂದೇಹವಾಗಿ ಸಿದ್ಧವಾ ಗುವುದರಿಂದ, ಅದು ಸಮ್ರಾಜನದೇ ನೆಲೆವೀಡಾಗಿರಬೇಕಲ್ಲದೆ ಸರ್ವಥಾ ಯುವರಾಜ ನದಲ್ಲ[4]. 'ರಞೋ ವಾಸಿಠೀಪುತಸ ಸಿರಿ ಪುಳುಮಾಯಿಸ ಸವಿಛರೆ ಎಕುನವೀಸೆ ೧೯,' ಅಂದರೆ ರಾಜನಾದ ವಾಸಿಷ್ಠೀಪುತ್ರ ಪುಳುಮಾಯಿಯ ಆಳಿಕೆಯ ೧೯ನೆಯ ವರ್ಷದ = ಕ್ರಿ.ಶ. 109–110ನೆಯ ನಾಸಿಕದ ಗುಹಾಶಾಸನದಿಂದ (ಬಂತಿ ೧–೩)[5] ಆಗ್ಗ

[1] *IA.* ಸಂ. XLIX (1920), ಪು. 31; *JBORS.* XVI, ಪು. 268; *AHD.* ಪು. 45; Vincent Smith : *Early History of India* (*EHI.*), ಪು. 231.

[2] *Ptolemy*, ಪು. 103, 175–176, 178–179, 358; *EHD.* ಪು. 43.

[3] *IA.* *X*LIX (1920), ಪು. 34.

[4] *EHD.* ಪು. 57; *RIC.* ಪು. 23.

[5] *EI.* VIII, ಪು. 60.

(ಅಂದರೆ ಪ್ಟೊಲೆಮಿಯ ಸಮಕಾಲದಲ್ಲಿ) ಸಾತವಾಹನರ ಸಾಮ್ರಾಜ್ಯವು ಉತ್ತರದಲ್ಲಿ ನರ್ಮದಾ ನದಿಯ ಉತ್ತರಕೂಲವರ್ತಿಯಾದ ಅನೂಪ ಎಂಬ ಹೈಹಯ ದೇಶವನ್ನೂ ಪೂರ್ವದಲ್ಲಿ ಮಹಾನದಿ ಹಾಗೂ ಗೋದಾವರಿಯ ನಡುವಣ ಮಹೇಂದ್ರ ಪರ್ವತವನ್ನೂ ದಕ್ಷಿಣದಲ್ಲಿ ಪಶ್ಚಿಮ ಗಟ್ಟಗಳ ತೆಂಕಣ ಭಾಗವಾದ ಕೇರಳ ವಿಷಯವರ್ತಿಯಾಗಿರುವ ಮಲಯಾಚಲವನ್ನೂ ಪಶ್ಚಿಮದಲ್ಲಿ ಸಮುದ್ರತೀರವರ್ತಿಯಾದ ಅಪರಾಂತ ದೇಶವನ್ನೂ ಒಳಕೊಂಡಿತ್ತೆಂದು[1] ತಿಳಿಯುವುದರಿಂದ, ದಕ್ಷಿಣೋತ್ತರವಾಗಿ ಕಾವೇರಿಯ ದಕ್ಷಿಣಕೂಲದಿಂದ ನರ್ಮದೆಯ ಉತ್ತರಕೂಲದವರೆಗೆ ವಿಸ್ತರಿಸಿದ್ದ ಆ ಸಾಮ್ರಾಜ್ಯದಲ್ಲಿ ಭೀಮಾ ನದಿಯೂ ಅದರ ಪಶ್ಚಿಮಕ್ಕೆ ಸಮುದ್ರಪರ್ಯಂತ ಇರುವ ದೇಶಗಳೂ ಸೇರಿದ್ದುವೆಂದು ಪ್ರತ್ಯಕ್ಷವಿರುವುದರಿಂದ, ಪ್ಟೊಲೆಮಿಯ ಹಿಪ್ಪೊಕುರವೂ ಅದೇ ಸಾಮ್ರಾಜ್ಯದಲ್ಲಿ ಒಳಪಟ್ಟಿರಬೇಕು. ಅತಏವ ಆ ಹಿಪ್ಪೊಕುರದಲ್ಲಿ ಆಳುತ್ತಿದ್ದ ಬಲೆಒಕುರನು ಆಗಣ ಸಾತವಾಹನ ಸಮ್ರಾಜನಾದ ವಾಸಿಷ್ಠೀಪುತ್ರ ಪುಳುಮಾಯಿಯ ಉಪರಾಜನಾಗಿದ್ದನೇ ಹೊರತು ಸರ್ವಥಾ ಸ್ವತಂತ್ರ ಅರಸನಲ್ಲ. ಹೆಚ್ಚಾಗಿ ಸಮ್ರಾಜನ ಬಳಗದವರೇ ಆತನ ರಾಜ್ಯದಲ್ಲಿಯ ಆಯಾ ಮಂಡಲಗಳನ್ನು ಆಳುತ್ತಿದ್ದ ಆಗಣ ವಾಡಿಕೆಯ ಮೇರೆಗೆ ಬಲೆಒಕುರನೆಂಬ ವಿಳಿವಾಯಕುರನೂ ವಾಸಿಷ್ಠೀಪುತ್ರ ಪುಳುಮಾಯಿಯ ರಾಜಕುಟುಂಬದವನಾಗಿರಬೇಕು ಮಾತ್ರವಲ್ಲ, ಸಾತವಾಹನರ ನಾಣ್ಯಗಳಲ್ಲಿಯೂ (ಉದಾ–ಶಿವಶ್ರೀ ಶಾತಕರ್ಣಿಯಮೇಲೆ ಕಂಡಿರುವ ನಾಣ್ಯದಲ್ಲಿ[2] 'ರಞೊ ವಾಸಿಠಿಪುತಸ ಸಿವ ಸಿರಿ ಸಾತಕಂಣಿಸ' ಎಂದಿದೆ), ಶಾಸನಗಳಲ್ಲಿಯೂ (ಉದಾ–ವಾಸಿಷ್ಠೀಪುತ್ರ ಪುಳುಮಾಯಿಯ ಮೇಲೆ ಕಂಡಿರುವ ನಾಸಿಕದ ಗುಹಾಲೇಖದಲ್ಲಿ[3] 'ರಞೋ ವಾಸಿಠೀಪುತಸ ಸಿರಿ ಪುಳುಮಾವಿಸ' ಎಂದಿದೆ), ಅವರನ್ನು (ರಞೊ=ರಾಜ್ಞಃ) ರಾಜ ಎಂದಿರುವುದರಿಂದ, ತನ್ನ ಸಮ್ರಾಜನಂತೆಯೇ ನಾಣ್ಯಗಳನ್ನು ಬೆಟ್ಟಿಸಲೂ ಆ ನಾಣ್ಯಗಳಲ್ಲಿ ಅವನಂತೆಯೇ ತನ್ನನ್ನು ರಾಜ (ರಞೊ. . . . ವಿಳಿವಾಯಕುರಸ) ಎಂದು ಕೊಳ್ಳಲೂ ತಕ್ಕಂತೆ ಹೆಚ್ಚುಕಡಿಮೆ ಸಮ್ರಾಜನಷ್ಟೇ ಅಧಿಕಾರವಿದ್ದಿರಬೇಕಾದ (ಬಲೆಒಕುರ ಎಂಬ) ವಿಳಿವಾಯಕುರನು ಸಮ್ರಾಜನಾದ ವಾಸಿಷ್ಠೀಪುತ್ರ ಪುಳುಮಾಯಿಯ ಯುವರಾಜ ಅಂದರೆ ಕುಮಾರನೂ[4] ಆಗಿರಬೇಕೆಂದು ಕಂಡಿತವಾಗಿ ನಿಶ್ಚಯಿಸಬಹುದು.

ಕುಮಾರ ಎಂಬೊಡನೆಯೇ 'ವಿಳಿವಾಯಕುರ'ದ ಕೊನೆಯ 'ಕುರ'ವು 'ಕುಮಾರ'ದ ವಿಕೃತಿಯಾಗಿರಬೇಕೆಂದು ಹೊಳೆಯದಿರದು. ಕುಮಾರೀ ಎಂಬ ಸಂಸ್ಕೃತ ಸ್ತ್ರೀಲಿಂಗಪದವು ಹಾಲನ ಗಾಥಾಸಪ್ತಶತಿಯಲ್ಲಿ (III, ೯೮) ಕುಮರೀ ಎಂದೂ (ಪಾಠಾಂತರದಲ್ಲಿ[5] ಕುಅರೀ ಎಂದೂ) ಇರುವ ಕಾರಣ, ಅದರ ಪುಲ್ಲಿಂಗವಾದ ಕುಮಾರವು ಪ್ರಾಕೃತದಲ್ಲಿ ಕುಮರ ಎಂದೂ (ಕುಅರ ಎಂದೂ) ಇರಬೇಕೆಂದು

1 *IA.* XLVII (1918), ಪು. 150–151.

2 *AHD.* ಪು. 41.

3 *EI.* VIII, ಪು. 60.

4 ಯುವರಾಜಸ್ತು ಕುಮಾರೋ ಭರ್ತೃದಾರಕಃ ॥ (ಅಮರಕೋಶ, I. 7. ೧೨).

5 ಗಾಥಾಸಪ್ತಶತಿ (III. ೯೮), ಪು. ೯೬, ಅಡಿಬರೆಹ ೧೧.

ಸ್ವಯಂಸಿದ್ಧ. ಕುಮರದ ಅನುನಾಸಿಕವು ಅನುಸ್ವಾರವಾಗಿ ಕುಂವರ–ಕುಂಅರ–ಕುಂರ[1] ಎಂಬಾದುದರ ಅನುಸ್ವಾರವು ಉಚ್ಚರಿಸುವಲ್ಲಿಯೂ ಬರೆವಲ್ಲಿಯೂ ಶಿಥಿಲವೂ ಲಘುವೂ ಆಗಿ ಕೊನೆಗೆ ತೀರ ಬಿದ್ದು ಹೋಗಿ ಕುರ ಎಂದಷ್ಟೇ ಉಳಿಯುತ್ತದೆ. ಈ ಬಗ್ಗೆ ವಾಸಿಷ್ಠೀಪುತ್ರ ಪುಳುಮಾಯಿಯ ನಾಸಿಕದ ಗುಹಾಲೇಖದಲ್ಲಿಯೇ[2] ಹಲವು ಉದಾಹರಣೆಗಳಿವೆ— ಸಂವತ್ಸರ = ಸವಛರ (ಬಂತಿ ೧), ವಂಶ = ವಸ (ಬಂ. ೬), ಸಙ್ಘ (ಸಂಘ) = ಸಘ (೬ ; ೯), ಮಣ್ಡಲ (ಮಂಡಲ) = ಮಡಲ (೩ ; ೬), ಮನ್ದರ (ಮಂದರ)=ಮದರ (೨), ಚನ್ದ್ರ (ಚಂದ್ರ) = ಚದ (೩ ; ೯), ಗನ್ಧರ್ವ (ಗಂಧರ್ವ) = ಗಧವ (೮), ಅಮ್ಬರೀಷ (ಅಂಬರೀಷ) = ಅಬರೀಸ (೮) ; ಮೇಲೆ ಕಂಡಿರುವಂತೆ ಚಂಡಶ್ರೀಯ ನಾಣ್ಯಗಳಲ್ಲಿ ಚಡ (ಸಾತಿ) ಎಂದಿರುವಲ್ಲಿ ಚಣ್ಡ (ಚಂಡ) = ಚಡ ಎಂಬ ಉದಾಹರಣೆಯೂ ಇದೆ. ಅಥವಾ ಗಾಥಾಸಪ್ತಶತಿಯಲ್ಲಿಯ (ಕುಮಾರೀ=) 'ಕುಅರೀ' ಎಂಬ ರೂಪದಿಂದ[3] ಸಿದ್ಧವಾಗುವ (ಕುಮಾರ =) 'ಕುಅರ'ದ ಮಧ್ಯಮಾಕ್ಷರದ ಸುಗಮವಾದ ಲೋಪದಿಂದಲೂ ಕುರ ಎಂದಾಗುತ್ತದೆ. ಅತಏವ ಕುಮಾರ ಎಂಬುದೇ ವಿಳಿವಾಯಕುರದಲ್ಲಿ ಕುರ ಎಂದು ವಿಕರಿಸಿರಬೇಕು.

ಪ್ರಾಕೃತದಲ್ಲಿ (೧) ಪ–ಕಾರವು ವ–ಕಾರವಾಗುವುದಕ್ಕೆ ಈ ಉದಾಹರಣೆಗಳಿವೆ —ಪ್ರತಾರಯಿತುಂ = ವೇಆರಿಉಂ (ಗಾಥಾಸಪ್ತಶತಿ II, ೮೬), ಸೋಪಾನ+ಪಂಕ್ತಿ =ಸೋವಾಣ+ವತ್ತಿ (III. ೭೮), ಶಂಖ+ಪಾತ್ರ=ಸಂಖ+ವತ್ತ (III. ೧೦), ಕೃಪಣ=ಕಿವಿಣ (II. ೨೬), ಪ್ರದೀಪಿತ=ಪಲಿವಿಅ (ಹೇಮಚಂದ್ರನ ಶಬ್ದಾನುಶಾಸನ, VIII. I. ೧೦೦), ಪ್ರಭೂತ = ವಹುತ್ತ (VIII. 1. ೨೩೩), ಮಹೀಪಾಲ = ಮಹಿವಾಲ, ಉಪಮಾ=ಉವಮಾ, ಶಪಥ=ಸವಹ (VIII. I. ೨೩೧) ;

(೨) ಉ–ಕಾರವು ಇ–ಕಾರವಾಗುವುದಕ್ಕೆ, ಪುರುಷ=ಪುರಿಸ (ಗಾಥಾ II. ೯೬, III. ೧೪; ಹೇಮಚಂದ್ರ, VIII. I. ೧೧೧), ಭ್ರುಕುಟಿ = ಭಿಉಡೀ (ಹೇಮಚಂದ್ರ VIII. I. ೧೧೦), ಕುಟುಂಬ = ಕುಟಿಂಬ ;

(೩) ಮ–ಕಾರವು ವ–ಕಾರವಾಗುವುದಕ್ಕೆ, ಮನ್ಮಥ=ವಮ್ಮಹ (ಹೇಮಚಂದ್ರ VIII. ೭. ೬೧), ಅಭಿಮನ್ಯು=ಅಹಿವನ್ನೂ (VIII.I. ೨೪೩), ಯಾಮುಲ=ಯಾವರ;

(೪) ಇ–ಕಾರವು ಅ–ಕಾರವಾಗುವುದಕ್ಕೆ ಇತಿ=ಇಅ, ಹರಿದ್ರಾ=ಹಲದ್ದಾ, ಶಿಥಿಲ=ಸಠಿಲ, ಸಥಿಲ ಎಂಬ ಉದಾಹರಣೆಗಳಿವೆ.

ಅತಏವ ಪುಳುಮಾಯಿ ಎಂಬುದೇ ವಿಳಿವಾಯ ಎಂದಾಗಿರಬೇಕು.

ಹಾಗಾದರೆ ರಾಜಕುಮಾರ=ಅರಸನ ಕುಮಾರ ಎಂಬಂತೆಯೇ ಕುಮಾರವು

---

[1] ಉತ್ತರ ಭಾರತದ ರಾಜಕುಮಾರರ ಹೆಸರುಗಳಿಗೆ ಸರ್ವಸಾಮಾನ್ಯವಾಗಿ ಜೋಡಿಸಲ್ಪಡುವ ಕುಂವರ–ಕುಂಅರ–ಕುಂರ (= ಕುಮಾರ) ಎಂಬವುಗಳ ಅನುಸ್ವಾರವು ಅವುಗಳ ತಲೆಗಡೆಯಲ್ಲಿ ಹೆಚ್ಚಾಗಿ ಚಂದ್ರಬಿಂದುವಿನಿಂದ ಸೂಚಿಸಲ್ಪಡುತ್ತದೆ – कुँवर, कुँअर, कुँर ; ಇದು ಉಚ್ಚಾರದಲ್ಲಿ ಪ್ರಾಯಃ ಕೇಳಿಸುವುದಿಲ್ಲ. ಪ್ರಾಚೀನ ಪ್ರಾಕೃತದಲ್ಲಿ ಚಂದ್ರಬಿಂದುವಿನ ಪ್ರಯೋಗವಿತ್ತೆಂದೂ ಚಂದ್ರಬಿಂದುವಿಂದ ಸೂಚಿತವಾದ ವರ್ಣವು ಉಚ್ಚಾರದಲ್ಲಿ ಲಘುವೆಂದೂ ಗಾಥಾಸಪ್ತಶತಿಯಿಂದ ತಿಳಿಯುತ್ತದೆ (I. ೨, ೩, ೫, ೭, ೧೦ ಇತ್ಯಾದಿ).

[2] *EI.* VIII, ಪು. 60.

[3] ಗಾಥಾಸಪ್ತಶತಿ (III, ೯೮), ಪು. ೯೬, ಅಡಿಬರೆಹ ೧೧.

ಪರಪದವಾಗಿರುವ ಕಾರಣ ಪ್ರತ್ಯಕ್ಷ ತತ್ಪುರುಷ ಸಮಾಸವಾಗತಕ್ಕ[1] ವಿಳಿವಾಯ ಕುರವು ಪುಳುಮಾಯಿ+ಕುಮಾರ, ಅಂದರೆ ಪುಳುಮಾಯಿಯ ಕುಮಾರ, ಎಂದಾಗು ವುದರಿಂದ, ವಿಳಿವಾಯಕುರನು ಪುಳುಮಾಯಿಯ (ಕುಮಾರ=) ಮಗನೆಂದು ಸ್ವಯಂ ಸಿದ್ಧವಾಗುತ್ತದೆ.

ಮೇಲೆ ಕಂಡಿರುವ ಕೊಲ್ಹಾಪುರದ ನಾಣ್ಯಗಳಲ್ಲಿ ೧ನೆಯ ನಾಣ್ಯದ ವಾಸಿಷ್ಠೀ ಪುತ್ರ ವಿಳಿವಾಯಕುರನೆಂದೂ ೩ನೆಯದರ ಗೌತಮೀಪುತ್ರ ವಿಳಿವಾಯಕುರನೆಂದೂ ವಿಳಿವಾಯಕುರರು = ಪುಳುಮಾಯಿಯ ಕುಮಾರರು, ಅಂದರೆ ಪುಳುಮಾಯಿಯ ಮಗಂದಿರು ಇಬ್ಬರಿರುತ್ತಾರಷ್ಟೇ. ಅವರಲ್ಲಿ ಪ್ಟೋಲೆಮಿಯ ಸಮಕಾಲೀನನಾದ ಬಲೆಒಕುರ (Baleokouros)ನೆಂಬ ವಿಳಿವಾಯಕುರನು ಯಾರೆಂಬುದನ್ನು ಸುಲಭ ವಾಗಿ ಹೀಗೆ ಗೊತ್ತುಹಚ್ಚಬಹುದು—

ಮೇಲಣ ೮ ಸಾತವಾಹನ ಅರಸರಲ್ಲಿ ಪುಳುಮಾಯಿ = ಪುಳುಮಾವಿ ಎಂಬ ಹೆಸರಿನ ಅರಸರು ಇಬ್ಬರೇ—ವರಿಸೆಯಲ್ಲಿ ೨ನೆಯವನಾದ ವಾಸಿಷ್ಠೀಪುತ್ರ ಪುಳು ಮಾಯಿ(ವಿ) ಮತ್ತು ಕೊನೆಯವನಾದ ಪುಳುಮಾವಿ. ಇವರಿಬ್ಬರು ಪುಳುಮಾಯಿ (ವಿ)ಗಳಲ್ಲಿ ಒಬ್ಬನು ವಾಸಿಷ್ಠೀಪುತ್ರ ವಿಳಿವಾಯಕುರನ ತಂದೆಯೂ ಮತ್ತೊಬ್ಬನು ಗೌತಮೀಪುತ್ರ ವಿಳಿವಾಯಕುರನ ತಂದೆಯೂ ಆಗಿರಬೇಕೆಂದು ಬೇರೆ ಹೇಳ ಬೇಕೆಂದಿಲ್ಲ. ಮೇಲೆ ಕಂಡಿರುವಂತೆ ಈ ವಿಳಿವಾಯಕುರರಿಬ್ಬರಲ್ಲಿ ವಾಸಿಷ್ಠೀ ಪುತ್ರ ವಿಳಿವಾಯಕುರನ ಕೆಲವು ನಾಣ್ಯಗಳನ್ನು ಸಿವಲಕುರನೂ ಸಿವಲಕುರನ ಕೆಲವನ್ನು ಗೌತಮೀಪುತ್ರ ವಿಳಿವಾಯಕುರನೂ ಪುನರ್ಮುದ್ರಿಸಿರುವ ಕಾರಣ ವಾಸಿಷ್ಠೀಪುತ್ರ ವಿಳಿವಾಯಕುರನು ಗೌತಮೀಪುತ್ರ ವಿಳಿವಾಯಕುರನಿಗಿಂತ ಸಾಕಷ್ಟು ಹಿಂದಣವನಾಗಿರಬೇಕು. ಅತಏವ ವಾಸಿಷ್ಠೀಪುತ್ರ ವಿಳಿವಾಯ ಕುರನು ವಾಸಿಷ್ಠೀಪುತ್ರ ಪುಳುಮಾಯಿಯ (ಕ್ರಿ.ಶ. 91–119) ಮಗನಾಗಿರಬೇಕು, ಗೌತಮೀಪುತ್ರ ವಿಳಿವಾಯಕುರನು ಕೊನೆಯ ಅರಸನಾದ ಪುಳುಮಾವಿಯ (ಕ್ರಿ.ಶ. 197–ಸು. 205) ಮಗನಾಗಿರಬೇಕು ಎಂದು ತನ್ನಷ್ಟಕ್ಕೆ ಸಿದ್ಧವಾಗು ವುದರಿಂದ, ವಾಸಿಷ್ಠೀಪುತ್ರ ಪುಳುಮಾಯಿಯ ಸಮಕಾಲೀನನಾದ ಪ್ಟೋಲೆಮಿಯ ಬಲೆಒಕುರ (Baleokouros) = ವಿಳಿವಾಯಕುರನಾದರೊ ಮೇಲಣ ಕೊಲ್ಹಾಪುರದ ೧ನೆಯ ನಾಣ್ಯದ ವಾಸಿಷ್ಠೀಪುತ್ರ ವಿಳಿವಾಯಕುರನೆಂಬಲ್ಲಿ ಲೇಶವೂ ಸಂಶಯ ವಿಲ್ಲ. ಹಾಗಾದರೆ ಈ ವಾಸಿಷ್ಠೀಪುತ್ರ ವಿಳಿವಾಯಕುರನು ವಾಸಿಷ್ಠೀಪುತ್ರ ಪುಳುಮಾಯಿಯ ಮಗನಾದ ಹಾಗೂ ತನ್ನ ಚಿಕ್ಕಪ್ಪನಾದ ಶಿವಸ್ಕಂಧ ಶಾತಕರ್ಣಿಯ ಕಾಲಾನಂತರ ವಾಸಿಷ್ಠೀಪುತ್ರ ಶಿವ ಶ್ರೀ ಶಾತಕರ್ಣಿ ಎಂದು (ಮೇಲಣ ೮ ಅರಸರಲ್ಲಿ ೬ನೆಯ) ಅರಸನಾಗಿ (ಕ್ರಿ. ಶ. 148–152) ಆಳಿದಾತನೇ ಎಂದೂ, ಇವನ ವಾಸಿಷ್ಠೀಪುತ್ರ ವಿಳಿವಾಯಕುರ ಎಂಬ ನಾಣ್ಯಲೇಖದಲ್ಲಿ ಇವನ ಸ್ವಂತ

[1] 'ಕುಮಾರ'ವು ಹೆಸರಿನಲ್ಲಿ ಪೂರ್ವಪದವಾದರೆ ಆ ಇಡೀ ಹೆಸರು ಕರ್ಮಧಾರಯವಾಗುತ್ತದೆ; ಉದಾ.—(೧) ಲೂಡರ್ಸರ ನಂ. 1112ರಲ್ಲಿಯ 'ಕುಮಾರ ವೇದಿಸಿರಿ' = ಕುಮಾರ (ಯುವರಾಜ)ನಾದ ವೇದಿಸಿರಿ; (೨) ನಂ. 1117ರಲ್ಲಿಯ 'ಕುಮಾರ ಹಕುಸಿರಿ' = ಕುಮಾರ (ಯುವರಾಜ) ನಾದ ಹಕುಸಿರಿ; (೩) ಯಜ್ಞ ಶ್ರೀ ಶಾತಕರ್ಣಿಯ ಒಂದು ನಾಣ್ಯದ ಹಿಂಭಾಗದಲ್ಲಿಯ (*END.* ಪು. 36) 'ಗೊತಮಿಪುತ ಕುಮಾರ ಯಞ ಸಾತಕನಿ' = ಗೌತಮೀಪುತ್ರನೂ ಕುಮಾರ (= ಯುವರಾಜ)ನೂ ಆಗಿರುವ ಯಜ್ಞ ಶಾತಕರ್ಣಿ.

ಅಂಕಿತನಾಮವಿಲ್ಲದೆ ವಿಳಿವಾಯಕುರ–ಪುಳುಮಾಯಿಯ ಕುಮಾರ ಎಂದು ತನ್ನ ತಂದೆಯ ಅಂಕಿತನಾಮಕ್ಕೆ ತಾನು ಆತನ ಮಗನೆಂದಷ್ಟೇ ಹಚ್ಚಿಸಿರುವ ಆ ನಾಣ್ಯಗಳು ಮುದ್ರಿತವಾದುದೂ ಇವನು ತನ್ನ ತಂದೆಯ ಆಳಿಕೆಯಲ್ಲಿ ಆತನ ಯುವರಾಜನಾಗಿ ಆಳುತ್ತಿದ್ದಂದು ತಾನೆ, ಅಂದರೆ ಸಮ್ರಾಜನಾದ ವಾಸಿಷ್ಠೀಪುತ್ರ ಪುಳುಮಾಯಿ ಆಳಿದ ಕ್ರಿ.ಶ. 91–119ರಲ್ಲಿಯ ಅವೆಲ್ಲವೂ ಇಲ್ಲವೆ ಅವಲ್ಲಿ ಹಲವೂ ಕೆಲವೂ ವರ್ಷಗಳಲ್ಲಿ ಇವನು ಆತನ ಯೌವರಾಜ್ಯ ಪದವಿಯಲ್ಲಿ ಇದ್ದಂದು ತಾನೆ ಎಂದೂ ಕಂಡಿತವಾಗಿ ನಿಶ್ಚಯಿಸಬಹುದು.

ಮೇಲಣ ೮ ಸಾತವಾಹನ ಅರಸರಲ್ಲಿ ನೊತ್ತಮೊದಲಿನ ಗೌತಮೀಪುತ್ರನ ಶಾಸನಗಳಲ್ಲಿ ಗೌತಮೀಪುತ್ರ ಶ್ರೀ ಶಾತಕರ್ಣಿ ಎಂದೂ (ಉದಾ–ಗೋತಮಿಪುತ ಸಿರಿ ಸದಕನಿ[1]) ವಾಸಿಷ್ಠೀಪುತ್ರ ಪುಳುಮಾಯಿಯ ಶಾಸನಗಳಲ್ಲಿ ವಾಸಿಷ್ಠೀಪುತ್ರ ಶ್ರೀ ಪುಳುಮಾಯಿ ಎಂದೂ (ಉದಾ–ರಞೋ ವಾಸಿಠೀಪುತಸ ಸಿರಿ ಪುಳುಮಾಯಿಸ[2]) ಇರುವಲ್ಲಿಯ ಆ ನಡುವಣ ಶ್ರೀ ಕಾರವು ಆಯಾ ಹೆಸರುಗಳಲ್ಲಿ ಅದರ ಪರಪದಗಳಾದ ಶಾತಕರ್ಣಿ ಹಾಗೂ ಪುಳುಮಾಯಿ ಎಂಬವುಗಳ ಪೂರ್ವಪದವೇ ವಿನಾ ಅದರ ಪೂರ್ವಪದಗಳಾದ ಗೌತಮೀಪುತ್ರ ಹಾಗೂ ವಾಸಿಷ್ಠೀಪುತ್ರ ಎಂಬವುಗಳ ಪರಪದ ವಲ್ಲ ಎಂದು ಬೇರೆ ಹೇಳಬೇಕೆಂದಿಲ್ಲ. ಪುರಾಣಗಳಲ್ಲಿ (ಶ್ಲೋ. ೩) 'ಯಜ್ಞಶ್ರೀಃ ಶಾತಕರ್ಣಿ' ಎಂದಿರುವವನ ಶಾಸನಗಳಲ್ಲಿಯೂ (ಉದಾ—ರಞೋ ಗೋತಮಿ ಪುತಸ ಸಾಮಿ ಸಿರಿಯಞ ಸಾತಕಣಿಸ[3]) ನಾಣ್ಯಗಳಲ್ಲಿಯೂ (ಉದಾ—ಸಿರಿಯಞ ಸಾತಕಣಿಸ ರಞೊ ಗೊತಮಿಪುತಸ[4]) ಆತನನ್ನು ಗೌತಮೀಪುತ್ರ (ಸ್ವಾಮಿ) ಶ್ರೀ ಯಜ್ಞ ಶಾತಕರ್ಣಿ ಎಂದಿರುವುದರಿಂದ, ಹಾಗೆಯೇ ಪುರಾಣಗಳಲ್ಲಿ (ಶ್ಲೋ. ೪) 'ಚಂಡಶ್ರೀಃ ಶಾತಕರ್ಣಿ' ಎಂದಿರುವವನ ನಾಣ್ಯಗಳಲ್ಲಿಯೂ (ಉದಾ—ವಾಸಿಠಿ ಪುತ ಸಿರಿ ಚಡಸಾತಿ[5]) ಶಾಸನದಲ್ಲಿಯೂ (ಉದಾ—ವಾಸಿಠಿಪುತ ಸಿರಿ ಚಂಡಸಾತಿ[6]) ಆತನನ್ನು ವಾಸಿಷ್ಠೀಪುತ್ರ ಶ್ರೀ ಚಂಡ ಶಾತಕರ್ಣಿ ಎಂದಿರುವುದರಿಂದ, ಪುರಾಣ ಗಳಲ್ಲಿಯ ಇವರ ಹೆಸರುಗಳ ನಡುವಣ ಶ್ರೀಕಾರವು ಉಭಯತ್ರವೂ ಅದರ ಪರಪದ ವಾದ ಶಾತಕರ್ಣಿಯ ಪೂರ್ವಪದವಲ್ಲದೆ ಅದರ ಪೂರ್ವಪದಗಳಾದ ಯಜ್ಞ ಹಾಗೂ ಚಂಡ ಎಂಬವುಗಳ ಪರಪದವಲ್ಲ, ಅತಏವ ಪುರಾಣಗಳಲ್ಲಿ ಆ ಶ್ರೀಕಾರಕ್ಕೆ ಹಚ್ಚಿಸಿದ ವಿಸರ್ಗವು (ಶ್ರೀಃ) ಸರಿಯಲ್ಲ, ಪ್ರತ್ಯಕ್ಷತಃ ಸಂಪ್ರತಿಕಾರರಿಂದಾಗಿರ ಬೇಕಾದ ತಪ್ಪು ಎಂದು ವ್ಯಕ್ತವಾಗುವುದರಿಂದ, ಈ ಅರಸರ ನೇರಾದ ಅಂಕಿತ ನಾಮಗಳು ಯಜ್ಞ ಹಾಗೂ ಚಂಡ (ಅಥವಾ ಚಂದ್ರ[7]) ಎಂದೇ ಹೊರತು ಯಜ್ಞಶ್ರೀ ಹಾಗೂ ಚಂಡಶ್ರೀ ಎಂದಲ್ಲ. ಹಾಗೆಯೇ ನಾಣ್ಯಗಳಲ್ಲಿ[8] ವಾಸಿಠಿಪುತ

---

1 ಲೂಡರ್ಸರ ಪಟ್ಟಿ ನಂ. 1125.

2 ಅದೇ, ನಂ. 1122, 1123, 1124 ಇತ್ಯಾದಿ.

3 ಅದೇ, ನಂ. 1024, 1146 ಇತ್ಯಾದಿ.

4 *RIC*. ಪಟ III, ನಂ. 5.

5 *AHD*. ಪು. 42

6 *EI*. XVIII. ಪು. 318.

7 ಇತರ ಪುರಾಣಗಳಲ್ಲಿ ಚಂಡಶ್ರೀ ಎಂದಿರುವ ಹೆಸರು ವಿಷ್ಣುಪುರಾಣದಲ್ಲಿ ಚಂದ್ರಶ್ರೀ ಎಂದಿದೆ (Pargiter, ಪು. 43, fn. 19).

8 *AHD*. ಪು. 41.

ಸಿವ ಸಿರಿ ಸಾತಕಂಣಿ=ವಾಸಿಷ್ಠೀಪುತ್ರ ಶಿವ ಶ್ರೀ ಶಾತಕರ್ಣಿ ಎಂದಿರುವ ಅರಸನನ್ನು ಪುರಾಣಗಳಲ್ಲಿ (ಶ್ಲೋ. ೨) ಅವನ ಶಾತಕರ್ಣಿ ಎಂಬ ಉಪನಾಮುವನ್ನು ಲೋಪಿಸಿ 'ಶಿವಶ್ರೀಃ' ಎಂದಿರುವಲ್ಲಿ, ಯಜ್ಞ (ಶ್ರೀ) ಶಾತಕರ್ಣಿ, ಚಂಡ (ಶ್ರೀ) ಶಾತಕರ್ಣಿ ಎಂಬಂತೆಯೇ ಇಲ್ಲಿಯೂ ಶ್ರೀಕಾರವು ಅವನ ಲುಪ್ತವಾದ (ಶಾತಕರ್ಣಿ ಎಂಬ) ಉಪನಾಮುದ ಪೂರ್ವಪದವೇ ವಿನಾ ಅವನ ಅಂಕಿತನಾಮುದ ಪರಪದವಲ್ಲ, ಅತಏವ ಅದಕ್ಕೂ ಪುರಾಣಗಳಲ್ಲಿ ಹಚ್ಚಿಸಿದ ವಿಸರ್ಗವು ಸರಿಯಲ್ಲ ಎಂದು ಸಿದ್ಧವಾಗುವುದರಿಂದ, ಪುರಾಣಗಳಲ್ಲಿ ಶಿವಶ್ರೀ ಎಂದಿರುವಾತನ ಅಂಕಿತನಾಮುವೂ ಬರೀ ಶಿವ ಎಂದಲ್ಲದೆ ಸರ್ವಥಾ ಶಿವಶ್ರೀ ಎಂದಲ್ಲ.

ಅಂಕಿತನಾಮುಗಳು ಸ್ವಾರ್ಥದಲ್ಲಿ ಲ-ಪ್ರತ್ಯಯ ಹೊಂದುತ್ತವೆ ಎಂಬುದಕ್ಕೆ ಲೂಡರ್ಸರ ಪಟ್ಟಿಯಲ್ಲಿಯ ಪ್ರಾಯಶಃ ಈ ಸಾತವಾಹನರ ಕಾಲದ ಶಾಸನಗಳಲ್ಲಿಯೇ ಹಲವು ಉದಾಹರಣೆಗಳಿವೆ—(೧) ಕೃಷ್ಣ (ಕನ್ಹ)-ಕನ್ಹಿಲ (ನಂ. 833); (೨) ನಾಗ=ನಾಗಿಲ (ನಂ. 338; 470; 569); (೩) ದ್ರೋಣ=ದ್ರೋಣಲ (ನಂ. 1417); (೪) ವಸು=(ಸ್ತ್ರೀ) ವಸುಲಾ (ನಂ. 249); (೫) ಶಿವ (ಸಿವ)=(ಸ್ತ್ರೀ) ಸಿವಲಾ (ನಂ. 709; 1268), ಆದುದರಿಂದ ಶಿವ=(ಪುಲ್ಲಿಂಗ) ಸಿವಲ.

ಇದರಿಂದ ಕೊಲ್ಹಾಪುರದ ಮೇಲಣ ೧ನೆಯ ಮತ್ತು ೩ನೆಯ ನಾಣ್ಯಗಳ ಒಕ್ಕಣೆಯಲ್ಲಿಯ ವಿಳಿವಾಯಕುರ=ಪುಳುಮಾಯಿಯ ಕುಮಾರ ಎಂಬಂತೆಯೇ ೨ನೆಯ ನಾಣ್ಯಲೇಖದಲ್ಲಿ ಮಾಢರೀಪುತ್ರ ಸಿವಲಕುರ ಎಂಬಲ್ಲಿಯ ಸಿವಲಕುರ=ಸಿವಲನ ಕುಮಾರ, ಅಂದರೆ ಶಿವನ ಕುಮಾರ ಎಂದು ಸಿದ್ಧವಾಗುವುದರಿಂದ, ಈ ಸಿವಲಕುರನು ಮೇಲಣ ೮ ಸಾತವಾಹನರಲ್ಲಿ ಶಿವ ಎಂಬ ಹೆಸರಿನ ಅದೊಬ್ಬನೇ ಇದ್ದ ಶಿವ (ಶ್ರೀ) ಶಾತಕರ್ಣಿಯ ಮುಗನಾಗಿರಬೇಕೆಂಬಲ್ಲಿ ಸಂಶಯವಿಲ್ಲ. ಆ ನಾಣ್ಯಲೇಖದಲ್ಲಿ ಅವನನ್ನು ಮಾಢರೀಪುತ್ರ ಎಂದಿರುವುದರಿಂದ, ಆತನು ಶಿವ (ಶ್ರೀ) ಶಾತಕರ್ಣಿಯ ಮಾಢರ ಗೋತ್ರದ ಪಟ್ಟರಾಣಿಯ ಮುಗನಾಗಿರಬೇಕು. ನಾಗಾರ್ಜುನಿಕೊಂಡದ ಸ್ತಂಭಲೇಖಗಳ[1] ವಾಸಿಠೀಪುತ ಸಿರಿ ಚಾಂತಮೂಲನ ಮುಗನಾದ ಮಾಢರೀಪುತ ಸಿರಿ ವೀರ ಪುರಿಸದತನೆಂಬ ಅರಸನ ಹೆಸರಿನಲ್ಲಿಯೂ ಕಣ್ಹೇರಿಯ ಗುಹಾಲೇಖಗಳ[2] ಮುಢರಿಪುತ ಸ್ವಾಮಿ ಸಕಸೇನನೆಂಬ ಅರಸನ ಹೆಸರಿನಲ್ಲಿಯೂ ಮಾ(ಮು)ಢರ ಗೋತ್ರದ ಹೆಸರಿದೆ. ಪ್ರಾಕೃತ 'ಮಾ(ಮು)ಢರ'-ಸಂಸ್ಕೃತ 'ಮಾಠರ' ಎಂದಾದರೆ, ಹೇಮುಚಂದ್ರನ ಅಭಿಧಾನಚಿಂತಾಮಣಿಯಿಂದ (ಶ್ಲೋ. ೮೪೬) 'ವೇದವ್ಯಾಸಸ್ತು ಮಾಠರಃ' ಎಂದು ತಿಳಿಯುವುದರಿಂದ, ಮಾಢರಗೋತ್ರ-ಮಾಠರ ಗೋತ್ರ ಅಂದರೆ ವೇದವ್ಯಾಸ ಗೋತ್ರ ಎಂದಾಗುತ್ತದೆ. ಈ ಗೋತ್ರವನ್ನು ಕುರಿತು ಇದಕ್ಕಿಂತ ಹೆಚ್ಚಿಗೆ ನಾನರಿಯೆ.

ಈತನ ತಂದೆಯಾದ ಶಿವ (ಶ್ರೀ) ಶಾತಕರ್ಣಿ ತನ್ನ ತಂದೆಯಾದ ವಾಸಿಷ್ಠೀಪುತ್ರ ಪುಳುಮಾಯಿಯ ಆಳಿಕೆಯಲ್ಲಿ ಅವನ ಯುವರಾಜನಾಗಿದ್ದಂದು

1 *Annual Report on South Indian Epigraphy (SIE.)*, 1927, ಪು. 42-43, 72.

2 ಲೂಡರ್ಸರ ಪಟ್ಟಿ, ನಂ. 1001, 1002.

ತನ್ನ ಹೆಸರಿಲ್ಲದೆ (ವಾಸಿಷ್ಠೀಪುತ್ರ) ವಿಳಿವಾಯಕುರ = ಪುಳುಮಾಯಿಯ ಕುಮಾರ ಎಂದು ಹೊಡಸಿದ (ಕೊಲ್ಹಾಪುರದ ನಂ. ೧ನೆಯ) ನಾಣ್ಯಗಳಂತೆಯೇ (ಮಾಢರೀಪುತ್ರ) ಸಿವಲಕುರ = ಶಿವ ಶಾತಕರ್ಣಿಯ ಕುಮಾರನೆಂದು ಮಾತ್ರ ಇದ್ದು ಈತನ ಸ್ವಂತ ಹೆಸರಿಲ್ಲದ (ನಂ. ೨ನೆಯ) ನಾಣ್ಯಗಳೂ ಈತನು ತನ್ನ ತಂದೆಯ ಆಳಿಕೆಯಲ್ಲಿ (ಕ್ರಿ.ಶ. 148–152) ಅವನ ಯುವರಾಜನಾಗಿದ್ದಂದು ತಾನೆ ಹೊಡೆಯಲ್ಪಟ್ಟಿರಬೇಕು. ಶಿವ (ಶ್ರೀ) ಶಾತಕರ್ಣಿಯ ಬಳಿಕ ಅವನ ಚಿಕ್ಕಪ್ಪನ ಮಗನಾದ ಯಜ್ಞ (ಶ್ರೀ) ಶಾತಕರ್ಣಿ ಪಟ್ಟವೇರಿದಂದಿನಿಂದ ಸಾತವಾಹನರ ಕೊನೆಯವರೆಗೆ ಯಜ್ಞ (ಶ್ರೀ) ಶಾತಕರ್ಣಿಯ ವರಿಸೆಯವರೇ ಪಟ್ಟದಲ್ಲಿದ್ದುದರಿಂದ, ತನ್ನ ತಂದೆಯಾದ ಶಿವ (ಶ್ರೀ) ಶಾತಕರ್ಣಿಯ ಆಳಿಕೆಯಲ್ಲಿ ಅವನ ಯುವರಾಜನಾಗಿದ್ದು ಆಗ್ಗೆ ತನ್ನ (ನಂ. ೨ನೆಯ) ನಾಣ್ಯಗಳನ್ನು ಹೊಡಸಿದ, ಹಾಗೂ ತನ್ನ ತಂದೆ ಆತನ ತಂದೆಯ ಆಳಿಕೆಯಲ್ಲಿ ಯುವರಾಜನಾಗಿದ್ದಾಗ ಮುದ್ರಿಸಿದ ಆತನ (ನಂ. ೧ನೆಯ) ನಾಣ್ಯಗಳನ್ನು ಪುನರ್ಮುದ್ರಿಸಿದ ಈ ಮಾಢರೀಪುತ್ರ ಸಿವಲಕುರನು ಪಟ್ಟರಾಜನಾಗಿ ಆಳಲೂ ಇಲ್ಲ, ತನ್ನ (ನಂ. ೨ನೆಯ) ನಾಣ್ಯಗಳಲ್ಲಿ ತನ್ನ ತಾಯಿಯ ಗೋತ್ರನಾಮವನ್ನೂ ತಂದೆಯ ಅಂಕಿತನಾಮವನ್ನೂ ಮಾತ್ರ ಹೇಳಿರುವ ಈ ರಾಜಕುಮಾರನ ಸ್ವಂತ ಹೆಸರೇನೋ ಅದೂ ಗೊತ್ತಿಲ್ಲ.

ಗೌತಮೀಪುತ್ರ ವಿಳಿವಾಯಕುರ ಎಂಬ ಮಾತ್ರವೇ ಪುಳುಮಾಯಿ ಎಂಬ ಅರಸನ ಗೌತಮ ಗೋತ್ರದ ಮಹಾರಾಣಿಯಲ್ಲಿ ಹುಟ್ಟಿದಾತನೆಂದೂ ಮಾಢರೀಪುತ್ರ ಸಿವಲಕುರನ (ನಂ. ೨ನೆಯ) ನಾಣ್ಯಗಳನ್ನು ಪುನರ್ಮುದ್ರಿಸಿದ ಕಾರಣ ಅವನಿಗಿಂತ ಈಚೆಯವನೆಂದೂ ತಿಳಿವ ನಂ. ೩ನೆಯ ನಾಣ್ಯಗಳ ಗೌತಮೀಪುತ್ರ ವಿಳಿವಾಯಕುರನ ತಂದೆಯಾದರೊ, ಮೇಲಣ ಸಾತವಾಹನರಲ್ಲಿ ೨ನೆಯವನಾದ ವಾಸಿಷ್ಠೀಪುತ್ರ ಪುಳುಮಾಯಿ(ವಿ)[1] ಹಾಗೂ ಕೊನೆಯವನಾದ ಪುಳುಮಾವಿ ಎಂಬ ಅವರಿಬ್ಬರೇ ಪುಳುಮಾಯಿ(ವಿ)ಗಳಲ್ಲದೆ ಬೇರೊಬ್ಬ ಪುಳುಮಾಯಿ(ವಿ) ಇಲ್ಲದುದರಿಂದ, ಆ ಕೊನೆಯ ಪುಳುಮಾವಿ ತಾನೆ ಎಂದು ಮೇಲೆ ಕಂಡದೆ. ಆ ಪುಳುಮಾವಿಯೊಂದಿಗೆ ಸಾತವಾಹನರ ವಂಶವೇ ಕೊನೆಗಂಡುದರಿಂದ, ತನ್ನ ತಂದೆಯ ಆಳಿಕೆಯಲ್ಲಿ ತಾನು ಯುವರಾಜನಾಗಿದ್ದಾಗ ತನ್ನ (ನಂ. ೩ನೆಯ) ನಾಣ್ಯಗಳನ್ನು ಮುದ್ರಿಸಿದ, ಹಾಗೂ ಸಿವಲಕುರನ (ನಂ. ೨ನೆಯ) ನಾಣ್ಯಗಳನ್ನು ಪುನರ್ಮುದ್ರಿಸಿದ, ಗೌತಮೀಪುತ್ರ ವಿಳಿವಾಯಕುರನೂ (ಸಿವಲಕುರನಂತೆಯೇ) ಆಳರಸನಾಗಿರಲಿಲ್ಲ, ಈ ರಾಜಕುಮಾರನ ಅಂಕಿತನಾಮವೂ ಏನೆಂದು ಗೊತ್ತಿಲ್ಲ.

**ಗೋವಿಂದ ಪೈ**

---

[1] ವಾಸಿಷ್ಠೀಪುತ್ರ ಪುಳುಮಾಯಿಯ ಶಾಸನಗಳಲ್ಲಿ ಅವನ ಹೆಸರು ಪುಳುಮಾಯಿ (ಲೂಡರ್ಸರ ನಂ. 1122, 1123 ಇತ್ಯಾದಿ) ಎಂದೂ ಪುಳುಮಾವಿ (ನಂ. 1106, 1124 ಇ) ಎಂದೂ ಇರುವುದರಿಂದ ಇವು ಒಂದೇ ಹೆಸರಿನ ರೂಪಭೇದಗಳಷ್ಟೆ ಎಂದು ತಿಳಿಯುತ್ತದೆ. ಪುಳುಮಾವಿಯ ವ–ಕಾರವು ವಿಳಿವಾಯದಲ್ಲಿ ಯ–ಕಾರವಾಗುವುದಕ್ಕೆ ಪ್ರಾಕೃತದಲ್ಲಿ ಈ ಉದಾಹರಣೆಗಳಿವೆ.—ಪ್ರವರ್ತತಿ = ಪಯಟ್ಟಇ; ದಿವಾ (ಹಗಲಿನಲ್ಲಿ) = ದಿಯಾ; ದಾವ (ಅರಣ್ಯ) = ದಾಯ, ಇತ್ಯಾದಿ.

# ಕವಿ ಭೀಮನು ಯಾರು?

ವೇದಸಮನಾಗಿ ಭೀಮನಿ।
ನಾದುದು ಸಂಸ್ಕೃತದ ಧಾತುವಾ ತೆಱದಿಂದಂ॥
ಯಾದವ ಕಟಕಾಚಾರ್ಯನಿ।
ನಾದುದು ಕರ್ಣಾಟ ಧಾತು ಕವಿ ಕೇಶವನಿಂ ॥ ೨೫ ॥

ಈ ಸೂತ್ರದಲ್ಲಿ ಕೇಶಿರಾಜನು "ವೇದಸಮನಾಗಿ ಭೀಮನಿನಾದುದು ಸಂಸ್ಕೃತದ ಧಾತುವು" ಎಂದು ಹೇಳಿ ಕರ್ಣಾಟ ಧಾತುಪಾಠ ಹಾಗೆಯೇ "ಕವಿ ಕೇಶವನಿಂದಾದುದು" ಎಂದು ೯೬೮ ಧಾತುಗಳಿರುವ "ಧಾತು ಪ್ರಕರಣಂ" ಎಂಬ ಆರನೆಯ ಅಧ್ಯಾಯವನ್ನು ತನ್ನ 'ಶಬ್ದಮಣಿದರ್ಪಣ'[೧]ದಲ್ಲಿ ಕೊಟ್ಟಿದ್ದಾನೆ. ಈ ಭೀಮನು ಯಾರು? ಇವನು ಇದ್ದ ಕಾಲ ಯಾವುದು? ಈ ಧಾತುಪಾಠದ ಸ್ವರೂಪ—ಈ ವಿಷಯಗಳನ್ನು ಈ ಲೇಖನದಲ್ಲಿ ವಿಚಾರಮಾಡಲು ಪ್ರಯತ್ನಿಸಿದೆ.

## ಈ ಭೀಮನು ಯಾರು?

ಸಂಸ್ಕೃತ ಸಾಹಿತ್ಯದಲ್ಲಿ "ಭೀಮ" ಅಥವಾ "ಭೀಮಸೇನ" ಎಂಬ ಹೆಸರಿನವರು ಅನೇಕರಿದ್ದರು:

೧. **ಭೀಮಸೇನ (ದೀಕ್ಷಿತ)**[೨]: ಇವನು ಯೋಧಪುರದ ಅಜಿತಸಿಂಹನ ಕಾಲದಲ್ಲಿದ್ದವನು. ರಚಿಸಿದ ಗ್ರಂಥ: **"ಕುವಲಯಾನಂದ ಖಂಡನ"** ಅಥವಾ **"ಅಲಂಕಾರ ಸಾರ ಸ್ಥಿತಿ"**.

೨. **ಭೀಮಸೇನ:** ನೇಪಾಳ ರಾಜ್ಯದಲ್ಲಿ ಪ್ರಧಾನ ಮನ್ತ್ರಿ: ರಚಿಸಿದ ಗ್ರಂಥ: **"ಸರ್ವಲಕ್ಷಣ ಪುಸ್ತಕ"**.

೩. **ಭೀಮಸೇನ:** ಶಿವಾನಂದನ ಮಗ. ರಚಿಸಿದ ಗ್ರಂಥ: ಶ್ರೀಹರ್ಷದೇವನ ರತ್ನಾವಳೀ ನಾಟಿಕೆಗೆ **"ಸುಧಾಸಾಗರ ಕಾವ್ಯಪ್ರಕಾಶ ಟೀಕಾ"** ಎಂಬ ವ್ಯಾಖ್ಯಾನ.

೪. **ಭೀಮಸೇನ:** ತಾಂತ್ರಿಕ ಅಧ್ಯಾಪಕ. "ಶಕ್ತಿರತ್ನಾಕರ"ದಲ್ಲಿ ಇವನ ಹೆಸರನ್ನು ಸೂಚಿಸಿದೆ. ಕಾಲ ಕ್ರಿ. ಶ. ೧೭೨೩.

೫. **ಭೀಮಸೇನ:** ಕವಿ. ರಚಿಸಿದ ಗ್ರಂಥ: **"ದತ್ತಸಂಗ್ರಹ"**.

೬. **ಭೀಮಸೇನ:** ರಚಿಸಿದ ಗ್ರಂಥ: **"ದುರ್ಗಾ ಮಾಹಾತ್ಮ್ಯ ಟೀಕಾ"**.

೭. **ಭೀಮಸೇನ:** ರಚಿಸಿದ ಗ್ರಂಥ: **"ವೈದ್ಯಬೋಧ ಸಂಗ್ರಹ"**.

೮. **ಭೀಮಸೇನ:** ಇವನು ಕೀರ್ತನಗಿರಿಯವನು. ರಚಿಸಿದ ಗ್ರಂಥ: **"ಸೂಪಶಾಸ್ತ್ರ"** ಅಥವಾ **"ಪಾಕಶಾಸ್ತ್ರ"**.

೯. **ಭೀಮಸೇನ:** ವೈಯಾಕರಣಿ. ರಚಿಸಿದ ಗ್ರಂಥಗಳು: ೧. **"ಧಾತುಪಾಠ"**, ೨. **"ಭೈಮೀ ವ್ಯಾಕರಣ"**.

---

೧ ಡಾ॥ ಕಿಟ್ಟಲ್ ಅವರು ಮಂಗಳೂರಿನಲ್ಲಿ ೧೮೭೨ನೆಯ ಇಸವಿಯಲ್ಲಿ ಅಚ್ಚುಹಾಕಿಸಿರುವ ಪ್ರತಿ.

೨ *Catalogus catalogorum* : Part II, p. 94. b.

ಈ ಲೇಖನದಲ್ಲಿ ನಾವು ವಿಚಾರ ಮಾಡತೊಡಗಿರುವುದು ವೈಯಾಕರಣಿ ಭೀಮಸೇನನ ಧಾತುಪಾಠ ಮುಂತಾದವನ್ನು.

ಡಾ॥ ಶ್ರೀಪಾದ ಕೃಷ್ಣ ಬೆಳ್ವಾಳ್‌ಕರ್‌ಅವರು ತಮ್ಮ "Systems of Samskṛt Grammar" ಎಂಬ ಪುಸ್ತಕದಲ್ಲಿ[1] ಧಾತುಪಾಠಗಳ ವಿಚಾರವನ್ನೆತ್ತಿ "ವೇದಭಾಷ್ಯಕಾರರಾದ ಮಾಧವ ಅಥವಾ ಸಾಯಣಾಚಾರ್ಯರು **'ಮಾಧವೀಯ ಧಾತುವೃತ್ತಿ'** ಎಂಬ ಗ್ರಂಥವನ್ನು ರಚಿಸಿದ್ದಾರೆ. ಇದನ್ನು ಸುಮಾರು ಕ್ರಿ. ಶ. ೧೩೫೦ನೆಯ ಇಸವಿಯಲ್ಲಿ ರಚಿಸಿದರು. ಹೀಗೆಯೇ ಧಾತುಪಾಠಗಳ ವಿಷಯದಲ್ಲಿ ಗ್ರಂಥವನ್ನು ರಚಿಸಿರುವವರಲ್ಲಿ ಭೀಮಸೇನ, ಮೈತ್ರೇಯರಕ್ಷಿತ—ಎಂಬಿಬ್ಬರು ಮುಖ್ಯರಾದವರು; ಇವರು ಪಾಣಿನೀಯಮತಾನುಯಾಯಿಗಳು"—ಎಂದು ಹೇಳಿದ್ದಾರೆ.

ಡಾ॥ ಬೆಳ್ವಾಳ್ಕರ್‌ಅವರು[2] ಅಚ್ಚಾಗದ ವ್ಯಾಕರಣ ಗ್ರಂಥಗಳ ಪಟ್ಟಿಯಲ್ಲಿ ೨೨೦ನೆಯ ಗ್ರಂಥದ ವಿಷಯವನ್ನು ಹೀಗೆ ಸೂಚಿಸಿದ್ದಾರೆ:

"ಧಾತುಗಳ ಪಟ್ಟಿಯನ್ನು ಪಾಣಿನಿಯು ರಚಿಸಿದನೆಂದೂ ಭೀಮಸೇನನು ಅವುಗಳಿಗೆಲ್ಲಾ ಅರ್ಥವನ್ನು ಬರೆದನೆಂದೂ ಹೇಳುವ ಸಂಪ್ರದಾಯವಿದೆ. ಈ ಭೀಮಸೇನನು ಬಹಳ ಹಿಂದಿನವನು; ಅದೇ ಧಾತುಪಾಠಕ್ಕೆ **ಪ್ರದೀಪ** ಎಂಬ ವ್ಯಾಖ್ಯಾನವನ್ನು ಬರೆದನೆಂದೂ ಹೇಳುತ್ತಾರೆ."

ಔಫ್ರೆಕ್ಟ್ ಎಂಬ ವಿದ್ವಾಂಸರ ಗ್ರಂಥಗಳ ಪಟ್ಟಿಯಲ್ಲಿ:[3]

"ಭೀಮಸೇನ: ಧಾತುಪಾಠ ಮತ್ತು ಭೈಮಿ ವ್ಯಾಕರಣ—ಇವುಗಳನ್ನು ರಚಿಸಿದ್ದಾನೆ. ರಾಯಮುಕುಟ[4] ಮತ್ತು ಪದ್ಮನಾಭ[5]—ಎಂಬ ವೈಯಾಕರಣಿಗಳು ತಮ್ಮ ಗ್ರಂಥಗಳಲ್ಲಿ ಇವನ ಹೆಸರನ್ನು ಉಲ್ಲೇಖ ಮಾಡಿದ್ದಾರೆ"—ಎಂದು ಹೇಳಿದೆ.

ಮಹಾಮಹೋಪಾಧ್ಯಾಯ ಹರಪ್ರಸಾದಶಾಸ್ತ್ರಿಗಳವರು ಬೆಂಗಾಲ್ ರಾಯಲ್ ಏಷ್ಯಾಟಿಕ್ ಸೊಸೈಟಿಯ ಸರಸ್ವತಿ ಭಂಡಾರದಲ್ಲಿರುವ ಅಚ್ಚಾಗದ ಗ್ರಂಥಗಳ ಪಟ್ಟಿಯನ್ನು[6] ವಿಮರ್ಶಿಮಾಡುತ್ತಾ,

"ಪ್ರತಿಯೊಬ್ಬ ವೈಯಾಕರಣನೂ ಹಿಂದಿದ್ದ ಪಟ್ಟಿ ಪರಿಶಿಷ್ಟಗಳ ಆಧಾರದಿಂದ ತನ್ನದೇ ಆದ ಒಂದು ಧಾತುಪಾಠವನ್ನು ರಚಿಸಿಕೊಳ್ಳಬೇಕಾಗಿತ್ತು. ಪಾಣಿನಿಯ ಧಾತುಪಾಠದಲ್ಲಿ ೧೯೪೪ ಧಾತುಗಳು, ಪಾಣಿನಿಯ ಸೂತ್ರಗಳಲ್ಲಿ ದೊರಕುವ ೨೦ ಸೌತ್ರ ಧಾತುಗಳು—೧೯೬೪ ಧಾತುಗಳಿವೆ. ಈ ಧಾತುಪಾಠಕ್ಕೆ ನೂರಾರು

---

೧ ಪುಟ ೫೨.

೨ *Descriptive Catalogue of Grammar* MSS. Vol. II, part I (B. O. R. Institute, Poona, 1938). MS. No. 220 of 1892–1895.

೩ Aufrecht : *Catalogus catalogorum*, I, p. 271; II, p. 58 ; III, p. 58.

೪ ಇವನು ಪ್ರಸಿದ್ಧನಾದ ಟೀಕಾಕಾರ; ಅಮರಕೋಶಕ್ಕೆ "ಪದಚಂದ್ರಿಕಾ" ಎಂಬ ಟೀಕೆಯನ್ನು ಬರೆದಿದ್ದಾನೆ. ಇವನು ಇದ್ದದ್ದು ಕ್ರಿ. ಶ. ೧೪೩೧ರಲ್ಲಿ. "ರಾಯಮುಕುಟ ಪದ್ಧತಿ" ಮುಂತಾದ ಗ್ರಂಥಗಳನ್ನು ಬರೆದಿದ್ದಾನೆ.

೫ ಇವನು ಪದ್ಮನಾಭದತ್ತನೆಂಬ ಪ್ರಸಿದ್ಧ ವೈಯಾಕರಣಿ. "ಸುಪದ್ಮವ್ಯಾಕರಣ" ಎಂಬ ಇವನ ಗ್ರಂಥವು ಈಗ್ಲೂ ಯಶೋಹರದಲ್ಲಿ ಪ್ರಸಿದ್ಧ.

೬ *Catalogue of Vyākaraṇa* MSS. Vol. VI, Calcutta, 1931, pp. 71-72.

ವ್ಯಾಖ್ಯಾನಗಳಿವೆ......೪೩೫೧, ೪೩೫೩—ಈ ವ್ಯಾಖ್ಯಾನಗಳು ಭೀಮಸೇನನು ರಚಿಸಿದವು. ೪೩೫೪ನೆಯದು ಪಾಣಿನಿಯ ಧಾತುಪಾಠಕ್ಕೆ ಬೌದ್ಧನಾದ ಮೈತ್ರೇಯ ರಕ್ಷಿತನು[೧] ರಚಿಸಿರುವ ವ್ಯಾಖ್ಯಾನ. ಇವನು ಭೀಮಸೇನನಿಗಿಂತ ಈಚಿನವನು. ಶ್ರೀಶಬಾಬುವು: ಇವನ ಕಾಲವು ಸುಮಾರು ಕ್ರಿ. ಶ. ೧೧೦೦ ಎಂದು ಅಭಿಪ್ರಾಯ ಪಟ್ಟಿದ್ದಾರೆ"—ಎಂದು ವಿವರಿಸಿದ್ದಾರೆ.

ಡಾ॥ ಲೀಬಿಷ್‌ರವರು ತಾವು ಪ್ರಕಟಿಸಿರುವ "**ಕ್ಷೀರತರಂಗಿಣಿ**"ಯ ಉಪೋದ್ಘಾತದಲ್ಲಿ ಭೀಮನು ಚಂದ್ರಗೋಮಿನ್ ಎಂಬ ವೈಯಾಕರಣ, ಮೈತ್ರೇಯರಕ್ಷಿತ ಇವರಿಗಿಂತ ಹಿಂದಿನವನೆಂದು ಹೇಳಿದ್ದಾರೆ.

ತತ್ತ್ವಾರ್ಥಾಧಿಗಮ ಸೂತ್ರದ ಸ್ವೋಪಜ್ಞ ಭಾಷ್ಯದಲ್ಲಿ ಉಮಾಸ್ವಾತಿಯು "ಚಿತೀ ಸಂಜ್ಞಾನ ವಿಶುದ್ಧಯೋಃ ಧಾತುಃ । ತಸ್ಯ ಚಿತ್ತಮಿತಿನಿಷ್ಠಾನ್ತ ಮೌಣಾದಿಕಂಚ" ಎಂದು ಬರೆದಿದ್ದಾನೆ.

ಉಮಾಸ್ವಾತಿಯ ಸೂತ್ರ ಮತ್ತು ಸ್ವೋಪಜ್ಞ ಭಾಷ್ಯಗಳಿಗೆ ಸಿದ್ಧಸೇನ ಗಣಿಯು[೨] ವ್ಯಾಖ್ಯಾನವನ್ನು ಬರೆದಿದ್ದಾನೆ. ಮೇಲೆ ಹೇಳಿರುವ ಉಮಾಸ್ವಾತಿಯ ವಾಕ್ಯವನ್ನು ವಿವರಿಸುವಾಗ

"ಚಿತೀ ಸಂಜ್ಞಾನವಿಶುದ್ಧಯೋರ್ಧಾತುರಿತ್ಯಾದಿ ।
ಭೀಮಸೇನಾತ್ಪರತೋಽನ್ಯೈರ್ವೈಯಾಕರಣೈರರ್ಥದ್ವಯೇ
ಪಠಿತೋ ಧಾತುಃ ಸಂಜ್ಞಾನೇ ವಿಶುದ್ಧಾ ಚ ॥"

ಎಂದು ಸಿದ್ಧಸೇನಗಣಿಯು ಬರೆದಿದ್ದಾನೆ.

ಇದರಿಂದ ಭೀಮಸೇನನು ಪ್ರಸಿದ್ಧನಾದ ವೈಯಾಕರಣನೆಂದೂ ಧಾತುಪಾಠವು ಅವನಿಂದ ರಚಿತವಾದುದೆಂದೂ ವ್ಯಕ್ತವಾಗುತ್ತದೆ.

ಸಂಸ್ಕೃತ ಸಿದ್ಧಾಂತ ಕೌಮುದಿಗೆ ತತ್ತ್ವಬೋಧಿನೀ[೩] ಎಂಬ ವ್ಯಾಖ್ಯಾನವಿದೆ. ಭೂಧಾತು ಪ್ರಕ್ರಿಯಾನಿರೂಪಣಾಂತ್ಯ ಭಾಗದಲ್ಲಿ

"ಉಪಲಕ್ಷಣಮಿತಿ । ಏತಚ್ಚ ಸತ್ತಾದ್ಯರ್ಥ ನಿರ್ದೇಶಂ ಕೃತವತೋ ಭೀಮ ಸೇನಸ್ಯಾಪಿ ಸಮ್ಮತಮಿತ್ಯತ್ರ ಕುರ್ದ ಖುರ್ದ ಗುರ್ದ ಗುದ ಕ್ರೀಡಾಯಾಮೇವ ಇತ್ಯೇವಕಾರೋ ಜ್ಞಾಪಕಃ" ಎಂದೂ,

ಚುರಾದ್ಯನ್ತ ಭಾಗದಲ್ಲಿ[೪]

---

೧ ಈ ವ್ಯಾಖ್ಯಾನಕ್ಕೆ "ಧಾತುಪ್ರದೀಪ" ಅಥವಾ "ತಂತ್ರ ಪ್ರದೀಪ" ಎಂಬ ಹೆಸರಿದೆ. (India Office : *Catalogue of Samskṛt* MSS. Part II., Samskṛt Literature : A. Scientific and Technical. 1. Grammar No. 687—P. 182. ಗ್ರಂಥಾರಂಭವು ಹೀಗಿದೆ :

"ಮಂಜುಘೋಷ ಪ್ರಸಾದೇನ ಧಾತೂನಾಂ ವೃತ್ತಿಮಾರಭೇ ।
ಬಹುಶೋಽಮೂನ್ ಯಥಾ ಭೀಮಃ ಪ್ರೋಕ್ತವಾನ್ ತದುಪಾಗಮಾತ್ ॥"

ಗ್ರಂಥಾಂತ್ಯದಲ್ಲಿ :

"ನಾಮ್ನಾ ತಂತ್ರ ಪ್ರದೀಪೋಽಯಂ ವಿವೃತಾಸ್ತೇನಧಾತವಃ ॥..........ಧಾತುಪ್ರದೀಪಮುಕ ಕೋಜ್ಜಗತೋ ಹಿತಾಯ ॥ ಇತಿ ಶ್ರೀ ಮಹೋಪಾಧ್ಯಾಯ ಮೈತ್ರೇಯರಕ್ಷಿತಕೃತೋ ಧಾತು ಪ್ರದೀಪಸ್ಸಮಾಪ್ತಃ ॥"

೨ P. K. Gode in *New Indian Antiquary* : Vol. II, No. 2, May 195[illegible], p. 110.

೩ ತತ್ತ್ವಬೋಧಿನೀ (ನಿರ್ಣಯಸಾಗರದ ಮುದ್ರಣ), ಪುಟ ೩೩೦, ಪಂಕ್ತಿ ೩೯.

೪ ತತ್ತ್ವಬೋಧಿನೀ (ನಿರ್ಣಯಸಾಗರದ ಮುದ್ರಣ), ಪುಟ ೪೦೮–೪೩೪.

"ಪುಚ್ಛಾದಿಷ್ವಿತಿ। ಭೀಮಸೇನಸ್ಯ ವಾಕ್ಯಮ್।" ಎಂದೂ ಇದೆ.

"ಬಾಲಮನೋರಮಾ" ಎಂಬ ವ್ಯಾಖ್ಯಾನದ ಚುರಾದ್ಯಂತ ಭಾಗದಲ್ಲಿ[೧] ಧಾತುಗಳಿಗೆ ಅರ್ಥವು ಇತ್ತೀಚೆಗೆ ಬರೆಯಲ್ಪಟ್ಟದ್ದೆಂದೂ ಹಾಗೆ ಬರೆದವನು ಭೀಮಸೇನನೆಂದೂ ತೋರುವ,

"ಪುಚ್ಛಾದಿಸು ಧಾತ್ವರ್ಥ ಇತ್ಯೇವ ನಸಿದ್ಧಮಿತಿ।
ಧಾತುಪಾಠಂ ರಚಯಿತುರ್ಭೀಮಸೇನಸ್ಯ ವಾಕ್ಯಮಿದಮಿತ್ಯಾಹುಃ"

ಎಂಬುದಿದೆ.

"ವೈಯಾಕರಣ ಭೂಷಣಸಾರ"ದಲ್ಲಿ ಹತ್ತನೆಯ ಕಾರಿಕೆಯ ವ್ಯಾಖ್ಯಾನದಲ್ಲಿ "ನಚಗನ್ಧನಾರ್ಥನಿರ್ದೇಶೋ ನಿಯಾಮಕಃ। ತಸ್ಯಾರ್ಥಾನಾದೇಶನಾತ್, ಇತಿ ಭಾಷ್ಯಪರ್ಯಾಲೋಚನಯಾ ಆಧುನಿಕತ್ವಲಾಭಾತ್, ಭೀಮಸೇನಾದಿ ಪ್ರಣೀತತ್ವಾವಗತೇಃ ಇತಿ" ಎಂದಿದೆ.

ಪ್ರಾಚೀನ ಬೌದ್ಧ ವಿದ್ವಾಂಸನಾದ ಸುಭೂತಿಚಂದ್ರನು ಅಮರಕೋಶಕ್ಕೆ ಒಂದು ವ್ಯಾಖ್ಯಾನವನ್ನು ಬರೆದಿದ್ದಾನೆ. ಅದರಲ್ಲಿ ನೂರಾರು ಮಂದಿ ವೈಯಾಕರಣರ ಮತ್ತು ಅವರು ರಚಿಸಿದ ಗ್ರಂಥಗಳ ಹೆಸರುಗಳೂ ಇವೆ. ಭೀಮಸೇನನ ಧಾತುಪಾಠವನ್ನೂ ಅಲ್ಲಿ ಅವನು ಉಲ್ಲೇಖ ಮಾಡಿದ್ದಾನೆ.[೨]

ಡಾ॥ ಎ. ವೆಂಕಟಸುಬ್ಬಯ್ಯನವರು "ಪಾಣಿನಿಯ ಧಾತುಪಾಠಕ್ಕೆ ವ್ಯಾಖ್ಯಾನವನ್ನು ಬರೆದ ಭೀಮ ಅಥವಾ ಭೀಮಸೇನ ಎಂಬೊಬ್ಬ ವೈಯಾಕರಣನ ವಿಷಯವು ನಮಗೆ ಗೊತ್ತಿದೆ; ಇವನು ಚಂದ್ರಗೋಮಿನ್ ಎಂಬ ವೈಯಾಕರಣನಿಗಿಂತ ಹಿಂದಿದ್ದವನು......'ರಾವಣಾರ್ಜುನೀಯ'ವನ್ನು ರಚಿಸಿದವನೂ ಇವನೇ ಆಗಿದ್ದಲ್ಲಿ ಇವನು ಕ್ರಿ.ಶ. ದ ಆದಿಭಾಗದಲ್ಲಿದ್ದವನೆಂದು ಹೇಳಬೇಕು"—ಎಂದು ಬರೆದಿದ್ದಾರೆ.[೩]

ಮೇಲೆ ಹೇಳಿರುವ ಕೆಲವು ಪ್ರಮಾಣಗಳಿಂದ ಧಾತುಪಾಠವು ಪಾಣಿನಿಯ ಸಂಕಲನಗ್ರಂಥವೆಂದೂ[೪] ಪಾಣಿನೀಯ ಧಾತುಪಾಠದಲ್ಲಿರುವ ಧಾತುಗಳಿಗೆ ಅರ್ಥವನ್ನು ಪಾಣಿನಿಗಿಂತ ಅರ್ವಾಚೀನನಾದ ಭೀಮ ಅಥವಾ ಭೀಮಸೇನನು ಸೇರಿಸಿದನೆಂದೂ ತಿಳಿದುಬರುವುದು. ಇತರ ಪ್ರಮಾಣಗಳಿಂದ ಇವನು "ಭೈಮೀ ವ್ಯಾಕರಣ"ವೆಂಬ ಗ್ರಂಥವನ್ನು ರಚಿಸಿದ್ದನೆಂದೂ ಗೊತ್ತಾಗುತ್ತದೆ.

ತತ್ತ್ವಬೋಧಿನೀ, ವೈಯಾಕರಣಭೂಷಣಸಾರ, ಬಾಲಮನೋರಮಾ, ಶಬ್ದೇನ್ದುಶೇಖರ, ಲಘುಶಬ್ದೇನ್ದುಶೇಖರ—ಮುಂತಾದ ಗ್ರಂಥಗಳಿಂದ ಕೆಲವು

---

೧ ಬಾಲಮನೋರಮಾ (ಮದ್ರಾಸಿನ ಮುದ್ರಣ, ಪುಟ ೩೬೦, ಪಂಕ್ತಿ ೨೨). ಇದೇ ವ್ಯಾಖ್ಯಾನದ ೩೨ನೆಯ ಪುಟದಲ್ಲಿ

"ಸರ್ವೇಷು ಧಾತುಷ್ವರ್ಥನಿರ್ದೇಶಸ್ತ್ವಾಧುನಿಕಃ।......ಷಿಧಗತ್ಯಾಮ್ ಇತ್ಯರ್ಥನಿರ್ದೇಶೋ ಪಾಣಿನೀಯ ಏವೇತಿ ದಿಕ್" ಎಂದು ಹೇಳಿದೆ.

"ಲಘುಶಬ್ದೇನ್ದುಶೇಖರ"ದಲ್ಲಿಯೂ (ಚೌಖಾಮ್ಬಾ ಮುದ್ರಣ, ಪುಟ ೪೬೦, ಪಂಕ್ತಿ ೨) "ಪಾಣಿನಿಸ್ತು ಕಾಂಶ್ಚಿದರ್ಥ ಸಹಿತಾನ್ ಪಠತಿ" ಎಂದಿದೆ.

"ವ್ಯಾಕರಣ ಮಹಾಭಾಷ್ಯ"ದಲ್ಲಿ "ಚುಟೂ" ಎಂಬ ಸೂತ್ರದ ಅರ್ಥವನ್ನು ವಿವರಿಸುತ್ತಾ ಪಾಣಿನೀಯ ಧಾತುಪಾಠದಲ್ಲಿ ಕೆಲವು ಧಾತುಗಳಿಗೆ ಮಾತ್ರ ಅರ್ಥವು ಕೊಡಲ್ಪಟ್ಟಿತ್ತೆಂದು ಹೇಳಿದೆ.

೨ *Journal of Oriental Research*, Vol. VIII, 1934, P. 372.

೩ *Journal of Oriental Research*, Vol. IX, 1935, p. 53.

೪ ಪಾಣಿನೀಯ ಧಾತುಪಾಠವನ್ನು ಕುರಿತ ನನ್ನ ಲೇಖನವು ಮತ್ತೊಂದೆಡೆಯಲ್ಲಿ ಅಚ್ಚಾಗುತ್ತಿದೆ.

ಧಾತುಗಳಿಗೆ ಮಾತ್ರ ಪಾಣಿನಿಯು ಅರ್ಥವನ್ನು ನಿರ್ದೇಶ ಮಾಡಿದ್ದನೆಂದೂ ಅರ್ಥ ನಿರ್ದೇಶ ಮಾಡದಿದ್ದ ಧಾತುಗಳಿಗೆ ಭೀಮಸೇನನು ಅರ್ಥನಿರ್ದೇಶ ಮಾಡಿದನೆಂದೂ ತಿಳಿದುಬರುತ್ತದೆ.

ಪತಂಜಲಿಯ ಮಹಾಭಾಷ್ಯದಿಂದ[1] ಮೊದಲು ಧಾತುಗಳ **ಸಂಹಿತಾಪಾಠ** ಮಾತ್ರವಿದ್ದಿತು, ಎಂದರೆ ಧಾತುಗಳನ್ನು ಬಿಡಿಸಿ ಹೇಳಲಿಲ್ಲ, ಒಟ್ಟಾಗಿ ಅರ್ಥನಿರ್ದೇಶ ವಿಲ್ಲದ ಧಾತುಗಳನ್ನು ಜೋಡಿಸಿಬಿಟ್ಟಿದ್ದಿತು — ಎಂಬುದು ಸ್ಪಷ್ಟವಾಗುತ್ತದೆ. ಭೀಮಸೇನನು ತರುವಾಯ ವಿದ್ಯಾರ್ಥಿಗಳ ಉಪಯೋಗ, ಹಿತಗಳನ್ನು ಮನಸ್ಸಿ ನಲ್ಲಿಟ್ಟುಕೊಂಡು ಧಾತುಗಳನ್ನು ಪ್ರತ್ಯೇಕಿಸಿ ಅವುಗಳಿಗೆ ಅರ್ಥನಿರ್ದೇಶ ಮಾಡಿದನು, ಎಂದು ಹೇಳಬಹುದು.

ಅಥವಾ ಆಪಿಶಲಿ, ಕಾಶಕೃತ್ಸ್ನ, ಚಂದ್ರ, ಜೈನೇನ್ದ್ರ, ಶಾಕಟಾಯನ, ಹೇಮಚಂದ್ರ, ಬೊಪ್ಪದೇವ ಮುಂತಾದ ವ್ಯಾಕರಣಗಳನ್ನು ಬರೆದವರು ತಮ್ಮ ಕಾಲದಲ್ಲಿ ದೇಶದಲ್ಲಿ ರೂಢಿಯಾಗಿದ್ದ ಧಾತುಗಳನ್ನು ಒಟ್ಟುಗೂಡಿಸಿ ಧಾತುಪಾಠ ವನ್ನು ರಚಿಸಿ ಧಾತುವಿನ ಅರ್ಥನಿರ್ದೇಶವನ್ನು ಮಾಡುತ್ತಿದ್ದರು. ಹಾಗೆಯೇ ಭೀಮನು ತನ್ನ ವ್ಯಾಕರಣವನ್ನು ಪಾಣಿನಿಯ ವ್ಯಾಕರಣದ ಆಧಾರದಿಂದಲೇ ರಚಿಸಿ ಪಾಣಿನಿಯ ಧಾತುಗಳ ಸಂಹಿತಾಪಾಠದ ಬಿಗುವನ್ನೂ ಅದನ್ನು ಓದುವವರಿಗೊದ ಗುವ ಕಷ್ಟವನ್ನೂ ತಿಳಿದು ಧಾತುಗಳನ್ನು ಬಿಡಿಸಿ ಪಾಣಿನಿಯ ಇದ್ವಿಧಾನವನ್ನೇ ಅನುಸರಿಸಿ ಪಾಣಿನಿಯ ಕಾಲದಿಂದೀಚೆಗೆ ಧಾತುಗಳ ಅರ್ಥದಲ್ಲಿ ಕಂಡುಬರುತ್ತಿದ್ದ ಬದಲಾವಣೆಗಳನ್ನೂ ಸೇರಿಸಿ ತನ್ನದೇ ಆದ ಧಾತುಪಾಠವನ್ನು ರಚಿಸಿರಬಹುದು. ಇಂತಹ ಧಾತುಪಾಠವು ಪಾಣಿನೀಯವೇ—ಏಕೆ? ಪಾಣಿನೀಯ ಸಂಹಿತಾಪಾಠ ದಲ್ಲಿದ್ದ ಧಾತುಗಳೇ ಇವೆ. ಈ ಧಾತುಪಾಠವು ಅಪಾಣಿನೀಯವೂ ಆಗಿದೆ. ಧಾತುಗಳ ಅರ್ಥದಲ್ಲಿ ಪಾಣಿನಿಯ ಕಾಲದಲ್ಲಿಲ್ಲದಿದ್ದ ಅರ್ಥನಿರ್ದೇಶವಿದೆ. ಅದ ರಿಂದಲೇ ಅಪಾಣಿನೀಯವೆಂದು ತತ್ತ್ವಬೋಧಿನೀ, ವೈಯಾಕರಣಭೂಷಣಸಾರ ಮುಂತಾದವು ಹೇಳಿರುವುದು.

ಈ ಧಾತುಪಾಠದ ಮೂರು ಓಲೆಗರಿಯ ಪ್ರತಿಗಳು ನನ್ನಲ್ಲಿವೆ. ಅಡ್ಯಾರ್ ಲೈಬ್ರೆರಿಯಲ್ಲಿ ಈ ಧಾತುಪಾಠದ ಓಲೆಗರಿಯ ಪ್ರತಿಗಳು ನಾಲ್ಕು ಇವೆ.[2] ಬೆಂಗಾಲ್ ರಾಯಲ್ ಏಷ್ಯಾಟಿಕ್ ಸೊಸೈಟಿಯಲ್ಲಿ ಇದರ ಮೂರು ಪ್ರತಿಗಳಿವೆ. ಇಂಡಿಯಾ ಆಫೀಸ್ ಲೈಬ್ರೆರಿಯಲ್ಲಿ ಇದರ ಎರಡು ಪ್ರತಿಗಳಿವೆ. ಇವುಗಳಿಂದ ಭೀಮಸೇನನ ವಂಶ, ಸ್ಥಳ, ಗುರು ಮುಂತಾದವುಗಳೇನೂ ತಿಳಿಯುವುದಿಲ್ಲ.

---

[1] ಮಹಾಭಾಷ್ಯ: ಒಂದನೆಯ ಅಧ್ಯಾಯದ ಮೂರನೆಯ ಪಾದದ ಮೊದಲನೆಯ ಸೂತ್ರದ ದಲ್ಲಿ "ವಾ। ಪರಿಮಾಣ ಗ್ರಹಣಂಚ ॥"

[2] XXIX G. 25, ಗ್ರನ್ಥಾಕ್ಷರ.
XXX G. 16, ಗ್ರನ್ಥಾಕ್ಷರ.
XXII G. 23, ದೇವನಾಗರೀ.
XXIII I. 2, ದೇವನಾಗರೀ.

ಇವುಗಳನ್ನು ವಿಶ್ವಾಸವಿಟ್ಟು ನನಗೆ ಕಳುಹಿಸಿಕೊಟ್ಟದ್ದಕ್ಕಾಗಿ ಅಡ್ಯಾರ್ ಲೈಬ್ರೆರಿಯ [illegible] ಡಾ॥ ಜಿ. ಶ್ರೀನಿವಾಸಮೂರ್ತಿಯವರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ. ಈ [illegible]ಪಾಠವು ಈಗ ಬೊಂಬಾಯಿನಲ್ಲಿ ಅಚ್ಚಾಗುತ್ತಿದೆ.

"ಇತಿ ಭೀಮಸೇನೀ ಧಾತುಪಾಠಸ್ಸಮಾಪ್ತಃ"—I. O. Library, No. 686 and No. 687.

"ಇತಿ ಭೀಮಸೇನ ವಿರಚಿತೋ ಧಾತುಪಾಠಸ್ಸಮಾಪ್ತಃ"

—ಅಡ್ಯಾರ್ ಲೈಬ್ರೆರಿ ಪ್ರತಿ.

## ಈ ಭೀಮಸೇನನ ಕಾಲ

ಪ್ರಾಚೀನ ಸಂಪ್ರದಾಯವನ್ನನುಸರಿಸುವ ಕೆಲವು ಪಂಡಿತರು ಈ ಭೀಮಸೇನನು ಪಾಣಿನಿಯ ಸಮಕಾಲೀನನೆಂದೂ ಇನ್ನು ಕೆಲವರು ಪಾಣಿನಿಯು ವ್ಯಾಕರಣವನ್ನು ಬರೆದ ಒಂದು ಶತಮಾನದೊಳಗಾಗಿಯೇ ಭೀಮಸೇನನು ತನ್ನ ಧಾತುಪಾಠವನ್ನು ರಚಿಸಿದನೆಂದೂ ಹೇಳುತ್ತಾರೆ. ಆದರೆ ಶಬ್ದೇಂದುಶೇಖರ, ಬಾಲಮನೋರಮಾ ಇವುಗಳನ್ನು ಬರೆದವರು "ಧಾತುಪಾಠಗತಾರ್ಥನಿರ್ದೇಶ ಆಧುನಿಕೋಽಭಿಯುಕ್ತಕೃತಃ" ಎಂದೂ, ವೈಯಾಕರಣಭೂಷಣಸಾರದಲ್ಲಿ "ಆಧುನಿಕತ್ವಲಾಭಾತ್" ಎಂದೂ ಹೇಳಿರುವುದರಿಂದ ಭೀಮಸೇನನು ಪಾಣಿನಿಗಿಂತ ಅರ್ವಾಚೀನನೆಂದು ಹೇಳಬೇಕಾಗಿದೆ.

**ಪಿ. ಕೆ. ಗೋಡೆ** ಎಂಬ ಪೂನಾದ ವಿದ್ವಾಂಸರು ಇವನ ಕಾಲವಾವುದೆಂಬುದನ್ನು ವಿಮರ್ಶಿಸಿ ಒಂದು ಲೇಖನವನ್ನು ಬರೆದಿದ್ದಾರೆ.[೧] ಇವನು ಕ್ರಿ. ಶ. ೬೦೦ಕ್ಕಿಂತ ಹಿಂದಿನವನು— ಎಂಬುದೇ ಅವರ ಮತ.

ಅವರು ಕೊಟ್ಟಿರುವ ಕಾರಣಗಳಿವು:

೧. ಸಾಯಣಾಚಾರ್ಯರು **ಮಾಧವೀಯ ಧಾತುವೃತ್ತಿ**ಯಲ್ಲಿ ಇವನ ಹೆಸರನ್ನು ಉಲ್ಲೇಖಿಸಿದ್ದಾರೆ. ಸಾಯಣಾಚಾರ್ಯರ ಕಾಲ ಸುಮಾರು ಕ್ರಿ. ಶ. ೧೩೫೦. ಆದ್ದರಿಂದ ಭೀಮನು ಕ್ರಿ. ಶ. ೧೩೦೦ಕ್ಕಿಂತ ಹಿಂದಿನವನು.[೨]

೨. ಮಹಾಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರಿಗಳವರು ಮೈತ್ರೇಯ ರಕ್ಷಿತನು ಸುಮಾರು ಕ್ರಿ. ಶ. ೧೧೦೦ರಲ್ಲಿದ್ದನೆಂದು ಹೇಳುತ್ತಾರೆ. ಮೈತ್ರೇಯ ರಕ್ಷಿತನು ಭೀಮಸೇನನ ಹೆಸರನ್ನು ಉಲ್ಲೇಖಿಸಿರುವುದರಿಂದ ಭೀಮಸೇನನ ಕಾಲವು ಮೇಲೆ ಹೇಳಿರುವ ಕ್ರಿ. ಶ. ೧೩೫೦ಕ್ಕಿಂತ ೨೫೦ ವರುಷಗಳು ಹಿಂದಕ್ಕೆ ಹೋಗಬೇಕು.

೩. ಉಮಾಸ್ವಾತಿಯ ತತ್ತ್ವಾರ್ಥಾಧಿಗಮಸೂತ್ರ ಮತ್ತು ಅದರ ಮೇಲಿನ ಸ್ವೋಪಜ್ಞ ಭಾಷ್ಯಗಳಮೇಲೆ ಸಿದ್ಧಸೇನಗಣಿಯು ವ್ಯಾಖ್ಯಾನವನ್ನು ಬರೆಯುತ್ತಾ ಭೀಮ ಅಥವಾ ಭೀಮಸೇನನ ಹೆಸರನ್ನು ಉಲ್ಲೇಖಿಸಿದ್ದಾನೆ.

ಸಿದ್ಧಸೇನಗಣಿಯು ಸುಮಾರು ಕ್ರಿ. ಶ. ೭ನೆಯ ಶತಮಾನಕ್ಕಿಂತ ಹಿಂದಿನವನೆಂದು ಪ್ರೊಫೆಸರ್ ಕಪಾಡಿಯರವರ ಮತ.[೩]

ಡಾ॥ ಸತೀಶಚಂದ್ರ ವಿದ್ಯಾಭೂಷಣರು ಸಿದ್ಧಸೇನಗಣಿಯು ಸುಮಾರು ಕ್ರಿ. ಶ. ೬೦೦ರಲ್ಲಿದ್ದನೆಂದು ಸಿದ್ಧಾಂತ ಮಾಡಿದ್ದಾರೆ.[೪]

---

೧ *New Indian Antiquary*, Vol. II, No. 2, p. 108.

೨ ಕೇಶಿರಾಜನು ಇವನ ಹೆಸರನ್ನು ಉಲ್ಲೇಖಿಸಿದ್ದಾನೆ. ಕೇಶಿರಾಜನ ಕಾಲ ಸು. ಕ್ರಿ. ಶ. ೧೨೬೦. ಆದ್ದರಿಂದ ಭೀಮಸೇನನು ಕ್ರಿ. ಶ. ೧೨೬೦ಕ್ಕಿಂತ ಹಿಂದಿನವನಾಗಿರಬೇಕು.

೩ *Tattvārthādhigama Sūtra*. Ed. by Prof. H. R. Kapadia. Pp. 100–101 and p. [illegible]

೪ *History of Medieval School of Indian Logic*, p. 8.

ಆದ್ದರಿಂದ ಇದುವರೆಗೆ ದೊರೆತಿರುವ ಗ್ರಂಥಗಳ ಆಧಾರದಿಂದ ಈ ಭೀಮಸೇನನು ಸುಮಾರು ಕ್ರಿ. ಶ. ೬೦೦ರಲ್ಲಿದ್ದನೆಂದು ಹೇಳಬಹುದು.

## ಈ ಧಾತುಪಾಠದ ಸ್ವರೂಪ

ಈ ಧಾತುಪಾಠದಲ್ಲಿ ೧೯೬೪ ಧಾತುಗಳಿವೆಯೆಂದು ಮಹಾಮಹೋಪಾಧ್ಯಾಯ ಹರಪ್ರಸಾದ ಶಾಸ್ತ್ರಿಗಳವರು ಹೇಳಿರುವರೆಂದು ಮೇಲೆಯೇ ಸೂಚಿಸಿದೆ. ಆದರೆ ನನಗೆ ದೊರೆತಿರುವ ಪ್ರತಿಗಳಲ್ಲಿ ೧೯೯೮, ೨೦೩೬, ೨೦೫೪, ೨೦೬೬ ಧಾತುಗಳಿವೆ. ಧಾತುಸಂಖ್ಯೆಯಲ್ಲಿ ಈ ರೀತಿಯ ವ್ಯತ್ಯಾಸಗಳಿಗೆ ಕಾರಣಗಳಿವೆ. ಧಾತುಸಂಖ್ಯೆಯು ಹೆಚ್ಚುವುದು:

(ಕ) **ಪಾಠಾಂತರಗಳಿಂದ:** ಉದಾಹರಣೆ:

೧. **ಣಿಸಿ–ಚುಮ್ಬನೇ।** ಅತಾಲವ್ಯಾನ್ತೋऽಯಂ। ಆಭರಣಕಾರಸ್ತು ತಾಲವ್ಯಾನ್ತ ಇತಿ ಬಭ್ರಾಮ॥

೨. **ಶುಚ್ಯ ಅಭಿಷವೇ।** ಚುಚ್ಯ ಇತ್ಯೇಕೇ।

೩. **ಬಣ ಶಬ್ದೇ।** ಉಪದೇಶೇ ನಾನ್ತೋऽಯಂ। ಬಣೇತ್ಯಪಿ ಕೇಚಿತ್॥

೪. **ಮಿಾಲ ಶ್ಮೀಲ ಸ್ಮೀಲ ಕ್ಷ್ಮೀಲ ನಿಮೇಷಣೇ।** ನಿಮೇಷಣಂ ಸಂಕೋಚಃ॥ ದ್ವಿತೀಯ್ಯಸ್ತಾಲವ್ಯಾದಿಃ ತೃತೀಯ್ಯೋದನ್ತ್ಯಾದಿಃ॥

೫. **ವೇಲ್ಲೃ ಚೇಲ್ಲೃ ಕೇಲ್ಲೃ ಖೇಲ್ಲೃ ಕ್ಷ್ವೇಲ್ಲೃ ವೇಲ್ಲೃ ಚಲನೇ॥** ಷಷ್ಠೋऽಲೋಪಧಃ॥

೬. **ಛದಿ ರೂರ್ಜನೇ।** ಚದಿ ರೂರ್ಜನೇ।

೭. **ಬೃಹಿ ಶಬ್ದೇ।** ಬೃಹಿರ್ ಇತ್ಯೇಕೇ।

೮. **ಷ್ಠಲ ಸ್ಥಾನೇ।** ಠಲ ಸ್ಥಾನೇ (ಟ)

(ಖ) **ಅರ್ಥವ್ಯತ್ಯಾಸಗಳಿಂದ:**

೧. ಣಲ ಗನ್ಧನೇ। ಣಲ ಗನ್ಧೇ। ಬನ್ಧ ಇತ್ಯೇಕೇ।

೨. ಕಿತ ನಿವಾಸೇ। ರೋಗಾಪನಯೇ ಚ।
ಸಂಶಯೇ ಪ್ರಾಯೇಣ ವಿಪೂರ್ವಃ॥

೩. ಟುವಪು ಬೀಜಸನ್ತಾನೇ। ಭೇದನೇ ಚ॥

೪. ಷುಸು ಅದನೇ। ಆದಾನೇ ಚೇತ್ಯೇಕೇ। ಅರ್ದನ ಇತ್ಯಪರೇ। ಅದರ್ಶನೇತ್ಯನ್ಯೇ॥

(ಗ) ಸಾರಸ್ವತ, ಕಾತನ್ತ್ರ, ಚಾನ್ದ್ರ, ಹೈಮ ಮುಂತಾದ ಧಾತುಪಾಠಗಳಲ್ಲಿದ್ದು ಭೀಮಸೇನನ ಧಾತುಪಾಠದಲ್ಲಿಲ್ಲದೇ ಇರಬಹುದಾದ ಧಾತುಗಳನ್ನೂ ತಾವು ಉಪಯೋಗಿಸುತ್ತಿರುವ ಭೀಮಸೇನೀ ಧಾತುಪಾಠಕ್ಕೆ ಸೇರಿಸಿರುವುದೂ ಈ ಬಗೆಯ ಧಾತು ಸಂಖ್ಯೆಗಳ ವ್ಯತ್ಯಾಸಕ್ಕೆ ಮತ್ತೊಂದು ಕಾರಣವೆಂದು ಹೇಳಬಹುದು.

ಅಡ್ಯಾರ್ ಲೈಬ್ರೆರಿಯ ಪ್ರತಿಗಳಲ್ಲಿ ಒಂದೊಂದರಲ್ಲಿ ಮಾತ್ರ

೧. "ಗ್ರಂಥಾಂತರೇ ಕದಿ ಕ್ರದಿ ಕ್ಲದಿ ವೈಕ್ಲವ್ಯೇ। ವೈಕಲ್ಯ ಇತ್ಯೇಕೇ। ತ್ರಯೋಽಪ್ಯಸಿದಿತ ಇತಿ ನದೀ। ಇದಿತ ಇತಿ ಸ್ವಾಮಿ। ಆದಾವಿದಿತಾವನ್ತ್ಯಾವ ನಿದಿತಾವಿತಿ ಮೈತ್ರೇಯಃ॥"

೨. "ದಲಿವಲಿಸ್ಖಲಿರಣಿಧ್ವನಿತ್ರಪಿಕ್ಷಯಶ್ಚೇತಿಭೋಜಃ।"

೩. "ರಾದಾನೇ। ಲಾ ಆದಾನೇ ದ್ವಾವಪಿದಾನ ಇತಿ ಚನ್ದ್ರಃ।"

೪. "ವಟಲಜಿ ಇತ್ಯೇಕೇ। ಅದನ್ತೇಷು ಪಾಠಬಲಾದದನ್ತತ್ವೇ ವೃದ್ಧಿ ರಿತ್ಯನ್ಯೇ। ಶಾಕಟಾಯನಸ್ತು ಸರ್ವೇಷಾಂ ಕಥಾದೀನಾಂ ವೃತಮಾಹ।"

೫. "ಕಲ್ಲ ಅವ್ಯಕ್ತೇ ಶಬ್ದೇ। ಅಶಬ್ದ ಇತಿ ಸ್ವಾಮಿ॥"

೬. "ಅನ್ಯೇತು ದಶಗಣೇ ಪಾಠೋ ಬಹುಳಮಿತ್ಯಾಹುಃ। ತೇನ ಅಪಠಿತಾ ಅಪಿ ಸೌತ್ರೇ ಲೌಕಿಕವೈದಿಕಾಬೋಧ್ಯಾಃ। ಅಪರೇತು ನವಗಣೀ ಪಠಿತೇಭ್ಯೋಽಪಿ ಕ್ವಚಿತ್ಸ್ವಾರ್ಥೇ ಣಿಚ್। ಚುರಾದಿಭ್ಯ ಏವ ಬಹುಳಂ ಣಿಜಿತ್ಯನ್ಯೇ। ಸರ್ವೇ ಪಕ್ಷಾಃ ಪ್ರಾಚಾಂ ಗ್ರನ್ಥೇ ಸ್ಥಿತಾಃ।"

ಗ.* ಷ್ಣೈ ವೇಷ್ಟನೇ। ಮ. ಷ್ಣೈ ವೇಷ್ಟನೇ ಶೋಭಾಯಾಂ ಚ. ಶೋಭಾಯಾಂ ಇತ್ಯೇಕೇ॥

ಟ. ಣಿಸಿ—ಚುಮ್ಬನೇ। ತಾಲವ್ಯಾನ್ತೋಽಯಂ। ಆಭರಣಕಾರಸ್ತು ತಾಲವ್ಯಾನ್ತ ಇತಿ ಬಭ್ರಾಮ॥

ಟ. ರುಶಬ್ದೇ ಇತಿ ಸೌತ್ರೋಧಾತುಃ॥

ಗ. ತುಸ್ಸೌತ್ರೋಗತಿವೃದ್ಧಿಹಿಂಸಾಸು॥ (ದ, ಎಂಬ ಪ್ರತಿಯಲ್ಲಿ ತು ಇತಿ ಸೌತ್ರಃ ಎಂದಿದೆ. ಮ ಎಂಬ ಪ್ರತಿಯಲ್ಲಿ ಇದನ್ನು ಕೊಟ್ಟಿಲ್ಲ.)

ಗ. ಅಥ ಪಂಚಧಾತವಃ ಛಾನ್ದಸಾಃ, ದ್ವೌಪಜಿತೌ॥ (೨೨) (ಇದು ದ ಮತ್ತು ಮ ಪ್ರತಿಗಳಲ್ಲಿ ಇಲ್ಲ)

ಗ. ರಿಕ್ಷಿಃಹಿಂಸಾಯಾಂ। ಕ್ಷಿಣೋತಿರ್ಭಾಷಾಯಾಮಪೀತ್ಯೇಕೇ॥

ಗ. ತತ್ರಿಕುಟುಂಬಧಾರಣೇ—ಧಾತುದ್ವಯಮಿತಿ ಚಂದ್ರಃ (೩೪)

ಗ. ತ್ರಸಧಾರಣೇ। ಗ್ರಹಣ ಇತ್ಯೇಕೇ। ವಾರಣ ಇತ್ಯನ್ಯೇ (೩೫)

ದ. ಕ್ಲೇಶ ಅವ್ಯಕ್ತಾಯಾಂ ವಾಚಿ। ಬಾಧನ ಇತಿ ದುರ್ಗಃ।

ಟ. ಮಾರಣ ತೋಷಣನಿಶಾಮನೇಷು ಜ್ಞಾ। ನಿಶಾಮನಂಚಾಕ್ಷುಷಜ್ಞಾನ ಮಿತಿಪಾಠಾನ್ತರವ್॥ ಜ್ಞಾನಮಾತ್ರಮಿತ್ಯನ್ಯೇ ನಿಶಾನೇಷ್ವಿತಿ ಪಾಠಾನ್ತರಮ್। ನಿಶಾನಂ ತೀಕ್ಷ್ಣೀಕರಣಮ್॥

ದ. ಮಿದೃಮೇದೃ ಮೇಧಾಹಿಂಸನಯೋಃ। ಥಾನ್ತಾವಿತಿ ಸ್ವಾಮಿ। ಧಾನ್ತಾ ವಿತಿ ನ್ಯಾಸಃ॥

ಇಂತಹ ವಾಕ್ಯಗಳು ಕಂಡುಬರುತ್ತವೆ. ಈ ವಾಕ್ಯಗಳು ಎಲ್ಲಾ ಪ್ರತಿಗಳಲ್ಲಿಯೂ ಇಲ್ಲ. ಇದರಿಂದ ಈ ಧಾತುಪಾಠವನ್ನು ಬೋಧಿಸುತ್ತಿದ್ದವರು ಅಥವಾ ಅದನ್ನು ಬರೆದಿಟ್ಟುಕೊಂಡಿದ್ದವರು ತಮ್ಮ ಅವಗಾಹನೆಗೆ ಬಂದ ವಿಷಯಗಳನ್ನೆಲ್ಲಾ ಸ್ವಾರಸ್ಯಕರವೆಂದು ಭಾವಿಸಿ ತಮ್ಮ ಪ್ರತಿಯಲ್ಲಿ ಗುರುತು ಹಾಕಿಟ್ಟಿರಬಹುದು.

* ಗ, ಟ ಮತ್ತು ದ ಎಂಬುವು ನನ್ನಲ್ಲಿರುವ ಬೇರೆ ಬೇರೆ ಪ್ರತಿಗಳನ್ನು ಸೂಚಿಸುತ್ತವೆ.

ಚಂದ್ರ, ಸ್ವಾಮಿ, ಮೈತ್ರೇಯ, ಭೋಜ, ಶಾಕಟಾಯನ ಮುಂತಾದ ಹೆಸರುಗಳನ್ನು ನೋಡಿ ಭೀಮಸೇನನು ಇವರೆಲ್ಲರಿಗಿಂತ ಅರ್ವಾಚೀನನೆಂದು ಭ್ರಮಿಸಲವಕಾಶವಿಲ್ಲ.

ಮೇಲೆ ಸೂಚಿಸಿರುವ ವಿಷಯಗಳಿಂದ ಕೇಶಿರಾಜನು ಉಲ್ಲೇಖಿಸಿರುವ ಭೀಮನು ಪಾಣಿನಿಯ ಧಾತುಪಾಠದ ಸಂಹಿತಾಪಾಠದ ಆಧಾರದ ಮೇಲೆಯೇ ಅರ್ಥ ಸಹಿತವಾದ ಧಾತುಪಾಠವನ್ನು ರಚಿಸಿದನೆಂದೂ, ಇವನ ಕಾಲ ಸುಮಾರು ಕ್ರಿ. ಶ. ೬೦೦ ಎಂದೂ, ಹೇಳುವುದು ಸಾಧ್ಯ.

ಎ. ಎನ್. ನರಸಿಂಹಯ್ಯ

# ಮಲ್ಲಿಕಾರ್ಜುನ — ಒಂದು ಊಹೆ

ಕಳೆದ ಏಪ್ರಿಲ್ ತಿಂಗಳು ಶೃಂಗೇರಿಗೆ ಹೋಗಿದ್ದು, ಆ ಊರಿನ ಪೇಟೆಯಿಂದ ದೇವಸ್ಥಾನದ ಕಡೆಗೆ ಬರುತ್ತಿದ್ದೆ. ನನ್ನ ಗುರುತಿನವರೊಬ್ಬರು ಎದುರಿಗೆ ಸಿಕ್ಕಿ 'ಏನು, ಬೆಟ್ಟಕ್ಕೆ ಹೋಗಿದ್ದಿರಾ?' ಎಂದು ಕೇಳಿದರು. ನಾನು 'ಇಲ್ಲ' ಎಂದು ಉತ್ತರ ಕೊಟ್ಟೆ. 'ನಿಮ್ಮ ಬಿಡಾರಕ್ಕೆ ಆಗಲೇ ಬಂದಿದ್ದೆ; ನೀವು ಬೆಟ್ಟಕ್ಕೆ ಹೋದಿರೆಂದು ಹೇಳಿದರಲ್ಲಾ ಮತ್ತೆ!' ಎಂದರು ಅವರು. 'ಹೌದು, ಮಲ್ಲಿಕಾರ್ಜುನ ದೇವಸ್ಥಾನಕ್ಕೆ ಹೋಗಿದ್ದೆ' ಎಂದೆ ನಾನು.

ಮಲ್ಲಿಕಾರ್ಜುನ ದೇವಸ್ಥಾನವು ಊರೊಳಗೆ ಒಂದು ಸಣ್ಣ ಗುಡ್ಡದಮೇಲೆ ಇದೆ; ಇದನ್ನು ಅಲ್ಲಿ 'ಬೆಟ್ಟ'ವೆನ್ನುತ್ತಾರೆ. ಬೆಟ್ಟವೆಂಬ ಹೆಸರಿಗೆ ಅಧಿಕಾರಿಯಾಗುವ ಔನ್ನತ್ಯ ಅದರಲ್ಲಿ ಇರಲಿಲ್ಲವೆಂದೋ, ಶೃಂಗೇರಿಯಲ್ಲಿ ಬೆಟ್ಟವೆಂದರೆ ತುಂಗಾ ನದಿಯ ಆಚೆಗೆ ಇರುವ ಶೃಂಗಧಾರಿಯಾದ ಉತ್ತುಂಗ ಪರ್ವತವೇ ಸರಿಯೆಂಬ ಪೂರ್ವ ಭಾವನೆಯಿಂದಲೋ, ಅವರು 'ಬೆಟ್ಟ'ವೆಂದಾಗ ಮಲ್ಲಿಕಾರ್ಜುನ ದೇವಸ್ಥಾನವಿರುವ ಗುಡ್ಡವೇ ಅದಕ್ಕೆ ಅರ್ಥವಾಗಿರಬೇಕೆಂದು ಮೊದಲು ನನ್ನ ಮನಸ್ಸಿಗೆ ಹೊಳೆಯ ಲಿಲ್ಲ. ಮೈಸೂರಿನಲ್ಲಿ ಚಾಮುಂಡೀ ಬೆಟ್ಟವನ್ನೂ ಚಿಕ್ಕಮಗಳೂರಿನಲ್ಲಿ ಚಂದ್ರ ದ್ರೋಣ ಪರ್ವತವನ್ನೂ ಸುಮ್ಮನೆ ಬೆಟ್ಟವೆಂದು ಬಿಡಿ ಹೆಸರಿನಿಂದ ಕರೆಯುವಂತೆ ಇಲ್ಲಿಯವರೂ ಇದನ್ನು ಕರೆಯುತ್ತಾರೆಂದುಕೊಂಡೆ.

ಶೃಂಗೇರಿ ಈಗ ಪ್ರಸಿದ್ಧವಾಗಿರುವುದು ಅದರ ಮಠ, ವಿದ್ಯಾಶಂಕರ ದೇವಸ್ಥಾನ, ಶಾರದಾ ದೇವಸ್ಥಾನಗಳಿಗೆ. ಇವುಗಳಲ್ಲಿ ವಿದ್ಯಾಶಂಕರ ದೇವಸ್ಥಾನವೂ ಶಾರದಾ ವಿಗ್ರಹವೂ ಹದಿನಾಲ್ಕನೆಯ ಶತಮಾನದವು; ಆದರೆ ಮಠವು ಹಿಂದಿನದು — ಶಂಕರಾ ಚಾರ್ಯರಿಂದ (ಎಂಟನೆಯ ಶತಮಾನದಲ್ಲಿ) ಸ್ಥಾಪಿತವಾದದ್ದು. ಅದಕ್ಕಿಂತಲೂ ಹಿಂದೆ ಶೃಂಗೇರಿಗೆ ಪ್ರಾಧಾನ್ಯವಿದ್ದದ್ದು ಏತರಿಂದ? ಅದು ಕಾಂಚಿ, ಬದರಿ, ಕಾಶಿ, ಜಗನ್ನಾಥಗಳಿಗೆ ಸಮಾನವೆಂದು ಶಂಕರಾಚಾರ್ಯರು ಏಕೆ ಭಾವಿಸಿದರು? ಅದನ್ನು ಅಂಥ ಧರ್ಮಕ್ಷೇತ್ರವಾಗಿ ಮಾಡಿದ್ದ ದೇವತೆ ಯಾವುದು? ಪ್ರಾಯಶಃ ಇಲ್ಲಿಯ "ಮಲ್ಲಿಕಾರ್ಜುನ" ಲಿಂಗವೇ. ಇದರಲ್ಲಿ ವಿಭಾಂಡಕ ಋಷಿಗಳು ಐಕ್ಯವಾದರೆಂದೂ, ಈ ಬೆಟ್ಟದಮೇಲೆ ಅವರ ಆಶ್ರಮವಿತ್ತೆಂದೂ, ಅಲ್ಲಿ ಋಷ್ಯಶೃಂಗರು ಹುಟ್ಟಿದರೆಂದೂ, ಆದ್ದರಿಂದ ಮಲ್ಲಿಕಾರ್ಜುನ ಬೆಟ್ಟಕ್ಕೆ ಶೃಂಗಗಿರಿಯೆಂದು ಹೆಸರಾಗಿ ಆ ಹೆಸರೇ ಅದರ ಬುಡದಲ್ಲಿರುವ ಊರಿಗೆ ಬಂತೆಂದೂ ಹೇಳುತ್ತಾರೆ.

ಶೃಂಗಗಿರಿ (ಶೃಂಗೇರಿ) ಎಂಬ ಹೆಸರೂ ಹೇಗಾದರೂ ಹುಟ್ಟಿ ಬಂದಿರಲಿ. ಈ ಊರಿನ ಮಲ್ಲಿಕಾರ್ಜುನ ಲಿಂಗವು ಶಂಕರಾಚಾರ್ಯರಿಗಿಂತ ಹಿಂದೆಯೇ ಪ್ರಸಿದ್ಧ ವಾಗಿದ್ದಿರಬೇಕು; ಅದರಿಂದ ಶೃಂಗೇರಿಯು ಪ್ರಸಿದ್ಧವಾದ ಶೈವಕ್ಷೇತ್ರವಾಗಿದ್ದಿರ ಬೇಕು.

ಮಲ್ಲಿಕಾರ್ಜುನ ಲಿಂಗವು "ಬೆಟ್ಟ"ದ ಮೇಲಿರುವುದು ಶೃಂಗೇರಿಯಲ್ಲಿ ಮಾತ್ರವಲ್ಲ — ಮುಡುಕುತೊರೆ ಮುಂತಾದ ಹಲವು ಕಡೆಗಳಲ್ಲಿ. ಬೆಟ್ಟವೇ

ಬಹುಮಟ್ಟಿಗೆ ಅದರ ಆವಾಸಸ್ಥಾನ. "ಗಿರಿ" ಮಲ್ಲಿಕಾರ್ಜುನವೆಂದೇ ಅದಕ್ಕೆ ಹೆಸರು.

ದಕ್ಷಿಣ ದೇಶದಲ್ಲೆಲ್ಲಾ ಅತ್ಯಂತ ಪ್ರಸಿದ್ಧವಾದ ಮಲ್ಲಿಕಾರ್ಜುನ ಲಿಂಗವೆಂದರೆ ಶ್ರೀಶೈಲದಲ್ಲಿರುವುದು. ಇದು ಬಹಳ ಪುರಾತನವಾದದ್ದೆಂದೂ, ಭರತಖಂಡದ ದ್ವಾದಶ ಜ್ಯೋತಿರ್ಲಿಂಗಗಳಲ್ಲಿ ಒಂದೆಂದೂ ಮಿಕ್ಕ ಮಲ್ಲಿಕಾರ್ಜುನಗಳೆಲ್ಲವೂ ಅಲ್ಲಿಂದ ತಂದು ಹುಟ್ಟಿಹಾಕಿಕೊಂಡವೆಂದೂ ನಂಬಿಕೆ. ಕನ್ನಡ ಸಾಹಿತ್ಯದಲ್ಲಿ ಶ್ರೀಶೈಲಕ್ಕೂ ಅಲ್ಲಿಯ ಮಲ್ಲಿಕಾರ್ಜುನಕ್ಕೂ ಬಹು ಪ್ರಾಶಸ್ತ್ಯವಿದೆ. ಸಿದ್ಧರಾಮ, ಅಲ್ಲಮ, ಮಹಾದೇವಿಯಕ್ಕ ಮುಂತಾದ ವೀರಶೈವ ವಿಭೂತಿವ್ಯಕ್ತಿಗಳನೇಕರು ಮಲ್ಲಿಕಾರ್ಜುನನ ಭಕ್ತರು. ಅವರಿಗಿಂತ ನೂರಾರು ವರ್ಷ ಹಿಂದೆ ಇದ್ದ ಶಂಕರಾಚಾರ್ಯರು, ತಿರುಜ್ಞಾನ ಸಂಬಂದರ್, ತಿರುನಾವುಕ್ಕರಸರ್, ಸುಂದರಮೂರ್ತಿ ನಾಯನಾರ್ ಮುಂತಾದವರೂ ಶ್ರೀಶೈಲಕ್ಕೆ ಯಾತ್ರೆ ಹೋಗಿ ಅಲ್ಲಿಯ ಮಲ್ಲಿಕಾರ್ಜುನನನ್ನು ಸ್ತುತಿಸಿದ್ದಾರೆ.

ಹೀಗೆ ಶ್ರೀಶೈಲವು ಸುಮಾರು ೧೨೦೦ ವರ್ಷಗಳ ಕೆಳಗೇ ದ್ರಾವಿಡರಿಗೆ ಪವಿತ್ರವೆನಿಸಿದ ಪ್ರಸಿದ್ಧ ಶಿವಕ್ಷೇತ್ರವಾಗಿತ್ತು; ಅದರ ಮಲ್ಲಿಕಾರ್ಜುನ ಭ್ರಮರಾಂಬೆಯರೂ ಪ್ರಸಿದ್ಧರಾಗಿದ್ದರು. ಅದಕ್ಕೂ ಎಷ್ಟು ಹಿಂದಿನಿಂದ ಇದು ಕ್ಷೇತ್ರವೆನಿಸಿಕೊಂಡಿತ್ತೋ, ಅಲ್ಲಿದ್ದ ಲಿಂಗವನ್ನು ಯಾರು ಪ್ರತಿಷ್ಠಿಸಿದರೋ ತಿಳಿಯದು; ಅಂತು ಇದು ಅತ್ಯಂತ ಪ್ರಾಚೀನವೆಂಬುದೇನೋ ನಿಜ.

ಹಿಂದೆ ಈ ಕ್ಷೇತ್ರದಲ್ಲಿ "ಶಿಲಾದಮುನಿ ಎಂಬ ಋಷಿಯು ತಪಸ್ಸು ಮಾಡುತ್ತಿದ್ದನೆಂದೂ ಒಂದು ದಿನ ಇವನು ಪತ್ನೀ ಸಮೇತನಾಗಿ ಸಂಧ್ಯಾಕಾಲ ಆನಂದದಿಂದ ಕಾಲ ಕಳೆಯುತ್ತಿದ್ದಾಗ ಎರಡು ಗೊರವಂಕ ಪಕ್ಷಿಗಳ ಮರಿಗಳನ್ನು ನೋಡಿ, ತನಗೂ ಸಂತಾನವಾಗಬೇಕೆಂಬ ಆಶೆಯುಂಟಾಯಿತೆಂದೂ, ಕೆಲವು ಕಾಲ ಈ ಪರ್ವತದಲ್ಲಿ ತಪಸ್ಸನ್ನಾಚರಿಸಿದಮೇಲೆ ಈಶ್ವರಾನುಗ್ರಹವಾಗಿ ಪರ್ವತ ಮತ್ತು ನಂದಿ ಎಂಬ ಇಬ್ಬರು ಮಕ್ಕಳು ಹುಟ್ಟಿದರೆಂದೂ, ಈ ಪೈಕಿ, ಹಿರಿಯ ಮಗನಾದ ಪರ್ವತನು ಶಿವನನ್ನು ಕುರಿತು ತಪಸ್ಸು ಮಾಡಿ ಈ ಪರ್ವತದಲ್ಲಿಯೇ ಶಿವನು ನೆಲಸಿ ಬೇಕೆಂಬ ವರವನ್ನು ಪಡೆದನೆಂದೂ, ಅಂದಿನಿಂದಲೂ ಶಿವನು ಈ ಪರ್ವತದಮೇಲೆ ಲಿಂಗರೂಪವಾಗಿ ನೆಲಸಿದನೆಂದೂ ಆದ್ದರಿಂದ ಈ ಲಿಂಗಕ್ಕೆ ಪರ್ವತಲಿಂಗವೆಂಬ ಹೆಸರು ಬಂದಿತೆಂದೂ ಹೇಳುತ್ತಾರೆ. ಇನ್ನೂ ಒಂದು ಕಥೆ ಇದೆ. ವಸುಮತಿ ಎಂಬ ಋಷಿಕನ್ಯೆಯು ಈ ಕ್ಷೇತ್ರಕ್ಕೆ ಬಂದು, ಪರ್ವತಲಿಂಗವನ್ನು ಧ್ಯಾನಿಸಿ ತಪಸ್ಸನ್ನಾಚರಿಸಿದಳೆಂದೂ, ಈಶ್ವರನು ಪ್ರತ್ಯಕ್ಷನಾಗಿ ಆಕೆಗೆ ಶ್ರೀದೇವಿ ಎಂಬ ಹೆಸರು ಕೊಟ್ಟನೆಂದೂ, ಈ ಪರ್ವತವನ್ನೂ ಕೂಡ ಆಕೆಯ ಹೆಸರಿನಿಂದ ಪವಿತ್ರಗೊಳಿಸಲು ಆ ಲಿಂಗವನ್ನು ಶ್ರೀಶೈಲಲಿಂಗವೆಂಬುದಾಗಿ ಕರೆಯಬೇಕೆಂದು ಹೇಳಿದನೆಂದೂ ಹೇಳುತ್ತಾರೆ.

ಭಾರತೀಯ ಇತಿಹಾಸದಲ್ಲಿ ಮೌರ್ಯವಂಶಸ್ಥಾಪಕನೆಂದು ಪ್ರಸಿದ್ಧನಾದ ಚಂದ್ರಗುಪ್ತ ಚಕ್ರವರ್ತಿಯು ಶ್ರೀಶೈಲಕ್ಕೆ ಬಂದಿದ್ದನೆಂದೂ ಇವನ ಮಗಳಾದ ಚಂದ್ರಾವತಿಯು ಇಲ್ಲಿ ಲಿಂಗವನ್ನು ಮಲ್ಲಿಗೆ ಹೂವಿನಿಂದ ಪೂಜೆಮಾಡಿದ್ದರಿಂದ ಈ ಲಿಂಗಕ್ಕೆ "ಮಲ್ಲಿಕಾರ್ಜುನ" ಲಿಂಗವೆಂಬ ಹೆಸರು ಬಂದಿತೆಂದೂ, ಈಕೆಯು

ಈ ಮಹಾಕ್ಷೇತ್ರದಲ್ಲಿ ಈಶ್ವರನನ್ನು ಕುರಿತು ತಪಸ್ಸು ಮಾಡಿದಳೆಂದೂ, ಕಡೆಗೆ ಪರಶಿವನು ಇವಳಿಗೆ ಪ್ರತ್ಯಕ್ಷನಾದನೆಂದೂ, ಈಕೆಯು ಇಲ್ಲಿನ ಅಂಜಿಯಾದ ಭ್ರಮರಾಂಜಿಯಲ್ಲಿ ಐಕ್ಯವಾಗಿಹೋದಳೆಂದೂ ಮತ್ತೊಂದು ಕಥೆಯುಂಟು.''*

ಶ್ರೀಶೈಲ, ಮಲ್ಲಿಕಾರ್ಜುನ, ಭ್ರಮರಾಂಬಾ ಎಂಬಿವು ಸಂಸ್ಕೃತ ಶಬ್ದಗಳು. ಮೇಲೆ ಹೇಳಿದ ಕಥೆಗಳೂ ಇವುಗಳಿಗೆ ಸಂಸ್ಕೃತ ವ್ಯುತ್ಪತ್ತಿಯನ್ನೇ ಹೇಳುತ್ತವೆ. ಇದನ್ನು ಒಪ್ಪಿದರೆ ಸಂಸ್ಕೃತವನ್ನು ಆಡುವ ಅಥವಾ ಅರಿತ ಜನರು ದಕ್ಷಿಣ ದೇಶಕ್ಕೆ ಬಂದಮೇಲೆ ಇಲ್ಲಿನ ದೇವರೂ ದೇವಸ್ಥಾನವೂ ಹುಟ್ಟಿ ಇದು ಕ್ಷೇತ್ರವಾಗಿ ಪರಿಣಮಿಸಿ ದಂತೆ ಆಗುತ್ತದೆ. ಆದರೆ ಇದು ನಿಜವೇ? ಶ್ರೀಶೈಲ ಎಂಬ ಪದ ಸಂಸ್ಕೃತವಾದರೂ ಅದು ಹೇಳುವ ವಸ್ತು—ಬೆಟ್ಟ—ಸಂಸ್ಕೃತ ಜನರು ದಕ್ಷಿಣ ದೇಶಕ್ಕೆ ಬರುವುದಕ್ಕೆ ಹಿಂದೆಯೇ ಇತ್ತು. ಆಗ ಅದನ್ನು ಜನರು ಏನೆಂದು ಕರೆಯುತ್ತಿದ್ದರು? ಆಗ ಅಲ್ಲಿ ದೇವರನ್ನು ಪೂಜಿಸುತ್ತಿದ್ದರೇ ಇಲ್ಲವೇ? ಇದ್ದರೆ ಅದಕ್ಕೆ ಏನು ಹೆಸರಿದ್ದಿರ ಬಹುದು?

ಭವ್ಯವಾದ ಪರ್ವತ, ಸುಂದರವಾದ ನದಿ, ರಮ್ಯವಾದ ವನ—ಇವುಗಳಲ್ಲಿ ದೇವರನ್ನು ಕಂಡು ಪೂಜಿಸುವುದು ಇಂದಿನ ಪದ್ಧತಿಯೇನಲ್ಲ, ನಮ್ಮ ಜನರೊಬ್ಬರ ಸಂಪ್ರದಾಯವೊಂದೇ ಅಲ್ಲ. ಅದು ಮನುಷ್ಯಜಾತಿಗೇ ಬಂದ ಪ್ರವೃತ್ತಿಯಾಗಿ ಕಾಣುತ್ತದೆ. ಆದ್ದರಿಂದಲೇ ದೇಶಾಂತರಗಳಲ್ಲಿಯೂ ಹಿಂದಿನ ಸಂಸ್ಕೃತಿಯಲ್ಲಿ ಗಿರಿ ನದಿ ಗಹ್ವರಗಳಿಗೆ ಒಂದಲ್ಲ ಒಂದು ವಿಧವಾದ ಪೂಜ್ಯತೆಯಿದೆ.

ಈ ವಿಧವಾದ ಪ್ರಕೃತಿಪೂಜೆಗೆ ನಮ್ಮ ದೇಶ ಎತ್ತಿದಕೈ. ಇದನ್ನು ಆರ್ಯರು ಕಲಿಸಿಕೊಟ್ಟರೆಂದು ಭಾವಿಸಬೇಕಾಗಿಲ್ಲ. ಬಹುಶಃ, ಯಾಜ್ಞಿಕವಲ್ಲದ, ಭಕ್ತಿ ಪ್ರಧಾನವಾದ, ಸೌಮ್ಯ ಪೂಜಾ ವಿಧಾನವು ದ್ರಾವಿಡರದು: ಶಿವಪೂಜೆ—ಲಿಂಗ ಪೂಜೆ—ಯಂತೂ ಅವರದೇ ಆಗಿ ಕಾಣುತ್ತದೆ. ಆದ್ದರಿಂದಲೇ ಕನ್ನಡ ಸಾಹಿತ್ಯ ದಲ್ಲಿ ಸಂಸ್ಕೃತ ಜನ್ಯವಾದ, ಪ್ರಾಕೃತಜನ್ಯವಾದ, ಸಾಹಿತ್ಯ ಸ್ವಲ್ಪ ಕಾಲ ನಡೆದು ಬಂದಮೇಲೆ, ಹನ್ನೆರಡನೆಯ ಶತಮಾನದಲ್ಲಿ ದ್ರಾವಿಡ ಸಾಹಿತ್ಯದ ಮೂಲ ಲಕ್ಷಣ ಗಳು ಕಾಣುವುದರ ಜೊತೆಗೆ ಶಿವಭಕ್ತಿಯೂ ಹೊರಹೊಮ್ಮಿತು—ಇಷ್ಟಲಿಂಗಕ್ಕೆ ಪ್ರಾಧಾನ್ಯ ಬಂತು. ಅದಕ್ಕೆ ಮುಂಚೆ ತೀರ್ಥಕ್ಷೇತ್ರಗಳಿಗೆ ಹೆಚ್ಚಿನ ಪ್ರಾಶಸ್ತ್ಯ ವಿದ್ದು 'ಬೆಟ್ಟದ ಲಿಂಗ'ಕ್ಕೆ ಹೆಚ್ಚಾಗಿ ಪೂಜೆಯು ಸಲ್ಲುತ್ತಿದ್ದಿರಬೇಕು. ಇಂಥ ಪರ್ವತಲಿಂಗಗಳಲ್ಲಿ ಶ್ರೀಶೈಲದ ಮಲ್ಲಿಕಾರ್ಜುನವು ಪ್ರಸಿದ್ಧವಾಗಿದ್ದದ್ದರಿಂದಲೇ ಅದಕ್ಕೆ ಪ್ರಾಶಸ್ತ್ಯವು ಉಳಿದು ಬಂತು. ಪುರಾಣ ಕಾಲದಲ್ಲಿ ಸಂಸ್ಕೃತ ಜನರು ದಕ್ಷಿಣ ದೇಶಕ್ಕೆ ಬಂದು ಈ ಕ್ಷೇತ್ರಕ್ಕೆ ಇದ್ದ ಪ್ರಾಶಸ್ತ್ಯವನ್ನು ಒಪ್ಪಿಕೊಂಡು, ಆ ದೇವರ ಮಹಿಮೆಯನ್ನು ಒಪ್ಪಿಕೊಂಡು, ತಮ್ಮ ಸಂಸ್ಕೃತಿಯನ್ನು ಹರಡಿರಬೇಕು. ಇದು ಹಿಂದಿನಿಂದಲೂ ಆರ್ಯಸಂಸ್ಕೃತಿಗೆ ನಡೆದುಬಂದದ್ದೇ—ತನಗಿಂತ ಭಿನ್ನ ವಾದದ್ದನ್ನು ಒಪ್ಪಿಕೊಂಡು ಅದೂ ತನ್ನದೆಂದು ಹೇಳಿ ತನ್ನೊಳಗೆ ಸೇರಿಸಿಕೊಳ್ಳು ವುದು: ತಾನೂ ಉಳಿದು ಇತರರನ್ನೂ ಉಳಿಸಿಕೊಳ್ಳುವುದು, ಬಲಿತುಕೊಳ್ಳುವುದು.

* ತಾಯಿನಾಡು, ೪-೫-೧೯೪೦.

—ಕಂಡದ್ದನ್ನು ಗೆದ್ದು ಧ್ವಂಸಮಾಡಿ, ನಿರ್ನಾಮಮಾಡಿ, ತಾನೂ ನಿರ್ನಾಮವಾಗುವುದಲ್ಲ.

ಶ್ರೀಶೈಲ, ಮಲ್ಲಿಕಾರ್ಜುನ, ಎಂಬ ಹೆಸರುಗಳು ಬರಲು ಕಾರಣವೆಂದು ಉಕ್ತವಾದ ಮೇಲಣ ಕಥೆಗಳು ಕಲ್ಪಿತ ಕಥೆಗಳಾಗಿ ಕಾಣುತ್ತವೆ. ಶ್ರೀಶೈಲಕ್ಕೆ ಶಿಲಾದ ಋಷಿ ಮೂಲವಾಗಬೇಕಾಗಿಲ್ಲ; ಶಿಲೆಯೇ ಸಾಕು. ಶಿಲಾದಋಷಿ ಬಂದರೆ ಅದು ಶೈಲಾದವಾಗಬೇಕಾದೀತು. ಚಂದ್ರಗುಪ್ತನು ದಕ್ಷಿಣ ದೇಶಕ್ಕೆ ಬಂದಿದ್ದನೆಂಬುದಕ್ಕೆ ಹಲವು ಕಡೆ ಆಧಾರಗಳು ದೊರೆಯುತ್ತಿದ್ದರೂ ಅವನ ಮಗಳೂ ಇಲ್ಲಿಗೆ ಬಂದಿದ್ದಳು, ಶ್ರೀಶೈಲದಲ್ಲಿ ಶಿವ ದೇವರನ್ನು ಮಲ್ಲಿಗೆ ಹೂವಿನಿಂದ ಪೂಜಿಸಿದಳು, ಆದ್ದರಿಂದ ಅದಕ್ಕೆ ಮಲ್ಲಿಕಾರ್ಜುನ ಎಂದು ಹೆಸರು ಬಂತು ಎಂದು ಹೇಳುವುದು ಕ್ಲಿಷ್ಟ ಕಲ್ಪನೆಯಾಗುತ್ತದೆ. ಅದೂ ಆಗಲಿ; ‘ಮಲ್ಲಿಕಾ’ ಶಬ್ದಕ್ಕೆ ಉಪಪತ್ತಿ ಬಂತೆನ್ನೋಣ. ಮಲ್ಲಿಗೆ ಇದ್ದ ಕಡೆ ಭ್ರಮರ ಇರುವುದು ಎಂದೂ ಒಪ್ಪೋಣ. ಆದರೆ ‘ಅರ್ಜುನ’ ಎಲ್ಲಿಂದ ಬಂದ? ಮಲ್ಲಿಗೆಹೂವಿಗೂ ಅರ್ಜುನನಿಗೂ[1] ಏನು ಸಂಬಂಧ? ಇವೆರಡೂ ಸೇರಿ ದೇವರ ಹೆಸರು ಹೇಗಾಯಿತು? ಹೀಗೆ, ಸಂಸ್ಕೃತದ ವ್ಯುತ್ಪತ್ತಿ ಸಮಂಜಸವಾಗಿ ಕಾಣುವುದಿಲ್ಲ.

ಹಾಗಾದರೆ ಇವಕ್ಕೆ ದ್ರಾವಿಡ ಮೂಲಗಳಿರಬಹುದೇ? ಈ ಊಹೆಗೆ ಸ್ಥಳೀಯ ವಿದ್ಯಮಾನಗಳಿಂದ ಆಧಾರವೇನು ದೊರೆಯುತ್ತದೆ ನೋಡೋಣ:—

ಶ್ರೀಶೈಲವು ಇರುವುದು ಕರ್ನೂಲ್ ಡಿಸ್ಟ್ರಿಕ್ಟಿನಲ್ಲಿ; ಈ ಡಿಸ್ಟ್ರಿಕ್ಟಿನ ಮಧ್ಯದಲ್ಲಿ ದಕ್ಷಿಣೋತ್ತರವಾಗಿ ನಲ್ಲಮಲ, ಎಜ್ಜಮಲ ಎಂಬ ಎರಡು ಪರ್ವತಶ್ರೇಣಿಗಳು ಹಬ್ಬಿವೆ. ಇವುಗಳಲ್ಲಿ ಶ್ರೀಶೈಲವು ನಲ್ಲಮಲ ಶ್ರೇಣಿಯ ಒಂದು ಭಾಗ. ಸ್ಲೇಟು ಕಲ್ಲಿನಿಂದ ಕೂಡಿ ಕಪ್ಪಗಿರುವುದರಿಂದ ನಲ್ಲಮಲ (ಕರಿಯಬೆಟ್ಟ)ವೆಂದೂ ಕೆಂಗಲ್ಲಿನಿಂದ ಕೂಡಿ ಕೆಂಪಗಿರುವುದರಿಂದ ಎಜ್ಜಮಲ (ಕೆಂಪುಬೆಟ್ಟ)ವೆಂದೂ ಹೆಸರು ಬಂದಿದೆಯೆಂದು ಹೇಳುತ್ತಾರೆ. ಕರ್ನೂಲು ತೆಲುಗು ದೇಶ. ಅಲ್ಲಿ ಈಗ ತೆಲುಗು ಜನರೇ ಹೆಚ್ಚು.[2] ತೆಲುಗಿನಲ್ಲಿ ‘ಬೆಟ್ಟ’ಕ್ಕೆ ಇರುವ ಶಬ್ದ ‘ಕೊಂಡ’. ಮಲೈ ಎಂಬುದು ಮೂಲ ದ್ರಾವಿಡ ಶಬ್ದವಾದರೂ ತೆಲುಗಿನಲ್ಲಿ ಬಹಳ ಹಿಂದೆಯೇ ನಿಂತುಹೋಗಿ ಕೆಲವು ಸಮಾಸ ಪದಗಳಲ್ಲಿ ಮಾತ್ರ ಅಪೂರ್ವವಾಗಿ ಪ್ರಯೋಗದಲ್ಲಿರುವಂತಿದೆ. ಕೊಂಡ ಎಂಬುದು ಸಾಮಾನ್ಯವಾಗಿ ರೂಢಿಯಲ್ಲಿರುವ ಶಬ್ದ. ಆದ್ದರಿಂದ ಈ ಜಿಲ್ಲೆಯಲ್ಲಿರುವ ಬೆಟ್ಟಗಳೂ ಬೆಟ್ಟಗಳಿರುವ ಅನೇಕ ಊರುಗಳೂ ‘ಕೊಂಡ’ದಿಂದ ಮುಗಿಯುತ್ತವೆ.— ಅನುಮಕೊಂಡ, ಕೋಟಕೊಂಡ, ದುರ್ಗಪುಕೊಂಡ, ಪತ್ತಿಕೊಂಡ, ಪುಲಿಕೊಂಡ, ಬೈರಸಿಕೊಂಡ, ಮಂಟಿಕೊಂಡ, ಮುರವಕೊಂಡ, ಇತ್ಯಾದಿ.

---

[1] ‘ಅರ್ಜುನ ಅಥವಾ ಮದ್ದಿ ವೃಕ್ಷಗಳ ಹೂವುಗಳ ಬಣ್ಣದಂತಿರುವ ಮಲ್ಲಿಗೆಯ ಹೂವುಗಳಿಂದ ಶಿವನನ್ನು ಪೂಜಿಸಿದಳು’ ಎಂದು (‘ಶಿವಾನುಭವ’, ಸಂಪುಟ ೭, ಪುಟ ೧೭೦) ಹೇಳುವುದು ಇನ್ನೂ ಕ್ಲಿಷ್ಟವಾದ ಕಲ್ಪನೆ.

[2] ತೆಲುಗರು ೬,೭೩,೫೪೭
ಕನ್ನಡಿಗರು ೩,೦೨,೫೪
ತಮಿಳರು ೧,೧೬,೨೩
ಮಲಯಾಳರು ೧೨—ಕರ್ನೂಲ್ ಡಿಸ್ಟ್ರಿಕ್ಟಿನ ಕೈಪಿಡಿ, ಪುಟ ೬.

'ಮಲ'ಶಬ್ದ ಅರ್ಥವಾಗದೆ, ಮೇಲೆ ಹೇಳಿದ ಬೆಟ್ಟದ ಸಾಲುಗಳನ್ನು ಆ ಪ್ರಾಂತದಲ್ಲಿ ನಲ್ಲಮಲಕೊಂಡ, ಎಜ್ಜಿಮಲಕೊಂಡ ಎಂದು ಕರೆಯುತ್ತಾರೆ. ಇದು ಬೆಟ್ಟದ ಮೇಲೆ ಬೆಟ್ಟವನ್ನು ಇಡುವ ಕೆಲಸ. ಆದ್ದರಿಂದ ನಲ್ಲಮಲ, ಎಜ್ಜಿಮಲ ಎಂಬ ಹೆಸರುಗಳು ಬಹಳ ಪ್ರಾಚೀನವಾಗಿ ಕಾಣುತ್ತವೆ. ಇವಕ್ಕೆ ಪೂರ್ವ ರೂಪಗಳು ನಲ್ಲಮಲೈ, ಎಜ್ಜಿಮಲೈ. ಎಜ್ಜಿ[1] ಎಂದರೆ ಕೆಂಪು ಎಂದೇನೋ ಅರ್ಥ ಸರಿ. ಆದರೆ ನಲ್ಲ ಎಂದರೆ ತೆಲುಗಿನಲ್ಲಿ ಈಗ ಇರುವಂತೆ ಕಪ್ಪು ಎಂದೇ ಅರ್ಥವೇ? 'ನಲ್' ಎಂಬ ದ್ರಾವಿಢ ಧಾತುವಿಗೆ ಒಳ್ಳೆಯದು ಎಂದು ಅರ್ಥ. ಈ ಅರ್ಥ ತಮಿಳಿನಲ್ಲಿಯೂ ಕನ್ನಡದಲ್ಲಿಯೂ ನಲ್ಲ, ನಲಿ, ನಲವು ಮುಂತಾದ ಪದಗಳಲ್ಲಿ ಕಂಡುಬರುತ್ತದೆ. ತೆಲುಗಿನಲ್ಲಿಯೂ ಹಿಂದೆ ಈ 'ನಲ್' ಧಾತುವಿದ್ದು ಅದಕ್ಕೆ ಶುಭ, ಶ್ರೇಷ್ಠ, ಸಂತೋಷಕರ ಎಂದು ಅರ್ಥವಾಗಿ, ಅದು 'ನಲುಗು' ಮುಂತಾದ ಪದಗಳಲ್ಲಿ ಕಂಡುಬರುತ್ತದೆ. ಆ ಅರ್ಥ ನಲ್ಲಮಲದಲ್ಲಿಯೂ ಇದ್ದಿರಬಹುದೇ? ಅಥವಾ ಅದರ ಪ್ರಾಚೀನ ರೂಪವು ನಲ್ಲಮಲೈ, ನಲ್ಮಲೈ ಎಂದಿದ್ದು 'ಶ್ರೀಶೈಲ' ಎಂಬುದು ಅದರ ಸಂಸ್ಕೃತ ಭಾಷಾಂತರವಾಗಿರಬಹುದೇ? ಅಥವಾ ನಲ್ಲಮಲ ಪ್ರಾಂತದಲ್ಲಿ ಅದನ್ನು (ಶೃಂಗೇರಿಯಲ್ಲಿರುವಂತೆ) ಸುಮ್ಮನೆ ಬೆಟ್ಟ ಎಂದು ವ್ಯವಹರಿಸುತ್ತಿದ್ದು, 'ಮಲೈ' ಎಂಬುದಷ್ಟನ್ನು 'ಶೈಲ' ಎಂದು ಭಾಷಾಂತರಿಸಿ ಹಿಂದೆ ಶ್ರೀಕಾರಸೇರಿಸಿದ್ದಿರಬಹುದೋ?

ಇದು ಅಸಂಭವವಲ್ಲ. ಈ ವಿಧವಾದ ಪ್ರವೃತ್ತಿಯು ನಮ್ಮಲ್ಲಿಯೂ ಹೊರಗಿನವರಲ್ಲಿಯೂ, ಹಿಂದೂ ಇಂದೂ, ಕಂಡುಬರುತ್ತಿರುವುದೇ.—ಹೀಗೆ ಹುಲ್ಲಹಳ್ಳಿ ತೃಣಪುರಿಯಾಗಿದೆ. (ಇಂಥ ಭಾಷಾಂತರವು ಸರಿಯಾಗಿರಬೇಕು, ಸಮಂಜಸವಾಗಿ ಅರ್ಥವಾಗಬೇಕು ಎಂಬುದೇನೂ ಇಲ್ಲ!) ಇಲ್ಲಿ ಹುಲ್ಲ(ಳ್ಳ) ಎಂಬುದು ಒಬ್ಬನ ಹೆಸರು; ಅದಕ್ಕೆ 'ಹುಲ್ಲಿನ' ಎಂದು ಅರ್ಥಮಾಡಿ 'ತೃಣ'ವೆಂದು ಸಂಸ್ಕೃತ ಭಾಷಾಂತರ ಮಾಡಿದ್ದಾರೆ. ಹೇಮಲತ (ಹ್ಯಾಂಲೆಟ್), ಗೋತೀರ್ಥ (ಆಕ್ಸ್‌ಫರ್ಡ್), ಸರಲಾಕ್ಷ ಹುಲಿಮೀಸೆ (ಷರ್ಲಾಕ್ ಹೋಮ್ಸ್), ಅಲ್ಲಾಳನಾಥ (ಅರುಳಾಳ ಪೆರುಮಾಳ್) ಇವು ಇತರ ಉದಾಹರಣೆಗಳು. ಆದ್ದರಿಂದ ಸಂಸ್ಕೃತ ಪುರಾಣಗಳ ಕಾಲದಲ್ಲಿ ಪುರಾಣಕಾರರು ನಲ್ಮಲೈ ಎಂಬುದನ್ನು ಶ್ರೀಶೈಲ ಎಂದು ಸಂಸ್ಕೃತ ಮಾಡಿರಬಹುದು; ಆಮೇಲೆ ಶಿಲಾದ ಋಷಿಯ ಕಥೆ ಹುಟ್ಟಿರಬಹುದು.—ಕಾವೇರಿಯಿಂದ ಕವೇರನ ಕಥೆ ಹುಟ್ಟ ಹರಿದಹಾಗೆ. ಹಳೆಯ ದ್ರಾವಿಡ ಹೆಸರಿಗೆ ಬದಲಾಗಿ ಈಚೆಗೆ ಸಂಸ್ಕೃತ ಹೆಸರು ಬಂದಿರುವುದಕ್ಕೆ ಉದಾಹರಣೆಯಾಗಿ 'ಚಿದಂಬರ'ವನ್ನು ಹೇಳಬಹುದು. ಇದಕ್ಕೆ ಹಿಂದಿನ ಹೆಸರು 'ತಿಲ್ಲೈ'. ಕೃಷ್ಣಾ ಕುಮುದ್ವತೀ ಎಂಬುವೂ ಹೀಗೆಯೇ. ಹಿಂದೆ ಇವಕ್ಕೆ ಪೆರ್ದೊಱಿ, ಕುಂದೇರ್ ಎಂದು ಹೆಸರು. ಅನೇಕ ಆಳ್ವಾರುಗಳ ಮತ್ತು ನಾಯನಾರರ ಹೆಸರುಗಳೂ ಹೀಗೇ ಸಂಸ್ಕೃತವಾಗಿವೆ.

'ಕರ್ನೂಲ್' ಎಂಬುದು 'ಕಂದೆನವೋಲು' ಎಂಬ ತೆಲುಗು ಶಬ್ದದಿಂದ ಉತ್ಪನ್ನವಾಗಿದೆಯೆಂದೂ, ಈ ಹೆಸರು ಹಳೆಯ ಗ್ರಂಥಗಳಲ್ಲಿಯೂ ಶಾಸನಗಳಲ್ಲಿಯೂ

[1] = (ಕನ್ನಡ) ಎಡ್ಡ = ಸುಂದರ?

ಕಂಡುಬರುವುದೆಂದೂ, ವಡ್ಡರು ಇಲ್ಲಿ ತಮ್ಮ ಗಾಡಿಗಳನ್ನು ಬಿಟ್ಟುಕೊಂಡು ಗಾಲಿಗಳಿಗೆ ಎರೆಯನ್ನು (ಕಂದೆನ) ಹಾಕುತ್ತಿದ್ದದ್ದರಿಂದ ಈ ಊರಿಗೆ ಈ ಹೆಸರು ಬಂತೆಂದೂ ಕರ್ನೂಲ್ ಡಿಸ್ಟ್ರಿಕ್ಟ್ ಕೈಪಿಡಿಯ ಲೇಖಕರಾದ ಗೋಪಾಲಕೃಷ್ಣಯ್ಯ ಶೆಟ್ಟಿ ಅವರು ಹೇಳುತ್ತಾರೆ. ಈ ನಿರುಕ್ತಿ ನಿಜವಾಗಿರಲಿ ಇಲ್ಲದಿರಲಿ, ಈ ಶಬ್ದದ ಮೊದಲ ಭಾಗವಂತೂ ಕರ್ನ್.–(ಕರ್ನೂಲ್‌ನಲ್ಲಿ ಇರುವ ರೇಫ ಈಚಿನದು.) ಇದರ ಅರ್ಥ ಕಪ್ಪು ಎಂದು ಕಾಣುತ್ತದೆ.[1] ಕಿಟ್ಟೆಲ್ ಅವರು ತಮ್ಮ ನಿಘಂಟುವಿನಲ್ಲಿ ಕನ್, ಕದ್, ಕಬ್, ಕಮ್, ಕರ್, ಎಲ್ಲಾ ಒಂದೇ ಎಂದೂ ಅವುಗಳಿಗೆ ಕಪ್ಪು ಎಂದೇ ಅರ್ಥವೆಂದೂ ಹೇಳುತ್ತಾರೆ. ಇವುಗಳೆಲ್ಲಾ ಕರ್ ಎಂಬುದರ ರೂಪಾಂತರಗಳೆನ್ನಬಹುದು. ಆದರೆ, ಕನುಗು (ಎಣ್ಣೆಯಲ್ಲಿ ಅಥವಾ ತುಪ್ಪದಲ್ಲಿ 'ಕರಿ'ಯುವುದು), ಕನರು, ಕಂದು (ಕಪ್ಪಾಗು)—ಇವುಗಳಲ್ಲೆಲ್ಲಾ ಕನ್ ಎಂಬ ರೂಪವೇ ಕಾಣುತ್ತದೆ. ಹಾಗಾದರೆ 'ಕನ್ನಾಡು' ಎಂದರೆ ಕಪ್ಪು ನಾಡೇ?

ಕರ್ನೂಲ್ ಪ್ರಾಂತಕ್ಕೆ 'ಕನ್ನಾಡು' ಎಂದು ಹೆಸರಿತ್ತೆಂದೂ ಇದರ ಪಕ್ಕದ ಕುಂದೇರ್ ಪ್ರಾಂತಕ್ಕೆ ರೇನಾಡು (= ಎರೆನಾಡು?) ಎಂದು ಹೆಸರೆಂದೂ ಮೇಲಣ ಲೇಖಕರು ಹೇಳುತ್ತಾರೆ. ಕಲ್‌ನಾಡು, ಕರುನಾಡು(?) ಎಂಬುದು ಇದರ ಅರ್ಥವಿರಬಹುದು. ಆದರೆ ಮೇಲೆ ಹೇಳಿದಂತೆ ಕಪ್ಪುನಾಡು ಎಂದೂ ಅರ್ಥವಾಗಬಹುದು. ಹಾಗಾದರೆ ಹಿಂದೆ ಇದು ಕನ್ನಡ ನಾಡಾಗಿತ್ತೋ? ಏಕಾಗಿರಬಾರದು? ಮಲೈ ಶಬ್ದವನ್ನೂ ಕರ್ನೂಲಿಗೆ ಸುಮಾರು ಐವತ್ತು ಮೈಲಿ ದೂರದಲ್ಲಿರುವ 'ಕೋಇಲ್ ಕುಂಟ್ಲ' ಎಂಬ ಊರಿನ ಹೆಸರನ್ನೂ ನೋಡಿದರೆ ಕನ್ನಡ-ತಮಿಳು ಅಥವಾ 'ಕಂದಮಿಳು'[2] ನಾಡಾಗಿದ್ದಂತೆ ಕಾಣುತ್ತದೆ. ಕನ್ನಡ ನಾಡೆಲ್ಲ ಕಪ್ಪಾಗಿಲ್ಲ ಎಂದು ಹೇಳುವುದು ದೊಡ್ಡ ಆಕ್ಷೇಪಣೆಯಲ್ಲ.

ಶ್ರೀಶೈಲವು ಭಾಷಾಂತರೀಕರಣವಾದರೆ, 'ಮಲ್ಲಿಕಾರ್ಜುನ'ವು ಭಾಷಾಂತರಾನುಕರಣವಾಗಿ ಕಾಣುತ್ತದೆ.—ಎಂದರೆ, ಮಲೈ ಅಯ್ಯನ್ ಎಂಬುದು ಅದರ ಮೂಲವಾಗಿ ಕಾಣುತ್ತದೆ. ಮಲೈ ಅಯ್ಯನ್ ಎಂದರೆ ಬೆಟ್ಟದ (ಮೇಲಿರುವ) ಸ್ವಾಮಿ ಅಥವಾ ದೇವರು. ಮಲ್ಲಯ್ಯ ಎಂಬುದೂ ಇದೇ ಶಬ್ದದ ಬೇರೊಂದು ರೂಪ.[3] — ಕನ್ನಡದಲ್ಲಿ ಮಲ್ಲಿಕಾರ್ಜುನಕ್ಕಿಂತ ಮಲ್ಲಯ್ಯ ಎಂಬ ಹೆಸರೇ ಹೆಚ್ಚು ಬಳಕೆ. ಈ ಶಬ್ದದ ಅವಯವಾರ್ಥ ಮರೆತುಹೋದಮೇಲೆ ಬೆಟ್ಟದ ಸಂಬಂಧವನ್ನು ತೋರಿಸಲು ಅನೇಕ ಕಡೆ ಅದನ್ನು ಮಲೆಯ ಮಲ್ಲೇಶ್ವರ ಎಂದು ಕರೆಯುತ್ತಿರಬೇಕು. ಗಿರಿಮಲ್ಲಿಕಾರ್ಜುನ ಎಂಬುದು ಇದೇ ವಿಧವಾದ ಸಂಸ್ಕೃತ ಪ್ರಯತ್ನ. 'ಮಲೆ' ಪದವು (ಬೆಟ್ಟ ಎಂಬ ಅರ್ಥದಲ್ಲಿ) ಬಳಕೆಯಾಗದೆ ಸಿಂತುಹೋದಮೇಲೆ, ಅದು ಅರ್ಥವಾಗದೆ, ಇದು 'ಮಳೆಯ' ಮಲ್ಲಯ್ಯ ಅಥವಾ 'ಮಳೆಯ' ಮಲ್ಲೇಶ್ವರ

---

[1] ಎಣ್ಣೆಯನ್ನಾಗಲಿ ಎಣ್ಣೆಯ ಗಸಿಯನ್ನಾಗಲಿ ತೆಗೆದುಕೊಂಡು ಅದಕ್ಕೆ ಹುಲ್ಲನ್ನು ಸುಟ್ಟು ಕರಿಕು ಮಾಡಿ ಹಾಕಿ ಕಲಸುತ್ತಾರೆ. ಇದೇ 'ಕಂದೆನ', 'ಕಂದಸಿ' ಅಥವಾ 'ಎರೆ'. ಇದರ ಬಣ್ಣ ಕಪ್ಪು.

[2] 'ಮಹಾರಾಷ್ಟ್ರದ ಮೂಲ', ಪುಟ ೧೯

[3] ಶ್ರೀಮಾನ್ ಶಂ. ಬಾ. ಜೋಶಿಯವರು ಇದನ್ನು ಆಗಲೇ ಸೂಚಿಸಿದ್ದಾರೆ. ಮಲ್ಲಿಕಾರ್ಜುನ ಎಂಬುದಕ್ಕೆ ಮಲ್ಲಕಾರ್ಜುನ ಎಂಬುದು ಪೂರ್ವರೂಪವಾಗಿರಬೇಕೆಂಬುದು ಅವರ ಅಭಿಪ್ರಾಯವಾಗಿ ತೋರುತ್ತದೆ. ('ಕರ್ಣಾಟಕದ ವೀರಕ್ಷತ್ರಿಯರು', ಪುಟ ೧೦೪.)

ಆಗಿರಬೇಕು (ಉದಾಹರಣೆ— ಅರಸಿಕೆರೆ, ಕಿಗ್ಗ, ಈ ಊರುಗಳಲ್ಲಿ); ಇದಕ್ಕೆ ಪೂಜೆ ನಡಸಿದರೆ ಮಳೆ ಬರುತ್ತದೆಂಬ ಕಥೆ ಹುಟ್ಟಿಕೊಂಡಿರಬೇಕು. ಆದ್ದರಿಂದಲೇ 'ಬೈಲು' ಮಲ್ಲಿಕಾರ್ಜುನನಿಗೂ 'ಮಳೆಯ' ಮಲ್ಲಿಕಾರ್ಜುನನಿಗೂ ವ್ಯತ್ಯಾಸ. 'ಬೈಲು' ಅಲ್ಲದ್ದು 'ಮಳೆ'ಯಲ್ಲ—'ಮಲೆ': ಬೈಲುಸೀಮೆ, ಮಲೆನಾಡು ಎಂಬಂತೆ.

ಮಲ್ಲ, ಮಲ್ಲಪ್ಪ, ಮಲ್ಲಮ್ಮ, ಮಲ್ಲೇಶ, ಮಲ್ಲೇಶ್ವರ, ಮಲ್ಲಾರಿ(?) ಇವು ಇದೇ ಹೆಸರಿನಿಂದ ಬಂದವುಗಳು.[2] ಕನ್ನಡಿಗರಲ್ಲಿ ಇಂದಿಗೂ ರೂಢವಾಗಿರುವ ಬೆಟ್ಟಯ್ಯ, ಗಿರಿಯಪ್ಪ ಮುಂತಾದ ಹೆಸರುಗಳೂ ಮಲ್ಲಯ್ಯ ಎಂಬ ಅರ್ಥವನ್ನು ಕೊಡತಕ್ಕವುಗಳೇಯೆ. ಹಿಂದೆ ಶಿವನನ್ನು ಎಲ್ಲಾ ಕಡೆಯಲ್ಲಿಯೂ (ಬೆಟ್ಟದಮೇಲೆ) ಬೆಟ್ಟದ ದೇವರೆಂದು ಪೂಜಿಸುತ್ತಿದ್ದಿರಬಹುದೇ? ಆಗ ಅವನು ಎಲ್ಲ ಕಡೆಗೂ ಬೆಟ್ಟದ ದೇವರಾಗುತ್ತಾನೆ.—'ಗಿರೀಶ' ಎಂಬಂತೆ. ದ್ರಾವಿಡದಲ್ಲಿ 'ಮಲೈ ಅಯ್ಯನ್' ಎಂಬ ಪದದ ಜೊತೆಗೆ 'ಮಲೈಯನ್' ಎಂಬ ಹ್ರಸ್ವರೂಪವೂ ಆಗಬಹುದು. ಸಂಸ್ಕೃತದಲ್ಲಿಯೂ ಇದರಂತೆ 'ಗಿರೀಶ'ದ ಜೊತೆಗೆ 'ಗಿರಿಶ'ವೂ ಇದೆ. ಇದು ಕುತೂಹಲಜನಕವಲ್ಲವೇ?

ಜೈನತೀರ್ಥಂಕರರಲ್ಲೊಬ್ಬರ ಹೆಸರು ಮಲ್ಲಿ (ನಾಥ).[3] ಈ ಪದವೂ, 'ಮಲ್ಲ'ದ ಬೇರೊಂದು ರೂಪವಾಗಿರಬೇಕು.— ಸೋಮ, ಸೋವಿ; ನಾಗ, ನಾಕಿಗ, ನಾಕಿ ಎಂಬಂತೆ. ಮಲ್ಲಯ್ಯ ಎಂಬುದರ ಹ್ರಸ್ವರೂಪವಿದ್ದರೂ ಇರಬಹುದು: ಮಡಂದಯ್, ಮಡದಿ; ತಂಗಯ್, ತಂಗೆ, ತಂಗಿ ಎಂಬಂತೆ. ಇದನ್ನು ಒಪ್ಪಿಕೊಂಡರೆ ಕಲ್ಲಯ್ಯ, ಕಲ್ಲ, ಕಲ್ಲಿ(ನಾಥ) ಎಂಬುದಕ್ಕೂ ಉಪಪತ್ತಿ ದೊರೆಯುತ್ತದೆ. ಕಲ್ ಎಂಬ ದ್ರಾವಿಡ ಮೂಲಧಾತುವಿಗೂ ಮಲ್ ಎಂಬುದರಂತೆಯೇ ಗಟ್ಟಿ ಎಂಬ ಅರ್ಥವಿದ್ದು ಅದರಿಂದ 'ಕಲ್ಲು' ಆಗಿರಬೇಕು. ಕಲ್ಲು(ಲ್) ಶಬ್ದಕ್ಕೆ ತಮಿಳಿನಲ್ಲಿ (ಮಲೈ ಶಬ್ದದಂತೆ) ಬೆಟ್ಟ ಎಂಬ ಅರ್ಥವೂ ಇದೆ. ನಿಜಗಲ್ಲು, ಜಾವಗಲ್ಲು ಮುಂತಾದ ಊರುಗಳ ಹೆಸರುಗಳಲ್ಲಿ ಕಲ್ಲು ಎಂದರೆ ಬೆಟ್ಟವೆಂದೇ ಅರ್ಥ. ಆದ್ದರಿಂದ ಶ್ರೀಮಾನ್ ಶಂ. ಬಾ. ಜೋಶಿಯವರು ಊಹಿಸುವಂತೆ[4] ಕಲ್ಲೇಶ್ವರನು ಕಳ್ಳೇಶ್ವರನೇನು ಆಗಬೇಕಾಗಿಲ್ಲ.

**ಎ. ಆರ್. ಕೃಷ್ಣಶಾಸ್ತ್ರೀ**

---

1 'ಶಿವಾನುಭವ', ಸಂಪುಟ ೧೩, ಪುಟ ೩೬.

2 ಇವೆಲ್ಲಕ್ಕೂ ಮಲ್ = (ಗಟ್ಟಿಯಾಗಿರು) ಎಂಬ ದ್ರಾವಿಡ ಧಾತುವೇ ಮೂಲವಾಗಿರುವಂತೆ ತೋರುತ್ತದೆ. ಸಂಸ್ಕೃತದಲ್ಲಿ "ಮಲ ಮಲ್ಲ ಧಾರಣೇ" ಎಂಬ ಧಾತುವಿದೆ. ಈ ಧಾತುವಿನಿಂದ ಮಲ್ಲ ಶಬ್ದವನ್ನು ನಿರ್ವಚಿಸುವುದಕ್ಕಿಂತಲೂ ದ್ರಾವಿಡ ಧಾತುವಿನಿಂದ ನಿರ್ವಚಿಸುವುದೇ ಸರಿಯಾಗಿ ಕಾಣುತ್ತದೆ. ಸಂಸ್ಕೃತದ ಮಲ್ಲ (= ಕ್ಷತ್ರಿಯೋತ್ಪನ್ನವಾದ ಒಂದು ಜಾತಿ; ಜಟ್ಟಿ) ಶಬ್ದವೂ ಈ ದ್ರಾವಿಡ ಧಾತುವಿನಿಂದ ಜನ್ಯವಾದದ್ದೆಂದು ಹೇಳಿದರೇ ಅರ್ಥಸ್ವಾರಸ್ಯವಾಗುತ್ತದೆ. ಮಲ್ಲಾರಿ ಎಂದರೆ ಶಿವನೆಂದೂ ಅರ್ಥವಾಗುತ್ತದೆ. ಇಲ್ಲಿ— ಅರಿ ಎಂದರೆ ಶತ್ರು ಎಂದೇ ಅರ್ಥವಾಗಬೇಕಾಗಿಲ್ಲ ('ಕರ್ಣಾಟಕದ ವೀರಕ್ಷತ್ರಿಯರು', ಪುಟ ೧೦೪). 'ಗುಜ್ಜಾರಿ'ಯಲ್ಲಿ ಈ ಅರ್ಥವಿಲ್ಲ. ವಿಷ್ಣು ಅಥವಾ ಕೃಷ್ಣ ಎಂದು ಅರ್ಥವಾದಾಗ, ಮಲ್ಲರ (ಜಟ್ಟಿಗಳ) + ಅರಿ = ಕೃಷ್ಣ ಎಂದು ಅರ್ಥವಿರಬಹುದು. ಈ ದೇವತೆಯ ಪೂಜೆ ಎಂದಿನಿಂದ ಬಂತು, ಅದರ ಮೂಲ ರೂಪ ಯಾವುದು ಎಂಬುದನ್ನು ಮೊದಲು ನಿರ್ಧರಿಸಿಕೊಳ್ಳದೆ ಅದರ ವ್ಯುತ್ಪತ್ತಿಯನ್ನು ನಿಶ್ಚಯಿಸುವುದು ತಪ್ಪಾದೀತು.

3 ವೀರಶೈವ ಗ್ರಂಥಗಳಲ್ಲಿ 'ಮಲ್ಲಿಕಾರ್ಜುನ'ನನ್ನೇ 'ಮಲ್ಲಿನಾಥ' ಎಂದೂ ಕರೆದಿರುವುದುಂಟು.

4 'ಕನ್ನಡದ ನೆಲೆ'—ಕರ್ಣ, ಕರಣ, ಕಣ್ಣ, ಕಣ್ಣ, ಕನ್ನ, ಕನ್ನ, ಕಳವ, ಕಳ್ಳ, ಕಳ್ವ, ಕನ್, ಕಂ, ಇವೆಲ್ಲಾ ಒಂದೇ ಶಬ್ದದ ಹಲವು ರೂಪಗಳೆಂದು ಅವರು ಅಭಿಪ್ರಾಯಪಡುತ್ತಾರೆ.

# ಅಪ-ರೂಪಗಳಾದ 'ನೋಂಪಿ', 'ಕಲ್ಪಿ'

ಭಾವಾರ್ಥಕ ಪ್ರತ್ಯಯಗಳನ್ನು ವಿವರಿಸುವಾಗ ಕೇಶಿರಾಜನು 'ಶಬ್ದಮಣಿ ದರ್ಪಣ'ದ ೨೧೧ನೆಯ ಸೂತ್ರದಲ್ಲಿ 'ಪು' ಎಂಬುದರೊಡನೆ 'ಪಿ' ಪ್ರತ್ಯಯವನ್ನೂ ಹೇಳಿದ್ದಾನೆ. ಆದರೆ 'ಪಿ' ಪ್ರತ್ಯಯಾಂತಗಳೆಂದು ಆತನು ಹೇಳಿದ ಉದಾಹರಣೆಗಳೆಂದರೆ ಎರಡೇ ಎರಡು! ನೋಂಪಿ ಮತ್ತು ಕಲ್ಪಿ.

ಬಳಕೆಯ ಮಾತಿನಲ್ಲೂ, ಸಾಹಿತ್ಯದಲ್ಲೂ 'ಪು' ಪ್ರತ್ಯಯಾಂತ ಪದಗಳೇ ಅಡಿಗಡಿಗೂ ಕಾಣಿಸಿಕೊಳ್ಳುತ್ತವೆ. 'ನೋಂಪಿ' ಮತ್ತು 'ಕಲ್ಪಿ'ಗಳ ಹೊರತು 'ಪಿ' ಪ್ರತ್ಯಯದ ಬೇರೆ ಶಬ್ದಗಳೇ ಕನ್ನಡ ಸಾಹಿತ್ಯದಲ್ಲಿ ದೊರೆಯದಿದ್ದರೆ ಕೇಶಿರಾಜನಾದರೂ ಹೆಚ್ಚಿನ ಪ್ರಯೋಗಗಳನ್ನು ಎಲ್ಲಿಂದ ತರಬೇಕು? ಆದುದರಿಂದಲೇ ನೋಂಪಿ ಮತ್ತು ಕಲ್ಪಿಗಳು ಕನ್ನಡದಲ್ಲಿ ಅಪರೂಪಗಳೆಂದು ಹೇಳಿದರೆ ತಪ್ಪಾದೀತೆ?

ಆದರೂ 'ನೋಂಪಿ' ಶಬ್ದವು ಜೈನಬಾಂಧವರ ಬಳಕೆಯ ಮಾತಿನಲ್ಲಿ ಈಗಲೂ ಉಂಟು. ವೈಯಾಕರಣಿಗಳು ಪ್ರಯೋಗಶರಣರು; ರೂಢಿಗೆ ಅವರು ತಲೆವಾಗಲೇಬೇಕು. ಕೇಶಿರಾಜನ ಕಾಲದಲ್ಲಿಯೂ 'ನೋಂಪಿ' ಎಂಬ ಮಾತು ಜನಸಾಮಾನ್ಯರ ಬಾಯಲ್ಲಿರಲೇಬೇಕು. ಅಲ್ಲದೆ ಅಭಿನವ-ಪಂಪನಂತಹರು ಸಾಹಿತ್ಯದಲ್ಲಿಯೂ ಅದಕ್ಕೆ ಎಡೆಗೊಟ್ಟಿದ್ದರು. ಅವರಿಂದ 'ಪಿ' ಪ್ರತ್ಯಯಾಂತ ಪ್ರಯೋಗಗಳು ಎರಡೇ ಇದ್ದರೂ, ಅವಕ್ಕೆ ಕೇಶಿರಾಜನು ತನ್ನ ಮನ್ನಣೆಯನ್ನು ಕೊಡಬೇಕಾಯ್ತೆಂದು ತೋರುತ್ತದೆ. ಇದೆಂತಾದರೂ 'ಪು' ಪ್ರತ್ಯಯದಷ್ಟು, 'ಪಿ' ಪ್ರತ್ಯಯದ ಪ್ರಯೋಗಗಳು ಹೇರಳವಾಗಿ ಇಲ್ಲವೆಂಬುದು ನಿಶ್ಚಿತ. ಆದುದರಿಂದಲೆ ಒಳ್ಪು, ಕಂಪು, ತಣ್ಪು, ಬಲ್ಪು, ಮುಂತಾದ ಕಡೆಗಳಲ್ಲೆಲ್ಲ ಕಾಣಬರುವ 'ಪು' ಪ್ರತ್ಯಯವು ಸಾರ್ವತ್ರಿಕವಾದ ನಿಯಮ; ನೋಂಪಿ, ಕಲ್ಪಿಗಳೊಳಗಿನ 'ಪಿ' ಪ್ರತ್ಯಯವು ಅಪವಾದ (Exception), ಎಂದು ಹೇಳಲು ಅಡ್ಡಿ ಏನು?

ಅಲ್ಲದೆ ಕಿಟ್ಟೆಲ್ಲರು 'ನೋಂಪಿ' ಎಂಬಂತೆ 'ನೋಂಪು' ಎಂಬ ಪ್ರಯೋಗವೂ ಕನ್ನಡದಲ್ಲಿ ಇಲ್ಲದೆ ಇಲ್ಲವೆಂಬುದನ್ನು ಸೂಚಿಸಿದ್ದಾರೆ. (ಕಿಟ್ಟೆಲ್ಲರ ಕೋಶ ನೋಡಿ.) ಆದುದರಿಂದ 'ನೋಂಪು' ಎಂಬುದನ್ನು 'ನೋಂಪಿ' ಎಂಬ ಜಾನಪದರ ಪ್ರಯೋಗವೇ ಹಿಂದೂಡಿ ಮೂಲೆಗುಂಪು ಮಾಡಿರಬಹುದೆ?

ಈ ಊಹೆಗೆ ತೆಲುಗು ಮತ್ತು ತಮಿಳು ಭಾಷೆಯ ಬೆಂಬಲವುಂಟು. ತೆಲುಗಿನಲ್ಲಿ 'ನೋಮು' ಎಂಬ ಉಕಾರಾಂತವಾದ ಪದವಿದೆ. ತಮಿಳಿನ ಆಧಾರವು ಇದಕ್ಕೂ ನಿಃಸಂದಿಗ್ಧವಾಗಿದೆ. 'ನೋಂಪು'(ಉಚ್ಚಾರ ನೋಂಬು) ಎಂಬ ಪ್ರಯೋಗವೊಂದೇ ತಮಿಳಿನಲ್ಲಿ! 'ನೋಂಪಿ' ಎಂಬ ಮಾತೇ ಇಲ್ಲ ಅಲ್ಲಿ (*cf.* Tamil Lexicon). ಆದುದರಿಂದ ಕನ್ನಡದಲ್ಲಿಯೂ ಮೊದಲು **ನೋಂಪು** ಎಂಬ ರೂಪವೇ ಬಳಕೆಯಲ್ಲಿರಬೇಕೆಂದು ಗೊತ್ತುಪಡಿಸಬಹುದಾಗಿದೆ. 'ನೋಪು' ಎಂಬುದೇ ಮಾರ್ಪಟ್ಟು, ಮುಂದೆ 'ನೋಪಿ' ಎಂಬ ರೂಪ ತಾಳಿರಬೇಕೆಂದು ತೋರುತ್ತದೆ.

ಏಕೆಂದರೆ ನೋಂಪಿಯ ಜೊತೆಗೆ ಹೇಳುವ ಕಲ್ಪಿ ಎಂಬ 'ಪಿ' ಪ್ರತ್ಯಯಾಂತ

ಶಬ್ದವೂ ತಮಿಳಿನಲ್ಲಿ ಬೇರೆಯಾಗಿದೆ! ಕಲ್ಪಿಯು ಕಲ್ವಿ ಎಂದು ತಮಿಳಿನಲ್ಲಿ ಕಾಣಿಸಿಕೊಳ್ಳುವುದು.

ಕನ್ನಡದಲ್ಲಿ 'ಪಿ' ಪ್ರತ್ಯಯದುವೆಂದು ಹೇಳುವ ಶಬ್ದಗಳೆಂದರೆ ನೋಂಪಿ ಮತ್ತು ಕಲ್ಪಿ ಎಂಬುವು ಎರಡು ಮಾತ್ರ. ಇವೆರಡರಲ್ಲಿರುವ 'ಪಿ' ಪ್ರತ್ಯಯವೂ ತಳಹದಿಯುಳ್ಳುದಿಲ್ಲವೆಂದು ಅನುಭವಕ್ಕೆ ಬರುತ್ತಲಿದೆ. ಇಂತು ಭಾವಾರ್ಥಕ 'ಪಿ' ಪ್ರತ್ಯಯಕ್ಕೆ ಕನ್ನಡದಲ್ಲಿ ಎಲ್ಲಿಯೂ ಇಂಬು ಇರುವಂತೆ ತೋರುವುದಿಲ್ಲ. ಅಳವಿ, ಬಳವಿ, ಮೊದಲಾದವುಗಳಂತೆ 'ಕಲ್ಪಿ'ಯೂ, ಕಲ್ವಿಯಾಗಿರಬಹುದೆಂದು ತಮಿಳ ಭಾಷೆಯ ನೆರವಿನಿಂದ ತಿಳಿದುಕೊಳ್ಳಬಹುದಾಗಿದೆ. ಆದುದರಿಂದ ಭಾವಾರ್ಥಕ 'ಪಿ' ಪ್ರತ್ಯಯದ ಅಸ್ತಿತ್ವದ ವಿಚಾರದಲ್ಲಿಯೆ ಸಂದೇಹವುಂಟಾಗುವಂತಿದೆ.

'ಪಿ' ಪ್ರತ್ಯಯವು ಇದ್ದಿತೆಂದು ಗ್ರಹಿಸಿದರೂ ಭಾವಾರ್ಥದಲ್ಲಿ ಅದು ತಲೆಯೆತ್ತಿ ಮೆರೆಯುವುದಕ್ಕೆ ಒಂದು ದೊಡ್ಡ ತೊಂದರೆಯುಂಟಾಗಿರಬೇಕು. 'ಪು' ಪ್ರತ್ಯಯದಂತೆ 'ಪಿ' ಪ್ರತ್ಯಯವು ಸ್ಪಷ್ಟವಾಗಿ ಭಾವಾರ್ಥದಾಯಕವಾಗಲಾರದು. 'ಕಡುಪು', 'ಬಲ್ಪು' ಎಂಬುದನ್ನೇ 'ಕಡುಪಿ', 'ಬಲ್ಪಿ' ಎಂದು ಹೇಳಿದರೆ ಇದರಿಂದ ಆ ವಿಶಿಷ್ಟ ಗುಣವಂತನಾದ ಮನುಷ್ಯನ ಬೋಧವಾಗುವಂತಿದೆ. ಕಡುಪನ್ನು ಉಳ್ಳವನು ಕಡುಪಿ; ಬಲ್ಪನ್ನು ಉಳ್ಳವನು ಬಲ್ಪಿ; ಅದರಂತೆ ನೋಂಪನ್ನು ಮಾಡುವವನು ನೋಂಪಿ ಎಂದೂ ಅರ್ಥಮಾಡಲು ಎಡೆಯಿದೆ. (ತಮಿಳಿನಲ್ಲಿ ನೋಂಪಿ ಎಂದರೆ ವ್ರತ.) 'ಅದನ್ನು ಮಾಡುವವ', 'ಆ ಗುಣವನ್ನು ಉಳ್ಳುದು' ಎಂಬರ್ಥದ 'ಇ' ಪ್ರತ್ಯಯವೊಂದು ಕನ್ನಡದಲ್ಲಿದೆ. ಕಳ್ಳನ್ನು (ಹಾಲು) ಉಳ್ಳುದು ಕಳ್ಳಿ; ಇದರಂತೆ ಬೆಳ್ಳಿ. ತಿನ್ನುವ ಸ್ವಭಾವವುಳ್ಳವನು ತಿನಿ. (ಉದಾ.—ಪೆಣದಿನಿ); ಉಣಿ, ಉಣ್ಣಿ, ಮುಂತಾದುವು ಈ ಬಗೆಯ ಉದಾಹರಣೆಗಳಾಗಿವೆ. 'ಪಿ' (ಪು + ಇ) ಪ್ರತ್ಯಯವು ಆ ಗುಣದ, ಆ ಭಾವದ ಮನುಷ್ಯನನ್ನು, ವಸ್ತುವನ್ನು ಹೇಳುವುದೊ ಎಂಬ ಸಂದೇಹವು ತಲೆದೋರುವಂತಿದ್ದುದರಿಂದಲೇ ಇದಕ್ಕೆ (ಪಿ, ಪ್ರತ್ಯಯಕ್ಕೆ) ಕನ್ನಡದಲ್ಲಿ ಭಾವಾರ್ಥದಲ್ಲಿ ಹೆಚ್ಚು ಇಂಬು ದೊರೆಯಲಿಲ್ಲವೆಂದು ತೋರುತ್ತದೆ.

**ಶಂ. ಬಾ. ಜೋಶಿ**

## ಶಾಸನಗಳಲ್ಲಿ ಪರಿಭಾಷೆ

ಕನ್ನಡ ಭಾಷೆಯ ಪುರಾತನ ವಾಙ್ಮಯವನ್ನು ವಿಚಾರಮಾಡುವಾಗ ಶಿಲಾ ಶಾಸನಗಳ ಮತ್ತು ತಾಮ್ರ ಶಾಸನಗಳ ಪ್ರಯೋಜನವು ಹೆಚ್ಚಾಗಿ ಕಂಡುಬರುವುದು. ಆದರೆ ಈ ಶಾಸನಗಳಲ್ಲಿ ಅನೇಕ ರಾಜಕೀಯ ಆರ್ಥಿಕ ನೈತಿಕ ಸಾಮಾಜಿಕ ಮತ್ತು ಧಾರ್ಮಿಕ ಸಂಬಂಧವಾದ ಶಬ್ದಗಳು ದೊರೆಯುವುವಾದರೂ ಅವುಗಳಲ್ಲಿ ಹಲವು ಪದಗಳ ಅರ್ಥವು ಸ್ಪಷ್ಟವಾಗಿ ಗೊತ್ತಾಗುವುದಿಲ್ಲ. ಕಿಟ್ಟೆಲ್‌ರವರ ಕೋಶದಲ್ಲಾಗಲಿ ಇನ್ನಾವ ಕೋಶದಲ್ಲಾಗಲಿ ಈ ಪದಗಳು ದೊರೆಯುವುದಿಲ್ಲ. ಈ ಶಾಸನಗಳನ್ನು ಮುದ್ರಿಸಿರುವವರು ಕೆಲವೆಡೆಗಳಲ್ಲಿ ಭಾಷಾಂತರವನ್ನು ಅಥವಾ ಟಿಪ್ಪಣಿಯನ್ನು ಕೊಟ್ಟಿರುವರು. ಆದರೆ ಅವುಗಳಲ್ಲಿಯೂ ಇಂತಹ ಪದಗಳಿಗೆ ಕೆಲವೆಡೆಯಲ್ಲಿ ಸಂದಿಗ್ಧವಾದ ಅರ್ಥವನ್ನು ಕಾಣಬಹುದು. ಕೆಲವೆಡೆಯಲ್ಲಿ ಅರ್ಥವನ್ನು ಕೊಡದೆಯೇ ಬಿಟ್ಟಿರುವರು. ಒಂದು ವೇಳೆ ಅಪರೂಪವಾಗಿ ಒಂದೆರಡು ಪದಗಳಿಗೆ ಅರ್ಥವನ್ನು ಕೊಟ್ಟಿದ್ದರೂ ಅದರ ಅನ್ವೇಷಣವು ಬಹು ಕಷ್ಟಸಾಧ್ಯವಾಗಿರುವುದು. ಇಂತಹ ಪದಗಳನ್ನು ಅಕಾರಾದಿಯಾಗಿ ವಿಂಗಡಿಸಿ ಅವು ಬರುವ ಸಂದರ್ಭವನ್ನು ಸೂಚಿಸಿ ಒಂದು ನಿರ್ದಿಷ್ಟವಾದ ಅರ್ಥವನ್ನು ಕೊಟ್ಟರೆ ಕನ್ನಡ ಸಾಹಿತ್ಯಕ್ಕೆ ಉಪಕಾರವಾಗಬಹುದು. ಈ ಪ್ರಬಂಧದಲ್ಲಿ ನಿದರ್ಶನಾರ್ಥವಾಗಿ ಕೆಲವು ಪದಗಳನ್ನೂ ಅವುಗಗಳಿಗೆ ಶಾಸನಗಳಲ್ಲಿ ಕಾಣುವ ಅರ್ಥವನ್ನೂ ಸರಿಯಾದ ಉದಾಹರಣೆಗಳೊಂದಿಗೆ ಕೊಟ್ಟಿರುತ್ತದೆ. ಕೀರ್ತಿಶೇಷರಾದ ಆರ್. ನರಸಿಂಹಾಚಾರ್ಯರು ಸಾಹಿತ್ಯ ದೃಷ್ಟಿಯಿಂದ ಶಾಸನಗಳಲ್ಲಿ ಉಪಯೋಗಿಸಿರುವ ಕೆಲವು ಪದ್ಯಗಳ ಸಂಗ್ರಹವನ್ನು ಮಾಡಿ ಅವುಗಳಲ್ಲಿ ಕಾಣುವ ಕ್ಲಿಷ್ಟ ಪದಗಳ ಅರ್ಥವನ್ನು ಟಿಪ್ಪಣಿಯಲ್ಲಿ ಕೊಟ್ಟು 'ಶಾಸನ ಪದ್ಯಮಂಜರಿ'ಯೆಂಬ ಗ್ರಂಥವನ್ನು ಪ್ರಕಟಿಸಿರುವರು. ಆದರೆ ಈ ಪ್ರಬಂಧದಲ್ಲಿ ಸೂಚಿಸಿರುವ ಪದಗಳು ಅವರು ಸಂಗ್ರಹಿಸಿರುವುದರಲ್ಲಿ ಪ್ರಾಯಶಃ ಅಡಕವಾಗಿಲ್ಲ. ಇವು ಶಾಸನಗಳ ಗದ್ಯರಚನೆಯಲ್ಲಿಯೇ ವಿಶೇಷವಾಗಿ ದೊರೆಯುವುವು. ಈ ವಿಧವಾದ ಸಂಗ್ರಹ ಕಾರ್ಯದಿಂದ ಕನ್ನಡಿಗರಿಗೆ ಸ್ವಲ್ಪ ಮಟ್ಟಿಗಾದರೂ ಪ್ರಯೋಜನವಾಗುವುದೆಂದು ನಂಬುತ್ತೇನೆ.

(1) **ಅಷ್ಟೈಶ್ವರ್ಯ.**—ಅಷ್ಟೈಶ್ವರ್ಯವೆಂದರೆ ಎಂಟು ವಿಧವಾದ ಅಧಿಕಾರದ ಲಕ್ಷಣಗಳು. ಇವುಗಳನ್ನೇ ಶಾಸನಗಳಲ್ಲಿ ತೇಜಸ್ಸಾಮ್ಯವೆಂದು ಕರೆದಿರುವಂತೆ ತೋರುತ್ತದೆ. ಇವುಗಳಾವುವೆಂದರೆ:—ಆಜ್ಞಾಶುಲ್ಕಂಚ ದಂಡಶ್ಚ ಮುದ್ರಾಕರಣಮೇವಚ । ಸೀಮಾನಿರ್ಣಯ ಕರ್ತೃತ್ವಂ ಪ್ರಜಾಭ್ಯೋಭಯ ರಕ್ಷಣಂ । ಯಥೇಷ್ಟಂಚ ಕರಾದಾನಂ ಕಾರು ಸಂಸ್ಥಾಪನಂ ತಥಾ ॥ ಎಂದರೆ (1) ಬೇಕಾದ ಆಜ್ಞೆಯನ್ನು ಮಾಡುವುದು, (2) ಸುಂಕವನ್ನು ಗೊತ್ತುಮಾಡುವುದು, (3) ದಂಡವನ್ನು ಅಂದರೆ ಜುರ್ಮಾನೆಯನ್ನು ವಿಧಿಸುವುದು, (4) ಮೊಹರನ್ನು ಉಪಯೋಗಿಸುವುದು, (5) ಗಡಿಗಳನ್ನು ನಿರ್ಣಯಿಸುವುದು, (6) ಪ್ರಜೆಗಳನ್ನು ನಿರ್ಭಯವಾಗಿ ಕಾಪಾಡುವುದು, (7) ತನ್ನ ಇಷ್ಟಾನುಸಾರವಾಗಿ ಕಂದಾಯವನ್ನು ತೆಗೆದುಕೊಳ್ಳುವುದು, (8) ಬೇಕಾದ ಶಿಲ್ಪಕಾರ್ಯವನ್ನು ಮಾಡಿಸಿಕೊಳ್ಳುವುದು. ಹೀಗೆ ಒಂದು

ತಾಮ್ರಶಾಸನದಲ್ಲಿ ಹೇಳಿದೆ. ['ಎಪಿಗ್ರಾಫಿಯ ಕರ್ಣಾಟಕ', 12ನೆಯ ಸಂಪುಟ, ಶಿರಾ ತಾಲ್ಲೋಕ್ 95ನೆಯ ನಂಬರಿನ ತಾಮ್ರ ಶಾಸನ. ಶೀಬೀ ಅಗ್ರಹಾರದ ಶಾಸನ, ಕಾಲ ಶಕ 1324 ಅಥವಾ ಕ್ರಿಸ್ತಾಬ್ದ 1403.]

(2) **ಅಷ್ಟಭೋಗ.**—ಅಷ್ಟಭೋಗವೆಂದರೆ ಎಂಟು ವಿಧವಾದ ಸ್ವತ್ತಿನ ಭೇದಗಳನ್ನು ಅನುಭವಿಸುವುದು. ಇವುಗಳನ್ನು ಸಾಮಾನ್ಯವಾಗಿ, ನಿಧಿ ನಿಕ್ಷೇಪ ಜಲ ಪಾಷಾಣ ಅಕ್ಷೀಣಿ ಆಗಾಮಿ ಸಿದ್ಧ ಸಾಧ್ಯಗಳೆಂಬುದಾಗಿ ಶಾಸನಗಳಲ್ಲೂ ಈಗಿನ ವ್ಯವಹಾರದಲ್ಲಿಯೂ ಕರೆದಿರುವರು. ಆದರೆ ಹಿಂದೆ ಹೇಳಿದ ತಾಮ್ರ ಶಾಸನದಲ್ಲಿ ಅಷ್ಟಭೋಗವೆಂಬ ಪದವನ್ನು ಗ್ರಾಮದ ಬೇರೆ ಬೇರೆ ಪ್ರದೇಶಗಳ ಸ್ವಾಮ್ಯವೆಂಬುದಾಗಿ ವಿವರಿಸಿದೆ. ಈ ಅಷ್ಟಭೋಗಗಳಾವುವೆಂದರೆ:—ಮಂದಿರಂ ದ್ವಿವಿಧಂ ಕ್ಷೇತ್ರಂ ಗೋಷ್ಠಂಚ ವನಮೇವಚ। ಖಿಲೀಭೂತಂಚಯತ್ ಕ್ಷೇತ್ರಂ ಮೃಗಹಿಂಸಸ್ತ ಥೈವಚ। ನದೀ ಪರ್ವತ ಭೋಗಾಶ್ಚ ಅಷ್ಟಭೋಗಾಃ ಪ್ರಕೀರ್ತಿತಾಃ ॥ (1) ಮನೆ, (2) ತರೀ ಬೆದ್ದಲು ಭೂಮಿಗಳು, (3) ದನದ ರೊಪ್ಪಗಳು, (4) ಅರಣ್ಯ, (5) ಪಾಳು ಭೂಮಿ, (6) ಕಾಡುಮೃಗಗಳ ಸ್ಥಾನ, (7) ನದಿಯ ಬಯಲು, (8) ಬೆಟ್ಟದ ಸಾಲಿನ ಸ್ಥಳ.

ಇದೇ ಶಾಸನದಲ್ಲಿ ಮುಂದೆ ಈ ಅಷ್ಟ ಐಶ್ವರ್ಯಗಳಿಂದಲೂ ಅಷ್ಟಭೋಗಗಳಿಂದಲೂ ಸಹಿತವಾಗಿ ಗ್ರಾಮಗಳನ್ನು ದಾನ ಮಾಡಬೇಕೆಂದು ವಿಧಿಸಿದೆ.

(3) **ಕಿಱುಕುಳ.**—ಹಲವು ಸಣ್ಣ ಸಣ್ಣ ತೆರಿಗೆಗಳ ಸಮುದಾಯಕ್ಕೆ ಈ ಹೆಸರು. ಆದರೆ ಒಟ್ಟಾಗಿ ಇವುಗಳಿಂದ ತೊಂದರೆಯುಂಟಾಗುವುದರಿಂದ ಕಿರುಕುಳವೆಂದರೆ ಪದೇ ಪದೇ ಹಿಂಸೆ ಕೊಡುವುದೆಂಬ ಅರ್ಥವು ವಾಡಿಕೆಯಲ್ಲಿ ಬಂದಿದೆ.

ಚಾಲುಕ್ಯರಾಜರ ಆಳಿಕೆಯ ಕಾಲದಲ್ಲಿ ಬನವಾಸಿಯ ವಡ್ಡರಾವುಳದ ಸುಂಕದಧಿಷ್ಠಾಯಕ ದಣ್ಡನಾಯಕ ಮಾದಿರಾಜನು ಬೇಗೂರ ವಿಷ್ಣುದೇವರ್ಗ್ಗೆ ಆ ಗ್ರಾಮದ ಅಡಕೆಯ ವಡ್ಡರಾವುಳದ ಸುಂಕದೊಳಗೆ ಮೂ. . . . ಲಕ್ಕಡಕೆಯ ಸುಂಕಮುನುಂ ಮತ್ತಂ ತಮಗೆ ನಡೆವ ಕಿಱುಕುಳ ಸುಂಕದೊಳಗೆ ಬಿಲ್ಕಡೆಯ ಎಲೆಯ ಪೇಱಂಗೆ ದಸವನ್ದಮುಮಂ ಬಿಟ್ಟನೆಂದು ಹೇಳಿದೆ. [ಎ.ಕ. 7, ಶಿಕಾರಿಪುರ 13, ಕಾಲ ಸುಮಾರು 1096 ಕ್ರಿಸ್ತಾಬ್ದ.] ಬಲ್ಲಾಳದೇವನ ಮಹಾ ಪ್ರಧಾನ ಹೆಗ್ಗಡೆ ಬೂಚಿಮಯ್ಯ ಏಳುನಾಡಧಿಕಾರವಂ ಮಾಡುವಲ್ಲಿಯಾನಾಡೊಳಗಣ . . . . ಹನ್ನೆರಡೂರಲು ಹಳ್ಳಿಗಳಲುಂ ಕಾಣಿಕೆಯುಗ್ರಾಣ ಪರಿಧಾನ ಬೆಡುಂಗೊಳು ಚಳಾಯದಾಯದೆಱೆ ಹಡುವರ ಬೀರವಣ ನಲ್ಲೆತ್ತು ನಲುಗಂಟ ನಲ್ಲೆಮ್ಮೆ ದಂಡಾಯ ತವುಡೆಯೊಳಗಾದ ಸಮಸ್ತ ಕಿಱುಕುಳವೆಲ್ಲವಂ ಬೇಲೂರ ಕೇಶವ ದೇವರಿಗೆ ದಾನವಾಗಿ ಬಿಟ್ಟನೆಂದು ಹೇಳಿದೆ. [ಎ.ಕ. 5, ಬೇಲೂರ್ 59, ಬೇಲೂರು ಸ್ಥಳದ ಶಿಲಾ ಶಾಸನ, ಕಾಲ 1174 ಕ್ರಿ.ಶ.] ಇದರಲ್ಲಿ ಕಿಱುಕುಳದ ಬೇರೆ ಬೇರೆ ತೆರಿಗೆಗಳು ಉಕ್ತವಾಗಿವೆ. ಪರಿಧಾನವೆಂದರೆ ವಸ್ತ್ರದಮೇಲಿನ ಸುಂಕ. ಬೆಡುಂಗೊಳು ಎಂದರೆ ಸಮ್ಮತಿಯನ್ನು ತೆಗೆದುಕೊಂಡು ಚಂದಾ ವಸೂಲ್ಮಾಡುವುದು. ಚಳಾಯವೆಂದರೆ ಚರಸ್ವತ್ತಿನ ಮೇಲಣ ತೆರಿಗೆ. ದಾಯದೆಱೆ ಎಂದರೆ ಸ್ಥಿರಸ್ವತ್ತಿನ ಬಾಧ್ಯತೆಗಳ ಮೇಲಣ ತೆರಿಗೆ. ಕಿಱುಕುಳವನ್ನು ಇತರ ತೆರಿಗೆಗಳೊಂದಿಗೆ ಅನೇಕ

ಶಾಸನಗಳಲ್ಲಿ ಕೊಟ್ಟಿರುವರು. [ಎ.ಕ. 4, ನಾಗಮಂಗಲ 38 : ಎ. ಕ. 2, ಶ್ರವಣ ಬೆಳ್ಗೊಳ 347 (ಹೊಸದು).]

(4) **ಕೀೞ್ಗುಣ್ಣೆ.**—ಮಹಾರಾಜನಾಗಲಿ ಅಥವಾ ಇತರ ಶ್ರೀಮಂತರಾಗಲಿ ಸತ್ತಾಗ ಅವರ ಆಶ್ರಿತ ವರ್ಗದವರಲ್ಲಿ ಕೆಲವರು ತಾವೂ ಪ್ರಾಣವನ್ನು ಕಳೆದು ಕೊಂಡು ತಮ್ಮ ಯಜಮಾನನನ್ನು ಹೂಳಿದ ಸಮಾಧಿಯಲ್ಲಿ ಅವನ ದೇಹದ ಕೆಳಗೆ ಹೂಳಲ್ಪಡುತ್ತಿದ್ದರು. ಅಥವಾ ಅವನ ದೇಹವನ್ನು ಸಂಸ್ಕರಿಸಿದ ಸ್ಥಳದಲ್ಲಿ ಹೂಳಲ್ಪಡುತ್ತಿದ್ದರು ಅಥವಾ ಸುಡಲ್ಪಡುತ್ತಿದ್ದರು. ಇದಕ್ಕೆ ಕೀೞ್ಗುಣ್ಣೆ (ಕೀೞ್-ಕೆಳಗೆ, ಕುಣ್ಣೆ=ಕುಳಿ) ಎಂದು ಹೆಸರು. [ಎ.ಕ. 11, ಇಂಗ್ಲಿಷ್ ಭಾಷಾಂತರದ 73ನೆಯ ಪುಟದ ಕೆಳಗಿನ ರೈಸ್ ಸಾಹೇಬರ ಟಿಪ್ಪಣಿಯನ್ನು ನೋಡುವುದು.]

ಗಂಗರಾಜನಾದ ನೀತಿಮಾರ್ಗನು ಸತ್ತಾಗ "ಪೆರ್ಮ್ಮಾನಡಿಗಳ (ಅಂದರೆ ದೊರೆಯ) ಮನೆಮುಗತ್ತಿನ್ ಅಗರಯ್ಯಂ ನೀತಿಮಾರ್ಗ್ಗ ಪೆರ್ಮ್ಮನಡಿಗೆ ಕೀೞ್ಗುಣ್ಣೆಯಾದಂ ಪೆರ್ಮ್ಮನಡಿಗಳ ಸುಪುತ್ರ ಸತ್ಯವಾಕ್ಯ ಪೆರ್ಮ್ಮನಡಿಗಳ್ಗುೞ್ಚ ವೀದಿಯ ಕಲ್ನಾಡು ಕೊಟ್ಟದು ಕಪ್ಪಹಳ್ಳಿ." ಈ ಶಾಸನದಮೇಲೆ ದೊರೆಯು ಸತ್ತಿರುವುದನ್ನೂ ಅಗರಯ್ಯನು ಕಠಾರಿಯಿಂದ ತನ್ನ ಹೊಟ್ಟೆಯನ್ನು ಬಗಿದು ಕೊಳ್ಳಲು ಸಿದ್ಧವಾದುದನ್ನೂ ತೋರಿಸುವ ಚಿತ್ರವಿದೆ. ಇದು ದೊಡ್ಡಹುಂಡಿ ಯೆಂಬ ಗ್ರಾಮದಲ್ಲಿರುವುದು. [ಎ.ಕ. 3, ಟಿ. ನರಶೀಪುರ 91, ಕಾಲ ಸುಮಾರು 921 ಕ್ರಿ.ಶ., ಶಾಸನವನ್ನೂ ಚಿತ್ರವನ್ನೂ ಅದೇ ಸಂಪುಟದ 165ನೆಯ ಪುಟದಲ್ಲಿ ಕೊಟ್ಟಿರುತ್ತದೆ.] ಹೀಗೆಯೇ ನಂದಿಗುಡಿ ಗ್ರಾಮದ ಒಂದು ಶಿಲಾ ಶಾಸನದಲ್ಲಿ ಗಂಗವಂಶೋದ್ಭವನಾದ ಚಂದಿ ಎಂಬವನು ಸತ್ತಾಗ ಆತನ ಬೇಳವಡಿಚ ಅಲ್ಲಿಗಂ ಕೀೞ್ಗುಣ್ಣೆಯಾಗಿ ಸ[ಗ್ಗಪ್ರಾ]ಪ್ತನಾದನೆಂದು ಬರೆದಿದೆ. ಇದರ ಕಾಲ ಶಕ 852 ಅಂದರೆ 930 ಕ್ರಿ.ಶ. [ಎ.ಕ. 11, ದಾವಣಗೆರೆ 119.] ಧಾರವಾಡ ಡಿಸ್ಟ್ರಿಕ್ಟು ಮುಂಡರ್ಗಿಪೇಠೆಯ ಮೇವುಂಡಿಗ್ರಾಮದ ಬಸವಣ್ಣನ ಗುಡಿಯ ಶಾಸನದಲ್ಲಿ ಬೇಳವಡಿಚನೊಬ್ಬನು ಅರಸನಿಗೆ ಅವಸಾನಕಾಲ ಬಂದ ಸುದ್ದಿಯನ್ನು ಕೇಳಿ ಕೂಳನ್ನು ಬಿಟ್ಟು ಮೂವತ್ತು ಗಾವುದ ಪ್ರಯಾಣಮಾಡಿ "ಅರಸನಂ ಜಾಮಿಸಿ ನುರಿವುತ್ತಿೞ್ದುದಂ ಕಣ್ದು ಕೀೞ್ಗುಣ್ಣೆಯಾಗಲ್ಕುಡದುದಮಂ ಕುಡುವೆನೆನ್ದು ಪಿಡಿ ಖಣ್ಬಂಗೊಣ್ದು ದೆಸೆವಲಿಗೆಱಿಪೊೞ್ದು...." ಎಂದು ಹೇಳಿರುವುದು. [ದಕ್ಷಿಣ ಇಂಡಿಯದ ಶಾಸನಗಳು, 11ನೆಯ ಸಂಪುಟ, 1ನೆಯ ಭಾಗ, ಬೊಂಬಾಯ್-ಕರ್ಣಾಟಕ ಪ್ರಾಂತದ ಶಾಸನಗಳು, ಪುಟ 8.]

ಮೇಲಿನ ಶಾಸನದಲ್ಲಿ ವೇಳೆಯೆಂದರೆ ಪ್ರತಿಜ್ಞೆ. ವೇಳೆವಾಳಿಯೆಂದರೆ ಪ್ರತಿಜ್ಞೆ ಯನ್ನು ನಡೆಸುವುದು. ವೇಳೆವಡಿಚ ಅಥವಾ ಬೇಳವಡಿಚನೆಂದರೆ ಮಾಡಿದ ಪ್ರತಿಜ್ಞೆಯನ್ನು ನಡೆಸುವವನು. ಮೇಲೆ ಹೇಳಿದ ಆಶ್ರಿತರು ತಮ್ಮ ಯಜಮಾನ ನೊಂದಿಗೆ ತಾವೂ ಸಾಯುವೆವೆಂದು ಮೊದಲೇ ಪ್ರತಿಜ್ಞೆಯನ್ನು ಮಾಡಿದ್ದರು. ಮೇವುಂಡಿಯ ಶಾಸನದಲ್ಲಿ "ತನ್ನನಾಳ್ದಾತ ಸಯೆ ಬಾಟನ್" ಎನ್ನುವ ಬಿರುದು ಕಾಣಬರುವುದು. ಇಂತಹ ಆಶ್ರಿತರಿಗೆ ಗರುಡರೆಂದೂ ಕೆಲವು ಶಾಸನಗಳಲ್ಲಿ ಕರೆದಿರು ವರು. [ಎ.ಕ. 5, ಬೇಲೂರ್ 112, ಕಾಲ ಸುಮಾರು 1220 ಕ್ರಿ.ಶ.] "ತಲೆ

ಗೊಟ್ಟಂ ವೇಳೆವಾಳಿಗುರ್ವ್ವರೆ ಪ್ರೊಗಳಲ್" ಎಂದು "ಮಹಾಮಂಡಳೇಶ್ವರ ಪಿರಿಯರಸಿ ಲಚ್ಚಲದೇವಿಯರು ಸ್ವರ್ಗ್ಗಸ್ಥರಾಗಲಾ ದೇವಿಯರೊಡಸಾವೆನೆನ್ದು ಮುನ್ನುಡಿದ ಭಾಷೆಯ ನೆಱಪಿ ಸತ್ತ ಜೋಕ"ನನ್ನು ವರ್ಣಿಸಿರುವರು. [ಎ.ಕ. 7, ಶಿಕಾರಿಪುರ 249: ಎ.ಕ. 6, ಚಿಕ್ಕಮಗಳೂರು 70ನೆಯ ಶಾಸನದಲ್ಲಿಯೂ ಇದರ ದೃಷ್ಟಾಂತವಿರುವುದು.]

ತಮ್ಮ ಯಜಮಾನನು ಅನ್ನಕೊಟ್ಟು ಸಲಹಿದುದರ ರುಣವನ್ನು ತೀರಿಸುವುದಕ್ಕಾಗಿ ತಮ್ಮ ಜೀವದ ಮೇಲಣಾಶೆಯನ್ನೂ ತೊರೆದು ಕಾದಿ ಸತ್ತ ಭಟರನ್ನು ಹಲವು ಶಾಸನಗಳಲ್ಲಿ ವರ್ಣಿಸಿರುವರು. ತ್ರಿಭುವನಮಲ್ಲ ಪೊಯ್ಸಳ ಬಿಟ್ಟಿದೇವನ ಸೈನಿಕನಾದ ಬಾಸಯನು ತಳಕಾಡ ಯುದ್ಧದಲ್ಲಿ ತನ್ನ ಯಜಮಾನನ ಅಪ್ಪಣೆಯಂತೆ ಆನೆಯೊಂದಿಗೆ ಕಾದಿ "ಕಾಲಾಳಿರ್ಪರನಿಱಿದು ಜೋಳವಾಳಿಯ ನೆಱಿದ ಬಾಸಿ" ಯೆಂದು ಅಂಗಡಿಯ ಗ್ರಾಮದ ವೀರಗಲ್ಲಿನಲ್ಲಿ ಬರೆದಿರುವುದು. ಇಲ್ಲಿ ಜೋಳವಾಳಿಯೆಂದರೆ ಅನ್ನದ ರುಣವನ್ನು ತೀರಿಸುವುದು ಎಂದು ಕಾಣುವುದು. [ಮೈಸೂರು ಶಾಸನದ ಇಲಾಖೆಯ ರಿಪೋರ್ಟು 1934, ಪುಟ 98.]

(5) **ಕುಳವ ಕಡಿದು.**—ಕುಳವೆಂದರೆ ತೆರಿಗೆ, ಕಡಿದು ಎಂದರೆ ಪರಿಹಾರ ಮಾಡಿ. ಕುಳವ ಕಡಿದು ಎಂದರೆ ತೆರಿಗೆಯನ್ನು ತೆಗೆದುಹಾಕಿ ಎಂದು ಅರ್ಥವಾಗುವುದು.

"ವೀರನಾರಸಿಂಹ ದೇವರ ಪಾದಪದ್ಮೋಪಜೀವಿ ಅಮಿತಯ್ಯ ದಣ್ಣಾಯಕರು .... ಆ ಸಿವರ ಅದಱ ಹಳ್ಳಿಗಳು ಕಾಳಮಾರನಹಳ್ಳಿ .... ಈ ಹಳ್ಳಿಗಳ ಪೂರ್ವದ ಕುಳವ ಕಡಿಸಿ ಸರ್ವ್ವಬಾಧೆ ಪರಿಹಾರವಾಗಿ.... ಆ ಮಹಾಜನಂಗಳಿಗೆ.... ಧಾರಾಪೂರ್ವ್ವಕಂ ಮಾಡಿಕೊಟ್ಟರು"— ಎಂದು ಶಿವರ ಗ್ರಾಮದ ಶಾಸನದಲ್ಲಿ ಹೇಳಿದೆ [ಎ.ಕ. 5, ಚೆನ್ನರಾಯ ಪಟ್ಟಣ 197, ಇದರ ಕಾಲ 1223 ಕ್ರಿ.ಶ.] "ಮಹಾವಡ್ಡವ್ಯವಹಾರಿ ಕಂಡ ನಂಬಿ ಸೆಟ್ಟಿಯರು ಹೊಸವೂರನಗ್ರಹಾರ ಮಾಡಲುಂ ಶ್ರೀಕುಂಜೇಶ್ವರ ದೇವರ ಅಮೃತಪಡಿಗೋಸುಗಂ ದೇವರಿಗೆ ಹೊದಕೆಯ ತೆತ್ತು ಕುಳವ ಕಡಿಸಿ ಕಲ್ಲೆಯ ನಾಯಕನ ಹಳ್ಳಿಯನ್ನು ಕೊಟ್ಟ"ನೆಂದು ಹಿರಿಯೂರಿನ ಕುಂಜೇಶ್ವರ ದೇವಸ್ಥಾನದ ಶಿಲಾ ಶಾಸನದಲ್ಲಿ ಹೇಳಿದೆ. [ಅರಸೀಕೆರೆ 109, ಕಾಲ 1259 ಕ್ರಿ.ಶ.] ಈ ಪದವನ್ನು ಹಾಸನ 16, ಬೇಲೂರು 18, 92 ; ಎ. ಕ. 9, ದೇವನಹಳ್ಳಿ 60—ಈ ಶಾಸನಗಳಲ್ಲೂ ಕಾಣಬಹುದು.

(6) **ಕೆಱೆಯ ಭಂಡಿ.**—ಕೆಱೆಯ ಭಂಡಿಯೆಂದರೆ ಕೆರೆಗೆ ಅಥವಾ ಕೆರೆಯಿಂದ ಮಣ್ಣನ್ನು ಸಾಗಿಸಲು ಉಪಯೋಗಿಸುತ್ತಿದ್ದ ಭಂಡಿಗಳಿಗೆ ಹೆಸರು. ಹೀಗೆ ಸಾಗಿಸುವುದು ಕೆರೆಯ ಸರಿಯಾದ ಸ್ಥಿತಿಗೆ ಅತ್ಯಾವಶ್ಯಕವಾಗಿದ್ದುದರಿಂದ 'ಕೆಱೆಯ ಭಂಡಿ'ಗಾಗಿ ಒಂದು ಜಮೀನನ್ನು ಬಿಟ್ಟುಕೊಡುತ್ತಿದ್ದರು.

ವಿಜಯನಗರದ ಕೃಷ್ಣದೇವ ಮಹಾರಾಯರ ಕಾಲದಲ್ಲಿ "ಸಿವಂಣಪನಾಯಕರು ತಂಮ ತಂದೆಗೆ ಧರ್ಮವಾಗಬೇಕೆಂದು ಅಗರದ ಕೆಱೆಗೆ ಭಂಡಿ ನಡಉದಕ್ಕೆ ಕೊಟ್ಟ ಹೊಉ". [ಅಗರದ ಶಾಸನ ಎ.ಕ. 12, ಬೆಂಗಳೂರು 80, ಕಾಲ ಶಕ 1437.]

"ಕದರಯ್ಯನ ಮಗ ಮಸಣಯಗೆ ಕಾಮರೂರ ಕೆಱೆಯ ಬಣ್ಡಿಗೆ ಬಿಟ್ಟ

ಭೂಮಿಯ ಶಾಸನ". [ಮೈಸೂರು ಶಾಸನದ ಇಲಾಖೆಯ ರಿಪೋರ್ಟು 1926, ಪುಟ 53, ಮಾಯಿಸಮುದ್ರದ ಶಿಲಾ ಶಾಸನ.]

ಕೆಲ್ಲಂಗೆಱೆಯ ಮಹಾಜನಂಗಳು ಶಕ ವರುಷ ೧೨೮೮ರಲ್ಲಿ "ಕೆಱೆಯ ಭಂಡಿಯ ಕೋಣ ಆಳ ಜೀವಿತ ಹೆರೆಯ ಎಂಣ್ಣೆ ಹಾರೆ ಗುದ್ದಲಿ....ಮುಂತಾದುದಕ್ಕೆ ಕೊಟ್ಟ ಆದಾಯ ಮೂಲೆದಾರ ಪ್ರತಿ ತೆಱು ೧ಕ್ಕಂ ತಾರ ೨". [ಎ.ಕ. 5, ಅರಸೀಕೆರೆ116.] "ಕೆಱೆಯ ಭಂಡಿಗಳಿಗೆ ಆ ಬೆಳ್ಳೂರಲ್ಲಿ ಕೊಟ್ಟ ಗದ್ದೆ ಸ೩೬ನೂ ....ಆ ಬೆಳ್ಳೂರಅಲ್ಲಾಳ ಸಮುದ್ರವೊಳಗಾದ ಕೆಱೆಗಳ ಕೆಲ್ಸಕ್ಕೆ ಹೂಡುವ ಭಂಡಿಗಳ ಆಳ ಜೀವಿತ ವೊಳಗಾಯ್ತುಕ್ಕೆ ಆ ಮಹಾಜನಂಗಳು ಎಂದೆಂದಿಗೆಯೂ.... ನಡಿಸಿಕೊಡುವರು. [ಎ.ಕ. 4, ನಾಗಮಂಗಲ 39, ಕಾಲ 1271 ಕ್ರಿ.ಶ.]

ವಿಜಯನಗರದ ಕೃಷ್ಣರಾಯನ ಆಳಿಕೆಯಲ್ಲಿ ಕೆಂಚಸೋಮಣವೊಡೆಯರು ...."ಕೂಡ್ಲೂರ ಹಿರಿಯ ಕೆಱೆಯೂ ಖಿಲವಾಗಿಯಿರಲಾಗಿ....ಹೊಸಹಳ್ಳಿ ಗ್ರಾಮ ೧ ನೂ ಕೆಱೆಯ ಭಂಡಿಗೆ ಶಲವಾಗಿ ಧಾರೆಯನೆಱದು ಕೊಟ್ಟೆವಾಗಿ.... ಕೂಡಲೂರ ಕೆಱೆಗೆ ಬಂಡಿ ೪ ವೊಗೆಹಳ್ಳಿಯ ಕೆಱೆಗೆ ಬಂಡಿ ೨ ಉಭಯಂ ಬಂಡಿ ೬ನು ಇಕ್ಕಿ ವರುಷ ವರುಷಂ ಪ್ರತಿ ಕೆಱೆಗೆ ಮಂಣನೂ ಆಕಿ ಸುಖದಲ್ಲು ಅನುಭಯಸಿ ಬಹುದುಯೆಂದು ಕೊಟ್ಟ ಸಾಸನ". [ಎ.ಕ. 9, ಚನ್ನಪಟ್ಟಣ 156, ಶಕ 1435 ಹೊಟ್ಟಿಗನ ಹೊಸಹಳ್ಳಿ ಗ್ರಾಮದ ಶಿಲಾ ಶಾಸನ.]

(7) **ಕೊತ್ತಳಿ.**—ಬೇರೆ ಬೇರೆ ಕಸಬಿನವರ ಅಥವಾ ಕೈವಾಡದವರ ಸಂಘಕ್ಕೆ ಕೊತ್ತಳಿಯೆಂದು ಹೆಸರು. ಈ ಸಂಘದವರೆಲ್ಲರೂ ಅಥವಾ ಮುಖ್ಯಸ್ಥರು ಒಟ್ಟಾಗಿ ಸೇರಿ ವ್ಯವಹಾರವನ್ನು ನಡೆಸಿ ದಾನಧರ್ಮಾದಿಗಳನ್ನು ಮಾಡುತ್ತಿದ್ದರೆಂದು ಕಾಣಬರುವುದು.

"ಮತ್ತಂಖೇವಲೆಯ ಗಾವುಣ್ಡ ಮುಖ್ಯವಾಗಿ ಸಮಸ್ತಸಿಪ್ಪಿಗ ಗೊತ್ತಳಿಯೆಲ್ಲಂ (ಕುಸುವೇಶ್ವರ) ದೇವರ ಚೈತ್ರಪವಿತ್ರದ ಪರ್ವಕ್ಕೆ ಪ್ರತಿ ಸಂವತ್ಸರ ಒಕ್ಕಲಲೊನ್ದು ಪಣಮುಂ ಮದುವೆಯಾದಲ್ಲಿ ಮದವಣಿಗನವರಲ್ಲಿ ಒನ್ದು ಪಣ ಮದವಳಿಗೆ.... ಪಣಮುಮಂ ಕುಸುಂಬೆಯ ಹಣಮುಮಂ" ಕೊಟ್ಟರೆಂದು ಹೇಳಿದೆ. [ಎ.ಕ. 7, ಶಿಕಾರಿಪುರ 112, ಬೆಳಗಾಮಿ ಗ್ರಾಮದ ವಿರಕ್ತ ಮಠದ ಹೊಂಡದ ಏರಿಯ ಮೇಲಿರುವ ಕಲ್ಲು. ಕಾಲ 1139 ಕ್ರಿ.ಶ.]

"ತುಱುವಿನ ಬೀಡಿನ ಸಮಸ್ತ ಜಗತಿಗಳು....ನಾಗಬೋವ....ಕೇತಬೋವ ಇವರ್ಮೊದಲಾದ ಸಮಸ್ತ ಕೊತ್ತಳಿಗಳು ಜಗತೇಶ್ವರ ದೇವರ ಪೂಜಾ ನಿವೇದ್ಯಕ್ಕೆ....ಬೋವರಲೆಂಟು ಪಣ ಆ ದಂಡದಲು ಪಣವೆರಡು ಅಡಬಱೆಯಲು ಹಣವಡ...."ವನ್ನು ಕೊಟ್ಟರು. [ಎ.ಕ. 11, ದಾವಣಗೆರೆ 4, ಆನೆಕೊಂಡ ಗ್ರಾಮದ ಮರಡಿ ಬಸವನಗುಡಿಯ ಕಲ್ಲು, ಕಾಲ 1143 ಕ್ರಿ.ಶ.] ಹೀಗೆಯೇ ಮಾಲಗಾಱ ಕೊತ್ತಳಿ [ಶಿಕಾರಿಪುಱ 135], ತೆಲ್ಲಿಗರ ಕೊತ್ತಳಿಗಳು.... ಸೇಣಿಗರ ಕೊತ್ತಳಿಗಳು [ಉತ್ತರ ಕರ್ಣಾಟಕದ ಮತ್ತು ಕೊಲ್ಲಾಪುರದ ಶಾಸನಗಳು ನಂಬರ್ 14, ಕಾಲ ಕ್ರಿ.ಶ. 1176] ಮೊದಲಾದ ಪ್ರಯೋಗಗಳೂ ಕಂಡು ಬರುತ್ತವೆ.

(೪) **ಘಟಿಕಾಸ್ಥಾನ.**—ಘಟಿಕಾಸ್ಥಾನವೆಂದರೆ ವಿದ್ಯಾಪೀಠ ಅಥವಾ ಧರ್ಮ ಸಂಬಂಧಿಯಾದ ವಿದ್ಯೆಗಳ ಸ್ಥಾನವೆಂದು ಗೊತ್ತಾಗುತ್ತದೆ.

ಹೊಯ್ಸಳರ ರಾಜನಾದ ವಿನಯಾದಿತ್ಯನ ಕಾಲದಲ್ಲಿ ಧರ್ಮರಾಶಿ ಪ್ರತೀಶನ ಘಳಿಗೆ ಪೀಳಿಗೆಗೆ ನಿಂದರ್ ವಿಮಳಶಕ್ತಿ ಅವರ ಮಗ ರುದ್ರಶಕ್ತಿ....ಎಂದು ವರ್ಣಿತವಾಗಿದೆ. ಇಲ್ಲಿ ಘಳಿಗೆ ಪೀಳಿಗೆಯೆಂದರೆ ಆಚಾರ್ಯ ಪೀಠ ಅಥವಾ ಆಚಾರ್ಯಪರಂಪರೆಯೆಂದರ್ಥವು. [ಎ.ಕ. 5, ಅರಸೀಕೆರೆ 186, ಕುರಾದ ಹಳ್ಳಿಯ ಶಿಲಾ ಶಾಸನ, ಕಾಲ ಸುಮಾರು 1060 ಕ್ರಿ.ಶ] ಕುಂತಳ ದೇಶದಲ್ಲಿ ಕೇಳೀವನಗಳೂ ಪೊಂದೋಣಿಗಳೂ ಧರ್ಮ್ಮಕ್ಕೆ ನೆಮ್ಮಮುಂಭೋಗಕ್ಕಾಗರಮುಮಾದ ಘಟಿಕಾ ಸ್ಥಾನಮುಂ....ಮೆಱೆದುವೆಂದು ಹೇಳಿದೆ. ಇಲ್ಲಿ ಘಟಿಕಾಸ್ಥಾನವು ಧರ್ಮಕ್ಕೂ ಭೋಗಕ್ಕೂ ಆಶ್ರಯವಾದಂತೆ ವರ್ಣಿತವಾಗಿದೆ. [ಎ.ಕ. 7, ಷಿಕಾರಿಪುರ 197, ಚಿಕ್ಕಮಾಗಡಿಯ ಶಿಲಾಶಾಸನ, ಕಾಲ ಸುಮಾರು 1182 ಕ್ರಿ.ಶ.] ಕೊಲ್ಲಾಪುರದ ಮ್ಯೂಜಿಯಮ್ಮಿನಲ್ಲಿ ತಂದಿಟ್ಟಿರುವ ರಾಯಬಾಗ ಶಾಸನದಲ್ಲಿ ಹೂವಿನ ಬಾಗೆಯ ಗ್ರಾಮವನ್ನು ಮಹಾಘಟಿಕಾಸ್ಥಾನ ವಗ್ರಹಾರವೆಂದು ಕರೆದಿರುವರು [ಉತ್ತರ ಕರ್ಣಾಟಕದ ಮತ್ತು ಕೊಲ್ಲಾಪುರದ ಶಾಸನಗಳು ನಂಬರ್ 6, ಕಾಲ 1127 ಕ್ರಿ.ಶ.] ಕದಂಬಕುಲದ ಮಯೂರಶರ್ಮನು "ಯಃಪ್ರಯಾಯ ಪಲ್ಲವೇನ್ದ್ರಪುರೀಂ ಗುರುಣಾಸಮಂ ವೀರಶರ್ಮ್ಮಣಾ ಅಧಿಜಿಗಾಂಸುಃ ಪ್ರವಚನಂ ನಿಖಿಲ ಘಟಿಕಾಂ ವಿವೇಶಾಶುತರ್ಕ್ಕಕಃ" ಎಂದು ತಾಳಗುಂದದ ಪ್ರಣವೇಶ್ವರ ದೇವಸ್ಥಾನದ ಮುಂದೆ ನಟ್ಟ ಕಂಬದ ಶಾಸನದಲ್ಲಿ ಹೇಳಿದೆ. ಇಲ್ಲಿ ಘಟಿಕಾ ಎಂದರೆ ವಿದ್ಯೆಯನ್ನು ಹೇಳುವ ಪಾಠಶಾಲೆಯೆಂದರ್ಥವು. [ಎ.ಕ. 7, ಶಿಕಾರಿಪುರ 176, ಕಾಲ ಸುಮಾರು 450 ಕ್ರಿ.ಶ.] ಆದರೆ ರೈಸ್ ಸಾಹೇಬರು ತಮ್ಮ ಭಾಷಾಂತರದಲ್ಲಿ ಘಟಿಕಾ ಎನ್ನುವುದಕ್ಕೆ ಧರ್ಮಪೀಠಗಳೆಂದು (Religious centres) ಅರ್ಥಮಾಡಿರುವರು ('ಟ್ರಾನ್ಸ್ ಲೇಷನ್', ಪುಟ 113).* ಘಳಿಗೆಯ ಮಾಣಿಗಳ್ನಾಲ್ವರ್ಗವೆಂಟು ಮತ್ತರ್ [ದಕ್ಷಿಣ ಇಂಡಿಯ ಶಾಸನಗಳು, ಸಂಪುಟ 9, ಮೊದಲನೆಯ ಭಾಗ, ನಂಬರ್ 101] ಎಂದು ಒಂದು ಶಾಸನದಲ್ಲಿ ಹೇಳಿದೆ.

ಘಟಿಕೆಯೆನ್ನುವ ಪದದಿಂದ ಘಟಿಕಾಸಾಹಸ ಎಂದರೆ ಧರ್ಮಬೋಧನೆಯಲ್ಲಿ ಅಥವಾ ಧರ್ಮಶಾಸ್ತ್ರ ಪ್ರವಚನದಲ್ಲಿ ನಿಪುಣನೆಂಬರ್ಥವುಳ್ಳ ಪದವು ನಿಷ್ಪನ್ನ ವಾಗಿದೆ. ಗಂಗರಾಜನಾದ ಶಿವಮಾರನ ತಾಮ್ರ ಶಾಸನದಲ್ಲಿ ದತ್ತಿಯನ್ನು ಪಡೆದ ಬ್ರಾಹ್ಮಣನೊಬ್ಬನನ್ನು 'ಘಟಿಕಾಸಾಹಸಾಯ ಹಾರೀತಸಗೋತ್ರಾಯ ಮಾಧವ ಶರ್ಮಣೇ' ಎಂದು ಕರೆದಿರುವರು. [ಹಳ್ಳಗೆರೆಯ ತಾಮ್ರ ಶಾಸನ, ಕಾಲ ಸುಮಾರು 713 ಕ್ರಿ.ಶ., ಎ.ಕ. 3, ಮಂಡ್ಯ 113.] ಘಳಿಸಾಸ ಅಥವಾ ಘೈಸಾಸವೆಂಬುದು ಘಟಿಕಾಸಾಹಸದ ತದ್ಭವವು. ಶ್ರೀರಾಮ ಘಳಿಸಾಸರ ಗದ್ದೆ....ತಾರ್ಕಿಕ ರಾಘವ ಭಟ್ಟರ ವೃತ್ತಿ ೨, ಸಾಮವೇದಿ ಪದ್ಮನಾಭಭಟ್ಟೋಪಾಧ್ಯಾಯರ ವೃತ್ತಿ ೧, ತಂಮ ಮಾಧವ ಘಳಿಸರ ವೃತ್ತಿ ೧. [ಎ.ಕ. 7, ಶಿಕಾರಿಪುರ 235, ಬಂದಲಿಕೆ ಗ್ರಾಮದ

* ಕೀಲ್‌ಹಾರನ್‌ರವರು ಈ ಪದಕ್ಕೆ "Establishment for holy and learned men probably founded by a king" ಎಂದು ಅರ್ಥ ಮಾಡಿರುವರು. (ಎಪಿಗ್ರಾಫಿಯಾ ಇಂಡಿಕಾ, ಸ ಪುಟ 8. ಪುಟ 34.)

ಶಿಲಾ ಶಾಸನ, ಕಾಲ 1207 ಕ್ರಿ.ಶ.] ಘಟಿಗವಾದಿ ವಿಷ್ಣುದೇವನ ವೃತ್ತಿಯೆಂದೂ ಇದೇ ಶಾಸನದಲ್ಲಿ ಹೇಳಿದೆ.

(9) **ಚತುಸ್ಸಮಯ ಸಮುದ್ಧರಣ.**—ಎಂದರೆ ನಾಲ್ಕು ಸಮಯಗಳನ್ನು ಅಥವಾ ಮತಗಳನ್ನು ಕಾಪಾಡುವವನು. ಈ ಸಮಯಗಳು "ಮಾಹೇಶ್ವರ ಬೌದ್ಧ ವೈಷ್ಣವಾರು ಹತ ಚತುಸ್ಸಮಯ ಸಮುದ್ಧರಣ" ಮಹಾಸಾಮಂತ ಗೋವಿಯ ಶಾಸನದಲ್ಲಿ ಸ್ಪಷ್ಟೀಕೃತವಾಗಿವೆ. [ಎ.ಕ. 12, ಚಿಕ್ಕನಾಯಕನಹಳ್ಳಿ 14, ಕಾಲ ಶಕ 1109: ದೊಡ್ಡತೇಕಲ ವಟ್ಟದ ಶಿಲಾಶಾಸನ.]

ಈ ನಾಲ್ಕು ಮತಗಳಲ್ಲಿ ಬೌದ್ಧಮತದ ಕೆಲವು ಗುರುತುಗಳು ಬೆಳಗಾವಿಯಲ್ಲಿ 12ನೆಯ ಶತಮಾನದವರೆಗೂ ಉಪಲಬ್ಧವಾಗಿವೆಯೇ ಹೊರತು ಇನ್ನೆಲ್ಲೂ ವಿಶೇಷವಾಗಿ ದೊರೆಯುವುದಿಲ್ಲ. ಆದರೂ ಚತುಸ್ಸಮಯಸಮುದ್ಧರಣನೆಂಬ ಬಿರುದು ನಡೆದುಕೊಂಡುಹೋಗುತ್ತಿತ್ತು. ಶಾಂತರರ ರಾಜನಾದ ವೀರಶಾಂತರನಿಗೆ ಈ ಬಿರುದಿದ್ದಿತು. [ಎ.ಕ. 7, ಶಿಕಾರಿಪುರ 46, ಗೌಜ ಅಗ್ರಹಾರದ ಶಿಲಾ ಶಾಸನ, ಕಾಲ 1068 ಕ್ರಿ.ಶ.] ಚಾಳುಕ್ಯ ಸಾಮಂತನಾದ ವೀರನೊಣಂಬ ಜಗದೇಕಮಲ್ಲ ಮಲ್ಲಿದೇವ ಚೋಳಮಹಾರಾಜನು ರೊದ್ದವನ್ನೂ ಸೀರ್ಯವನ್ನೂ ಆಳುತ್ತಿದ್ದಾಗ "ಶಿವಚರಣ ಕಮಳಭ್ರಿಂಗನುಂ ಚತುಸ್ಸಮಯ ಸಮುದ್ಧರಣನುಮಪ್ಪಮಾಚಿಸೆಟ್ಟಿ ರಾಮೇಶ್ವರದೇವರ ವಿಷ್ಣುದೇವಗ್ಗೆ ಜೀರ್ಣೋದ್ಧಾರ ಮಾಡಿಸಿ"ದಂತೆ ಒಂದು ಶಾಸನದಲ್ಲಿ ಹೇಳಿರುವುದು [ಎ.ಕ. 11, ಚಳ್ಳಕೆರೆ 21, ಓಬಳಾಪುರದ ಸಿದ್ಧರಾಮೇಶ್ವರ ದೇವಸ್ಥಾನದ ಶಿಲಾ ಶಾಸನ, ಕಾಲ 1147 ಕ್ರಿ.ಶ.] ಚಾಲುಕ್ಯರಾಜನಾದ ಸೋಮೇಶ್ವರನ ಸಾಮಂತ ಮಂಗಯ್ಯನಾಯಕನು ಚತುಸ್ಸಮಯಾಧಾರಂ ಎಂದು ಕರೆಯಲ್ಪಟ್ಟಿರುವನು. [ಚಿತ್ರದುರ್ಗ 59, ಸಾದರಹಳ್ಳಿಯ ಶಿಲಾ ಶಾಸನ, ಕಾಲ ಸುಮಾರು 1100 ಕ್ರಿ.ಶ.] ಹೊಯ್ಸಳರ ರಾಜನಾದ ವಿಷ್ಣುವರ್ಧನನು 'ಶ್ರೀಮನ್ಮುಕುಂದಪಾದಾರವಿಂದ ವಂದನ ವಿನೋದನುಂ' ಎಂದು ಸ್ತುತನಾಗಿದ್ದರೂ ಚತುಸ್ಸಮಯ ಸಮುದ್ಧರಣನೆಂಬ ಬಿರಿದನ್ನು ಹೊಂದಿರುವನು. [ಎ.ಕ. 5, ಬೇಲೂರು 124, ಕಾಲ ಶಕ 1055] ಶ್ರವಣಬೆಳ್ಗೊಳದ ಶಾಸನ (ಹೊಸದು) ನಂಬರ್ 143, ಕಾಲ ಶಕ 1045.] ಈ ಮಹಾರಾಜನು ಶಕ 1047ರಲ್ಲಿ ಜೈನರ ಬಸದಿಗೆ ಶಲ್ಯ ಗ್ರಾಮವನ್ನು ದಾನವಾಗಿ ಕೊಟ್ಟಿರುವನೆಂದೂ ವಿಷ್ಣ್ವೀಶ್ವರ ವಿಜಯ ನಾರಾಯಣ ದೇವಸ್ಥಾನಗಳ ನಿರ್ಮಾಪಕನೆಂದೂ ಶಾಸನಗಳು ತಿಳಿಸುತ್ತವೆ. [ಚೆನ್ನರಾಯ ಪಟ್ಟಣ 149, ಎ.ಕ. 6, ಚಿಕ್ಕಮಗಳೂರು 160, ಕಾಲ ಸುಮಾರು ಕ್ರಿ.ಶ. 1137.]

ಈ ಚತುಸ್ಸಮಯಗಳಲ್ಲದೆ "ಬಣಂಜು ಸಮಯ ಮುಖ್ಯವಾದ" ಹದಿನೆಂಟು ಸಮಯಗಳ ಅಥವಾ ಧರ್ಮಗಳ ಸಂರಕ್ಷಕರ ಹೆಸರುಗಳನ್ನೂ ಶಾಸನಗಳಲ್ಲಿ ಹೇಳಿರುವರು. [ಎ. ಕ. 6, ಕಡೂರು 124, 125.]

(10) **ಧರಣ.**—ಇದು ಒಂದು ನಾಣ್ಯ. ಇದರ ಬೆಲೆ 5 ಹಣಗಳೆಂದು ಕೆಳಗಿನ ಶಾಸನದಿಂದ ಗೊತ್ತಾಗುತ್ತದೆ.

ಚಾಳುಕ್ಯ ತ್ರಿಭುವನಮಲ್ಲ ದೇವರ ಆಳಿಕೆಯಲ್ಲಿ ಅಚ್ಚುಪನ್ನಾಯದಧಿಷ್ಠಾಯಕ ಶ್ರೀಮತು ಬಮ್ಮರಸರು ತಮ್ಮ ಪನ್ನಾಯದಿಂದ ಬೇತೂರ

ಶಿವದೇವಾಲಯಕ್ಕೆ "ಧರಣಂ ತಿಂಗಳ್ಗೆ ಪರ್ಯ್ಯಾಯದೊಳೆ ಸಲಿಸುವನ್ತಾಗಿರಲ್ಮಾಡಿದಂ ಬಮ್ಮರಸಂ ಪನ್ನಾಯದೊಳ್ ಧರ್ಮ್ಮಮಂ...." ಎಂದು ಜೇತೂರು ಗ್ರಾಮದ ಸರ್ಪ್ಪದ ದಿಬ್ಬದ ಶಾಸನದಲ್ಲಿ ಹೇಳಿದೆ. ಅದೇ ಶಾಸನದಲ್ಲಿ ಮುಂದೆ ಶ್ರೀ ಸರ್ಪ್ಪೇಶ್ವರ ದೇವರಂಗ ಭೋಗ ಪ್ರದೀಪ ನಿವೇದ್ಯಕ್ಕವೆಂದು ಬಂಮರಸಂ ತನ್ನ ಪನ್ನಾಯದ ಸುಂಕದೊಳು ತಿಂಗಳಿಂಗಯ್ದು ಪಣಮಂ ಪರಮೇಶ್ವರ ದತ್ತಿಯಾಗಿ ಬಿಟ್ಟುಕೊಟ್ಟನೆಂದು ಹೇಳಿದೆ. [ಎ.ಕ. 11, ದಾವಣಗೆರೆ 12, ಕಾಲ 1109 ಕ್ರಿ.ಶ.]

ಕೆಲವು ನಾಣ್ಯಗಳ ಅಥವಾ ಅಳತೆಯ ಪರಿಮಾಣಗಳ ಹೆಸರುಗಳನ್ನು ಇಲ್ಲಿ ಕೊಟ್ಟಿದೆ:—

**ತಾರ**ವೆನ್ನುವುದು ಒಂದು ನಾಣ್ಯ. [ಎ.ಕ. 5, ಅರಸೀಕೆರೆ 115, ದಕ್ಷಿಣ ಇಂಡಿಯದ ಶಾಸನಗಳು: 9ನೆಯ ಸಂಪುಟ, ಮೊದಲನೆಯ ಭಾಗ, ನಂಬರ್ 336ನೆಯ ಶಾಸನ, ಇತ್ಯಾದಿ.]

**ಸಿದ್ದೆ:** ಇದು ಒಂದು ಅಳತೆ; ಕಳಸನಾಥ ದೇವರಿಗೆ ಪ್ರತಿ ದಿನ ೧ಕ್ಕೆ ಗ್ರಾಮದ! ಎರಡು ಸಿದ್ದೇ ಲುಂಬಭಕ್ಷ್ಯ ಎರಡು ಸಿದ್ದೆ ಅಕ್ಕಿಯ ಉಪಾರ. [ಎ.ಕ. 6, ಮೂಡಗೆರೆ 52, ಕಾಲ 1370 ಕ್ರಿ.ಶ.]

**ಸೆಡೆ:** ಸೆಡೆಯೆನ್ನುವುದೂ ಹೀಗೆಯೇ. ಸೆಡೆಯಕ್ಕಿ. [ಎ.ಕ. 5, ಅರಸೀಕೆರೆ 71, ಕಾಲ 1173 ಕ್ರಿ.ಶ.] ತೆಲಿಗರು ಸೆಡೆಯುಂಬಿಟ್ಟರು. [ಬೇಲೂರ್ 176, ಶಕ 1084.]

**ಹಾಡ** ಅಥವಾ **ಹಾದ:** ಭೂಮಿಯ ಪ್ರಮಾಣದ ಅಳತೆ. "ವೈಜನಾಥ ಭಟ್ಟೋಪಾಧ್ಯಾಯರಿಗೆ ಜಸವಂತದಣ್ಣಾಯಕನು ಕೊಟ್ಟ ಭೂಮಿಹಾದವೆರಡು. [ಎ.ಕ. 8, ಸೊರಬ 135, ಕಾಲ 1217 ಕ್ರಿ.ಶ.]

**ಸಿನ್ನೆ:** ಇದೂ ಭೂಮಿಯ ಪ್ರಮಾಣವನ್ನು ತೋರಿಸುತ್ತದೆ. ವಿಠಯ್ಯಸೇನ ಬೋವನು ಧರ್ಮಕಾರ್ಯಕ್ಕೆ ಕೊಟ್ಟ ದೇವಸ್ವದ ವ್ರಿತ್ತಿಗಳಾವವೆಂದಡೆ। ಪಡಹಳ್ಳಿಯ ಹರಳಿಯ ಸಿಂನೆ ೧.... ಬಸುಗಾರವರು ಕೊಟ್ಟದು ಕಳವೆಗಾರಲ್ಲಿ ಸಿಂನೆ ೧.... [ಎ.ಕ. 8, ಸಾಗರ 99, ಶಕ 1220. ಹೀಗೆಯೇ ಸಾಗರ 62ರಲ್ಲೂ ಈ ಪದದ ಪ್ರಯೋಗವಿದೆ.]

**ಸಿವನೆ:** ಇದೂ ಭೂಮಿಯ ಪ್ರಮಾಣದ ಪದವೇ. ವೀರನಾದ ಜೊಂಮೆಯ ನಾಯಕನು ಯುದ್ಧದಲ್ಲಿ ಸತ್ತುದಕ್ಕಾಗಿ "ವೊಂದು ಸಿವನೆಕೆಯಿ ಜೊಂಮ್ಮೆಯ [ನಾಯ]ಕಂಗೆ ವುಂಬಳಿಯಾಗಿ ಬೀರರ್‍ಸಕೊಟ್ಟದು". [ಸಾಗರ 78, ಕಾಲ 1265 ಕ್ರಿ.ಶ.] ಈ ಪದವು ಸಾಗರ 80, 84, 86, 159ರಲ್ಲೂ ಕಾಣುವುದು. ನಗರದ ತಾಲ್ಲೋಕು ಪುಣಜಿ ಗ್ರಾಮದ ಶಿಲಾ ಶಾಸನದಲ್ಲೂ ಈ ಪದದ ಪ್ರಯೋಗ ವಿರುವುದು. [ಮೈಸೂರು ಶಾಸನದ ಇಲಾಖೆಯ ರಿಪೋರ್ಟು 1931, ಪುಟ 177, ಕಾಲ ಸುಮಾರು 1300 ಕ್ರಿ.ಶ.]

(11) **ಪತ್ತೊನ್ದಿ.**—ಹತ್ತರಲ್ಲೊಂದು ಭಾಗವೆಂಬ ಭಿನ್ನಾಂಶವನ್ನು ಈ ಪದವು ತೋರಿಸುತ್ತದೆ.

ಗಂಗರ ರಾಜನಾದ ಎರೆಯಪ್ಪರಸನ ಆಳಿಕೆಯಲ್ಲಿ ಗೋವಿನ್ದರಸರು "ಉತ್ತಮ

ಗಾವುಣ್ಡನಕೆಱೆಗೆ ಕೊಟ್ಟ ಸ್ಥಿತಿ. . . . ಪತ್ತೊನ್ದಿಯಕೋರು. . . .'' ಎಂದು ಹೇಳಿರುವುದು. [ಎ.ಕ. 5, ಚೆನ್ನರಾಯಪಟ್ಟಣ 251, ಬಸವಾಪುರದ ಕಲ್ಲು, ಕಾಲ ಸುಮಾರು 925 ಕ್ರಿ.ಶ.] ಸತ್ಯವಾಕ್ಯ ಪೆರ್ಮಾನಡಿಗಳ ಆಳಿಕೆಯಲ್ಲಿ ಅಣ್ಣಯ್ಯನುಂ ದೇವಕೊಮಾರನುಂ ಥೋರನುಮಿಬ್ಬಾರರಪೆ ಬಾಣನಪಳ್ಳಿಯ. . . . ಕಟ್ಟ ಕಟ್ಟುವುದರ್ಕ್ಕೆ ಕೊಟ್ಟ ಸ್ಥಿತಿ ಕ್ರಮವೆನ್ತುವೆನ್ದೊಡೆ ಒನ್ದರಣಿಯ ನೀರಬಯುಗಿದವರಿಸ ಪತ್ತೊನ್ದಿ ಎರಡನೆಯ ವರಿಷಮೇೞಳವಿ ಮೂಱನೆಯ ವರಿಷದನ್ದಿಗೆ ಅಯ್ದುಳವಿ ಎಲ್ಲಾ ಕಾಲಕ್ಕಂ ಎಲ್ಲಿಬ್ಬುೞಲುಸಲ್ಗುಂ—ಕಟ್ಟೆಯನ್ನು ಕಟ್ಟುವುದಕ್ಕಾಗಿ ಮೊದಲನೆಯ ವರ್ಷ ಬೆಳೆಯ ಹತ್ತರಲ್ಲೊಂದು ಭಾಗ ಕಂದಾಯವನ್ನೂ ಎರಡನೆಯ ವರ್ಷ ಏಳರಲ್ಲೊಂದು ಪಾಲನ್ನೂ ಮೂರನೆಯ ವರ್ಷ ಐದರಲ್ಲೊಂದು ಪಾಲನ್ನೂ ತೆಗೆದುಕೊಂಡರೆಂದು ಹೇಳಿದೆ. [ಎ. ಕ. 3, ಶ್ರೀರಂಗಪಟ್ಟಣ 148, ರಾಂಪುರದ ಶಾಸನ, ಕಾಲ ಸುಮಾರು 904 ಕ್ರಿ.ಶ.] ನಂಜನಗೂಡು ತಾಲ್ಲೂಕು ಸುತ್ತೂರು ಗ್ರಾಮದ ಸೋಮೇಶ್ವರ ದೇವಸ್ಥಾನದ ಶಿಲಾ ಶಾಸನದಲ್ಲಿ "ದೇವರ್ಗ್ಗೆ ನನ್ದನವನಂ ಮಾೞ್ಪುದಕ್ಕೆ ಮಹಾದೇವರ ದೇವರು. . . . ಪತ್ತಱಲೊನ್ದುಕೋರು. . . .'' ಎಂದು ಹೇಳಿದೆ. [ಎ.ಕ. 3, ನಂಜನಗೂಡು 164, ಕಾಲ 1092 ಕ್ರಿ. ಶ.] ಪ್ರಾಚೀನಕಾಲದ ಹಲ್ಮಿಡಿಯ ಶಾಸನದಲ್ಲಿಯೂ ಈ ಪದವನ್ನು ಪ್ರಯೋಗಿಸಿದೆ. [ಮೈಸೂರು ಶಾಸನದ ಇಲಾಖೆಯ ವರದಿ 1936ನೆಯ ವರ್ಷದ್ದು; • ಪುಟ 73.] ಈ ಹತ್ತರಲೊಂದು ಎನ್ನುವುದಕ್ಕೆ ದಶವಂದವೆಂದು ಈಚಿನ ಶಾಸನಗಳಲ್ಲಿ ಪ್ರಯೋಗಿಸಿರುವರು. "ಹೇರಿನ ಸುಂಕದ **ದಶವಂದ**ಮುಮಂ ಬಿಟ್ಟಂ". [ಎ.ಕ. 4, ನಾಗಮಂಗಲ 70, ಕಾಲ 1178 ಕ್ರಿ.ಶ.] ರಣಾವಲೋಕ ಕಂಬಯ್ಯನು ಗಂಗರಾಜ್ಯವನ್ನಾಳುತ್ತಿದ್ದಾಗ "ಪೆರ್ಗ್ಗಡೆ ಗೌಡ ಶ್ರೀ ಪುಲಿ ಅಗಳಿ ಪನ್ನೆರಡು ಮಾಳೆ ಪಾೞಕೋಡಕೆಱೆಯುಂ **ಅಯ್ದೊನ್ದಿ** ಕಾಮು ಪತ್ತೊನ್ದಿ ಪ್ರಸಾದಂಗೆಯ್ದೊರ್'' ಎಂದು ಮುಳಬಾಗಿಲು ತಾಲ್ಲೋಕು ಮೇಲಾಗಾಣಿಯ ಶಾಸನದಲ್ಲಿ ಹೇಳಿರುವುದು. ಅಲ್ಲಿ ಅಯ್ದೊನ್ದಿ ಎನ್ನುವುದು ಐದರಲ್ಲೊಂದು ಭಾಗವನ್ನೂ ಪತ್ತೊನ್ದಿ ಎನ್ನುವುದು ಹತ್ತರಲ್ಲೊಂದು ಭಾಗವನ್ನೂ ತೋರಿಸುವುದು. [1926ನೆಯ ವರ್ಷದ ಮೈಸೂರು ಶಾಸನದ ಇಲಾಖೆಯ ವರದಿ, ಪುಟ 87, ಕಾಲ ಸುಮಾರು 800 ಕ್ರಿ.ಶ.]

"ಕದರೂರಗಾಮುಣ್ಡುಗಳು ಮೊಕ್ತಲು ಮೊದಗಿಟ್ಟು ಕಚ್ಚವರ ಪೊೞಲ ಸೆಟ್ಟಿಯ ಕಟ್ಟಿದ ಕೆಱೆಯ ಕಾಲೆಳೆಗೊಟ್ಟ ಕ್ರಮ ಮೂವತ್ತಯ್ಗಣ್ಡುಗಮ್ಮಣ್ಣ ಪೊೞಲ ಸೆಟ್ಟಿ ತನ್ನ ಮೆಚ್ಚಿದಲ್ಲಿ ಕೊಣ್ಡು ಅವಱೊಳಗಯ್ಗಣ್ಡುಗಮ್ಮಣ್ಣುಮ್ಪತ್ತೊನ್ದಿಯನಿಕ್ಕಿ ಉಣ್ಬೊ ಉೞಿದ ಮೂವತ್ತುಗಳೊಳಮ್ಪುದುವಿನೊಳೆಪತ್ತೊನ್ದಿಯನಿಕ್ಕಿ ಊರ್ಗ್ಗೆ ಅಳವಿಯನಿಕ್ಕಿ ಉಣ್ಬೊ'' ಎಂದು ಒಂದು ಶಾಸನದಲ್ಲಿರುವುದು. ಇದರಲ್ಲಿ ಪೊಳಲ ಸೆಟ್ಟಿಯು ಕಟ್ಟಿದ ಕೆರೆಗೆ ಪ್ರತಿಫಲವಾಗಿ ಅವನಿಗೆ 35 ಕಣ್ಡುಗ ಭೂಮಿಯನ್ನು ಕೊಟ್ಟರೆಂದೂ ಅದರಲ್ಲಿ ಅವನು 5 ಕಣ್ಡುಗಕ್ಕೆ ಹತ್ತರಲ್ಲೊಂದು ಪಾಲು ಕಂದಾಯವನ್ನು ಕೊಡಬೇಕೆಂದೂ ಮಿಕ್ಕ 30 ಕಣ್ಡುಗ ಭೂಮಿಗೆ ಫಲದಲ್ಲಿ ಹತ್ತರಲ್ಲೊಂದು ಪಾಲನ್ನೂ ಊರಿನವರಿಗೆ ಒಂದು ಭಾಗವನ್ನೂ ಕೊಟ್ಟು ಅನುಭವ ಮಾಡಿಕೊಳ್ಳುವಂತೆ ಇದರಲ್ಲಿ ಏರ್ಪಡಿಸಿದೆ. [ಎ.ಕ. 3, ಮಂಡ್ಯ ತಾಲ್ಲೋಕು 14, ತಾಯಲೂರು ಕೆರೆಯ ಒಳಗೆರೆಯ ಕಲ್ಲು, ಕಾಲ ಶಕ 829.]

(12) **ಬಿತ್ತುವಟ್ಟ.**—ಬಿತ್ತುವಟ್ಟವೆಂದರೆ ಕೆರೆಯ ಹಿಂದಿನ ತರೀ ಜಮೀನಿನಲ್ಲಿ ಬಿತ್ತು ಅಥವಾ ಬೀಜವರಿಯಮೇಲೆ ವಟ್ಟ ಎಂದರೆ ಪಾಲು ಎಂದರ್ಥ. ಕೆರೆಯನ್ನು ಕಟ್ಟಿಸಿದುದಕ್ಕೂ ಅಥವಾ ತೂಬನ್ನಿಕ್ಕಿಸಿದ್ದಕ್ಕೂ ಅಥವಾ ಅದಕ್ಕೆ ಬೇಕಾದ ಕಾಮುಗಾರಿಯನ್ನು ವರ್ಷಂಪ್ರತಿ ಮಾಡಿಸಿ ಸರಿಯಾದ ಸ್ಥಿತಿಯಲ್ಲಿಟ್ಟುಕೊಂಡಿರುವುದಕ್ಕೂ ಪ್ರತಿಫಲವಾಗಿ ಈ ಏರ್ಪಾಟನ್ನು ಮಾಡಿರಬೇಕೆಂದು ಗೊತ್ತಾಗುತ್ತದೆ. ಇದಕ್ಕೆ ಬಿತ್ತುವಾಟವೆಂದೂ ಬಿತ್ತುಕಟ್ಟೆಂದೂ ಬಿತ್ತುಗಟ್ಟಣೆಯೆಂದೂ ಕೆಲವೆಡೆಗಳಲ್ಲಿ ಕರೆದಿರುವರು.

ತುಮಕೂರು ಪಟ್ಟಣದ ಸೋಮೇಶ್ವರ ದೇವಸ್ಥಾನದ ಶಿಲಾಶಾಸನದಲ್ಲಿ "ತುಮ್ಮಗೂರ ಕೆಱೆಯ....ಕಟ್ಟಿದ ಯೊಟ್ಟಜ್ಗಿ ಪನ್ನಿರ್ಖಂಡುಗ ಮಣ್ಣು ಬಿತ್ತುವಟ್ಟಮುಮಂ ಬ್ರಹ್ಮವುತ್ತರಮೆನ್ದು ಪೆಸರುಮಂ ಕೊಟ್ಟು......" ಎಂದು ಹೇಳಿದೆ. ಇದರಲ್ಲಿ ತುಮ್ಮಗೂರ (ಅಥವಾ ತುಮಕೂರ) ಕೆರೆಯನ್ನು ಜೀರ್ಣೋದ್ಧಾರಮಾಡಿ ಕಟ್ಟಿದ್ದಕ್ಕಾಗಿ ಆ ಕೆರೆಯ ಕೆಳಗೆ ಹನ್ನೆರಡು ಖಂಡುಗ ಮಣ್ಣನ್ನು (ಮಣ್ಣು ಎನ್ನುವುದು ಒಂದು ಭೂಮಿಯ ಅಳತೆಯ ಪರಿಮಾಣ) ಬಿತ್ತುವಟ್ಟವಾಗಿ ಕೊಟ್ಟು ಬ್ರಹ್ಮವುತ್ತರಮೆಂಬ ಬಿರುದನ್ನೂ ಕೊಟ್ಟಿರುವರು. ಇದರ ಕಾಲ ಶಕ 877. [ಎ.ಕ. 12, ತುಮಕೂರು 5.]

"ಹಿರಿಯ ಕೆಱೆಯ ಕೆಳಗೆ ಆಸಂದಯಿಲಯ್ಯುಳದ ಬಿತ್ತುಗಟ್ಟಣೆಯ ಗಣವ ಕೊಟಕೂಸಬೋಕನ ಸುಪುತ್ರ ಚಂದಗೌಡ." [ತಗರೆಯ ಶಿಲಾಶಾಸನ, ಕಾಲ ಶಕ 1084, ಮೈಸೂರು ಶಾಸನದ ಇಲಾಖೆಯ ವರದಿ, 1937ನೆಯ ವರ್ಷದ್ದು, ಪುಟ 172.]

ಗಂಗರ ದೊರೆಯಾದ ಸತ್ಯವಾಕ್ಯನ ಕಾಲದಲ್ಲಿ "ಸಿರಿಯಮಯ್ಯನೆರಡು ಕೆಱೆಯಂ ತೂಂಬನಿಕ್ಕಿ ಮೂಡಣ ಕೆಱೆಯಂ ಕಟ್ಟಿಸಿ ಮೂಱು ಕೆಱೆಯ ಬಿತ್ತುವಟ್ಟಮುಂ ಪಡೆದಂ." [ಎ.ಕ. 9, ಬೆಂಗಳೂರು 79, ಕಾಲ ಸುಮಾರು 870 ಕ್ರಿ.ಶ.] "ಊರಗಱ್ದೆಗೆಲ್ಲಂ ಬಿತ್ತುವಟ್ಟಂ ನೂಱುಕಮ್ಮಕ್ಕೆ ಕೊಳಗವಯ್ದುಱ ಲೆಕ್ಕ". [ಅಂಬಳಿ ಗ್ರಾಮದ ಕಲ್ಲೇಶ್ವರ ದೇವಸ್ಥಾನದ ಶಿಲಾಶಾಸನ, ಕಾಲ 1106 ಕ್ರಿ. ಶ., ದಕ್ಷಿಣ ಇಂಡಿಯದ ಶಾಸನಗಳು, 9ನೆಯ ಸಂಪುಟ, 2ನೆಯ ಭಾಗ, 170ನೆಯ ನಂಬರಿನ ಶಾಸನ.] ಇಲ್ಲಿ ಗ್ರಾಮದ ಗದ್ದೆಗಳಲ್ಲೆಲ್ಲಾ ನೂರು ಕಂಬದ ಅಳತೆಯ ಭೂಮಿಗೆ ಐದು ಕೊಳಗದಂತೆ ಬಿತ್ತುವಟ್ಟವನ್ನು ಕೊಟ್ಟಿರುವುದಾಗಿ ಉಕ್ತವಾಗಿರುವುದು. ಬಿತ್ತುವಟ್ಟಕ್ಕೆ ಇನ್ನೂ ಹೀಗೆಯೇ ಎಷ್ಟೋ ನಿದರ್ಶನಗಳಿರುವುವು. "ನಾಗವರ್ಮ್ಮನ್ ಕಟ್ಟಿಸಿದ ದೇವಗೆಱೆಗಂ ಪಿರಿಯ ಕೆಱೆಗಂ ಬಿತ್ತುವಟ್ಟವಂ ಕೊಟ್ಟರು. ಇದಕ್ಕೆ ವಕ್ರಬನ್ದವರು ಬಾಣರಾಸಿಯುಂ ಕವಿಲೆಯುಂ ಕೆಱೆಯುಮಾರಾಮೆಯುಂ ಬ್ರಾಹ್ಮಣರುಮನಱಿದರು ನಾಲ್ಗಣ್ಡುಗ ಕೊಡಗಿ ಆಚಂದ್ರ ತಾರಂಬರಂ ಸಲ್ವುದಂ." [ಕಾರ್ಯಗ್ರಾಮದ ಶಿಲಾಶಾಸನ ಶಕ 890: ಗಂಗರ ಸತ್ಯವಾಕ್ಯನ ಆಳಿಕೆಯ ಕಾಲ, ಎ.ಕ. 3, ನಂಜನಗೂಡು 192.] [1925ನೆಯ ಮೈಸೂರು ಶಾಸನದ ಇಲಾಖೆಯ ವರದಿಯ 38ನೆಯ ಪುಟದಲ್ಲಿ ಬಿತ್ತುವಟ್ಟವೆಂಬ ಪದವೂ 57ನೆಯ ಪುಟದಲ್ಲಿ ಬಿತ್ತಕಟ್ಟೆಂಬ ಪದವೂ ದೊರೆಯುವುವು.]

(13) **ಮೂವಿಟ್ಟಿ.**—ಎಂದರೆ ಮೂರು ತೆರನಾದ ಬಿಟ್ಟಿಯ ಕೆಲಸವನ್ನು ಮಾಡಿಸುವುದು. ಬಿಟ್ಟಿಯೆಂದರೆ ಬಲಾತ್ಕಾರವಾಗಿ ಕೆಲಸವನ್ನು ಮಾಡಿಸಿ ಕೊಳ್ಳುವುದು.

ಹೊಯ್ಸಳರ ರಾಜನಾದ ವಿಷ್ಣುವರ್ಧನನನ್ನು ಸ್ತುತಿಸುವಾಗ "ಧರಿತ್ರಿಯೊಳ್ ಜಯನಿಯೋಗೋದ್ಯೋಗದೊಳ್ ಹೋಗಿ ಸಾಱಿಸಿ ವೀರಾರಿ ನೃಪಾಳರಂ ಬರಿಸಿದಂ ಮೂವಿಟ್ಟಿಗಂ ಬಿಟ್ಟಿಗಂ" ಎಂದು ಹರಿಹರ ದೇವಸ್ಥಾನದ ಒಂದು ಶಿಲಾ ಶಾಸನದಲ್ಲಿ ಬರೆದಿರುವುದು. ವಿಷ್ಣುವರ್ಧನನು ದಂಡಯಾತ್ರೆಗೆ ಹೋಗಿ ಶತ್ರುರಾಜರನ್ನೆಲ್ಲಾ ಗೆದ್ದು ಅವರೆಲ್ಲರೂ ತನ್ನಲ್ಲಿ ಮೂರು ವಿಧವಾದ ಬಿಟ್ಟಿಯ ಕೆಲಸ ಮಾಡಲು ಬರುವಂತೆ ಸಾರಿಸಿ ಪ್ರತಾಪವನ್ನು ಮೆರೆದನು. ಹೀಗೆಯೇ ವಿಜಯಪಾಂಡ್ಯನನ್ನು ಹೊಗಳುವಾಗ "ಬೆಸನೇನೆಂನದ ವೀರರಿಲ್ಲ ಭಯದಿಂ ಮೂವಿಟ್ಟಿಯಿಂ ಬನ್ದು ಜೀವಿಸದಿಪ್ಪರ್ನ್ನೃಪ ತರಿಲ್ಲ" ಎಂದು ವರ್ಣಿಸಿರುವರು. [ಎ.ಕ. 11, ದಾವಣಗೆರೆ 25 ಮತ್ತು 32, ಕಾಲ 1224 ಕ್ರಿ. ಶ. ಮತ್ತು 1171 ಕ್ರಿ.ಶ.] 'ಬಿಟ್ಟವೆಸಗೆಯ್ಯದ ಜೆಟ್ಟಿಗರಿಲ್ಲ'ವೆಂದು ಚಾಲುಕ್ಯರಾಜನಾದ ಜಗದೇಕಮಲ್ಲನನ್ನು ಕೊಂಡಾಡಿರುವರು. [ದಾವಣಗೆರೆ 85, ಕಾಲ 1143 ಕ್ರಿ. ಶ.] 'ಅದಣ್ಡವಿಷ್ಟಿಕರಾಬಾಧಃ' ಎಂದು ಒಂದು ತಾಮ್ರ ಶಾಸನದಲ್ಲಿ ಹೇಳಿರುವುದು. ಇಲ್ಲಿ ವಿಷ್ಟಿ ಎಂದರೆ ಬಿಟ್ಟಿ. [ಮೈಸೂರು ಶಾಸನದ ಇಲಾಖೆಯ ವರದಿ 1925, ಪುಟ 98, ಕದಂಬ ವಿಷ್ಣುವರ್ಮನ ಹೆಬ್ಬಟಗ್ರಾಮ ದತ್ತಿಯ ಶಾಸನ, ಸುಮಾರು 6ನೆಯ ಶತಮಾನದ್ದು.]

(14) **ಮೇಲಕ್ಕ.**—ಮೇಲಕ್ಕವೆಂದರೆ ಕೆರೆಯ ತೂಬು. ಇದನ್ನೇ ಮೇಲಂಕ ವೆಂದೂ ಮೇಲಂಕಣವೆಂದೂ ಶಾಸನಗಳಲ್ಲಿ ಕರೆದಿರುವರು.

ಹೊಯ್ಸಳ ರಾಜನಾದ ವಿಷ್ಣುವರ್ಧನನ ಆಳಿಕೆಯಲ್ಲಿ ಬಿಣ್ಣಾಂಡಿಯೆಂಬವನು ಮುದುಗೆರೆಯಲ್ಲಿ ತನ್ನ ಮುತ್ತಯ್ಯನ ಜ್ಞಾಪಕಾರ್ಥವಾಗಿ 'ಕೆಱೆಯ ಮೇಲಕ್ಕ ವಿಕ್ಕಿಸಿ' ಲಿಂಗ ಪ್ರತಿಷ್ಠೆಯನ್ನು ಮಾಡಿಸಿದನೆಂದು ಹೇಳಿದೆ. [ಎ. ಕ. 4, ನಾಗಮಂಗಲ 65, ಮುದಿಗೆರೆಯ ಕಲ್ಲು, ಕಾಲ ಶಕ 1060.] ಹಳೇಬೀಡಿನ ಕೆರೆಯ ತೂಬಿನಲ್ಲಿ ಬರೆದಿರುವ ಶಾಸನವು ಹೊಯ್ಸಳರ ವಿನಯಾದಿತ್ಯನು ದೋರಸಮುದ್ರದ ಕೆರೆಗೆ ತೂಂಬನ್ನಿಕ್ಕಿಸಿದನೆಂದು ಒಂದೆಡೆಯಲ್ಲೂ ಮೇಲಕ್ಕವನ್ನಿಕ್ಕಿಸಿದನೆಂದು ಮತ್ತೊಂದೆಡೆ ಯಲ್ಲೂ ವಿವರಿಸಿದೆ. "ಈ ತುಂಬನುದಾತ್ತನಿಕ್ಕಿಸಿದನ್"—"ಇಕ್ಕಿಸಿದನೆಸೆವಿನಂ ಮೇಲಕ್ಕ ಮನೀಕೆಱೆಗೆ". ಇದರ ಕಾಲ ಶಕ 984. [1929ನೆಯ ವರ್ಷದ ಮೈಸೂರು ಶಾಸನದ ಇಲಾಖೆಯ ರಿಪೋರ್ಟು, ಪುಟ 73.]

ಶಕ ವರ್ಷ 1154ರಲ್ಲಿ ಹುಟ್ಟಿದ ಬ್ರಹ್ಮಸಮುದ್ರದ ದೇವಸ್ಥಾನದ ಒಂದು ಶಾಸನದಲ್ಲಿ "ಕಡೆವದಕೊಳದ ಕೆಱೆಯ ಮೇಲಂಕಣಕ್ಕೆ" ಎಂದು ಹೇಳಿದೆ. [ಎ.ಕ. 6, ಕಡೂರು ತಾಲ್ಲೋಕು 59.] ಅದೇ ಸ್ಥಳದ ಮತ್ತೊಂದು ಶಾಸನದಲ್ಲಿ "ಮಾಕಗೌಡನು ತಾನು ಕಟ್ಟಿಸಿದ ಕೆಱೆಯ ಮೇಲಂಕಕ್ಕೆ ವರ್ಶಂಪ್ರತಿ.... ಯ್ಯ ಕೊರಮಿಕ್ಕುವಂತಾಗಿ ಮಹಾಜನಂಗಳಿಗೆ ಪಾದಪೂಜೆ ತಂಬುಲವ ಕೊಟ್ಟು" ಎಂದು ಹೇಳಿದೆ. [ಕಡೂರು ತಾಲ್ಲೋಕು 64, ಕಾಲ ಶಕ 1147.] "ಆ ಕೆಱೆಗಳ ಮೇಲಂಕಣ ಮೊದಲಾದ ಎಲ್ಲಾ ಕೆಲಸಂಗಳಿಗೆಯೂ...." [ಎ.ಕ. 12, ಚಿಕ್ಕನಾಯಕನಹಳ್ಳಿ 2, ಶೆಟ್ಟಿಕೆರೆಯ ಶಿಲಾ ಶಾಸನ, ಕಾಲ 1261 ಕ್ರಿ.ಶ.]

(15) **ವಜ್ರ ವೈಸಣಿಗೆ, ಬಯಿಸಣಿಗೆ.**—ವರ್ತಕರ ಮುಖಂಡರು ತಮ್ಮ ಸಭೆಗಳಲ್ಲಿ ಪೂರ್ವಕಾಲದಲ್ಲಿ ಉಪಯೋಗಿಸುತ್ತಿದ್ದ ಒಂದು ವಜ್ರ ಖಚಿತವಾದ ಪೀಠಕ್ಕೆ ಈ ಹೆಸರು.

"ಸಮಸ್ತನಖರಂಗಳು ಹಿರಿಸಿಂಗಿಯಲು ಶ್ರೀಮತು ಹಬ್ಬೇಶ್ವರ ದೇವಾಯತನ ವೊಳಶೇಶಂ ಬಯಿಸಣಿಗೆಯಾಗಿರ್ದ್ದ ಯಾಹಬ್ಬೇಶ್ವರ ದೇವರ ದೇವಕಾರ್ಯ್ಯಾರ್ತ್ಥ ವಾಗಿ....ಬಿಟ್ಟ ಎತ್ತಜುವತ್ತಯ್ದು". [ಉತ್ತರ ಕರ್ಣಾಟಕದ ಮತ್ತು ಕೊಲ್ಲಾಪುರದ ಶಾಸನಗಳು, ನಂಬರು 15.] ಇಲ್ಲಿ ನಖರಂಗಳು ಎಂದರೆ ವರ್ತಕರು ಎಲ್ಲರೂ ಹಿರಿಸಿಂಗಿಯ ಹಬ್ಬೇಶ್ವರದೇವಾಲಯದಲ್ಲಿ ನೆರೆದು ಬಯಿಸಣಿಗೆಯಾಗಿದ್ದ ಹಬ್ಬೇಶ್ವರನ ಮುಂದೆ ಸಭೆಯನ್ನು ನಡೆಸಿ ದತ್ತಿಯನ್ನು ಮಾಡಿದರೆಂದು ಹೇಳಿದೆ. "ವಿಜಯನಗರಿ ....ಸಿಂಗಪಟ್ಟಣ ವೊದಲಾದ ಸಂಥೆ ಶಾಸನ ಪೇಟೆ ವೊಳಗಾದ ಸಮಸ್ತ ಹಳುವು ನಖರಪರಿವಾರ ಮುಮ್ಮುರಿದಂಡಂಗಳು....ಶ್ರೀ ವಿರೂಪಾಕ್ಷದೇವರ ದಿವ್ಯ ಶ್ರೀ ಪಾದಪದ್ಮ ಸನ್ನಿಧಿಯಲಿ ವಜ್ರ ವೈಸಣಿಗೆಯನಿಕ್ಕಿ ಕುಳ್ಳಿದ್ರ್ದು" (ಮುದ್ದೆಯ ನಾಯಕರಿಗೆ ಪೃಥ್ವೀ ಸೆಟ್ಟಿತನವನ್ನು ಕೊಟ್ಟರು). [ಎ.ಕ. 5, ಬೇಲೂರು 75, ಬೇಲೂರ ತಾಮ್ರ ಶಾಸನ, ಕಾಲ 1382 ಕ್ರಿ. ಶ.]

"ಲೊಕೆಯಕೆಱಿಬನವಳ್ಳಿ ವೊದಲಾದ ಪಟ್ಟಣಿಗರು....ನಾನಾ ದೇಸಿಗಳು ಮುಖ್ಯವಾದ ಹದಿನೆಂಟು ಸಮಯಂಗಳು ಹರಿಹರದಲು ವಜ್ರ ಬಯಿಸಣಿಗೆಯಾಗಿ ಕುಳ್ಳಿರ್ದ್ದ ಮಹದೇವರಾಯ ಲಕ್ಷ್ಮೀನಾರಾಯಣ ದೇವರಿಗೆ ಕೊಟ್ಟ ಆಯದಾಯದ ಕ್ರಮವೆಂತೆಂದಡೆ". [ಎ.ಕ. 11, ದಾವಣಗೆರೆ 59, ಕಾಲ 1280 ಕ್ರಿ. ಶ.]

ಇಲ್ಲಿ ಯಾದವರಾಜನಾದ ಮಹದೇವರಾಯನ ಜ್ಞಾಪಕಾರ್ಥವಾಗಿ ಹರಿಹರದಲ್ಲಿ ಪ್ರತಿಷ್ಠಿಸಿದ ಮೂರ್ತಿಯ ಹೆಸರು ಮಹದೇವರಾಯ ಲಕ್ಷ್ಮೀನಾರಾಯಣ ದೇವರು.

ಸಾದಲಿಯ ನಾಡ ರಾಮೇಶ್ವರ ಗ್ರಾಮದಲು ಯಿಕ್ಕಿಸಿದ ಸಂಥೆ....ಆ ಬೈವಿ ಸೆಟ್ಟಿವೊಳಗಾದ ಸಾಲು ಮೂಲೆಯ ಸಮಸ್ತ ಹಲರುಗಳ ಬೈಸಣಿಗೆಯಿಕ್ಕಿ ಮಾಡಿದಂಥಾ ಸಂಥೆಯ ಹೊಕಂಥಾ ಭಂಡಕ್ಕೆ ವರುಷ ಪರಿಯಂತರ ಸರ್ಬ್ಬ ಮಾನ್ಯ. [ಎ.ಕ. 10, ಸಿಡ್ಲಘಟ್ಟ 112, ಕಾಲ 1378 ಕ್ರಿ.ಶ.]

"....ಮುಂಮುಡಿದಂಡಂಗಳುಂ ಪಂನಿಚ್ಛಾಸಿರ ಬಿಲ್ಲಮೂನೂರ್ವ್ವರೆನಿಸಿದ॥ ....ಯಿಕ್ಕಿದ ಬೈಸಣಿಗೆ ಎತ್ತಿದ ತೋರಣ ಕ್ಷಪಾಳಕರುಂ. [ಎ.ಕ. 7, ಹೊನ್ನಾಳಿ 8, ಕಾಲ 1228 ಕ್ರಿ. ಶ.]

"ಸಾಲು ಮೂಲೆಯ ಸಮಸ್ತ ಹಲರು ಹದಿನೆಂಟು ಜ್ಯಾತಿಯರು ಕೊಟ್ಟ ತಾಮ್ರ ಶಾಸನ ಆ ನಾಡ ಪ್ರಭು ವಿನಾಯಕ ದೇವರಲಿ ವಜಭಸಣಿಗೆಯನಿಕ್ಕಿ ಎಲೆಯೂರ ಪ್ರೋಚಸೆಟ್ಟಿಯರ ಚಲುವಾಡಿ ಮಲಿಸೆಟಿಗೆ ಕೊಟ್ಟ ತೇಜ." [1926ನೆಯ ಮೈಸೂರು ಶಾಸನದ ಇಲಾಖೆಯ ವರದಿ, ಪುಟ 99, ಹೊಳವನಹಳ್ಳಿಯ ಕರಿಬಸವಯ್ಯನ ತಾಮ್ರ ಶಾಸನ.] ಇಲ್ಲಿ ವಜಭಸಣಿಗೆಯೆಂದರೆ ವಜ್ರ ಬೈಸಣಿಗೆ ಅಥವಾ ವಜ್ರಖಚಿತವಾದ ಒಂದು ಪೀಠ.

(16) **ಸೊಥೆ.**—ಇದು ಗಾರೆಯ ಹೆಸರು.

ವೀರಬಲ್ಲಾಳನ ಆಳಿಕೆಯಲ್ಲಿ ಕೇತಮ್ಮನೆಂಬವನು ಅರಸೀಕೆರೆ ಗ್ರಾಮದಲ್ಲಿ "ಬ್ರಹ್ಮದೇವರ ಮಣ್ಟಪದ ಕಲುವೆಸನಿಟ್ಟಿಗೆವೆಸ ಸೊತೆಯಂಗೆಯ್ಸಿ ಪ್ರತುಮೆಯುಂ ಮಾಡಿಸಿ ಸುಪ್ರತಿಷ್ಠೆಯಂ ಮಾಡಿದ"ನೆಂದು ಹೇಳಿದೆ. [ಎ.ಕ. 5, ಅರಸೀಕೆರೆ 88, ಕಾಲ ಶಕ 1105 : ಅರಸೀಕೆರೆಯ ತೂಬಿನ ಶಾಸನ.] ಇಲ್ಲಿ ಸೊತೆಯೆಂದರೆ ಗಾರೆ, ಸುಣ್ಣವಲ್ಲ. ರಾಜೇಂದ್ರ ಪ್ರಿತುವೀ ಕೊಂಗಾಳ್ವದೇವನ ಆಳಿಕೆಯಲ್ಲಿ ಚರವಕಬ್ಬೆಯು "ಪೊಲೇಶ್ವರದೇವರ್ಗ್ಗೆ ಸುಣ್ಣಮುಂ ಸೊತಿಯುಂ ಮಿಂತಿವೆಲ್ಲಂ" ಮಾಡಿಸಿದಳೆಂದು ಹೇಳಿದೆ. [ಅರಕಲಗೂಡು 95.] "ಎಱೆಯಂಗೇಶ್ವರಕ್ಕೆ ಸುಣ್ಣಕ್ಕೆ ಸೊತೆಗ ಮಲ್ಲದುಣ್ಡಾತ" ಎಂದು ಸತ್ಯವಾಕ್ಯ ಪೆರ್ಮಾನಡಿ ಗಂಗರಾಜನ ಕಾಲದ ಒಂದು ಶಾಸನದಲ್ಲಿ ಹೇಳಿದೆ. [ಮೈಸೂರು ಶಾಸನದ ಇಲಾಖೆಯ ವರದಿ 1938, ಪುಟ 190.] ಮೊಸಳೆಯ ಚೆನ್ನಕೇಶವದೇವಾಲಯದ "ರಂಗಮಂಟಪವನೂ ಮರವೆಸನಾಗಿ ಮಾಡಿಸಿ ಸೊಥೆಯನಿಕ್ಕಿಸಿ". [ಅರಸೀಕೆರೆ 8, ಕಾಲ ಶಕ 1189 ರಲ್ಲಿ ಹೀಗೆ ಉಕ್ತವಾಗಿರುವುದು.]

(17) **ಹಿಟ್ಟು.**—ಹಿಟ್ಟೆಂದರೆ ಬೇರೆ ಬೇರೆ ವಿಧವಾದ ಜೀವನ ಅಥವಾ ಕಸಬು.

ವಿಜಯನಗರದ ಬುಕ್ಕರಾಯನ ಆಳಿಕೆಯಲ್ಲಿ ಬನವಸೆಯ ಎಂಟು ಹಿಟ್ಟು ಪಂಚಮಠದ ಸಮುಕ್ಷದಲು ವೀರೇಶ್ವರ ದೇವರ ಪೂಜೆಗಾಗಿ ನಾಗಪ್ಪನೆಂಬವನು ದತ್ತಿಯನ್ನು ಕೊಟ್ಟಂತೆ ಬನವಸೆಯ ಒಂದು ಶಾಸನದಲ್ಲಿರುವುದು. [ಮೈಸೂರು ಶಾಸನದ ಇಲಾಖೆಯ ವರದಿ, 1929, ಪುಟ 195, ಕಾಲ 1368 ಕ್ರಿ.ಶ.] "ಮಾರಿಸೆಟ್ಟಿ ಮುಖ್ಯ ಎಂಟು ಹಿಟುಂ ಧರ್ಮವಂ ಪ್ರತಿಪಾಳಿಸುವರು." [ಚೀಮನಹಳ್ಳಿ ಆಂಜನೇಯ ದೇವಸ್ಥಾನದ ಶಾಸನ, ಕಾಲ 1265 ಕ್ರಿ.ಶ. ; ದಕ್ಷಿಣ ಇಂಡಿಯದ ಶಾಸನಗಳು, 9 ನೆಯ ಸಂಪುಟ, ಮೊದಲನೆಯ ಭಾಗ, 374 ನೆಯ ನಂಬರ್ ಶಾಸನ.] "ಅಱುವತ್ತೊಕ್ಕಲು ಹನ್ನೆರಡು ಹಿಟ್ಟು ಸಹಿತಂ." [ಅದೇ ಗ್ರಂಥದ 86 ನೆಯ ನಂಬರ್ ಶಾಸನ, ಕಾಲ 1093 ಕ್ರಿ.ಶ.]

ಸೋಮನಹಳ್ಳಿಯ ಸೋಮೇಶ್ವರ ದೇವಸ್ಥಾನದ ಒಂದು ಶಾಸನದಲ್ಲಿ ಅಕ್ಕಸಾಲೆ ಮಾರೋಜನೆಂಬವನು "ತನ್ನಕ್ಕಸಾಲೆಯ ಹಿಟ್ಟಿನ ಭೂಮಿಯೊಳಗೆ ಬ್ರಹ್ಮೇಶ್ವರ ದೇವರ ಅಂಗಭೋಗಕ್ಕೆ ಬಿಟ್ಟ ದತ್ತಿ ಬೆದ್ದಲುಕಂಬ ೫೫" ಎಂದು ಉಕ್ತವಾಗಿದೆ. [ಎ. ಕ. 6, ಕಡೂರು ತಾಲ್ಲೋಕು 107, ಕಾಲ ಶಕ 1243.] ಇದರಿಂದ ಹಿಟ್ಟು ಎನ್ನುವುದು ಒಂದು ಜೀವಿಕೆ ಅಥವಾ ಕಸಬು ಎಂದು ಸ್ಪಷ್ಟವಾಗುತ್ತದೆ. ಆದರೆ ಮೇಲೆ ಹೇಳಿದ ಎಂಟು ಅಥವಾ ಹನ್ನೆರಡು ಹಿಟ್ಟುಗಳಾವುವೆಂಬುದು ಗೊತ್ತಾಗುವುದಿಲ್ಲ.

ಹೀಗೆಯೇ ಅನೇಕವಾದ ಪಾರಿಭಾಷಿಕ ಪದಗಳು ಶಾಸನಗಳಲ್ಲಿ ಕಾಣಬರುವುವು. ಅವುಗಳನ್ನೆಲ್ಲಾ ಶೋಧನೆ ಮಾಡಿ ಪ್ರತ್ಯೇಕ ನಿಘಂಟು ಒಂದನ್ನು ಸಿದ್ಧಪಡಿಸುವುದು ಅಗತ್ಯ.

**ಆರ್. ರಾಮರಾವ್**

# ಕನ್ನಡಕ್ಕೆ ಹೊಸ ನಿಘಂಟು

ಕನ್ನಡ ಕಾವ್ಯಗಳನ್ನು ಅಭ್ಯಾಸ ಮಾಡುವವರಿಗೆ ನಾನಾ ತೆರನಾದ ಸಹಾಯವನ್ನು ಹಿಂದಿನವರೂ ಇಂದಿನವರೂ ಮಾಡಿಕೊಟ್ಟಿದ್ದಾರೆ, ಕೊಡುತ್ತಲಿದ್ದಾರೆ. ವ್ಯಾಕರಣ, ಛಂದಸ್ಸು, ಅಲಂಕಾರ, ನಿಘಂಟು, ಕಾವ್ಯಸ್ವರೂಪ ನಿರೂಪಣೆ—ಮುಂತಾದ ಲಕ್ಷಣ ಶಾಸ್ತ್ರಗಳಲ್ಲಿ ನಮ್ಮವರು ಹಿಂದಿನಿಂದಲೂ ಆಸಕ್ತಿ ವಹಿಸಿ ಹಲವು ಗ್ರಂಥಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಪ್ರಕೃತ ನಮಗೆ ಬೇಕಾಗಿರುವುದು ನಿಘಂಟು. ಹಿಂದಿನ ನಿಘಂಟುಗಳನ್ನೂ ಕೇಶಿರಾಜನ ಧಾತುಪಾಠವನ್ನೂ ಕಾವ್ಯಗಳಲ್ಲಿ ಅಲ್ಲಲ್ಲಿ ಕಾಣುವ ಅಪರೂಪವಾದ ಸಾವಿರಾರು ಪದಗಳನ್ನೂ ಎಚ್ಚರಿಕೆಯಿಂದ ಕಲಿತು ಕಣ್ಣಿಟ್ಟು ವಿಚಾರಮಾಡಿ ಹದಿನೈದು ವರ್ಷಗಳ ಕಾಲ ಒಂದೇಸಮನೆ ದುಡಿದು ಕನ್ನಡಕ್ಕೆ ಒಂದು ಕೋಶವನ್ನು ಮಾಡಿದ ಕೀರ್ತಿ ಡಾ॥ ಕಿಟ್ಟೆಲ್ ಅವರಿಗೆ ಸೇರಿದ್ದು. ಅದು ಪ್ರಕಟವಾಗಿ ನಲವತ್ತಾರು ವರ್ಷಗಳು ಉರುಳಿಹೋಗಿದ್ದರೂ ಅದನ್ನು ಮೀರಿಸುವ ಬೇರೊಂದು ಗ್ರಂಥ ಇದುವರೆಗೂ ಕನ್ನಡದಲ್ಲಿ ಹುಟ್ಟಿಲ್ಲ. ಅಂಥ ಮತ್ತೊಂದು ನಿಘಂಟುವಿಗೆ ಅವಶ್ಯಕತೆ ಇಲ್ಲವಾದ್ದರಿಂದ ಹುಟ್ಟಲಿಲ್ಲ ಎಂದು ಕುಂಟು ನೆಪವನ್ನು ಹೂಡಿ ಕುಳಿತುಬಿಡುವುದು ಸುಲಭವಾದ ಕೆಲಸ. ಹಿಂದಿನ ಕಾವ್ಯಗಳನ್ನು ಮೊದಲಿಂದ ಕಡೆಯವರೆಗೂ ಓದಿ ಯಾವ ಪದಕ್ಕೂ ಬಿಡದೆ ಅರ್ಥವನ್ನು ತಿಳಿಯಲೇಬೇಕೆಂದು ಹಠತೊಟ್ಟು ಹೊರಟವರಿಗೆ ಮಾತ್ರ ಹೊಸ ನಿಘಂಟು ಒಂದು ಇದ್ದಿದ್ದರೆ ಚೆನ್ನಾಗಿತ್ತಲ್ಲ ಎಂದು ಅಡಿಗಡಿಗೆ ಹೇಳಬೇಕಾದ ಅವಸ್ಥೆ ಬಂದಿದೆ. ಡಾ॥ ಕಿಟ್ಟೆಲ್ಲರ ಕೋಶ ಅಪೂರ್ಣವಾದದ್ದೆಂಬ ತಿಳಿವಳಿಕೆ ಅಂಥವರಿಗೆ ಅನಿವಾರ್ಯವಾಗಿ ಆಗ ಬರಲೇಬೇಕು. ಅದು ಅಪೂರ್ಣವಾಗಿದ್ದರೂ ಅದರಿಂದ ಕನ್ನಡ ಕಲಿಯುವವರಿಗೆ ಇದುವರೆಗೆ ಆಗಿರುವ, ಮುಂದೆ ಆಗುವ ಸಹಾಯವು ಎಲ್ಲರೂ ಕೃತಜ್ಞತೆಯಿಂದ ನೆನೆಯುವಂಥದು. ಕನ್ನಡ ವಿದ್ವತ್ತಿನ ಒಂದು ಭಾಗವಾದ ಶಬ್ದಾರ್ಥಜ್ಞಾನಕ್ಕೆ ಆ ಕೋಶ ಬಹಳ ಸಹಕಾರಿಯಾಗಿದೆ. ಇನ್ನೂ ಒಂದು ಹೆಜ್ಜೆ ಮುಂದೆಹೋಗಿ, ತಕ್ಕಮಟ್ಟಿನ ವಿದ್ವತ್ತನ್ನು ಗಳಿಸುವುದಕ್ಕೂ ಅದು ಸಾಕು ಎಂದು ತೀರ್ಮಾನಿಸಬಹುದು.

ಈ ಕೋಶ ಅಪೂರ್ಣವಾಗಿರುವುದಕ್ಕೆ ಒಂದೆರಡು ಕಾರಣಗಳನ್ನು ಸೂಚಿಸಬಹುದು. ಈಗ ಸಿಕ್ಕಿ ಅಚ್ಚಾಗಿರುವ ಹಲವು ಕಾವ್ಯಗಳು ಅವರ ಕಾಲದಲ್ಲಿ ಇನ್ನೂ ಅಜ್ಞಾತವಾಸದಲ್ಲಿದ್ದುವು. ಅವುಗಳಲ್ಲಿ ಅಡಗಿರುವ ಅಪೂರ್ವವಾದ ಪದಗಳ ಗಂಧ ಕೂಡ ಆ ಕಾಲದ ಗಾಳಿಯಲ್ಲಿ ತೇಲುತ್ತಿರಲಿಲ್ಲ. ತಮಗೆ ದೊರೆತ ಕಾವ್ಯಗಳಿಂದ ಡಾ॥ ಕಿಟ್ಟೆಲ್ ಅವರು ಪದಗಳನ್ನು ಅರ್ಥವಿವರಣೆಗಾಗಿ ಆರಿಸಿಕೊಳ್ಳುವಾಗ ಅನೇಕ ಪದಗಳನ್ನು ನೋಡಿಯೂ ಕೈಬಿಟ್ಟರು. ಅವುಗಳ ಅರ್ಥ ಸ್ಪಷ್ಟವಾಗಿ ತಿಳಿಯದೇ ಇದ್ದದ್ದೂ ಅದನ್ನು ಹುಡುಕುತ್ತ ಕುಳಿತುಕೊಂಡರೆ ಇನ್ನೂ ಹೆಚ್ಚುಕಾಲ ಹಿಡಿಯುತ್ತದೆಂಬುದೂ ಅವರು ಹೀಗೆ ಮಾಡಿದ್ದಕ್ಕೆ ಕಾರಣವಾಗಿರಬೇಕು. ಅವರು ಮಾಡಿರುವಷ್ಟು ಕೆಲಸಕ್ಕೇ ಅವರ ಬದುಕು ಕೊನೆಮುಟ್ಟಬೇಕಾಯಿತು. ಮೇಲಾಗಿ ಅವರದು

ವ್ಯಕ್ತಿಯ ಪ್ರಯತ್ನ. ತಮಗೆ ನೆರವಾದವರನ್ನು ಅವರು ಎದೆತುಂಬಿ ಹೊಗಳಿದ್ದರೂ ಅದನ್ನು ತೃಪ್ತಿಕರವಾಗಿ ಸಾಧಿಸುವ ಪ್ರಯತ್ನವೆಲ್ಲ ಅವರದೇ. ತಮ್ಮ ಕೋಶ ದಲ್ಲಿರುವ ದೋಷವನ್ನೂ ಕೊರತೆಯನ್ನೂ ಅವರು ಚೆನ್ನಾಗಿ ತಿಳಿದವರಾಗಿದ್ದರು. "ಶಬ್ದ ಪಾರಮಾರ್ಗಮಸಾಧ್ಯಂ" ಎಂಬ ಕೇಶಿರಾಜನ ಉಕ್ತಿ ಅವರಿಗೆ ಚಿರಪರಿಚಿತ ವಾಗಿತ್ತು. ಈ ಕಾರಣಗಳಿಂದ ಅವರ ಕೋಶ ಕನ್ನಡ ಶಬ್ದಭಂಡಾರವನ್ನೆಲ್ಲ ತೆರೆದು ವಿವರಿಸಲು ಅಸಮರ್ಥವಾಯಿತು. ಅವರು ಮಾಡಿರುವ ಕೆಲಸವನ್ನು ಮುಂದು ವರಿಸುವುದು ಕನ್ನಡಿಗರ ಮೇಲೆ ಬಿದ್ದಿರುವ ಹೊರೆ. ಅವರು ನಮಗೆ ದಾರಿ ತೋರಿಸಿದ್ದಾರೆ; ಅದನ್ನೇ ನಾವೂ ಹಿಡಿಯಬೇಕಾಗಿದೆ.

ಡಾ॥ ಕಿಟ್ಟೆಲ್ ಅವರ ಕ್ರಮ ಬಲುಮಟ್ಟಿಗೆ ಶಾಸ್ತ್ರೀಯವಾದದ್ದು. ಕೆಲವು ಪದಗಳಿಗೆ ಹಿಂದಿನ ನಿಘಂಟುಗಳಿಂದ ಅರ್ಥ ತಿಳಿದುಬಂದಿರುವುದೇನೊ ನಿಜ; ಆದರೆ ಕವಿಗಳು ಅವನ್ನು ಬಳಸುವಾಗ ಅವುಗಳ ಪ್ರಸಿದ್ಧಾರ್ಥಕ್ಕಿಂತ ತುಸು ಭಿನ್ನವಾದ ಬೇರೆಬೇರೆ ಬಣ್ಣದ ಅರ್ಥಗಳಲ್ಲಿ ಪ್ರಯೋಗಮಾಡಿದ್ದಾರೆ. ಆದ್ದರಿಂದ ಅಂಥ ಪ್ರಯೋಗಗಳನ್ನು ಮೊದಲು ಹುಡುಕಬೇಕು. ಅಪೂರ್ವವಾದ ಪದಗಳಿಗೂ ಹೀಗೆಯೇ. ಬೇರೆಬೇರೆ ಸಂದರ್ಭಗಳಲ್ಲಿ ಹೇಗೆ, ಯಾವ ಅರ್ಥದಲ್ಲಿ ಪದಗಳನ್ನು ಕವಿಗಳು ಉಪಯೋಗಿಸಿರಬಹುದೆಂಬುದನ್ನು ತಿಳಿಯಬೇಕಾದರೆ ಅವರ ಕಾವ್ಯಗಳಲ್ಲಿ ಮಿನುಗುವ ಅವರ ಪ್ರಯೋಗಗಳೇ ಶರಣು. ಸಾಧ್ಯವಾದಾಗಲೆಲ್ಲ ಡಾ॥ ಕಿಟ್ಟೆಲ್ಲರು ಪ್ರಯೋಗಗಳನ್ನು ತೋರಿಸಿದ್ದಾರೆ. ಹೀಗೆ ಅವುಗಳನ್ನು ಕೂಡಿಹಾಕಿದಮೇಲೆ ಅರ್ಥವಿಚಾರಕ್ಕೆ ಹೊರಟಿದ್ದಾರೆ. ಆಮೇಲೆ ಪದದ ಮೂಲವನ್ನು ಬೆದಕಿ ಕಂಡು ಹಿಡಿಯಲು ಪ್ರಯತ್ನ ನಡೆಯಬೇಕು. ಅದು ಕನ್ನಡವಾಗಿದ್ದಲ್ಲಿ ಯಾವ ಧಾತುವಿ ನಿಂದ ನಿಷ್ಪನ್ನವಾದದ್ದು; ಇತರ ದ್ರಾವಿಡ ಭಾಷೆಗಳಲ್ಲಿ ಅದು ಇರುವುದೆ; ಅಲ್ಲಿ ಅದಕ್ಕೆ ಯಾವ ಅರ್ಥವಿದೆ; ಸಂಸ್ಕೃತ ಪ್ರಾಕೃತಗಳಿಂದ ಅದು ಬಂದಿರಬಹುದೆ; ಬೇರೆ ಯಾವುದಾದರೂ ಭಾಷೆಯಿಂದ ಅದು ಸಾಲವಾಗಿ ಬಂದದ್ದೆ—ಎಂಬೀ ವಿಚಾರಗಳನ್ನೆಲ್ಲ ಎಚ್ಚರಿಕೆಯಿಂದ ನಡಸಬೇಕು. ಒಟ್ಟಿನಲ್ಲಿ ಆ ಪದದ ಚರಿತ್ರೆಯನ್ನು ತೆಗೆದು ತೋರಿಸುವುದು ಮುಖ್ಯವಾದ ಕೆಲಸ. ಇದಕ್ಕೆ ಶಬ್ದಾರ್ಥಶಾಸ್ತ್ರದ (Semantics) ಪರಿಚಯ ಆವಶ್ಯಕ. ಡಾ॥ ಕಿಟ್ಟೆಲ್ ಅವರು ಈ ಆದರ್ಶವನ್ನು ಸದಾ ಕಣ್ಣಮುಂದೆ ಇಟ್ಟುಕೊಂಡು ಆದಷ್ಟುಮಟ್ಟಿಗೆ ಗುರಿಯನ್ನು ಸಾಧಿಸಲು ಪ್ರಯತ್ನಿಸಿದ್ದಾರೆ. ಈಗ ಇದೇ ಕ್ರಮವನ್ನು ಹಿಡಿದು ಕೆಲವು ಪದಗಳ ಅರ್ಥ ವಿಚಾರ ಮಾಡುವುದು ಈ ಲೇಖನದ ಮುಖ್ಯ ಉದ್ದೇಶ. ಡಾ॥ ಕಿಟ್ಟೆಲ್ಲರಷ್ಟು ದಕ್ಷತೆಯಿಂದ ಇದನ್ನು ನೆರವೇರಿಸಲು ಸಾಧ್ಯವಲ್ಲದಿದ್ದರೂ ನಮ್ರತೆಯಿಂದ ಇಲ್ಲಿ ಅದಕ್ಕೆ ತೊಡಗಿದೆ. ಎಷ್ಟೋವೇಳೆ ಅರ್ಥನಿರ್ಣಯ ಕಷ್ಟವಾಗಿದ್ದರೂ ಅದರ ವಿಚಾರಮಾಡಬೇಕಾದ ಅಗತ್ಯವನ್ನು ತೋರಿಸಿದೆ; ಕನ್ನಡಕ್ಕೆ ಹೊಸ ನಿಘಂಟು ಬೇಕೆಂಬ ಮಾತಿನ ತಿರುಳನ್ನು ತೆಗೆದಿಟ್ಟಿದೆ.

**೧. ಮೇಗಾಳಿ, ಕಿಗ್ಗಾಳಿ.**—ಎರಡು ಮೂರು ವರ್ಷಗಳ ಹಿಂದೆ ಬೇಸಿಗೆ ರಜದಲ್ಲಿ ಪಟ್ಟಣ ಬಿಟ್ಟು ಹಳ್ಳಿಗೆ ಹೋಗಬೇಕಾದ ಅವಕಾಶ ಒದಗಿತು. ಆ ಹಳ್ಳಿಯ ಸುತ್ತಲೂ ಬೆಟ್ಟಗಳ ಸಾಲು, ಕಣಿವೆಗಳಲ್ಲಿ ದಟ್ಟವಾದ ಕಾಡು. ಸಂಜೆ ಕಾಲಾಡಿಸಿ

ಕೊಂಡು ಬರೋಣವೆಂದು ನಾಲ್ಕಾರು ಜನ ಆ ಊರಿನ ನಂಟರೊಡನೆ ಬೆಟ್ಟಗಳನ್ನು ಹತ್ತಿ ಇಳಿದು ಅಲೆದಾಡುತ್ತ ಕಾಡಿನ ನಡುವೆ ದಣಿವಾರಿಸಿಕೊಳ್ಳಲು ನಿಲ್ಲಬೇಕಾಯಿತು. ಆಗ ನಂಟರೊಬ್ಬರು ತಮ್ಮ ಬೇಟೆಯ ಅನುಭವವನ್ನು ಹೇಳಲು ಮೊದಲು ಮಾಡಿದರು. ಹುಲಿ ಹೊಂಚುಕಾದು ಹಸುವನ್ನು ಹೇಗೆ ಹಿಡಿದು ಕೊಲ್ಲುತ್ತದೆಂಬುದನ್ನು ಅವರು ಮೈತುಂಬಿ ಹೇಳುತ್ತಿರುವಾಗ ಆಶ್ಚರ್ಯದಿಂದಲೂ ಭಯದಿಂದಲೂ ಮೂಕರಾಗಿ ಬಾಯಿ ಬಿಟ್ಟುಕೊಂಡು ಉಳಿದ ನಾವೆಲ್ಲ ಕೇಳುತ್ತಿದ್ದೆವು. ಹೇಳುತ್ತ ಹೇಳುತ್ತ ಅವರು "ಹುಲಿ ಕಿಗ್ಗಾಳಿಗೆ ಬಂತು" ಎಂದು ಅಭಿನಯಿಸಿ ತೋರಿಸಿದರು. ಆ ಕೂಡಲೆ ನಾನು ಎದ್ದುನಿಂತು ಕುಣಿದಾಡುತ್ತ ಅವರನ್ನು ತಬ್ಬುವಹಾಗೆ ಕೈಹಿಡಿದು 'ಸ್ವಾಮಿ, ಕೊಂಚ ತಾಳಿ, ಕಿಗ್ಗಾಳಿ ಎಂದರೆ ಏನು' ಎಂದು ಕೇಳಿದೆನು. ಉಳಿದವರಿಗೆಲ್ಲ ಆಶ್ಚರ್ಯ—ಇವನಿಗೆ ಈ ಪದದ ಅರ್ಥ ತಿಳಿಯದೇ ಎಂದು. ಅವರು ನನ್ನಕಡೆ ತಿರಸ್ಕಾರದಿಂದ ನೋಡಿದರು. ಅವರ ನೋಟ ನನ್ನ ಕುತೂಹಲವನ್ನು ಕುಗ್ಗಿಸಲಿಲ್ಲ. ಕಾವ್ಯದಲ್ಲಿ ಒಂದೆರಡು ಬಾರಿ ಆ ಪದವನ್ನು ಕಂಡು ಅರ್ಥವೇನೆಂದು ತಲೆ ಕೆರೆದುಕೊಂಡು ಕೋಶಗಳನ್ನೆಲ್ಲ ತಿರುವಿಹಾಕಿ ನಿರಾಶನಾಗಿದ್ದ ನನಗೆ ಅನಿರೀಕ್ಷಿತವಾದ ಕಡೆಯಿಂದ ಬೆಳಕು ಬಂದದ್ದು ಕುತೂಹಲ ಇಮ್ಮಡಿಸುವಂತಾಯಿತು. ಮುಂದಕ್ಕೆ ಕತೆ ಹೇಳಲು ಅವರನ್ನು ಬಿಡದೆ ಅರ್ಥ ತಿಳಿಸಲೇಬೇಕೆಂದು ಮೊಂಡಾಟ ಮಾಡಿದಾಗ ಅವರು ನಕ್ಕು ಬರೆದು ಅದನ್ನು ವಿವರಿಸಿದರು.

ಹರಿಶ್ಚಂದ್ರನು ಬೇಟೆಯಾಡಿದ್ದನ್ನು ವರ್ಣಿಸುವಾಗ ರಾಘವಾಂಕ 'ಮೇಗಾಳಿ, ಕಿಗ್ಗಾಳಿ' ಎಂಬ ಈ ಪದಗಳನ್ನು ಪ್ರಯೋಗಿಸಿದ್ದಾನೆ. ಪ್ರಾಣಿಗಳನ್ನು ಬೇಟೆಯಾಡುವುದಕ್ಕೆ ಪಳಗಿಸಿದ ಹುಲಿಗಳನ್ನು ಉಪಯೋಗಿಸುವ ರೂಢಿ ಇತ್ತು, ಚಿಕ್ಕ ಹಕ್ಕಿಗಳನ್ನು ಹಿಡಿಯಲು ಸಾಕಿದ ಸಾಳ್ವನೆಂಬ ಗಿಡುಗವನ್ನು ಉಪಯೋಗಿಸುವ ಹಾಗೆ. ಹರಿಶ್ಚಂದ್ರನ ಜೊತೆಯಲ್ಲಿ ಹೋದ ಬೇಟೆಗಾರರು ಹುಲಿಯಿದ್ದ ಬೋನನ್ನು ಬಂಡಿಯಮೇಲಿಟ್ಟು ಕಾಡಿಗೆ ಕೊಂಡುಹೋಗಿ ಅಲ್ಲಿ ಮೃಗಗಳ ಹಕ್ಕೆಯನ್ನು ಕಂಡುಹಿಡಿದು ಆ ದಿಕ್ಕಿಗೆ ಸರಿಯಾಗಿ ಒಂದು ಕಡೆ ದೂರದಲ್ಲಿ ಎತ್ತನ್ನು ಕಟ್ಟಿ ಬೋನಿನ ಹುಲಿಗೆ ಅದನ್ನು ತೋರಿಸಿ ಬೇಟೆಯಾಡು ಎಂದು ಬೆನ್ನು ತಟ್ಟಿ ಕಳಿಸುತ್ತಾರೆ. ಎತ್ತನ್ನು ಹೊಡೆಯಬೇಕೆಂದು ಹೊರಟ ಹುಲಿ ದಾರಿಯಲ್ಲಿರುವ ಮೃಗದ ಹಕ್ಕೆಗೆ ಹೋಗಿ ಅವುಗಳನ್ನು ಕೊಲ್ಲುತ್ತದೆ. ಈ ಸಂದರ್ಭದಲ್ಲಿ "ಕಾಂತಾರದೊಳು ಮೃಗವ ನೆಲೆಗೊಳಿಸಿ ಮೇಗಾಳಿಯಿಂ ದೂರದಿಂ ತೋಱಿತ್ತನೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂದಿಳುಹಿ ಹುಲಿಯ ಹಾರಯಿಸಿ ತಲೆದಡವಿ ತೋಱಿ ಹಾಸವ ತಿವಿದು" ಬೇಡರು ಬಿಟ್ಟರೆಂದು ರಾಘವಾಂಕನ ಮಾತು.[1] ಪಾಂಡವರು ಅರಗಿನ ಮನೆಯಿಂದ ಬದುಕಿ ಹಿಡಿಂಬವನದಲ್ಲಿ ಇರುಳು ಭೀಮನ ಆರೈಕೆಯಲ್ಲಿ ಮಲಗಿರಲು ಅವರ ಇರವು ಹಿಡಿಂಬನಿಗೆ ತಿಳಿಯಬಂದದ್ದನ್ನು ಹೇಳುವಾಗ "ಮುರಿಮುರಿದು ಮೇಗಾಳಿಯಲಿ ಮೂಗರಳಿ ಮಾನವ ಗಂಧವಿದು ಗೋಚರಸಿತೆತ್ತಣದೋ" ಎಂದು ಕುಮಾರವ್ಯಾಸನ ಉಕ್ತಿ.[2] ಈ ಸಂದರ್ಭಗಳಲ್ಲಿ ಬರುವ 'ಮೇಗಾಳಿ', 'ಕಿಗ್ಗಾಳಿ' ಎಂಬ

---

[1] 'ಹರಿಶ್ಚಂದ್ರ ಕಾವ್ಯಸಂಗ್ರಹ', III—೨೧. [2] 'ಕನ್ನಡ ಭಾರತ, ಆದಿ. IX—೧೧.

ಪದಗಳ ಅರ್ಥವನ್ನು ತಿಳಿಯಬೇಕಾಗಿದೆ. ಇದಕ್ಕೆ ಹಿಂದೆ ಸೂಚಿಸಿದ ನಕ್ಷೆಯನ್ನು ಕೆಳಗೆ ಕಾಣಿಸಿದೆ:

× ——————→ × ——————→ ×

(ಹುಲಿ ೧) (ಹಸು) (ಹುಲಿ ೨)

ಕಾಡಿನ ಒಂದೆಡೆಯಲ್ಲಿ ಹಸು ಮೇಯುತ್ತಿದೆ. ಬೇಟೆಗಾಗಿ ಹೊರಟ ಹುಲಿ ಓಡಾಡುತ್ತ ೧ನೆಯ ಸ್ಥಳಕ್ಕೆ ಬಂದು ಹಸುವನ್ನು ದೂರದಿಂದ ನೋಡುತ್ತದೆ. ಗಾಳಿ ಬೀಸುವ ದಿಕ್ಕನ್ನು ತಿಳಿಯುವ ಕೌಶಲ ಹುಲಿಗೆ ಹುಟ್ಟಿನಿಂದ ಬಂದದ್ದು. ಬಾಣದ ಗುರುತು ಗಾಳಿ ಬೀಸುವ ದಿಕ್ಕನ್ನು ತೋರಿಸುತ್ತದೆ. ೧ನೆಯ ಸ್ಥಾನದಲ್ಲಿ ಹುಲಿಯಿದ್ದಾಗ ಗಾಳಿ ಅದರಮೇಲಿಂದ ಹಸುವಿನ ಕಡೆಗೆ ಬೀಸುತ್ತದೆ. ಇದರಿಂದ ಹಸುವಿಗೆ ಹುಲಿಯ ಸೊಗಡು ಗೊತ್ತಾಗಿ ಅದು ಓಡಿಹೋಗಬಹುದು. ಆದ್ದರಿಂದ ಹುಲಿ ಹಸುವನ್ನು ಗುರುತಿಸಿದ ಕೂಡಲೇ, ತನ್ನ ಕಡೆಯಿಂದ ಗಾಳಿ ಅದರ ಕಡೆಗೆ ಬೀಸುವಂತಿದ್ದರೆ, ಆ ಸ್ಥಳವನ್ನು ಬಿಟ್ಟು ಬಳಸಿಕೊಂಡು ಬೇಗನೆ ೨ನೆಯ ಸ್ಥಳಕ್ಕೆ ಬರುತ್ತದೆ. ಗಾಳಿ ತನ್ನ ದಿಕ್ಕನ್ನು ಅಷ್ಟರಲ್ಲಿ ಬದಲಾಯಿಸದೆ ಇದ್ದ ಪಕ್ಷದಲ್ಲಿ, ಹಸುವಿನ ಕಡೆಯಿಂದ ಹುಲಿಯ ಕಡೆಗೆ ಬೀಸುತ್ತಿರುತ್ತದೆ. ಹುಲಿಯ ಸುಳಿವು ಹಸುವಿಗೆ ಈಗ ಗೊತ್ತಾಗುವಹಾಗಿಲ್ಲ. ಅದು ಮೆಲ್ಲಮೆಲ್ಲಗೆ ಹಸುವಿನ ಹತ್ತಿರಕ್ಕೆ ಜುಣುಗಿ ಬಂದು ಅದಕ್ಕೆ ತಿಳಿಯದೆಯೇ ಅದರ ಕೊರಳ ಕೆಳಗೆ ನುಸಿದು ಮುಂಗೈ ಗಳಿಂದ ಸಾವು ಅಪ್ಪಿಕೊಳ್ಳುವಂತೆ ತಬ್ಬಿಕೊಂಡು ತನ್ನ ಹಿಂಗಾಲುಗಳನ್ನು ಹಸುವಿನ ಹಿಂಗಾಲುಗಳಿಗೆ ಅದು ಓಡದಂತೆ ಬಲವಾಗಿ ಆನಿಸಿ ಆಮೇಲೆ ಗೋಮಾಳವನ್ನು ಹಲ್ಲಿನಿಂದ ಇರಿದು ರಕ್ತ ಹೀರುತ್ತದೆ. ಹಸು ಹೆದರಿಕೆಯಿಂದ ಬಿಚ್ಚಿಕೊಂಡು ರಕ್ತ ಕಡಮೆಯಾಗುತ್ತ ಬಂದಹಾಗೆಲ್ಲ ಶಕ್ತಿಗುಂದಿ ಏನು ಮಾಡುವುದಕ್ಕೂ ತೋರದೆ ತೆಪ್ಪಗಿರುತ್ತದೆ. ಹುಲಿ ಹಿಂಗಾಲುಗಳಿಂದ ಹಸುವಿನ ಕೆಳಹೊಟ್ಟೆಯನ್ನು ಒದೆದು ತಾನು ಮೇಲಾಗಿ ಹಸು ಕೆಳಗಾಗುವಂತೆ ಬೀಳಿಸುತ್ತದೆ. ಇಲ್ಲಿಗೆ ಅದರ ಬೇಟೆ ಮುಗಿದಂತೆ. ಹುಲಿ ೧ನೆಯ ಸ್ಥಾನದಲ್ಲಿರುವಾಗ ಅದು ಮೇಗಾಳಿಯಲ್ಲಿರುತ್ತದೆ; ೨ನೆಯ ಕಡೆಗೆ ಬಂದಾಗ ಕಿಗ್ಗಾಳಿಯಲ್ಲಿರುತ್ತದೆ. ಬೇಟೆಯಾಡುವ ಮೃಗದ ಮೇಲಿಂದ ಬೇಟೆಗೆ ಗುರಿಯಾದ ಪ್ರಾಣಿಯ ಕಡೆಗೆ ಬೀಸುವ ಗಾಳಿಗೆ ಮೇಗಾಳಿಯೆಂದೂ ಪ್ರಾಣಿಯ ಕಡೆಯಿಂದ ಆ ಮೃಗದ ಕಡೆ ಬೀಸುವ ಗಾಳಿಗೆ ಕಿಗ್ಗಾಳಿಯೆಂದೂ ಹೆಸರು. ಇದು ತಿಳಿದರೆ ರಾಘವಾಂಕನ ಮಾತಿಗೆ ಅರ್ಥ ಸ್ಫುಟವಾಗುತ್ತದೆ. ಅದನ್ನು ಹೀಗೆ ತೋರಿಸಬಹುದು:

× ——————→ ಗಾಳಿಯ ದಿಕ್ಕು × ——————→ ×

(ತೋಱಿತ್ತು) (ಮೃಗದ ಹಕ್ಕೆ) (ಹುಲಿ)

ಮೊದಲು ಮೃಗದ ಹಕ್ಕೆಯನ್ನು ಕಂಡುಹಿಡಿದು ಅದಕ್ಕೆ ಮೇಗಾಳಿಯಲ್ಲಿ ತೋಱಿತ್ತನ್ನು ಕಟ್ಟಿ ಅದನ್ನು ಹುಲಿಗೆ ತೋರಿಸಿ ಆಮೇಲೆ ಆ ಹುಲಿಯನ್ನು ಕಿಗ್ಗಾಳಿಯಲ್ಲಿ ಬಿಟ್ಟರೆ ಅದು ಎತ್ತನ್ನು ಬೇಟೆಯಾಡಲು ಹೊರಟು ಮೃಗದ ಹಕ್ಕೆಯ ಮಾರ್ಗವಾಗಿಯೇ ಹೋಗಬೇಕಾಗುತ್ತದೆ. ಆಗ ಅದು ಅಲ್ಲಿರುವ ಮೃಗಗಳನ್ನು ಹಿಡಿಯಲು ಹವಣಿಸುತ್ತದೆ. ಅಷ್ಟುಹೊತ್ತಿಗೆ ಕಟ್ಟಿದ ಎತ್ತನ್ನು ಬಿಚ್ಚಿಕೊಂಡು ಬರಬಹುದು.

ಮೃಗಗಳು ಪಕ್ಕೆಯಲ್ಲಿ ಅವಿತುಕೊಂಡಿರುವುದರಿಂದ ಅದರಮೇಲೆ ಬೀಸುವ ಗಾಳಿಯಲ್ಲಿ ಅವುಗಳ ಗಂಧ ಬರಲು ಕಾರಣವಿಲ್ಲ. ಆದ್ದರಿಂದ ಹುಲಿಗೆ ಅವುಗಳ ಇರವು ತಿಳಿಯುವಂತಿಲ್ಲ. ಇದಕ್ಕಾಗಿ ತೋಜಿತ್ತನ್ನು ಕಟ್ಟಬೇಕಾಗುತ್ತದೆ. ಕುಮಾರವ್ಯಾಸನ ಪ್ರಯೋಗವೂ ಈಗ ಅರ್ಥವಾಗುತ್ತದೆ. ಪಾಂಡವರ ಮೇಲಿಂದ ಹಾಯ್ದು ಬರುವ ಗಾಳಿಯನ್ನು ಮೇಗಾಳಿ ಎಂದು ಕರೆದಿದ್ದಾನೆ; ಅವರು ಹಿಡಿಂಬನಿಗೆ ಮೇಗಾಳಿಯ ಸ್ಥಾನದಲ್ಲಿದ್ದಾರೆ, ಹಿಡಿಂಬನು ಕಿಗ್ಗಾಳಿಯಲ್ಲಿದ್ದಾನೆ.

ಈಗ ಇವೆರಡು ಪದಗಳು ಹೇಗೆ ಹುಟ್ಟಿರುವುವೆಂಬುದನ್ನು ತಿಳಿಯುವುದು ಸುಲಭ. ಮೇಗಾಳಿ ಎಂಬುದು ಮೇಲ್ + ಗಾಳಿ ಇಂದಲೂ, ಕಿಗ್ಗಾಳಿಯೆಂಬುದು ಕಿೞ್ + ಗಾಳಿ ಇಂದಲೂ ಬಂದಿರಬೇಕೆಂದು ಸ್ಪಷ್ಟ; ಮೇಲ್ಗಾಳಿ > ಮೇಗಾಳಿ; ಕಿೞ್ಗಾಳಿ > ಕಿರ್ಗಾಳಿ > ಕಿಗ್ಗಾಳಿ. ಇವುಗಳ ಅರ್ಥ ತಿಳಿಯದಿರುವಾಗ "ಕಿಗ್ಗಾಳಿ (೩–೨೧) ಇಲ್ಲಿ ಪಾಠವೇ ತಪ್ಪಿರಬೇಕು" ಎಂದು ವಿಮರ್ಶಕರೊಬ್ಬರು ಹೇಳಿರುವುದು ಸಾಹಸದ ಮಾತೇ ಸರಿ.[1]

ಇಂಥ ಪದಗಳು ನಮ್ಮ ಜನರ ದಿನದ ಬದುಕಿನಲ್ಲಿ ಇನ್ನೂ ಬಳಕೆಯಾಗಿವೆ. ಕಮ್ಮಾರ ಚಮ್ಮಾರ ಗಾಣಿಗ ಈಡಿಗ ಜಾಡ ಬೇಡರೇ ಮುಂತಾದ ಕಸಬುದಾರರಲ್ಲಿ ಅವರವರ ಕೆಲಸಕ್ಕೆ ಸಂಬಂಧಪಟ್ಟ ಹಲವು ಪದಗಳು ಈಗಲೂ ರೂಢಿಯಲ್ಲಿವೆ. ಅಂಥವರೊಡನೆ ಸ್ನೇಹ ಬೆಳಸಿ ಅವರಬಳಿ ಕೊಂಚ ಓಡಾಡುತ್ತಿದ್ದರೆ ಅವರು ಬಳಸುವ ಪದಗಳ ಅರಿವುಂಟಾಗುತ್ತದೆ. ಆ ಪದಗಳು ಕಾವ್ಯದಲ್ಲಿ ಬಂದಾಗ ಅವಕ್ಕೆ ಅರ್ಥ ಹೇಳಬೇಕಾದರೆ ಇದೊಂದೇ ದಾರಿ. ಇದು ಒಬ್ಬರಿಂದಲೇ ಆಗುವ ಕೆಲಸವಲ್ಲ. ಶನಿವಾರದ ದಿನ ಭಿಕ್ಷೆ ಬೇಡಲು ಬಂದ ಹಳ್ಳಿಯ ಹೆಂಗಸೊಬ್ಬಳು "ಬುದ್ಧಿ, ಇವತ್ತು ವಡವಾರ, ಅಕ್ಕಿ ಕೊಡಿ" ಎಂದು ಹೇಳಿದ್ದನ್ನು ಕೇಳಿ ಅಚ್ಚರಿಯುಂಟಾಯಿತು. ಕನ್ನಡ ಶಾಸನಗಳಲ್ಲಿ ಹಲವುಸಲ ಬರುವ ವಡ್ಡವಾರದ ವಿಷಯದಲ್ಲಿ ಚರ್ಚೆ ಇನ್ನೂ ನಡೆಯುತ್ತಿದೆ. ಅದು ಇನ್ನೂ ಬದುಕಿದೆಯೆಂದು ಕನಸಿನಲ್ಲಿಯೂ ಎಣಿಸಿರಲಿಲ್ಲ. ಆದರೆ ಇದೆ, ಬರಿ ಪುಸ್ತಕ ಓದುವವರಿಗೆ ಗೊತ್ತಿಲ್ಲ, ಅಷ್ಟೇ. ಕನ್ನಡ ಕೋಶ ಮಾಡುವವನಿಗೆ ಹಳ್ಳಿಯ ಮಾತೂ ಜೀವನದ ರೀತಿಯೂ ತಿಳಿದಿದ್ದರೆ ತುಂಬ ಪ್ರಯೋಜನವುಂಟು.

**೨. ಹುಡುಕುನೀರು.**— ಹೊಲತಿಯರ ಕಾಟವನ್ನು ತಾಳಲಾರದೆ ಹರಿಶ್ಚಂದ್ರನೂ ಅವನ ಪ್ರಧಾನನೂ ಸೇರಿ ಚಾವಟಿಯಿಂದ ಅವರನ್ನು ಹೊಡೆದು ಅಟ್ಟಿದ ಬಳಿಕ ಆ ಸುದ್ದಿಯನ್ನು ತಿಳಿದ ವಿಶ್ವಾಮಿತ್ರ ಕೋಪದಿಂದ ಕುದಿದು ಹರಿಶ್ಚಂದ್ರನಿದ್ದೆಡೆಗೆ ಹರಿದುಬಂದು ಬಯ್ಯುತ್ತ ತನ್ನ ಪ್ರತಾಪವನ್ನು ಕೊಚ್ಚಿ ಕೊಳ್ಳುವಾಗ "ಕದನಕ್ಕೆಂದು ಬಂದಮುರರಂ ಕೆಡಹಿ ಹುಡುಕುನೀರದ್ದುವೆನ್ನಳವ ನಱಿಯಾ" ಎಂದು ಗರ್ಜಿಸುತ್ತಾನೆ.[2] ತನ್ನ 'ಸಿದ್ಧರಾಮ ಪುರಾಣ'ದಲ್ಲಿಯೂ ರಾಘವಾಂಕ ಈ ಪದವನ್ನು ಬಳಸಿರುವುದು "ಶಿವನಂ ನೆನೆಯುತೆಡೆಯೊಳನ್ಯಾಯಮಂ

---

[1] 'ಜಯಕರ್ನಾಟಕ', ಸಂ. IX, ಪುಟ ೭೬೬.

[2] 'ಹರಿಶ್ಚಂದ್ರ ಕಾವ್ಯಸಂಗ್ರಹ', V–೧೦.

ಮಾಡಿ ಮತ್ತಂ ನೆನೆಯುತಿರ್ದೊಡಾ ಶಿವನ ನಾಮಂ ಹುಡುಕುನೀರದ್ದದಿಹುದೇ ಮಗನೆ" ಎಂಬ ಪದ್ಯಭಾಗದಲ್ಲಿ (VIII-೧೮) ಕಂಡುಬರುತ್ತದೆ. ಇನ್ನೂ ಕೆಲವು ಪ್ರಯೋಗಗಳನ್ನು ನೋಡಬಹುದು. ಜಲಕೇಳಿಯಾಡುತ್ತಿದ್ದ ನೀರೆಯೊಬ್ಬಳ ಹುರುಡನ್ನು ನಾಗಚಂದ್ರ

ಕಡುನೀಱಿ ಜಂತ್ರದಂಚೆಯ
ನಡಿಗಡಿಗಾ ನೀರೊಳರ್ದಿದಳ್ ನಡೆವೆಡೆಯೊಳ್ ।
ಗಡ ನಾಣ್ಚದೆ ಪುರುಡಿಪುದೆ
ನ್ನೊಡನೆಂದುಯ್ದಲ್ಲಿ ಪುಡುಕುನೀರರ್ದುವವೊಲ್ ॥

ಎಂದು ವರ್ಣಿಸಿರುವನು.[1] ಪಾಪಿ ಜೀವರಿಗೆ ನರಕದಲ್ಲಿ ಆಗುವ ನಾನಾ ಹಿಂಸೆಗಳಲ್ಲಿ ಒಂದನ್ನು ಕುರಿತು "ವೈತರಣೀ ಪ್ರವಾಹಂಗಳೊಳ್ ಹುಡುಕುನೀರದ್ದುವುದುಂ" ಎಂದು ಕಮಲಭವನು ಹೇಳಿದ್ದಾನೆ.[2] ನೀರಾಟದಲ್ಲಿ ತೊಡಗಿದ್ದ ಹೆಂಗಸರು ತಮ್ಮ ಕೊಡಗಳನ್ನು "ಅತಿಗರ್ವಂಬೆತ್ತುವು ತಾವಿವೆನುತ ಕಡುಮುಳಿಸಿಂದೊತ್ತಿ ಹುಡುಕು ನೀರದ್ದುವ ತೆಱನಂ" ತೋರಿಸಿದರೆಂದು ಮಂಗರಸನ ಮಾತು.[3]

ಮೇಲಿನ ಯಾವ ಪ್ರಯೋಗವನ್ನು ನೋಡಿದರೂ "ಹುಡುಕುನೀರು" ಎಂಬುದರ ಅರ್ಥ ಖಚಿತವಾಗಿ ಆಗುವಂತಿಲ್ಲ. ಅದನ್ನು ಬೇರೆ ರೀತಿಯಿಂದ ಕಂಡು ಹಿಡಿಯಬೇಕು. ಇದಕ್ಕೆ ವಿಚಾರ ಆವಶ್ಯಕ.

ಈ ಪದದ ಹಳೆಯರೂಪ 'ಪುಡುಕುನೀರ್' ಎಂದು ನಾಗಚಂದ್ರನ ಪ್ರಯೋಗ ಸಾರುತ್ತದೆ. ಪುಡುಕು+ನೀರ್ ಎಂದು ಅದರ ವಿಭಜನೆ. 'ಪುಡುಕು' ಎಂದರೆ ಏನು? ಶೋಧನೆ ಮಾಡು ಎಂಬರ್ಥದಲ್ಲಿ ಪುಡುಕು > ಹುಡುಕು ಎಂಬ ಧಾತು ಬೇರೆ ಒಂದಿದೆ. ಪ್ರಕೃತ ಸಂದರ್ಭಕ್ಕೆ ಇದು ಹೊಂದುವುದಿಲ್ಲವಾದ್ದರಿಂದ ಅದರ ಗೊಡವೆ ಇಲ್ಲಿ ಬೇಡ. 'ಪುಡುಕು' ಎಂಬಲ್ಲಿರುವ ಕೊನೆಯ ಅಕ್ಷರವಾದ- ಕು ಒಂದು ಪ್ರತ್ಯಯ ಸ್ವರೂಪವಾಗಿರುವುದರಿಂದ (Formative Suffix) ಈ ಪದದ ಮೂಲರೂಪ 'ಪುಡು' ಎಂದಾಗುತ್ತದೆ. ಈಗ ಪಂಪನ ಒಂದು ಪದ್ಯ ನೆನಪಿಗೆ ಬರುತ್ತದೆ:[4]

ಸಂಗತ ಧೂಮಾವಳಿಯಿನಿ
ಭಂಗಳೆ ಗೆತ್ತೊಳಱಿ ಸಾಯ್ದು ಪೊಗೆ ಪುಗೆ ಕಣ್ಣಂ ।
ಸಿಂಗಂಗಳಳುರೆ ಗರ್ಜಿಸಿ
ಲಂಗಿಸಿ ಪುಡಪುಡನೆ ಪುೞ್ಗಿ ಸತ್ತುವು ಪಲವುಂ ॥

ಇಲ್ಲಿರುವ 'ಪುಡಪುಡನೆ ಪುೞ್ಗಿ' ಎಂಬ ಮಾತುಗಳು ಮುಖ್ಯವಾದುವು. ಪುೞ್ಗಿ ಎಂಬ ಧಾತುವನ್ನು ಕೇಶಿರಾಜ ಕೊಟ್ಟು ಅದಕ್ಕೆ ದಹನಕ್ರಿಯೆ ಎಂದರ್ಥವನ್ನು ತಿಳಿಸಿದ್ದಾನೆ. ತಮಿಳಿನಲ್ಲಿ ಇದರ ರೂಪಾಂತರವಾದ ಪುೞುಂಗು ಎಂಬ ಧಾತುವುಂಟು; ಅದಕ್ಕೆ ಅರ್ಥ ಕುದಿ, ಬೇಯು ಎಂದು. ಕನ್ನಡಿಗರು ಕುಸುವಲಕ್ಕಿ (> √ಕುದಿ+ಅಕ್ಕಿ) ಎಂದು ಕರೆಯುವುದನ್ನು ತಮಿಳರು ಪುೞುಂಗಲರಿಶಿ ಎಂದು ಹೇಳುತ್ತಾರೆ. ಹುಗ್ಗಿ

---

[1] 'ಮಲ್ಲಿನಾಥಪುರಾಣ', VI-೧೧೦. [2] 'ಶಾಂತೀಶ್ವರ ಪುರಾಣ', IX-೧೧೦ ಗದ್ಯ. [3] 'ಜಯನೃಪ ಕಾವ್ಯ', IX-೧೪. [4] 'ಪಂಪ ಭಾರತ', V-೯೨.

ಎಂಬ ಕನ್ನಡಪದ ಈ ಪುೞ್ಗು ಧಾತುವಿನಿಂದ ಹುಟ್ಟಿದ್ದು. ಆದ್ದರಿಂದ ಆ ಧಾತುವಿಗೆ ಸುಡು ಎಂಬರ್ಥವೊಂದೇ ಅಲ್ಲದೆ ಕುದಿ, ಬೇಯು ಎಂಬರ್ಥಗಳೂ ಇದ್ದಿರಬೇಕೆಂದು ಸ್ಪಷ್ಟವಾಗುತ್ತದೆ. *ಪುಡು ಎಂಬ ಮೂಲಧಾತುವಿಗೆ –ಗು ಎಂಬ ಪ್ರತ್ಯಯ ಸೇರಿ (Formative Suffix) ಪುೞ್ಗು ಆಗಿದೆ. ಆದ್ದರಿಂದ *ಪುಡುವಿಗೂ ಕುದಿ, ಬೇಯು ಎಂಬರ್ಥಗಳು ಇದ್ದಿರಬೇಕು. ಪಂಪನ ಪದ್ಯದಲ್ಲಿರುವ 'ಪುಡಪುಡನೆ' ಎಂಬ ಶಬ್ದ *ಪುಡು ಎಂಬ ಮೂಲಧಾತುವಿದ್ದಿರಬೇಕೆಂಬುದನ್ನು ವಿಶದಗೊಳಿಸುತ್ತದೆ. ಇವರಿಂದಲೇ 'ಪುಡುಕು' ಎಂಬ ಧಾತು ಬಂದು ಕುದಿ, ಬೇಯು ಎಂಬರ್ಥವನ್ನು ಪಡೆದಿರಬೇಕೆಂದು ಅರಿವಾಗುತ್ತದೆ. ಪುಡುಕುನೀರ್ ಎಂದರೆ ಕುದಿನೀರು, ಬಿಸಿನೀರು, ಸುಡುನೀರು ಎಂದರ್ಥ. ಇದನ್ನು ಸಮರ್ಥಿಸುವುದಕ್ಕಾಗಿ ತೆಲುಗಿನ 'ಉಡುಕುನೀಳ್ಳು' ಎಂಬ ಪದವನ್ನು ನೋಡಬಹುದು. ಇಲ್ಲಿನ ಉಡುಕು ಎಂಬ ಶಬ್ದ ಏನು? ಪದದ ಆದಿವ್ಯಂಜನ ಮಾಯವಾಗಿ ಅದರ ಮೇಲಿನ ಸ್ವರ ನಿಂತುಬಿಡುವುದು ದ್ರಾವಿಡ ಭಾಷೆಗಳಲ್ಲಿ ಕೆಲವುವೇಳೆ ಕಾಣುವ ವ್ಯಾಪಾರ; ನೀರುಳ್ಳಿ > ಈರುಳ್ಳಿ, ಚಿಗುರು > ಇಗುರು, ತೊಡನೆ > ಒಡನೆ, ತೊಗರ್ > ಒಗರ್ ಎಂಬೀ ವ್ಯತ್ಯಾಸಗಳು ನಡೆದಿರುವ ಹಾಗೆಯೇ 'ಪುಡುಕು' ಎಂಬುದು 'ಉಡುಕು' ಎಂದು ತೆಲುಗಿನಲ್ಲಿ ಆಗಿದೆ. ಈ ಕಾರಣಗಳಿಂದ ಪುಡುಕುನೀರ್ ಎಂಬುದಕ್ಕೆ ಕುದಿನೀರೆಂಬರ್ಥ ಸಾಧುವಾಗಿದೆಯೆಂದು ಹೇಳಬಹುದು. ಮೇಲೆ ಕಾಣಿಸಿರುವ ಎಲ್ಲ ಪ್ರಯೋಗಗಳಿಗೂ ಇದು ಅನ್ವಯಿಸುವುದಾಗಿದೆ. ಪುಡುಕುನೀರದ್ದುವುದು ಒಂದು ದಂಡನೆ. ಅದ್ದಿಸಿಕೊಂಡವನು ಎದ್ದುಬರುವಹಾಗೇ ಇಲ್ಲ; ಒಂದುವೇಳೆ ಬಂದರೆ ಮೈಯೆಲ್ಲ ಬೆಂದುಹೋಗಿರುತ್ತದೆ.

**೩. ಬಡಪ.**— ಅಶ್ವತ್ಥಾಮನೂ ಪಾಂಡ್ಯನೂ ಒಬ್ಬರನ್ನೊಬ್ಬರು ಎದುರಿಸಿ ಯುದ್ಧಮಾಡುವಾಗ ಪಾಂಡ್ಯನು ಬಾಣದ ಮಳೆ ಸುರಿಸಿದ್ದನ್ನು ಪಂಪನು

ಎನೆ ಬೆಳ್ಮಸೆಯಂಬಿನ ಸರಿ
ಮೊನೆಯಂಬಿನ ಸೋನೆ ಪಾರೆಯಂಬಿನ ತಂದಲ್ ।
ಘನಮಾದುದಲ್ಲಿ ಕಿತ್ತಂ
ಬಿನ ಬಡಪಮಿದೆನಿಸಿ ಪಾಂಡ್ಯನಂಬಂ ಕಱೆದಂ ॥

ಎಂದು ವರ್ಣಿಸಿದ್ದಾನೆ.[1] ಇಲ್ಲಿ 'ಬಡಪ'ಕ್ಕೆ 'ಪಂಪ ಭಾರತ'ದ ಸಂಪಾದಕರು ಪ್ರವಾಹ ಎಂಬರ್ಥವನ್ನು ಕೊಟ್ಟಿದ್ದಾರೆ. ಅದಕ್ಕೆ ಅವರು ಯಾವ ಆಧಾರವನ್ನೂ ಸೂಚಿಸಿಲ್ಲವಾದ್ದರಿಂದ ಅದರ ವಿಷಯವಾಗಿ ಸಂದೇಹ ಹುಟ್ಟುತ್ತದೆ. ಬೇರೆ ಪ್ರಯೋಗಗಳನ್ನು ನೋಡಿ ಆಮೇಲೆ ಇದನ್ನು ನಿರ್ಣಯಿಸಬಹುದು.

ರುದ್ರಭಟ್ಟ ಮಳೆಗಾಲದ ವರ್ಣನೆ ಮಾಡುವಾಗ ಒಂದುಸಲ ಮಾತ್ರ ಈ ಪದವನ್ನು ಬಳಸಿದ್ದಾನೆ:[2]

ಬಲ್ಸರಿ ಬಿಱುಸರಿ ಪೆರ್ಮೞೆ
ಮೆಲ್ಸರಿ ತುಂತುಱ್ ತುಷಾರವಿಡುಕುಂಬನಿ ತಂ ।
ದಲ್ಸೋನೆ ನಟ್ಟ ಬಡಪವೆ
'ನಲ್ಸುರಿದುವು ಬಿಡದ ಮೞೆಗಳಿರುಳುಂ ಪಗಲುಂ ॥

1 'ಪಂಪಭಾರತ', XII–೮೦. 2 'ಜಗನ್ನಾಥ ವಿಜಯ', IV–೩೨.

ಬೆಟ್ಟದ ತಪ್ಪಲಲ್ಲಿ ಮೇಯುತ್ತಿದ್ದ ಮಂದೆಗಳು "ಬಡಪಂ ಬೆಂಬತ್ತೆ ಮೇಪಂ ಮಱೆದು"ವೆಂದೂ[1] ಆಕಾಶಗಂಗಾಪ್ರವಾಹವು "ಚಂದ್ರಕಾಂತದ ನೆಗೆದ ಮುಗಿಲಟ್ಟಣೆಗಳಂ ಮೆಟ್ಟಿ ಬಡಹಮನೊಡರ್ಚೆ ಬಳಸಿದಗಬಿನೊಗುಮಿಗೆ ತಿಂಬಿ ತುಂಬುವರಿಯಿಸಿ"ದುವೆಂದೂ[2] ಅಗ್ಗಳನ ಹೇಳಿಕೆ. ಕಮಲಭವನು ಈ ಪದವನ್ನು ಐದುಬಾರಿ ಬಳಸಿದ್ದಾನೆ.[3] ದೇವಕವಿ ಇದೇ ಐದನ್ನೂ ಕೊಟ್ಟಿರುವುದಲ್ಲದೆ "ಈ ಭುವನ ಗರ್ಭಕುಹರಂ ತಾನಾವಗಮಿಡಿದಡಸಿದ ತುಂತುಱ ಹಗವಮಿದೆನಿಸಿದುದು ಬಿಡದ ಬಡಹದ ಕೊರ್ಬಿಂ" ಎಂಬ ಆರನೆಯ ಪ್ರಯೋಗವನ್ನೂ ಮಾಡಿದ್ದಾನೆ.[4] ಇವರಿಬ್ಬರ ಕಾವ್ಯಗಳಿಂದ ಪೆರ್ವಡಹ, ತನಿವಡಹ, ಸೀರ್ಪನಿವಡಹ ಎಂಬ ಸಮಾಸ ಪದಗಳು ದೊರೆಯುತ್ತವೆ. ಕೊನೆಯದಾಗಿ ಸುರಂಗನ ಈ ಕೆಳಗಿನ ಪದ್ಯವನ್ನು ಗಮನಿಸಬಹುದು:[5]

> ಅಡಸರಿ ಬಲ್ಸರಿ ಮರಮಳೆ
> ಯಿಡುಕುಂಬನಿ ನಟ್ಟವನಿ ತುಷಾರಂ ಬಡಹಂ ।
> ಜಡಿ ಜಿನುಗು ಜುಂಜು ತುಂತು
> ಬಿರ್ಡದಡಿಯಿಡಗೊಡದೆ ಕಱೆದುವಿರುಳುಂ ಪಗಲುಂ ॥

ಈ ಪ್ರಯೋಗಗಳ ಬಲದಿಂದಲೇ ಅರ್ಥನಿರ್ಣಯ ಸಾಧ್ಯ. ರುದ್ರಭಟ್ಟ ಸುರಂಗರ ಪದ್ಯಗಳನ್ನು ಕಣ್ತೆರೆದು ನೋಡಿದರೆ ಬಡಪ ಎಂಬುದು ಒಂದು ಬಗೆಯಾದ ಮಳೆಯೆಂದು ವ್ಯಕ್ತವಾಗುತ್ತದೆ. ಇರಬಹುದಾದ ಅಲ್ಪ ಸ್ವಲ್ಪ ಸಂದೇಹವನ್ನೂ ಹೇಮಚಂದ್ರಾಚಾರ್ಯನು ಖಚಿತವಾಗಿ ಹೋಗಲಾಡಿಸುತ್ತಾನೆ; ತನ್ನ ಪ್ರಾಕೃತ ನಿಘಂಟುವಿನಲ್ಲಿ 'ವಡಪ್ಪಂ' ಎಂಬ ಶಬ್ದವನ್ನು ಕೊಟ್ಟು ಅದಕ್ಕೆ 'ಲತಾಗಹನಂ' 'ನಿರಂತರವೃಷ್ಟಿಃ' ಎಂಬರ್ಥಗಳನ್ನು ಬರೆದಿದ್ದಾನೆ; "ಝೂಡ ಝುಡೀಸು ವಡಪ್ಪಂ" ಎಂದು ಅದಕ್ಕೆ ಪ್ರಾಕೃತದ ಪರ್ಯಾಯ ಶಬ್ದಗಳನ್ನೂ ಹೇಳಿದ್ದಾನೆ.[6] ವಡಪ್ಪಂ ಎಂಬುದಕ್ಕೂ ಬಡಪಂ ಎಂಬುದಕ್ಕೂ ನಂಟುತನವಿದೆ. ಕನ್ನಡದಲ್ಲಿ ವಕಾರಾದಿಯಾದ ಶಬ್ದಗಳು ತೀರ ಕಡಮೆಯಾಗಿರುವುದೂ ತಮಿಳು ತೆಲುಗು ಕೋಶಗಳಲ್ಲಿ ಈ ಪದ ದೊರೆಯದಿರುವುದೂ ವಡಪ್ಪಂ ಎಂಬುದು ದ್ರಾವಿಡೇತರ ಶಬ್ದವಾಗಿರಬಹುದೆಂಬ ಊಹೆಗೆ ಕಾರಣಗಳು. ಅದು ಕನ್ನಡಕ್ಕೆ ಬಂದು ವಿಕಾಸಹೊಂದಿದೆ: ವಡಪ್ಪ > ಬಡಪ > ಬಡಹ. ಈಗ ಬಳಕೆಯಲ್ಲಿದೆಯೊ ಇಲ್ಲವೊ ತಿಳಿಯದು. ಅದರ ಅರ್ಥ ನಿರಂತರವಾದ ಮಳೆಯೆಂದೇ ಹೊರತು 'ಪ್ರವಾಹ'ವಲ್ಲ; ಲತಾಗಹನ ಎಂಬರ್ಥದಲ್ಲೂ ಅದು ಕನ್ನಡದಲ್ಲಿ ಪ್ರಯೋಗವಾಗಿದ್ದರೆ ಸೋಜಿಗವೇನೂ ಅಲ್ಲ.

**೪. ಓಹರಿ ಸಾಹರಿ.**—ಖರನೂ ವಿರಾಧಿತನೂ ತಂತಮ್ಮ ಸೈನ್ಯಗಳೊಡನೆ ಬಂದು ಎದುರಿಸಿ ಬಿರುಸಿನಿಂದ ಕಾಳಗವಾಡುತ್ತಿದ್ದಾಗ ಅರೆನೆಲೆಯಲ್ಲಿದ್ದ ಲಕ್ಷ್ಮಣ ಸಂತೋಷದಿಂದ ಅದನ್ನು ನೋಡುತ್ತಿದ್ದನೆಂದೂ ಆಗ ಆ ಎರಡು ಸೈನ್ಯಗಳು—"ಅರವರಿಸದೆ [ಮೋಹರಿಸಿ ಹರಿಯ] ಮಾಡುತ್ತಿರ್ದಪುವು" ಎಂದೂ ಕುಮುದೇಂದು ಕವಿಯ ವರ್ಣನೆ.[7] ಇಲ್ಲಿ ಆ ಗ್ರಂಥದ ಮಾನ್ಯ ಸಂಪಾದಕರ ಪಾಠ ಸರಿಯಲ್ಲವೆಂದೂ

---

[1] 'ಚಂದ್ರಪ್ರಭ ಪುರಾಣ', IV–೪೭. [2] 'ಅದೇ', VIII–೪೩ ಗದ್ಯ. [3] 'ಶಾಂತೀಶ್ವರ ಪುರಾಣ', XII–೫೫, ೫೬, ೫೭, ೫೮, ೫೯. [4] 'ಕುಸುಮಾವಳೀ ಕಾವ್ಯಂ', VI–೪೦. [5] 'ತ್ರಿಷಷ್ಟಿ ಪುರಾತನ ವಿಳಾಸ', VIII–೩೯. [6] 'ದೇಶೀನಾಮಮಾಲಾ', VII–೮೩. [7] 'ಕುಮುದೇಂದು ರಾಮಾಯಣ', VIII–೮೨.

ಅದು "— ಅರವರಿಸವೆ[ಯೋ] ಹರಿ ಸಾ[ಹ]ರಿಯಂ ಮಾಡುತ್ತಿರ್ದಪುವು" ಎಂದಿರಬೇಕೆಂದೂ ಅವರೇ ಕೊಟ್ಟಿರುವ ಪಾಠಾಂತರಗಳ ಸಹಾಯದಿಂದ ಒಂದು ಕಡೆ ಹೇಳಿದ್ದೆನು.[1] ಓಹರಿ ಸಾಹರಿ ಎಂಬ ಒಂದು ಪದ ಕನ್ನಡದಲ್ಲಿತ್ತೆಂಬುದಕ್ಕೆ ಸುರಂಗ ಕವಿ ಒಂದು ಆಧಾರವಾಗಿದ್ದಾನೆ. ಅವನ ಗ್ರಂಥದ ಕಲಿಕಾಮದೇವರ ಕಥೆಯಲ್ಲಿ ಯುದ್ಧವರ್ಣನೆ ಬರುತ್ತದೆ. ಅಲ್ಲಿ "ಅಂತು ವೋಹರಿ ಸಾಹರಿಯಾಗಿ ಕಾದುವರಂ ಕಲಿಕಾಮದೇವಂ ಕಂಡು ಕೋಪಮುಂ ತಾಳ್ದಾಗಳ್" ಎಂದು ಪ್ರಯೋಗವಿದೆ.[2] ಇದರ ಅರ್ಥವನ್ನು ತಿಳಿಯಬೇಕಾದರೆ, ತೆಲುಗು ಸಾಹಿತ್ಯದಿಂದ ನೆರವು ಬರುತ್ತದೆ. ಕೃಷ್ಣದೇವರಾಯನು ಬರೆದಿರುವ 'ಆಮುಕ್ತಮಾಲ್ಯದ' ಎಂಬ ಕಾವ್ಯದಲ್ಲಿ "ಓಹರಿ ಸಾಹರಿಂ ಬ್ರಥಮುವೊಲ್ಕೆಡುಧಾರಲ" ಎಂಬ ಪ್ರಯೋಗವಿದೆಯೆಂದೂ ಅದಕ್ಕೆ 'ತಂಡೋಪತಂಡವಾಗಿ' ಎಂಬರ್ಥವಿದೆಯೆಂದೂ ತಿಳಿದು ಬಂದಿದೆ.[3] ಈ ಅರ್ಥ ಸುರಂಗ ಕವಿಯ ಪ್ರಯೋಗಕ್ಕೆ ಚೆನ್ನಾಗಿ ಹೊಂದುತ್ತದೆ; ಕುಮುದೇಂದುವಿನ ಪದ್ಯಕ್ಕೆ ಅಷ್ಟು ಚೆನ್ನಾಗಿ ಸೇರುವುದಿಲ್ಲ. ಆದರೂ ಅದರ ಅರ್ಥ ಸ್ಥೂಲವಾಗಿ ತಿಳಿದಹಾಗಾಗಿದೆ; ತುಸು ಭಿನ್ನವಾದ ಬೇರೆ ಯಾವುದಾದರೂ ಅಭಿಪ್ರಾಯ ಆ ಪದದಿಂದ ಸೂಚಿತವಾಗಿರಬಹುದು.

**೫. ಒಲ್ಲಣಿಗೆ.—** ಈಗ ತಿಳಿದಮಟ್ಟಿಗೆ ಈ ಪದವನ್ನು ಮೊದಲು ಬಳಸಿರುವುದು ಶಿವಕೋಟ್ಯಾಚಾರ್ಯನ 'ವಡ್ಡಾರಾಧನೆ'ಯೆಂಬ ಗ್ರಂಥದಲ್ಲಿ. ಗಂಭೀರೆ ಎಂಬಾಕೆ ಮಗಳ ಊರಿಗೆ ಹೋಗುತ್ತ ದಾರಿಯಲ್ಲಿ ಕಳ್ಳರ ಕೈಗೆ ಸಿಕ್ಕಿಬಿದ್ದು ಉಪಾಯದಿಂದ ಅವರನ್ನು ನಂಬಿಸಿ ಹತ್ತಿರದ್ದ ಊರಿಗೆ ಕರೆದುಕೊಂಡುಹೋಗಿ "ಅವರ್ಗೆಲ್ಲಂ ನೀರನಿಡಿಸಿ ತಲೆಯಂ ಪೂಸಿಸಿಯೊಲ್ಲಣಿಗೆಯನುಡಿಸಿ ತಲೆಯೊಳ್ ಕಟಿಉಯಂ" ಹೊಯ್ಸುತ್ತಾಳೆ.[4] ಕರ್ಣನ ಪರಾಕ್ರಮವನ್ನು ಶಾರದ್ವತನಿಂದ ಹೊಗಳಿಸುತ್ತ ಪಂಪನು "ಮುನ್ನೆ ಚಕ್ಷುಷ್ಮನೆಂಬ ಮನುವಾದ ಕಾಲದೊಳ್ ಧರಾತಳಮನೊಲ್ಲಣಿಗೆಯಿಂ ಪಿಟಿಉವಂತೆ. . . . ಪಿಟಿಉದ ಸಾಹಸಮುಮಂ" ಎಂದೂ[5] ಭೂಮಿ ಕೋಪಗೊಂಡು ಹಿಂದಿನ ಹಗೆ ಕಾರಣವಾಗಿ ಕರ್ಣನ ರಥದ ಗಾಲಿಯನ್ನು ನುಂಗುವ ಸಂದರ್ಭದಲ್ಲಿ "ತನ್ನಂ ಮು[ನ್ನೆ ಮುಯ್ಯೇಟು] ಸೂಟ್ಪರವೊಲ್ಲಣಿಗೆಯಿಂ ಪಿಟಿಉವಂತೆ ಪಿಂಡಿ ಪಿಟಿಉದ ಪಗೆಗೆ" ಎಂದೂ[6] ಉಸುರಿದ್ದಾನೆ. ಬ್ರಾಹ್ಮಣರು ಮಾಡುವ ಶ್ರಾದ್ಧಾದಿ ಕರ್ಮಗಳಿಂದ ಏನೂ ಪ್ರಯೋಜನವಿಲ್ಲವೆಂದು ನಗುತ್ತ

> ಮಿಂದೊಲ್ಲಣಿಗೆಯ ಪಿಟಿಉನೀ
> ರಿಂದಂ ಕಾಲ್ಗರ್ಚಿ ನೆಲದೊಳಿರ್ದಾ ಕೊಟಿಉನೀ ।
> ರಿಂದಂ ಪಾರ್ವರ ಮಡಗೂ
> ಟಿಉಂದಂ ಪಿತೃತುಷ್ಟಿಯಕ್ಕುಮೆಂಬರ್ ಪಾರ್ವರ್ ॥

ಎಂಬುದಾಗಿ ಬ್ರಹ್ಮಶಿವನ ಚುಚ್ಚುಮಾತು.[7] ಇವು ಇದುವರೆಗೆ ಸಿಕ್ಕಿರುವ ಪ್ರಯೋಗಗಳು. ಇದರ ಅರ್ಥವೇನು?

---

1 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', XXIV–ಪುಟ ೨೩೪. 2 'ತ್ರಿಷಷ್ಟಿ ಪುರಾತನ ವಿಲಾಸ', V–೯ ಗದ್ಯ. 3 'ಶಬ್ದ ರತ್ನಾಕರಮು', ಪುಟ 186. 4 'ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ', XXIV, ಸಂಚಿಕೆ ೪–೧೫. 5 'ಪಂಪಭಾರತ', XII–೪೮ ಗದ್ಯ. 6 'ಅದೇ,' XII–೨೦೬ ಗದ್ಯ. 7 'ಸಮಯ ಪರೀಕ್ಷೆ', XI.

ಪಂಪ ಭಾರತದ ಸಂಪಾದಕರು ಇದಕ್ಕೆ 'ಗಾಣ' ಎಂದು ಅರ್ಥ ಹೇಳಿಬಿಟ್ಟರು. ಆಧಾರವಿದೆಯೊ, ಬರಿ ಊಹೆಯೊ ತಿಳಿಯದು. ವಿದ್ವಾಂಸರೊಬ್ಬರು ಯಾವ ವಿಷಯವಾಗಿಯೋ ಬರೆಯ ಹೊರಟು ಹೇಗೊ ಈ ಪದಕ್ಕೆ ಕೈ ಹಾಕಿ ಇದಕ್ಕೆ 'ಆರ್ದ್ರವಸ್ತ್ರ' ಎಂಬರ್ಥವಿರಬೇಕೆಂದು ಬೇರೆ ಯಾವ ಪ್ರಯೋಗದ ಬಲವೂ ಇಲ್ಲದೆಯೇ ಊಹಿಸಿದ್ದಾರೆ.[1] ಊಹೆ ಸರಿಯಾಗಿದೆ; ಅದು ಸಾಧಾರವಾಗಿಯೂ ಇದ್ದರೆ ಚೆನ್ನಾಗಿತ್ತು. ಸ್ನಾನ ಮಾಡುವಾಗ ಉಡುವ ಬಟ್ಟೆಯೆಂದು ಆ ಪದಕ್ಕೆ ಅರ್ಥ ಪ್ರಯೋಗಗಳಿಂದಲೇ ಸ್ಪಷ್ಟವಾಗಿದೆ. ಪಂಪನ ಮೊದಲನೆಯ ಪ್ರಯೋಗದಲ್ಲಿ 'ಒಲ್ಲಣಿಗೆಯಿಂ' ಎಂಬ ತೃತೀಯೆಗೆ ಬದಲಾಗಿ ದ್ವಿತೀಯೆ ಇರಬೇಕು. ಮಿಾಯುವಾಗ ಉಡುವ ಆ ಬಟ್ಟೆಯ ನೆಯ್ಗೆ ಜಾಳು ಜಾಳು; ಬೇಗ ನೀರನ್ನು ಹೀರುತ್ತದೆ; ಒಂದು ತೊಟ್ಟು ನೀರುಕೂಡ ಇಲ್ಲದಂತೆ ಹಿಂಡುವುದೂ ಅತಿ ಸುಲಭ. ಈ ಸೌಲಭ್ಯ ಪಂಪನ ಪ್ರಯೋಗದಲ್ಲಿ ಧ್ವನಿತವಾಗಿದೆ; ವಾಚ್ಯಾರ್ಥವೇನೊ ಬಟ್ಟೆಯೆಂದೇ. ಈ ಅರ್ಥವನ್ನು ಸಮರ್ಥಿಸುವುದಕ್ಕೆ ಇಲ್ಲಿ ತುಳು ಭಾಷೆ ನೆರವಾಗುತ್ತದೆ. ಆ ಭಾಷೆಯ ಕೋಶವೊಂದರಲ್ಲಿ ಒಲ್ಲಣಿಗೆ ಎಂಬ ನಾಮಪದ A cloth covering the privities ಎಂಬರ್ಥದಲ್ಲಿ ಕಂಡುಬರುತ್ತದೆ.[2] ತುಳುವರಲ್ಲಿ ಈ ಪದ ಇನ್ನೂ ಜೀವಂತವಾಗಿರಬಹುದು. ಇದು ಯಾವ ಭಾಷೆಯದೊ ಕನ್ನಡಕ್ಕೆ ಹೇಗೆ ಬಂತೊ ಇದರ ನಿಷ್ಪತ್ತಿಯೇನೊ ಯಾವುದನ್ನೂ ಸದ್ಯದಲ್ಲಿ ವಿವರಿಸಲು ಅವಕಾಶವಿಲ್ಲ.

**೬. ಮೂವಿಟ್ಟಿ.**— ಪಂಪಭಾರತ (VI—೩೦) ರಲ್ಲಿ ಬರುವ ಈ ಪದಕ್ಕೆ ಆ ಗ್ರಂಥದ ಸಂಪಾದಕರು ಅರ್ಥ ಹೇಳುವಾಗ ಅದನ್ನು ಮೂಱು + ಬಿಟ್ಟಿ ಎಂದು ವಿಭಾಗಿಸಿ ವಿಷ್ಟಿ ಎಂದು ಎರಡನೆಯದರ ಸಂಸ್ಕೃತ ಮೂಲವನ್ನು ಸೂಚಿಸಿ ಪೊನ್ನನ 'ಶಾಂತಿ ಪುರಾಣ'ದ ಒಂದು ಪ್ರಯೋಗವನ್ನೂ ತೋರಿಸಿ (IX—೨) ತಟಸ್ಥರಾಗಿದ್ದಾರೆ. 'ವಿಷ್ಟಿ'ಗೆ ಅರ್ಥವೇನೆಂದು ವಿಶದಪಡಿಸಿಲ್ಲ. ಅದನ್ನು ತಿಳಿದಮೇಲೆ ಮೂರು ಬಿಟ್ಟಿಗಳಾವುವೆಂಬುದನ್ನು ಗೊತ್ತುಹಚ್ಚಬೇಕಾಗಿದೆ. ಇನ್ನೂ ಕೆಲವು ಪ್ರಯೋಗಗಳನ್ನು ನೋಡೋಣ. ಪಾರ್ಶ್ವಪಂಡಿತನದು ಹೀಗಿದೆ:[3]

ಕೊಟ್ಟೆಯ್ದೆ ಕಪ್ಪಮುಂ ಮುಗು
ಬ್ದಿಟ್ಟೆಯೆ ಬೞಗೊಲ್ವು ಪೇೞ್ವ ತಾಣಕ್ಕೆ ನೃಪ।
ರ್ವಿಟ್ಟು ಭುಜಗರ್ವಮುಂ ಮೂ
ವಿಟ್ಟಿಗೆ ಬರೆ ನೆಗಟ್ದನೆಳೆಯೊಳರವಿಂದ ನೃಪಂ ॥

ದಾವಣಗೆರೆ ೩೨ನೆಯ ಶಾಸನದಲ್ಲಿ "ಭಯದಿಂ ಮೂವಿಟ್ಟಿಯಿಂ ಬಂದು ಜೀವಿಸದಿರ್ಪುದ್ಧತರಿಲ್ಲ" ಎಂದೂ[4] ೨೫ನೆಯ ಶಾಸನದಲ್ಲಿ "ವೀರಾರಿ ನೃಪಾಳರಂ ಬರಿಸಿದಂ ಮೂವಿಟ್ಟಿಗಂ ಬಿಟ್ಟಿಗಂ" ಎಂದೂ[5] ಈ ಪದ ಬಳಕೆಯಾಗಿದೆ. ನಾಗಚಂದ್ರನು 'ಇಱುವಿಟ್ಟಿ' (ಇಱುವ + ಬಿಟ್ಟಿ; ಇದು ಎಱೆವಿಟ್ಟಿ ಎಂದಿರಬೇಕೇನೊ?) ಎಂಬ ಹೊಸ ಪದವನ್ನು ನಿರ್ಮಿಸಿಕೊಂಡಿದ್ದಾನೆ.[6] 'ಮೂವಿಟ್ಟಿಗಂ ಬರಿಸಿದಂ' ಎಂಬುದಕ್ಕೆ

---

1 'ಪಣ್ಡಿತ ಮಂಡಲ ಪತ್ರಿಕೆ', 1939, ನವರಾತ್ರಿಯ ಸಂಚಿಕೆ, ಪುಟ 24.
2 Tulu-English Dictionary, 1886: By Rev A. Manner.
3 'ಪಾರ್ಶ್ವನಾಥಪುರಾಣ', II—೧೫. 4 'ಶಾಸನ ಪದ್ಯಮಂಜರಿ', ಪದ್ಯ 770.
5 'ಅದೇ', ಪದ್ಯ 1292. 6 'ಪಂಪರಾಮಾಯಣ', VIII—೨೬.



ಶಾಸನ ಪದ್ಯಮಂಜರಿಯ ಕೋಶದಲ್ಲಿ '? ದಾಸರನ್ನಾಗಿ ಮಾಡಿದನು' ಎಂದು ಅರ್ಥ ಸೂಚಿತವಾಗಿದೆ. ಇದು ಸರಿಯೇ? ವಿಷ್ಟಿ ಎಂಬುದು ಅರ್ಥಶಾಸ್ತ್ರಕ್ಕೆ ಸಂಬಂಧಿಸಿದ ಪದ. ಇದಕ್ಕೆ ಕೌಟಿಲ್ಯನ ವಿವರಣೆ ಹೀಗೆ: "ಶಿಬಿರಮಾರ್ಗ ಸೇತು ಕೂಪ ತೀರ್ಥ ಶೋಧನ ಕರ್ಮ ಯಂತ್ರ ಆಯುಧಾವರಣ ಉಪಕರಣ ಗ್ರಾಸ ವಹನಂ ಆಯೋಧನಾಚ್ಚ ಪ್ರಹರಣಾವರಣ ಪ್ರತಿವಿದ್ಧಾಪನಯನಂ ಇತಿ ವಿಷ್ಟಿ ಕರ್ಮಾಣಿ."[1] ಸೈನ್ಯ ಬೀಡು ಬಿಟ್ಟಿರುವಾಗಲೂ ಪಯಣಮಾಡುತ್ತಿರುವಾಗಲೂ ಅದಕ್ಕೆ ಬೇಕಾದ ಆನುಕೂಲ್ಯಗಳನ್ನೆಲ್ಲ ಒದಗಿಸಿಕೊಡಲು ಸಂಬಳ ಕೊಡದೆ ಚಾಕರಿ ತೆಗೆಯುವ ರೂಢಿ ಹಿಂದೆ ಇತ್ತು. ಕೌಟಿಲ್ಯನ ವಾಕ್ಯಕ್ಕೆ ಮಾಡಿರುವ ಇಂಗ್ಲಿಷಿನ ತರ್ಜುಮೆಯಲ್ಲಿ ವಿಷ್ಟಿಕರ್ಮಗಳನ್ನು ಮೂರು ಗುಂಪುಗಳಾಗಿ ವಿಭಾಗಿಸಿರುವುದು ಕಂಡುಬರುತ್ತದೆ.[2] ಶೋಧನ ಕರ್ಮ, ವಹನ ಕರ್ಮ, ಅಪನಯನ ಕರ್ಮ ಎಂಬ ಈ ಮೂರು ಬಗೆಯಾದ ವಿಷ್ಟಿಗಳನ್ನು ಕನ್ನಡ ಕವಿಗಳು 'ಮೂವಿಟ್ಟಿ' ಎಂಬ ಪದದಿಂದ ನಿರ್ದೇಶಿಸಿರುವ ಹಾಗೆ ಕಾಣುತ್ತದೆ. ಸೋತ ರಾಜರು ಗೆದ್ದ ರಾಜನಿಗೆ ಈ ವಿಷ್ಟಿ ಕರ್ಮಗಳನ್ನೂ ಮಾಡುವ ದೈನ್ಯಾವಸ್ಥೆಗೆ ಗುರಿಯಾಗುತ್ತಿದ್ದರು; ಗೆದ್ದವನ ಪರಾಕ್ರಮುವನ್ನು ಹೇಳುವ ಕನ್ನಡದ ಧಾಟಿಯನ್ನು ಮೇಲಿನ ಪ್ರಯೋಗಗಳಲ್ಲಿ ಕಾಣುತ್ತೇವೆ. ಪಂಪ ಪೊನ್ನ ಪಾರ್ಶ್ವರ ಪದ್ಯಗಳಲ್ಲಿ 'ಮೂವಿಟ್ಟಿ'ಗೆ ಇರುವ ಆನುಪೂರ್ವಿ ಹೆಚ್ಚು ಕಡಮೆ ಒಂದೇ ರೀತಿಯಾಗಿರುವುದು ಸೋಜಿಗದ ವಿಷಯ.

ಮೇಲೆ ಕೊಟ್ಟಿರುವ ಪದಗಳು ಮಾದರಿಗಾಗಿ ಎತ್ತಿಕೊಂಡವು. ಕನ್ನಡ ಕಾವ್ಯಗಳಲ್ಲಿಯೂ ಶಾಸನಗಳಲ್ಲಿಯೂ ಇಂಥ ಸಾವಿರಾರು ಪದಗಳು ಅವಿತುಕೊಂಡಿವೆ. ಕಾವ್ಯಗಳಲ್ಲಿ ಕೆಲವು ಮುದ್ರಿತ; ಹಲವು ಇನ್ನೂ ಅಚ್ಚುಕೂಟದ ಮುಖವನ್ನೇ ನೋಡಿಲ್ಲ. ಶಾಸನಗಳೂ ಲೆಕ್ಕವಿಲ್ಲದಷ್ಟಿವೆ. ಇವುಗಳನ್ನೆಲ್ಲ ಕಣ್ಣಿಟ್ಟು ಓದಿ ಸರಿಯಾದ ಪಾಠವೇನೆಂಬುದನ್ನೂ ನಿರ್ಣಯಿಸಿ ಪದಗಳನ್ನು ಕೂಡಿಹಾಕುವ ಕೆಲಸ ಮೊದಲು ನಡೆಯಬೇಕು. ಇದಾದ ಹೊರತು ಮುಂದೆ ಕಾಲಿಡುವ ಹಾಗಿಲ್ಲ.

ನಮ್ಮ ಕವಿಗಳಲ್ಲನೇಕರು ಹಲವು ಶಾಸ್ತ್ರಗಳನ್ನು ಬಲ್ಲವರಾಗಿದ್ದರು. "ತರ್ಕ ವ್ಯಾಕರಣ ಭರತ ಚಾಣಕ್ಯ ವಾತ್ಸ್ಯಾಯನ ಭಾರತ ರಾಮಾಯಣ ಮೋಕ್ಷೋಪಾಯಾತ್ಮಜ್ಞಾನ ಧಾತುವಾದ ರತ್ನಪರೀಕ್ಷಾ ವೈದ್ಯಕ ಜ್ಯೌತಿಷ ಧನುರ್ವೇದ ಗಜತುರಗ ಪುರುಷಲಕ್ಷಣ ದ್ಯೂತೇಂದ್ರಜಾಲ ಪ್ರಕೀರ್ಣೇಷು ಪರಿಚಯಃ ಕವಿಸಾಮ್ರಾಜ್ಯ ವ್ಯಂಜನಃ" ಎಂಬ ಕ್ಷೇಮೇಂದ್ರನ ಮಾತಿನಂತೆ[3] ಕವಿಯಾಗಲು ಬಯಸುವವನು ಈ ಶಾಸ್ತ್ರಗಳನ್ನೂ ಇಲ್ಲಿ ಹೇಳದೆ ಇರುವ ಚಿತ್ರ–ಸೂಪ ಶಾಸ್ತ್ರಾದಿಗಳನ್ನೂ ಕಲಿತಿರಬೇಕಾಗಿತ್ತು. ಪ್ರತಿಭೆಯೊಂದೇ ಕಾವ್ಯಸೃಷ್ಟಿಗೆ ಪರಿಕರವೆಂಬ ರಾಜಶೇಖರನ ಮಾತನ್ನು ಮೊದಲು ಒಪ್ಪಿಕೊಂಡು ಆಮೇಲೆ ಕ್ಷೇಮೇಂದ್ರನ ಮಾತಿಗೆ ಬೆಲೆ ಕಟ್ಟಬೇಕಾಗಿದೆ. ಈ ವಿಷಯ ಹಾಗಿರಲಿ. ನಮ್ಮ ಹಿರಿಯ ಕವಿಗಳಲ್ಲಿ ಪ್ರತಿಭೆಯೂ ಶಾಸ್ತ್ರಪರಿಚಯುವೂ ಒಂದರೊಡನೊಂದು ಮೇಲಾಟ

---

1 'ಕೌಟಿಲೀಯು ಅರ್ಥಶಾಸ್ತ್ರ', ಪುಟ 371. (Mysore Govt. Oriental Library Edition.)
2 *Kautiliya Arthasatra*: Tr. Dr. R. Shamasastri, page 399.
3 'ಕವಿಕಂಠಾಭರಣ', V ಸಂಧಿ.

ನಡಸುತ್ತಿವೆ. ಇದರಿಂದ ಒಂದು ಕಡೆ ಕಾವ್ಯ ಸೌಂದರ್ಯದ ಬುಗ್ಗೆ ಬೆಳಗಿದ್ದರೆ ಮತ್ತೊಂದು ಕಡೆ ಆಯಾ ಶಾಸ್ತ್ರದ ಶಬ್ದಪ್ರವಾಹವು ಹೆದರಿಸುವಂತೆ ಮೊರೆಯುತ್ತಿದೆ. ಇದರ ಜೊತೆಗೆ 'ಚತುರ್ಭಾಷಾ ಕವಿಚಕ್ರವರ್ತಿ'ಗಳ ಪಾಂಡಿತ್ಯ ಬೇರೆ ಉಂಟು. ಅವರ ಪದಗಳಿಗೆ ಅರ್ಥೈಸಬೇಕಾದರೆ ನಿಘಂಟುಕಾರನಿಗೆ ಈ ವಿವಿಧ ಶಾಸ್ತ್ರಪರಿಭಾಷೆಗಳ ಪರಿಚಯ ಇರಲೇಬೇಕು. ಕನ್ನಡ ಭಾಷೆ ಸಾಹಿತ್ಯಗಳ ತುಂಬು ಪಾಂಡಿತ್ಯದೊಡನೆ ಸಂಸ್ಕೃತ ಪ್ರಾಕೃತ ತಮಿಳು ತೆಲುಗು ಮಲಯಾಳವೇ ಮುಂತಾದ ಭಾಷೆಗಳ ಪರಿಜ್ಞಾನವೂ ಸಾಹಿತ್ಯಗಳ ಲೋಲುಪ್ತಿಯೂ ತುಳು ಮೊದಲಾದ ಇತರ ದ್ರಾವಿಡ ಭಾಷೆಗಳ ವ್ಯಾಕರಣ ಕೋಶಗಳ ಸಾನ್ನಿಧ್ಯವೂ ಆಧುನಿಕ ಭಾಷಾಶಾಸ್ತ್ರದ ತಿರುವು ಮುರಿವುಗಳ ಗಭೀರಜ್ಞಾನವೂ ಭಾಷೆಯ ಒಳಭೇದಗಳ ತಿಳಿವಳಿಕೆಯೂ ಗ್ರಾಮಜೀವನದ ಅರಿವೂ ಅಲ್ಲದೆ ಶಕ್ತಿಯೂ ತಾಳ್ಮೆಯೂ ಸಹೃದಯತೆಯಿಂದ ಸೇರಬೇಕು. ಇಷ್ಟೆಲ್ಲ ಒಂದೇ ವ್ಯಕ್ತಿಯಲ್ಲಿ ಸಂಗಮಿಸಿದ್ದರೆ ಅದು ಅವನ ಪುಣ್ಯ, ಭಾಷೆಯ ಭಾಗ್ಯ. ಆದರೆ ಅದು ಮೊರಡಿಯಲ್ಲಿ ಮಾದಲದ ಹಣ್ಣು ಬಿಟ್ಟಂತೆ.

ಆದ್ದರಿಂದ ಕನ್ನಡಕ್ಕೆ ಒಂದು ಹೊಸ ನಿಘಂಟುವನ್ನು ಮಾಡುವುದು ಬರಿ ಬಾಯಿಮಾತಿನಿಂದ ಆಗುವ ಕೆಲಸವಲ್ಲವೆಂದು ತಿಳಿದಹಾಗಾಯಿತು. ಕನ್ನಡದಲ್ಲಿ ಪಾಂಡಿತ್ಯವೇನಿದೆ, ಇದ್ದರೂ ಅದರಿಂದ ಆಗಬೇಕಾದದ್ದೇನು ಎಂದು ತಾತ್ಸಾರದಿಂದ ಮೂಗುಮುರಿಯುವವರು ಒಂದಿಷ್ಟು ಕಣ್ಣುಬಿಟ್ಟು ನೋಡಲಿ; ಇದರಿಂದ ಅಂಥವರ ತಾತ್ಸಾರ ಪ್ರೋತ್ಸಾಹವಾಗಿ ಪರಿಣಮಿಸಲಿ. ಕನ್ನಡದಲ್ಲಿ ಆಳವಾದ ಪಾಂಡಿತ್ಯವಿದ್ದು ಹಿಂದೆ ಹೇಳಿದ ಶಾಸ್ತ್ರಗಳಲ್ಲೂ ಭಾಷೆಗಳಲ್ಲೂ, ಕನಿಷ್ಠಪಕ್ಷ ಒಂದರಲ್ಲಿಯಾದರೂ, ಪರಿಚಯವಿರುವ ಹತ್ತಾರು ಜನರು ಒಕ್ಕೂಟವಾಗಿ ಹಮ್ಮುಬಿಮ್ಮುಗಳಿಲ್ಲದೆ, ಕಲಹಕಾತರಗಳಿಲ್ಲದೆ ಸಹಕರಿಸಿ ಮಾಡಬೇಕಾದ ಕೆಲಸವಿದು. ಮದ್ರಾಸ್ ವಿಶ್ವವಿದ್ಯಾನಿಲಯವು ಸರ್ಕಾರದ ಪ್ರೋತ್ಸಾಹದಿಂದ ನಾಲ್ಕು ಲಕ್ಷ ರೂಪಾಯಿಗಳನ್ನು ಖರ್ಚುಮಾಡಿ ಇಪ್ಪತ್ತುಮೂರು ವರ್ಷಗಳ ಕಾಲ ದುಡಿದು ತಮಿಳು ಭಾಷೆಗೆ ದೊಡ್ಡ ನಿಘಂಟುವನ್ನು ತಯಾರಿಸಿದೆ. ಇಂಥ ಹೆಮ್ಮೆ ಕನ್ನಡಕ್ಕೂ ಬೇಗನೆ ಉಂಟಾಗಲಿ.

**ಡಿ. ಎಲ್. ನರಸಿಂಹಾಚಾರ್**

# ಹಸ್ತಿಮಲ್ಲನ ಆದಿಪುರಾಣ

ಕನ್ನಡ ಸಾಹಿತ್ಯದಲ್ಲಿ ಗದ್ಯ ಗ್ರಂಥಗಳು ತೀರ ಕಡಿಮೆ. 'ಚಾವುಂಡರಾಯ ಪುರಾಣ'ದ ತರುವಾಯ ಹರಿಹರನ ಉದ್ದುದ್ದವಾದ ಶರಣರಗಳೆಗಳಲ್ಲಿ ಗದ್ಯ ಭಾಗಗಳು ಕಂಡುಬರುತ್ತವೆ. ಆ ತರುವಾಯ ೧೮ನೆಯ ಶತಮಾನದ ವರೆಗೆ ಗದ್ಯ ಗ್ರಂಥಗಳೇ ಕಂಡುಬರುವುದಿಲ್ಲ. ಬಾಣನ 'ಕಾದಂಬರಿ', ದಂಡಿಯ 'ದಶಕುಮಾರ' ಮುಂತಾದ ಸಂಸ್ಕೃತ ಗ್ರಂಥಗಳು ಕನ್ನಡಕ್ಕೆ ಪರಿವರ್ತಿತವಾಗಿದ್ದರೂ ಅವು ಪದ್ಯ ರೂಪವಾಗಿವೆ. ಇದರಿಂದ ಕನ್ನಡದ ಕವಿಗಳು ಪದ್ಯಗಳನ್ನು ಮೆಚ್ಚಿದವರೆಂದು ಹೇಳಬೇಕಾಗುತ್ತದೆ. ಗದ್ಯಗಳು ವಿರಳವಾಗಿ ಕಂಡುಬರುವುದು ಸಾಹಿತ್ಯದಲ್ಲಿ ಒಂದು ಕುಂದು ಎಂದು ಕೆಲವರು ಹೇಳಬಹುದು. ಈ ಮಾತನ್ನು ಬದಿಗಿರಿಸಿ ಗದ್ಯಗ್ರಂಥಗಳು ದೊರೆಯಬಹುದೇ ಎಂದು ಶೋಧಿಸುತ್ತಿರುವಾಗ **ಹಸ್ತಿಮಲ್ಲಿಷೇಣ ಸೂರಿಯ ಆದಿಪುರಾಣವು** ಡಾ॥ ಎ. ಎನ್. ಉಪಾಧ್ಯೆಯವರ ಮುಖಾಂತರ ವಾಗಿ ನನಗೆ ದೊರೆಯಿತು. ಅವನ ವಿಷಯವಾಗಿ ಅವರು ಒಂದು ಲೇಖನವನ್ನೂ ಬೇರೆ ಕಡೆಗೆ ಬರೆದಿದ್ದಾರೆ.[1] ಅದರೊಳಗಿನ ಬಹುಭಾಗವನ್ನು ಉಪಯೋಗಿಸಿ ಈ ಲೇಖನವು ಬರೆಯಲಾಗಿದೆ.

ಆರ್. ನರಸಿಂಹಾಚಾರ್ಯರು ತಮ್ಮ 'ಕರ್ಣಾಟಕ ಕವಿಚರಿತೆ'ಯ ಮೊದಲನೆಯ ಭಾಗದಲ್ಲಿ ಈತನ ವಿಷಯವಾಗಿ ಹೀಗೆ ಬರೆದಿರುವರು :

"ಈತನು ಶಕ ೧೨೧೨ರಲ್ಲಿ ಒಂದು 'ಆದಿಪುರಾಣ'ವನ್ನು ಬರೆದಿರುವುದಾಗಿ ತಿಳಿಯಬರುತ್ತದೆ. ಇವನ ಗ್ರಂಥವು ನಮಗೆ ದೊರೆತಿಲ್ಲ. ಆದರೆ ಮೆ॥ ಕೆ. ಬಿ. ಪಾಠಕರವರು ಇವನ ಗ್ರಂಥವನ್ನು ನೋಡಿರುವಂತೆ ಬರೆದಿದ್ದಾರೆ.

"ದೇವಚಂದ್ರನು 'ರಾಜಾವಳೀ ಕಥೆ'ಯಲ್ಲಿ (೧೮೩೮) ಒಬ್ಬ ಹಸ್ತಿಮಲ್ಲಾ ಚಾರ್ಯನ ಹೆಸರನ್ನು ಹೇಳಿ ಆತನು ಗುಣಭದ್ರಶಿಷ್ಯನಾದ ವೇದಾಗಮಸ್ತೋತ್ರ ವ್ಯಾಖ್ಯಾನಕರ್ತೃವಾದ ಗೋವಿಂದಭಟ್ಟನ ಮಗನೆಂದೂ ಮದಪ ಆನೆಯನ್ನು ಅಡಗಿಸಿದುದರಿಂದ ಅವನಿಗೆ ಹಸ್ತಿಮಲ್ಲ ಎಂಬ ಹೆಸರು ಬಂದಿತೆಂದೂ ಆತನಿಗೆ ಪಾರ್ಶ್ವಪಂಡಿತ ಮೊದಲಾದ ಮಕ್ಕಳು ಇದ್ದರೆಂದೂ ಆತನು ಉಭಯ ಭಾಷಾಕವಿಚಕ್ರವರ್ತಿಯೆನಿಸಿದ್ದನೆಂದೂ ಆತನ ಶಿಷ್ಯ ಲೋಕಪಾಲಾರ್ಯನೆಂದೂ ಹೇಳಿದ್ದಾನೆ. ಈತನು ಮೇಲೆ ಹೇಳಿದ ಆದಿಪುರಾಣದ ಕರ್ತೃವಾಗಿರಲಾರನು."

ಅಯ್ಯಪಾರ್ಯನು ತನ್ನ 'ಜಿನೇಂದ್ರಕಲ್ಯಾಣಾಭ್ಯುದಯ'ದಲ್ಲಿ (೧೩೧೯) ಸಾರಣ್ಯಪುರದ ಪಾಂಡ್ಯರಾಜನು ತನ್ನ ಮೇಲೆ ಬಿಟ್ಟ ಮದದಾನೆಯನ್ನು ಹಸ್ತಿಮಲ್ಲನು ವಶಪಡಿಸಿಕೊಂಡಂತೆ ಹೇಳುತ್ತಾನೆ. ಹಸ್ತಿಮಲ್ಲನ 'ವಿಕ್ರಾಂತಕೌರವ ನಾಟಕ'ದ ಮೊದಲನೆಯ ಅಂಕದ ೪ನೆಯ ಪದ್ಯವಾದರೂ ಇದೇ ಸಂಗತಿಯನ್ನು ಸೂಚಿಸುತ್ತದೆ. ಆದುದರಿಂದ ಮದದಾನೆಯ ಸಂಗತಿಯನ್ನು ನಾವು ಒಪ್ಪಬೇಕಾಗುತ್ತದೆ. ಈತನಿಗೆ 'ಉಭಯಭಾಷಾಚಕ್ರವರ್ತಿ'ಯೆಂಬ ಬಿರುದಿದ್ದುದು ಈತನ ಆದಿಪುರಾಣ ದಿಂದಲೂ ತಿಳಿದುಬರುತ್ತದೆ. ಹಾಗಾದರೆ ಈತನು ಈ ಎರಡೂ ಭಾಷೆಗಳಲ್ಲಿ

[1] ಡಾ॥ ಎ. ಎನ್. ಉಪಾಧ್ಯೆಯವರ ಲೇಖನವು ಪ್ರೊ. ಕಾಣೆಯವರ ಸಂಸ್ಮಾರಣೀಯ ಗ್ರಂಥದಲ್ಲಿ ಪ್ರಕಟವಾಗಲಿದೆ.

ಆವಾವ ಗ್ರಂಥಗಳನ್ನು ರಚಿಸಿದನು ಎಂದು ವಿಚಾರಿಸುತ್ತಿರಲು ಅವನವು ಈ ಕೆಳಗಿನ ಗ್ರಂಥಗಳೆಂದು ತಿಳಿದುಬಂದಿತು :

ಆಫ್ರೆಷ್ಟನ 'ಕಾಟಾಲೋಗಸ ಕಾಟಾಲೋಗರಮ್'ದ (*Catalogus Catalogorum*, by Aufrecht, 1891) ೭೬೪ನೆಯ ಪುಟದಲ್ಲಿ ಹಸ್ತಿಮಲ್ಲನು ಜೈನನೆಂದೂ ಆತನು ಈ ಗ್ರಂಥಗಳನ್ನು ಬರೆದಂತೆಯೂ ಹೇಳಿದೆ: ೧. ಅರ್ಜುನರಾಜನಾಟಕ, ೨. ಉದಯನರಾಜಕಾವ್ಯ, ೩. ಭರತರಾಜನಾಟಕ, ೪. ಮೇಘೇಶ್ವರನಾಟಕ, ೫. ಮೈಥಿಲೀಪರಿಣಯನಾಟಕ.

ಎಮ್. ಕೃಷ್ಣಮಾಚಾರಿಯವರು ಹಸ್ತಿಮಲ್ಲನು ಮುಂದಿನ ಐದು ಗ್ರಂಥಗಳನ್ನು ಬರೆದಂತೆ ಹೇಳುತ್ತಾರೆ: ೧. ಆದಿಪುರಾಣ, ೨. ಪುರುಚರಿತ, ೩. ಸುಭದ್ರಾಹರಣ, ೪. ಅಂಜನಾಪವನಂಜಯ, ೫. ವಿಕ್ರಾಂತಕೌರವ.

ಆತನು ಶ್ರೀ ಪುರಾಣವೆಂಬ ಇನ್ನೂ ಒಂದು ಗ್ರಂಥವನ್ನು ಬರೆದಿರುವನೆಂದೂ ಅದರ ಪ್ರತಿಗಳು ಮೂಡಬಿದರೆ ಮತ್ತು ವರಾಂಗ ಮಠಗಳಲ್ಲಿ ಇವೆಯೆಂದೂ ಇತ್ತಿತ್ತಲು ತಿಳಿದುಬಂದಿದೆ.

ಅಭಿನವಶ್ರುತಮುನಿ (೧೩೬೫) ಮಲ್ಲಿಷೇಣವಿರಚಿತ ಸಜ್ಜನಚಿತ್ತವಲ್ಲಭಕ್ಕೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆಂದು ಕರ್ಣಾಟಕ ಕವಿಚರಿತೆಯ ಭಾಗ ೧ರಿಂದ ತಿಳಿದುಬರುತ್ತದೆ. ಈ ಗ್ರಂಥವು ಹಸ್ತಿಮಲ್ಲವಿರಚಿತವೋ ? ಎಂಬ ಊಹೆಯೊಂದು ಹೊಳೆದುಹೋಗುತ್ತದೆ. ಏಕೆಂದರೆ ಹಸ್ತಿಮಲ್ಲನಿಗೆ ಹಸ್ತಿಮಲ್ಲಿಷೇಣಾಚಾರ್ಯನೆಂದೂ ಹೆಸರಿದೆ.

ಕೃಷ್ಣಮಾಚಾರಿಯವರು ಈತನ ಗ್ರಂಥಗಳ ಹೆಸರು ಹೇಳುವಾಗ ತಡವರಿಸುತ್ತಿದ್ದಂತೆ ಕಂಡುಬರುತ್ತದೆ. ಅದರ ಮೇಲಿಂದ ಮತ್ತೊಂದು ಆಕ್ಷೇಪಣೆ ತಲೆದೋರುತ್ತದೆ. ಆದಿನಾಥ ತೀರ್ಥಂಕರರಿಗೆ ಪುರುದೇವರೆಂದು ಹೆಸರಿದೆ. ಆದುದರಿಂದ ಆದಿಪುರಾಣವೂ ಪುರುಚರಿತವೂ ಒಂದೇ ಗ್ರಂಥದ ಬೇರೆ ಬೇರೆ ಹೆಸರುಗಳಾಗಿರಬಹುದು.

ಕವಿಯ 'ಮೈಥಿಲೀಪರಿಣಯನಾಟಕ' ಮತ್ತು 'ವಿಕ್ರಾಂತಕೌರವ ನಾಟಕ' ಇವೆರಡು ಹೊತ್ತಿಗೆಗಳು ಪ್ರಕಟವಾಗಿವೆ. ಅವುಗಳಿಂದ ಆತನ ವಿಷಯಕವಾದ ಈ ಸಂಗತಿಗಳು ತಿಳಿದುಬರುತ್ತವೆ:

ಸಮಂತಭದ್ರಾಚಾರ್ಯರಿಗೆ ಶಿವಕೋಟಿ–ಶಿವಾಯನರೆಂಬಿಬ್ಬರು ಶಿಷ್ಯರಿದ್ದರು. ಅವರ ಪರಂಪರೆಯಲ್ಲಿ ವೀರಸೇನಾಚಾರ್ಯರು ಪ್ರಸಿದ್ಧರಾದರು. ಅವರ ಶಿಷ್ಯರು ಜಿನಸೇನಾಚಾರ್ಯರು. ಅವರ ಪ್ರೀತಿಯ ಶಿಷ್ಯರು ಗುಣಭದ್ರಾಚಾರ್ಯರು. ಅವರ ಶಲಾಕಾಪುರುಷಪುರಾಣವು ಪ್ರಸಿದ್ಧ. ಸುಭದ್ರಾಹರಣ ನಾಟಕಾಂತ್ಯದ ಮೂರು ಪದ್ಯಗಳಲ್ಲಿ ಪ್ರಭೇಂದು ಅಥವಾ ಪ್ರಭಾಚಂದ್ರಾಚಾರ್ಯರನ್ನು ಸ್ತುತಿಸಲಾಗಿದೆ. (ಸು. ೧೩೦೦ರಲ್ಲಿ ಇದ್ದಿರಬಹುದಾದ ಒಬ್ಬ ಪ್ರಭಾಚಂದ್ರನು ಸಿದ್ಧಾಂತಸಾರ ಚಾರಿತ್ರಸಾರಗಳಿಗೆ ಟೀಕೆಗಳನ್ನು ಬರೆದಿರುವಂತೆ 'ಕರ್ಣಾಟಕ ಕವಿಚರಿತೆ'ಯ ಭಾಗ ೧ ಪುಟ ೪೦೮ರಲ್ಲಿ ಹೇಳಿದೆ.) ಗುಣಭದ್ರಾಚಾರ್ಯರ ಶಿಷ್ಯಪರಂಪರೆಯಲ್ಲಿ ವತ್ಸಗೋತ್ರದ ಗೋವಿಂದಭಟ್ಟನೊಬ್ಬನು. ಈತನು ಬ್ರಾಹ್ಮಣನು. ಆದರೆ ಸಮಂತಭದ್ರಾಚಾರ್ಯರ ದೇವಾಗಮಸ್ತೋತ್ರವನ್ನು

ಕೇಳಿ ಜಿನದೀಕ್ಷೆಗೊಂಡನು. ಅವನಿಗೆ ಶ್ರೀ ಕುಮಾರಕವಿ, ಸತ್ಯವಾಕ್ಯ, ದೇವರ ವಲ್ಲಭ, ಉದಯಭೂಷಣ, ಹಸ್ತಿಮಲ್ಲ ಮತ್ತು ವರ್ಧಮಾನ ಎಂದು ಆರು ಮಂದಿ ಮಕ್ಕಳು. ಹಸ್ತಿಮಲ್ಲನ ಅಂಜನಾಪವನಂಜಯದೊಳಗಿನ ಒಂದು ಪದ್ಯದಿಂದ ಕರ್ಣಾಟಕವನ್ನು ಆಧೀನಪಡಿಸಿಕೊಂಡ ಒಬ್ಬ ಪಾಂಡ್ಯರಾಜನು ಈತನ ಪ್ರೋಷಕ ನಾಗಿದ್ದನೆಂದು ತಿಳಿಯುತ್ತದೆ.

'ಪ್ರತಿಷ್ಠಾತಿಲಕ'ದ ಕರ್ತೃ ಬ್ರಹ್ಮಸೂರಿ ಹಸ್ತಿಮಲ್ಲನ ಮನೆತನಕ್ಕೆ ಸೇರಿ ದವನು. ಆತನು ಮೇಲಿನ ಸಂಗತಿಗಳನ್ನೆಲ್ಲ ಹೇಳಿರುವುದಲ್ಲದೆ ಇನ್ನೂ ಕೆಲವು ಹೆಚ್ಚಿನ ಸಂಗತಿಗಳನ್ನು ಹೇಳಿದ್ದಾನೆ. 'ಪಾರ್ಶ್ವ– ಪಂಡಿತನು ಹಸ್ತಿಮಲ್ಲನ ಮಗನು. ತನ್ನ ಪಾವಿತ್ರ್ಯಪಾಂಡಿತ್ಯಗಳ ಬಗ್ಗೆ ಪ್ರಸಿದ್ಧನಾಗಿದ್ದನು. ಕಾರಣಾಂತರ ದಿಂದ ಆತನು ಹೊಯ್ಸಳರಾಜ್ಯದೊಳಗಿನ ಛತ್ರತ್ರಯ ಪಟ್ಟಣಕ್ಕೆ ಹೋಗಿ ವಾಸ ವಾದನು. ಅವನಿಗೆ ಚಂದ್ರಪ, ಚಂದ್ರನಾಥ, ವೈಜಯ್ಯ ಎಂಬ ಮೂವರು ಮಕ್ಕಳು. ಚಂದ್ರನಾಥನು ತನ್ನ ಕುಟುಂಬ ಸಹಿತವಾಗಿ ಹೇಮಾಚಲದಲ್ಲಿ ವಾಸ ವಾಗಿದ್ದನು. ಉಳಿದವರು ಬೇರೆ ಕಡೆಗೆ ಹೋದರು.

ಹಸ್ತಿಮಲ್ಲನ ಕಾಲನಿರ್ಣಯ ಮಾಡುವುದು ಸುಲಭವಲ್ಲ. ಆತನು ಗುಣ ಭದ್ರಾಚಾರ್ಯರನ್ನು (೮೯೭) ಸ್ತುತಿಸಿರುವುದರಿಂದ ಅವರಿಂದ ಈಚೆಯವನು. ಅಯ್ಯಪಾರ್ಯನು (೧೩೧೯) ಈತನು ಮದದಾನೆಯನ್ನು ವಶಪಡಿಸಿಕೊಂಡ ಕತೆಯನ್ನು ಹೇಳಿರುವುದರಿಂದ ಆತನಿಗಿಂತ ಪೂರ್ವದವನು. ಅಂದರೆ ಹಸ್ತಿಮಲ್ಲನು ೮೯೭ರಿಂದ ೧೩೧೯ರ ಮಧ್ಯೇ ಎಲ್ಲಿಯಾದರೂ ಇರಬಹುದು. ಈ ೪೨೨ ವರುಷಗಳ ಅವಧಿಯು ಬಹಳೇ ದೀರ್ಘವಾಗಿದೆ. ಆದರೆ ಕವಿಚರಿತೆಕಾರರು ಈತನು ೧೨೧೨ರಲ್ಲಿ ಒಂದು ಆದಿಪುರಾಣವನ್ನು ಬರೆದಿರುವುದಾಗಿ ತಿಳಿದುಬರುತ್ತದೆಂದು ಹೇಳುತ್ತಾರೆ. ಅದಕ್ಕೆ ಅವರು ಆಧಾರಗಳನ್ನು ಮಾತ್ರ ಕೊಟ್ಟಿಲ್ಲ. ಅದು ನಿಜವಾಗಿದೆಯೇ ಎಂಬ ಬಗ್ಗೆ ಪ್ರಭಾಚಂದ್ರ, ಸಜ್ಜನಚಿತ್ತವಲ್ಲಭ, ಸಾರಣ್ಯಪುರ, ಪಾಂಡ್ಯರಾಜ, ಛತ್ರತ್ರಯ ಪಟ್ಟಣ ಮುಂತಾದವುಗಳ ವಿಷಯದಲ್ಲಿ ಸಂಶೋಧನವಾಗುವುದು ಅವಶ್ಯವಾಗಿದೆ. ಒಂದುವೇಳೆ ಅದು ನಿಜವಾಗಿದ್ದ ಪಕ್ಷದಲ್ಲಿ ಆತನ 'ಸುಭದ್ರಾಹರಣ ನಾಟಕ'ವು ಕೇಶಿರಾಜನ 'ಸುಭದ್ರಾಹರಣ'ಕ್ಕೆ ಆಧಾರವೋ ಪ್ರತಿಕೃತಿಯೋ ಎಂಬಲ್ಲಿಯೂ ಸಂಶೋಧನವಾಗಬೇಕು.

ನಮಗೆ ದೊರೆತ ಕಾಗದದ ಪ್ರತಿ ಕೋರೀ ಕಾಗದದ ಮೇಲೆ ಬರೆಯಲಾಗಿದೆ. ಅದು ೯·೫″ × ೮″ ಅಷ್ಟು ದೊಡ್ಡದಾಗಿದೆ. ಅದರ ಮೊದಲಿನ ೪೧ ಪುಟಗಳಲ್ಲಿ 'ಆದಿಪುರಾಣ' ಮುಗಿದಿದೆ. ಉಳಿದ ಭಾಗದಲ್ಲಿ 'ಭರತೇಶವೈಭವ'ದೊಳಗಿನ ಕೆಲವು ಸಂಧಿಗಳು, ದಶಲಕ್ಷಣಪೂಜೆ, ಮಾಣಿಕಸ್ವಾಮಿಚರಿತೆ ಮತ್ತು ಕೆಲವು ಧಾರ್ಮಿಕ ವಿಧಿಮಂತ್ರಗಳು ಬರೆಯಲಾಗಿವೆ.

ಆದಿಪುರಾಣದ ಮೊದಲನೆಯ ಪುಟವು ಹರಿದುಹೋಗಿರುವುದರಿಂದ ಅದು ಹೇಗೆ ಆರಂಭವಾಗಿದೆಯೆಂದು ಹೇಳಲು ಬರುವಂತಿಲ್ಲ. ಇದ್ದಕ್ಕಿದ್ದಂತೆ ಕಾಲಭಾಗ– ಕಲ್ಪವೃಕ್ಷಗಳಿಂದ ಆರಂಭವಾಗಿ ಆದಿನಾಥನ ಭವಾವಳಿಯು ಏಳು ಆಶ್ವಾಸಗಳ ವರೆಗೆ ಸಾಗುತ್ತದೆ. ಮುಂದಿನ ಮೂರು ಆಶ್ವಾಸಗಳಲ್ಲಿ ಆದಿನಾಥಚರಿತೆಯೆಲ್ಲವೂ

ಮುಗಿಯುತ್ತದೆ. ಈ ಕತೆಯು ಪಂಪನ 'ಆದಿಪುರಾಣ'ದ ಕತೆಯನ್ನು ಬಹು ಮಟ್ಟಿಗೆ ಹೋಲುತ್ತಿದ್ದರೂ ಪ್ರತಿ ಆಶ್ವಾಸಾರಂಭದ ಪದ್ಯವು ಜಿನಸೇನಾಚಾರ್ಯರ 'ಪೂರ್ವಪುರಾಣ'ದೊಳಗಿನದು. ಪಂಪನ ಆದಿಪುರಾಣದೊಳಗೆ ಭವಾವಳಿಯು ಆರು ಆಶ್ವಾಸಗಳಲ್ಲಿ ಮುಗಿದು ಮುಂದಿನ ಹತ್ತು ಆಶ್ವಾಸಗಳಲ್ಲಿ ಆದಿನಾಥನ ಚರಿತ್ರೆ ಮುಗಿಯುತ್ತಿದೆ. ಸಾಮ್ಯವಿಷ್ಟಕ್ಕೆ ನಿಲ್ಲದೆ ಅದು ಅವರ ಬರೆಪ–ಜೀವನಗಳಲ್ಲಿಯೂ ಕಂಡುಬರಬಹುದು. ಪಂಪನು 'ವಿಕ್ರಮಾರ್ಜುನವಿಜಯ'ವನ್ನು ಬರೆದರೆ ಹಸ್ತಿಮಲ್ಲನು 'ಅರ್ಜುನರಾಜ ನಾಟಕ'ವನ್ನು ಬರೆದಿದ್ದಾನೆ. ಪಂಪನ ತಂದೆ ಅಭಿರಾಮ ದೇವನು ಜಿನಮತವನ್ನು ಸ್ವೀಕರಿಸಿದಂತೆ ಹಸ್ತಿಮಲ್ಲನ ತಂದೆ ಗೋವಿಂದಭಟ್ಟನೂ ಜಿನಮತ ಸ್ವೀಕರಿಸಿದ್ದಾನೆ. ಈತನ ವಿಕ್ರಾಂತಕೌರವ ನಾಟಕವು ರನ್ನನ ಗದಾಯುದ್ಧವನ್ನು ಹೋಲಬಹುದು.

ಆದಿಪುರಾಣದ ಆಶ್ವಾಸಾಂತಗದ್ಯಗಳಲ್ಲಿ ತನ್ನ ಗ್ರಂಥವನ್ನು ಪೂರ್ವಪುರಾಣವೆಂದು ಹೇಳಿಕೊಂಡಿದ್ದಾನೆ. ಅದನ್ನು ಪ್ರತಿಮಾಡುವವನು ಮಾತ್ರ ಅದು "ಆದಿಪುರಾಣ ಕನ್ನಡಗ್ರಂಥ"ವೆಂದು ಹೇಳಿದ್ದಾನೆ. ಎರಡು ಆಶ್ವಾಸಾಂತಗದ್ಯಗಳಲ್ಲಿ ಕವಿ ತನ್ನನ್ನು **ಹಸ್ತಿಮಲ್ಲಿಷೇಣಾಚಾರ್ಯ**ನೆಂದೂ ಉಳಿದೆಂಟರಲ್ಲಿ **ಹಸ್ತಿಮಲ್ಲಿಸೂರಿ**ಯೆಂದೂ ಹೇಳಿಕೊಂಡಿದ್ದಾನೆ. ಈತನಿಗೆ **ಉಭಯಭಾಷಾಚಕ್ರವರ್ತಿ**ಯೆಂಬ ಬಿರುದಿದೆ. ಎರಡೂ ಮಾದರಿಯ ಆಶ್ವಾಸಾಂತಗದ್ಯಗಳನ್ನಿಲ್ಲಿ ಕೊಡುತ್ತೇವೆ.

ಇತ್ಯುಭಯಭಾಷಾಚಕ್ರವರ್ತಿ ಹಸ್ತಿಮಲ್ಲಿಷೇಣಾಚಾರ್ಯ ವಿರಚಿತ. ಪೂರ್ವಪುರಾಣಕಥಾಯಾಂ ದ್ವಿತೀಯ ಪರ್ವಂ.

ಇತ್ಯುಭಯಭಾಷಾಚಕ್ರವರ್ತಿ ಹಸ್ತಿಮಲ್ಲಿಸೂರಿವಿರಚಿತ ಪೂರ್ವಪುರಾಣಕಥಾಯಾಂ ಚತುರ್ಥಪರ್ವಂ.

ಗ್ರಂಥಾಂತ್ಯದಲ್ಲಿ ಈ ಪದ್ಯವಿದೆ—

ಶ್ರೀಮಚ್ಚಾಮರಸಿಂಹವಿಷ್ಟರವರಚ್ಛತ್ರತ್ರಯಾಶೋಕದಿ ।
ವ್ಯಾಮೋಯಧ್ವನಿಪುಷ್ಪವೃಷ್ಟಿಸುರಭೇರೀಭೂರಿಭಾಮಂಡಲ ॥
ಸ್ತೋಮಂ ಭಾಸ್ವದನಂತಬೋಧನಿಳಯಂ ದ್ರುತ್ಸಾಖ್ಯಲಕ್ಷ್ಮೀಸಮು ।
ದ್ದಾಮಂ ಮಾಳ್ಕೆಮಗಳ್ಕರಿಂದೆ ಶುಭಮಂ ಶ್ರೀವರ್ಧಮಾನಂ ಜಿನಂ ॥

(ಪದ್ಯವು ಇದ್ದಕ್ಕಿದ್ದಂತೆ ಬರೆಯಲಾಗಿದೆ.)

ಬೆಳಗಾವ ಜಿಲ್ಹಾ ಅಥಣೀ ತಾಲೂಕಿನೊಳಗಿನ ಐನಾಪುರದ ಪಾರ್ಶ್ವನಾಥ ಬಸ್ತಿಯಲ್ಲಿ ಪದ್ಮಣ್ಣಾ ಉಪಾಧ್ಯೆಯವರು ಇದನ್ನು ೧೬೨೩ಕ್ಕೆ ಸಲ್ಲುವ ಸ್ವಭಾನು ಸಂವತ್ಸರದ ಮಾರ್ಗಶಿರ ಶುಕ್ಲಪಕ್ಷ ದಶಮಿ ಸೋಮವಾರ ದಿನದಲ್ಲಿ ಬರೆದು ಮುಗಿಸಿದರು.

ಇದರಿಂದ ತುಸು ಭಾಗವನ್ನು ಉದಹರಿಸುತ್ತೇವೆ:

"ಈ ಜಂಬೂದ್ವೀಪದ ಮಹಾಮೇರುವಿನ ದಕ್ಷಿಣಭರತದ ಕೋಶಲದೇಶದ ಅಯೋಧ್ಯಾನಗರದಧೀಶ್ವರಂ ಪದಿನಾಲ್ಕನೆಯ ಮನುವಪ್ಪ ನಾಭಿರಾಜಮಹಾರಾಜಂ ಸಕಲಗುಣೈಶ್ವರ್ಯಸಂಪೂರ್ಣನುಮಾತನ ಪಟ್ಟಮಹಾದೇವಿ ರೂಪಿನಿಂ ರತಿಯಂ। ವಿದ್ಯೆಯಿಂ ಶಾರದೆಯಂ। ಐಶ್ವರ್ಯದಿಂ ಲಕ್ಷ್ಮಿಯಂ ಗೆಲುವಳ್ — ಸಕಲ ಗುಣ

ಸಂಪನ್ನೆಯಪ್ಪ ಮರುದೇವಿಮಹಾದೇವಿ. ಆಯೀರ್ವರುಂ ಸುಖಸಂಕಥಾವಿನೋದ ದಿಂದಿರಲತ್ತ ದೇವೇಂದ್ರಂ ಸ್ವಾಮಿಯ ಗರ್ಭಾವತರಣಕಲ್ಯಾಣವೆಂದರಿದು ಬಂದು ಮರುದೇವಿನಾಭಿರಾಜರಂ ಪೂಜಿಸಿಯರುದಿಂಗಳ್ವರಂ ಮೂರುಸಂಜೆಯೊಳ್ರತ್ನ ಸುವರ್ಣವೃಷ್ಟಿಯಂ ಕರೆಯಲ್ ಕುಬೇರಂಗೆ ಬೆಸಸಿ ಶ್ರೀ ಹ್ರೀಧೃತಿಕೀರ್ತಿಲಕ್ಷ್ಮಿಗಳ್ ಮೊದಲಾದವರಂ ಜಿನಜನನಿಯ ಗರ್ಭಶೋಧನೆಗೆ ನಿಯಮಿಸಿ ಅನೇಕ ದೇವ ಸ್ತ್ರೀಯರಂ ದಿವ್ಯಸ್ನಾನಭೋಜನವಸ್ತ್ರಾಭರಣಾಲಂಕಾರ ಮೊದಲಾದವೂಳಿಗಕ್ಕೆ ನಿಯಮಿಸಿ ಪೋಗಲನ್ನೆಗವೊಂದು ದಿವಸಂ ಮರುದೇವಿಮಹಾದೇವಿ ಋತುಮತಿ ಯಾಗಿ ನಾಲ್ನೀರಂ ಮಿಂದು ಪತಿಯ ಸೂಳ್ಗೆಯ್ದು ಸುಖನಿದ್ರಾಮುದ್ರಿತಾಂ ಕಿತದೊಳ್ ಬೆಳಗಪ್ಪ ಜಾವದೊಳ್ ಶುಭಸ್ವಪ್ನಂಗಳಪ್ಪ ಗಜೇಂದ್ರಂ। ವೃಷಭಂ। ಸಿಂಹಂ। ಕಮಲಾಲಯಂ। ಪದ್ಮಂ। ಪೂರ್ಣಚಂದ್ರಂ। ಸೂರ್ಯಂ। ಮೀನಂ। ಪೂರ್ಣಕುಂಭಂ। ಸಮುದ್ರಂ। ಸಿಂಹಪೀಠಂ। ನಾಗಾಲಯಂ। ಸುರವಿಮಾನಂ। ರತ್ನರಾಶಿ। ಮಾಲಾ। ಮಹಾಮೇರುವೆಂಬಿವಂ ಶುಭ ಸ್ವಪ್ನಂಗಳಂ ಕಂಡೆಚ್ಚತ್ತು—''

ಕನ್ನಡ ಗದ್ಯ ಗ್ರಂಥಗಳ ಕೊರತೆಯಿರುವಾಗ ಇಂತಹ ಗ್ರಂಥಗಳು ಪ್ರಕಟ ವಾಗುವುದು ಆವಶ್ಯಕವೆಂದು ಬೇರೆ ಹೇಳಬೇಕಾಗಿಲ್ಲ.

**ಕೆ. ಜಿ. ಕುಂದಣಗಾರ**

# ಜೈನ ಪುರಾಣಗಳಲ್ಲಿ ಭವಾವಳಿ

## ಜಿನ

ಜೀವಮಜೀವಂ ದವ್ವಂ ಜಿಣವರವಸಹೇಣ ಜೇಣ ಣಿದ್ದಿಟ್ಠಂ ।
ದೇವಿನ್ದವಿನ್ದವನ್ದಂ ವನ್ದೇ ತಂ ಸವ್ವದಾ ಸಿರಸಾ ॥

—ದ್ರವ್ಯ ಸಂಗ್ರಹ

ಜಗತ್ತಿನಲ್ಲಿ ಜೀವಗಳು ಎಷ್ಟು ಇವೆಯೆಂದು ಎಣಿಸಿ ಹೇಳಲು ಆಗುವುದಿಲ್ಲ. ಇವುಗಳಲ್ಲಿ ಕೆಲವು ಮುಕ್ತಜೀವಗಳು; ಎಂದರೆ, ಅನಂತಜ್ಞಾನ, ಅನಂತದರ್ಶನ, ಅನಂತವೀರ್ಯ, ಅನಂತಸುಖ ಎಂಬ ನಾಲ್ಕು ಅನಂತಗುಣಗಳನ್ನು ಹೊಂದಿ ಲೋಕಾಗ್ರದಲ್ಲಿ ಶಾಶ್ವತವಾಗಿ ಇರತಕ್ಕವು. ಉಳಿದವು ಬದ್ಧಜೀವಗಳು; ಎಂದರೆ, ಅಜೀವದೊಡನೆ ಸೇರಿಕೊಂಡು ಒಂದು ಕಡೆ ನಿಲ್ಲಲಾರದೆ ಸ್ವರ್ಗ ಮರ್ತ್ಯ ಪಾತಾಳ ಗಳಲ್ಲಿ ವಿರಾಮವಿಲ್ಲದೆ ಓಡಿಯಾಡುತ್ತಿರುವವು. ಈ ದುಃಸ್ಥಿತಿಯನ್ನು ಅನುಭವಿಸಲು ಜೀವ ಯಾವಾಗ, ಏಕೆ, ಹೇಗೆ ಅಜೀವದೊಡನೆ ಸೇರಿಕೊಂಡಿತೆಂಬುದು ತಿಳಿಯದು. ಆದರೆ ಇಷ್ಟು ಮಾತ್ರ ಸ್ಪಷ್ಟವಾಗಿ ಗೊತ್ತು: ಜೀವ, ತನಗೆ ಬೇಕಾದರೆ ತನ್ನ ಸ್ವಪ್ರಯತ್ನದಿಂದ ಅಜೀವದ ಸಂಬಂಧವನ್ನು ಕಳೆದುಕೊಂಡು ಮುಕ್ತವಾಗಿ ಅನಂತ ಗುಣಚತುಷ್ಟಯವನ್ನು ಪಡೆಯಬಲ್ಲದು; ಇಲ್ಲವೆ, ತನಗೆ ಬೇಕಾದರೆ ತನ್ನ ಸ್ವಪ್ರಯತ್ನದಿಂದಲೇ ಅಜೀವದ ಸಂಬಂಧವನ್ನು ಇನ್ನೂ ಬಿಗಿಯಾಗಿ ಬೆಸೆದು ಕೊಂಡು ಮೇಲು ನಡು ಕೆಳಗಿನ ನೆಲಗಳಲ್ಲಿಯೇ ಓಡಿಯಾಡುತ್ತಿರಬಲ್ಲದು. ಜೀವ ಏಳುವುದೂ ಬೀಳುವುದೂ ಅದರ ಕೈಯಲ್ಲೇ ಇದೆ.

ಎಂದೋ ಒಮ್ಮೆ ಅಜೀವದೊಡನೆ ಸಿಕ್ಕಿಬಿದ್ದು, ಅನೇಕ ಸಲ ನಾಕ ನೆಲ ನರಕಗಳಲ್ಲಿ ಸಂಸರಣದ ಕಷ್ಟ ಕಂಡು, ಕಡೆಗೆ ಹೇಸಿ, ಅಜೀವದಿಂದ ಬೇರ್ಪಡ ಬೇಕೆಂಬ ಬುದ್ಧಿ ಬಂದು, ಅನಂತಚತುಷ್ಟಯವನ್ನು ಸಾಧಿಸಿ ಲೋಕಾಗ್ರದಲ್ಲಿ ನೆಲೆಗಂಡ ಮುಕ್ತಜೀವನನ್ನು "ಸಿದ್ಧ"ನೆನ್ನುವರು. ಆದರೆ, ಹೀಗೆ ಅಜೀವದಿಂದ ಬೇರ್ಪಡಬೇಕೆಂಬ ಹೆಗ್ಗುರಿಯಿಂದ ಹೊರಟ ಹಲವು ಜೀವಗಳಿಗೆ "ನಾನು ಒಬ್ಬ ಮುಕ್ತನಾದರೆ, ಸಿದ್ಧನಾದರೆ, ಅಷ್ಟು ಮಾತ್ರ ಸಾಲದು. ನಾನು ಮುಕ್ತಿಯನ್ನು ಪಡೆಕೊಂಡಮೇಲೆ ಅದನ್ನು ಇತರರಿಗೆ ಬೋಧಿಸಬೇಕು. ಅವರೂ ಈ ಶಾಶ್ವತ ಸುಖದ ಮಾರ್ಗವನ್ನು ನಂಬಿ, ಇದನ್ನು ತಿಳಿದು, ಇದರಲ್ಲಿ ನಡೆದು ತಾವೂ ಮುಕ್ತ ರಾಗಬೇಕು" ಎಂದು ಲೋಕದ ಮೇಲೆ ಅಪಾರ ಕರುಣೆಯಿರುತ್ತದೆ. ಇಂತಹ ಜೀವಗಳು ತಾವು ಮುಕ್ತರಾಗಲು ಮಾಡಬೇಕಾದ ಧರ್ಮಕ್ರಮಗಳ ಜೊತೆಗೆ, ಮುಕ್ತಿಮಾರ್ಗವನ್ನು ಲೋಕಕ್ಕೆ ಬೋಧಿಸುವ ಅಧಿಕಾರ ಪಡೆಯಲು ಬೇಕಾದ ಒಂದು ವಿಶೇಷಕರ್ಮವನ್ನೂ ಮಾಡುತ್ತಾರೆ. ಅದರ ಫಲವಾಗಿ, ತಾವು ಅನಂತ ಚತುಷ್ಟಯವನ್ನು ಪಡೆದು ಇನ್ನೂ ಜೀವಿಸಿರುವಾಗಲೇ ತಾವು ಕಂಡ ಮುಕ್ತಿ ಮಾರ್ಗವನ್ನು ಲೋಕಕ್ಕೆ ತಿಳಿಸುತ್ತಾರೆ. ಇವರನ್ನೇ ಜಿನ, ಅರ್ಹಂತ, ತೀರ್ಥಂಕರ ಎಂದು ಅನೇಕ ಹೆಸರುಗಳಿಂದ ಕೀರ್ತಿಸುವುದು.

## ಜೈನ ಪುರಾಣ

ಶ್ರೀಮತೆ ಸಕಲ ಜ್ಞಾನ ಸಾಮ್ರಾಜ್ಯ ಪದಮೀಯುಷೇ ।
ಧರ್ಮಚಕ್ರಭೃತೇಭರ್ತ್ರೇ ನಮಃ ಸಂಸಾರಭೀಮುಷೇ ॥

—ಮಹಾಪುರಾಣ

ಧರ್ಮಧರರಾದ ತೀರ್ಥಂಕರರ, ಚಕ್ರಧರರಾದ ಚಕ್ರವರ್ತಿಗಳ, ಅವರವರ ಕಾಲಗಳಲ್ಲಿದ್ದ ನಾರಾಯಣ ವಾಸುದೇವ ಪ್ರತಿವಾಸುದೇವರುಗಳ ಚರಿತವೇ ಜೈನ ಪುರಾಣ. ಸದ್ಯಃಕಾಲದ ಪುರಾಣಗಳಲ್ಲಿ ಕೀರ್ತಿತರಾಗಿರುವ ತೀರ್ಥಂಕರರ ಸಂಖ್ಯೆ ೨೪; ಚಕ್ರವರ್ತಿಗಳದು ೧೨; ಬಲದೇವ ವಾಸುದೇವ ಪ್ರತಿವಾಸುದೇವರದು ೯. ಈ ಅರುವತ್ತುಮೂವರು[1] ಜೈನರ ಮಹಾಪುರುಷರು, 'ಶಲಾಕಾಪುರುಷ'ರು. ಇವರೆಲ್ಲರ ಚರಿತವನ್ನು ಒಳಗೊಂಡದ್ದೇ 'ಮಹಾಪುರಾಣ'; ಪೂರ್ವಭಾಗವನ್ನು ಜಿನಸೇನಾಚಾರ್ಯರೂ ಉತ್ತರಭಾಗವನ್ನು ಗುಣಭದ್ರಾಚಾರ್ಯರೂ ರಚಿಸಿ ಆದುದು. ನಮ್ಮ ಕನ್ನಡ ಜೈನ ಪುರಾಣಗಳಿಗೆ ಇದೇ ಬಹು ಪಾಲು ಆಧಾರ.

ಗುಣಭದ್ರಾಚಾರ್ಯರು ಪಾರ್ಶ್ವನಾಥ ಪುರಾಣದಲ್ಲಿ

'ಕುಮಾರ್ಗವಾರಿಣೀ ಯಸ್ಮಾತ್ ಯಸ್ಮಾತ್ ಸನ್ಮಾರ್ಗಧಾರಿಣೀ
ತತ್ತೇ ಧರ್ಮ್ಯಂ ಕಥಾಂ ವಕ್ಷ್ಯೇ ಭವ್ಯಾನಾಂ ಮೋಕ್ಷಗಾಮಿನಾಂ'

ಎಂದು ಹೇಳಿದರೆ,

'ಕೇಳಿರೊ ಭವ್ಯರು ನಿಮಗೊಂದು ಸುಕಥೆಯ ಹೇಳುವೆನತಿ ಮೃದುವಾಗಿ
ಕೇಳಿದಿರಾದರೆ ನಿಮಗಾತ್ಮಸುಖವಿಂದು ನಾಳೆ ನಾಡಿದಿನೊಳಗಹುದು'

ಎಂದು ರತ್ನಾಕರ ಭರತಚಕ್ರೇಶ್ವರನ ಚರಿತೆಗೆ ತೊಡಗಿದರೆ,

'ವೃತ್ತಕಂ ತಸ್ಯ ವಕ್ಷ್ಯಾಮೋ ಜನ್ಮತ್ರಯ ಸಮಾಶ್ರಿತಂ
ಶ್ರುತೇನ ಯೇನ ಭವ್ಯಾನಾಂ ಭವೇದ್ಭೂಯೋ ಭವಾದ್ಭಯಂ'

ಎಂದು ಉತ್ತರಪುರಾಣಕರ್ತೃಗಳು ಎರಡನೆಯ ಬಲದೇವ ವಾಸುದೇವರ ಕತೆಯನ್ನು ಪ್ರಾರಂಭಿಸಿದರೆ,—ಈ ಮಾತು ಒಂದು ಪುರಾಣಕತೆಗಲ್ಲ, ಎಲ್ಲಾ ಪುರಾಣ ಕತೆಗಳಿಗೂ ಅನ್ವಯಿಸುವುದೆಂದು ಹೇಳಬಹುದು.

ಹೀಗೆ ಹೇಳಿದ ಪುರಾಣಕತೆಗಳಲ್ಲಿ ಅಗ್ರಮರ್ಯಾದೆ ತೀರ್ಥಂಕರರ ಕತೆಗಳಿಗೆ. ಬಳಿಕ ಚಕ್ರವರ್ತಿಗಳವಕ್ಕೆ. ಆಮೇಲೆ ಬಲದೇವ ವಾಸುದೇವ ಪ್ರತಿವಾಸುದೇವರವಕ್ಕೆ. ಅನಂತರ ಇನ್ನುಳಿದವರ ಕತೆಗಳಿಗೆ. ಕಾರಣ: ತೀರ್ಥಂಕರರ ಧರ್ಮೋಪದೇಶದಿಂದಲೇ ಉಳಿದವರಿಗೆ ಸ್ವರ್ಗಾಪವರ್ಗಗಳು.

### ಪುರಾಣ ಸಂದೇಶ

'ಪರಮ ಜಿನಧರ್ಮಮಂ ತತ್
ಸ್ವರೂಪದಿಂ ನಂಬಲೊಲ್ಲದೀ ಸಂಸೃತಿಯೊಳ್
ತಿರಿದಪುವು ಜೀವಮದನಾ
ದರದಿಂ ನಂಬಿದೊಡೆ ತಿರಿವ ಬೇವಸಮುಂಟೇ'

---

1 ಶಾಂತಿನಾಥ, ಕುಂಥುನಾಥ, ಅರನಾಥ—ಈ ಮೂವರು ಚಕ್ರವರ್ತಿಗಳಾಗಿಯೂ ಬಾಳಿ, ಬಳಿಕ ತೀರ್ಥಂಕರರೂ ಆದುದರಿಂದ, ಈ ಅರುವತ್ತುಮೂರೆಂಬ ಸಂಖ್ಯೆ ಸರಿಯಾಗಿ ನೋಡಿದರೆ ಅರುವತ್ತೆ ಆಗಬೇಕು.

ಎಂಬ ಇದೇ ಜೈನ ಪುರಾಣಗಳು ಸಾರುವ ಸಂದೇಶ. ಜೀವ ಸಂಸೃತಿಯಲ್ಲಿ ತಿರಿದಾಡುವುದನ್ನು ತಪ್ಪಿಸುವ ಈ 'ಪರಮ ಜಿನಧರ್ಮ' ಏನು?

'ನಾರಕ[1] ತಿರ್ಯಗ್ಗತಿ ಸಂ
ಸಾರಿಗೆ ಪಾಪೋಪಚಯದೆ; ಸುರಗತಿ[2] ಪುಣ್ಯ
ಪ್ರೇರಿತದೆ; ನೃಗತಿ ಮಿಶ್ರದೆ;
ಸಾರೆ ವಲಂ ಸುಗತಿ ಪುಣ್ಯಪಾಪಕ್ಷಯದಿಂ'

ಎಂದು ನಂಬುವುದು ಸಮ್ಯಕ್ತ್ವ, ಸಮ್ಯಕ್ ದರ್ಶನ. ಇದನ್ನು ಕುರಿತ ವಿಶೇಷವಾದ ತಿಳಿವಳಿಕೆ ಪಡೆಯುವುದು — ಸಮ್ಯಕ್ ಜ್ಞಾನ. ಈ ತಿಳಿದುದರಂತೆ ನಡೆಯುವುದೇ — ಸಮ್ಯಕ್ ಚಾರಿತ್ರ. ಈ ಸಮ್ಯಕ್ ದರ್ಶನ ಜ್ಞಾನ ಚಾರಿತ್ರಗಳೆಂಬ ರತ್ನತ್ರಯದ ರಕ್ಷಣೆಗೆ ಬಂದಾತನಿಗೆ ಸುಗತಿ ಸತ್ಯ. ಇದೇ 'ಪರಮ ಜಿನಧರ್ಮ'ದ ಸಾರ.

ಪರಮ ಜಿನಧರ್ಮವನ್ನು ನಂಬದೆ, 'ಸತ್ಪಥದಿಂದಗಲ್ದೊಡಕ್ಕುಮೆದಲವಶ್ಯದಿಂ ಕುಗತಿ' ಎಂಬುದನ್ನು ಮೇಲಿಂದ ಮೇಲೆ ಅನುಭವಿಸಿದವರ ಕತೆಗಳು ಜೈನ ಪುರಾಣಗಳಲ್ಲಿ ಸಿಕ್ಕುತ್ತವೆ. ಪಾಪೋಪಚಯವನ್ನು ತಡೆದು ನಾರಕತಿರ್ಯಗ್ಗತಿಗಳಿಂದ ಪಾರಾದವರ ಕತೆಗಳೂ ಪಾಪಪುಣ್ಯಗಳ ಮಿಶ್ರಣದಿಂದ ನರಗತಿ ಪಡೆದವರ ಕತೆಗಳೂ ಪುಣ್ಯಸಂಪಾದನೆಯಿಂದ ಪುನಃಪುನಃ ಸುರಗತಿ ಪಡೆದವರ ಕತೆಗಳೂ ಪುರಾಣಗಳ ತುಂಬಾ ಇವೆ. ಇವುಗಳಿಗಿಂತ ಮುಖ್ಯವಾದ ತೀರ್ಥಂಕರರ, ಸಿದ್ಧರ ಕತೆಗಳೂ ಇವೆ.

ಭವವಾರಾಶಿ ನಿಮಗ್ನರಂ ದಯೆ ದಮಂ ದಾನಂ ತಪಂ ಶೀಲಮೆಂ
ಬಿವೆ ಮೆಯ್ಯಾಗಿರೆ ಸಂದ ಧರ್ಮಮೆ ವಲಂ ಪೊತ್ತೆತ್ತುಗುಂ ಮುಕ್ತಿಪ
ರ್ಯವಸಾನಂಬರಮಾನುಷಂಗಿಕಫಲಂ ಭೂಪೇಂದ್ರ ದೇವೇಂದ್ರ ರಾ
ಜ್ಯವಿಳಾಸಂ ಪೆಜಿತಲ್ತು......................

ಎಂದು ಕಂಡುಕೊಂಡು,

ಆಕುಳನೆನಾಗಿ ಸುಱಿದೆನ
ನಾಕುಳಮಪ್ಪೆಡೆಯನಱಿಸಿ ಕಾಣೆಂ ಮೂಱುಂ
ಲೋಕದೊಳಂ ನಿನ್ನಿಕೆಯೆ
ಲೋಕಾಗ್ರಮೆ ಸಂತಮುದನೆ ಮಾಡೆನಗರ್ಹಾ

ಅಮರೇಂದ್ರೋನ್ನತಿ ಖೇಚರೇಂದ್ರವಿಭವಂ ಭೋಗೀಂದ್ರಭೋಗಂ ಮಹೇಂ
ದ್ರಮಹೈಶ್ವರ್ಯಮಿವೆಲ್ಲಮಧ್ರುವಮಿವಂ ಬೇಡ್ಪಂತು ಬೆಳ್ಪಲ್ಲೆನು
ತ್ತಮದೀಕ್ಷಾವಿಧಿಯುಂ ಸಮಾಧಿಮರಣಂ ಕರ್ಮಕ್ಷಯಂ ಬೋಧಿಲಾ
ಭಮಮೋಘಂ ದೊರೆಕೊಳ್ವುದಕ್ಕೆಮಗೆ ಮುಕ್ತಿಶ್ರೀಮನೋವಲ್ಲಭಾ

1 ನರಕಗಳು ಏಳು: ನೆಲದಿಂದ ಕೆಳಕ್ಕೆ ಹೋದರೆ ಕ್ರಮವಾಗಿ—ರತ್ನಪ್ರಭಾ, ಶರ್ಕರಾಪ್ರಭಾ, ವಾಲುಕಾಪ್ರಭಾ, ಪಂಕಪ್ರಭಾ, ಧೂಮಪ್ರಭಾ, ತಮಃಪ್ರಭಾ ಮತ್ತು ಮಹಾತಮಃಪ್ರಭಾ. ಇವುಗಳಲ್ಲಿ ಕೆಳಕೆಳಗೆ ಹೋದಷ್ಟೂ ದುಃಖ ಹೆಚ್ಚು.

2 ಸ್ವರ್ಗಗಳು ಹಲವು ತೆರ. ನೆಲದಿಂದ ಮೇಲಕ್ಕೆ ಹೋದರೆ ೧೬ ಕಲ್ಪಗಳೂ, ಅಲ್ಲಿಂದ ಮೇಲೆ ೯ ಗ್ರೈವೇಯಕಗಳೂ, ಅದರಾಚೆ ೯ ಅನುದಿಶ ವಿಮಾನಗಳೂ, ಅದರ ಮೇಲೆ ೫ ಅನುತ್ತರ ವಿಮಾನಗಳೂ ಇವೆ. ಸೌಧರ್ಮ, ಐಶಾನ, ಸಾನತ್ಕುಮಾರ, ಮಹೇಂದ್ರ, ಬ್ರಾಹ್ಮ, ಬ್ರಹ್ಮೋತ್ತರ, ಲಾಂತವ, ಕಾಪಿಷ್ಠ, ಶುಕ್ರ, ಮಹಾಶುಕ್ರ, ಶತಾರ, ಸಹಸ್ರಾರ, ಆನತ, ಪ್ರಾಣತ, ಆರಣ ಮತ್ತು ಅಚ್ಯುತ–ಇವು ಕಲ್ಪಗಳ ಇರುವ ಕ್ರಮ. ಇದರ ಮೇಲಿನ ಗ್ರೈವೆಗಳಲ್ಲಿ ಕೆಳಗಿನ ಮೂರಕ್ಕೆ ಅಧೋಗ್ರೈವೆಯೆಂದೂ, ಬಳಿಕಿನ ಮೂರಕ್ಕೆ ಮಧ್ಯಮಗ್ರೈವೆಯೆಂದೂ, ಅನಂತರದ ಮೂರಕ್ಕೆ ಉಪರಿಗ್ರೈವೆಯೆಂದೂ ಹೆಸರು. ಕಲ್ಪಾತೀತದಲ್ಲಿ ಕೊನೆಯದಾದ ಅನುತ್ತರ ವಿಮಾನಗಳ ಇರುವ ಕ್ರಮ ಹೀಗೆ: ವಿಜಯ, ವೈಜಯಂತ, ಜಯಂತ, ಅಪರಾಜಿತ ಮತ್ತು ಸರ್ವಾರ್ಥಸಿದ್ಧಿ. ಈ ಸರ್ವಾರ್ಥ ಸಿದ್ಧಿಗೆ ಮೇಲೆಯೇ ಸಿದ್ಧಕ್ಷೇತ್ರ.

ಎಂದು ಮೊರೆಯಿಟ್ಟು, ಭವಸಿಗಳದ ತೊಡರನ್ನು ಕಳಚಲು, ಭವಜಲಧಿಯ ತಡಿಗೆ ಸಾರ್ಚಲು, ಭವಗಹನದ ಉಪದ್ರವವನ್ನು ಕೆಡಿಸಲು, ಭವಾಂತಕಭವನಕ್ಕೆ ಒಯ್ಯಲು, ಭವಮಥನನ ಪಾದಗಳನ್ನೇ ಬಲ್ಪಿಡಿಪಿಡಿದು, ಆತನನ್ನೇ ನಂಬಿ, ಆತನ ಮಾತನ್ನು ತಿಳಿದು, ಆತನ ಮಾರ್ಗದಲ್ಲಿ ನಡೆದು, ಸುಗತಿಗೆ ಸೇರಿ ಸಂತಸವಾಗಿ ನಿಂತವರ ಕತೆಗಳಲ್ಲಿ ಜೈನ ಪುರಾಣ ಸಂದೇಶ ಅಡಗಿದೆ.

ಭವವಾರಾಶಿಯಲ್ಲಿ ನಿಮಗ್ನವಾದ ಜೀವ ಉದ್ಧಾರವಾಗಲು ಬಯಸುವುದು ತಕ್ಕುದೇ ಆದರೂ, ಅನಾದಿಕಾಲದಿಂದ ಅಂಟಿಬಂದ ಪುಣ್ಯಪಾಪಗಳನ್ನು ತಟ್ಟನೆ ಕ್ಷಯಿಸಿಕೊಂಡು ಸುಗತಿಗೆ ಸೇರಲಾರದು. ಇಲ್ಲಿಂದ ಅಲ್ಲಿಗೆ ಏರಬೇಕಾದರೆ ಮೆಟ್ಟಲು ಮೆಟ್ಟಲಾಗಿ ಹೋಗಿಯೇ ತೀರಬೇಕು. ಪುಣ್ಯಪಾಪಗಳ ಕ್ಷಯವನ್ನು ಸಾಧಿಸುವ ಮೊದಲು ಕ್ರಮ ಕ್ರಮವಾಗಿ ಪಾಪ ಕ್ಷಯವನ್ನು ಕಲಿಯಬೇಕು. ಸಂಪೂರ್ಣ ಪಾಪ ಕ್ಷಯವನ್ನು ಸಾಧಿಸಿ, ನಾರಕ ತಿರ್ಯಗ್ಗತಿಗಳನ್ನು ನೀಗಿಕೊಂಡು, ಕೇವಲ ದೇವಮಾನುಷ ಗತಿಗಳನ್ನೆ ಪಡೆಯಬೇಕು. ಆ ಬಳಿಕ ಪುಣ್ಯ ಕ್ಷಯವನ್ನು ಕೊಂಚ ಕೊಂಚವಾಗಿ ಕಲಿತು, ಸಂಪೂರ್ಣ ಪುಣ್ಯ ಕ್ಷಯವನ್ನು ಸಾಧಿಸಿ, ದೇವ ಮಾನುಷಗತಿಗಳನ್ನು ದಾಟಿ, ಸುಗತಿಗೆ ಸೇರಬೇಕು. ಈ ಪ್ರಾಪ್ತಿ ಪಡೆಯಲು ಬೇಕಾದ ಸಾಧನೆಗೆ ಒಂದು ಜನ್ಮ ಸಾಲದು; ಅನೇಕ ಜನ್ಮಗಳನ್ನು ಎತ್ತಿ ಬರಬೇಕು, ಹಲವಾರು ಸಲ ಹುಟ್ಟಿ ಬರಬೇಕು, ಮೇಲಿಂದಮೇಲೆ ಭವಿಸಿ ಬರಬೇಕು, ಬಹು 'ಭವಾವಳಿ'ಗಳನ್ನು ಅನುಭವಿಸಬೇಕು. ತೀರ್ಥಂಕರರಿಗಾದರೂ ಇದು ತಪ್ಪಿದ್ದಲ್ಲ. ಇದನ್ನೆ ಜೈನ ಪುರಾಣಗಳು ಮೇಲಿಂದಮೇಲೆ ಒತ್ತಿ ಹೇಳುವುವು.

### 'ಕಾಲಲಬ್ಧಿ'

ಸುಗತಿಯನ್ನು ಸೇರಬೇಕಾದರೆ ಜೀವ ಹೇಗೆ ಪಾಪಪುಣ್ಯಗಳ ಕ್ಷಯದಿಂದ ಅಧಿಕಾರ ಸಂಪಾದಿಸಬೇಕೋ, ಹಾಗೆಯೇ ಸಮ್ಯಕ್ ಚಾರಿತ್ರ ಜ್ಞಾನಗಳಿಗೆ ಮೂಲವಾದ ಸಮ್ಯಕ್ ದರ್ಶನವನ್ನು ಪಡೆಯಬೇಕಾದರೂ ಅದಕ್ಕೆ ಅಧಿಕಾರಿಯಾಗಲು ತಕ್ಕ ಪುಣ್ಯವನ್ನು ಜೀವ ಮಾಡಿರಬೇಕು. ಈ ಪುಣ್ಯ ಮಾಡಿದ್ದರೆ, ಅದು ಪಕ್ವವಾದ ಕಾಲಕ್ಕೆ ಆತನಿಗೆ ಸಮ್ಯಕ್ತ್ವ ತಾನಾಗಿಯೇ ಲಭಿಸುತ್ತದೆ. ಇಂತಹ ಕಾಲ ಲಭಿಸುವುದನ್ನೇ ಪುರಾಣಗಳು 'ಕಾಲಲಬ್ಧಿ' ಎನ್ನುವುವು. ಈ ಕಾಲಲಬ್ಧಿ ದೊರೆಕೊಳ್ಳುವವರೆಗೆ ಯಾರು ಏನೇ ಉಪದೇಶಮಾಡಿದರೂ 'ಮನದಿಂ ಮಿಥ್ಯಾಕಳಂಕಂ ತೆರಳ್ದಿನಿಸುಂ ಪೋಗದು. ಕಾಲಲಬ್ಧಿ ದೊರೆಕೊಂಡಂತಲ್ಲದೇಂ ಪೋಕುಮೇ!' ಈ ಕಾಲಲಬ್ಧಿ ಯಾರಿಗೆ ಕೂಡುತ್ತದೊ ಆತನೆ 'ಭವ್ಯ'. ಕಾಲಲಬ್ಧಿ ಬೇಗನೆ ಕೂಡುವುದಾದರೆ ಆತ 'ಆಸನ್ನ ಭವ್ಯ'. ಕೂಡುವುದು ಇನ್ನೂ ತಡವಾದರೆ ಆತ 'ದೂರಭವ್ಯ'. ಕಾಲಲಬ್ಧಿ ಎಂದೂ ಕೂಡದಾದರೆ ಆತ 'ಅಭವ್ಯ'. ಆದರೆ–ಆಸನ್ನವಾಗಲಿ ದೂರವಾಗಲಿ–ಕಾಲಲಬ್ಧಿ ಕೂಡಿತೆಂದರೆ ಆತನಿಗೆ ಸುಗತಿ ಸಿದ್ಧ. 'ಭವ್ಯತೆ ಪುಣ್ಯಜೀವಮಂ ಸಹಜಸುಖಾಸ್ಪದಂಬರೆಗಮುಯ್ವಿನಮಲ್ಲಿ ತೊಡಂಕಲೀಗುಮೇ'!

### ತೀರ್ಥಂಕರ ಭವಾವಳಿ

ಕಾಲಲಬ್ಧಿ ಕೆಲವರಿಗೆ ಬೇಗವೂ ಕೆಲವರಿಗೆ ತಡೆದೂ ಹೇಗೆ ದೊರೆಕೊಳ್ಳುವುದೋ ಹಾಗೆಯೇ, ಸುಗತಿ ಕೂಡ ಕೆಲವರಿಗೆ ಬೇಗವೂ ಕೆಲವರಿಗೆ ತಡೆದೂ ದೊರೆ

ಕೊಳ್ಳುವುದು. ತೀರ್ಥಂಕರರಲ್ಲಿಯಾದರೂ ಹದಿನೆಂಟು ಮಂದಿ[1] ಭವ್ಯತೆ ಬಂದ ಮೂರೇ ಜನ್ಮದಲ್ಲಿ ಮುಕ್ತಿ ಪಡೆದರು. ನೇಮಿನಾಥಸ್ವಾಮಿಗೆ ಐದು ಜನ್ಮ ಬೇಕಾಯಿತು. ಚಂದ್ರಪ್ರಭನಿಗೆ ಎಂಟು ಜನ್ಮ. ಆದಿನಾಥನಿಗೂ ಪಾರ್ಶ್ವನಾಥನಿಗೂ ಹತ್ತು ಹತ್ತು ಜನ್ಮ. ಶಾಂತಿನಾಥನಿಗೆ ಹನ್ನೆರಡು. ಮಹಾವೀರಸ್ವಾಮಿಯಾದರೋ ಕೃತಯುಗದಲ್ಲಿ ಆದಿತೀರ್ಥಂಕರನ ಮೊಮ್ಮಗನಾಗಿ, ಆದಿಚಕ್ರೇಶ್ವರನ ಮಗನಾಗಿ ಬಂದರೂ ಮುಕ್ತಿ ಪಡೆದುದು ಕಲಿಯುಗದಲ್ಲಿ, ಕ್ರಿ. ಪೂ. ಆರನೆಯ ಶತಮಾನದಲ್ಲಿ. ಈ ನಡುವೆ ಆತನ ಜೀವ ಬಂದ ಭವಗಳ ಸಂಖ್ಯೆ ಲೆಕ್ಕಕ್ಕೆ ಸಿಕ್ಕದು. ತೀರ್ಥಂಕರರ ಜೀವ ಕೂಡ ಎಷ್ಟೋ ಕಾಲದಿಂದ ಭವಮಾಲೆಯಲ್ಲಿ ಬರುತ್ತಿದ್ದರೂ, ಯಾವ ಭವದಲ್ಲಿ ಕಾಲಲಬ್ಧಿ ದೊರೆಕೊಂಡಿತೋ ಆ ಭವದಿಂದ ಮುಕ್ತಿ ಪಡೆಯುವವರೆಗಿನ ಭವಗಳೇ ಮುಖ್ಯವಾದುದರಿಂದ, ಆ ಭವಗಳಲ್ಲಿಯೇ ಜೀವದ ನಿಜವಾದ ಬೆಳೆವಳಿಗೆ ಕಾಣಬರುವುದರಿಂದ, ಆ ಭವಗಳ ಸಾಲನ್ನು ಮಾತ್ರ ''ಭವಾವಳಿ'' ಎಂದು ಗಣಿಸಿ ಜೈನ ಪುರಾಣಗಳು ವಿಸ್ತರಿಸುತ್ತವೆ.

ಜೈನ ಪುರಾಣಗಳು ಕೀರ್ತಿಸಿರುವವರಲ್ಲಿ ಅರುವತ್ತುಮೂವರು ಮಾತ್ರ ಮಹಾಪುರುಷರೆಂದೂ, ಅವರಲ್ಲೂ ತೀರ್ಥಂಕರರಿಗೆ ಮೊದಲ ಮರ್ಯಾದೆಯೆಂದೂ ಮೇಲೆ ಹೇಳಿದೆ. ಈಗ ಈ ತೀರ್ಥಂಕರರಲ್ಲಿ ಇಬ್ಬರ ಭವಾವಳಿಗಳನ್ನು ನೋಡೋಣ.

### ಪಾರ್ಶ್ವನಾಥ ಪುರಾಣದ ಭವಾವಳಿ

ಪಾರ್ಶ್ವನಾಥ ಪುರಾಣವನ್ನು ಆರಂಭಿಸುವಾಗ ಗುಣಭದ್ರಾಚಾರ್ಯರು

'ಅನಭಿವ್ಯಕ್ತಮಾಹಾತ್ಮ್ಯಾ ದೇವ ತೀರ್ಥಕರಾಃ ಪರೇ
ತ್ವಮೇವ ವ್ಯಕ್ತಮಾಹಾತ್ಮ್ಯೋ ವಾಚ್ಯಾ ತೇ ಸಾಧು ತತ್ಕಥಾ'

ಎಂದು ಹೇಳಿದ್ದಾರೆ. ಇದು ನಿಜವೇ. 'ಜೈನಧರ್ಮಕ್ಕುದಾಹರಣಂ ಸೀನ್. ಇತರಕ್ಕುದಾಹರಣನಾ ನಿನ್ನಗ್ರಜನ್ಮಂ ದುರಾಚರಣಂ' ಎನ್ನಿಸಿಕೊಂಡಂತಹ ತಮ್ಮನ, ಅಣ್ಣನ ಕತೆ ಈ ಪುರಾಣ. ಇವರಿಬ್ಬರೂ ಒಂದೇ ತಾಯಿತಂದೆಯ ಮಕ್ಕಳು; ಹಾಲಿನ ಕಡಲಿನಲ್ಲಿ ಅಮೃತ, ವಿಷ ಬಂದಂತೆ ಬಂದವರು. ಚಿತ್ತವೃತ್ತಿಯಲ್ಲಿ ಮೊದಲು ಹುಟ್ಟುವ ಸಂಸಾರ ಕಾರಣವಾದ ಅಜ್ಞಾನದಂತೆ ಮೊದಲು ಹುಟ್ಟಿದವನು ಅಣ್ಣ ಕಮಠ; ಬಳಿಕ ಉದಯಿಸಿದ ವಿವೇಕದಂತಹವನು ತಮ್ಮ ಮರುಭೂತಿ. ಇವರಲ್ಲಿ

ಅಭಿಜಾತಂ ಮರುಭೂತಿ ಭದ್ರಗುಣಮಾತಂಗಂ ಸಹಸ್ರಾರ ಕ
ಲ್ಪಭವಂ ಖೇಚರನಚ್ಯುತಂ ನೃಪವರಂ ಗ್ರೈವೇಯಕೋದ್ಭಾಸಿ ಭೂ
ವಿಭುವಾನಂದಕನಾನತೇಂದ್ರನಮರೇಂದ್ರಾಹೀಂದ್ರ ಭೂಪೇಂದ್ರ ವ
ಲ್ಲಭ ಪಾರ್ಶ್ವಾಧಿಪನಾಗಿ..............

ಸತ್ಸೌಖ್ಯ ಸನ್ಮೋಕ್ಷವನ್ನು ಪಡೆದು ಜೈನ ಧರ್ಮಕ್ಕೆ ಉದಾಹರಣನಾದನು. ಆದರೆ

ಕಮಠಂ ಕುಕ್ಕುಟಸರ್ಪನುಗ್ರಭಯಕೃದ್ಧೂಮಪ್ರಭೋತ್ಥಂ ಮಹಾ
ಹಿಮವಚ್ಛೈಲಮಹಾಹಿ ಷಷ್ಠನರಕೋರ್ವೀ ನಾರಕಂ ವ್ಯಾಧನ
ಪ್ರಮದುಃಖಾಬ್ಧಿ ತಮಃಪ್ರಭಾವನಿಭವಂ ಕಂಠೀರವಂ ಷಷ್ಠಭೂ
ಭೃನ್ಮಿತಂ ತೀವ್ರ ತಪಸ್ವಿ ದೈತ್ಯನೆನೆ..........

ಬಹು ದುಃಖಕ್ಕೆ ಭಾಗಿಯಾಗಿ ಇತರಕ್ಕೆ ಉದಾಹರಣನಾದನು.

---

1 ಅಜಿತ, ಶಂಭವ, ಅಭಿನಂದನ, ಸುಮತಿ, ಪದ್ಮಪ್ರಭ, ಸುಪಾರ್ಶ್ವ, ಪುಷ್ಪದಂತ, ಶೀತಲ, ಶ್ರೇಯಾಂಸ, ವಾಸುಪೂಜ್ಯ, ವಿಮಲ, ಅನಂತ, ಧರ್ಮ, ಕುಂಥು, ಅರ, ಮಲ್ಲಿ, ಮುನಿಸುವ್ರತ, ನಮಿ.

ಅಂದು ಕಮಠ ಜನ್ಮದಲ್ಲಿ ತಮ್ಮನ ಮೇಲೆ ಅಕಾರಣವಾಗಿ ಮುಳಿದು, ಆ ನಿಸರ್ಗ ಕೋಪದಿಂದ, ಆ ಪೂರ್ವಭವ ವೈರದಿಂದ, ಆ ಭವಬದ್ಧ ಕ್ರೋಧದಿಂದ, ಭವಭವದಲ್ಲೂ ಪಾರ್ಶ್ವನಾಥನಿಗೆ ಉಪಸರ್ಗ ಕೊಡುತ್ತ ಬಂದನು. ಆದರೆ 'ಆದಿಮಧ್ಯಾಂತಗಂಭೀರಾಃ ಸಂತೋಂಭೋನಿಧಿಸನ್ನಿಭಾಃ'. ಆ ದುರ್ಗತಿಭಾಜನನು ಎಸಗಿದ ಉಪಸರ್ಗ 'ಸುವರ್ಣಕಗ್ನಿ ಸಂಯೋಗಂ ವರ್ಣೋತ್ಕರ್ಷಮಂ ಪಡೆವಂತುತ್ತರೋತ್ತರ ಸುಖಪ್ರದಮನೊದವಿಸುತ್ತುಂ ಸಕಲ ಕಲಂಕನಿರ್ಮುಕ್ತಿ ಪದಮಂ ಕೆಲವೆ ಭವದೊಳೆ' ಮರುಭೂತಿಗೆ ತಂದುಕೊಟ್ಟಿತು. 'ಮಹತಾಂ ಶತ್ರೋಃ ಕೃತಾಪಕ್ರಿಯಾತ್ ಖ್ಯಾತಿರ್ಯಾ ಮಹತೀ ನ ಜಾತು ಚಿದಸೌ ಮಿತ್ರಾತ್ ಕೃತೋಪಕ್ರಿಯಾತ್'!

ಈ ಅಪಕಾರದಿಂದಾದರೂ ಪಾರ್ಶ್ವನಾಥನ ಅಭ್ಯುದಯಕ್ಕೆ ಕಾರಣನಾದ ಪುಣ್ಯವೋ ಏನೋ, ಕಮಠನಿಗೆ ಶಂಬರಭವದಲ್ಲಿ ಕಾಲಲಬ್ಧಿ ದೊರಕಿತು, ಪೂರ್ವವೈರ ಮರೆಯಾಗಿ ಶಾಂತಿ ಬಂತು. ಸ್ವಾಮಿಯ ಸಮವಸರಣದಲ್ಲಿ ಅವನಿಗೆ ಸ್ಥಾನ ಸಿಕ್ಕಿತು. ಈ ಅದ್ಭುತವನ್ನು ಕುರಿತು

> 'ಶಂಬರೋಽಪ್ಯಾತ್ತ ಕಾಲಾದಿಲಬ್ಧಿಃ ಶಮಮುಪಾಗಮತ್
> ...............................
> ಕ್ವ ತದ್ವೈರಂ ವೃಥಾ ಶಾಂತಿರೀದೃಶೀ ಕ್ವಾಸ್ಯ ಪಾಪಿನಃ
> ಸಖ್ಯಮಾಸ್ತಾಂ ವಿರೋಧಶ್ಚ ವೃದ್ಧಯೇ ಹಿ ಮಹಾತ್ಮಭಿಃ'

ಎಂದು ಗುಣಭದ್ರಾಚಾರ್ಯರು ಹೇಳಿದ್ದಾರೆ.

### ಆದಿಪುರಾಣದ ಭವಾವಳಿ

ಮೇಲಿನದರಷ್ಟು ಸುಲಭವಲ್ಲದಿದ್ದರೂ ಅದರಷ್ಟೇ ಭವಭೀತಿಯನ್ನು ಹುಟ್ಟಿಸುವಂತಹ ಭವಾವಳಿ ಆದಿಪುರಾಣದ್ದು. ಕಥೆ 'ತದಾದಿ ಪುರುಷ ಪ್ರಸ್ತುತ್ಯ ಜನ್ಮಾಳಿ ಬಂಧುರಂ' ಎಂದು ಪಂಪನಿಂದ ಕೀರ್ತಿತವಾದುದು. 'ಭವವಾರಾಶಿಯೊಳಿಂತು ಜೀವನಿವಹಂ ಬರ್ದುತ್ತುಮಿರ್ಕುಂ' ಎಂಬುದು ಜಲಕ್ಕನೆ ಕಂಡುಬರುವುದು ಈ ಕತೆಯಲ್ಲಿ. 'ಈ ಭವದಿಂದಮಾದ ವಾಸನೆ ಮುಱುಮೆಯ್ಗ ಮುಕ್ಕುಂ' ಎಂಬುದು ಎಂದೂ ಮರೆಯದಂತೆ ಮುಂದಟ್ಟಾಗುವುದು ಈ ಕತೆಯಲ್ಲಿ. 'ಶ್ರುತೇನ ಯೇನ ಭವ್ಯಾನಾಂ ಭವೇದ್ಭೂಯೋ ಭವಾದ್ಭಯಂ' ಎಂಬ ಮಾತು ಹೆಜ್ಜೆ ಹೆಜ್ಜೆಗೂ ಸಾರ್ಥಕವಾಗುವುದು ಇಲ್ಲಿ.

ಈ ಪುರಾಣ ಕಥೆಯಲ್ಲಿ ಆದಿಪುರುಷನ ಜನ್ಮಾಳಿ ಮಾತ್ರವಲ್ಲ, ಆದಿಪುರುಷರ ಜನ್ಮಾವಳಿಗಳೂ[1] ಇವೆ. ಆದಿತೀರ್ಥಂಕರನಿಗೆ ಮೊದಲ ಭಿಕ್ಷೆಯಿಕ್ಕಿದ ಮೊದಲ 'ದಾನತೀರ್ಥ ಪ್ರವರ್ತಕ' ಶ್ರೇಯಾಂಸ, ಪ್ರಥಮ ಚಕ್ರೇಶ್ವರ ಭರತ, ಮೊದಲ ಕಾಮದೇವ ಬಾಹುಬಲಿ, ಪ್ರಥಮ ಗಣಧರ ವೃಷಭಸೇನ— ಇವರ, ಹಾಗೂ ಹಲವರು ಇತರರ[2] ಭವಾವಳಿಗಳಿವೆ.

[1] ಎದುರು ಪಕ್ಕದಲ್ಲಿ ಕೊಟ್ಟಿರುವ ಪಟ ನೋಡಿ.

[2] ಆದಿನಾಥನ ಇನ್ನೂ ಐದು ಮಕ್ಕಳ ಭವಾವಳಿಯಿದೆ. ಆದೀಶ್ವರನಿಗೆ ಮಹಾಬಳಭವದಲ್ಲಿ ಮಂತ್ರಿಗಳಾಗಿದ್ದ ನಾಲ್ವರ, ವಜ್ರಜಂಘಭವದಲ್ಲಿ ತಂದೆಯೂ ಮಾವನೂ ಆಗಿದ್ದ ಇಬ್ಬರ ಜನ್ಮಾಂತರ ಕತೆಗಳೂ ಇವೆ.

## ಆದಿಪುರುಷ ಭವಾವಳಿ

| | | | | | | | | | | | |
|---|---|---|---|---|---|---|---|---|---|---|---|
| ೧ | (ಜಯವರ್ಮ) ಮಹಾಬಳ | (ಧನಶ್ರೀ) (ನಿರ್ನಾಮಿಕೆ) | | (ಅತಿಗೃಧ್ರ) (ನಾರಕಿ) (ವ್ಯಾಘ್ರ) (ದಿವಾಕರಪ್ರಭ) | (ಸೇನಾಪತಿ) (ಆರ್ಯ) (ಪ್ರಭಾಕರ) | (ಮಂತ್ರಿ) (ಆರ್ಯ) (ಕನಕಪ್ರಭ) | (ಪುರೋಹಿತ) (ಆರ್ಯ) (ಪ್ರಭಂಜನ) | (ಉಗ್ರಸೇನ) | (ಹರಿವರ) | (ನಾಗದತ್ತ) | (ಲೋಲುಪ) |
| ೨ | ಲಲಿತಾಂಗ | ಸ್ವಯಂಪ್ರಭೆ | | [ಸಾಮಾನಿಕ ದೇವತೆಗಳು—ಸಾಮಾನಿಕ ದೇವತೆಗಳು] | | | | | | | |
| ೩ | ವಜ್ರಜಂಘ | ಶ್ರೀಮತಿ | ಅನುಂದರಿ | ಮತಿವರ | ಅಕಂಪ | ಆನಂದ | ಧನಮಿತ್ರ | ಶಾರ್ದೂಲ | ವರಾಹ | ವಾನರ | ನಕುಲ |
| ೪ | ಆರ್ಯ | ಆರ್ಯೆ | ↓ | ↓ | ↓ | ↓ | ↓ | ಶಾರ್ದೂಲಾರ್ಯ | ವರಾಹಾರ್ಯ | ವಾನರಾರ್ಯ | ನಕುಲಾರ್ಯ |
| ೫ | ಶ್ರೀಧರದೇವ | ಸ್ವಯಂಪ್ರಭ | | [ಅಧೋಗ್ರೈವೆಯಲ್ಲಿ ಅಹಮಿಂದ್ರರು] | | | | ಚಿತ್ರಾಂಗದ | ಮಣಿಕುಂಡಲ | ಮನೋಹರ | ಮನೋರಥ |
| ೬ | ಸುವಿಧಿ | ಕೇಶವ | ↓ | | | | | ವರದತ್ತ | ವಾರಿಷೇಣ | ಚಿತ್ರಾಂಗದ | ಶಾಂತಮದನ |
| ೭ | ಅಚ್ಯುತೇಂದ್ರ | ಪ್ರತೀಂದ್ರ | | ↓ | ↓ | ↓ | ↓ | ಪ್ರತೀಂದ್ರ | ಪ್ರತೀಂದ್ರ | ಪ್ರತೀಂದ್ರ | ಪ್ರತೀಂದ್ರ |
| ೮ | ವಜ್ರನಾಭಿ | ಧನದೇವ | ↓ | ಸುಬಾಹು | ಮಹಾಬಾಹು | ಪೀಠ | ಮಹಾಪೀಠ | ವಿಜಯ | ವೈಜಯಂತ | ಜಯಂತ | ಅಪರಾಜಿತ |
| ೯ | ಅಹಮಿಂದ್ರ | ಅಹಮಿಂದ್ರ | ↓ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ | ಅಹಮಿಂದ್ರ |
| ೧೦ | ಆದಿನಾಥ | ಶ್ರೇಯಾಂಸ | ಸುಂದರಿ | ಭರತ | ಬಾಹುಬಲಿ | ವೃಷಭಸೇನ | ಅನಂತವಿಜಯ | ಅನಂತವೀರ್ಯ | ಅಚ್ಯುತ | ವೀರ | ಸುವೀರ |
| | ಮೊದಲ ತೀರ್ಥಂಕರ | ದಾನತೀರ್ಥ ಪ್ರವರ್ತಕ | ಮಗಳು | ಮೊದಲ ಚಕ್ರವರ್ತಿ | ಮೊದಲ ಕಾಮದೇವ | ಮುಖ್ಯ ಗಣಧರ | ಆದಿನಾಥನ ಅನೇಕ ಮಂದಿ ಮಕ್ಕಳಲ್ಲಿ ಕೆಲವರು | | | | |

ಆದಿನಾಥನ ಜೀವಕ್ಕೆ ಕಾಲಲಬ್ಧಿ ದೊರೆಕೊಂಡುದು ಮಹಾಬಳಭವದಲ್ಲಿ. ಈ ಮಹಾಬಳ ಸಮ್ಯಕ್ತ್ವಮಹಿಮೆಯಿಂದ ಈಶಾನಕಲ್ಪದಲ್ಲಿ ಹುಟ್ಟಿದ. ಅಲ್ಲಿಂದ ಚ್ಯುತನಾಗಿ ವಜ್ರಜಂಘನೆಂಬ ರಾಜನಾದ. ಪುಣ್ಯಜೀವಿಯಾಗಿದ್ದು ಮುಂದೆ ಭೋಗಭೂಮಿಯಲ್ಲಿ ಹುಟ್ಟಿದ. ಅದುವರೆಗೆ ಭೋಗಕಾಂಕ್ಷೆಯಲ್ಲಿ ಮುಳುಗಿದ್ದವನು ಎಚ್ಚತ್ತು ಮುಂದೆ ಶ್ರೀಧರದೇವನಾಗಿ, ಬಳಿಕ ಸುವಿಧಿನರಾಧಿಪನಾಗಿ, ಅನಂತರ ಅಚ್ಯುತೇಂದ್ರನಾಗಿ, ಬಳಿಕ ವಜ್ರನಾಭಿಯೆಂಬ ಚಕ್ರವರ್ತಿಯಾದ. ಆಗ ತೀರ್ಥಂಕರ ಪುಣ್ಯವನ್ನು ಬಂಧಿಸಿಕೊಂಡು ಸಂನ್ಯಸನ ವಿಧಿಯಿಂದ ಮುಡಿಪಿ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾದ. ಅಲ್ಲಿಂದ ಚ್ಯುತಿಹೊಂದಿ ಆದಿದೇವನಾಗಿ ಜನ್ಮತಾಳಿ, ಅದೇ ಜನ್ಮದಲ್ಲಿ ಮುಕ್ತಿ ಪಡೆದ.

ಶ್ರೇಯಾಂಸ ಮೊದಲ 'ದಾನತೀರ್ಥಪ್ರವರ್ತಕ'. ತೀರ್ಥಂಕರನಾಗುವವನು ತೃತೀಯ ಕಲ್ಯಾಣಾನಂತರ ಕೆಲಕಾಲ ಛದ್ಮಸ್ಥನಾಗಿ ನಿಲ್ಲುತ್ತಾನೆ. ಬಳಿಕ ಕೇವಲಜ್ಞಾನವನ್ನು ಪಡೆಕೊಡುವ ತಪಸ್ಸಿಗೆ ತೆರಳುತ್ತಾನೆ. ಹೀಗೆ ಹೋಗುವ ಮುಂಚೆ ಒಂದು ಭಿಕ್ಷೆಯನ್ನು ಸ್ವೀಕರಿಸುತ್ತಾನೆ. ಈ ಭಿಕ್ಷೆ ಅವನ ತಪಸ್ಸಿನ ತಾಪಕ್ಕೆ ಬೇಕಾದ ಧಾರಣಾಶಕ್ತಿಯನ್ನು ಕೊಡುತ್ತದೆ. ಇಂತಹ ದಾನದ ಪುಣ್ಯ ಅಗಣ್ಯ. ಇದು ಶ್ರೇಯಾಂಸನ ಪಾಲಿಗೆ ಹೇಗೆ ಬಂತು? ಈ ಶ್ರೇಯಾಂಸನ ಜೀವ ಒಂದು ಕಾಲಕ್ಕೆ ಹೆಣ್ಣುರೂಪು ತಾಳಿತ್ತು; ಆದಿದೇವನ ಲಲಿತಾಂಗಭವದಲ್ಲಿ ಆತನಿಗೆ ಸ್ವಯಂಪ್ರಭೆಯೆಂಬ ಹೆಂಡತಿಯಾಗಿತ್ತು. ಅವರಿಬ್ಬರಿಗಾದ ಗಾಢ ಅನ್ಯೋನ್ಯತ್ವವೆ ಕಾರಣವಾಗಿ ಲಲಿತಾಂಗ ವಜ್ರಜಂಘನಾದಾಗ ಸ್ವಯಂಪ್ರಭೆ ಶ್ರೀಮತಿಯಾಗಿಯೂ ವಜ್ರಜಂಘ ಭೋಗಭೂಮಿಯಲ್ಲಿ ಆರ್ಯನಾದಾಗ ಶ್ರೀಮತಿ ಆರ್ಯೆಯಾಗಿಯೂ ಹುಟ್ಟಿ ಆತನ ಹೆಂಡತಿಯಾಗಿದ್ದಳು. ಈ ಆರ್ಯಾಭವದಲ್ಲಿ ಪಡೆದ ಸದುಪದೇಶದ ಪರಿಣಾಮವಾಗಿ, ಮುಂದೆ ಆರ್ಯನು ಶ್ರೀಧರದೇವನಾದಾಗ ಆರ್ಯೆ ಅದೇ ವಿಮಾನದಲ್ಲಿ ಸ್ವಯಂಪ್ರಭದೇವನಾಗಿ, ತನ್ನ ಹೆಣ್ಣುರೂಪು ಬಿಟ್ಟು ಗಂಡುರೂಪಾಂತಳು. ಪುನಃ ಅನ್ಯೋನ್ಯ ಪ್ರೀತಿಯೇ ಕಾರಣವಾಗಿ, ಶ್ರೀಧರದೇವ ಸುವಿಧಿರಾಜನಾದಾಗ ಸ್ವಯಂಪ್ರಭದೇವ ಕೇಶವನೆಂಬ ಅವನ ಮಗನಾದನು. ಮುಂದೆ ಸುವಿಧಿ ಅಚ್ಯುತೇಂದ್ರನಾದಾಗ ಕೇಶವನೂ ಅದೇ ಕಲ್ಪದಲ್ಲಿ ಸಮಾನವಿಭವಗಳುಳ್ಳ ಪ್ರತೀಂದ್ರನಾದನು. ಬಳಿಕ ಅಚ್ಯುತೇಂದ್ರ ವಜ್ರನಾಭಿ ಚಕ್ರವರ್ತಿಯಾದಾಗ ಪ್ರತೀಂದ್ರ ಧನದೇವನೆಂಬ ಹೆಸರಿನಿಂದ ಆ ಚಕ್ರಿಗೆ ಗೃಹಪತಿರತ್ನನಾದ; ಮರುಜನ್ಮದಲ್ಲಿ ವಜ್ರನಾಭಿಯ ಜೀವದೊಡನೆಯೆ ಸರ್ವಾರ್ಥಸಿದ್ಧಿಯಲ್ಲಿ ಅಹಮಿಂದ್ರನಾದ. ಆಗಿ, ಕಡೆಯ ಭವದಲ್ಲಿ, ತನ್ನ ಸ್ವಯಂಪ್ರಭಾಭವದ ಪತಿಯಾದ ಲಲಿತಾಂಗ ಆದಿದೇವನಾದಾಗ, ಆತನಿಗೆ ಮೊದಲ ಭಿಕ್ಷೆಯಿಕ್ಕಿ ಆದಿದಾನತೀರ್ಥಪ್ರವರ್ತನದ ವಿಶೇಷ ಭಾಗ್ಯಪಡೆದ ಶ್ರೇಯಾಂಸನಾದ.

ಆದಿನಾಥನ ವಜ್ರಜಂಘಭವದಲ್ಲಿ ಆತನಿಗೆ ಮತಿವರನೆಂಬ ಮಂತ್ರಿಯೂ ಅಕಂಪನೆಂಬ ಸೇನಾಪತಿಯೂ ಆನಂದನೆಂಬ ಪುರೋಹಿತನೂ ಧನಮಿತ್ರನೆಂಬ ಶ್ರೇಷ್ಠಿಯೂ ಇದ್ದರು. ಆ ನಾಲ್ವರೂ ವಜ್ರಜಂಘ ಈಶಾನ ಕಲ್ಪದಲ್ಲಿ ಲಲಿತಾಂಗನಾಗಿದ್ದಾಗ ಆತನಿಗೆ ಸಾಮಾನಿಕದೇವರಾಗಿದ್ದರು. ಒಮ್ಮೆ ವಜ್ರಜಂಘನು

ಆ ನಾಲ್ವರೊಡನೆ ಚಾರಣಮುನಿ ದರ್ಶನಕ್ಕೆ ಹೋಗಿ ಅವರಿಗೆ ದಾನಕೊಟ್ಟನು. ಅವನ ದಾನವನ್ನು ಆ ನಾಲ್ವರು ಸಂಗಡಿಗರು ಅನುಮೋದಿಸಿದರು. ಮಾತ್ರವಲ್ಲ, ಅಲ್ಲಿಗೆ ಬಂದ ಶಾರ್ದೂಲ ವರಾಹ ವಾನರ ನಕುಲಗಳೆಂಬ ನಾಲ್ಕು ತಿರ್ಯಕ್ಕುಗಳೂ ಆ ದಾನವನ್ನು ಅನುಮೋದಿಸಿದುವು. ಆ ದಾನಾನುಮೋದನದ ಪರಿಣಾಮವಾಗಿ ಮತಿವರಾದಿ ನಾಲ್ವರೂ ಕೆಲಕಾಲ ಅಧೋಗ್ರೈವೆಯಲ್ಲಿ ಅಹಮಿಂದ್ರರಾಗಿದ್ದು, ಆದಿನಾಥನ ವಜ್ರನಾಭಿಭವದಲ್ಲಿ ಆತನಿಗೆ ಸಹೋದರರಾಗಿ, ಮುಂದೆ ಸರ್ವಾರ್ಥ ಸಿದ್ಧಿಯಲ್ಲಿ ಆತನೊಡನೆ ಅಹಮಿಂದ್ರರಾದರು. ಅದೇ ದಾನಾನುಮೋದನದ ಫಲವಾಗಿ ಶಾರ್ದೂಲಾದಿ ನಾಲ್ಕು ತಿರ್ಯಕ್ಕುಗಳೂ ಮುಂದೆ ವಜ್ರಜಂಘನು ದೇವ ಮಾನುಷಗತಿಗಳನ್ನು ಪಡೆಪಡೆದಲ್ಲಿಯೇ ತಾವೂ ಜನ್ಮ ಪಡೆದು, ಆತನ ವಜ್ರನಾಭಿ ಭವದಲ್ಲಿ ಆತನಿಗೆ ಸಹೋದರರಾಗಿ, ಮರುಭವದಲ್ಲಿ ಆತನೊಡನೆಯೆ ಸರ್ವಾರ್ಥ ಸಿದ್ಧಿಯಲ್ಲಿ ಅಹಮಿಂದ್ರರಾದವು. ಕಡೆಯ ಭವದಲ್ಲಿ ಮಹಾಬಳಚರ ಆದಿದೇವ ನಾದಾಗ ಮತಿವರಾದಿಗಳ ಮತ್ತು ಶಾರ್ದೂಲಾದಿಗಳ ಜೀವ ಆತನ ಮಕ್ಕಳಾದವು. ಮತಿವರ ಮೊದಲ ಚಕ್ರಿ ಭರತನಾದ, ಅಕಂಪ ಮೊದಲ ಕಾಮದೇವ ಬಾಹುಬಲಿ ಯಾದ, ಆನಂದ ಪ್ರಥಮಗಣಧರ ವೃಷಭಸೇನನಾದ. ಧನಮಿತ್ರನೂ ಶಾರ್ದೂ ಲಾದಿಗಳೂ ಮಿಕ್ಕ ಮಕ್ಕಳಲ್ಲಿ ಐವರಾದರು. ವಜ್ರಜಂಘಭವದಲ್ಲಿ ಆತನ ತಂಗಿ ಯಾಗಿದ್ದ ಅನುಂದರಿ, ಆತನು ಆದಿದೇವನಾದಾಗ, ಆತನ ಮಗಳಾದ ಸುಂದರಿ ಯಾದಳು.

—ಇದು ಆದಿಪುರಾಣದ ಭವಾವಳಿ. ಪಂಪನೆಂದಂತೆ 'ಇದುವೆ ಸಮಸ್ತ ಭವ್ಯಲೋಕ ಪ್ರಮುದಪ್ರದಂ.'

### ಭವಾವಳಿಯ ಮಹತ್ತ್ವ

ಈ ಭವಾವಳಿ, ಈ ಜನ್ಮಾಂತರ ಕತೆಗಳ ಮಾಲೆ ತೊಡಕು ತೊಡಕಾಗಿ ಕಾಣಬಹುದು. ಕಾರಣ: ಅದು ಇರುವುದೇ ತೊಡಕು ತೊಡಕಾಗಿ. ಹಾಗೆ ಇರುವುದಕ್ಕೆ ಕಾರಣ: ಅದು ಸಂಸಾರದ ಪ್ರತಿಬಿಂಬ. ಜೀವ ಅನಾದಿಕಾಲದಿಂದ ಅನುಭವಿಸಿದ ತೊಡಕು ಜೈನಪುರಾಣಗಳಲ್ಲಿ ಕಾಣುವ ಈ ತೊಡಕಿಗಿಂತ ಅನೇಕ ಪಾಲು ಹೆಚ್ಚು. ಕಾಲಲಬ್ಧಿ ದೊರೆಕೊಂಡ ಮೇಲಿನ ಭವಾವಳಿಗೇ ಇಷ್ಟು ಹಿಂಜರಿಯುವುದಾದರೆ, ಜೀವ ಮಿಥ್ಯಾತ್ವದಿಂದ ತಂದುಕೊಳ್ಳುತ್ತಿರುವ ಅಸಂಖ್ಯ ಭವಾವಳಿಗೆ ಎಷ್ಟು ಹಿಂಜರಿಯಬೇಡ? ಎಷ್ಟು ಬೇಗ ಭವಕ್ಕೆ ಭೀತನಾಗಿ, ಸಮ್ಯಕ್ತ್ವವನ್ನು ಕೈಕೊಂಡು, ಮೋಕ್ಷಗಾಮಿಯಾಗಬೇಡ? ಈ ದೃಷ್ಟಿಯನು ತರುವುದಕ್ಕಾಗಿಯೇ ಜೈನಪುರಾಣಗಳಲ್ಲಿ ಭವಾವಳಿಯ ನಿರೂಪಣ.

ತೀರ್ಥಂಕರ ಪುರಾಣಗಳಲ್ಲಿ ಭವಾವಳಿ ತೆಗೆದರೆ

> **ಸುರಲೋಕಾವತರೋತ್ಸವಂ, ಪರಿಕೃತಂ ಜನ್ಮಾಭಿಷೇಕೋತ್ಸವಂ,**
> **ಪರಿನಿಷ್ಕ್ರಾಂತಿಮಹೋತ್ಸವಂ, ಪ್ರವಿಮಲಂ ಕೈವಲ್ಯಬೋಧೋತ್ಸವಂ,**
> **ಪರಿನಿರ್ವಾಣಮಹೋತ್ಸವಂ–ಜಿನಮಹಾಕಲ್ಯಾಣಮಯ್ದುಂ ಸವಿ**
> **ಸ್ತರದಿಂದಿರ್ಪುವು.........................**

ಈ ಪಂಚಕಲ್ಯಾಣ ಎಲ್ಲಾ ತೀರ್ಥಂಕರರಿಗೂ ಸಮಾನವಾದದ್ದು.[1] ಇಂತಹ ಪಂಚಕಲ್ಯಾಣಗಳ ವಿಶೇಷ ವೈಭವದ ವರ್ಣನೆಗಿಂತಲೂ ಮುಖ್ಯವಾದದ್ದು—ಈ ವೈಭವಗಳನ್ನು ಪಡೆಯುವ ಅರ್ಹತೆಗೆ ಜೀವ ಹೇಗೆ ಪಾತ್ರವಾಯಿತು, ಎಂಬುದು. ಈ ಅರ್ಹತೆಯನ್ನು ಜೀವ ಸಂಪಾದಿಸಿದ ವಿಧಾನವನ್ನು ವಿವರಿಸುವ ಭಾಗವೇ ಪುರಾಣದ 'ಭವಾವಳಿ'. ಈ ಭವಾವಳಿ ಭವ್ಯನಿಗೆ ಭವಭೀತಿಯನ್ನು ಉಂಟು ಮಾಡುವುದು ಮಾತ್ರವಲ್ಲ, ಅದಕ್ಕೂ ಹೆಚ್ಚಿನದೊಂದು ಕೆಲಸ ಮಾಡುತ್ತದೆ: ಹಿಂದೆ ಎಷ್ಟೇ ಪಾಪಮಾಡಿದ್ದರೂ ಕುಮಾರ್ಗ ಬಿಟ್ಟು ಸನ್ಮಾರ್ಗಕ್ಕೆ ಬಂದರೆ ಮುಂದೆ ಸುಗತಿಯುಂಟೆಂದು ಆಶ್ವಾಸಿಸಿ ಅಭಯಕೊಡುತ್ತದೆ.

> ಈ ಪುಣ್ಯಕಥೆ ಪುಣ್ಯಜೀವಿಗಳಿಗೆ ಮೆಚ್ಚು ಕಾಪುರುಷರಿಗೆ ಮೆಚ್ಚಲ್ಲ
> ಪಾಪವ ಕೆಡಿಸಿ ಪುಣ್ಯವ ಮಾಡಿ ಸುಗತಿಗೆ ಪೋಪೆವೆಂಬವರೆಲ್ಲ ಕೇಳಿ

**ಜಿ. ಪಿ. ರಾಜರತ್ನಂ**

---

1 ಹೆಸರು, ಎತ್ತರ, ಬಣ್ಣ, ಆಯುಸ್ಸು, ಚಿಹ್ನೆ, ತಾಯಿತಂದೆಯರ ಹೆಸರು, ಜನ್ಮಸ್ಥಲ, ನಿರ್ವಾಣಸ್ಥಲ, ವಂಶ, ಗೋತ್ರ, ನಕ್ಷತ್ರ—ಈ ಮುಂತಾದ ಸಣ್ಣ ವ್ಯತ್ಯಾಸಗಳನ್ನು ಬಿಟ್ಟರೆ, ಈ ತೀರ್ಥಂಕರರಲ್ಲಿ ಕಾಣುವ ವಿಶೇಷ ವ್ಯತ್ಯಾಸಗಳು ಎರಡು: (೧) ಶಾಂತಿ, ಕುಂಥು, ಅರನಾಥರು ಪರಿನಿಷ್ಕ್ರಮಿಸುವ ಮೊದಲು ಚಕ್ರವರ್ತಿಗಳಾಗಿಯೂ ಬಾಳಿದರು. (೨) ವಾಸುಪೂಜ್ಯ, ಮಲ್ಲಿ, ನೇಮಿ, ಪಾರ್ಶ್ವ, ವರ್ಧಮಾನರು ಮದುವೆಯಾಗಲಿಲ್ಲ; ಉಳಿದವರು ಆಗಿದ್ದರು.

# ಚಂದ್ರಹಾಸನ ಕಥೆ– ಅದರ ಪ್ರಸಾರ

ಕಥೆ ಹೇಳುವುದು, ಕೇಳುವುದು, ಎರಡೂ ಮಾನವ ಲೋಕಕ್ಕೆ ಸಹಜವಾಗಿ ಬಂದ ಗುಣಗಳು. ಅನೇಕವೇಳೆ ಧರ್ಮ, ನೀತಿಗಳ ಉಪದೇಶಕ್ಕಾಗಿ ಕಥೆ ಹೇಳುವುದೂ ಉಂಟು. ತತ್ವವನ್ನು ಕುರಿತು ಉಪನ್ಯಾಸಮಾಡಿದರೆ ಉದಾಸೀನ ಮಾಡುವ ಜನ ಕಥೆಯೆಂದರೆ ಉತ್ಸಾಹದಿಂದ ಕೇಳುತ್ತಾರೆ. ಇದರಿಂದ ಧರ್ಮೋಪದೇಶಕರು ತಮ್ಮ ಮತ ತತ್ತ್ವಗಳನ್ನು ಪ್ರಚಾರಗೊಳಿಸುವುದಕ್ಕಾಗಿ ಹಲವು ಕಥೆಗಳನ್ನು ಕಟ್ಟಿದ್ದಾರೆ. ಬೌದ್ಧ ಧರ್ಮಕ್ಕೆ ಸಂಬಂಧಪಟ್ಟ ಜಾತಕ ಕಥೆಗಳು ಆನುಷಂಗಿಕವಾಗಿ ಬೌದ್ಧ ಧರ್ಮವನ್ನೂ, ಬೌದ್ಧರು ನಿತ್ಯಜೀವನದಲ್ಲಿ ನಡೆದುಕೊಳ್ಳಬೇಕಾದ ರೀತಿಯನ್ನೂ ತಿಳಿಸತಕ್ಕುವಾಗಿವೆ. ಛಾಂದೋಗ್ಯೋಪನಿಷತ್ತಿನಲ್ಲಿ ಆತ್ಮಸ್ವರೂಪವನ್ನು ವಿವರಿಸುವ ಹಲವು ಕಥೆಗಳಿವೆ. ಕ್ರೈಸ್ತರ ಪವಿತ್ರ ಗ್ರಂಥವಾದ ಬೈಬಲ್ಲಿನಲ್ಲಿಯೂ ಅನೇಕ ಕಥೆಗಳಿವೆ. ಧರ್ಮೋಪದೇಶವೇ ಅಲ್ಲದೆ ಇತರ ಉದ್ದೇಶಗಳಿಂದಲೂ ಕಥೆ ಹೇಳುವುದುಂಟು. ಯಾವುದಾದರೊಂದು ಸಾಮಾಜಿಕ ಪದ್ಧತಿಯನ್ನು ಅಥವಾ ಒಬ್ಬ ವ್ಯಕ್ತಿಯನ್ನು ಆಕ್ಷೇಪಿಸುವುದಕ್ಕಾಗಿ ಕಟ್ಟಿದ ಕಥೆಗಳೂ ಇವೆ. ಅನೇಕ ಕಥೆಗಳು ನೀತಿ ಪ್ರಧಾನವಾದುವು. ಆ ಕಾರಣದಿಂದ ಅವು ಸರ್ವಕಾಲಗಳಿಗೂ ಅನ್ವಯಿಸುತ್ತವೆ.

ಹೀಗೆ ಒಂದು ಜನಾಂಗದಲ್ಲಿ ಅಥವಾ ಒಂದು ಜಾತಿಯವರಲ್ಲಿ ಹುಟ್ಟಿದ ಕಥೆಯು ಅವರಲ್ಲಿಯೇ ನಿಲ್ಲುವುದಿಲ್ಲ. ಸಾಮಾನ್ಯವಾಗಿ ಅವು ಹಲವು ಕಡೆಗಳಿಗೆ ಪ್ರವಾಸಮಾಡುತ್ತವೆ. ಇಂಥ ಕಥೆಗಳಲ್ಲಿ ಚಂದ್ರಹಾಸನ ಕಥೆಯೂ ಒಂದು. ಯೂರೋಪಿನ ಬೇರೆ ಬೇರೆ ಜನಾಂಗಗಳಲ್ಲಿ ಚಂದ್ರಹಾಸನ ಕಥೆಯನ್ನು ಹೋಲುವ ಹಲವು ಕಥೆಗಳು ಸಿಕ್ಕುತ್ತವೆ. ಬೌದ್ಧ ಮತ್ತು ಜೈನ ಸಾಹಿತ್ಯಗಳಲ್ಲಿ, ಯೆಹೂದ್ಯರ ಕಥೆಗಳಲ್ಲಿ ಚಂದ್ರಹಾಸೋಪಾಖ್ಯಾನದ ಪ್ರತಿಬಿಂಬಗಳಂತೆ ಇರುವ ಕೆಲವು ಕಥೆಗಳು ಸಿಕ್ಕಿವೆ. ಆದರೆ ಈ ಕಥೆ ಎಲ್ಲಿ ಮೊದಲು ಬಳಕೆಗೆ ಬಂದಿತು, ಹೇಗೆ ಹರಡಿತು ಎಂಬ ಪ್ರಶ್ನೆಗಳಿಗೆ ಉತ್ತರ ಹೇಳುವುದು ಕಷ್ಟ.

ಜೆಸ್ಟೋರೋಮನೋರಂ ಎಂಬ ಜರ್ಮನಿಯ ಪುರಾಣ ಕಾವ್ಯ (epic) ವೊಂದರಲ್ಲಿ ಚಂದ್ರಹಾಸನ ಕಥೆಯನ್ನು ಹೋಲುವ ಒಂದು ಉಪಾಖ್ಯಾನವಿದೆ. ಕಾನ್ರಾಡ್ ಚಕ್ರವರ್ತಿಯ ಕಾಲದಲ್ಲಿ ಲಿಯೋಪಾಲ್ಡ್ ಎಂಬ ಶ್ರೀಮಂತನೊಬ್ಬನು ಯಾವುದೋ ಕಾರಣದಿಂದ ರಾಜಸನ್ನಿಧಿಯನ್ನು ತ್ಯಜಿಸಿ ಪತ್ನೀ ಸಮೇತನಾಗಿ ಓಡಿಹೋಗಿ ಕಾಡಿನಲ್ಲಿ ಬಚ್ಚಿಟ್ಟುಕೊಂಡನು. ಒಂದುಸಲ ಬೇಟೆಗೆ ಹೋದ ಚಕ್ರವರ್ತಿಯು ದಾರಿತಪ್ಪಿ ಕಾಡಿನ ಆ ಸ್ಥಳಕ್ಕೆ ಬಂದನು. ಆಗ ಇದ್ದಕ್ಕಿದ್ದಂತೆ "ಸ್ವೀಕರಿಸು, ಸ್ವೀಕರಿಸು, ಸ್ವೀಕರಿಸು" ಎಂಬ ಮಾತುಗಳು ಅರಸನಿಗೆ ಕೇಳಿಸಿದುವು. ಕೊಂಚ ಹೊತ್ತಿನಮೇಲೆ "ಒಪ್ಪಿಸು, ಒಪ್ಪಿಸು, ಒಪ್ಪಿಸು" ಎಂಬ ಮಾತುಗಳು ಕೇಳಿಸಿದುವು. ಮೂರನೆಯ ಸಲ "ಓಡು, ಓಡು, ಓಡು ; ಏಕೆಂದರೆ ಈಗ ಹುಟ್ಟಿರುವ ಮಗುವು ಮುಂದೆ ನಿನ್ನ ಅಳಿಯನಾಗುತ್ತಾನೆ" ಎಂದು ಕೇಳಿಸಿತು. ಇದನ್ನು ಕೇಳಿ

ಗಾಬರಿಗೊಂಡ ಚಕ್ರವರ್ತಿಯು ಮಾರನೆಯ ದಿನ ಬೆಳಗ್ಗೆ ಇಬ್ಬರು ಸರದಾರರನ್ನು ಕರೆದು ಆ ಮಗುವನ್ನು ಬಲಾತ್ಕಾರವಾಗಿ ತೆಗೆದುಕೊಂಡುಹೋಗಿ ಕೊಲ್ಲಬೇಕೆಂದು ಅಪ್ಪಣೆಮಾಡಿದನು. ಆದರೆ ಅವರು ಆ ಶಿಶುವಿನ ಅತಿಶಯ ಸೌಂದರ್ಯಕ್ಕೆ ಮೋಹಿತ ರಾಗಿ ಅದನ್ನು ಕೊಲ್ಲದೆ, ಕ್ರೂರ ಮೃಗಗಳಿಗೆ ಸಿಕ್ಕದಂತೆ ಮರದ ಕೊಂಬೆಯ ಮೇಲಿರಿಸಿ, ಮೊಲವನ್ನು ಕೊಂದು ಅದರ ಹೃದಯವನ್ನು ತಂದು ಚಕ್ರವರ್ತಿಗೆ ತೋರಿಸಿದರು. ಕೊಂಚ ಹೊತ್ತಿನಮೇಲೆ ಆ ಕಾಡಿಗೆ ಬೇಟೆಗಾಗಿ ಹೋದ ಒಬ್ಬ ಮಾಂಡಲಿಕನು ಆ ಮಗುವನ್ನು ತಂದು ಸಾಕಿಕೊಂಡನು. ಈ ಮಗುವಿಗೆ ಹೆನ್ರಿ ಎಂದು ಹೆಸರಾಯಿತು. ಅದು ಜನಮುದ್ದು ಮಗುವಾಗಿ ಸುಖವಾಗಿ ಬೆಳೆಯಿತು. ಅವನು ಯುವಕನಾದನು.

ಯುವಕ ಹೆನ್ರಿಯ ಶೌರ್ಯ ಚಾತುರ್ಯಾದಿಗಳನ್ನು ಕೇಳಿ ಮೆಚ್ಚಿ ಚಕ್ರ ವರ್ತಿಯು ಅವನನ್ನು ಬರಮಾಡಿಕೊಂಡು ತನ್ನ ಆಸ್ಥಾನದಲ್ಲಿ ಕೊಂಚಕಾಲ ನಿಲ್ಲಿಸಿ ಕೊಂಡನು. ಆಗ ಅವನು ತನ್ನ ಮಾಂಡಲಿಕನ ಔರಸ ಪುತ್ರನಲ್ಲವೆಂದು ತಿಳಿದು ತಾನು ಹಿಂದೆ ಕೊಲ್ಲಬಯಸಿದ್ದ ಮಗುವೇ ಹೆನ್ರಿಯಿರಬಹುದೆಂದು ಯೋಚಿಸಿ ಈಗ ಅವನನ್ನು ಕೊಂದುತೀರಬೇಕೆಂದು ನಿರ್ಧರಿಸಿದನು. ಒಡನೆಯೇ ತನ್ನ ಸ್ವಂತ ಕೈ ಬರೆಹದಲ್ಲಿ ರಾಣಿಗೆ ಒಂದು ಕಾಗದ ಬರೆದನು. ಅದರಲ್ಲಿ ಹೀಗಿದ್ದಿತು: "ಈ ಕಾಗದ ಕಂಡ ಒಡನೆಯೇ ಇದನ್ನು ತರುವ ಯುವಕನನ್ನು ಕೊಲ್ಲಿಸತಕ್ಕುದು. ಇಲ್ಲವಾದರೆ ಮರಣದಂಡನೆಯಾದೀತು". ಈ ಕಾಗದವನ್ನು ಹೆನ್ರಿಯ ಕೈಲಿ ಕೊಟ್ಟು ತನ್ನ ರಾಣಿಯ ಬಳಿಗೆ ಕಳುಹಿಸಿದನು. ಹೆನ್ರಿಯು ಅದನ್ನು ತೆಗೆದು ಕೊಂಡು ಹೋಗುತ್ತಾ ದಾರಿಯಲ್ಲಿ ಒಂದು ಚರ್ಚು ಸಿಕ್ಕಲು ಅಲ್ಲಿ ಒಳಹೊಕ್ಕು ಪ್ರಾರ್ಥನೆ ಮಾಡಿ ಅಲ್ಲಿದ್ದ ಕಲ್ಲುಬೆಂಚಿನ ಮೇಲೆ ಮಲಗಿ ನಿದ್ದೆಮಾಡಿದನು. ಕಾಗದವು ಅವನ ಹಿಮ್ಮೆಣೆ ಚೀಲದಲ್ಲಿತ್ತು. ಅಲ್ಲಿನ ಪಾದ್ರಿಯು ಕುತೂಹಲದಿಂದ ಆ ಕಾಗದವನ್ನು ಬಿಚ್ಚಿ ಓದಿಕೊಂಡನು. ಅದರಲ್ಲಿದ್ದ ಭಯಂಕರ ಸಂದೇಶವನ್ನು ಕಂಡು ಗಾಬರಿಗೊಂಡು ಉಪಾಯದಿಂದ ಆ ಬರೆಹವನ್ನು ಅಳಿಸಿ ಪ್ರತಿಯಾಗಿ ಹೀಗೆ ಬರೆದನು: "ಇವನಿಗೆ ನಮ್ಮ ಮಗಳನ್ನು ಕೊಟ್ಟು ಮದುವೆ ಮಾಡು". ರಾಣಿಯು ಈ ಕಾಗದವನ್ನು ಓದಿಕೊಂಡು ಅದರಂತೆ ಹೆನ್ರಿಗೆ ತನ್ನ ಮಗಳನ್ನು ಕೊಟ್ಟು ವಿಜೃಂಭಣೆಯಿಂದ ಮದುವೆ ಮಾಡಿದಳು. ಚಕ್ರವರ್ತಿಯು ಇದನ್ನು ಕೇಳಿ ಬಹಳ ವ್ಯಥಿತನಾದನು. ಆದರೆ ಎಲ್ಲ ಸಂಗತಿಗಳನ್ನೂ ತನ್ನ ಸರದಾರರಿಂದಲೂ, ಮಾಂಡಲಿಕ ನಿಂದಲೂ, ಪಾದ್ರಿಯಿಂದಲೂ ಕೇಳಿ ತಿಳಿದುಕೊಂಡಮೇಲೆ ಎಲ್ಲವೂ ದೈವೇಚ್ಛೆ ಯೆಂದು ನಂಬಿ ಸಮಾಧಾನಗೊಂಡು ಹೆನ್ರಿಯನ್ನು ಮನ್ನಿಸಿ ಅವನನ್ನು ತನ್ನ ಸಿಂಹಾಸನಕ್ಕೆ ಉತ್ತರಾಧಿಕಾರಿಯನ್ನಾಗಿ ನಿಯಮಿಸಿದನು.

ಈ ಹೆನ್ರಿಯ ಕಥೆಯು ಚಂದ್ರಹಾಸನ ಕಥೆಯ ಪೂರ್ವಾರ್ಧವನ್ನು ಬಹಳ ಚೆನ್ನಾಗಿ ಹೋಲುತ್ತದೆ. ವಿವಾಹದ ವರೆಗಿನ ಕಥೆಯು ಎಲ್ಲಾ ಒಂದೇ ರೀತಿಯಲ್ಲಿದೆ. ತಂದೆ ಈ ವಿವಾಹವನ್ನು ಕಡೆಗೆ ಒಪ್ಪಿ ಸಮಾಧಾನ ಹೊಂದುತ್ತಾನೆ. ಆದರೆ ಭಾರತೀಯ ಕಥೆ ಮಾತ್ರ ಕೊಂಚ ಬೆಳೆದಿದೆ. ಇಲ್ಲಿ ವಿವಾಹವನ್ನು ಒಪ್ಪಿಕೊಂಡು ಸಮಾಧಾನ ಹೊಂದುವುದಕ್ಕೆ ಬದಲಾಗಿ ಇನ್ನೂ ದುರಭಿಸಂಧಿಯನ್ನಿಟ್ಟುಕೊಂಡು

ಮಾವನು ಅಳಿಯನನ್ನು ಕೊಲ್ಲುವ ಯೋಚನೆ ಮಾಡುತ್ತಾನೆ; ಆ ಪ್ರಯತ್ನ ದಲ್ಲಿಯೂ ಸಫಲಮನೋರಥನಾಗದೆ ಕೊನೆಯಲ್ಲಿ ತಾನು ಹೂಡಿದ ತಂತ್ರಕ್ಕೆ ತಾನೇ ಬಲಿಬೀಳುತ್ತಾನೆ.

ಕೆಲವು ಆಧುನಿಕ ಕಥಾ ಸಂಗ್ರಹಗಳಲ್ಲಿ ಇದೇ ಬಗೆಯ ಕೊನೆಯುಳ್ಳ ಕೆಲವು ಕಥೆಗಳು ದೊರೆಯುತ್ತವೆ: ತಂತ್ರಿಯಾದ ಮಾವನು ವಿಧಿನಿಯಮಕ್ಕೆ ವಿರೋಧವಾಗಿ ವರ್ತಿಸಲೆಳಸಿ ಮರಣಕ್ಕೀಡಾಗುವನು. ಈ ಕಥೆಗಳಲ್ಲೆಲ್ಲ ಸಾಕು ಮಗುವೇ ಬರುತ್ತದೆ. ಶಿಶು ಜನಿಸಿದ ರಾತ್ರಿಯೇ ಅದರ ಮುಂದಿನ ವೈಭವವನ್ನು ತಿಳಿದು ಅದರ ಮಾವನಾಗುವವನು ಅಥವಾ ಅವನ ಆಳುಗಳು ಅದನ್ನು ಕಾಡಿನಲ್ಲಿ ವಿಸರ್ಜಿಸಿ ಬರುವರು. ಇನ್ನಾರಾದರೂ ಅದನ್ನು ಕಂಡು ತೆಗೆದುಕೊಂಡು ಬಂದು ತಮ್ಮ ಸ್ವಂತ ಮಗುವಿನಂತೆ ಸಾಕುತ್ತಾರೆ. ಮೆಸಿಡೋನಿಯದ 'ನೈದಿಸ್' ಎಂಬ ಕಥೆಯಲ್ಲಿ ಮಾವನು ವಿವಾಹಾನಂತರ ಇನ್ನೊಂದು ಕಾಗದ ಕೊಟ್ಟು ಅಳಿಯುನನ್ನು ಕುರಿಯ ರೊಪ್ಪದ ಬಳಿಗೆ ಕಳುಹಿಸೆಂದು ತನ್ನ ಹೆಂಡತಿಗೆ ಹೇಳುವನು. ಆದರೆ ಅಳಿಯನು ತನ್ನ ಮಗಳೊಡನೆ ಸುಖನಿದ್ರೆಯಲ್ಲಿರುವುದನ್ನು ಅವಳು ಕಂಡು ಅವನನ್ನು ಎಬ್ಬಿಸಲು ಮನಸ್ಸಿಲ್ಲದೆ ತನ್ನ ಮಗನನ್ನು ಕರೆದು ಅವನ ಕೈಲಿ ಕಾಗದ ವನ್ನು ಕಳುಹಿಸುವಳು. ಆ ಕಾಗದದಲ್ಲಿ ಅದನ್ನು ತರುವ ಯುವಕನನ್ನು ಚೂರು ಚೂರಾಗಿ ಕತ್ತರಿಸಿ ಬಾವಿಗೆ ಎಸೆಯಬೇಕೆಂದು ಬರೆದಿತ್ತು. ಕುರುಬರು ಅದನ್ನು ಓದಿಕೊಂಡು ಒಡನೆಯೇ ಅದರಂತೆ ನಡೆಸಿಬಿಟ್ಟರು. ತನ್ನ ಹೆಂಡತಿಯ ಅಚಾತುರ್ಯವನ್ನು ಕೇಳಿ ಮಾವನು ಆತುರದಿಂದ ರೊಪ್ಪಕ್ಕೆ ಓಡಿಹೋಗುವನು. ಆದರೆ ಕಾಲಾತೀತವಾಗಿಹೋಗಿತ್ತು; ದುಃಖಪರವಶನಾಗಿ ಅವನು ಪ್ರಾಣ ಕಳೆದುಕೊಳ್ಳುವನು. ಹೀಗೆ ಭವಿಷ್ಯವಾಣಿಯು ನಿಜವಾಗಿ, ಅಳಿಯನು ಮಾವನ ಆಸ್ತಿಗೆ ಉತ್ತರಾಧಿಕಾರಿಯಾಗುವನು.

ಈ ಕಥೆಯನ್ನೇ ಹೋಲುವ ಗ್ರೀಕ್ ಕಥೆಯೊಂದಿದೆ. ಇದರಲ್ಲಿ ಪತ್ರ ಲೇಖಕನೇ ಮರಣಕ್ಕೀಡಾಗುತ್ತಾನೆ; ಅವನ ಮಗನಲ್ಲ. ಅವನು ತನ್ನ ದ್ರಾಕ್ಷೆ ತೋಟದ ಕಾವಲುಗಾರರಿಗೆ ಬರೆದ ಕಾಗದದಲ್ಲಿ ಮಾರನೆಯ ದಿನ ನಿಯಮಿತ ಕಾಲದಲ್ಲಿ ತೋಟಕ್ಕೆ ಬರುವವನನ್ನು ಕೊಲ್ಲಬೇಕೆಂದು ಆಜ್ಞಾಪಿಸಿದ್ದನು. ಮಾರನೆಯ ದಿನ ಮಾವನ ಮಾತನ್ನು ನಡೆಸುವ ಉತ್ಸಾಹದ ಭರದಲ್ಲಿ ಯುವಕನು ನಿಯಮಿತ ಕಾಲಕ್ಕೆ ಮುಂಚೆಯೇ ತೋಟಕ್ಕೆ ಹೋಗಿ ಹಿಂತಿರುಗುವನು. ಹಿಂದಕ್ಕೆ ಬರುವಾಗ ಮಧ್ಯೆ ಸಿಕ್ಕಿದ ಚರ್ಚಿನಲ್ಲಿ ಕೊಂಚಕಾಲ ನಿಲ್ಲುವನು. ಈ ನಡುವೆ ತನ್ನ ಇಷ್ಟಾರ್ಥ ನೆರವೇರಿತೇ ಇಲ್ಲವೇ ಎಂಬುದನ್ನು ತಿಳಿದುಕೊಳ್ಳುವ ಅಪೇಕ್ಷೆಯಿಂದ ಮಾವನೇ ತೋಟಕ್ಕೆ ಹೋಗುವನು. ಕಾವಲುಗಾರರು ಹಿಂದೆಮುಂದೆ ನೋಡದೆ ದೂರ ದಿಂದಲೇ ಬಾಣಗಳನ್ನು ಹೊಡೆದು ಅವನನ್ನುಕೊಲ್ಲುವರು. ಈ ಕಥೆಯೇ ಅಲ್ಬೇನಿಯ ದಲ್ಲಿಯೂ ಪ್ರಚಾರದಲ್ಲಿರುವಂತೆ ತಿಳಿಯಬಂದಿದೆ. ಇದರಲ್ಲಿ ಪಾಷನೇ ಭವಿಷ್ಯವನ್ನು ಕೇಳುತ್ತಾನೆ. ವಿವಾಹವಾದ ಅನಂತರ ಅವನು ಅಳಿಯನನ್ನು ಸುತ್ತಿಗೆಯಿಂದ ಹೊಡೆದು ಕೊಲ್ಲಬೇಕೆಂದು ಆಜ್ಞಾಪಿಸುತ್ತಾನೆ. ಆದರೆ ಪಾಷನ ಮಗನು ಅತ್ಯುತ್ಸಾಹದಿಂದ ಮೊದಲೇ ಕಮ್ಮಾರನ ಬಳಿಗೆ ಹೋಗಿ ಮರಣಕ್ಕೆ ಗುರಿಯಾಗು

ತ್ತಾನೆ. ಅವನ ತಲೆಯನ್ನು ಅಳಿಯನು ಹೊತ್ತು ತರುತ್ತಾನೆ. ಆಮೇಲೆ ಪಾಷನು ಇಂಥಾ ಆಜ್ಞೆಯೊಂದನ್ನು ಪುನಃ ತನ್ನ ಗಾಡಿಯುವನಿಗೆ ಬರೆದು ಕಳುಹಿಸಿ ತನ್ನ ಆಜ್ಞೆಯೇನಾಯಿತೆಂಬುದನ್ನು ತಿಳಿಯಲು ಹೊರಟು ತಾನೇ ಮೊದಲು ಹೋಗಿ ಮರಣಕ್ಕೀಡಾಗುವನು.

ದಕ್ಷಿಣ ಸ್ಲೊವಾಕಿಯಾದ ಕಥೆಗಳಲ್ಲಿ ಯುವಕನನ್ನು ಪ್ರತ್ಯಕ್ಷವಾಗಿ ಕೊಲೆಗೆ ಕಳುಹಿಸದೆ ಪ್ರಾಣಾಪಾಯಕರವಾದ ಯಾವುದಾದರೂ ಒಂದು ಕೆಲಸ ಮಾಡಲು ಕಳುಹಿಸುವರು. ಅದರಿಂದ ಅವನು ಹಿಂತಿರುಗುವ ಸಂಭವವೇ ಇಲ್ಲವೆಂದು ಕಳುಹಿಸಿದವರ ನಂಬಿಕೆ. ಆದರೆ ಅವನು ಅವುಗಳಲ್ಲೆಲ್ಲ ಜಯಶೀಲನಾಗಿ ಹಿಂತಿರುಗುವನು.

ಈ ಕಥೆಗಳಲ್ಲೆಲ್ಲ ವಿಧಿನಿಯಮಕ್ಕೆ ವಿರೋಧವಾಗಿ ವರ್ತಿಸಿ ಒಂದು ಶಿಶುವನ್ನು ಕೊಲ್ಲಲು ಯತ್ನಿಸಿ ಅದು ನೆರವೇರದೆ ತನ್ನ ತಂತ್ರಕ್ಕೆ ತಾನೇ ಬಲಿಬೀಳುವ ವಸ್ತುವಿದೆ. ಕಾಗದದ ಮೂಲಕ ಮಾರಣಕ್ರಿಯೆಯ ಆಜ್ಞೆಯನ್ನು ಕಳುಹಿಸುವುದು, ಅದು ದೈವ ಚಿತ್ತದಿಂದ ವ್ಯತ್ಯಾಸವಾಗುವುದು, ಮರಣಕ್ಕೆ ಬದಲಾಗಿ ಮದುವೆಯಾಗುವುದು, ಇವೆಲ್ಲ ಚಂದ್ರಹಾಸನ ಕಥೆಯಲ್ಲಿನ ಸಂಗತಿಗಳೇ ಆಗಿವೆ. ವಿಧಿಯ ಸಂಕಲ್ಪವನ್ನು ಭಂಗಗೊಳಿಸಲು ಯಾರು ಎಷ್ಟು ಪ್ರಯತ್ನ ಮಾಡಿದರೂ ಅದು ನೆರವೇರುವುದಿಲ್ಲ ವೆಂಬುದೇ ಈ ಕಥೆಗಳಲ್ಲಿ ನಿರೂಪಿತವಾಗಿರುವ ನೀತಿ. ಆದರೆ ಚಂದ್ರಹಾಸನ ಕಥೆಯು ಅಷ್ಟಕ್ಕೆ ನಿಲ್ಲದೆ ವಿವಾಹವಾದಮೇಲೆಯೂ ಅವನನ್ನು ಕೊಲ್ಲುವ ಪ್ರಯತ್ನ ಮಾಡಿ ಮಾವನು ದುಃಖಕ್ಕೆ ಈಡಾದ ಸಂಗತಿ ಅದರಲ್ಲಿ ಬಂದಿದೆ. ಅದರಲ್ಲಿ ಸಾಲಿಗ್ರಾಮದ ಮಹಿಮೆ, ಮಗು ಹುಟ್ಟಿದ ಮುಹೂರ್ತದ ಲಕ್ಷಣ, ವಿಷ್ಣು ಭಕ್ತಿಯ ಫಲ, ಮುಂತಾದುವೆಲ್ಲ ಪ್ರತಿಪಾದಿತವಾಗಿವೆ. ಚಂದ್ರಹಾಸನು ಹುಟ್ಟಿದ ಗಳಿಗೆಯು ಅವನ ತಾಯಿತಂದೆಗಳಿಗೂ ಅವನನ್ನು ಸಾಕಿದ ಮುದುಕಿಗೂ ವಿಪತ್ಕಾರಕ ವಾಗುತ್ತದೆ. ಕೊನೆಗೆ ಅವನ ಸಾಕುತಂದೆಯಾದ ಪುಳಿಂದನಿಗೆ ಸೆರೆಮನೆ ಲಭಿಸು ತ್ತದೆ. ಆದರೆ ಅವನು ಮಾತ್ರ ಎಲ್ಲ ವಿಪತ್ತುಗಳನ್ನೂ ಗೆದ್ದು ಕೊನೆಗೆ ಸುಖವನ್ನೇ ಪಡೆಯುತ್ತಾನೆ. ಅವನನ್ನು ಕೊಲ್ಲಲು ಇತರರು ಮಾಡಿದ ಪ್ರಯತ್ನಗಳೆಲ್ಲ ನಿರರ್ಥಕವಾಗುತ್ತವೆ. ಆ ಶಿಶುವು ಭಗವಂತನ ನಾಮಸಂಕೀರ್ತನೆ ಮಾಡಿದುದನ್ನು ಕೇಳಿ ಆ ಹಂತಕರ ಮನಸ್ಸು ಕರಗುತ್ತದೆ. ಈ ಕಥೆಯನ್ನು ವೈಷ್ಣವರು ವಿಷ್ಣು ಭಕ್ತಿಯ ಶ್ರೇಷ್ಠತೆಯನ್ನು ವರ್ಣಿಸಲು ಉಪಯೋಗಿಸಿಕೊಂಡಿರುವುದು ಸ್ಪಷ್ಟವಾಗಿ ಕಾಣುತ್ತದೆ. ಮೊದಲು ಹೇಗೋ ಪ್ರಾರಂಭವಾದ ಕಥೆಗಳು ಮತಪ್ರಚಾರಕರ ಕೈಗೆ ಸಿಕ್ಕಿ ಹೀಗೆ ಮಾರ್ಪಡುವುದೇನೂ ಹೊಸದಲ್ಲ. ಹದಿಮೂರನೆಯ ಶತಮಾನದ ಯೆಹೂದ್ಯರ ಕಥೆಯೊಂದರಲ್ಲಿ ಈ ತತ್ವವು ಚೆನ್ನಾಗಿ ಕಾಣುತ್ತದೆ. ಯೆಹೂದ್ಯರ ಸಿನಗಾಗ್ (Synagogue) ಅಥವಾ ಪ್ರಾರ್ಥನಾ ಮಂದಿರದ ಪಾವನತೆಯನ್ನು ವರ್ಣಿಸಲು ಈ ಕಥೆ ಉಪಯೋಗವಾಗಿದೆ.

ಯೆಹೂದ್ಯನೊಬ್ಬನು ಸಾಯುವಾಗ ತನ್ನ ಮಗನನ್ನು ಕರೆದು "ನೀನು ಎಂದಿಗೂ ದಾರಿಯಲ್ಲಿ ಸಿಕ್ಕ ಪ್ರಾರ್ಥನಾ ಮಂದಿರದೊಳಕ್ಕೆ ಹೋಗದೆ ಇರಬೇಡ" ಎಂದು ಹೇಳಿ ಪ್ರಾಣಬಿಟ್ಟನು. ಆಮೇಲೆ ಆ ಯುವಕನು ರಾಜಾಸ್ಥಾನಕ್ಕೆ

ಹೋಗಿ ನೌಕರಿಗೆ ಸೇರಿದನು; ರಾಜನ ಪ್ರೀತಿಗೆ ಪಾತ್ರನಾದನು. ಇದನ್ನು ಕಂಡು ಅಸೂಯಾಪರನಾದ ಅಧಿಕಾರಿಯೊಬ್ಬನು ರಾಣಿಯು ಇವನಿಗೆ ಒಲಿದಿರುವ ಳೆಂದು ಅರಸನ ಸಂಗಡ ಚಾಡಿ ಹೇಳಿದನು. ಮೊದಲು ಮೊದಲು ಅರಸನು ಇದನ್ನು ನಂಬದಿದ್ದರೂ ಕೊನೆಗೆ ಸಂಶಯಕ್ಕೀಡಾಗಿ ಅವನನ್ನು ಕೊಲ್ಲಲು ನಿಷ್ಕರ್ಷಿಸಿದನು. ಅದರಂತೆ ಮಾರನೆಯ ದಿನ ಇಟ್ಟಿಗೆಗೂಡಿನ ಬಳಿಗೆ ಯಾರು ಮೊದಲು ಬರುವರೋ ಅವರನ್ನು ಅಲ್ಲಿಯೇ ಇದ್ದ ಸುಣ್ಣದ ಗೂಡಿನೊಳಕ್ಕೆ ಹಾಕಿಕೊಲ್ಲಬೇಕೆಂದು ಆಜ್ಞೆ ಮಾಡಿದನು. ಕಥಾನಾಯಕನು ಮಾರನೆಯ ದಿನ ಬೆಳಗ್ಗೆ ಅರಸನ ಅಪ್ಪಣೆಯಂತೆ ಹೊರಟು ಮಧ್ಯೆ ಸಿಕ್ಕಿದ ಒಂದು ಸಿನಗಾಗಿನ (Synagogue) ಒಳಕ್ಕೆ ಹೋಗಿ ಪ್ರಾರ್ಥನೆಮಾಡತೊಡಗಿದನು. ಇತ್ತ ದೊರೆಯು ಸಮಾಚಾರ ತಿಳಿಯುವ ಆತುರ ದಿಂದ ಚಾಡಿಕೋರನಾದ ಆ ಅಧಿಕಾರಿಯನ್ನು ಇಟ್ಟಿಗೆಗೂಡಿನ ಬಳಿಗೆ ಕಳುಹಿ ಸಿದನು. ಅವನು ಅಲ್ಲಿಗೆ ಹೋದೊಡನೆಯೇ ರಾಜಾಜ್ಞೆಯ ಪ್ರಕಾರ ಮರಣ ಕ್ಕೀಡಾಗುವನು. ಆ ವೇಳೆಗೆ ಸರಿಯಾಗಿ ಅಲ್ಲಿಗೆ ಹೋದ ಕಥಾನಾಯಕನು ಎಷ್ಟು ಹೇಳಿದರೂ ಕೇಳದೆ ಅಲ್ಲಿನ ನೌಕರರು 'ರಾಜಾಜ್ಞೆ'ಯನ್ನು ನಡೆಸಿಯೇಬಿಡುವರು. ಆಮೇಲೆ ಅವನು ಅರಮನೆಗೆ ಹಿಂತಿರುಗಿ ನಡೆದ ಸಂಗತಿಯನ್ನು ಅರಸನಿಗೆ ವರದಿ ಮಾಡುವನು. ಅರಸನು ಆಶ್ಚರ್ಯಪಟ್ಟು ಅಧಿಕಾರಿಯ ಚಾಡಿಯ ಮಾತಿನ ಸುದ್ದಿ ಯನ್ನೆಲ್ಲ ಕಥಾನಾಯಕನಿಗೆ ಹೇಳಿ ಅವನ ಪಾಪಕ್ಕೆ ತಕ್ಕ ಪ್ರಾಯಶ್ಚಿತ್ತ ವಾಯಿತೆಂದೆಣಿಸಿ ಸಮಾಧಾನ ಪಡೆಯುವನು. ಕಥೆಯ ಕೊನೆಯಲ್ಲಿ ದೇವತಾ ಪ್ರಾರ್ಥನೆಯ, ಪ್ರಾರ್ಥನಾ ಮಂದಿರಗಳ ಮಹಿಮಾ ವರ್ಣನೆಯಿದೆ. ಈ ಭಾಗವು ಹೆನ್ರಿಕಥಾ ಚಕ್ರದಲ್ಲಿಲ್ಲ. ಅದು ಈಚೆಗೆ ಈ ಕಥೆಗಳಲ್ಲಿ ಬಂದು ಸೇರಿಕೊಂಡಿರುವ ಹೊಸ ಸಂಗತಿ.

ಈ ಕಥೆಯು ಏಷ್ಯದ ಪಶ್ಚಿಮ ದೇಶಗಳ ಮೂಲಕವಾಗಿ ಯೂರೋಪನ್ನು ಸೇರಿದಂತೆ ತೋರುತ್ತದೆ. ಕಾನ್ಸ್‌ಟಂಟೈನ್ ಚಕ್ರವರ್ತಿಯನ್ನು ಕುರಿತ ಫ್ರೆಂಚ್ ಕಥೆಯೊಂದರಲ್ಲಿ ಇಂಥಾ ಒಂದು ಉಪಾಖ್ಯಾನವಿದೆ. ಇಡೀ ಕಥೆಯೇ ಅಲ್ಲದೆ ಚಂದ್ರಹಾಸನ ಕಥೆಯ ಕೆಲವು ಕಲ್ಪನೆಗಳೂ ಯೂರೋಪಿನ ಸಾಹಿತ್ಯದಲ್ಲಿ ಪ್ರಾಚುರ್ಯವನ್ನು ಪಡೆದಿವೆ. ಷೇಕ್ಸ್‌ಪಿಯರಿನ ಹ್ಯಾಂಲೆಟ್ ನಾಟಕದಲ್ಲಿ ಕಥಾ ನಾಯಕನು ತನ್ನ ಮಾರಣಕ್ರಿಯೆಯ ಸಂದೇಶವನ್ನು ತಾನೇ ಹೊತ್ತುಕೊಂಡು ಹೋಗುವ ಯೋಜನೆಯನ್ನು ನಾವು ಕಾಣಬಹುದಾಗಿದೆ.

ಬೌದ್ಧ ಜೈನ ಸಾಹಿತ್ಯಗಳಲ್ಲಿಯೂ ಚಂದ್ರಹಾಸನ ಕಥೆಯನ್ನು ಹೋಲುವ ಉಪಾಖ್ಯಾನಗಳಿವೆ— ಜೈನರು ಜೀವದಯೆಯ ಪ್ರಾಶಸ್ತ್ಯವನ್ನು ವರ್ಣಿಸುವುದಕ್ಕೆ ಈ ಕಥೆಯನ್ನು ಉಪಯೋಗಿಸಿಕೊಂಡಿದ್ದಾರೆ. 'ಕಥಾಕೋಶ'ದಲ್ಲಿರುವ ದಾಮನ್ನಕನ ಕಥೆಯು ಚಂದ್ರಹಾಸನ ಚರಿತ್ರೆಯನ್ನು ಬಹಳಮಟ್ಟಿಗೆ ಹೋಲುತ್ತದೆ. ರಾಜ ಪುರದ ಸುನಂದನೆಂಬ ಬೆಸ್ತರವನು ಜೀವದಯೆಯ ಮಹತ್ವವನ್ನು ಮನಗಂಡು ಮೀನು ಹಿಡಿಯುವ ಕೆಲಸ ಬಿಟ್ಟುಬಿಟ್ಟಿರುತ್ತಾನೆ. ಆದರೆ ಕ್ಷಾಮಬಾಧೆಗೊಳಗಾದ ಹೆಂಡತಿ ಬಲಾತ್ಕಾರದಿಂದ ಒಂದು ಸಲ ಅವನನ್ನು ಬಲೆಬೀಸಲು ಕಳುಹಿಸುತ್ತಾಳೆ. ಬಲೆಯಲ್ಲಿ ಸಿಕ್ಕಿ ಮೀನುಗಳು ಅತ್ತ ಇತ್ತ ಹೊರಳಿ ಸಂಕಟಪಡುತ್ತಿದ್ದುದನ್ನು

ನೋಡಿ ಸುನಂದನಿಗೆ ಮರುಕವಾಯಿತು. ಒಡನೆಯೇ ಎಲ್ಲ ಮೀನುಗಳನ್ನೂ ಬಿಟ್ಟುಬಿಟ್ಟು ಮನೆಗೆ ಹಿಂತಿರುಗಿದನು. ಮನಸ್ಸಿಲ್ಲದಿದ್ದರೂ ಇತರರ ಬಲವಂತಕ್ಕೊಳಗಾಗಿ ಸುನಂದನು ಈ ಪಾಪಕೃತ್ಯವನ್ನು ಮೂರು ಸಲ ಮಾಡಿದನು. ಒಂದು ಸಲ ಒಂದು ಮೀನಿನ ಗರಿ ಮುರಿದುಹೋಯಿತು. ಇದನ್ನು ಕಂಡ ಸುನಂದನು ದುಃಖಿತನಾಗಿ ಉಪವಾಸಮಾಡಿ ಸತ್ತುಹೋದನು. ಮುಂದಿನ ಜನ್ಮದಲ್ಲಿ ಸುನಂದನು ದಾಮನ್ನಕ ಎಂಬ ಹೆಸರಿನಿಂದ ರಾಜಗೃಹದ ಒಬ್ಬ ಸೆಟ್ಟಿಯ ಮಗನಾಗಿ ಹುಟ್ಟಿದನು. ಇವನ ಮನೆಯಲ್ಲಿ ಅಂಟುರೋಗ ತಲೆದೋರಲು ರಾಜನು ಬಾಗಿಲಿಗೆ ಗೋಡೆ ಹಾಕಿಸಿದನು. ಎಲ್ಲರೂ ಒಳಗೇ ಸತ್ತರು. ದಾಮನ್ನಕನು ಮಾತ್ರ ಜೀವಿಸಿದ್ದನು. ನಾಯಿ ನರಿಗಳು ಗೋಡೆಯನ್ನು ಕೊರೆದು ಮಾಂಸದಾಸೆಯಿಂದ ಒಳಕ್ಕೆ ಹೋಗಲು ಆ ರಂಧ್ರದಲ್ಲಿ ದಾಮನ್ನಕನು ಹೊರಗೆ ಬಂದನು. ಭಿಕ್ಷಾವೃತ್ತಿಯಿಂದ ಜೀವಿಸುತ್ತಿದ್ದ ಈ ತಬ್ಬಲಿ ಹುಡುಗನು ಒಂದು ದಿನ ಸಾಗರಪೋತನೆಂಬ ಧನಿಕನ ಮನೆಗೆ ಬಂದಾಗ ಅಕಸ್ಮಾತ್ ಅಲ್ಲಿ ಬಂದಿದ್ದ ಇಬ್ಬರು ಸಂನ್ಯಾಸಿಗಳು ಇವನನ್ನು ನೋಡಿ ಮುಂದೆ ಈ ಹುಡುಗನೇ ಸೆಟ್ಟಿಯ ಎಲ್ಲ ಐಶ್ವರ್ಯಕ್ಕೂ ಅಧಿಕಾರಿಯಾಗುವನೆಂದು ಹೇಳಿದರು. ಅಂದಿನಿಂದ ಸಾಗರಪೋತನು ಅವನನ್ನು ಕೊಲ್ಲಲು ಬಹಳ ಸಾಹಸಮಾಡಿದನು. ಆದರೆ ಅವನು ಮಾಡಿದ ಎಲ್ಲ ಪ್ರಯತ್ನಗಳೂ ವ್ಯರ್ಥವಾದುವು. ಸವಣರ ಮಾತು ಅಮೋಘವಾಯಿತು; ದಾಮನ್ನಕನು ಸಾಗರಪೋತನ ಮಗಳು ವಿಷೆಯನ್ನು ಮದುವೆಯಾದನು, ಕೊನೆಗೆ ಅವನ ಸಮಸ್ತ ಸಿರಿಗೂ ಒಡೆಯನಾದನು. ಸಾಗರಪೋತನು ದುಷ್ಟಬುದ್ಧಿಯಂತೆ ತನ್ನ ಬಲೆಗೆ ತಾನೇ ಸಿಕ್ಕಿ ಸತ್ತನು. ದಾಮನ್ನಕನಿಗೆ ರಾಜಶ್ರೇಷ್ಠಿಯ ಪದವಿ ದೊರೆಯಿತು. ತನಗೆ ಇಷ್ಟು ಐಶ್ವರ್ಯ ಏಕೆ ಲಭಿಸಿತೆಂದು ಅವನು ಯೋಚಿಸುತ್ತಿರುವಾಗ ಅಲ್ಲಿಗೆ ಬಂದ ವಿಮಲಬೋಧರೆಂಬ ಸಂನ್ಯಾಸಿಗಳು ಅವನ ಸಂಶಯವನ್ನು ಪರಿಹರಿಸುತ್ತಾರೆ. ಹಿಂದಿನ ಜನ್ಮದಲ್ಲಿ ಅವನು ಮೂರು ಸಲ ಮೀನುಗಳನ್ನು ಹಿಡಿದು ಜೀವ ಹಿಂಸೆ ಮಾಡಿದುದರಿಂದ ಈ ಜನ್ಮದಲ್ಲಿ ಅವನಿಗೆ ಮೂರು ಸಲ ವಿಪತ್ತು ಒದಗಿತು. ಅವನು ಒಂದು ಮೀನಿನ ರೆಕ್ಕೆಯನ್ನು ಮುರಿದುದರಿಂದ ಅವನ ಕಾಲಿನ ಬೆರಳುಗಳಲ್ಲಿ ಒಂದು ಹೋಯಿತು. ಅವನ ಜೀವದಯೆಯ ಮಹಿಮೆಯಿಂದ ಈ ಜನ್ಮದಲ್ಲಿ ವಿಪುಲವಾದ ಭಾಗ್ಯ ಲಭಿಸಿತು. ಈ ಜನ್ಮಾಂತರ ವೃತ್ತಾಂತ ಕೇಳಿದಮೇಲೆ ದಾಮನ್ನಕನು ವೈರಾಗ್ಯದಿಂದ ಸಂನ್ಯಾಸವನ್ನು ಸ್ವೀಕರಿಸಿ ತಪಸ್ಸುಮಾಡಿ ಸ್ವರ್ಗಕ್ಕೇರಿದನು. ಹೀಗೆ ಜೈನ ಕಥೆಯು ಚಂದ್ರಹಾಸೋಪಾಖ್ಯಾನದ ಮಿಕ್ಕೆಲ್ಲ ಲಕ್ಷಣಗಳ ಜತೆಗೆ ಜೀವದಯಾ ಪ್ರಾಶಸ್ತ್ಯ ವರ್ಣನೆಯನ್ನೂ ಪಡೆದಿದೆ. ಬೌದ್ಧರ ಧರ್ಮಪದ ಅಟ್ಠಕಥೆಯಲ್ಲಿಯೂ ಇತರ ಕೆಲವು ಬೌದ್ಧ ಕಾವ್ಯಗಳಲ್ಲಿಯೂ ಚಂದ್ರಹಾಸನ ಕಥೆಯನ್ನು ಹೋಲುವ ಒಂದು ಉಪಾಖ್ಯಾನ ದೊರೆಯುತ್ತದೆ. ಅದೇ ಘೋಸಕನ ಕಥೆ.

ಹೀಗೆ ಚಂದ್ರಹಾಸನ ಕಥೆಯು ಬೇರೆ ಬೇರೆ ಹೆಸರುಗಳಿಂದ ಜಗತ್ತಿನ ಬೇರೆ ಬೇರೆ ಸಾಹಿತ್ಯಗಳಲ್ಲಿ ಪ್ರಚಾರವಾಗಿದೆ. ಒಂದೆಡೆ ಅದು ದೈವೇಚ್ಛೆಯು ಅನುಲ್ಲಂಘನೀಯವೆಂಬ ತತ್ವವನ್ನು ಸಾರುತ್ತದೆ. ಇನ್ನೊಂದೆಡೆ ಅದು ಜೀವದಯೆಯ ಮಹಿಮೆಯನ್ನು ವರ್ಣಿಸುವ ಧಾರ್ಮಿಕ ಕಥೆ. ವಿಷ್ಣುಭಕ್ತಿಯ ಶ್ರೇಷ್ಠತೆ

ಸಾಲಿಗ್ರಾಮದ ಮಹಿಮೆ, ಚರ್ಮಸಿನಗಾಗುಗಳ ಪವಿತ್ರತೆ, ಮೊದಲಾದ ಎಲ್ಲ ವಿಷಯಗಳ ಪ್ರಚಾರಕ್ಕೂ ಈ ಕಥೆ ಸಾಧನವಾಗಿದೆ. ಈ ಕಥೆಯ ಎಲ್ಲ ರೂಪಗಳಲ್ಲಿಯೂ ಧರ್ಮನೀತಿಗಳ ಗೆಲವು, ಅಧರ್ಮ ಅನೀತಿ ಕಾಪಟ್ಯಗಳ ಅವನತಿಗಳ ವರ್ಣನೆಯಿರುವುದರಿಂದ ಇದು ಸಾರ್ವತ್ರಿಕವೂ ಸಾರ್ವಕಾಲಿಕವೂ ಆದ ಕಥೆಯಾಗಿದೆ. ಇದು ಎಲ್ಲಿ, ಹೇಗೆ, ಪ್ರಾರಂಭವಾಯಿತು, ಹೇಗೆ ಪ್ರಚುರವಾಯಿತು ಎಂಬ ಸಂಗತಿಗಳು ತಿಳಿಯುವುದು ಕಷ್ಟ.

**ಕೆ. ವೆಂಕಟರಾಮಪ್ಪ**

---

ವಿ. ಸೂ.—ಈ ಲೇಖನಕ್ಕೆ ಬೇಕಾದ ಹಲವು ಪ್ರಮಾಣ ಲೇಖನಗಳನ್ನು ತೋರಿಸಿಕೊಟ್ಟ ಉಪಕಾರ ಶ್ರೀಮಾನ್ ಡಿ. ಎಲ್. ನರಸಿಂಹಾಚಾರ್ಯರದು.

# ನಮ್ಮಾೞ್ವಾರ್ರವರ ಭಕ್ತಿ ಮಾರ್ಗ

ಭರತಖಂಡವು ಅನಾದಿ ಕಾಲದಿಂದ ಆಧ್ಯಾತ್ಮ ಪ್ರಪಂಚದಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಗೀತಾಚಾರ್ಯನಾದ ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಉಪದೇಶಿಸಿರುವ ಕರ್ಮ, ಜ್ಞಾನ, ಭಕ್ತಿ ಮಾರ್ಗಗಳಲ್ಲಿ ತಮಗೆ ಸೂಕ್ತವಾದುದನ್ನವಲಂಬಿಸಿ ಎಷ್ಟೋ ಮಹನೀಯರು ಸಾಯುಜ್ಯವನ್ನು ಪಡೆದಿದ್ದಾರೆ. ಆದರೆ ಸಾಮಾನ್ಯವಾಗಿ ಕರ್ಮ ಜ್ಞಾನ ಮಾರ್ಗಗಳು ಕಷ್ಟತರವಾದುದರಿಂದ ಭಕ್ತಿ ಮಾರ್ಗವನ್ನವಲಂಬಿಸಿದವರೇ ಹೆಚ್ಚು ಮಂದಿ. ಇಂತಹ ಭಕ್ತರಲ್ಲನೇಕರನ್ನು ಈಗಾಗಲೆ ಕನ್ನಡಿಗರು ಪರಿಚಯ ಮಾಡಿಕೊಂಡಿದ್ದಾರೆ. ಇವರ ಗುಂಪಿಗೇ ಸೇರಿರುವ, ನಮಗೆ ಅತಿ ಸನ್ನಿಹಿತರಾಗಿರುವ ತಮಿಳು ನಾಡಿನ ವೈಷ್ಣವ ಭಕ್ತರಲ್ಲಿ[೧] ಪ್ರಧಾನ ವ್ಯಕ್ತಿಯಾದ ನಮ್ಮಾೞ್ವಾರ್ರವರ ವಿಷಯವನ್ನು ಈ ಪ್ರಬಂಧದಲ್ಲಿ ಚಿತ್ರಿಸಿದೆ.

ತಮಿಳು ನಾಡಿನ ವೈಷ್ಣವ ಭಕ್ತರಿಗೆ 'ಆೞ್ವಾರ್' ಎಂದು ಹೆಸರು. 'ಆೞ್ವಾರ್' ಎಂದರೆ ಮುಳುಗಿದವರು–ವಿಷ್ಣುಭಕ್ತಿಯಲ್ಲಿ ಮುಳುಗಿದವರು–ಎಂದರ್ಥ. ಇವರು ಹನ್ನೆರಡು ಮಂದಿ. ಇವರೆಲ್ಲರೂ ಬೇರೆ ಬೇರೆ ಕಾಲದಲ್ಲಿ ಭಗವಂತನ ಸ್ತೋತ್ರ ರೂಪವಾಗಿ ಗೀತೆಗಳನ್ನು ರಚಿಸಿದ್ದಾರೆ. ಇವುಗಳ ಒಟ್ಟು ಸಂಖ್ಯೆ ೪,೦೦೦. ಇವುಗಳು ಚತುರ್ವೇದಸಾರವೆಂದು ಈಗಲೂ ಪ್ರಸಿದ್ಧಿಯಾಗಿವೆ. ಇವುಗಳಿಗೆ ದಿವ್ಯ ಪ್ರಬಂಧವೆಂದು ಹೆಸರು.

ಪ್ರಸಕ್ತರಾದ ನಮ್ಮಾೞ್ವಾರ್ರವರು ಆೞ್ವಾರ್ರುಗಳಲ್ಲಿ ಅಗ್ರ್ದನೆಯವರು. ಇವರು ಈಗಿನ ತಿನ್ನವೆಲ್ಲಿ ಜಿಲ್ಲೆಗೆ ಸೇರಿದ ತಾಮ್ರಪರ್ಣಿ ನದಿಯ ದಡದಲ್ಲಿರುವ ಕುರುಹೂರ್ ಅಥವಾ ಕುರುಕಾಪುರಿ ಎಂಬ ಗ್ರಾಮದಲ್ಲಿ ವೆಳ್ಳಾಳರೆಂಬ ಶೂದ್ರ ಜಾತಿಗೆ ಸೇರಿದ ಕಾರಿಯಾರ್ ಮತ್ತು ಉಡೈಯ ನಂಗೈಯಾರ್ ಎಂಬ ದಂಪತಿಗಳಿಗೆ ಜನಿಸಿದ ಏಕಮಾತ್ರ ಪುತ್ರರು. ಇವರು ಜನನಪ್ರಭೃತಿ ಅಮಾನುಷ ರೀತಿಯಲ್ಲಿ ಒಂದು ಹುಣಿಸೆಯ ಮರದ ಕೆಳಗೆ ಆಹಾರಾದಿಗಳಿಲ್ಲದೆ ಬೆಳೆಯುತ್ತಿರಲು ಮಧುರಕವಿಯಾೞ್ವಾರ್ ಎಂಬ ಭಕ್ತವರ್ಯರು ಇವರ ಮಹಿಮೆಯನ್ನು ತಿಳಿದು ಕುರಿಕಾಪುರಿಗೆ ಬಂದು ಇವರ ಅನುಗ್ರಹವನ್ನು ಪಡೆದು ಸೇವೆಗೆಯ್ದು ಇವರ ಮಹಿಮೆಯನ್ನು ಲೋಕಕ್ಕೆ ಹರಡಿದರೆಂಬುದು ಸಂಪ್ರದಾಯಾನುಸಾರವಾಗಿ ಬಂದ ಕಥೆ. ಆದರೆ ಇವರ ಕೃತಿಗಳನ್ನು ಪರಿಶೀಲಿಸಿದರೆ ಇವರ ಪ್ರಪಂಚವು ಹುಣಿಸೆಯ ಮರದ ಕೆಳಗಿನ ತೊಟ್ಟಿಲು ಮಾತ್ರವಾಗಿರಲಿಲ್ಲವೆಂದೂ, ಇವರಿಗೆ ಇವರ ಸುತ್ತಲಿರುವ ನಾಡಿನ ವಿಶೇಷವಾದ ಪರಿಚಯವಿತ್ತೆಂದೂ, ಧಾರಾಳವಾಗಿ ಹೇಳಬಹುದು.

ನಮ್ಮಾೞ್ವಾರ್ರವರ ಕಾಲವನ್ನು ಖಚಿತವಾಗಿ ನಿಷ್ಕರ್ಷಿಸುವುದಕ್ಕೆ ಸಾಕಾದಷ್ಟು ಆಧಾರಗಳಿಲ್ಲದಿರುವುದರಿಂದ ಆ ವಿಷಯದಲ್ಲಿ ಈಗಿರುವ ಭಿನ್ನಾಭಿಪ್ರಾಯಗಳನ್ನು ಮಾತ್ರ ಸೂಚಿಸಬಹುದಾಗಿದೆ. ಸಂಪ್ರದಾಯ ಗ್ರಂಥವಾದ ಗುರು

---

೧ ಇವರ ಸ್ಥೂಲ ಪರಿಚಯವು ಕನ್ನಡಿಗರಿಗೆ ಈಗಾಗಲೆ ಶ್ರೀಮಾನ್ ಮಾಸ್ತಿ ವೆಂಕಟೇಶ ಅಯ್ಯಂಗಾರರವರಿಂದ ಆಗಿದೆ.

ಪರಂಪರೆಯು ಇವರು ಕಲಿಯುಗದ ಆದಿಯ ಪ್ರಮಾಥಿ ಸಂವತ್ಸರದ ವೈಶಾಖ ಶುಕ್ಲ ಪೂರ್ಣಿಮಾ ಶುಕ್ರವಾರ ವಿಶಾಖಾ ನಕ್ಷತ್ರದಲ್ಲಿ ಅವತರಿಸಿದರೆಂದು ಸೂಚಿಸುವುದು. ಆಧುನಿಕ ವಿದ್ವಾಂಸರುಗಳಲ್ಲಿ ಡಾ॥ ಹುಲ್ಷ್‌ರವರು ಆಳ್ವಾರ್ರವರು ಕ್ರಿ. ಶ. ಹತ್ತನೆಯ ಶತಮಾನಕ್ಕೆ ಎಷ್ಟೋ ಶತಮಾನಗಳು ಹಿಂದೆ ಇದ್ದರೆಂದು ಹೇಳಿದ್ದಾರೆ. ಬೌದ್ಧ ಮತ್ತು ಬ್ರಾಹ್ಮಣರ ಘರ್ಷಣ ಕಾಲವಾದ ಕ್ರಿ. ಶ. ನಾಲ್ಕು ಮತ್ತು ಏಳನೆಯ ಶತಮಾನಗಳ ಮಧ್ಯಕಾಲದಲ್ಲಿ ಆಳ್ವಾರ್ರವರಿದ್ದರೆಂಬುದು ಡಾ॥ ಎಸ್. ಕೃಷ್ಣಸ್ವಾಮಯ್ಯಂಗಾರರ ಅಭಿಪ್ರಾಯ. ಇತರ ಬೇರೆ ಬೇರೆ ವಿದ್ವಾಂಸರು ಆಳ್ವಾರ್ರವರ ಕಾಲವನ್ನು ಕ್ರಿ. ಪೂ. ೧–೩ನೆಯ ಶತಮಾನಗಳಿಂದ ಕ್ರಿ. ಶ. ೯ನೆಯ ಶತಮಾನದ ಮಧ್ಯಕಾಲದವರೆಗೆ ತಮಗೆ ತೋರಿದಂತೆ ನಿಷ್ಕರ್ಷಿಸಲು ಪ್ರಯತ್ನಪಟ್ಟಿದ್ದಾರೆ. ಆದರೆ ಒಟ್ಟಿನಲ್ಲಿ ಇದಾವುದೂ ತೃಪ್ತಿಕರವಾಗಿಲ್ಲವೆಂದೂ ಈ ಕಾಲ ನಿರ್ಣಯದ ವ್ಯತ್ಯಾಸದಿಂದ ಇವರ ಮತ್ತು ಇವರ ಕೃತಿಗಳ ವಿಷಯದಲ್ಲಿ ಯಾವ ಹಿರಿಮೆ ಕಿರಿಮೆಗಳೂ ಉಂಟಾಗಲಾರವೆಂದೂ ಧಾರಾಳವಾಗಿ ಹೇಳಬಹುದು. ಇವರಿಗೆ ಶಠಾರಿ, ಮಾರನ್, ಶಠಗೋಪನ್, ಮುಂತಾದ ಇತರ ಹೆಸರುಗಳೂ ಉಂಟು.

ನಮ್ಮಾಳ್ವಾರ್ರವರು ಇತರ ವೈಷ್ಣವ ಭಕ್ತರಂತೆಯೇ ಅನುಭಾವಿಗಳು. (ಈಶ್ವರ ಸಾಕ್ಷಾತ್ಕಾರವನ್ನು ಪಡೆಯುವವರಿಗೆ ಅನುಭಾವಿಗಳೆಂದು ಹೆಸರು. ಈಶ್ವರ ಸಾಕ್ಷಾತ್ಕಾರಕ್ಕೆ ಭಕ್ತಿಯೇ ಮೂಲ. ಈ ಭಕ್ತಿಯು ಕಾರ್ಯಕಾರಣಗಳಿಂದ ಸಿದ್ಧವಾಗುವ ತತ್ತ್ವನಿರೂಪಣ ಕ್ರಮಕ್ಕೆ ಅನುಗುಣವಾದುದಲ್ಲ. ಆರಾಧ್ಯ ವಸ್ತುವನ್ನು ಕುರಿತು ಭಕ್ತನಿಗೆ ಸ್ವಂತವಾಗಿ ಉಂಟಾದ ಅನುಭವದ ಫಲ ಮಾತ್ರ.) ಇತರ ಎಲ್ಲ ಅನುಭಾವಿಗಳಂತೆ ಇವರ ಏಕಮಾತ್ರ ಧ್ಯೇಯವು ಈಶ್ವರ ಸಾಕ್ಷಾತ್ಕಾರ. ವೈಷ್ಣವ ಭಕ್ತರೆಲ್ಲರಿಗೂ ಸಾಮಾನ್ಯವಾಗಿರುವಂತೆ ಇವರ ಭಕ್ತಿಯಲ್ಲಿಯೂ ಭಕ್ತಿ, ಪ್ರಪತ್ತಿ, ಕೈಂಕರ್ಯಗಳೆಂಬ ಮೂರು ಭಾಗವನ್ನು ನೋಡಬಹುದು. ಭಗವಂತನನ್ನು ಪೂರ್ಣವಾಗಿ ಪ್ರೀತಿಸುವುದೇ ಭಕ್ತಿ; ಸರ್ವತ್ಯಾಗಮಾಡಿ ಅವನನ್ನು ಆಶ್ರಯಿಸುವುದೇ ಪ್ರಪತ್ತಿ; ಅವನಿಂದ ಸರ್ವದಾ ಪ್ರೇರಿತನಾಗಿ ಅವನ ಸೇವೆಯಲ್ಲಿ ನಿರತನಾಗಿರುವುದೇ ಕೈಂಕರ್ಯ. ಇವು ಮೂರೂ ಆಳ್ವಾರ್ರವರ ಕೃತಿಗಳಲ್ಲಿ ಪ್ರಧಾನವಾಗಿವೆ.

ಆಳ್ವಾರ್ರವರ ಪ್ರಬಂಧಗಳು ಉದ್ದೇಶಪೂರ್ವಕವಾಗಿ ಒಂದು ಸಿದ್ಧವಾದ ಕ್ರಮವನ್ನನುಸರಿಸಿ ರಚಿಸಿದ ಗ್ರಂಥಗಳಲ್ಲ. ಭಕ್ತಿಯ ಆವೇಶದಲ್ಲಿ ತಮ್ಮ ಹೃದಯವನ್ನು ತೆರೆದು ಯಾವ ನಿರ್ಬಂಧಕ್ಕೂ ಒಳಪಡದೆ ಭಗವಂತನನ್ನು ಕುರಿತು ಹಾಡಿದ ಗೀತೆಗಳು ಇವು. ಇವು ಬರಿಯ ಸಂಪ್ರದಾಯ ಸರಣಿಯಿಂದ ಕೂಡಿದ ಮತಪ್ರಧಾನವಾದ ಸ್ತೋತ್ರ ಮಾಲಿಕೆಗಳಾಗಿರದೆ ಸಾಹಿತ್ಯ ದೃಷ್ಟಿಯಿಂದ ಭಾವಾವೇಶ ಭರಿತವಾದ ಉತ್ತಮ ಗೀತಿಕೆಗಳಾಗಿವೆ. ಉದ್ದೇಶ ಪೂರ್ವಕವಾಗಿ ಯಾವ ತತ್ತ್ವಪ್ರಸಾರಣೆಯನ್ನೂ ಮಾಡಲು ಇವರು ಪ್ರಯತ್ನಿಸದಿದ್ದರೂ ಮುಂದೆ ಸಿದ್ಧಾಂತಸ್ಥಾಪಕರಾದ ಶ್ರೀರಾಮಾನುಜಾಚಾರ್ಯರು ಪ್ರಚಾರಪಡಿಸಿದ ವಿಶಿಷ್ಟಾದ್ವೈತ ಸಿದ್ಧಾಂತದ ಮೂಲತತ್ತ್ವಗಳೆಲ್ಲ ಇವುಗಳಲ್ಲಿ ಅಡಗಿವೆ. ಅಲ್ಲದೆ ಪಂಡಿತ ಪಾಮರರೆಲ್ಲರಿಗೂ

ಅರ್ಥವಾಗುವ ಶೆಂದಮಿೞ್ ಭಾಷೆಯಲ್ಲಿ ಈ ಕೃತಿಗಳಿರುವುದು ಇವುಗಳ ಮತ್ತೊಂದು ವೈಶಿಷ್ಟ್ಯ.

ಭಕ್ತಿಪಾರವಶ್ಯದಿಂದ ನಮ್ಮಾೞ್ವಾರ್‌ರವರು 'ತಿರುವಿರುತ್ತಮ್', 'ತಿರುವಾಶಿರಿಯಮ್', 'ತಿರುವನ್ದಾದಿ' ಮತ್ತು 'ತಿರುವಾಯ್‌ಮೊೞಿ' ಎಂಬ ನಾಲ್ಕು ಪ್ರಬಂಧಗಳನ್ನು ರಚಿಸಿದ್ದಾರೆ. ಇವುಗಳಲ್ಲಿ ಮೊದಲನೆಯದಾದ 'ತಿರುವಿರುತ್ತ'ದಲ್ಲಿ ಸಂಸಾರದ ದುಸ್ಸಹತೆಯನ್ನೂ, ಎರಡನೆಯದಾದ 'ತಿರುವಾಶಿರಿಯ'ದಲ್ಲಿ ಭಗವಂತನ ದಿವ್ಯಸ್ವರೂಪಾನುಭವವನ್ನೂ, ಮೂರನೆಯದಾದ 'ತಿರುವನ್ದಾದಿ'ಯಲ್ಲಿ ಭಗವಂತನಲ್ಲಿ ತಮಗುಂಟಾದ ಅನುರಾಗಾತಿಶಯಗಳನ್ನೂ, ನಾಲ್ಕನೆಯದಾದ 'ತಿರುವಾಯ್‌ಮೊೞಿ'ಯಲ್ಲಿ ತಮ್ಮ ಇಷ್ಟಾರ್ಥದಂತೆ ಭಗವಂತನು ನಿತ್ಯಲೀಲಾ ವಿಭೂತಿಗಳಿಂದ ಸರ್ವದಾ ವಾಸಮಾಡುವ ವೈಕುಂಠವನ್ನು ತಾವು ಸೇರಿ ಅವನ ನಿತ್ಯಕೈಂಕರ್ಯದಲ್ಲಿ ಭಾಗಿಗಳಾದುದನ್ನೂ ಇನಿದಾಗಿ ವರ್ಣಿಸಿದ್ದಾರೆ. ಕೊನೆಯದಾದ 'ತಿರುವಾಯ್‌ಮೊೞಿ'ಯ ಆಧಾರದಿಂದಲೇ ಅವರ ಭಕ್ತಿಯ ಸ್ವರೂಪವನ್ನು ವಿಶದಪಡಿಸಲು ಈ ಪ್ರಬಂಧದಲ್ಲಿ ಪ್ರಯತ್ನಿಸಿದೆ.

'ತಿರುವಾಯ್ ಮೊೞಿ' ಎಂದರೆ ಶ್ರೀ ಸೂಕ್ತಿ ಅಥವಾ ನಲ್ನುಡಿ ಎಂದರ್ಥ. ಇದರಲ್ಲಿ ೧೧೦೨ ಪದ್ಯಗಳಿವೆ. ಇವು ಹತ್ತು ಶತಕಗಳಾಗಿಯೂ ನೂರು ದಶಕಗಳಾಗಿಯೂ ಭಾಗವಾಗಿವೆ. ಪ್ರತಿ ದಶಕದ ಕೊನೆಯಲ್ಲಿಯೂ ಫಲಶ್ರುತಿಯಿದೆ. ಈ ತಿರುವಾಯ್‌ಮೊೞಿಯಲ್ಲಿ ಆೞ್ವಾರ್‌ರವರು ಭಗವದನುಗ್ರಹದಿಂದ ದಿವ್ಯಜ್ಞಾನಪರಿಪೂರ್ಣರಾಗಿ ಭಗವಂತನು ಶ್ರೀಕೃಷ್ಣಾವತಾರದಲ್ಲಿ ಗೋಪೀವಲ್ಲಭನಾಗಿ ಭಕ್ತಸಂಶ್ಲೇಷವನ್ನು ಮಾಡಿದನೆಂದು ತಿಳಿದು ಅಂತಹ ಸೇರುವಿಕೆಯನ್ನು ತಾವೂ ಪಡೆಯಬೇಕೆಂಬ ಆಶೆಯಿಂದ ತಮ್ಮನ್ನು ನಾಯಿಕೆಯಂತೆ ಭಾವಿಸಿ, ಈ ನಾಯಿಕೆಯು ಭಗವಂತನನ್ನೇ ವರಿಸಬೇಕೆಂದು ಮನಸ್ಸುಮಾಡಿ ಅವನ ಅಗಲಿಕೆಯಿಂದ ದುಃಖಿಸಿ ಪಕ್ಷಿ, ದುಂಬಿ, ಮೋಡ ಮೊದಲಾದುವುಗಳ ಮೂಲಕ ನಾಯಕನಿಗೆ ದೂದು ಕಳುಹಿಸಿ ಅವನನ್ನು ಹುಡುಕುತ್ತ ದಿವ್ಯ ದೇಶಗಳಲ್ಲೆಲ್ಲಾ ಅಲೆದು ಅವನ ಸೇವೆಯನ್ನು ಪ್ರಾರ್ಥಿಸಿ ವಿಭವಾವತಾರಗಳಲ್ಲಿ ಅವನು ಮಾಡಿರುವ ಚೇಷ್ಟೆಗಳನ್ನೆಲ್ಲ ನೆನೆದು ಅತ್ಯಂತ ಮೋಹಾವಿಷ್ಟೆಯಾಗಿ ಕೊನೆಗೆ ಆ ಮೋಹವನ್ನು ಬಿಟ್ಟು ಭಗವದ್ಗುಣಾನುಭವಾಮೃತ ಸೇವನೆಯೇ ತನಗೆ ಸರ್ವಸ್ವವೆಂದು ಆತನನ್ನು ಸಂಬೋಧಿಸಿ ತನ್ನ ದುರ್ದಶೆಯನ್ನು ತಿಳಿಯಪಡಿಸಿ ಅವನನ್ನೇ ಶರಣಹೊಂದಿ ಅವನ ಕೃಪೆಗೆ ಪಾತ್ರಳಾಗಿ ತತ್ಸಾಯುಜ್ಯರೂಪವಾದ ಸರ್ವಾವಯವ ಸಂಶ್ಲೇಷವನ್ನು ಪಡೆದು ನಿತ್ಯಕೈಂಕರ್ಯರೂಪವಾದ ಮೋಕ್ಷಸಾಮ್ರಾಜ್ಯವನ್ನು ಅರ್ಚಿರಾದಿಮಾರ್ಗದಿಂದ ಶ್ರೀ ವೈಕುಂಠದಲ್ಲಿ ಹೊಂದಿ ನಿತ್ಯನಿರತಿಶಯಾನಂದಾನುಭವವನ್ನು ಪಡೆದುದನ್ನು ವರ್ಣಿಸಿದ್ದಾರೆ. ಇದರಲ್ಲಿ ಇವರು ಪಡೆದ ಸಾಕ್ಷಾತ್ಕಾರಮಾರ್ಗದ ಪ್ರತಿ ಮೆಟ್ಟಿಲನ್ನೂ ನೋಡಬಹುದು. ಇದನ್ನು ನಾವು ಸರಿಯಾಗಿ ಅರ್ಥಮಾಡಿಕೊಳ್ಳಬೇಕಾದರೆ ಆ ಕಾಲದ ಸನ್ನಿವೇಶಗಳಿಗನುವಾಗಿ ನಮ್ಮ ಮನಸ್ಸನ್ನು ತಿದ್ದಿಕೊಳ್ಳಬೇಕು. ಕರ್ಮ, ಫಲ, ಜನ್ಮಾಂತರ, ಭಗವಂತನ ಲೀಲೆ, ಅವತಾರ ಮೊದಲಾದುವುಗಳಲ್ಲಿ ನಂಬಿಕೆಯನ್ನುಂಟುಮಾಡಿಕೊಳ್ಳಬೇಕು.

ಆಳ್ವಾರ್‌ರವರಿಗೆ ಭಗವಂತನು ಅನಂತಗುಣಪರಿಪೂರ್ಣನಾದ ದಿವ್ಯಮಂಗಳ ಸ್ವರೂಪಿ. ಆತನ ಸೌಂದರ್ಯಾನುಭವದಲ್ಲಿಯೇ ಇವರಿಗೆ ಸರ್ವದಾ ದೃಷ್ಟಿ. ಲೋಕದಲ್ಲಿರುವ ಸಮಸ್ತ ಆನಂದಗಳಿಗೂ ಪ್ರೇಮಕ್ಕೂ ಅವನೇ ಆಕರ, ಅವನೇ ಧ್ಯೇಯ; ಪ್ರಪಂಚವೆಲ್ಲ ಆತನ ಶರೀರ. ಅಲ್ಲಿ ಕಾಣುವುದು ಆತನ ಸೌಂದರ್ಯ. ಈ ದಿವ್ಯ ಮಂಗಳ ಸ್ವರೂಪಿಯನ್ನು ಸಾಕ್ಷಾತ್ಕರಿಸುವುದೇ ಮಾನವನ ಪರಮಧ್ಯೇಯ. ಜೀವಾತ್ಮನು ನಾಯಕಿಯಂತೆ ನಾಯಕನಾದ ಪರಮಾತ್ಮನನ್ನು ತೃಪ್ತಿಪಡಿಸಿ ಅವನಲ್ಲಿ ತನ್ನನ್ನು ಅರ್ಪಿಸಿ ಸರ್ವ ಪ್ರಯತ್ನಗಳ ಮೂಲಕ ಸಾಕ್ಷಾತ್ಕರಿಸಿ ಅವನ ಕೈಂಕರ್ಯದಲ್ಲಿ ನಿರತನಾಗಬೇಕು. ಜೀವಾತ್ಮನೂ ಪರಮಾತ್ಮನ ಅಂಶನೇ ಆದುದರಿಂದ ಇದನ್ನು ಅವನು ಮಾಡಬಲ್ಲನು. ಪರಮಾತ್ಮನೂ ಸಹ ಜೀವಾತ್ಮನು ತನ್ನನ್ನು ಭಕ್ತಿಯಿಂದ ಕರೆದರೆ ತನ್ನ ಕೃಪಾಕಟಾಕ್ಷದಿಂದ ಅವನನ್ನು ಬರಮಾಡಿಕೊಳ್ಳುತ್ತಾನೆ. ಜೀವಾತ್ಮನು ತನ್ನ ಪ್ರತ್ಯೇಕವಾದ ಸ್ಥಿತಿಯನ್ನಳಿದು ಅವನನ್ನು ಸಾಕ್ಷಾತ್ಕರಿಸಬೇಕು. ಇದೇ ಆಳ್ವಾರ್‌ರವರ ಸಿದ್ಧಾಂತ. ಇಲ್ಲಿ ನಾವು ನೋಡಬೇಕಾದುದು ತತ್ತ್ವನಿರೂಪಣವನ್ನಲ್ಲ, ಇವರ ಅನುಭವಸರಣಿಯನ್ನು ಮಾತ್ರ. ತಿರುವಾಯ್‌ಮೊೞಿಯ ಅನೇಕ ಕಡೆಗಳಲ್ಲಿ ಆಳ್ವಾರ್‌ರವರು ತಮ್ಮ ಐಹಿಕವಾದ ಭೌತಶರೀರವನ್ನು ಮರೆತು ಭಗವಂತನಲ್ಲಿಯೇ ಪೂರ್ಣವಾಗಿ ಲೀನನಾಗಿರುವುದನ್ನು ನೋಡಬಹುದು. ಪ್ರಕೃತಿಯ ಸಮಸ್ತ ಸೌಂದರ್ಯವೂ ಅವನಿಂದುಂಟಾದುದರಿಂದ ಅವು ಅವನ ಶರೀರಕ್ಕೆ ಸಂಬಂಧಪಟ್ಟವು. ಆದುದರಿಂದಲೇ ಅವುಗಳು ಅವನ ಜ್ಞಾಪಕವನ್ನುಂಟುಮಾಡುತ್ತವೆ. ಬಾನಿನ ನಕ್ಷತ್ರಗಳು ಅವನ ಕಣ್ಣಿನ ಕಾಂತಿಯನ್ನೂ, ಪ್ರಶಾಂತವಾದ ನದಿಗಳು ಅವನ ಗಾಂಭೀರ್ಯವನ್ನೂ, ಹೂವಿನ ಪರಿಮಳವು ಅವನ ದಿವ್ಯ ಸೌಗಂಧ್ಯವನ್ನೂ, ಪ್ರಭಾತ ಸೂರ್ಯೋದಯವೂ ಮೋಡಗಳ ನೀಲವರ್ಣವೂ ಅವನ ಶರೀರ ಕಾಂತಿಯನ್ನೂ, ನೆನಪಿಗೆ ತರುವುವು. ಭಗವಂತನ ಸೌಂದರ್ಯಾನುಭವವೇ ಈ ರೀತಿಯಾದ ಚಿತ್ರಗಳಿಗೆ ಕಾರಣ. ಆದುದರಿಂದಲೇ ಇವರ ಕೃತಿಗಳು ಅತ್ಯುತ್ತಮವಾದ ಪ್ರಕೃತಿ ವರ್ಣನೆಗಳಿಂದ ತುಂಬಿರುವುದು ; ಆದರೆ ಅವುಗಳ ಉದ್ದೇಶ ಮಾತ್ರ ಐಹಿಕವಲ್ಲ; ಆಮುಷ್ಮಿಕಕ್ಕೆ ಸಂಬಂಧಪಟ್ಟುವು. ಇವರ ಪ್ರಕೃತಿ ವರ್ಣನೆಯ ಮೇಲ್ಮೆಯನ್ನು ಇವರು ಚಿತ್ರಿಸಿರುವ 'ತಿರುವಲ್ಲವಾೞ್' ಮತ್ತು 'ತಿರುಮಾಲಿರಂ ಶೋಲೈ' ಎಂಬ ದಿವ್ಯ ದೇಶಗಳ ವರ್ಣನಾತ್ಮಕವಾದ ಈ ಕೆಳಗಿನ ಪದ್ಯಗಳಲ್ಲಿ ನೋಡಬಹುದು :—

**ತಿರುವಲ್ಲವಾೞ್**

ಎರಳೆಕಣ್ ಗೆಳತಿಯಿರ! ಅನುದಿನವು ನಶಿಸುತಿಹೆನ್,
ಬಾನುದ್ದದಡಿಕೆಮರ, ಕಂಪಿಡಿದ ಮಲ್ಲಿಗೆಯು,
ದುಂಬಿಗಳು ತುಂಬಿರುವ ತೋಪಿನಿಂ ಮೆರೆಯುತಿಹ
ತಿರುವಲ್ಲವಾೞಿರೆಯನಡಿಸಾರ್ವುದಾನೆಂದೊ?

ಸಖಿಯರಿರ! ನೀವೆನ್ನ ತಡೆವುದುಚಿತವೆ ಪೇಳಿ
ಪೊನ್ನಿರದ ಪುನ್ನಾಗ ವಕುಳ ನವಮಾಧವಿಯ

ಮೇಲ್ಸುಳಿದ ತಣ್ಣೆಲರ ನರುಗಂಪು ಸುಳಿಯುತಿಹ
ತಿರುವಲ್ಲವಾಟ್ಟಿರೆಯನಡಿಸಾರ್ವ್ಪುದಾನೆಂದೊ?

ಹೂ ಮುಡಿದ ಒಡತಿಯಿರ! ವಿರಹದಿಂ ಸನೆವಾನು
ಕಡಲುಲಿಯನನುಕರಿಸಿ ಘೋಷಿಸಲು ವೇದಗಳು,
ಬಾನುದ್ದ ಬೆಳೆದಿರುವ ಧೂಮಗಂಧವ ತಳೆದ
ತಿರುವಲ್ಲವಾಟ್ಟಿರೆಯನಡಿಗಳನು ಕಾಣುವೆನೆ?

ಗೆಳತಿಯಿರ! ನೀವೆನ್ನ ತಡೆದು ಮಾಡುವುದೇನು?
ಹಸುರೆಲೆಯ ನೀಡಡಿಕೆ ಪಲತೆರದ ಚೆಂದೆಂಗು,
ಪನಸು ಬಾಳೆಗಳಡಿಯೆ ಮೆರೆಯುತಿಹ ಮಾಡಗಳ
ತಿರುವಲ್ಲವಾಟ್ಟಿರೆಯನಾ ನಲ್ಮೆ ಆಶ್ರಯವು.

ಆಡುತಿಹ ಇನಿಗಬ್ಬು, ಮಿಗೆ ಬೆಳೆದ ಚೆಂಬತ್ತ
ಎಲ್ಲೆಡೆಗೆ ಕಂಪೀವ ಪೂವಿಡಿದ ಆರವೆಯು
ಬಳಸಿರುವ ತಿರುವಲ್ಲವಾಟ್ಟಿರೆಯನಡಿಗಳನು
ಬಿಡದೆ ನಾ ಸೇರ್ದೆಂದು ಪೂಜಿಸುವೆ ಗೆಳತಿ?

## ತಿರುಮಾಲಿರಂ ಶೋಲೈ

ನುಣ್ಪೊಗರ ಯೌವನವು ಜಾರಲ್ಕೆ ಮುನ್ನ
ಹೆಚ್ಚುತಿಹ ಕಾಂತಿಯಾ ಮಾಯಾವಿ ನೆಲಸಿರುವ
ತರುಗಿಡಗಳಿಂ ತುಂಬಿ ವಿಭವದಿಂ ಮೆರೆಯುತಿಹ
ಮಾಲಿರಂ ಶೋಲೆಯಂ ಹೊಂದುವುದೆ ಜಾಣ್ಮೆ.

ಚತುರರಹ ಮಡದಿಯರ ಮೋಹವನು ಲೆಕ್ಕಿಸದೆ
ಇನಿಗೊರಲ ಶಂಖದಾ ಚೆಲ್ವಟಿಹರ್ ನಿಂತಿರ್ಪ
ತಣ್ಕದಿರನಾಡುತಿಹ ಶಿಖರದಿಂ ಬೆಳಗುತಿಹ
ಮಾಲಿರಂ ಶೋಲೆಯಂ ಪಾಡುವುದೆ ಪೆರ್ಮೆ.

ಅಳಿಗೆಯ್ಮೆ ಗೆಯ್ಯುವುದು ಗೆಯ್ಮೆಯಲ್ಲೆಲೆ ಮನಸೆ;
ಕಾರ್ಮುಗಿಲ ಬಣ್ಣದಾ ಸಿರಿಯರಸ ತಾನಾಳ್ದ
ಸಿರಿವನದಿ ಬಳಸಿರುವ ಮಾಲಿರಂ ಶೋಲೆಯಾ
ಬಳಿಯೊಳಿಹ ಬೆಟ್ಟವನು ಹೊಂದುವುದೆ ಗೆಯ್ಮೆ.

ಜನರು ಜೀವಿಸುವಂತೆ ಕರ್ಮಪಾಶವ ಹರಿದು
ಪೆರ್ಮಲೆಯನೆತ್ತಿದಾ ಮಹಿಮ ತಾ ವಾಸಿಸುವ
ಕಾರ್ಮುಗಿಲನನುದಿನವು ಬೆಡಗಿನಿಂ ಚುಂಬಿಸುವ
ಮಾಲಿರಂ ಶೋಲೆಯನು ಸೇರುವುದೆ ಮೇಲ್ಮೆ.

ಏತೆರದ ಬಲಗಳಿಂ ತೀವಿನೆಯ ಹರಡಿಸದೆ
ಧರ್ಮದಾ ಚಕ್ರವನು ಧರಿಸಿದವ ನೆಲಸಿರ್ಪ

ತಿಳಿನೀರ ಪೆರ್ದೊರೆಗಳ್ ಸುತ್ತಿ ಬಳಸಿರುವ
ಪರ್ವತದ ಬಳಿಮಲೆಯ ಸಾರುವುದೆ ಊಣ್ಕೆ.

ಉರಿಯ ಬೆಣ್ಣೆಯನುಂಡ ಶ್ರೀ ಕೃಷ್ಣ ತಾನಿರ್ಪ
ಜಿಂಕೆಗಳು ಮರಿಗೂಡಿ ನಲಿಯುತಿಹ ಶೋಲೆಯಾ
ಬಟ್ಟೆಯನು ಸೇರಬೇಕೆಂದೆಂಬ ನೆನಹದುವೆ
ನಲ್ಮೆಯೆಂದರಿಯುವುದು ಕೀಳ್ಮನದಿ ಚಿಂತಿಸದೆ.

ಪ್ರಬಲತರ ಪಾಪದೊಳು ಮುಳುಗದೇ ಎಚ್ಚರದಿ
ಯುಕ್ತವೆಂದರಿವುದಿದ; ರಕ್ಕಸಿಯ ಕೊಂದವನ
ದೇಗುಲದ ಬಳಿ ಸಾರ್ದ ಕರಿಣಿಗಳ ತಂಡದಿಂ
ಮೆರೆಯುತಿಹ ಶೋಲೆಯನು ಸೇರುವುದೆ ಅಳ್ತಿಯೆಂದು

ಮೇಲಿನ ಪದ್ಯಗಳಲ್ಲಿ ಆಳ್ವಾರ್ರವರು ಪ್ರಕೃತಿಯ ವೈಚಿತ್ರ್ಯವನ್ನೂ ಸಸ್ಯಸಮೃದ್ಧಿಯನ್ನೂ ಸ್ವತಂತ್ರವಾಗಿ ಅಲೆದಾಡುವ ಪ್ರಾಣಿವರ್ಗವನ್ನೂ ಎಷ್ಟು ಸರಳವಾಗಿಯೂ ಲಲಿತವಾಗಿಯೂ ವರ್ಣಿಸಿದ್ದಾರೆಂಬುದನ್ನು ಮನಗಾಣಬಹುದು.

ಮುಂದಿನ ಕೆಲವು ಗೀತಗಳು ಆಳ್ವಾರ್ರವರ ಸಿದ್ಧಾಂತಗಳನ್ನು ವಿಶದಪಡಿಸುವುವು. ಭಗವಂತನು ಸಾಕಾರಿಯೂ ಅಹುದು, ನಿರಾಕಾರಿಯೂ ಅಹುದು. ಅವನು ಅಸಂಖ್ಯೇಯ, ಅನುಪಮ, ಲೋಕಾತಿರೇಕಿ; ಅವನೇ ಕವಿಯ ಒಡಲು, ಜೀವದುಸಿರು. ಅವನು ಎಲ್ಲ ವಸ್ತುಗಳಲ್ಲಿಯೂ ಸಂಬಂಧಿಸಿ ಸೂಕ್ಷ್ಮ ಅಣುವಾಗಿ ಸೇರಿರುತ್ತಾನೆ. ಪ್ರಂಚದ ಬೇರೆಬೇರೆಯ ವಸ್ತುಗಳು ಯಾವ ಉದ್ದೇಶಕ್ಕಾಗಿ ಸೃಷ್ಟವಾಗಿವೆಯೊ ಆ ಉದ್ದೇಶ ಸಾಧನೆಯಾಗುವ ಹಾಗೆ ಅವುಗಳನ್ನು ಏರ್ಪಡಿಸಲು ಮತ್ತು ಮಾರ್ಪಡಿಸಲು ಆತನೊಬ್ಬನಿಗೇ ಸಾಧ್ಯ. ಮುಂದಿನ ಪದ್ಯವನ್ನು ನೋಡಿ:—

ಎನ್ನೊಡಲು, ಉಯಿರಂತೆ; ಅಂಡಗಳ ಒಳಹೊರಗು,
ಹಾಗೆಂದು ಹೀಗೆಂದು ಬಣ್ಣಿಸಲ್ಕಾಗದವನ್,
ಇನಿಗಂಪಿನೊಳಗಿರುವ ಸೂಕ್ಷ್ಮ ಅಣುವಾಗಿಹನು.
ದುಃಖವನು ಕಾಣದಿಹ ಜ್ಞಾನನಿಧಿ, ಪರಂಪರನ್.

ಭಗವಂತನ ಅಪಾರ ಗುಣಗಳಲ್ಲಿ ಭಕ್ತನ ದೃಷ್ಟಿಯಿಂದ ಮುಖ್ಯವಾದುದು ಅವನ ಕೃಪಾಗುಣ, ಭಕ್ತನ ಆಸೆಯನ್ನು ತಿಳಿದ ತಕ್ಷಣವೇ ಭಗವಂತನು ಅವನಿಗೆ ತಿಳಿಯದೆಯೆ ಬಂದು ಅವನನ್ನು ಸ್ವೀಕರಿಸುವನು.

ಎನ್ನ ನೀ ಚೆಲ್ವಪ್ಪ ಪೊನ್ನಡಿಯ ಕೆಳಗಿರಿಸು
ಎಂದೆನುತ ಪಲಕಾಲ ನಾ ಬೇಡಿ ಅಳುತಿರಲು,
ಪ್ರೀತಿಯಿಂ ವಾಮನನು ತಾನ್ ಪೊಕ್ಕು ಎನ್ ಮನವ,
ಅದರೊಡನೆ ತಾ ಸೇರಿ ನೆಲೆಯಾಗಿ ನಿಂತಿರ್ಪನ್.

ಪ್ರಪಂಚದಲ್ಲಿ ಭಗವಂತನೊಬ್ಬನು ವಿನಾ ಉಳಿದವೆಲ್ಲ ಅಸ್ಥಿರವಾದುವು, ನಿಜವಾಗಿಯೂ ಪ್ರಾಪ್ಯನಾದವನು ಅವನೊಬ್ಬನೆ. ಈ ವಿಷಯವನ್ನು ಆಳ್ವಾರ್ರವರು ಮುಂದಿನ ಪದ್ಯಗಳಲ್ಲಿ ಬಹು ಹೃದಯಂಗಮವಾಗಿ ವರ್ಣಿಸಿದ್ದಾರೆ:—

ಒಂದು ಕೊಡೆಯ ನೆರಳಿನಲ್ಲಿ ಲೋಕವನ್ನೆ ಆಳಿದವರು
ಕರಿಯ ನಾಯಿ ಕಚ್ಚಿ ಕಾಲ, ಒಡೆದ ಮಡಿಕೆಯನ್ನು ಹಿಡಿದು
ಲೋಕವೆಲ್ಲ ಕಾಣುವಂತೆ ಅಂತೆ ಭಿಕ್ಷೆಬೇಡುವುದರಿಂ
ನಾರಯಣನ ಪಾದವನ್ನು ಬಿಡದೆ ತುತಿಸಿ ಬಾಳ್ವುದು.

'ಕಪ್ಪವನ್ನು ತಂದುಕೊಟ್ಟು ಬಾಳಿ' ಎಂದ ರಾಜರಂತೆ
ತಮ್ಮ ಪ್ರಿಯರ ಪೆರರು ಕೊಳ್ಳೆ ತಾವೆ ಬಿಟ್ಟು, ಬೇಗೆಯಿಂದ
ಬೆಂದ ಕಾಡಿನಲ್ಲಿ ಪೋಗಿ ಪೀಡೆಯನ್ನು ತಿನ್ನುವುದರಿಂ
ಚೆಲ್ವಮುಡಿಯ ನಾರಯಣನನಾಳಿಗೊಂಡು ಬಾಳ್ವುದು.

ಅಡಿಯ ಕೆಳಗೆ ಮುಡಿಯನಿಟ್ಟು ರಾಜಗಣವು ಸೇವೆಗೆಯ್ಯೆ
ಸಿಡಿಲ ಸರಿಯ ಮುರಜ ಹೊರಗೆ ದನಿಯುಗೆಯ್ಯೆ ಮೆರೆದ ರಾಜರ್
ಕಾಲ ಅಡಿಯ ಧೂಳಿ ಆಗಿ ಪೋಪರದರಿಂ ತುರಿತದಿಂದ
ತುಳಸಿಮಾಲೆಯಿಂದ ಮೆರೆವ ಕೃಷ್ಣನಡಿಯ ನೆನೆದು ಬಾಳ್ವುದು.

ಲೋಕತತ್ತ್ವವನ್ನು ನೆನೆಯೆ ಎಂತೊ ಕಾಲವಾಳಿ ಕಳೆದ
ರಾಜಸಂಖ್ಯೆ ಕಡಲ ಮಳಲ ರಾಶಿಯಂತೆ ಗಣನೆಯಿಲ್ಲದಾದುದು;
ಅವರು ಸಮೆದ ಮಾಡವೆಲ್ಲ ಪಾಳು ಭೂಮಿಯಾಯಿತದರಿಂ
ಮತ್ತಗಜವನಳಿದ ಕಣ್ಣನಡಿಯ ನೆನೆದು ಬಾಳ್ವುದು.

ಬಾಳ್ದೆವೆಂದು ಹಿಗ್ಗುವವರ ಸಿರಿಯು ಕೂಡ ಪಿರಿಯ ಮಳೆಯ
ಗುಳ್ಳೆಯಂತೆ ನಶಿಸಿ ನಶಿಸಿ ಮಾಯವಾಗಿ ಪೋಗುತಿಹುದು;
ಬಾಳಿದವರು ಬಾಳ್ದೆ ಬಾಳ್ವರ್ ಎಂಬ ತತ್ತ್ವವಿಲ್ಲದುದರಿಂ
ಸಿರಿಯ ಕಡಲ ಸೆಜ್ಜೆಯವನ ಅಡಿಯ ಸಾರ್ದು ಬಾಳ್ವುದು.

ಮಾನವನಿರುವುದು ಸ್ವಂತ ಉಪಯೋಗಕ್ಕಲ್ಲ. ಭಗವಂತನ ಇಚ್ಛಾನುಸಾರ ಅವನ ಸೇವೆಯನ್ನು ಮಾಡುವುದಕ್ಕೆ; ಭಕ್ತಿಯಿಂದ ಪೂಜಿಸುವುದಕ್ಕೆ. ಈ ಭಕ್ತಿಗೆ ಯಾವ ಪ್ರತಿಫಲಾಪೇಕ್ಷೆಯೂ ಇರಕೂಡದು. ಆದರೂ ನಿತ್ಯಕೈಂಕರ್ಯ ಪ್ರಾಪ್ತಿಯು ಭಕ್ತನು ಪ್ರಾರ್ಥಿಸದಿದ್ದರೂ ಸದ್ಭಕ್ತಿಯ ಫಲವಾಗಿ ಬಂದೇ ಬರುವುದು. ಮೋಕ್ಷವೆಂದರೂ ಇದೇ ಅರ್ಥ. ಅದು ಜಡವಾದ ಸರ್ವಸಂಗತ್ಯಾಗವಲ್ಲ. ಭಗವಂತನ ಉದ್ದೇಶವನ್ನೂ ಆತನ ನಿಯಮವನ್ನೂ ನಡೆಸುವುದಕ್ಕೆ ಸಹಾಯ ಮಾಡುವುದೇ ಮೋಕ್ಷ. ಜ್ಞಾನ, ಭಕ್ತಿ, ಪ್ರಪತ್ತಿಗಳಿಂದ ಈ ಮೋಕ್ಷವನ್ನು ಎಲ್ಲ ಜೀವಿಗಳೂ ಇಹ ಲೋಕದಲ್ಲಿಯೇ ಪಡೆಯಬಹುದು. ಇದಕ್ಕೆ ಯೋಗ್ಯವಾಗುವಂತೆ ಮನೋ ವಾಕ್ಕಾಯಗಳನ್ನು ಅನುಗೊಳಿಸಬೇಕೆಂಬುದೇ ಆಳ್ವಾರ್ರವರ ಅನವರತ ಪ್ರಾರ್ಥನೆ.

ಪಿರಿದಪ್ಪ ಮೋಕ್ಷವನು ನಾನು ಬೇಡುವುದಿಲ್ಲ;
ಇನಿದಪ್ಪ ನಿನ್ನಡಿಗಳೆನ್ ತಲೆಯ ಮೇಲಿರಲಿ;
ಅದಕಾಗಿ ಬೇಡುವುದು ನಿನ್ನೆಡೆಯ; ಬೇರೆಯೊಂ
ದಿನಿತಿಲ್ಲ; ಗಜರಾಜಗೊಲಿದೆನ್ನ ಸಿರಿವರನೆ!

ಬಾಳಿನಾ ಕಡೆಯಲ್ಲಿ ಇನಿದಪ್ಪ ಮೋಕ್ಷವೂ
ಸ್ವರ್ಗ ನರಕಗಳೆರಡು ಬರಲಿ ಬಾರದೆ ಇರಲಿ;
ಸಾವು ಪುಟ್ಟುಗಳಿರದೆ ಪಲಸಾರಿ ಪುಟ್ಟಿದಗೆ
ಒಂದಿನಿತು ಮರೆಯುದೆಯೆ ದುಡಿಯುಬೇಕೆಂದಾಸೆ.

ಆಳ್ವಾರ್ರವರು ಭಗವಂತನ ಅರ್ಚಾಮೂರ್ತಿಗಳಾದ ದಿವ್ಯ ದೇಶಗಳ ದೇವರನ್ನು ವಿಶೇಷವಾಗಿ ವರ್ಣಿಸಿದ್ದಾರೆ. ದಕ್ಷಿಣ ಭಾರತದ ಚೋಳ, ಪಾಂಡ್ಯ, ಮಲೆಯಾಳ ದೇಶದ ಸುಮಾರು ಮೂವತ್ತು ಮೂರ್ತಿಗಳನ್ನೂ ಉತ್ತರ ದೇಶದಲ್ಲಿ ಅಯೋಧ್ಯೆ, ಮಥುರೆ ಮತ್ತು ದ್ವಾರಕೆಗಳಲ್ಲಿರುವ ಮೂರ್ತಿಗಳನ್ನೂ, ಬಹು ಮನೋಹರವಾಗಿ ವರ್ಣಿಸಿದ್ದಾರೆ. ಪ್ರಕೃತಿ ಸಾಮಾನ್ಯದಲ್ಲಿ ಭಗವಂತನನ್ನು ಕಾಣುತ್ತಿದ್ದ ಆಳ್ವಾರ್ರವರಿಗೆ ಈ ಸುಂದರ ವಿಗ್ರಹಗಳನ್ನು ಕಂಡಾಗ ಸ್ವಾಮಿಯ ಸಾಕ್ಷಾದ್ದರ್ಶನವಾದಂತೆಯೇ ಭಾಸವಾಗುತ್ತಿತ್ತು. ಇವುಗಳು ಅವನ ಬೇರೆ ಬೇರೆ ಅವತಾರಗಳೆಂದೇ ಇವರ ದೃಢನಂಬಿಕೆ. ಅವುಗಳಿಗೆ ತಮ್ಮ ಸಕಲ ಇಷ್ಟಾರ್ಥವನ್ನು ಸಲ್ಲಿಸುವ ಶಕ್ತಿ ಇದೆಯೆಂದು ಅನೇಕೆಡೆಗಳಲ್ಲಿ ವರ್ಣಿಸಿದ್ದಾರೆ. ಬಹು ಕಾಲದಿಂದಲೂ ವೈಷ್ಣವಭಕ್ತರಾದ ಆಳ್ವಾರುಗಳು ಭಗವಂತನ ಸಾಕಾರ ರೂಪವಾದ ಈ ವಿಗ್ರಹಗಳಲ್ಲಿ ತಮ್ಮ ಭಕ್ತಿಯನ್ನು ಬೀಜರೂಪದಲ್ಲಿ ಕೇಂದ್ರೀಕರಿಸಿ ಭಗವಂತನ ಅಸ್ತಿತ್ವವನ್ನು ಅವುಗಳಲ್ಲಿ ಕಂಡು ತಮ್ಮ ಭಕ್ತಿಯನ್ನು ಬೆಳೆಸಿ ಮನಸ್ಸು ಪರಿವರ್ತಿಸಿದಹಾಗೆಲ್ಲ ಅದನ್ನು ವಿಸ್ತರಿಸಿ ತನ್ಮೂಲಕ ಭಗವಂತನ ವಿಶ್ವರೂಪವನ್ನೂ ವಿರಾಡ್ರೂಪವನ್ನೂ ಸಾಕ್ಷಾತ್ಕರಿಸಿದ್ದಾರೆ.

ಶಠಾರಿಮುನಿಗಳ ಪ್ರಪತ್ತಿ ಮಾರ್ಗಕ್ಕೆ ಶರಣಾಗತಿಯೇ ಮುಖ್ಯ ಧರ್ಮ. ಇದು ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ವಿಶೇಷವಾದುದು. ಭಗವಂತನ ಆಜ್ಞೆಯಂತೆ ನಡೆಯುವುದು; ಅವನಿಗೆ ಪ್ರತಿಯಾಗಿ ನಡೆಯದಿರುವುದು; ಅವನೇ ಶರಣ್ಯನೆಂದು ನಂಬುವುದು; ಅವನಲ್ಲದೆ ಮತ್ತಾರನ್ನೂ ರಕ್ಷಕರನ್ನಾಗಿ ಭಾವಿಸದಿರುವುದು—ಇವು ಶರಣಾಗತಿಯ ಬಾಹ್ಯಸ್ವರೂಪ. ಇದು ಸರ್ವರಿಗೂ ಸಾಧ್ಯವಾಗಬಹುದಾದ ಉಪಾಯ. ಆಳ್ವಾರ್ರವರು ತಮ್ಮ ಶರಣಾಗತಿಯನ್ನು ಪ್ರಕಾರಾಂತರದಿಂದ ವೈವಾಹಿಕ ಸಂಬಂಧವಾದ ಪ್ರಕ್ರಿಯೆಗಳನ್ನುಪಯೋಗಿಸಿಕೊಂಡು ನಾಯಕನ ವಿಶ್ಲೇಷ ದುಃಖದಿಂದ ತಪಿಸುತ್ತಿರುವ ನಾಯಿಕಾವಸ್ಥೆಯಿಂದ ವಿಶದಪಡಿಸಿದ್ದಾರೆ. ಈ ಸಂದರ್ಭದಲ್ಲಿ ಪ್ರಣಯಿಗಳಿಗೆ ಸಂಬಂಧಪಟ್ಟ ಅನೇಕ ಮಾತುಕತೆಗಳೂ ಸನ್ನಿವೇಶಗಳೂ ಬರುವವು. ಅವುಗಳನ್ನು ಮೇಲೆ ತೋರುವ ಬಾಹ್ಯಾರ್ಥಗಳಿಂದ ಗ್ರಹಿಸಬಾರದು. ಅವುಗಳಿಗೆಲ್ಲಾ ಪ್ರತ್ಯೇಕವಾದ ಅಂತರಾರ್ಥವಿದೆ. ಆತ್ಮನು ನಾಯಿಕಾವಸ್ಥೆಯಲ್ಲಿ ಶರಣಾಗತಿಯ ಮೂಲಕ ಪರಮಾತ್ಮನನ್ನು ಸೇರುವುದಕ್ಕೆ ಆತ್ಮವಿವಾಹವೆಂದು ಸಂಜ್ಞೆ. ಇದರ ವಿವರವು ಸಂಪ್ರದಾಯ ಗ್ರಂಥಗಳಲ್ಲಿ ಈ ರೀತಿ ಇದೆ:—*" ಶ್ರಿಯಃಪತಿಯೆಂಬ ಕಾರ್ಮುಗಿಲ ವರ್ಷದಿಂದ ಕೃಪಾ ಕ್ಷೇತ್ರದಲ್ಲಿ ಜೀವಸಸ್ಯವಂಕುರಿಸುವುದು. ಹಾಗೆಯೇ ಆಶಾಪಿತೃವಿಗೂ ಜ್ಞಾನಮಾತೃವಿಗೂ ಪ್ರಾಣದುಹಿತೃವು

* ಈ ಭಾಗವನ್ನು ಶ್ರೀಮಾನ್ ಎಂ. ಯಾಮುನಾಚಾರ್ಯರ "Mysticism of Nammalvar" ಎಂಬ ಲೇಖನದಿಂದ ಉಪಯೋಗಿಸಿಕೊಂಡಿದೆ — ಇತರ ಎಂದೆರಡೆಡೆಗಳಲ್ಲಿಯೂ ಅದರಿಂದ ಉಪಕೃತನಾಗಿದ್ದೇನೆ.

ಜನಿಸುವಳು. ಇವಳಿಗೆ ಆತ್ಮನೆಂಬ ನಾಮಕರಣವಾಗುವುದು. ಈ ಕನ್ಯೆಯು ಭಗವದ್ಭಕ್ತಿಯೆಂಬ ಆಹಾರದಿಂದ ಅಭಿವೃದ್ಧಿಹೊಂದಿ ಕಾಲಾನುಕಾಲದಲ್ಲಿ ಜ್ಞಾನೋತ್ಪತ್ತಿಯಾಗಿ ವಿವಾಹವಯಸ್ಕಳಾಗುವಳು. ಆತ್ಮಜ್ಞಾನವೆಂಬ ಅಗ್ನಿಯ ಮುಂದೆ ಈ ಕನ್ಯೆಯು ಪರಮಾತ್ಮನೆಂಬ ವರನಿಗೆ ಧಾರೆಯೆರೆಯಲ್ಪಡುವಳು. ಅದರಂಗವಾಗಿ ಅವಳು ಕೈಂಕರ್ಯಸೂತ್ರದಿಂದಲೂ ನಾಮರೂಪಾಭರಣಗಳಿಂದಲೂ ಅಲಂಕೃತಳಾಗಿ ಭಕ್ತಿಪೀಠಕ್ಕೆ ಕರದೊಯ್ಯಲ್ಪಡುವಳು. ಅಲ್ಲಿ ತ್ಯಾಗಕಾಷ್ಠದಿಂದ ಜಾಜ್ವಲ್ಯವಾದ ವಿಶ್ವಜ್ಞಾನಾಗ್ನಿಯಲ್ಲಿ ಶರಣಾಗತಿಯೆಂಬ ಹೋಮವನ್ನು ಮಾಡಿ ಅಲ್ಲಿಂದ ಸ್ವರ್ಗ ಕಲ್ಯಾಣ ಮಂಟಪಕ್ಕೊಯ್ಯಲ್ಪಟ್ಟು ಆನಂದಶಯ್ಯೆಯಲ್ಲಿ ವಿವಾಹ ಕರ್ಮವನ್ನು ಸಾಂಗಗೊಳಿಸುವಳು. ಈಗ ಆತ್ಮಕನ್ಯೆಯು ಪರಮಾತ್ಮಪತಿಯ ಸಾಕ್ಷಾತ್ಕಾರದಿಂದ ಅವನ ಒಂದು ಭಾಗವೇ ಆಗುವಳು."

ಈ ವಿವರಣದಿಂದ ಆಳ್ವಾರ್ರವರ ನಾಯಕ ನಾಯಕೀಭಾವದ ಅರ್ಥವು ವಿಶದವಾಗುವುದು. ಭಗವಂತನನ್ನು ಸೇರಬೇಕೆಂಬ ತಮ್ಮ ಉತ್ಕಟಾವಸ್ಥೆಯಲ್ಲಿ ಅವರು ತಮ್ಮನ್ನು ವಿರಹಪೀಡಿತಳಾದ ನಾಯಕಿಯಂತೆ ಊಹಿಸಿಕೊಂಡು ಆಕೆಯು ತನ್ನ ನಾಯಕನನ್ನು ಸೇರುವುದರಲ್ಲಿ ಯಾವ ಯಾವ ಅವಸ್ಥೆಯನ್ನು ಪಡೆಯುತ್ತಾಳೆಯೋ ಅವನ್ನೆಲ್ಲಾ ತಮ್ಮಲ್ಲಿ ಆರೋಪಿಸಿಕೊಂಡು ವರ್ಣಿಸಿರುವುದನ್ನು ಮುಂದೆ ನೋಡಬಹುದು.

ಈ ಭಕ್ತಕನ್ಯೆಯು ನಾಯಕನಾದ ಭಗವಂತನ ಪ್ರಥಮ ದರ್ಶನದಲ್ಲಿಯೇ ಅವನಲ್ಲಿ ಮೋಹಿತಳಾಗುವಳು. ಅಂದಿನಿಂದ ಅವಳಿಗೆ ತನ್ನ ಇತರ ಎಲ್ಲ ಕೆಲಸಗಳಲ್ಲಿಯೂ ಔದಾಸೀನ್ಯ ಹುಟ್ಟುವುದು. ಸರ್ವದಾ ಅವನನ್ನೇ ಧ್ಯಾನಿಸುತ್ತಾ ಆಹಾರಾದಿಗಳನ್ನು ತ್ಯಜಿಸುವಳು. ಬಂಧುಗಳೂ ಹಿತವರೂ ಹೇಳಿದ ಮಾತಿಗೆ ಕಿವಿಗೊಡುವುದಿಲ್ಲ. ಅವಳ ಈ ಅವಸ್ಥೆಯನ್ನು ಅವಳ ತಾಯಿಯು ತನ್ನ ಸಖಿಯರಿಗೆ ಹೀಗೆಂದು ವರ್ಣಿಸುವಳು :—

ಸಖಿಯರಿರ! ನೀವು ಕೂಡ ಹೆಣ್ಣು ಹೆತ್ತು ಸಲಹಿದಿರಿ
ಚಪಲೆಯಾದ ಎನ್ನ ಮಗಳ ಇರವನೆಂತು ಬಣ್ಣಿಸಲಿ!
ಶಂಖವೆಂದು ಚಕ್ರವೆಂದು ತುಳಸಿಯೆಂದು ಹಗಲಿರುಳೂ
ಇಂತಿಂತೇ ಕೂಗುತಿಹಳು, ಪೇಳಿಮೇನ ಮಾಳ್ಪದೆಂದು?

ಏನ ಮಾಳ್ಪೆನೆನ್ನ ಕಿರಿಯ ಚೆಲುವ ಮಗಳ್ ಸಖಿಯರಿರಾ
ಏನ ಪೇಳೆ ಕೇಳಲೊಲ್ಲಳ್, ಎನ್ನವಶಮುಮಲ್ಲಳವಳ್,
ಮಿಂಚಿನಂತೆ ಪೊಳೆವ ಎದೆಯ ಕೃಷ್ಣನಡಿಯ ತೊಳಸಿ ಮಾಲೆ
ಬಣ್ಣವಳಿದ ತೊಡರನುಳ್ಳ ಎನ್ನ ಎದೆಗೆ ಎಂದು ಪೇಳಿ ನೋವಳವಳ್.

ಭೂಮಿಯನ್ನು ಬಗೆದು ತೋರಿ ಸ್ವಾಮಿಯಳೆದ ಮಣ್ಣಿದೆನ್ಬಳ್
ಬಾನಿನೆಡೆಗೆ ಕಯ್ಯಮುಗಿದು ದೇವನಿರುವ ನಾಡಿದೆನ್ಬಳ್
ಕಣ್ಣತುಂಬ ನೀರ ತುಂಬಿ 'ಕಡಲ ಗುಣ್ಪನುಳ್ಳ'ನೆನ್ಬಳ್
ಎನ್ನ ಮಗಳಿಗಿಂತು ಭ್ರಾಂತಿಗೆಯ್ದ ಸ್ವಾಮಿಗೇನಗೆಯ್ವೆನೊ?

ಬಳೆಯು ಸರಿದ ಕಯ್ಯ ಮುಗಿದು ಪರಮ ಪಡುವ ಕಡಲಿದೆನ್ಬಳ್,
ಕೆಂಪಗಿರುವ ರವಿಯ ತೋರಿ ಸಿರಿಯ ವರನ ಮೂರ್ತಿಯೆನ್ಬಳ್,
ಪಡೆಯಲಿಲ್ಲವೆಂದು ಸುಯ್ದು ನೀರ ಮಿಡಿದು 'ದೇವ' ಎನ್ಬಳ್,
ಏಣನಂತೆ ಚೆಲುವೆಯಾದ ಕಿರಿಯ ಹರಯದಿವಳ ಗೆಯ್ಮೆ ಯುಱಿಯದಾದೆನೆ!

ಸುಡುವ ಕಿಚ್ಚನಪ್ಪಿ ಬಿಡದ ದೇವನೆಂದು ಸುಯ್ದು ಸುಯ್ದು ಬೇಯದಿಹಳ್;
ಸುಳಿಯುವಲರ ತಬ್ಬಿ ತಬ್ಬಿ 'ಎನ್ನ ಇನಿಯ ಸ್ವಾಮಿ'ಯೆನ್ಬಳ್,
ಅವನ ದಿವ್ಯ ತುಳಸಿಮುಲರ ಗಂಧವಲ್ಲಿ ಸುಳಿಯುತಿಹುದು,
ಹುಲ್ಲೆ ಕರುವಿನಂತೆ ತೋರ್ಪ ಇವಳಗೆಯ್ಮೆ ಪಾಪಿಯೆನಗೆ ಒಂದೆ ವಿಧವು.

ಪೂರ್ಣಚಂದ್ರನನ್ನು ತೋರಿ ದಿವ್ಯವರ್ಣನೆಂದು ನುಡಿವಳ್
ನಿಂತಬೆಟ್ಟವೊಂದ ನೋಡಿ 'ಸ್ವಾಮಿ ಬಾರೊ' ಎಂದು ಕರೆವಳ್
ಹಿರಿದು ಕರೆವ ಮಳೆಯ ಕಾಣೆ ದೇವ ಬಂದನೆಂದು ಆರ್ವಳ್
ಎನ್ನ ಚೆಲ್ವ ಕನ್ನೆಯನ್ನು ಎಂದು ಇಂತು ಭ್ರಾಂತಿಗೆಯ್ದರೊ?

ಅವನ ನೆನೆದು ಸುತ್ತ ನೋಡಿ ಬಿಟ್ಟುಹೋದನೆಂದು ಪಾರ್ವಳ್
ಬೆಮರ ಸುರಿಸಿ ಮಳೆಯ ಪೋಲ್ದ ಕಣ್ಣ ನೀರಿಂ ಸುಯ಼್ಸುಯ್ವಳ್
ಮತ್ತೆ 'ಕೃಷ್ಣ' ಎಂದು ಕೂಗಿ 'ನಾಥ ಬಾರೊ' ಎಂದು ಚೀರ್ವಳ್
ಆಶೆಯಿಂದ ಹುಚ್ಚುಹಿಡಿದ ಎನ್ನ ಪೆಣ್ಗೆ ಗೆಯ್ವೆನೇನನೊ?

ನಾಯಕಿಯು ಪ್ರಿಯನ ವಿರಹದಲ್ಲಿ ಅನೇಕ ದಿನ ಉಪವಾಸಮಾಡುವಳು; ಜಾಗರಣೆಮಾಡುವಳು; ಕಣ್ಣಿಗೆ ನಿದ್ರೆಯಿಲ್ಲ; ಮನಸ್ಸಿಗೆ ಶಾಂತಿಯಿಲ್ಲ. ಅವನನ್ನು ಸ್ತೋತ್ರಮಾಡುವಳು; ಬೇಡುವಳು. ನಾಯಕನನ್ನು ಕುರಿತು ಪ್ರಪಂಚದ ಎಲ್ಲ ವಸ್ತುವೂ ನೀನೆ ಆಗಿ ಎಲ್ಲರಿಗೂ ಸಂತೋಷವನ್ನುಂಟುಮಾಡುವ ನೀನು ನನಗೇಕೆ ಹೀಗೆ ಮಾಡುವೆ? ಎನ್ನುವಳು. ಪ್ರಿಯನನ್ನು ಕುರಿತು—

ನೀರಾಗಿ ನೆಲನಾಗಿ ತೀಯೆರಲು ಬಾನಾಗಿ
ಇನಶಶಿಗಳೆರಡಾಗಿ ಶಿವನಾಗಿ ಅಜನಾಗಿ
ಶಂಖ ಚಕ್ರವ ಪಿಡಿದು ಜಗವ ನಲಿಸಿದ ದೇವ
ಎನ್ನೆಡೆಗದೇಕಿಂತು ಒರ್ಮೆಯೂ ಬಾರದಿಹೆ?

ಮಾನವರು ಬಾನವರು ನಲಿವಂತೆ ಅದ್ಭುತದ
ವಟುವಾಗಿ ಯಿರಡಿಯೊಳೆರಡು ಲೋಕವನಳೆದ
ಮಾಯವನೆ! ನಿನ್ನ ಬಳಿ ನಾ ನಲಿದು ಕುಣಿವಂತೆ
ತಿರೆಯುಲೊರ್ಮೆಯೆ ನೀನು ಬಂದು ತೋರಲೆಬೇಕು.

ಯುಗ ಯುಗದಿ ಭೂಮಿಯೊಳು ಸಂಚರಿಸಿ ಬಾಳ್ಗೆಯ್ದು
ಬಹು ದಿನದಿನಲ್ಲಿರುವ ಪಲವುಸಿರ ಪೊರೆದವನೆ!
ಕಡಲಣುಗಿಯೊಡನಿರುವ ನಿನ್ನಿನಿಯ ರೂಪವನು
ನಾ ಕಾಣದಿನ್ನೆನಿತು ಕಾಲವನು ಕಳೆವೆನಿಲ್ಲಿ?

ಎಂದು ಮೊರೆಯಿಡುವಳು. ಆದರೂ ಪ್ರಿಯನು ಬರುವುದಿಲ್ಲ; ಪಕ್ಷಿಗಳು ಮೇಘಗಳು ಮೊದಲಾದುವುಗಳ ಮೂಲಕ ನಾಯಕನಿಗೆ ಸಂದೇಶವನ್ನು ಕಳುಹಿಸುವಳು. ಆತನ ಸಂಬಂಧವಾದ ಎಲ್ಲ ವಸ್ತುಗಳೂ ತನ್ನದೆನ್ನುವಳು. ಅದಾದರೂ ದೊರಕಲೆಂದು ಕೂಗುವಳು, ಅರಚುವಳು. ಇವಳ ವಿಚಿತ್ರಗತಿಯನ್ನು ಅರ್ಥಮಾಡಿಕೊಳ್ಳಲಾರದ ಇವಳ ನೆರೆಹೊರೆಯವರು ಇವಳನ್ನು ಹುಚ್ಚಿಯೆಂದು ಇವಳ ಸಂಗವನ್ನು ತ್ಯಜಿಸುವರು. ರಾತ್ರಿಯಾಗುವುದು ; ಮನೆಯವರೆಲ್ಲ ನಿದ್ರೆಗೆಯ್ಯುವರು ; ಇವಳಿಗೆ ಮಾತ್ರ ನಿದ್ರೆ ಹತ್ತದೆ ತನ್ನಷ್ಟಕ್ಕೆತಾನೆ—

ನಗರವೆಲ್ಲ ನಿದ್ರಿಸಿತ್ತು ; ಲೋಕವೆಲ್ಲ ಕತ್ತಲಾಯ್ತು ;
ಕಡಲ್ಗಳೆಲ್ಲ ಶಾಂತವಾಯ್ತು ; ರಾತ್ರಿಯಂತು ಮುಗಿಯದಾಯ್ತು ;
ಭೂಮಿಯನ್ನು ಭಕ್ಷಿಸಿದಾ ಶೇಷಶಾಯಿ ಬಾರದಿಹನೆ!
ಇಂತಾಗೆ ಪಾಪಿಯೆನ್ನ ಪ್ರಾಣವನ್ನು ಕಾವರಾರೊ?

ಎಲೆ ಮನವೇ! ನೀನು ಕೂಡ ಗೆಳೆಯನಲ್ಲೆ,
ರಾತ್ರಿಯಂತು ಕಲ್ಪವಾಗಿ ಬೆಳೆಯುತಿಹುದೆ,
ಎದೆಯಾಣ್ಮ ರಾಮಚಂದ್ರನಿನ್ನು ಬರನೆ—
ಪಾಪಿಪೆಣ್ಣಜನ್ಮವೆಂತು ಕಡೆಯಹುದೋ ನಾನಱಿಯೆನ್.

ಎಂದು ತನ್ನ ಬಾಳನ್ನು ಹಳಿಯುವಳು. ತನ್ನ ಜೀವನವು ನಿರರ್ಥಕವೆನ್ನುವಳು. ಹೇಗಾದರೂ ಮಾಡಿ ಅವನನ್ನು ಹುಡುಕಿಯೇ ತೀರಬೇಕೆಂದು ಹೊರಟು ಸಮುದ್ರದ ದಡದಲ್ಲಿಯೂ ಕಾಡುಮೇಡುಗಳಲ್ಲಿಯೂ ಗಿರಿನದಿಗಳಲ್ಲಿಯೂ ಸುಂದರವಾದ ಉಪವನಗಳಲ್ಲಿಯೂ ಅಲೆಯುವಳು. ಅಲ್ಲಿರುವ ದಟ್ಟವಾದ ಮರಗಳೂ ಎತ್ತರವಾದ ಪರ್ವತಗಳೂ ತಿಳಿಯಾದ ಸರೋವರಗಳೂ ಗಂಭೀರವಾದ ನದಿಗಳೂ ಅವಳಿಗೆ ನಾಯಕನ ನೆನಪನ್ನೇ ತರುವುವು. ಅವಳ ವಿರಹವು ಮತ್ತಷ್ಟು ಹೆಚ್ಚುವುದು. ಆ ಸನ್ನಿವೇಶದಲ್ಲಿ ಅವಳಿಗೆ ಅವಳ ಸುತ್ತಲಿರುವ ಪ್ರಪಂಚವೆಲ್ಲ ಅವಳಂತೆಯೇ ವಿರಹತಾಪದಿಂದ ದುಃಖಿಸುವಂತೆ ಕಾಣುತ್ತದೆ. ಅವುಗಳನ್ನು ಹೀಗೆಂದು ಪ್ರಶ್ನಿಸುವಳು —

ಪೆರ್ದೆರೆಯ ಕಡಲ ಬಳಿ ಅಲೆಯುತಿಹ ಎಳೆವಕ್ಕಿ!
ಜಗವೆಲ್ಲ ನಿದ್ರಿಸಲು ನೀ ಮಾತ್ರ ಎದ್ದಿರುವೆ;
ಎನ್ನಂತೆ ನೀನು ಸಹ ಬೇನೆಯಿಂ ಬಳಲುತಿಹೆ;
ಸಿರಿಯರಸನೆನ್ನಂತೆ ನಿನ್ನೆದೆಯನೊಯ್ದಿಹನೆ?

ಸೆಳೆದೊಯ್ದ ಹೃದಯದಿಂ ಬಳಲುತಿಹ ಎಣೆವಕ್ಕಿ
ನೀಡಿರುಳೊಳ್ ಹಾಸಿಗೆಯ ಸೇರದೆಯೆ ದುಃಖಿಸುವೆ;
ಅವನಡಿಯ ಸಿರಿದಾಗಿ ಪಿಡಿದಿರುವ ಎನ್ನವೊಲು
ಅವನ ಕಮ್ಮಲರ್ಗಾಗಿ ಹಾತೊರೆಯುತಿಹೆಯಾ?

ಮನದಾಸೆ ಭಗ್ನವಾದಂತೆ ನೀ ಹಗಲಿರುಳು
ಮನಮರುಗಿ ಎಚ್ಚರದಿ ಸುಯ್ ಸುಯ್ದು ಅಳುತಲಿಹೆ;

ತೆಂಕಣಿನ ಲಂಕೆಯನು ಉರಿಗಿಟ್ಟ ಪೆರ್ಮನಾ
ಅಡಿಯಾಳ್ದ ನನ್ನಂತೆ ನೀನಹೆಯೊ? ಚಿರಬಾಳು! ಕನಗಡಲೆ.

ನೀರು ನೆಲಗಳ ಮೇಲೆ ಎಲ್ಲೆಲ್ಲು ಅಲೆದಲೆದು
ಇನಿತು ನಿದ್ರಿಸದಿರುವೆ; ಭಾರತದಿ ಕೈದುಳಿದು
ಚಕ್ರವನೆ ಪಿಡಿದವನ ಕಾಣಲೋಸುಗವಾಗಿ
ಎನ್ನಂತೆ ತೊಳಲುವೆಯ ತಂಗಾಳಿ? ಚಿರಬಾಳು!

ಕಲ್ಪಕಲ್ಪಗಳಲ್ಲಿ ನೀರುಂಡು ಜಗಕೆಲ್ಲ
ಪೆರ್ಮಳೆಯ ಸುರಿಸುತಿಹ ಕಾರ್ಮುಗಿಲೆ! ಎನ್ನಂತೆ,
ಎನ್ನ ಗೆಳತಿಯರಂತೆ, ನೀನು ಸಹ ಮಾಧವನ
ಪಾಶದಿಂ ಸೆಳೆವಟ್ಟು ನವೆಯುವೆಯ? ಚಿರಬಾಳು!

ಇದರಿಂದ ಇವಳಿಗೆ ಯಾವ ವಿಧವಾದ ಸಮಾಧಾನವೂ ಉಂಟಾಗುವುದಿಲ್ಲ. ಹಾಗೆಯೇ ಪ್ರಿಯನನ್ನು ಹುಡುಕುತ್ತಾ ಮುಂದೆ ಹೋದಹಾಗೆಲ್ಲ ಇವಳಿಗೆ ಸಮಾಧಾನವುಂಟಾಗುವ ಬದಲು ಪ್ರಕೃತಿಯಲ್ಲಿ ಸ್ವತಂತ್ರವಾಗಿ ಅಲೆದಾಡುತ್ತ ಇನಿಯನೊಡನೆ ಸರಸಸಲ್ಲಾಪಗಳನ್ನು ಮಾಡುವ ಪಕ್ಷಿ ಮೃಗಗಳು ಇವಳ ವಿಶ್ಲೇಷವನ್ನು ನೋಡಿ ಅಣಕಿಸುವಂತೆ ತೋರುವುವು. ಆಗ ಅವುಗಳನ್ನು ಸಂಬೋಧಿಸಿ —

ಪ್ರಿಯನೊಡನೆ ಲಲ್ಲೆಗೆಯ್ದಾಡುತಿಹ ಕೋಗಿಲೆಯೆ!
ಬೇಟದುತ್ಸವದಿಂದ ತೆಗೆಯುತಿಹೆಯೆನ್ನುಸಿರ;
ಎನ್ನಿನಿಯ ರಮಣನನು ತಂದೀಯಲಾರದೆಯೆ
ಏಕಿಂತು ಅಣಕಿಸುತ ಕೊಲುವಿರೆನ್ನ?

ಹಂಸ ದಂಪತಿಗಳಿರ! ನಾನಿಷ್ಟ ಬೇಡುವೆನು;
ಮುಂದರಿಯದೇಕಿಷ್ಟು ನಲಿಯುವಿರಿ? ಬೇಡವಿದು;
ಗೋಪಾಲನೊರ್ವರಿಗು ಶಾಶ್ವತದ ದಯೆತೋರನ್;
ಕಾಣಿರೇ ಎನ್ನುಸಿರು ಅವನ ಕಯ್ಯಲ್ಲಿಹುದ?

ಎಂದು ಹೇಳಿ ತನ್ನನ್ನು ಉದ್ರೇಕಗೊಳಿಸದಿರುವಂತೆ ಪ್ರಾರ್ಥಿಸುತ್ತಾಳೆ. ಎಷ್ಟಾದರೂ ನಾಯಕನು ಬಾರದಿರಲು ಇವಳಿಗೆ ಸಹಿಸಲಸದಳವಾಗಿ ಪ್ರಾಣತ್ಯಾಗ ಮಾಡುವ ಸಂಭವವೊದಗುವುದು. ಇದನ್ನು ಪ್ರಿಯನು ತಾನೆ ಹೇಗೆ ಸಹಿಸುವನು? ಇನ್ನು ತಡೆದರೆ ಅನರ್ಥವಾಗಬಹುದೆಂದು ನಾಯಕನು ತಾನೇ ನಾಯಕಿಯಲ್ಲಿಗೆ ಬರುವನು. ಈಗ ಅವಳಿಗೆ ಅವನ ಸಾಮೀಪ್ಯದಿಂದ ಶಾಂತಿಯುಂಟಾಗುವ ಬದಲು ಅವನ ನಿಷ್ಕಾರುಣ್ಯ ಕಠಿಣತೆಗಾಗಿ ಅವನಲ್ಲಿ ಕೋಪ ಬಂದು ಮುಂದಿನ ಪದ್ಯಗಳಲ್ಲಿ ಅವನನ್ನು ನಿಷೇಧಿಸುವಳು —

ನೀನೊಲಿದ ಪಿಡಿನಡುವಿನಬಲೆಯರ ಮುಂದುಗಡೆ
ನಿನ್ನ ತೀವಿನೆಯಿದನು ಪೇಳಲಂಜುವೆ ನಾನು,
ರಕ್ಕಸನ ಪುರವಳಿದ ನಿನ್ನ ಕೃತ್ರಿಮವರಿವೆ,
ಚೆಂಡು ಗೆಜ್ಜೆಗಳಿತ್ತು ಪೋಗು ನಡೆಯೆನ್ನಿಂದ.

ನಿನ್ನಿನಿಯ ರೂಪವನು ನೋಡಿ ಕುಣಿಯುವ ಭಾಗ್ಯ
ಎನಗಿಲ್ಲ; ಗರಿಕೆದರ್ದ ನವಿಲನನುಕರಿಸುತಿಹ
ಮುಡದಿಯರ ಪಾಲಾಯ್ತು; ಅದ ನ ಡಿದು ಫಲವೇನು?
ಇನಿಗೊಳಲನೂದುತ್ತ ಪಶುಗಳನು ಕಾಯಿ ನಡೆ.

ಪೆರ್ಗಡಲ ನೆರೆ ಕಡೆದ ಎನ್ನಿನಿಯ! ಮಾಯಾವಿ!
ನಿನ್ನ ಈ ವಂಚನೆಯು ತಿಳಿಯದರಿಗರುಹು ನಡೆ,
ಚೆಂಬಾಯಿ ಮಲರ್ಗಣ್ಣು ಮೃತ್ಯುವಾಗಿಹುದಿಂದು
ನಿಡುದೋಳ ಮಡದಿಯರು ನಿನ್ನಡರ್ದರಾರುಂಟು?

ಆದರೆ ನಾಯಕನು ತನ್ನ ತಪ್ಪನ್ನು ಒಪ್ಪಿಕೊಂಡು ನಾಯಕಿಯನ್ನು ಸಮಾಧಾನಪಡಿಸುವನು. ಈಗ ನಾಯಕಿಯ ಮನಸ್ಸಿನಲ್ಲಿ ಒಂದು ವಿಚಿತ್ರ ಪರಿವರ್ತನೆಯಾಗುತ್ತದೆ. ತನ್ನ ಇಷ್ಟಾರ್ಥಸಿದ್ಧಿಯಾಗುವ ಬದಲು ಅವಳಿಗೆ ಸುಖದುಃಖಗಳೆರಡರ ಮಿಶ್ರಾನುಭವವಾಗುವುದು. ಅವನನ್ನು ನಿಷ್ಕಾರಣವಾಗಿ ಜರೆದ ತನ್ನ ಸ್ವಭಾವವನ್ನೂ ಅವ್ಯಾಜಕೃಪಾಮಯನಾದ ಅವನ ನಡತೆಯನ್ನೂ ಹೋಲಿಸಿಕೊಂಡು ತಾನು ಸರ್ವಥಾ ಅವನ ಕೃಪೆಗೆ ಅನರ್ಹಳೆಂಬ ಭಾವನೆಯು ಅವಳಿಗೆ ತೋರಿ ಅವನ ಸಮಾಗಮವನ್ನು ಮಾಡುವುದು ಮಹಾಪಾತಕವೆಂದು ತಿಳಿದು ಅವನನ್ನು ಬಿಟ್ಟು ಓಡಿಹೋಗುವಳು. ಆದರೆ ಕೃಪಾ ಸಮುದ್ರನಾದ ದೇವ ನಾಯಕನು ಇವಳು ಎಷ್ಟು ಓಡಿದರೂ ಬಿಡದೆ ಬೆನ್ನಟ್ಟಿಕೊಂಡುಹೋಗಿ ಇವಳನ್ನು ಸೋಲಿಸುವನು. ಮಾನವಶಕ್ತಿಯ ಮಿತಿಯು ಮೀರುವುದು. ಶರಣಾಗತಿಯಲ್ಲದೆ ಬೇರೆ ಮಾರ್ಗವಿಲ್ಲ. 'ನಿನ್ನ ಇಚ್ಛೆಯು ನೇರವೇರಲಿ' ಎಂಬುದೇ ಮುಂದಿನ ಪಲ್ಲವಿ. ಭಗವಂತನ ಕರಸ್ಪರ್ಶವಾದ ತಕ್ಷಣ ಬ್ರಹ್ಮಾನಂದಪ್ರಾಪ್ತಿಯೂ ಈಶ್ವರ ಸಾಕ್ಷಾತ್ಕಾರವೂ ಏಕತ್ರವುಂಟಾಗುವುದು. ನಾಯಕಿಯು ಕಣ್ತೆರೆದು ಮುಂದಿರುವ ಚಿರಕಾಂಕ್ಷಿತನಾದ ದಿವ್ಯಮಂಗಳ ಸ್ವರೂಪಿಯನ್ನು ನೋಡಿ ಹಿಗ್ಗಿ ಲಕ್ಷ್ಮೀಸಮೇತನಾದ ಅವನೊಡನೆ ವೈಕುಂಠಕ್ಕೆ ಹೊರಡುವಳು. ಆ ಸಮಯದಲ್ಲಿ ಅವರಿಗಾದ ಸುಸ್ವಾಗತವನ್ನು ಮುಂದಿನ ಪದ್ಯಗಳಲ್ಲಿ ನೋಡಿ—

ಬಾನೆಲ್ಲ ಹರಡಿರುವ ನಿರಿಮುಗಿಲು ಘೋಷಿಸಿತು;
ಅಲೆಗಡಲು ಸಂಭ್ರಮದಿ ಕಯ್ಯೆತ್ತಿ ನರ್ತಿಸಿತು;
ಏಳು ಲೋಕಗಳಂತೆ ಬೆಳಗಿದವು; ಎನ್ನೊಡೆಯ
ನಾರಣನ ಸೇವಕರ ತಾವ್ ಕಂಡು ಸಂತಸದಿ.

ನಾರಣನ ತೊತ್ತುಗಳ ಕಂಡು ಸಂತಸದಿಂದ
ಪೊಂಗೊಡವ ತುಂಬಿದವು ಬೆಳ್ಮುಗಿಲು ಆಗಸದಿ;
ನೀರ್ಗಡಲು ಮೇಲೆದ್ದು ಆರಿದವು; ಪೆರ್ಬೆಟ್ಟ
ದಾರಿಯುದ್ದಕು ನಿಂತು ತೋರಣವ ಕಟ್ಟಿದವು.

ವಟುವಾದ ವಾಮನನ ಭಕ್ತಗಣಗಳ ಮುದದಿ
ಜಗವೆಲ್ಲ ಪುಷ್ಪ ಧೂಪಗಳಿಂದ ಪೂಜಿಸಿತು;

ತವಸಿಗಳು ಮೌನಮುದ್ರೆಯನೊಡೆದು ಸ್ವರ್ಗಕಿದು
ನಲ್ಬಟ್ಟೆ ದಯಮಾಡಿಯೆಂದೆನುತ ಮುನ್ನಡೆದರ್.
ಕಂಪಿಡಿದ ತುಳಸಿಯನು ಮುಡಿದಿರುವ ಮಾಧವನ
ಭಕ್ತರಿಗೆ ಬಾನವರು ಬೀಡುಗಳ ಬಿಡಿಸಿದರು
ಬೆಂಗದಿರರ್ ಮುನ್ನುಗ್ಗಿ ಹಸ್ತಲಾಘವವಿತ್ತರ್
ಮುರಜಗಳು ದನಿಗೆಯ್ದುವಲೆಗಡಲ ಪೋಲ್ತು.

ಮಾಧವನ ತಮರೆಂದು ಬಾಗಿಲೊಳು ಬಾನವರು
'ದಯಮಾಡಿ ಎಮ್ಮೆಡೆಯ ನೀವ್ ಸೇರಿ' ಎನ್ನುವರು
ಗರುಡ ಕಿನ್ನರರೆಲ್ಲ ಗೀತಗಳ ಪಾಡಿದರು
ವೇದಪಾಠಕರೆಲ್ಲ ಸಂತಸದಿ ಪಯನಿತ್ತರ್.

ಇಂತಹ ಸುಸ್ವಾಗತವನ್ನು ಪಡೆದ ನಾಯಕಿಯ ಸ್ಥಾನಾಪನ್ನರಾದ ಆೞ್ವಾರ್ರವರು ವೈಕುಂಠವನ್ನು ಪ್ರವೇಶಿಸಿ ಪರಂಪರನ ನಿತ್ಯಕೈಂಕರ್ಯ ರೂಪವಾದ ನಿಜವಾದ ಮೋಕ್ಷವನ್ನು ಪಡೆದು ಭಗವಂತನು ತನಗೆ ಮೋಕ್ಷವನ್ನುಂಟು ಮಾಡಿದ ರೀತಿಯನ್ನು ಮುಂದಿನ ಒಂದು ಪದ್ಯದಲ್ಲಿ ಹೇಳಿ ಮುಗಿಸುವರು—

ಎನ್ನ ದೇವನೆನ್ನನೊಲಿದು ಉಯಿರುಮೊಡಲು ತಾನೆ ಆಗಿ
ನಾನು ನನ್ನದವನೆ ಆಗಿ ತನ್ನ ತಾನೆ ತುತಿಸಿ ಯೆನ್ನ
ಜೇನು ಹಾಲು ಅಮುರ್ದು ಕಬ್ಬು ಎಲ್ಲ ವಸ್ತು ತಾನೆ ಆಗಿ
ಎನ್ನ ಸೆಳೆದು ತನ್ನೊಳಿರಿಸಿ ತಾನೆ ತನ್ನ ಸೇವೆಯಾಳ್ದನು.

ಇಲ್ಲಿಗೆ ತಿರುವಾಯ್ಮೊೞಿಯು ಮುಗಿಯುವುದು. ಇದುವರೆಗಿನ ಒಂದು ಸ್ಥೂಲಪರಿಚಯದಿಂದ ಆೞ್ವಾರ್ರವರ ಭಕ್ತಿ ಮಾರ್ಗ ವಿಶದವಾಗಿ ಅರ್ಥವಾಗಿರಬಹುದು. ಅವರ ಕೃತಿಯ ಪರಿಚಯದಿಂದ ಅವರ ವ್ಯಕ್ತಿತ್ವವೂ ಮನದಟ್ಟಾಗಿರಬೇಕು. ಕಾಲ ದೇಶ ವರ್ತಮಾನಗಳಿಂದ ಯಾವ ಮೇಲ್ಮೆ ಕೀಳ್ಮೆಗಳನ್ನೂ ಪಡೆಯದೆ ಅವರ ಕೃತಿಗಳು ಪ್ರಪಂಚದ ಭಕ್ತಿರಸಪ್ರಧಾನವಾದ ಗ್ರಂಥಗಳಲ್ಲಿ ಒಂದು ಉತ್ತಮ ಸ್ಥಾನವನ್ನು ಪಡೆದಿವೆ.

**ಎಸ್. ಅನಂತರಂಗಾಚಾರ್**

# ಕನ್ನಡ – ತಮಿಳು

ಪ್ರಪಂಚದಲ್ಲಿ ಬಳಕೆಯಿರುವ ಭಾಷೆಗಳನ್ನು ಭಾಷಾಶಾಸ್ತ್ರಜ್ಞರು ಹಲವು ಗುಂಪುಗಳಾಗಿ ವಿಂಗಡಿಸಿದ್ದಾರೆ. ಇವುಗಳಲ್ಲಿ ಇಂಡೋ – ಯೂರೋಪಿಯನ್ ಅಥವಾ ಆರ್ಯಭಾಷಾ ವರ್ಗ ಬಹು ದೊಡ್ಡದು. ಸಂಸ್ಕೃತ, ಸೆಂಡ್, ಗ್ರೀಕ್, ಲ್ಯಾಟಿನ್ ಮೊದಲಾದ ಪುರಾತನ ಭಾಷೆಗಳೂ ಇಂಗ್ಲಿಷ್, ಫ್ರೆಂಚ್ ಮೊದಲಾದ ಈಗಿನ ಪ್ರಸಿದ್ಧ ಭಾಷೆಗಳೂ ಈ ಗುಂಪಿಗೆ ಸೇರಿದುವು. ನಮ್ಮ ಭರತಖಂಡದಲ್ಲಿ ಬಳಕೆಯಿರುವ ಭಾಷೆಗಳೆಲ್ಲ ಸಂಸ್ಕೃತದಿಂದ ಹುಟ್ಟಿ ಬೆಳೆದಿವೆಯೆಂದೂ ಈ ಕಾರಣ ದಿಂದ ಇವೆಲ್ಲ ಆರ್ಯಭಾಷಾ ವರ್ಗಕ್ಕೇ ಸೇರಿದುವೆಂದೂ ವಿದ್ವಾಂಸರು ಮೊದ ಮೊದಲು ಅಭಿಪ್ರಾಯಪಟ್ಟಿದ್ದರು. ಆದರೆ ಕಾಲ ಕಳೆದಂತೆ ನಮ್ಮ ದೇಶದ ಪ್ರಾಂತ ಭಾಷೆಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿದ್ದರ ಫಲವಾಗಿ ಈ ಅಭಿಪ್ರಾಯ ಮಾರ್ಪಡುತ್ತ ಬಂತು. ಹಿಂದಿ, ಬಂಗಾಳಿ, ಮೊದಲಾದ ಉತ್ತರ ದೇಶದ ಭಾಷೆಗಳು ಸಂಸ್ಕೃತದಿಂದ ಹುಟ್ಟಿದುವೆಂಬುದು ನಿಜವಾದರೂ ದಕ್ಷಿಣ ದೇಶದ ಮುಖ್ಯ ಭಾಷೆ ಗಳಾದ ತಮಿಳು, ಕನ್ನಡ, ತೆಲುಗು, ಮಲೆಯಾಳ, ತುಳುಗಳು ಸಂಸ್ಕೃತದಿಂದ ಹುಟ್ಟಿದುವಲ್ಲವೆಂದೂ ಅವೇ ಬೇರೊಂದು ಸ್ವತಂತ್ರ ಭಾಷಾ ವರ್ಗಕ್ಕೆ ಸೇರಿದುವೆಂದೂ ನಿರ್ಧರವಾಯಿತು. ಈ ವರ್ಗಕ್ಕೆ ದ್ರಾವಿಡ ವರ್ಗ ಎಂದು ಹೆಸರುಕೊಟ್ಟರು.

ದ್ರಾವಿಡ ಜನ ಒಂದು ಕಾಲದಲ್ಲಿ ಭರತಖಂಡವನ್ನೆಲ್ಲ ಪೂರ್ತಿಯಾಗಿ ಆವರಿಸಿದ್ದ ರೆಂದೂ ಆರ್ಯರು ದಾಳಿಯಿಟ್ಟಮೇಲೆ ಮೆಲ್ಲಮೆಲ್ಲನೆ ಹಿಮ್ಮೆಟ್ಟುತ್ತ ಕಡೆಗೆ ದಕ್ಷಿಣ ದೇಶದಲ್ಲಿ ನೆಲೆ ನಿಂತರೆಂದೂ ಚರಿತ್ರಕಾರರು ಹೇಳುತ್ತಾರೆ. ಈಗಿನ ಭರತಖಂಡ ವನ್ನೂ ಆಫ್ರಿಕಾ ಖಂಡವನ್ನೂ ಕೂಡಿಸಿದ್ದ ಒಂದು ವಿಸ್ತಾರವಾದ ಭೂಭಾಗ ಹಿಂದೆ ಇದ್ದು ಯಾವುದೋ ಒಂದು ಕಾಲದಲ್ಲಿ ಸಮುದ್ರದಲ್ಲಿ ಮುಳುಗಿಹೋಯಿತೆಂದೂ ಆ ಭೂಭಾಗವೇ ದ್ರಾವಿಡರ ನೆಲೆಯಾಗಿತ್ತೆಂದೂ ಕೆಲವರು ಹೇಳುತ್ತಾರೆ. ನಾಡು ನೀರುಪಾಲಾಯಿತೆಂಬುದಕ್ಕೆ ತಮಿಳು ಸಾಹಿತ್ಯದಲ್ಲಿ ಅಲ್ಲಲ್ಲೆ ಸೂಚನೆಯಿದೆ. ಆರ್ಯರೂ ದ್ರಾವಿಡರೂ ಮೊದಮೊದಲು ಹಗೆಗಳಾಗಿ ಹೋರಾಡಿದರೂ ಕಡೆಕಡೆಗೆ ಒಂದೇ ನಾಡಿನಲ್ಲಿ ನೆಲಸಿ ನೆರೆಯವರಾಗಿ, ನಂಟರಾಗಿ, ಕೂಡಿ ಬಾಳಿದರು. ಹೀಗೆ ಕೂಡಿ ಬಾಳುವಾಗ ಹಿಂದಿನ ಹಗೆತನ ಮರೆತು ಒಂದೇ ಜನವೆಂಬಂತೆ ಹೊಂದಿ ಕೊಂಡು ನಡೆದರು. ಆರ್ಯ ದ್ರಾವಿಡ ಸಾಹಿತ್ಯ ಸಂಸ್ಕೃತಿಗಳಲ್ಲಿ ಹಲವು ಕೊಳ್ಳು-ಕೊಡೆಗಳಾದವು.

ದ್ರಾವಿಡರು ಭರತಖಂಡದ ಹೊರಗೂ ಬಹು ದೂರ ಹರಡಿದ್ದರೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಈಚೆಗೆ ಹರಪ್ಪ ಮೊಹೆಂಜೊದಾರೋಗಳಲ್ಲಿ ನಡಸಿದ ಭೂಶೋಧನೆಯ ಫಲಿತಾಂಶಗಳೂ ಈ ವಿಷಯಕ್ಕೆ ಬೆಂಬಲವಾಗಿವೆಯೆಂದು ಹೇಳುತ್ತಾರೆ. ಕೆಲವು ವಿದ್ವಾಂಸರ ಪ್ರಕಾರ ಹೀಬ್ರೂ, ಗ್ರೀಕ್, ಬಾಬಿಲೋನಿಯನ್ ಭಾಷೆಗಳಲ್ಲಿ ಕೆಲಕೆಲವು ದ್ರಾವಿಡ ಶಬ್ದಗಳು ಕಾಣಬರುತ್ತವೆ. ಹರಪ್ಪ ಮೊಹೆಂಜೊ ದಾರೋಗಳಲ್ಲಿ ದೊರೆತ ಮುದ್ರಿಕೆಗಳ ಮೇಲಿರುವ ಚಿತ್ರಲಿಪಿಯನ್ನು ಫಾದರ್

ಹೀರಾಸರು ದ್ರಾವಿಡ ಶಬ್ದಗಳ ಸಹಾಯದಿಂದ ಓದಿ ಅಲ್ಲಿ ಬಳಸಿರುವ ಭಾಷೆ ಮೂಲ ದ್ರಾವಿಡವೆಂದು ನಿರ್ಧರಿಸಿದ್ದಾರೆ. ಇವರ ಈ ಸಿದ್ಧಾಂತ ಇನ್ನೂ ಎಲ್ಲರಿಗೂ ಒಪ್ಪಿಕೆಯಾಗಿಲ್ಲ.

ದ್ರಾವಿಡ ಭಾಷೆಗಳಲ್ಲಿ ಸಾಹಿತ್ಯವುಳ್ಳ ಭಾಷೆಗಳು ತಮಿಳು, ಕನ್ನಡ, ತೆಲುಗು, ಮಲೆಯಾಳ— ಈ ನಾಲ್ಕು ಮಾತ್ರ. ತುಳು ಬರಿಯ ಆಡುಮಾತು. ಅದಕ್ಕೆ ಸಾಹಿತ್ಯವಿಲ್ಲ. ಅದರ ವ್ಯಾಕರಣ, ಪದಸಂಪತ್ತು, ಭಾಷಾ ಮರ್ಯಾದೆ ಮೊದಲಾದ ವಿಷಯಗಳಲ್ಲಿ ಇನ್ನೂ ಪರಿಶೋಧನೆ ನಡೆಯಬೇಕಾಗಿದೆ. ಇದೇರೀತಿ ಬರಿಯ ಆಡುಮಾತಾಗಿ ಉಳಿದಿರುವ ಕೊಡಗು, ಬಡಗ, ತೋಡ, ಕೋಟ, ಇರುಳ ಮತ್ತು ಕುರುಂಬ ಭಾಷೆಗಳೂ ದ್ರಾವಿಡ ವರ್ಗದ ಉಪಭಾಷೆಗಳು. ಇವೆಲ್ಲವೂ ಕನ್ನಡಕ್ಕೇ ಹೆಚ್ಚಾಗಿ ಸಂಬಂಧಿಸಿವೆಯೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಉತ್ತರ ಭರತಖಂಡದಲ್ಲಿ ಕೂಡ ದ್ರಾವಿಡ ವರ್ಗದ ಕೆಲವು ಭಾಷೆಗಳು ಪ್ರಚಾರದಲ್ಲಿವೆ: ಕುರಖ್ ಅಥವಾ ಒರಾಯನ್, ಮಾಲ್ಟೊ ಅಥವಾ ರಾಜಮಹಾಲಿ, ಕೂಯಿ ಅಥವಾ ಖೊಂಡ್, ಗೋಂಡಿ, ಬ್ರಾಹೂಯಿ, ಕೊಲಾಮಿ, ನಾಯಿಕಿ ಮತ್ತು ಭೀಲಿ. ಇವುಗಳಲ್ಲಿ ಬ್ರಾಹೂಯಿ ವಾಯವ್ಯದ ಬೆಲೂಚೀಸ್ಥಾನದಲ್ಲಿ ಬಳಕೆಯಿರುವ ಭಾಷೆ.

ದ್ರಾವಿಡ ಭಾಷೆಗಳಲ್ಲಿ ತಮಿಳು ಮಲೆಯಾಳಗಳಿಗೆ ವ್ಯತ್ಯಾಸ ಬಹು ಕಡಮೆ. ಒಂದು ಭಾಷೆಯ ಎರಡು ಶಾಖೆಗಳೋ ಎನ್ನುವಷ್ಟು ಹತ್ತಿರದ ಸಂಬಂಧವಿದೆ ಇವೆರಡಕ್ಕೂ. ಕನ್ನಡ ತಮಿಳಿನಿಂದ ಇನ್ನು ಸ್ವಲ್ಪದೂರ ಸಿಡಿದು ನಿಲ್ಲುತ್ತದೆ. ಆದರೆ ಗುರುತು ಮರೆಯುವಷ್ಟು ದೂರ ಹೋಗಿಲ್ಲ. ಮೊದಲ ನೋಟದಲ್ಲೇ ಹೋಲಿಕೆ ಒಡೆದು ಕಾಣುವಂತೆ, ಒಮ್ಮನೆತನದ ನೆನಪು ತಟ್ಟನೆ ಹೊಳೆಯುವಂತೆ ಹತ್ತಿರದಲ್ಲೇ ಬೇರೆಯಾಗಿ ನಿಂತಿದೆ. ತೆಲುಗು ತಮಿಳುಗಳ ನಂಟು ಇಷ್ಟು ಸುಲಭವಾಗಿ ಕಣ್ಣಿಗೆ ಕಟ್ಟುವುದಿಲ್ಲ. ತೆಲುಗು ಯಾವುದೋ ಒಂದು ದ್ರಾವಿಡೇತರ ಭಾಷೆಯ ಪ್ರಭಾವಕ್ಕೆ ಒಳಗಾಗಿರುವಂತಿದೆ. ಇದಲ್ಲದೆ ಇದರಲ್ಲಿ ಸಂಸ್ಕೃತದ ಪ್ರಭಾವ ಹೆಚ್ಚಾಗಿ ಕಂಡು ಬರುತ್ತದೆ. ಕನ್ನಡಕ್ಕೂ ತೆಲುಗಿಗೂ ಈಗ್ಗೆ ನೂರಿನ್ನೂರು ವರ್ಷಗಳ ಹಿಂದಿನವರೆಗೂ ಒಂದೇ ಲಿಪಿಯಿತ್ತು. ಈಗಲೂ ಕನ್ನಡ ತೆಲುಗು ಲಿಪಿಗಳಲ್ಲಿ ವಿಶೇಷ ವ್ಯತ್ಯಾಸ ಕಾಣುವುದಿಲ್ಲ. ಆದರೂ ಕನ್ನಡಕ್ಕೆ ತೆಲುಗಿನ ನಂಟಿಗಿಂತ ತಮಿಳಿನ ನಂಟೇ ಹೆಚ್ಚು ಗಾಢವಾದದ್ದು ಎನ್ನಬಹುದು.

ಭಾಷೆಯ ಸ್ವರೂಪವನ್ನು ಆ ಭಾಷೆಯಲ್ಲಿರುವ ಸಾಹಿತ್ಯದಿಂದ ಚೆನ್ನಾಗಿ ತಿಳಿದುಕೊಳ್ಳಬಹುದು. ಸಾಹಿತ್ಯವನ್ನು ಅಭ್ಯಾಸ ಮಾಡುವುದರಿಂದ ಆ ಭಾಷೆಯ ಹಳಮೆಯನ್ನೂ ಆ ಭಾಷೆ ಕಾಲಕಾಲಕ್ಕೆ ಮಾರ್ಪಡುತ್ತ ಬೆಳೆದುಬಂದ ಚರಿತ್ರೆಯನ್ನೂ ಅರಿತುಕೊಳ್ಳಬಹುದು. ತಮಿಳು ಸಾಹಿತ್ಯ ಕ್ರಿಸ್ತಪೂರ್ವ ಹಲವಾರು ಶತಮಾನಗಳಷ್ಟು ಹಿಂದಿನದೆಂದು ತಮಿಳರು ನಂಬಿದ್ದಾರೆ. ಉಳಿದ ಎಲ್ಲ ದ್ರಾವಿಡ ಭಾಷೆಗಳಿಗಿಂತಲೂ ಹೆಚ್ಚು ಪ್ರಾಚೀನವಾದ ಸಾಹಿತ್ಯ ತಮಿಳಿನಲ್ಲಿ ಇದೆ. ಕನ್ನಡದಲ್ಲಿ ಕ್ರಿ.ಶ. ೬–೭ನೆಯ ಶತಮಾನಗಳಿಂದ ಶಾಸನಗಳೂ ೭–೮ನೆಯ ಶತಮಾನಗಳಿಂದ ಸಾಹಿತ್ಯ ಗ್ರಂಥಗಳೂ ದೊರೆಯುತ್ತವೆ. ಮೊತ್ತಮೊದಲನೆಯ ಕನ್ನಡ ಲಕ್ಷಣ

ಗ್ರಂಥದಲ್ಲಿ ಸೂಚಿಸಿರುವ ಎಷ್ಟೋ ಕವಿ ಕಾವ್ಯಗಳು ನಮಗೆ ಸಿಕ್ಕಿಲ್ಲ. ಇನ್ನು ತೀರ್ಮಾನವಾಗದ ಚರ್ಚಾಸ್ಪದವಾದ ಸಂಗತಿಗಳನ್ನು ಬಿಟ್ಟರೂ ಒಟ್ಟಿನಲ್ಲಿ ಸುಮಾರು ಕ್ರಿ. ಶ. ೧–೨ನೆಯ ಶತಮಾನಗಳಿಂದಲೂ ತಮಿಳು ಕನ್ನಡಗಳಲ್ಲಿ ಸಾಹಿತ್ಯ ನಿರ್ಮಾಣ ನಡೆಯುತ್ತ ಬಂತೆಂದು ಹೇಳಬಹುದು.

'ಇವರ್ಕೆ ನಲವೇಡುವೋನ್ ಪುಣ್ಯಭಾಗಿ ಅಕೆ.' 'ಅಱಮೆನೆಂದುಪಾಪೇಶಂ (ತಮಿಳು: ಅಱಮಿನ್) ಕೊಡುವೋರುಂ ಪಞ್ಚಮಹಾಪಾತಕ ಸಂಯುಕ್ತರಪ್ಪಾರ್.' 'ನಿನ್ನ ಸಮಯಂ ತಪ್ಪಾದೆ ನೋನ್ತ್ಬಿಸಿನ್ ಮುನಿವರನ್ ದೇವಲೋಕಕ್ಕೆ ಸಂದಾನ್.' 'ಕಬ್ಬಪ್ಪಿನಾ ವೆಟ್ಟದುಳ್ ಅವರ್ ಸ್ವರ್ಗಾಗ್ರಮಾನೇಱಿದಾರ್.' 'ಪಿಟ್ಟೆ ಇಲ್ಲೆ. ಎಟ್ಟಿಕೋೞ್ ಇಲ್ಲೆ.' 'ಒಕ್ಕಲುಳ್ ಮಕ್ಕಳ್ ಪುಟ್ಟಲ್ವ (ತಮಿಳು: ಪಿಱವಙ್ಕ)'—ಇವೆಲ್ಲ ಹಳೆಯ ಕನ್ನಡ ಶಾಸನಗಳಿಂದ ಎತ್ತಿಕೊಂಡ ಮಾತುಗಳು. ತಮಿಳಿಗೂ ಈ ಕನ್ನಡಕ್ಕೂ ಹೆಚ್ಚು ವ್ಯತ್ಯಾಸ ಕಾಣುವುದಿಲ್ಲ. ಕನ್ನಡದ ಮೊದ ಮೊದಲ ಶಾಸನಗಳಲ್ಲಿ, ಮುಖ್ಯವಾಗಿ ಮೈಸೂರು ಹಾಸನ ಡಿಸ್ಟ್ರಿಕ್ಟುಗಳ ದಕ್ಷಿಣ ಭಾಗದ (ಇದು ನೃಪತುಂಗನು ಹೇಳಿರುವ ಕರ್ನಾಟಕದ ದಕ್ಷಿಣ ಗಡಿನಾಡು) ಶಾಸನಗಳಲ್ಲಿ ಇಂಥ ಪ್ರಯೋಗಗಳು ಹೆಚ್ಚು. ಈ ಶಾಸನಗಳ ಕಾಲಕ್ಕಿಂತ ಸ್ವಲ್ಪ ಈಚಿನದಾಗಿರಬಹುದಾದ 'ವಡ್ಡಾರಾಧನೆ'ಯೆಂಬ ಹಳಗನ್ನಡ ಗ್ರಂಥದಲ್ಲಿ ''ತಾಯ್ ತಂದೆವಿರ **ಕೇೞ್ವಿಯುಂ** (ತಮಿಳು: ಕೇೞ್ವಿ) ಗೆಯ್ದುವೆ, ಸಮ್ಯಕ್ತ್ವಮನ**ೊಡೆಯನಾಗಿ** (ತಮಿಳು: ಉಡೈಯನಾಗಿ=ಉಳ್ಳವನಾಗಿ), ಅಣುವ್ರತಂ ಮೊದಲಾ**ಗೊಡೆಯ** ಶ್ರಾವಕ ಬ್ರತಂಗಳಂ, ಸವಣರ ಧರ್ಮಮಂ ನಮಗೆ **ಕೊಳಲಾಗ**, ಮೋದಾಳಿಯೊೞ್ **ಮಱಿವಾಱುತ್ತಿರ್ಕುಂ**'—ಮೊದಲಾಗಿ ತಮಿಳಿಗೆ ಹತ್ತಿರ ಹತ್ತಿರವಾದ ಪ್ರಯೋಗಗಳು ಕಾಣಬರುತ್ತವೆ.

ಎಷ್ಟೋ ಶಬ್ದಗಳು ಕನ್ನಡ ತಮಿಳುಗಳೆರಡರಲ್ಲಿಯೂ ರೂಪಭೇದ ಅರ್ಥಭೇದಗಳಿಲ್ಲದೆ ಒಂದೇ ರೀತಿ ಪ್ರಯೋಗವಾಗುತ್ತವೆ. ಮತ್ತೆ ಕೆಲವು ಅಲ್ಪಸ್ವಲ್ಪ ಮಾರ್ಪಟ್ಟು ಬೇರೆ ರೂಪ ತಾಳಿವೆ.

ಉದಾಹರಣೆ:—

ಮಾರ್ಪಾಡಿಲ್ಲದೆ ಒಂದೇ ರೀತಿ ಪ್ರಯೋಗವಾಗುವುವು:

ತಾಯ್, ಪೆಣ್; ಅಡಿ, ಮುಡಿ, ಕಣ್, ಕಾಲ್; ಮಣ್, ನೀರ್, ಪಗಲ್, ತಿಂಗಳ್; ಆಡು, ಪುಲಿ; ಪೊನ್, ಪಣಂ; ಅಱಂ, ಅಱಿವು ಮೊದಲಾದ ನಾಮವಾಚಕಗಳು.

ನಾನ್, ನೀನ್, ಅದು, ಇದು ಮೊದಲಾದ ಸರ್ವನಾಮಗಳು.

ಕುಡು, ಕುಱು, ನಲ್, ನೇರ್, ತಣ್, ನುಣ್, ಪಟಿ, ಮೆಲ್, ಕರಿಯ, ಇನಿಯ ಮೊದಲಾದ ಗುಣವಾಚಕಗಳು.

ಅಡು, ಅಱಿ, ಓದು, ಓಡು, ಕಡಿ, ಕುಡಿ, ತಣಿ, ನಂಬು ಮೊದಲಾದ ಧಾತುಗಳು.

ಆಱು, ಏೞ್, ಪತ್ತು, ನೂಱು ಮೊದಲಾದ ಸಂಖ್ಯಾವಾಚಕಗಳು.

ಉಂ, ಪಿನ್, ಪೋಲ್, ಮುನ್ ಮೊದಲಾದ ಅವ್ಯಯಗಳು.

ಇನ್, ಉಳ್, ವು, ಅಂ, ಪು ಮೊದಲಾದ ಪ್ರತ್ಯಯಗಳು.

ಅಲ್ಪಸ್ವಲ್ಪ ಮಾರ್ಪಟ್ಟಿರುವವಕ್ಕೆ:

ತಂದೆ, ತಂದೈ; ಅರ್ಬಿ, ಅರುವಿ; ಒಡಲ್, ಉಡಲ್; ಉಸಿರ್, ಉಯಿರ್; ಕಱು, ಕನ್ಱು; ಕುಂದ, ಕುನ್ಱು; ಸೆಱಪು, ಶಿಱಪ್ಪು. ಅವು, ಅವ್ವೈ. ಪೊಸ, ಪುದು; ಬೆಳ್, ವೆಳ್; ಕಿಱು, ಶಿಱು. ಆರೈ, ಆರಾಯ್; ಎರೆ, ಇರ; ಉರಿ, ಎರಿ; ಕೆಡೆ, ಕಿಡ; ಪೊರ್ದು, ಪೊರುಂದು; ಸೋಲ್, ತೋಲ್; ಬತ್ತು, ವಱ್ಱು. ಒಂದು, ಒನ್ಱು; ಎರಡು, ಇರಂಡು; ಹದಿನೈದು, ಪದಿನೈಂದು; ಇಪ್ಪತ್ತು, ಇರುಪದು. ಮುತ್ತು, ಮುಱ್ಱು. ಸಲೆ, ಶಾಲ; ಅಂದು, ಅನ್ಱು; ಬರ್ಪುದುಂ, ವರುವದುಂ. ಮೆ, ಮೈ.

ಈ ಪಟ್ಟಿಯನ್ನು ಎಷ್ಟು ಬೇಕಾದರೂ ಬೆಳಸುತ್ತ ಹೋಗಬಹುದು. ಎರಡು ಭಾಷೆಗಳಲ್ಲೂ ಅರ್ಧಕ್ಕಿಂತ ಹೆಚ್ಚು ಮಾತುಗಳು ಸಮಾನವಾಗಿವೆ. ಈ ವಿಷಯ ವನ್ನು ಶ್ರೀಮಾನ್ ಆರ್. ನರಸಿಂಹಾಚಾರ್ಯರ ಮತ್ತು ಕಾಲ್ಡ್‌ವೆಲ್ಲರ ಗ್ರಂಥ ಗಳಿಂದ ವಿಶದವಾಗಿ ತಿಳಿದುಕೊಳ್ಳಬಹುದು.

ಕೆಲವು ವೇಳೆ ಮಾತಿನ ಅರ್ಥ (ಮೂಲದಲ್ಲಿ ಸಂಬಂಧವಿದ್ದರೂ) ಒಂದೊಂದು ಭಾಷೆಯಲ್ಲಿ ಒಂದೊಂದು ರೀತಿಯಾಗಿ ಬೆಳೆದಿರುವುದುಂಟು. (ತಮಿಳು) ನಿಗೞ್=ಆಗು; (ಕನ್ನಡ) ನೆಗೞ್=ನಡೆ, ಮಾಡು, ಪ್ರಸಿದ್ಧಿಪಡೆ. (ತಮಿಳು) ಪಾರ್=ನೋಡು; (ಕನ್ನಡ)=ಹಾರೈಸು, ನಿರೀಕ್ಷಣೆಯಲ್ಲಿರು. (ತಮಿಳು) ಕುಱ್ಱಂ=ದೋಷ; (ಕನ್ನಡ) ಕುತ್ತಂ=ರೋಗ, ಸಂಕಟ. (ತಮಿಳು) ನೆಱ್ಱಿ=ಹಣೆ; (ಕನ್ನಡ) ನೆತ್ತಿ=ತಲೆಯ ಮೇಲ್ಭಾಗ. 'ಈನ್' ಹಡೆ ಎಂಬರ್ಥದಲ್ಲಿ ಮನುಷ್ಯರಿಗೂ ಅನ್ವಯಿಸುವಂತೆ ತಮಿಳಿನಲ್ಲಿ ಪ್ರಯೋಗವಾಗುತ್ತದೆ; ಕನ್ನಡದಲ್ಲಿ ಪ್ರಾಣಿಗಳಿಗೆ ಮಾತ್ರ ಅನ್ವಯಿಸುತ್ತದೆ.

ಹೀಗೆ ತಮಿಳು ಕನ್ನಡಗಳಲ್ಲಿ ಬಹುಪಾಲು ಶಬ್ದಗಳು ಸಮಾನವಾಗಿರುವುದು ಮಾತ್ರವಲ್ಲದೆ ಪ್ರತ್ಯಯ ಸೇರುವಾಗಲೂ ಸಂಧಿ ಸಮಾಸಗಳಲ್ಲಿಯೂ ಅವು ಮಾರ್ಪಡುವ ರೀತಿಯಲ್ಲಿ ಕೂಡ ಸಾಮ್ಯವಿದೆ. ವ್ಯಾಕರಣ ಪ್ರಕ್ರಿಯೆಗಳೂ ಭಾಷಾ ಮರ್ಯಾದೆಗಳೂ ಎರಡರಲ್ಲೂ ಒಂದೇ ಆಗಿವೆ.

ಈಚೀಚೆಗೆ ಪದಗಳ ಮೂಲ ಅರ್ಥ ಕನ್ನಡಿಗರಿಗೆ ಮರೆತುಹೋದ್ದರಿಂದಲೊ ಏನೊ ಕೆಲವು ಮಾತುಗಳಿಗೆ ತಪ್ಪಾಗಿ ಯಾವುದೋ ಅರ್ಥ ಬೆಳೆದುಬಂದಿರುವುದೂ ಉಂಟು: ಕನ್ನಡ ಗ್ರಂಥಗಳಲ್ಲಿ 'ಪಱಮೆ' ದುಂಬಿ ಎಂಬರ್ಥದಲ್ಲಿ ಪ್ರಯೋಗ ವಾಗಿದೆ. ತಮಿಳಿನ 'ಪಱವೈ' ಇದಕ್ಕೆ ರೂಪಸಾದೃಶ್ಯವಿರುವ ಪದ. ಅದಕ್ಕೆ 'ಹಕ್ಕಿ' ಎಂದರ್ಥ; ಲಕ್ಷಣೆಯಿಂದ ಕೆಲವುವೇಳೆ ದುಂಬಿ ಎಂದೂ ಅರ್ಥವಾಗು ತ್ತದೆ. ಕನ್ನಡದಲ್ಲಿ ಮೂಲ ಅರ್ಥ ಮರೆಯಾಗಿ ರೆಕ್ಕೆಯಿದ್ದು ಹಾರಾಡುವ ಚಿಕ್ಕ ದುಂಬಿ ಯಲ್ಲಿ ನಿಂತಿದೆ. 'ಪುೞಿಲ್' ಎಂಬ ಪದ ಸಂಸ್ಕೃತ 'ಪುಳಿನ'ದ ತದ್ಭವವೆಂದು ಭಾವಿಸಿ ಅದಕ್ಕೆ ಮರಳೊಟ್ಟು ಎಂದು ಅರ್ಥ ಹೇಳುವುದು ವಾಡಿಕೆಯಾಗಿದೆ. ಆದರೆ ಅದು ತದ್ಭವವಲ್ಲ; ಅಚ್ಚಕನ್ನಡ ಪದ (ತಮಿಳು ರೂಪ: ಪೊೞಿಲ್). ಅದಕ್ಕೆ 'ಮರ ಗುಂಪು, ತೋಪು' ಎಂದರ್ಥ. ಅಭಿನವಪಂಪನು ರಾಮಚಂದ್ರಚರಿತ ಪುರಾಣದಲ್ಲಿ ಈ ಅರ್ಥದಲ್ಲೇ ಈ ಪದವನ್ನು ಪ್ರಯೋಗಿಸಿದ್ದಾನೆ. ಉಳಿದ ಕೆಲವು ಕಡೆಗಳಲ್ಲಿ

ಇದು 'ಪುಳಿನ'ದ ತದ್ಭವದಂತೆಯೆ ಪ್ರಯೋಗವಾಗಿದೆ. ಪಂಪಭಾರತದಲ್ಲಿ ಅರ್ಜುನ ದ್ವಾರಕೆಗೆ ಬಂದ ಸಂದರ್ಭದಲ್ಲಿ 'ಸೆಱಪುಗೆಯ್ದನನಂತಂ' ಎಂಬ ಮಾತು ಬರುತ್ತದೆ. 'ಸೆಱಪು' ಎಂಬ ಶಬ್ದ ಪ್ರಯೋಗವಾಗಿರುವುದು ಕನ್ನಡ ಸಾಹಿತ್ಯದಲ್ಲಿ ಇದೊಂದೇ ಕಡೆಯೆಂದು ತೋರುತ್ತದೆ. ನಿಘಂಟು ಕಾವ್ಯಪ್ರಯೋಗಗಳಿಂದ ಇದಕ್ಕೆ ಸರಿಯಾಗಿ ಅರ್ಥಮಾಡಲಾಗುವುದಿಲ್ಲ. ಜನಬಳಕೆಯ 'ಚೆಱಪು' ಎಂಬ ಮಾತಿಗೆ ರೂಢಿಯಲ್ಲಿರುವ (ನೆರೆದವರಿಗೆ ಹಂಚುವ 'ಪ್ರಸಾದ, ತಿಂಡಿ' ಎಂಬ) ಅರ್ಥ ಇಲ್ಲಿ ಹೊಂದುವುದಿಲ್ಲ. ತಮಿೞಿನಲ್ಲಿ 'ಶಿಱಪ್ಪು' ಎಂದರೆ 'ಮಹಿಮೆ, ಉತ್ಸವ' ಎಂದರ್ಥ. ಅರ್ಜುನ ಬಂದ ಸಂತೋಷಕ್ಕೆ ಕೃಷ್ಣ 'ಉತ್ಸವ ಮಾಡಿದನು' ಎಂದರೆ ಚೆನ್ನಾಗಿ ಹೊಂದುತ್ತದೆ. ಹೀಗೆ ಇಂಥ ಕಡೆಗಳಲ್ಲೆಲ್ಲ ಪದಗಳ ನಿಜವಾದ ಅರ್ಥವನ್ನು ಗೊತ್ತುಮಾಡಲು ತಮಿಳಿನ ಪರಿಚಯ ಪ್ರಯೋಜನವಾಗುತ್ತದೆ.

ಱ, ೞ ಗಳನ್ನು ತಮಿಳು ಹೆಚ್ಚು ಎಚ್ಚರಿಕೆಯಿಂದ ಉಳಿಸಿಕೊಂಡು ಬಂದಿದೆ. ಆದ್ದರಿಂದ ಸಂದೇಹವಾದ ಕಡೆ ಱ ರ, ೞ ಳಗಳಲ್ಲಿ ಯಾವುದು ಸರಿ ಎಂದು ನಿರ್ಧರಿಸಲು ತಮಿಳಿನಿಂದ ಕನ್ನಡಕ್ಕೆ ಬಹಳ ನೆರವು ದೊರೆಯುತ್ತದೆ.

ಸಾಮಾನ್ಯವಾಗಿ ತಮಿಳು ಪ್ರಾಚೀನರೂಪಗಳನ್ನು ಉಳಿಸಿಕೊಂಡಿರುವುದಾದರೂ ಕೆಲವುವೇಳೆ ಕನ್ನಡವೆ ಹಿಂದಿನ ರೂಪವನ್ನು ಉಳಿಸಿಕೊಂಡಿರುವುದು ಕಂಡುಬರುತ್ತದೆ. ಉದಾಹರಣೆಗೆ ಭಾಷಾಶಾಸ್ತ್ರದ ಪ್ರಕಾರ ಕವರ್ಗ ಚವರ್ಗಕ್ಕಿಂತ ಹಿಂದಿನದು. ಕಿಱಿದು, ಶಿಱಿದು; ಕೆದಱು, ಶಿದಱು; ಕೀ, ಶೀ; ಕೆಸಱು, ಶೇಱು— ಮೊದಲಾದ ಕಡೆಗಳಲ್ಲೆಲ್ಲ ಕನ್ನಡದಲ್ಲಿ ಹಿಂದಿನ ರೂಪ ಉಳಿದಿರುವುದೂ ತಮಿಳಿನಲ್ಲಿ ಕರ್ಕಶವರ್ಣ ಕೊಂಚ ಮೃದುವಾಗಿ ಮಾರ್ಪಟ್ಟಿರುವುದೂ ಸ್ಪಷ್ಟವಾಗಿದೆ. 'ಕೆಡು, ಕೊಡು' ಎಂಬ ತಮಿಳು ರೂಪಗಳಿಗಿಂತ 'ಕಿಡು, ಕುಡು' ಎಂಬ ಕನ್ನಡ ರೂಪಗಳೆ ಹಿಂದಿನವು. ಕನ್ನಡದಲ್ಲಿ 'ಅಗಿ' ಎಂದರೆ ಹಲ್ಲಿನಲ್ಲಿ ಅರೆದು ನುರಿಸು ಎಂದರ್ಥ. ತಮಿಳಿನ 'ಅಯಿಲ್'ಗೆ ಹಲ್ಲಿನಲ್ಲಿ ನುರಿಸು ಎಂಬ ಮೂಲ ಅರ್ಥ ಮರೆಯಾಗಿ ತಿನ್ನು ಎಂಬ ಅರ್ಥ ಬೆಳೆದುಬಂದಿದೆ.

ತಮಿಳು ಉಳಿದೆಲ್ಲ ಭಾಷೆಗಳಿಗಿಂತ ಹೆಚ್ಚಾಗಿ ಮೂಲದ್ರಾವಿಡದ ಲಕ್ಷಣಗಳನ್ನು ಉಳಿಸಿಕೊಂಡಿದೆಯೆಂದು ಹೇಳಬಹುದು. ತಮಿಳರು ಹೊರಗಿನ ಸಂಸ್ಕೃತಿ ಪ್ರಭಾವಗಳಿಗೆ ಒಳಗಾಗಬಾರದೆಂದು ಪಟ್ಟು ಹಿಡಿದು ಹೋರಾಡಿದಂತೆ ತೋರುತ್ತದೆ. ಆರ್ಯಸಂಸ್ಕೃತಿಯನ್ನು ಅಂಗೀಕರಿಸಿ ಅದರಿಂದ ಬಹುಮಟ್ಟಿಗೆ ಪ್ರಯೋಜನ ಪಡೆದಿರುವರಾದರೂ ತಾವು ತೆಗೆದುಕೊಂಡಿರುವುದನ್ನೆಲ್ಲ ತಮಗೆ ಹೊಂದುವಂತೆ ಮಾರ್ಪಡಿಸಿಕೊಂಡಿದ್ದಾರೆ. ಶಾಸ್ತ್ರಪರಿಭಾಷೆಯ ಮಾತುಗಳನ್ನೂ ಬಹುಮಟ್ಟಿಗೆ ತಮಿಳಿನಲ್ಲಿಯೆ ಕಲ್ಪಿಸಿಕೊಂಡಿದ್ದಾರೆ. ಯತ್ನವಿಲ್ಲದೆ ಸಂಸ್ಕೃತ ಮಾತನ್ನು ಬಳಸಿಕೊಳ್ಳಬೇಕಾಗಿಬಂದಾಗ ಅದನ್ನು ರೂಪಾಂತರಮಾಡಿಕೊಂಡಿದ್ದಾರೆಯೆ ಹೊರತು ಇದ್ದ ರೀತಿಯಲ್ಲೆ ಸಂಸ್ಕೃತವನ್ನು ಎತ್ತಿ ತೆಗೆದುಕೊಂಡಿಲ್ಲ. ಕನ್ನಡದಲ್ಲಿ ಹೀಗಿಲ್ಲ. ಸಂಸ್ಕೃತ ಮಾತುಗಳನ್ನು ಇದ್ದಂತೆಯೆ ಬಳಸಿಕೊಳ್ಳಲು ಕನ್ನಡಿಗರು ಅಳುಕಲಿಲ್ಲ. ಶಾಸ್ತ್ರಪರಿಭಾಷೆಗೆಲ್ಲ ಸಂಸ್ಕೃತವನ್ನೆ ಉಪಯೋಗಿಸಿಕೊಂಡಿದ್ದಾರೆ. ಇದು ಕನ್ನಡಕ್ಕೆ ಕುಂದೆಂದು ಹೇಳಲಾಗುವುದಿಲ್ಲ. ಹದವರಿತು ಸಂಸ್ಕೃತವನ್ನು ಬಳಸಿಕೊಂಡದ್ದರಿಂದ

ಕನ್ನಡ ಪುಷ್ಟಿಗೊಂಡು ಬೆಳೆಯಿತು. ಈ ಬಗೆಯ ಕನ್ನಡ ಸಂಸ್ಕೃತ ಮಿಶ್ರಣವನ್ನು 'ಕರ್ಪೂರಣೆಸರದೊಳ್ ಚೆಂಬವಳಮುಂ ಕೋದಂತೆ' ಎಂದು ಮೆಚ್ಚಿದ್ದಾರೆ. ಕಡೆ ಕಡೆಗೆ ಕನ್ನಡದಲ್ಲಿ ಸಂಸ್ಕೃತವನ್ನು ಅತಿಯಾಗಿ ಗಿಡಿಯುವುದನ್ನು ಕಂಡು ಸಹಿಸದೆ ಕೆಲವರು ಆ ಬೆರಕೆ 'ಮುತ್ತುಂ ಮೆಳಸುಂ ಕೋದಂತೆ' ಎಂದು ಬೇಸತ್ತು ನುಡಿದಿದ್ದಾರೆ.

ವ್ಯಾಕರಣ, ಛಂದಸ್ಸು, ಅಕ್ಷರ, ಸ್ವರ, ವ್ಯಂಜನ, ವಿಭಕ್ತಿ, ಸಂಧಿ, ಸಮಾಸ, ಧರ್ಮ, ಕರ್ಮ, ಭಕ್ತಿ, ಜ್ಞಾನ, ವೈರಾಗ್ಯ, ಅನುಗ್ರಹ, ಬಂಧ, ಮುಕ್ತಿ, ಮೋಕ್ಷ —ಮೊದಲಾದ ಸಂಸ್ಕೃತ ಮಾತುಗಳು ಕನ್ನಡ ಗ್ರಂಥಗಳಲ್ಲಿ ಧಾರಾಳವಾಗಿ ಪ್ರಯೋಗವಾಗುತ್ತವೆ. ತಮಿಳಿನಲ್ಲಾದರೊ ಯಾಪ್ಪು, ಎೞುತ್ತು, ಉಯಿರ್, ಮೆಯ್, ವೇಱ್ಱುಮೈ, ಪುಣರ್ಚಿ, ತೊಗೈ, ಅಱಂ, ವಿನೈ, ಅಱಿವು, ತುಱವು, ಅರುಳ್, ಕಟ್ಟು, ವೀಡು — ಮೊದಲಾದ ಅಚ್ಚ ದ್ರಾವಿಡ ಶಬ್ದಗಳೇ ಮೇಲಿಂದ ಮೇಲೆ ಕಾಣಬರುತ್ತವೆ. ಇಲಕ್ಕಣಂ, ತರುಮಂ, ಕರುಮಂ, ಪತ್ತಿ, ಞಾನಂ ಮೊದಲಾಗಿ ಮಾರ್ಪಟ್ಟ ರೂಪಗಳಲ್ಲಿ ಸಂಸ್ಕೃತ ಒಮ್ಮೊಮ್ಮೆ ತಲೆಹಾಕುತ್ತದೆ. ಸಂಘ ತಮಿಳಿನಲ್ಲಿ ಸಂಸ್ಕೃತವನ್ನು ಬಳಸಿದರೂ ಬಹು ಮಿತವಾಗಿ ಹಾಳಿತವಾಗಿ ಜನ ರೂಢಿಯ ಸುಲಭ ಪದಗಳನ್ನು ಮಾತ್ರವೆ ಬಳಸಿದ್ದಾರೆ. ಆ ತಮಿಳಿನಲ್ಲಿ ಸಂಸ್ಕೃತ ಶಬ್ದ ನೂರಕ್ಕೆ ಮೂರೊ ನಾಲ್ಕೊ ಇದ್ದರೆ ಹೆಚ್ಚು. ಈಚೆಗೆ ಸಂಸ್ಕೃತದ ಬೆರಕೆ ಸ್ವಲ್ಪ ಹೆಚ್ಚಾದ ಕಾಲದಲ್ಲಿಯೂ ಶ್ರೀ ಕುಲಶೇಖರಾಳ್ವಾರರು, ವೇದಾಂತದೇಶಿಕರು ಮೊದಲಾದ ಉದ್ದಾಮ ಸಂಸ್ಕೃತ ಪಂಡಿತರು ಕೂಡ ತಮಿಳಿನಲ್ಲಿ ಬರೆಯುವಾಗ ಸಂಸ್ಕೃತವನ್ನು ಅಷ್ಟಾಗಿ ಬೆರಸದೆ ಅಚ್ಚ ತಮಿಳನ್ನೆ ಬಳಸಿದ್ದಾರೆ.

ಕನ್ನಡಿಗರು ಸಂಸ್ಕೃತಕ್ಕೆ ಹೆಚ್ಚು ಮನಸೋತರೆಂದು ತೋರುತ್ತದೆ. ತಮಿಳರಂತೆ ಪಟ್ಟು ಹಿಡಿಯದೆ ಸಂಸ್ಕೃತವನ್ನು ಹೆಚ್ಚುಹೆಚ್ಚಾಗಿ ಬಳಸುತ್ತಬಂದರು; ಎಲ್ಲ ರೀತಿಯಲ್ಲೂ ಸಂಸ್ಕೃತವನ್ನು ಅನುಸರಿಸಹೊರಟರು. ಪಂಪನಂಥ ಒಬ್ಬಿಬ್ಬರು ಕನ್ನಡದ ಜೀವನಾಡಿಯ ಮಿಡಿತವನ್ನರಿತು ಅದಕ್ಕೆ ಬಲಗೊಡುವಷ್ಟು ಮಾತ್ರ ಸಂಸ್ಕೃತವನ್ನು ಹಿತವಾಗಿ ಮಿತವಾಗಿ ಬಳಸಿದರು. ಉಳಿದವರು ಸಂಸ್ಕೃತದ ವೈಭವಕ್ಕೆ ಬೆರಗಾಗಿ ಮನತೆತ್ತು ಕನ್ನಡಕ್ಕೆ ತಕ್ಕಷ್ಟು ಲಕ್ಷ್ಯಕೊಡದೆ ಕನ್ನಡದಲ್ಲಿ ಹೆಚ್ಚುಹೆಚ್ಚಾಗಿ ಸಂಸ್ಕೃತವನ್ನು ತುಂಬುತ್ತಬಂದರು. ಹೀಗಾಗಿ ಮೊದಮೊದಲು ಸಂಸ್ಕೃತದ ನೆರವಿನಿಂದ ಕನ್ನಡಕ್ಕೆ ಪುಷ್ಟಿ ಬಂದರೂ ಕಡೆಕಡೆಗೆ ಹೊರೆಯ ಭಾರದಲ್ಲಿ ಕನ್ನಡ ಬಗ್ಗಿ ಬಡವಾಯಿತು. ಅಚ್ಚ ಕನ್ನಡ ಮಾತುಗಳು ವಿದ್ವಾಂಸರ ಅನಾದರಕ್ಕೆ ಗುರಿಯಾಗಿ ಸಲುವಳಿ ತಪ್ಪಿ ಅಡಿಗೆಮನೆಯ ಮೂಲೆಯನ್ನು ಸೇರಬೇಕಾಯಿತು; ತಿಳಿದವರಿಂದ ಗ್ರಾಮ್ಯ ಎನ್ನಿಸಿಕೊಂಡು ಹಳ್ಳಿಗರನ್ನಾಶ್ರಯಿಸಿ ಬದುಕಬೇಕಾಯಿತು. ಕನ್ನಡದ ಛಂದಸ್ಸು ತನ್ನ ಹಿರಿಮೆಯನ್ನು ಕಳೆದುಕೊಂಡು ಬಡದಾಸರ, ಜೋಗಿಗಳ, ದನಕಾಯುವವರ ಮತ್ತು ರಾಗಿ ಬೀಸುವವರ ಹಾಡಿನಲ್ಲಿ ಹರಿಯಬೇಕಾಯಿತು. ಕನ್ನಡದ 'ರಗಳೆ' ಛಂದಸ್ಸಿನಲ್ಲಿ ಕಾವ್ಯ ಬರೆದ ಹರಿಹರ 'ರಗಳೆಯ ಕವಿ' ಎಂದು ಹಾಸ್ಯಕ್ಕೆ ಗುರಿಯಾಗಬೇಕಾಯಿತು. ಕೆಲಕೆಲವು ಕವಿಗಳು ಕನ್ನಡದ ಛಂದಸ್ಸು ಕಾವ್ಯಮಾರ್ಗಗಳನ್ನು ತಾವು ಕೈಬಿಟ್ಟದ್ದು ಮಾತ್ರವಲ್ಲದೆ 'ಇದೇಂ ಬೀದಿವಾತೆ,

ಒನಕೆಪಾಡೆ?' ಎಂದು ಕಡೆಗಣಿಸಿ ನಗುವವರೆಗೂ ಹೋದರು. ಇದೆಲ್ಲದರ ಫಲವಾಗಿ ನಿತ್ಯವ್ಯವಹಾರದ ಮಾತುಗಳಿಗೂ ಸಂಸ್ಕೃತ ಮಾತುಗಳೆ ಬಳಕೆಗೆ ಬಂದು ಕನ್ನಡ ಮಾತುಗಳು ಕೆಲವು ಪೂರ್ತಿಯಾಗಿ ಅಳಿದೇಹೋದವು; ಮತ್ತೆ ಕೆಲವು ಉಳಿದರೂ ಕೀಳುಗತಿಗಿಳಿದುಬಿಟ್ಟವು. ಹೀಗೆ 'ಕೂಳು' ಕೀಳಾಗಿ 'ಅನ್ನ' ಮೇಲಾಯಿತು. ಈಗ ನಮಗೆ 'ಅನ್ನ'ವಿಲ್ಲದೆ ಹೊಟ್ಟೆ ತುಂಬದು. 'ಸೂರ್ಯ ಚಂದ್ರರು' 'ನೇಸರು ತಿಂಗಳು'ಗಳನ್ನು ಮರಸಿಬಿಟ್ಟರು. 'ಹೊತ್ತುಹುಟ್ಟು'ವುದು 'ಸೂರ್ಯೋದಯ'ದಲ್ಲಿ ಮಂಕಾಗಿಹೋಯಿತು. 'ನಾಡು, ನುಡಿ, ದೊರೆ' ಮೊದಲಾದುವಕ್ಕೆ ಬದಲಾಗಿ 'ದೇಶ, ಭಾಷೆ, ರಾಜ' ಮೊದಲಾದುವೆ ಹೆಚ್ಚು ರೂಢಿಗೆ ಬಂದವು. ಅಪಭ್ರಂಶ 'ಸಂಜೆ', 'ಬೈಗ'ನ್ನು ಓಡಿಸಿತು. 'ರಾತ್ರಿ' ಬಂದು 'ಇರುಳು' ಹಳ್ಳಿಯನ್ನು ಸೇರಿ ಎಲ್ಲೋ ಕೆಲವು ಕಡೆ 'ಇಳ್ಳು' ಆಗಿ ಉಳಿಯಿತು. 'ದಿನ'ಕ್ಕೆ ಮಾತೇ ಉಳಿಯಲಿಲ್ಲ. 'ನಾಳ್' ಎಂಬ ಮಾತು 'ನಾಳೆ' ಎಂಬ ರೂಪದಲ್ಲಿ ಮಾತ್ರ ಉಳಿಯಿತು. ಕನ್ನಡದ 'ಉಸಿರ್' ಉಡುಗಿ 'ಪ್ರಾಣ' ನೆಲೆನಿಂತಿತು. ಹೀಗೆಯೆ ಇನ್ನೂ ಬೆಳಸುತ್ತಹೋಗಬಹುದು.

ಈಗ ಈ ಸ್ಥಿತಿ ಬದಲಾಯಿಸಿ ಒಳ್ಳೆಯ ಕಾಲ ಬರುತ್ತಿದೆ. ಗ್ರಾಮ್ಯವೆಂದು ಕಡೆಗಣಿಸಿದ್ದ ಅಚ್ಚಕನ್ನಡ ಮಾತುಗಳು ಮತ್ತೆ ಬಳಕೆಗೆ ಬರುತ್ತಿವೆ. ಜನಕ್ಕೆ ತಾಯ್ನುಡಿಯ ಮಮತೆ ಹೆಚ್ಚುತ್ತಿದೆ. ತಾಯ್ನುಡಿಯನ್ನು ಅಲಕ್ಷಿಸಿದ್ದು ತಪ್ಪೆಂಬ ಅರಿವು ಮೂಡುತ್ತಿದೆ. ಎಲ್ಲ ಬಗೆಯಿಂದಲೂ ಕನ್ನಡದ ಪುನರುಜ್ಜೀವನಕ್ಕೆ ಜನರು ಮನಸ್ಸು ತಿರುಗಿಸಿದ್ದಾರೆ. ಈ ಪುನರುಜ್ಜೀವನ ಕಾರ್ಯದಲ್ಲಿ ಕನ್ನಡದ ಸೋದರ ಭಾಷೆಗಳಿಂದ, ಮುಖ್ಯವಾಗಿ ತಮಿಳಿನಿಂದ, ಹೆಚ್ಚು ನೆರವು ದೊರೆಯುವುದೆಂದು ನಿರೀಕ್ಷಿಸಬಹುದು.

ಕನ್ನಡದಲ್ಲಿ ಈಗ ಬಳಕೆ ತಪ್ಪಿಹೋಗಿದ್ದರೂ ತಮಿಳಿನಲ್ಲಿ ಇನ್ನೂ ರೂಢಿಯಿರುವ 'ಅಱ (ಧರ್ಮ), ನೆಱಿ (ದಾರಿ, ಮಾರ್ಗ)' ಮೊದಲಾದ ಕೆಲವು ಮಾತುಗಳನ್ನು ಮತ್ತೆ ಬಳಕೆಗೆ ತರಬಹುದು. 'ತನಿ' ಎಂಬ ಮಾತು ಕನ್ನಡದಲ್ಲಿ ಈಗೀಗ 'ತನಿ ಕಚೇರಿ' ಎಂಬಲ್ಲಿ ರೂಢಿಗೆ ಬರುತ್ತಿದೆ. ಎಲ್ಲಕಡೆಯೂ ಈ ಮಾತನ್ನು ಬಳಸುತ್ತಬರಬಹುದೆಂದು ತೋರುತ್ತದೆ. ಹೀಗೆಯೆ ಕೃಪೆ, ಕರುಣೆ, ಅನುಗ್ರಹ ಎಂಬರ್ಥದ 'ಅರುಳ್', ಸುಲಭವಾಗಿ ಪಡೆಯಲಾಗದ, ಅನರ್ಘ ಎಂಬರ್ಥದ 'ಅರುಮೆ', ಸುಲಭ ಎಂಬರ್ಥದಲ್ಲಿ 'ಇಳಿದು', ಸಂಸ್ಕೃತ 'ಅರ್ಥ'ದ ಎಲ್ಲ ಅರ್ಥಗಳಲ್ಲಿಯೂ (ಹಣ, ಅಭಿಪ್ರಾಯ, ಪದಾರ್ಥ—ಎಂಬರ್ಥಗಳಲ್ಲೆಲ್ಲ) 'ಪುರುಳು'—ಮೊದಲಾದ ಪದಗಳನ್ನೂ 'ಇಲ್ಲಮೆ, ಕಲ್ಲಮೆ, ತಗುಮೆ' ಮೊದಲಾದ 'ಮೆ' ಪ್ರತ್ಯಯಾಂತವಾದ ಭಾವನಾಮಗಳನ್ನೂ ಕನ್ನಡದಲ್ಲಿ ಹೆಚ್ಚುಹೆಚ್ಚಾಗಿ ಬಳಸುತ್ತ ಬರುವುದರಿಂದ ಅನುಕೂಲವುಂಟೆಂದು ತೋರುತ್ತದೆ. ಮಾತುಗಳನ್ನು ಕೂಡಿಸುವಲ್ಲಿಯೂ 'ಹಳಮೆ ನಡೆ, ಮನೆಬಾಳ್ಕೆ, ತಣ್ಗರುಣೆ ಬೆಳ್ಗೊಡೆಯ ದೊರೆ' ಮೊದಲಾಗಿ ತಮಿಳು ಮಾದರಿಯನ್ನು ಗಮನದಲ್ಲಿಟ್ಟುಕೊಳ್ಳುವುದು ಕನ್ನಡದ ಮುನ್ನಡೆಗೆ ಸಹಾಯವಾಗುವುದೆಂದು ತೋರುತ್ತದೆ.

ಹಿಂದೆ ಕನ್ನಡ ಹಲವು ಭಾವಗಳನ್ನೂ ಮಾತುಗಳನ್ನೂ ಸಾಹಿತ್ಯರೂಪಗಳನೂ

ಸಂಸ್ಕೃತದಿಂದ ಪಡೆದು ಪುಷ್ಟಿಹೊಂದಿ ಬೆಳೆಯಿತು. ಮುಂದೆಯೂ ಸಂಸ್ಕೃತದಿಂದ ಸಾರ ಹೀರುವುದಕ್ಕೆ ಬೇಕಾದಷ್ಟು ಅವಕಾಶವಿದೆ. ಆದರೂ ಈಗಿನ ಸ್ಥಿತಿಯಲ್ಲಿ ಅದೊಂದೇ ಸಾಲದು. ಈಗ ಇತರ ಭಾಷಾ ಸಾಹಿತ್ಯಗಳ ಸಂಪರ್ಕವೂ ನಮಗುಂಟಾಗಿದೆ. ಅವುಗಳಿಂದಲೂ ನಾವು ಪ್ರಯೋಜನ ಪಡೆಯಬಹುದು; ಪಡೆಯಬೇಕು. ಹೀಗಿರುವಲ್ಲಿ ಕನ್ನಡದ ಸೋದರ ಭಾಷೆಯಾದ ತಮಿಳಿನ ನೆರವು ಕೋರುವುದರಲ್ಲಿ ಯಾವ ಅನೌಚಿತ್ಯವೂ ಇಲ್ಲ.

ರಾಮಾಯಣ, ಮಹಾಭಾರತ, ಮೊದಲಾದ ಹಲವಾರು ಗ್ರಂಥಗಳು ಸಂಸ್ಕೃತ ದಿಂದ ಎಲ್ಲ ದೇಶಭಾಷೆಗಳಿಗೂ ಇಳಿದುಬಂದಿರುವುದು ಸರಿಯಷ್ಟೆ. ಅವು ಕನ್ನಡಕ್ಕೆ ಬರುವಾಗ ಕೆಲವುವೇಳೆ ಮೂಲದಲ್ಲಿಲ್ಲದ ಸಂಗತಿಗಳೂ ಸೇರಿರುವುದುಂಟು. ಅಂಥ ಸಂಗತಿಗಳಿಗೆ ಸಂಸ್ಕೃತದಲ್ಲಿ ಆಕರ ದೊರೆಯದಾಗ ಇತರ ದ್ರಾವಿಡ ಭಾಷೆಗಳ ಸಾಹಿತ್ಯದಲ್ಲಿ ವಿವರಣೆ ದೊರೆತರೂ ದೊರೆಯಬಹುದು. ಇದಕ್ಕೆ 'ನೆತ್ತಮನಾಡಿ ಭಾನುಮತಿ ಸೋಲ್ತೊಡೆ' ಎಂಬ ಪಂಪ ಭಾರತದ ಪದ್ಯಕ್ಕೆ ಸಂವಾದಿಯಾಗಿ ತಮಿಳಿನ ವಿಲ್ಲಿ ಭಾರತದಲ್ಲಿ ಒಂದು ಪದ್ಯವಿದ್ದು ಸಂದೇಹಕ್ಕವಕಾಶವಿಲ್ಲದಂತೆ ವಿಷಯವನ್ನು ವಿವರಿಸುವ ವ್ಯಾಖ್ಯಾನ ಹಿಂದಿನಿಂದಲೂ ಬಂದಿರುವುದನ್ನು ನಿದರ್ಶನ ವಾಗಿ ಹೇಳಬಹುದು.

ಇದಲ್ಲದೆ, ತಮಿಳಿನಲ್ಲಿ 'ಶಿಲಪ್ಪದಿಗಾರಂ, ಮಣಿಮೇಗಲೈ' ಮೊದಲಾದ ಕೆಲವು ಸಾಹಿತ್ಯಕೃತಿಗಳಿವೆ. ಇವುಗಳ ಕಥೆ, ವರ್ಣನೆಯ ರೀತಿ, ಇವುಗಳಲ್ಲಿ ತೋರಿಬರುವ ಜನಜೀವನ, ಸಮಾಜಚಿತ್ರ—ಎಲ್ಲ ಸ್ವತಂತ್ರವಾದ್ದು. ಇವಕ್ಕೆ ಸಂಸ್ಕೃತದಲ್ಲಿ ಯಾವ ಆಕರವೂ ಇಲ್ಲ. ಇವು ಉತ್ತಮ ಕೃತಿಗಳೆಂದು ಹೆಸರುಪಡೆದಿವೆ. ಇಂಥ ಗ್ರಂಥಗಳ ಅಭ್ಯಾಸದಿಂದ, ಇವನ್ನು ಕನ್ನಡಕ್ಕೆ ತರುವುದರಿಂದ, ಪ್ರಯೋಜನವುಂಟು. ಕನ್ನಡದಲ್ಲಿ ಮೊತ್ತಮೊದಲು ಸಾಹಿತ್ಯನಿರ್ಮಾಣ ಮಾಡಿದವರು ಜೈನರು. ಬೌದ್ಧ ಸಾಹಿತ್ಯವೂ ಇದ್ದಿರಬೇಕೆಂದು ಕೆಲವರ ಊಹೆ. ತಮಿಳಿನಲ್ಲಿ ಬೌದ್ಧ ಸಾಹಿತ್ಯವೂ ಉಳಿದುಬಂದಿದೆ. ಕನ್ನಡದಲ್ಲಿ ಜೈನ, ವೀರಶೈವ, ಬ್ರಾಹ್ಮಣ ಸಾಹಿತ್ಯಗಳಿರುವಂತೆ ತಮಿಳಿನಲ್ಲಿ ಬೌದ್ಧ, ಜೈನ, ಶೈವ, ವೈಷ್ಣವ ಸಾಹಿತ್ಯಗಳಿವೆಯೆಂದು ಹೇಳಬಹುದು. ಸಾಹಿತ್ಯವನ್ನು ಕೂಡ ಭಾಷಾಶಾಸ್ತ್ರದಂತೆ ಹೋಲಿಸಿನೋಡಿ ಅಭ್ಯಾಸಮಾಡಲು ಇಲ್ಲಿ ಹೆಚ್ಚು ಅವಕಾಶವುಂಟು. ತಮಿಳಿನಲ್ಲಿ ಶೈವ, ವೈಷ್ಣವ ಭಕ್ತಿಸಾಹಿತ್ಯ ಹೇರಳ ವಾಗಿದೆ. ಕನ್ನಡದ ಹರಿದಾಸರ ಹಾಡುಗಳು ಮತ್ತು ವೀರಶೈವ ವಚನಗಳೊಡನೆ ಅದನ್ನು ಹೋಲಿಸಬಹುದು. ತಮಿಳಿನ ಶೈವ ಮತವನ್ನೂ ಕನ್ನಡದ ವೀರಶೈವ ಮತ ವನ್ನೂ ತುಲನಾತ್ಮಕದೃಷ್ಟಿಯಿಂದ ಅಭ್ಯಾಸಮಾಡುವುದಕ್ಕೆ ತುಂಬ ಅವಕಾಶವಿದೆ. ಹರಿಹರ ಕವಿ 'ಅರುವತ್ತುಮೂವರು ಪುರಾತನರ ಕಥೆ'ಗಳನ್ನು ತಮಿಳಿನಿಂದ ಕನ್ನಡಕ್ಕೆ ತಂದು, ಕನ್ನಡ ತಮಿಳು ಸಾಹಿತ್ಯಗಳಿಗೆ ಬಿಚ್ಚಿಹೋಗದಂತೆ ಗಂಟುಹಾಕಿದ್ದಾನೆ; ಮಧುರಬಾಂಧವ್ಯವನ್ನುಂಟುಮಾಡಿದ್ದಾನೆ. (ಅವನು 'ರಗಳೆ' ಛಂದಸ್ಸನ್ನು ಸಮಗ್ರಕಾವ್ಯಕ್ಕೆ ಬಳಸಿಕೊಂಡದ್ದು ತಮಿಳು ಕಾವ್ಯಗಳಲ್ಲಿ ವಿಶೇಷವಾಗಿ ಬಳಸಿರುವ 'ಅಹವಜ್ಪಾ' ಛಂದಸ್ಸಿನ ಪ್ರಭಾವದಿಂದಿದ್ದರೂ ಇರಬಹುದು.) ವ್ಯಾಕರಣ ಭಾಷಾಶಾಸ್ತ್ರಗಳ ಗೋಜಿಗೆ ಹೋಗದೆ ಕೇವಲ ಸಾಹಿತ್ಯ ಸುಖವನ್ನು ಅರಸುವವರಿಗೂ

ತಮಿಳು ಸಂತೋಷ ಕೊಡಬಲ್ಲದು. ಆ ಸಾಹಿತ್ಯದ ಸವಿ ಕನ್ನಡಿಗರಿಗೆ ದೊರೆಯ ಬೇಡವೆ?

ಮೇಲೆ ವಿವರಿಸಿರುವಂತೆ ಕನ್ನಡ ತಮಿಳುಗಳಿಗೆ ಇಷ್ಟುಮಟ್ಟಿನ ಹೋಲಿಕೆ ಇರುವುದನ್ನು ಕಂಡು 'ಕನ್ನಡ ತಮಿಳಿನಿಂದ ಹುಟ್ಟಿತು' ಎಂದು ದುಡುಕಿ ಹೇಳುವವರೂ ಇದ್ದಾರೆ. ದ್ರಾವಿಡ ಭಾಷಾಶಾಸ್ತ್ರ ವಿಷಯದಲ್ಲಿ ಮೊದ ಮೊದಲು ಬರೆದ ಕಾಲ್ಡ್‌ವೆಲ್ ಮುಂತಾದವರು ತಮಿಳನ್ನು ಚೆನ್ನಾಗಿ ಬಲ್ಲವರಾಗಿದ್ದು ಕನ್ನಡ ವನ್ನು ಅಷ್ಟಾಗಿ ತಿಳಿದಿರಲಿಲ್ಲವಾದ್ದರಿಂದಲೂ ತಮಿಳಿನಲ್ಲಿ ಮೂಲದ್ರಾವಿಡದ ಲಕ್ಷಣ ಗಳು ಹೆಚ್ಚಾಗಿ ಉಳಿದಿರುವುದರಿಂದಲೂ ಭಾಷಾಶಾಸ್ತ್ರ ಗ್ರಂಥಗಳಲ್ಲಿ ತಮಿಳಿನ ಮಾತೇ ಹೆಚ್ಚಾಗಿ ಕಂಡುಬರುತ್ತಿದೆ. ಇದರಿಂದ 'ತಮಿಳೇ ದ್ರಾವಿಡ ನುಡಿಗಳ ತಾಯಿ' ಎಂಬ ಭ್ರಮೆ ಬಂದಿರಬಹುದು. ದ್ರಾವಿಡ ಭಾಷೆಗಳಲ್ಲಿ ಭಾಷಾಶಾಸ್ತ್ರದ ಪ್ರಕಾರ ಏಳುವ ಪ್ರಶ್ನೆಗಳಿಗೆಲ್ಲ ತಮಿಳೊಂದರ ಸಹಾಯದಿಂದಲೆ ಉತ್ತರ ಹೇಳಲಾಗುವುದಿಲ್ಲ. ಅದಕ್ಕೆ ಆ ವರ್ಗದ ಎಲ್ಲ ಮುಖ್ಯ ಭಾಷೆಗಳ ಅರಿವೂ ಅತ್ಯಗತ್ಯ. ಒಂದೊಂದು ಭಾಷೆಯ ಆಧಾರದಮೇಲೆಯೇ ವಿಮರ್ಶಿಸ ಹೊರಟರೆ ಹಲವು ಅಪಸಿದ್ಧಾಂತಗಳು ಹುಟ್ಟುವುದರಲ್ಲಿ ಸಂಶಯವಿಲ್ಲ. ಕೆಲವು ವಿಷಯ ಗಳನ್ನು ಕನ್ನಡದ ನೆರವಿನಿಂದ ಚೆನ್ನಾಗಿ, ತಿಳಿಯಾಗಿ, ವಿವರಿಸಬಹುದೆಂದೂ ತಮಿಳು ವಿದ್ವಾಂಸರೂ ಕನ್ನಡ ಕಲಿಯುವುದರಿಂದ ಬಹಳ ಪ್ರಯೋಜನವುಂಟೆಂದೂ ತಿಳಿದವರು ಹೇಳುತ್ತಾರೆ.

ಕನ್ನಡ ತಮಿಳುಗಳ ನಂಟು ಇಷ್ಟು ಹತ್ತಿರವಾಗಿರುವಾಗ ಕನ್ನಡಿಗರು ತಮಿಳನ್ನೂ ತಮಿಳರು ಕನ್ನಡವನ್ನೂ ಕಲಿಯುವುದರಿಂದ ಪ್ರಯೋಜನವುಂಟೆಂಬುದು ಸ್ಪಷ್ಟವಾಗಿಯೆ ಇದೆ.

ಎಲ್. ಗುಂಡಪ್ಪ



# ಹಳೆಯ ತಮಿಳು ಸಾಹಿತ್ಯ

ತಮಿಳು ಮಕ್ಕಳು ಯಾರು, ಅವರು ಮೊದಲು ಎಲ್ಲಿದ್ದವರು, ತಮಿಳರ ನಾಗರಿಕತೆ ಯಾರ ನಾಗರಿಕತೆಯನ್ನು ಹೋಲುವುದು, ಅವರ ಸಂಸ್ಕೃತಿ ಯಾವ ಸಂಸ್ಕೃತಿಗೆ ಸೇರಿದುದು, ತಮಿಳು ಯಾವ ನುಡಿಗಳಿಗೆ ನಂಟು — ಇಂತಹ ವಿಷಯ ಗಳನ್ನು ಕುರಿತು ಕೆಲವು ಕಾಲದಿಂದ ವಿದ್ವಾಂಸರು ವಿಮರ್ಶೆ ಮಾಡುತ್ತಿರುವರು. ಜನಸಾಮಾನ್ಯವೂ ಈ ವಿಷಯಗಳಲ್ಲಿ ಹಿಂದಕ್ಕಿಂತ ಈಗ ಹೆಚ್ಚಾದ ಆಸಕ್ತಿಯನ್ನು ತೋರಿಸುತ್ತಿದೆ. ಈ ಸಮಸ್ಯೆಗಳನ್ನು ವಿಜ್ಞಾನ, ಚರಿತ್ರೆ, ಸಾಹಿತ್ಯ, ಭಾಷಾತತ್ತ್ವ, ಜನದ ನಡವಳಿ ಮುಂತಾದ ಹಲವು ರೀತಿಗಳಿಂದ ನೋಡುತ್ತಾರೆ. ಮುರಿದು ಚೆದರಿರುವ ಸಣ್ಣಸಣ್ಣ ಬೆಳಕಿನ ಕದಿರುಗಳನ್ನು ಒಮ್ಮೊಗಗೊಳಿಸಿ ವಿಷಯಗಳನ್ನು ಪರಿ ಶೀಲಿಸುವ ಇಂತಹ ಕಾರ್ಯಗಳಲ್ಲಿ ಹೊಸ ಬೆಳಕು ಬಂದಾಗಲೆಲ್ಲ ನಮ್ಮ ತೀರ್ಮಾನ ಗಳು ಮಾರುತ್ತಬರುತ್ತವೆ. ತಮಿಳರ ಸಂಬಂಧವಾಗಿ ಇತ್ತೀಚೆಗೆ ಶಾಸ್ತ್ರಜ್ಞರು ಕೊಂಡಿರುವ ಅಭಿಪ್ರಾಯಗಳು ತಮಿಳರೇ ತಮ್ಮನ್ನು ಕುರಿತು ಪೂರ್ವದಿಂದ ಹೇಳಿ ಕೊಂಡಿರುವುದಕ್ಕೆ ಹೆಚ್ಚು ಹೆಚ್ಚಿನ ಪಾಲು ಹೋಲುತ್ತಬರುತ್ತವೆ.

ತಮಿಳರು ತಾವು ಬೇರೊಂದು ಕಡೆಯಿಂದ ಇಲ್ಲಿಗೆ ಬಂದು ನೆಲಸಿದಂತೆ ಎಲ್ಲಿಯೂ ಹೇಳಿಲ್ಲ. ತಾವು ಕಲ್ಲು ತೋರಿ ಮಣ್ಣು ತೋರದ ಮುನ್ನ ತೋರಿದ ಮುದುಕುಲದವರು ಎನ್ನುತ್ತಾರೆ. ತಮ್ಮ ಅರಸರಾದ ಚೇರ ಚೋಳ ಪಾಂಡ್ಯರು ಸೃಷ್ಟಿಕಾಲದಿಂದಲೇ ತಮಿಳು ನಾಡಿನಲ್ಲಿ ನೆಲಸಿ ಆಳುತ್ತಿದ್ದವರೆಂದು ಹೇಳು ತ್ತಿದ್ದಾರೆ. ತಮಿಳಗಂ — ಅವರು ತಮ್ಮ ನಾಡಿಗೆ ಕೊಡುವ ಹೆಸರು ಇದು — ಈಗ ಇರುವುದಕ್ಕಿಂತ ವಿಸ್ತಾರವಾಗಿತ್ತು. ಈಗ ಕನ್ಯಾಕುಮಾರಿಯಲ್ಲಿ ಸಮುದ್ರವಿದೆ. ಹಿಂದೆ ಅಲ್ಲಿ ಒಂದು ನದಿ ಹರಿಯುತ್ತಿತ್ತು. ಅದಕ್ಕೆ ಕುಮರಿ ಆಱು (ನದಿ) ಎಂದು ಹೆಸರು. ಕುಮರಿಗೆ ತೆಂಕಣದಲ್ಲಿ ಹರಡಿದ್ದ ನಾಡಿನಲ್ಲಿ ಪಹ್ರುಳಿ ಎಂಬ ಇನ್ನೊಂದು ನದಿ ಹರಿಯುತ್ತಿತ್ತು. ಈ ದೊಡ್ಡ ಭಾಗವೆಲ್ಲ ಪಾಂಡಿಯನಿಗೆ ಸೇರಿತ್ತು. ಒಂದು ಕಾಲದಲ್ಲಿ ಸಮುದ್ರ ಉಕ್ಕಿಬಂದು ಈ ಪ್ರದೇಶವನ್ನೆಲ್ಲ ಆಕ್ರಮಿಸಿಕೊಂಡಿತು ಎಂದು ಮುಂತಾಗಿ ಮರುಕದಿಂದ ಹೇಳಿರುತ್ತಾರೆ.

ತಮಿಳರು ಪೂರ್ವದಿಂದ ತಮಿಳು ನಾಡಿನಲ್ಲೇ ಇದ್ದವರು, ತಮಿಳಗಂ ಕನ್ಯಾ ಕುಮಾರಿಗೆ ತೆಂಕಣ ಕಡೆ ಹರಡಿತ್ತು ಎಂಬ ಈ ಅಂಶಗಳಿಗೆ ನವೀನ ವಿಮರ್ಶಕರ ಒಪ್ಪಿಗೆ ಇರುವಂತೆ ಕಾಣುತ್ತದೆ. ತಮಿಳರು ಬಹಳ ಹಿಂದಿನ ಕಾಲದಲ್ಲೇ ಮೇಲಾದ ಒಂದು ನಾಗರಿಕತೆಯನ್ನು ಪಡೆದಿದ್ದರೆಂದೂ ಅವರ ಸಂಸ್ಕೃತಿ ನಾನಾ ದಿಕ್ಕುಗಳಲ್ಲಿ ಬಹುದೂರ ಹರಡಿತ್ತೆಂದೂ ಕಂಡುಬರುತ್ತದೆ. ತಮಿಳು ಭಾಷೆಯನ್ನು ಕುರಿತು ಅದು ಲೋಕದ ಅತ್ಯುತ್ತಮ ಭಾಷೆಗಳಲ್ಲಿ ಒಂದು ಎಂದೂ, ಬಹಳ ಹಿಂದಿನ ಕಾಲದಲ್ಲೇ ಒಳ್ಳೆಯ ಸಂಸ್ಕೃತಿಯನ್ನು ಹೊಂದಿತ್ತು ಎಂದೂ, ಈ ಭಾಷೆಯನ್ನು ಹೋಲುವ ನುಡಿಗಳ ಗುರುತು ದೂರ ಪ್ರದೇಶಗಳಲ್ಲಿಯೂ ಕಾಣುತ್ತದೆ ಎಂದೂ ವಿದ್ವಾಂಸರು ಒಮ್ಮತದಿಂದ ಸಮ್ಮತಿಸುತ್ತಾರೆ. ಈಗ ನಮ್ಮ ಕೈಗೆ ಬಂದಿರುವ

ಹಳೆಯ ತಮಿಳು ಗ್ರಂಥಗಳು ಅವರ ಸಮ್ಮತಕ್ಕೆ ಸಾಕ್ಷಿಗಳಾಗಿ ನಿಂತಿವೆ. ನಮಗೆ ದೊರೆತಿರುವ ಪ್ರಾಚೀನ ತಮಿಳು ಸಾಹಿತ್ಯದ ಪ್ರೌಢ ಲಕ್ಷಣಗಳನ್ನು ನೋಡಿದರೆ ತಮಿಳು ಆ ಕಾಲಕ್ಕಿಂತ ಒಂದೆಯೋ ಹಲವು ಶತಮಾನಗಳ ಕಾಲ ಬೆಳೆದುಬಂದಿರ ಬೇಕು ಎಂದು ಕಾಣುವುದು.

ಮಾನ, ವೀರ, ಔದಾರ್ಯ, ಕರ್ತವ್ಯ, ಮನೆಮಕ್ಕಳ ಒಲುಮೆ, ಇಂಥವು ಹಳೆಯ ತಮಿಳರ ಬಾಳ್ಕೆಯ ಗುರಿಗಳಾಗಿದ್ದುವು. ಇವೇ ಅವರ ಗೀತಗಳನ್ನು ಹೊರಡಿಸುವ ಶಕ್ತಿಗಳು; ಅವರ ಹಾಡುಗಳ ಉಸಿರು. ಅವರು ನಮಗೆ ಇಟ್ಟು ಹೋಗಿರುವ ಪದ್ಯ ಭಂಡಾರದಲ್ಲಿ ತೋರುವುದು ಬರಿಯ ನೀರುಗುಳ್ಳೆಯ ಮೇಲೆ ವಿಹರಿಸುವ ಬಣ್ಣಗಳಂಥ ಹಗುರ ಭಾವನೆಗಳ ವ್ಯರ್ಥವಾದ ಹೊಳಪಲ್ಲ. ಮಾನವನ ಕಷ್ಟಗಳನ್ನೂ ಸಿದ್ಧಿಗಳನ್ನೂ ಅಂಜಿಕೆಯನ್ನೂ ನಂಬಿಕೆಯನ್ನೂ ಉನ್ನತ ಯೋಚನೆಯನ್ನೂ ಅಗಾಧ ಅನುಭವವನ್ನೂ ಬೆಳಗಿಸುವ ಸದ್ಭಾವ ಘನಮಣಿಗಳ ಸ್ಥಿರವಾದ ಕಾಂತಿ. ತಮಿಳು ನಾಡು ಎಷ್ಟೋ ಮಾರ್ಪಾಡುಗಳನ್ನು ಹೊಂದಿದೆ. ಹಳೆಯ ತಮಿಳರಿಗೆ ತಿಳಿದಿದ್ದ ನಾಡು ನಗರಗಳು, ಬೆಟ್ಟ ಗುಡ್ಡಗಳು, ಹೊಳೆ ತೊರೆಗಳು ಸಹ ಸಮುದ್ರದ ಪಾಲಾಗಿವೆ. ತಮಿಳು ಗಿಡಗಳು ಬೆಳೆದಿದ್ದ ಕಡೆಗಳಲ್ಲಿ ಹವಳದ ಬಳ್ಳಿಗಳು ಹಬ್ಬಿವೆ. ಉತ್ಸವದ ಘೋಷ ತುಂಬಿದ್ದ ಮುದಿಯೂರ ಬೀದಿಗಳಲ್ಲಿ ನಡುಗಡಲಿನ ಗಾಢ ಮೌನವು ನೆಲಸಿದೆ. ಆದರೂ ಈ ಹಳೆಯ ಮಾನವ ಗುಂಪು ಯಾವ ನೆನಪನ್ನು ನೆನಸಿತೊ ಯಾವ ಕನಸನ್ನು ಕಂಡಿತೊ ಆ ನೆನಸೂ ಕನಸೂ ನಾವು ಅರಿಯಲು ಸ್ವಲ್ಪ ಸಾಧ್ಯವಾಗಿದೆ. ಆ ಕಾಲದಲ್ಲಿ ಕೇಳಿದವರ ಕಿವಿಯಲ್ಲಿ ಈ ಗೀತೆಗಳು ಯಾವ ಅಮೃತವನ್ನು ಹುಯ್ದುವೋ, ಕಣ್ಣಲ್ಲಿ ಯಾವ ಬಯಕೆಯನ್ನು ತುಂಬಿದುವೋ, ಮೈಯಲ್ಲಿ ಯಾವ ನವಿರನ್ನು ಏರಿಸಿದುವೋ ಅದೇ ತೆರದಲ್ಲಿ ಈಗ ಕೇಳುವ ತಮಿಳನಿಗೂ ಹುಯ್ಯುತ್ತವೆ, ತುಂಬುತ್ತವೆ, ನವಿರೇರಿಸುತ್ತವೆ. ಮತ್ತೆ ಅಂದಿಲ್ಲದ ಒಂದು ಶೋಕದ ಸುಯ್ಯನ್ನೂ ತರುತ್ತವೆ.

ಹಿಂದಿನ ಕಾಲದಲ್ಲಿ ಓಲಗದ ಮಂಟಪಗಳಲ್ಲೂ ಔತಣದ ಶಾಲೆಗಳಲ್ಲೂ ಘೋರ ಯುದ್ಧದ ರಂಗಗಳಲ್ಲೂ ನಗುವ ಶಾಲಿಯ ಗದ್ದೆಗಳಲ್ಲೂ ಬೆಟ್ಟದ ಕಾನುಗಳಲ್ಲೂ ಸಮುದ್ರದ ತೀರಗಳಲ್ಲೂ ಮಂಗಲವಾದ್ಯದ ಮನೆಗಳಲ್ಲೂ ಗೂಬೆಯ ಅರಚಿನ ಸುಡುಗಾಡುಗಳಲ್ಲೂ ಹಾಡಿದ ಹಾಡುಗಳು ಪತ್ತುಪ್ಪಾಟ್ಟು, ಎಟ್ಟುತ್ತೊಗೈ, ಪದಿನೆಣ್ ಕೀೞ್ಕಣಕ್ಕು, ಎಂಬ ಹತ್ತು ಹಾಡುಗಳು, ಎಂಟು ಸಂಗ್ರಹಗಳು, ಹದಿನೆಂಟು ಸಣ್ಣ ಗ್ರಂಥಗಳು ಆಗಿ ನಮಗೆ ಬಂದಿವೆ. ಈ ಪದ್ಯಗಳು ತಮಿಳು ನಾಗರಿಕತೆಯನ್ನು ಚೆನ್ನಾಗಿ ತಿಳಿಸುತ್ತವೆ. ಆ ಕಾಲದಲ್ಲಿ ವೀರಕ್ಕೆ ಅತ್ಯಂತ ಪೂಜ್ಯತೆ ಇತ್ತು. ಬಿಡದೆ ಪ್ರಯತ್ನ ಮಾಡುವುದರಿಂದ ಅರಿದಾದ ಕಾರ್ಯವನ್ನು ಸಾಧಿಸುವುದು, ಜಯವನ್ನು ಹೊಂದುವುದು, ಕೀರ್ತಿಯನ್ನು ಗಳಿಸುವುದು — ಇಂಥ ಸಾಹಸವನ್ನು ಜನವು ಕೊಂಡಾಡಿತು. ಕೀರ್ತಿಯ ಆಸೆ ಸಾಹಸಕ್ಕೂ ಧೈರ್ಯಕ್ಕೂ ಒಳ್ಳೆಯ ನಡತೆಗೂ ಕಾರಣವಾಗಿತ್ತು. ಇಹದಲ್ಲಿ ಯಾವನು ಕೀರ್ತಿಯನ್ನು ನೆಲಸಿ ಕವಿಗಳ ಸ್ತುತಿಗೆ ಪಾತ್ರನಾಗುವನೋ ಅವನು ಪರದಲ್ಲಿ ಅಮರನಾಗಿ ನೆಲಸುವನು ಎಂದು ಹಿಂದಿನವರು ನಂಬಿದ್ದರು.

ಔದಾರ್ಯ ಆಶ್ಚರ್ಯರೀತಿಯಲ್ಲಿ ಕೆಲವು ವೇಳೆ ನಡೆಯಿತು. ಕೊಡುಗೆಯ ಮಿತಿ ಕೊಡುವವನ ಜೀವವನ್ನೂ ದಾಟಿತ್ತು. ಆ ಕಾಲದ ಅರಸರೂ ವೀರರೂ ತಮ್ಮ ಜೀವವನ್ನು ಕೊಟ್ಟಾದರೂ ತಮ್ಮನ್ನು ನೆಚ್ಚಿದವರನ್ನು ಕಾಪಾಡುವುದು ತಮ ಕರ್ತವ್ಯ ಎಂದು ಎಣಿಸಿದ್ದರು.

"ಮೆಲ್ಲನೆ ಬಂದು ಎನ್ನ ನಲ್ಲಡಿ ಪೊರ್ದಿ 'ಈ' ಎಂದು ಎರೆವರಾದೊಡೆ ಸಿರಿಯ, ಮುರಜದ, ಹಳೆಯ ದಾಯದ ಎನ್ನ ಅರಸುತನವೇನ್ ಮೊಡ್ಡದೆ? ನನ್ನ ಇನಿ ಉಸಿರನಾದೊಡಂ ಕೊಡುವೆನ್. ಈ ನೆಲದೊಳ್ ತಾನ್ ಬಲ್ಲಿದನೆಂದು ತನ್ನ ಆರ್ಪನ್ ಓವದೆ ಎನ್ನ ಮನವನ್ ಜರೆವ ಅರಿವಿಲ್ಲದವನ್ ಮುಲಗಿರ್ಪ ಪುಲಿಯನ್ ಎಡಹಿದ ಕುರುಡನಂತೆ ಬದುಕಿ ಪೋಗುವುದರಿದು. ಬಿದಿರುಣ್ಣುವ ಬಲಿತ ಆನೆಯ ಕಾಲಿಗೆ ಸಿಕ್ಕಿದ ದಟ್ಟ ನಿಡುವೊಳಕೆಯಂತೆ ಅವನ್ ನೊಂದಳಿಯೆ ಹೋರುವೆನ್. ಅಲ್ಲೆನಾದೊಡೆ ಒಲ್ಮೆಯಿಲ್ಲದ ಕೆಟ್ಟ ಎದೆಯ ಸಾಮಾನ್ಯೆಯರ ಕೂಟದಲ್ಲಿ ಬಾಡಲಿ ಎನ್ನ ಮಾಲೆ"

ಎಂಬುದು ಒಬ್ಬ ಚೋಳ ಅರಸನ ಪ್ರತಿಜ್ಞೆ.

ಕೊನೆಯಲ್ಲಿ ಹೇಳಿರುವ ಮಾತಿನಿಂದ ಹಳೆಯ ತಮಿಳರಿಗೆ ಸುಶೀಲತೆಯ ಮೇಲಿದ್ದ ಗೌರವವು ಗೊತ್ತಾಗುತ್ತದೆ. ಇದು ತಿರುಕ್ಕುಱಳಿನಲ್ಲಿ ಹೇಳಿರುವ ಧರ್ಮಕ್ಕೆ ಒಪ್ಪಾಗಿರುತ್ತದೆ. ಪತ್ನಿಯಲ್ಲಿ (ಬಾಳ್ಕೆ ನೆರವು) ಇದ್ದ ಪ್ರೀತಿಗೆ ಎರಡ ನೆಯದಾಗಿ ಹಳೆಯ ತಮಿಳರು ತಮ್ಮ ಸ್ನೇಹಿತರಲ್ಲಿ ಇಟ್ಟಿದ್ದ ಪ್ರೀತಿಯು ಬರುತ್ತದೆ. ಪಿಸಿರ್ ಆಂದೈಯಾರ್ ಎಂಬ ಕವಿಗಳಿಗೂ ಕೋ ಪೆರುಂಚೋಳನ್ ಎಂಬ ಅರಸ ನಿಗೂ ಇದ್ದ ಸ್ನೇಹದ ಹಿರಿಮೆ ಪುಱನಾನೂಱು ಎಂಬ ಪದ್ಯ ಸಂಗ್ರಹದಲ್ಲಿ ಚೆನ್ನಾಗಿ ವಿವರಿಸಿದೆ.

ನಾನೂರು ಪದ್ಯಗಳನ್ನೊಳಗೊಂಡ ಪುಱನಾನೂಱು ತಮಿಳರ ಪುರಾತನ ನೆಲೆ ಯನ್ನೂ ಚರಿತ್ರೆಯನ್ನೂ ನಾಗರಿಕತೆಯನ್ನೂ ತಿಳಿಯುವುದಕ್ಕೆ ಸಹಾಯವಾಗುವ ಒಂದು ಭಂಡಾರವಾಗಿದೆ. ಈ ದೇಶವನ್ನು ಆಳುತ್ತಿದ್ದ ಕಿರೀಟಧಾರಿಗಳಾದ ಚೇರ ಚೋಳ ಪಾಂಡ್ಯರು, ಸಾಮಂತರಾಜರು, ವೀರರು, ಮಹಾದಾನಿಗಳು, ಕವಿಗಳು— ಇವರನ್ನೆಲ್ಲ ಕುರಿತು ಪದ್ಯಗಳು ಇದರಲ್ಲಿವೆ. ಮುಖ್ಯವಾಗಿ ವೀರವನ್ನೂ ಶಕ್ತಿ ಯನ್ನೂ ಪ್ರಯತ್ನವನ್ನೂ ಸಾಮಾಜಿಕ ಬಾಳ್ವೆಯನ್ನೂ ದಾನವನ್ನೂ ಕಾಯಕ ವನ್ನೂ ಇಲ್ಲಿ ಕಾಣಬಹುದು. ಪರಿಪಾಡಲ್ ವಿಷ್ಣು, ಸುಬ್ರಹ್ಮಣ್ಯ, ಮದುರೆ, ಅದರ ಹತ್ತಿರ ಹರಿಯುವ ವೈಯೈನದಿ ಈ ವಿಷಯಗಳನ್ನು ಕುರಿತ ಸ್ತೋತ್ರ ಹಾಡು ಗಳುಳ್ಳದ್ದು. ಇದರ ಎಪ್ಪತ್ತು ಹಾಡುಗಳಲ್ಲಿ ಈಗ ದೊರೆತಿರುವುದು ಇಪ್ಪತ್ತು. ನೂರ ಐವತ್ತು ಹಾಡುಗಳುಳ್ಳ ಕಲಿತ್ತೊಗೈ, ಅಗನಾನೂಱು (೪೦೧), ನಟ್ರಿಣೈ (ನಱ್ಱಿಣೈ ೪೦೧), ಐಂಕುಱು ನೂಱು (೫೦೧), ಕುಱುಂತೊಗೈ (೪೦೨), ಇವೆಲ್ಲವೂ ಪ್ರೇಮಗೀತಗಳನ್ನು ಒಳಗೊಂಡಿವೆ. ಪ್ರೇಮ ವಿಷಯವನ್ನು ತಮಿಳರು ಅಗಪ್ಪೊ ರುಳ್ ಎನ್ನುತ್ತಾರೆ. ಇತರ ಎಲ್ಲ ಸಂಗತಿಗಳೂ ಪುಱಂ ಅಥವಾ ಪುಱಪ್ಪೊರುಳ್. ಪದಿಟ್ರು(ಱ್ಱು)ಪ್ಪತ್ತು (ಹತ್ತು ಹತ್ತುಗಳು; ಈಗ ನಮಗೆ ದೊರೆತಿರುವುದು ಎಂಟು ಹತ್ತುಗಳು ಮಾತ್ರ) ಚೇರರಾಜರ ವಿಷಯವಾದುದು. ಈ ಎಂಟು

ತೊಗೈಗಳಲ್ಲೂ ಸುಮಾರು ೨,೩೫೨ ಹಾಡುಗಳಿವೆ. ಇವು ೫೩೫ ಕವಿಗಳು ಹಾಡಿದ್ದು. ಆದರೆ ಕೆಲವು ಕವಿಗಳಿಗೆ ಬೇರೆ ಬೇರೆ ಹೆಸರುಗಳು ಇರುವುದರಿಂದ ಹಳೆಯ ಕಾಲದಿಂದ ಪರಂಪರೆಯಲ್ಲಿ ಹೇಳಿಬರುವ ೪೯ ಕವಿಗಳು ಕಡೆಯ ಸಂಘದಲ್ಲಿ ಇದ್ದರು ಎನ್ನುವ ಸುದ್ದಿ ನಿಜವಾಗಿಯೇ ಕಾಣುತ್ತದೆ.

ಮಧುರೆಯಲ್ಲಿದ್ದ ಕಡೆಯ ಸಂಘವು ೧೮೫೦ ವರ್ಷಗಳಿತ್ತು ಎಂದೂ ೪೯ ಪಾಂಡಿಯರ ಆಳಿಕೆಯ ಕಾಲ ಅದು ನಡೆಯಿತು ಎಂದೂ ೪೯ ಕವಿಗಳ ಹಾಡುಗಳನ್ನು ಆ ಸಂಘವು ಅಂಗೀಕರಿಸಿತ್ತು ಎಂದೂ ತಮಿಳು ಗ್ರಂಥಗಳಲ್ಲಿ ಒಂದು ಸಂಗತಿ ಕಂಡುಬರುತ್ತದೆ. ಪ್ಲಿನಿ (ಕ್ರಿ. ಶ. ೭೮), ಟಾಲೆಮಿ (ಕ್ರಿ. ಶ. ೧೪೦), ಪೆರಿಪ್ಲುಸ್ ಎನ್ನುವ ಗ್ರಂಥದ ಕರ್ತೃ (ಕ್ರಿ. ಶ. ೭೦), ಮುಂತಾದ ಹಳೆಯ ರೋಮನರೂ ಗ್ರೀಕರೂ ಬರೆದಿಟ್ಟಿರುವ ವಿಷಯಗಳಿಂದ ಸಂಘಸಾಹಿತ್ಯದಲ್ಲಿ ಹೇಳಿರುವ ಚೇರ ಚೋಳ ಪಾಂಡ್ಯ ಅರಸರಲ್ಲಿ ಕಡೆಯ ಕಾಲದವರು ಕ್ರಿ. ಶ. ಎರಡನೆಯ ಶತಮಾನದಲ್ಲಿ ಇದ್ದಿರಬೇಕು ಎಂದು ಕಾಣುತ್ತದೆ. ಅದರಿಂದ ಸಂಘವು ಹಿಂದಕ್ಕೆ ೧೮೫೦ ವರ್ಷದಿಂದ ಇದ್ದಿರಬೇಕು. ಅದರಿಂದ ಈ ಕಡೆಯ ಸಂಘದ ಪ್ರಾರಂಭವು ಕ್ರಿ. ಪೂ. ೧೬ನೆಯ ಶತಮಾನವಾಗಬೇಕು. ಮಹಾಭಾರತದ ಕಾಲ ಸಾಮಾನ್ಯವಾಗಿ ಕ್ರಿ. ಪೂ. ೧೪೦೦ ಎನ್ನುವರು. ಆ ಇತಿಹಾಸದಲ್ಲಿ ಕಾಣುವ ಉತ್ತರ ಮತ್ತು ದಕ್ಷಿಣ ಹಿಂದುಸ್ಥಾನಗಳಿಗಿದ್ದ ರಾಜಕೀಯ ಮತ್ತು ಸಾಮಾಜಿಕ ಸಂಬಂಧಗಳನ್ನು ಒಪ್ಪಿಕೊಳ್ಳುವೆವಾದರೆ, ಕ್ರಿಸ್ತಶಕಕ್ಕೆ ಸಾವಿರದ ಐನೂರು ವರ್ಷಗಳ ಹಿಂದೆಯೇ ದಕ್ಷಿಣ ಹಿಂದುಸ್ಥಾನವು ಒಂದು ಸಾಹಿತ್ಯ ಪರಿಷತ್ತನ್ನು ಏರ್ಪಡಿಸಿರುವಷ್ಟು ಮುಂದುವರಿದಿತ್ತು ಎಂದು ಅಭಿಪ್ರಾಯಪಡುವುದರಲ್ಲಿ ಅಸಂಭಾವಿತವಾದುದು ಏನೂ ಇಲ್ಲ ಎಂಬುದು ಸ್ಪಷ್ಟವಾಗುವುದು.

ಪತ್ತುಪ್ಪಾಟ್ಟು ಎನ್ನುವ ಗ್ರಂಥದಲ್ಲಿ ಇರುವ ಹತ್ತು ಹಾಡುಗಳಲ್ಲೂ ಒಟ್ಟು ೩,೫೫೨ ಅಡಿಗಳು (ಪಾದಗಳು) ಇವೆ. ಇವು ಆ ಕಾಲದಲ್ಲಿದ್ದ ಮತ, ಸಾಮಾಜಿಕ ಜೀವನ, ರಾಜ್ಯಭಾರಕ್ರಮ, ವ್ಯಾಪಾರ, ಕಲೆ ಕೈಗಾರಿಕೆಗಳು, ಸಂಗೀತ, ನೃತ್ಯ, ವಿವಾಹಪದ್ಧತಿ, ಆಚಾರ ನಡೆಗಳು, ಉತ್ಸವ, ಹಬ್ಬ, ಜನದ ದಿನಚರಿ ಮುಂತಾದ ವಿಷಯಗಳನ್ನು ಕುರಿತು ಬಹಳ ಮುಖ್ಯವಾದ ಅಂಶಗಳನ್ನು ತಿಳಿಸುತ್ತವೆ. ಇವುಗಳಲ್ಲಿ ದೊಡ್ಡದು ಮದುರೈಕ್ಕಾಂಜಿ. ಇದು ಮಧುರೆಯ ಶ್ರೇಷ್ಠತೆಯನ್ನೂ ರಾಜನ ಹಿರಿಮೆಯನ್ನೂ ಹೇಳುವುದಲ್ಲದೆ ಇನ್ನೂ ಕೆಲವು ಸಾಮಂತರು, ನಗರಗಳು, ಮುಂತಾದುವನ್ನೂ ತಿಳಿಸುತ್ತದೆ. ಪತ್ತುಪ್ಪಾಟ್ಟು, ಎಟ್ಟುತ್ತೊಗೈ ಅಲ್ಲದೆ ಹಳೆಯ ತಮಿಳು ಸಾಹಿತ್ಯಕ್ಕೆ ಸೇರಿದ ಹದಿನೆಂಟು ಸಣ್ಣ ಗ್ರಂಥಗಳು ಮುಖ್ಯವಾಗಿ ನೀತಿಯನ್ನು ಬೋಧಿಸುತ್ತವೆ. ಅವುಗಳಲ್ಲಿ ಉತ್ತಮವಾದುವು ನಾಲಡಿಯಾರ್ ಮತ್ತು ತಿರುಕ್ಕುಱಳ್. ಇವು ಪಾಠಶಾಲೆಗಳಲ್ಲಿ ಕೆಳಗಿನ ತರಗತಿಗಳಿಗೆ ಪಠ್ಯಪುಸ್ತಕಗಳಾಗಿದ್ದಿರಬಹುದು. ಅದರಿಂದಲೇ ಇವುಗಳನ್ನು ಕೀೞ್ಕಣಕ್ಕು ಎಂದು ಕರೆದರೇನೋ!

ದೊಡ್ಡ ಕವಿಯೂ ತತ್ತ್ವಜ್ಞಾನಿಯೂ ತಮಿಳು ನಾಡಿಗೆ ಧರ್ಮಶಾಸ್ತ್ರವನ್ನು ಕೊಟ್ಟವರೂ ಆದ ತಿರುವಳ್ಳುವರ್ ಉತ್ತಮ ಋಷಿಗಳಾಗಿದ್ದರು. ಅವರು

ಆಳವಾದ ವಿಚಾರಪರರು, ಸೂಕ್ಷ್ಮ ವಿಮರ್ಶಕರು, ಹೆಚ್ಚಾದ ಲೋಕ ಅನುಭವವುಳ್ಳವರು. ಅವರ ಗ್ರಂಥ ಲೋಕಮಾನ್ಯವಾಗಿದೆ. ಕ್ರಿಸ್ತಶಕದ ಪ್ರಾರಂಭಕಾಲದಲ್ಲಿ ಇವರು ಬೆಳಗಿದವರೆಂದು ತೋರುತ್ತದೆ. ಆ ಕಾಲದಲ್ಲಿ ಚೇರ ಚೋಳ ಪಾಂಡ್ಯರು ಸ್ನೇಹದಿಂದ ಸೇರಿದ್ದರು. ನಾಡಲ್ಲೆಲ್ಲ ಶಾಂತಿ ನೆಲಸಿತ್ತು ಎಂದು ಕಾಣುತ್ತದೆ. ತಮಿಳು ನಾಡಿನಲ್ಲಿ ಹಿಂದಿನಿಂದಲೇ ಆಗಮಗಳೂ ಯೋಗವೂ ವೇದಾಂತವೂ ಚೆನ್ನಾಗಿ ಬೆಳೆದಿದ್ದುವು ಎನ್ನುವುದಕ್ಕೆ ಆಧಾರಗಳು ಕಾಣುತ್ತವೆ. ಅವೆಲ್ಲವೂ ಒಂದು ರಹಸ್ಯಮಾರ್ಗವಾಗಿ ಅನುಷ್ಠಾನದಲ್ಲಿದ್ದುವು ಎಂದು ತೋರುತ್ತದೆ. ಈ ಹಿಂದೂ ಧರ್ಮದೊಡನೆ ಬೌದ್ಧ ಜೈನ ಧರ್ಮಗಳು ಮಿಳಿತವಾಗಿ ತಮಿಳು ನಾಡಿನಲ್ಲಿ ಕಾಣುವ ಹಿಂದೂಮತವನ್ನು ಏರ್ಪಡಿಸಿರಬಹುದು. ವೀರರುಗಳ ಕಾಲವಾದ ಆಗ, ಈಗ ಇರುವ ಅಷ್ಟೊಂದು ಕಟ್ಟುಗಳು ಇಲ್ಲದೆ ಇದ್ದ ಸಮಾಜದಲ್ಲಿ, ಜಾತಿಭೇದಗಳೂ ವರ್ಣಾಶ್ರಮ ಧರ್ಮಗಳೂ ತಲೆದೋರಲಾರಂಭಿಸಿದುವು. ಜೀವನದ ಲಕ್ಷ್ಯಗಳನ್ನು ತಿದ್ದಿ ಕಟ್ಟಬೇಕು ಎಂಬ ಹೊಸ ಕ್ರಾಂತಿಯ ಕಾಲವಾಗಿತ್ತು. ಈ ಸಂಘ ಗ್ರಂಥಗಳ ಹಿಂದಿನ ಸಮಾಜ ರಚನೆಯು ತೊಲ್‌ಕಾಪ್ಪಿಯಂ ಎನ್ನುವ ಗ್ರಂಥದಲ್ಲಿ ಕಾಣುವುದು. ಅದರಿಂದ ಈಚೆಗೆ ಆದ ಬೆಳವಣಿಗೆಗೆ ತಕ್ಕಂತೆ ಆವಶ್ಯಕವಾದ ಸುಧಾರಣೆಗಳನ್ನು ಮಾಡಬೇಕಾಗಿತ್ತು. ಇದನ್ನೆಲ್ಲ ಮಾಡಿದ ಮಹಾಪುರುಷರು ತಿರುಕ್ಕುಱಳಿನ ಕರ್ತೃ. ಇವರ ಗ್ರಂಥ ಅದು ಉಂಟಾದ ಕಾಲದಿಂದ ಇಂದಿನವರೆಗೂ ಪ್ರಮಾಣಗ್ರಂಥವಾಗಿದೆ. ಅದರ ಅಧಿಕಾರವನ್ನು ಇಂದಿನವರೆಗೂ ಎಲ್ಲರೂ ಒಪ್ಪುತ್ತಾರೆ. ಈ ಗ್ರಂಥದ ಮುಖ್ಯ ಲಕ್ಷಣ— ಶಾಶ್ವತವಾದ ಜೀವಾಳದ ಊಟೆ— ಅದರ ವಿಶ್ವತ್ವದಲ್ಲಿಯೂ ಸಮನೆಲೆಯಲ್ಲಿಯೂ ಸತ್ಯದಲ್ಲಿಯೂ ಇದೆ.

ತಿರುಕ್ಕುಱಳ್ ಮತ್ತು ತೊಲ್‌ಕಾಪ್ಪಿಯಂ ಈಗ ದೊರೆತಿರುವ ಎಲ್ಲಾ ತಮಿಳು ಗ್ರಂಥಗಳಿಗೂ ಹಿಂದಿನವು. ಇವಕ್ಕೆ ಈಚೆಗೆ ಆದ ಗ್ರಂಥಗಳೆಲ್ಲ ಎಷ್ಟೋ ಪಾಠಭೇದ ಮುಂತಾದ ಮಾರ್ಪಾಡುಗಳನ್ನು ಹೊಂದಿವೆ. ಆದರೆ ಈ ಎರಡು ಗ್ರಂಥಗಳೂ ಒಂದು ಅಕ್ಷರವೂ ಮಾರ್ಪಡದೆ ಬಂದಿವೆ. ಇದು ಜನರು ತಿರುಕ್ಕುಱಳಿನಲ್ಲಿ ಇಟ್ಟಿದ್ದ ಪೂಜ್ಯತೆ ಶ್ರದ್ಧೆಗಳನ್ನು ತೋರಿಸುತ್ತದೆ. ತಿರುಕ್ಕುಱಳು ತಮಿಳು ವೇದ. ಇದು ಧರ್ಮ, ಅರ್ಥ, ಕಾಮಗಳನ್ನು ಕುರಿತು ಹೇಳುವ 'ಮುಪ್ಪಾಲ್' ಆಗಿದೆ. ಪಾಲ್ = ಪಾಲು. ಅಱಂ, ಪೊರುಳ್, ಇನ್ಬಂ ಎನ್ನುವ ಈ ಮೂರು ಪುರುಷಾರ್ಥಗಳನ್ನು ಹೇಳುವ ಎಲ್ಲೆಲ್ಲೂ ವೀಡು (ಬಿಡುಗಡೆ) ಎಂಬ ಮೋಕ್ಷದ ಲಕ್ಷಣ ಮುಳುಗುತ್ತಲೇ ಇದೆ. ಈ ಗ್ರಂಥದಿಂದ ಒಂದೆರಡು ಪದ್ಯಗಳನ್ನು ಉದಾಹರಿಸಿದೆ :—

ಕಱ್ಱದನಾಲಾಯ ಪಯನೆನ್ ಕೊಲ್ ವಾಲಱಿವನ್
ನಱ್ಱಾಳ್ ತೊಟಱಾರ್ ಎನಿನ್

ಕಲಿತುದರಿಂದಾದ ಫಲವೇನು ಬೆಳಗುವ ಅರಿವನ ನಲ್ಲಡಿಗೆ ಎರಗದ ಬಳಿಕ?
('ಱ್ಱ'ವನ್ನು 'ಟ್ರ' ಮಾದರಿ ಉಚ್ಚರಿಸುವುದು)

ಕಱ್ಕ ಕಶಡಱ ಕಱ್ಪವೈ ಕಱ್ಱಪಿನ್
ನಿಱ್ಕ ಅದಱ್ಕುತ್ ತಗ

ಕಲಿಯುಲಿ ಕಸರಳಿಯೆ ಕಲಿಯು ತಕ್ಕುವನು. ಕಲಿತ ಮೇಲ್ ನಿಲಲಿ ಅದಕೆ ತಕ್ಕಂತೆ.

ಅಱತ್ತಾಱ್ಱಿನ್ ಇಲ್ವಾೞ್ಕ್ಕೈ ಆಱ್ಱಿನ್ ಪುಱತ್ತಾಱ್ಱಿನ್
ಪೋಒಯ್ಪ್ಪೆಱುವದೆವನ್

ಅಱಮಾರ್ಗದಲಿ ಮನೆಬಾಳ್ವೆ ನಡಸುವವ ಹೊರಮಾರ್ಗದಲಿ ಹೋಗಿ ಪಡೆವುದೇನು ?

ನನ್ಱಿ ಮಱಪ್ಪದು ನನ್ಱನ್ಱು ನನ್ಱಲ್ಲ(ದು)
ಅನ್ಱೇ ಮಱಪ್ಪದು ನನ್ಱು

ಉಪಕಾರವನ್ನು ಮರೆಯುವುದು ಒಳ್ಳೆಯದಲ್ಲ, ಅಪಕಾರವನ್ನು ಅಂದೇ ಮರೆಯುವುದು ಒಳ್ಳೆಯದು.

ಈಗ 'ಶಿಲಪ್ಪದಿಕಾರಂ', 'ಮಣಿಮೇಕಲೈ' — ಇವುಗಳನ್ನು ನೋಡುವ. ವಿಧಿಯ ಬಲ್ಮೆಯನ್ನು ಚೆನ್ನಾಗಿ ಬೋಧಿಸುವುದು ಶಿಲಪ್ಪದಿಕಾರದ ಕಥೆ. ವಿಧಿಯ ಬಲ್ಮೆ ಕೋವಲನಿಗೆ ಕಣ್ಣಗಿಯಲ್ಲಿ ಇದ್ದ ಪ್ರೇಮವನ್ನು ಮುರಿಯುತ್ತದೆ. ವಿಧಿಯ ಬಲ್ಮೆ ಕೋವಲನನ್ನೂ ಮಾಧವಿಯನ್ನೂ ಅಗಲಿಸುತ್ತದೆ. ವಿಧಿಯ ಬಲ್ಮೆ ಮಧುರೆಯಲ್ಲಿ 'ಶಿಲಂಬ'ನ್ನು ಮಾರ ಬಂದ ಕೋವಲನ ಇದಿರು ಕೊಲೆಗೆ ಅಂಜದ ಅಕ್ಕಸಾಲೆಯನ್ನು ಕಳಿಸುತ್ತದೆ. ವಿಧಿಯ ಬಲ್ಮೆ ನೀತಿಯ ನೆಲೆಯಾದ ಪಾಂಡ್ಯನು ವಿಚಾರಿಸದೆ ಕೋವಲನನ್ನು ಕೊಲ್ಲಿಸುವಂತೆ ಮಾಡುತ್ತದೆ. ಶಿಲಪ್ಪದಿಕಾರದ ಕರ್ತೃ 'ಇಳಂ ಕೋ ಅಡಿಗಳ್'. ಇವರು ಪ್ರಸಿದ್ಧ ಚೇರರಾಜನಾದ ಶೆಂಕುಟ್ಟುವನ ತಮ್ಮಂದಿರು. ತಮಿಳು ನಾಡಿನ ಮೂರು ರಾಜ್ಯಗಳಿಗೂ ಸೇರಿದ ಅನೇಕ ವಿಷಯಗಳನ್ನು ಈ ಕಥೆಯಲ್ಲಿ ಸೇರಿಸಿದ್ದಾರೆ. ಅವುಗಳಿಂದ ಆ ಕಾಲದ ಸ್ಥಿತಿಯನ್ನು ತಿಳಿಯುವುದಕ್ಕೆ ಈ ಗ್ರಂಥ ಆಕರವಾಗಿದೆ. ಇದರಿಂದ ಅಂದಿನ ತಮಿಳು ನಾಡಿನ ನೃತ್ಯ, ಗಾನ, ಮುಂತಾದ ಕಲೆಗಳ ಉದ್ದಾಮ ಅಭಿವೃದ್ಧಿಯೂ ಲಾಲಿತ್ಯವೂ ಅತ್ಯಾಶ್ಚರ್ಯ ರೀತಿಯಲ್ಲಿ ನಮಗೆ ಕಾಣುತ್ತವೆ. ಶಿಲಪ್ಪದಿಕಾರಂ ಮುತ್ತಮಿೞ್ ಎಂಬ ಇಯಲ್, ಇಶೈ, ನಾಟಕಂ ಎನ್ನುವ ಓದು–ಹಾಡು–ಆಡು–ಗಬ್ಬಗಳನ್ನು ಒಳಗೊಂಡಿದೆ. ಭಾವದಲ್ಲಿ, ರಸದಲ್ಲಿ, ನಡೆಯಲ್ಲಿ, ಕೇವಲ ಪದಗಳ ಸೊಗಸಿನಲ್ಲಿ, ಇದಕ್ಕೆ ಎಣೆಯಾದ ತಮಿಳುಗ್ರಂಥ ಮತ್ತೊಂದು ಇದೆಯೆ! ಮನಸ್ಸನ್ನು ಎಳೆದು ಕರಗಿಸಿ ನಮ್ಮನ್ನು ಮರೆಯುವಂತೆ ಮಾಡುತ್ತದೆ ಈ ಗ್ರಂಥದ ಸವಿ. ಕೂಲ ವಾಣಿಗ (ಧಾನ್ಯವ್ಯಾಪಾರಿ) ಶಾತ್ತನಾರ್ ರಚಿಸಿದ ಮಣಿಮೇಕಲೆಯಲ್ಲಿ ಹೇಳಿರುವ ಅನೇಕ ದರ್ಶನಗಳ ನಿರೂಪಣೆಯನ್ನು ಶಾಸ್ತ್ರಜ್ಞರು ಕೊಂಡಾಡುತ್ತಾರೆ. ಮಣಿಮೇಕಲೆ ಕೋವಲನ್ ಮಾಧವಿಯರ ಮಗಳು. ಇವಳು ಭಿಕ್ಷುಣಿಯಾಗುವ ಜೀವನ ಚರಿತ್ರೆಯನ್ನು ಹೇಳುವ ಈ ಗ್ರಂಥ ಶಿಲಪ್ಪದಿಕಾರದ ಕಥೆಯನ್ನು ಮುಂದುವರಿಸುತ್ತದೆ. ಇದು ತಮಿಳು ಬೌದ್ಧ ಸಂಬಂಧವನ್ನು ತೋರಿಸುವುದಕ್ಕಾಗಿ ಬೆಟ್ಟದಮೇಲಿಟ್ಟ ದೀಪದಂತೆ ಮೆರೆಯುವುದು.

ಈ ಎರಡು ಕಾವ್ಯಗಳ ಕಾಲನಿರ್ಣಯ ಚರ್ಚಾಸ್ಪದವಾದದ್ದು. ಇವುಗಳ ಕಾಲವನ್ನು ಗೊತ್ತುಮಾಡ ಯತ್ನಿಸುವವರು ಆ ಕಾಲದಲ್ಲಿ ತಮಿಳು ನಾಡಿನಲ್ಲಿ

ಇದ್ದ ರಾಜಕೀಯ ಸಂಸ್ಥೆಗಳನ್ನೂ ಮತತತ್ತ್ವಗಳನ್ನೂ ಸಾಮಾಜಿಕ ಆಚರಣೆಗಳನ್ನೂ ನಾಗರಿಕತೆಯ ಸ್ಥಿತಿಯನ್ನೂ ತಿಳಿದು ಅವುಗಳನ್ನು ಈ ಕಾವ್ಯಗಳಲ್ಲಿ ಹೇಳಿರುವ ವಿಷಯಗಳೊಡನೆ ಹೋಲಿಸಿ ನೋಡತಕ್ಕದ್ದು ಆವಶ್ಯಕ. ಹೀಗೆ ಮಾಡಿದರೆ ತಟ್ಟನೆ ಒಂದು ಸಿದ್ಧಾಂತಕ್ಕೆ ಬರುವುದರಿಂದ ಉಂಟಾಗುವ ಅನೇಕ ಕಷ್ಟಗಳನ್ನು ನಿವಾರಿಸಬಹುದು.

ತಮಿಳು ಸಾಹಿತ್ಯದಲ್ಲೆಲ್ಲ ಚೆನ್ನಾಗಿ ನಿರ್ಧರಿಸಿರುವ ಕಾಲ ವಾಗೀಶ ಮತ್ತು ತಿರುಜ್ಞಾನ ಸಂಬಂಧರ್ ಎಂಬ ಆಚಾರ್ಯರ ಕಾಲ. ಅದು ಏಳನೆಯ ಶತಮಾನದ ಪೂರ್ವಭಾಗ. ಈ ಕಾಲದಲ್ಲಿ ತಮಿಳು ನಾಡು ಪಲ್ಲವರ ಅಧೀನದಲ್ಲಿ ಇದೆ. ನಗರಗಳ ಹೆಸರುಗಳೂ ಜನಗಳ ಹೆಸರುಗಳೂ ತಮಿಳು ರೂಪವನ್ನು ಬಿಟ್ಟು ಸಂಸ್ಕೃತ ರೂಪವನ್ನು ತಾಳಿವೆ. ಸಂಘ ಕಾಲದಲ್ಲಿ ಪೂಜಿಸುತ್ತಿದ್ದ ದೇವತೆಗಳು ಹೋಗಿ ಬೇರೆ ದೇವತೆಗಳು ಬಂದಿವೆ. ಸಮಾಜದ ನಡವಳಿಗಳು ಹೆಚ್ಚು ಮಾರ್ಪಾಡು ಹೊಂದಿವೆ. ಇವುಗಳನ್ನೆಲ್ಲ ನೋಡಿದಮೇಲೆ ಆ ಎರಡು ಕಾವ್ಯಗಳಲ್ಲಿ ಕಾಣುವ ನಾಡಿನ ನೆಲೆಯನ್ನು ನೋಡುವಾಗ ಹೆಚ್ಚಾಗಿ ಬೇರೆಯಾದ ಒಂದು ದೃಶ್ಯವನ್ನು ಕಾಣುತ್ತೇವೆ. ಚೇರ ಚೋಳ ಪಾಂಡ್ಯರು ತಮ್ಮ ಸಿಂಹಾಸನಗಳಲ್ಲಿ ಮಂಡಿಸಿದ್ದಾರೆ. ಪಲ್ಲವರೂ ಕಳಭ್ರರೂ ದಕ್ಷಿಣ ಭಾರತದ ಚರಿತ್ರೆಯಲ್ಲಿ ಇನ್ನೂ ಬಂದಿಲ್ಲ. ಚೋಳ ನಾಡಿನ ದೊಡ್ಡ ರೇವು 'ಕಾವಿರಿ ಪ್ಪೂಂ ಪಟ್ಟಿನಂ'. ಅರ್ಹನ್, ಆರುಮೊಗ, ಇಂದ್ರ, ಐಯ್ಯೆ (ದುರ್ಗೆ), ಐರಾವತ, ಕಣ್ಣಗಿ, ಕಲ್ಪಕ, ಕಾಮ, ಕೈಲಾಸ, ಚಂದ್ರ, ಶಾಸ್ತಾ, ಶಾತವಾಹನ, ಶಿವಪೆರುಮಾನ್, ಸೂರ್ಯ, ತಿರುಮಾಲ್ (ವಿಷ್ಣು), ಬಲದೇವ, ಬುದ್ಧ, ಮಂಗಲಾದೇವಿ, ವಜ್ರಾಯುಧ, ವೇಲ್ (ಮುರುಗದೇವನ ಆಯುಧ) ಇಷ್ಟಕ್ಕೂ ದೇವಾಲಯಗಳಿದ್ದಾಗ ಗಣೇಶನ ಆರಾಧನೆ ರೂಢಿಯಲ್ಲಿ ಇದ್ದಂತೆ ಕಾಣುವುದಿಲ್ಲ. ಬಹಳ ಹಿಂದಿನ ಕಾಲದಲ್ಲಿ (ಸಂಘ ಕಾಲದಲ್ಲಿ) ಇದ್ದ ಬಲರಾಮನ ಆರಾಧನೆ ಇಲ್ಲಿ ಕಾಣುತ್ತದೆ. ಸಮಾಜ ನಡವಳಿಗಳು ಹಿಂದಿನ ವೀರರ ಕಾಲದಲ್ಲಿ ಇದ್ದುವನ್ನೆ ಹೆಚ್ಚು ಪಾಲು ಹೋಲುತ್ತವೆ. ಆದುದರಿಂದ ಈ ದೊಡ್ಡ ಕಾವ್ಯಗಳೆರಡೂ ತಿರುಜ್ಞಾನ ಸಂಬಂಧರ ಕಾಲಕ್ಕಿಂತ ಹಿಂದಿನ ಕಾಲದಲ್ಲೆ ಉಂಟಾಗಿರಬೇಕು. ತಿರುಜ್ಞಾನ ಸಂಬಂಧರಿಗೆ ಹಿಂದೆ ಇದ್ದ ತಿರುಮೂಲರ್, ಕಾರೈಕ್ಕಾಲಮ್ಮೈ ಎಂಬವರ ಕಾಲಕ್ಕೂ ಎರಡು ಮೂರು ಶತಮಾನಗಳು ಹಿಂದೆಯೇ ಅವು ರಚಿತವಾಗಿರಬೇಕು. ಕಾಂಚಿ, ಪುಗಾರ್ (ಕಾವಿರಿ ಪ್ಪೂಂ ಪಟ್ಟಿನಂ)—ಈ ನಗರಗಳ ಹಿರಿಮೆಯನ್ನು ಈ ಕಾವ್ಯಗಳಿಂದ ತಿಳಿಯುವಾಗ ತಮಿಳು ನಾಡು ಆಗ ಸ್ವತಂತ್ರವಾಗಿತ್ತೆಂಬುದು ಕಾಣುತ್ತದೆ. ಸಂಘ ಗ್ರಂಥಗಳಲ್ಲೂ ಈ ಎರಡು ಕಾವ್ಯಗಳಲ್ಲೂ ಹೇಳಿರುವ ವೀರರ ಕಾಲ ಕ್ರಿ. ಶ. ಮೂರನೆಯ ಶತಮಾನದಲ್ಲಿ ಕಾಂಚಿ ಪಲ್ಲವರ ಆಧಿಪತ್ಯಕ್ಕೆ ಬಂದಾಗ ಮುಗಿದುಹೋಗುತ್ತದೆ. ಆಮೇಲೆ ನಾನೂರು ವರ್ಷಗಳು ನಾಡೆಲ್ಲವೂ ಕತ್ತಲೆ ಸುತ್ತಿದೆ. ತಿರುಮೂಲರ್, ಕಾರೈಕ್ಕಾಲಮ್ಮೈ — ಇವರನ್ನು ಬಿಟ್ಟು ಈ ಕಾಲದಲ್ಲಿ ಸ್ಮರಣೀಯವಾದ ದೊಡ್ಡ ಕೆಲಸಗಳನ್ನು ಯಾರೂ ಮಾಡಿದಂತೆ ಕಾಣಲಿಲ್ಲ. ಕತ್ತಲೆ ಹೋಗಿ ಜ್ಞಾನ ಸಂಬಂಧರೊಡನೆ ಆಗುವ ಸೂರ್ಯೋದಯಕ್ಕೆ ಹಿಂದೆ ಇವರಿಬ್ಬರೇ ಮುಂಬೆಳಗಾಗಿ

ಇರುವವರು. ಜ್ಞಾನಸಂಬಂಧರ ಕಾಲಕ್ಕೆ ಬರುವುದಕ್ಕೆ ಮುಂಚೆ ಅನೇಕ ದೇವಾಲಯ ಗಳನ್ನು ಕಟ್ಟಿಸಿದ ಕೋ ಚೆಂಗಣ್ಣಾನ್ ಎಂಬ ಚೋಳನನ್ನು ಕುರಿತು ನಾವು ತಿಳಿಯು ತ್ತೇವೆ. ಇವನ ಕಾಲದಲ್ಲಿ ಆಳ್ವಾರುಗಳಲ್ಲಿ ಮೊದಲ ಮೂವರಲ್ಲಿ ಒಬ್ಬರಾದ ಪೊಯ್‌ಗೈ ಆಳ್ವಾರ್ ಇದ್ದರು ಎಂದು ಕಾಣುತ್ತದೆ. ಈ ಮೊದಲ ಆಳ್ವಾರುಗಳು ವಿಶಾಲವಾದ ಮನೋಭಾವ ಮತ್ತು ಅನ್ಯಮತ ಸಹನೆ ಉಳ್ಳವರಾಗಿದ್ದರು. ಕೋ ಚೆಂಗಣ್ಣನೂ ಪೊಯ್‌ಗೈ ಆಳ್ವಾರರೂ ಎರಡನೆಯ ಶತಮಾನದ ಉತ್ತರ ಭಾಗದಲ್ಲಿ ಇದ್ದವರು. ತಿರುಮೂಲರ್, ಕಾರೈಕ್ಕಾಲಮ್ಮೈ ೩ನೆಯ ೪ನೆಯ ಶತಮಾನದವರು. ಈ ಕಾರಣಗಳಿಂದ ಶಿಲಪ್ಪದಿಕಾರಂ, ಮಣಿಮೇಕಲೈ ಗ್ರಂಥಗಳ ಕಾಲ ಕ್ರಿ. ಶ. ಎರಡನೆಯ ಶತಮಾನದ ಪೂರ್ವದಲ್ಲೋ ಅದಕ್ಕೆ ಹಿಂದೆಯೋ ಇರಬೇಕು ಎಂಬುದು ವ್ಯಕ್ತವಾಗುತ್ತದೆ.

ಇಂತು ಹಳೆಯ ತಮಿಳು ಸಾಹಿತ್ಯದ ಒಂದು ಬಹಳ ನಸುನೋಟ ಮುಗಿಯಿತು.

ಹಳೆಯ ತಮಿಳು ಸಾಹಿತ್ಯ ನಮ್ಮ ನಾಡಿನ ಹಿರಿಮೆಯನ್ನು ತೋರಿಸುವ ಅಂಜನವಾಗಿದೆ. ಇದರಿಂದ ನಮ್ಮ ದೇಶದ ಪುರಾತನ ಇತಿಹಾಸ, ಆಡಳಿತ, ಸಮಾಜದ ರಚನೆ ಮತ್ತು ಬಾಳ್ಕೆ, ಕಲೆಗಳ ನೆಲೆ ಮತ್ತು ಬೆಳವಣಿಗೆ ಇವುಗಳನ್ನೆಲ್ಲ ಅರಿಯುವುದಕ್ಕೆ ಸಾಧ್ಯವಾಯಿತು. ತಮಿಳು ನಾಡಿನಲ್ಲಿ ಕೆಲವು ಕಾಲದಿಂದ ನಾಡ ಒಲುಮೆ, ನುಡಿಯ ಒಲುಮೆ, ಸ್ವಾತಂತ್ರ್ಯದಾಹ, ಆತ್ಮಗೌರವ— ಇವುಗಳು ಬೆಳೆಯುತ್ತಬರುತ್ತಿವೆ. ಈ ಬೆಳವಣಿಗೆಗೆ ಹಲವು ಕಾರಣಗಳಿರುವುದು ನಿಜ. ಅದಕ್ಕೆ ತಮಿಳು ಮಕ್ಕಳು ತಮ್ಮ ಹಳೆಯ ಸಾಹಿತ್ಯವನ್ನು ಓದಿ ಅಂದಿನ ತಮ್ಮ ಮೇಲು ನೆಲೆಯನ್ನು ತಿಳಿದುದೂ ಒಂದು ಪ್ರಬಲವಾದ ಕಾರಣವಾಗುವುದು.

ತಮಿಳು ಸಾಹಿತ್ಯದ ಪರಿಚಯ ಕನ್ನಡ ನಾಡಿನ ಇತಿಹಾಸ, ಮತ ಚಳವಳಿ ಗಳು, ಭಾಷಾತತ್ತ್ವ— ಇವುಗಳನ್ನು ತಿಳಿಯುವುದಕ್ಕೆ ಒಂದು ರೀತಿಯಲ್ಲಿ ನೆರವಾಗಿರುವುದು. ಹೀಗೆಯೇ ಕನ್ನಡ ಭಾಷೆಯ ಪರಿಚಯ ತಮಿಳರಿಗೆ ಅತ್ಯಾವಶ್ಯಕ. ಈ ತತ್ತ್ವವನ್ನು ಅರಿತು ತಮಿಳು ಭಾಷೆಯನ್ನು ಕಲಿಯುವುದಕ್ಕೆ ಹೆಚ್ಚಾದ ಪ್ರೋತ್ಸಾಹ ಕೊಡುತ್ತಿರುವವರು ನಮ್ಮ ಅಂಜಲಿಯನ್ನು ಯಾರಿಗೆ ಅರ್ಪಿಸಲಿರು ವೆವೋ ಆ ಪೂಜ್ಯಪಾದರು. ಅವರು ತಮಿಳಿನಮೇಲೆ ಇಟ್ಟಿರುವ ಪ್ರೀತಿಯನ್ನು ಅರಿಯುವ ತಮಿಳರೆಲ್ಲರೂ ಅವರಿಗೆ ನನ್ಱಿಯುಳ್ಳವರಾಗಿದ್ದೇವೆ.

**ಪಿ. ಎಂ. ಸೋಮಸುಂದರನ್**

# ಶರಣರ ವಚನಗಳು

ಮಾನವನು ಮಾನವ ಜನ್ಮವನ್ನು ಸಫಲಗೊಳಿಸುವದಕ್ಕಾಗಿ ದೇವಗುಣವನ್ನು
ಸಂಪಾದಿಸಿಕೊಂಡು ಕಡೆಗೆ ಗುಣಾತೀತನಾಗಿ ಬಯಲಲ್ಲಿ ಬಯಲು ಬೆರೆತಂತೆ ತನ್ನಲ್ಲಿ
ತಾನು ಕೂಡಿಕೊಳ್ಳುವದೇ ಚಿರಶಾಂತಿಯು. ಇದನ್ನು, ಇದರ ರೀತಿ ನೀತಿಗಳನ್ನು
ಶರಣರ ವಚನಗಳಲ್ಲಿ ನಾವು ನಿಚ್ಚಳವಾಗಿ ಕಾಣಬಹುದು.

ಶರಣರು ತಮ್ಮ ಹೆಮ್ಮೆಗಾಗಿ ಹಿರಿಮೆಗಾಗಿ ಒಂದು ಹೊಸ ಸಿದ್ಧಾಂತವನ್ನು
ಸ್ಥಾಪಿಸಲು ಹೆಣಗಲಿಲ್ಲ. ವೇದಾಗಮೋಪನಿಷದರ್ಥವನ್ನು ತಾವು ತಿಳಿದು ಆಚರಿಸಿ
ಅನುಭವಗೊಂಡು ತಮ್ಮ ಅನುಭವಾಮೃತವನ್ನು ಸವಿಯಾದ ಕನ್ನಡ ನುಡಿಯಲ್ಲಿ
ಪ್ರವಾಹವಾಗಿ ಹರಿಸಿದರು. ತತ್ವಗಳನ್ನು ತಮ್ಮ ಅನುಭಾವದ ಒರೆಗಲ್ಲಿಗೆ ಹಚ್ಚಿ
ಬೆಲೆಗಂಡ ಬಳಿಕ ಅವುಗಳನ್ನು ಬೈಲಿಗಿಟ್ಟರು. ಸರ್ವಮಾನವ ಕೋಟಿಗೆ ದಾನ
ಮಾಡಿದರು. ಶಿವಾನುಭವ ಸುಖವನ್ನು ಸೂರೆಗೈದು ಜಗತ್ತಿಗೆ ಪರಮಪುರುಷ
ರಾದರು. ಇಂದು ಅವರ ಅಮೃತವಚನಗಳು ಜನತೆಯ ಮನವನ್ನು ತಣಿಸುತ್ತಿರು
ವವು. ಅವುಗಳಲ್ಲಿ ಕೇವಲ ಸಾಂಪ್ರದಾಯಿಕ ಸಂಗತಿಯೇ ಸಂದರ್ಭವಾಗಿರುವ
ದಿಲ್ಲ. ತತ್ವಜ್ಞಾನವೂ ಆಚಾರವಿಚಾರಗಳ ಮರ್ಮವೂ ಅಡಕವಾಗಿವೆ. ಪರಮಾರ್ಥ
ಸಂಪಾದನೆಯ ರೀತಿಯನ್ನು ತಿಳಿಸುವದರ ಜೊತೆಗೆ ಮೆಟ್ಟಲು ಮೆಟ್ಟಲಾಗಿ ಐಹಿಕ
ವನ್ನು ಹೇಳಲು ಮರೆತಿರುವದಿಲ್ಲ. ಅದಕ್ಕಾದರೂ ಮಹತ್ವವಿದೆ ಎಂಬದನ್ನು
ಸೂಚಿಸಿದ್ದಾರೆ. ಕುರುಕ್ಷೇತ್ರದಲ್ಲಿ ರಣರಂಗದ ಕಹಳೆಯೂದುತ್ತಿದ್ದಾಗ ಶ್ರೀಕೃಷ್ಣನು
ಅರ್ಜುನನ ನಿಮಿತ್ತವಾಗಿ ಕ್ಲಿಷ್ಟವಾದ ತತ್ವಜ್ಞಾನವನ್ನು ಸುಲಭವಾಗಿ ಗೀತೆಯ
ಮುಖದಿಂದ ಜಗತ್ತಿಗೆ ಬೋಧಿಸಿದಂತೆ, ಸಂಸ್ಕೃತ ಭಾಷೆಯಲ್ಲಿದ್ದ ಜಟಿಲ ತತ್ವಾರ್ಥ
ವನ್ನು ತಿಳಿಗನ್ನಡ ವಚನ ಪದ್ಧತಿಯಿಂದ ಹೇಳುವ ಹೊಚ್ಚ ಹೊಸ ಹಾದಿಯನ್ನು
ಶರಣರು ತೆಗೆದರು. ಈ ಪದ್ಧತಿಯಿಂದ ಜನತೆಯ ಮನದಲ್ಲಿ ನಿಗೂಢವಾದ ಒಂದು
ಅದ್ಭುತಶಕ್ತಿಯು ಹೊರಹೊಮ್ಮಿ ಅದು ಕರ್ನಾಟಕದ ಮೂಲಕವಾಗಿ ಜಗತ್ತಿನ
ಕಣ್ಣನ್ನೇ ತೆರೆಯಿಸಿದಂತಾಗಿದೆ.

ಇಂದು ಹಸಿದ ಜಗತ್ತಿಗೆ ಬೇಕಾದ ಸಮಾಜ ಸುಧಾರಣೆ, ಸ್ವಸಂರಕ್ಷಣೆ,
ಆರ್ಥಿಕ ಯೋಜನೆ, ಸ್ತ್ರೀಸುಧಾರಣೆ, ಧಾರ್ಮಿಕ ಭಾವನೆ, ಆಧ್ಯಾತ್ಮಿಕ ವಿಚಾರ,
ಪರಸ್ಪರ ಬಾಂಧವ್ಯ, ಇವೇ ಮೊದಲಾದ ವಿಷಯುಗಳನ್ನು ಶರಣರು ತಮ್ಮ ವಚನ
ಗಳಲ್ಲಿ ಹಾಸುಹೊಕ್ಕಾಗಿ ಹೆಣೆದಿರುವರು. ಜಗತ್ತು ಬಾಧಕವೆಂದು ಅಲ್ಲಗಳೆದು
ಅತಿಗಳೆದು ಆಚೆಗೆ ಹೋಗಿ ತತ್ವವನ್ನು ಹುಡುಕಬೇಡಿರಿ. ತಿಲದ ಮರೆಯ ತೈಲ
ದಂತೆ ಜಗದೊಡೆಯನಾದ ದೇವರು ಜಗದಂತರದಲ್ಲಿಯೇ ಇರುವನೆಂಬದನ್ನು
ಚೆನ್ನಾಗಿ ತಿಳಿಯಿರಿ. ಭೂತದಯೆಯನ್ನುಳಿದು ಧರ್ಮವಿಲ್ಲವಾದ್ದರಿಂದ ಪ್ರಾಣಿಗಳಲ್ಲಿ
ದಯಾಭರಿತರಾಗಿರಿ. ಮನುಷ್ಯನು ಸಮಾಜ ಜೀವಿಯಾಗಿರುವದರಿಂದ ಪರಸ್ಪರ
ವಾಗಿ ಬಾಂಧವ್ಯವನ್ನು ಬೆಳಸಿರಿ. ಅನ್ಯರಿಗೆ ಹಂಗಾಗಿ ಬಾಳದೆ ಕಾಯಕವನ್ನು
ಮಾಡಿ ನೀವು ಉಂಡು ಅನ್ಯರನ್ನು ಉಣಿಸಿರಿ. ಪ್ರಪಂಚದಲ್ಲಿ ನರ ನಾರಿಯರನ್ನು
ಸಮಾನವಾಗಿ ಭಾವಿಸಿರಿ. ಐಹಿಕ ಸುಖ ಸಾಧನಗಳಾದ ಸಿರಿ ಸಂಪತ್ತುಗಳನ್ನು

ಆಧ್ಯಾತ್ಮಿಕ ಸಾಧನೆಗೆ ಸಹಾಯವಾಡಿಕೊಳ್ಳಿರಿ. ನಿಮ್ಮ ನಿಮ್ಮ ಧರ್ಮ ಸಂಪ್ರದಾಯವನ್ನು ಸರಿಯಾದ ರೀತಿಯಲ್ಲಿ ತಿಳಿದು ನಡೆಯಿರಿ. ಉದಾರದೃಷ್ಟಿಯಿಂದ ಯಾರನ್ನೂ ಅನ್ಯರೆಂದು ಭಾವಿಸಿ ಹೀಯಾಳಿಸಬೇಡಿರಿ. ಯಾವಾಗಲೂ ನಿಮ್ಮ ಬಾಳಿನ ಹೆಗ್ಗುರಿಯು ಧರ್ಮವೇ ಆಗಿರಲಿ. ತ್ರಿಕರಣಗಳಲ್ಲಿಯೂ ಪಾಪಕ್ಕೆ ಇಂಬುಗೊಡಬೇಡಿರಿ. ಪ್ರತಿಯೊಂದು ಕರ್ಮವನ್ನು ದೇವ ಸಾಕ್ಷಿಯಾಗಿ ಮಾಡಿರಿ. ಜಗತ್ತು ಭಗವಂತನದು. ಜೀವನವು ಅವನ ಆಧೀನವಾದುದಾದರೂ ಸ್ವಪ್ರಯತ್ನವನ್ನು ಮರೆಯಬೇಡಿರಿ. ಬಾಳಿರಿ; ತೇಜಸ್ಸಿನಿಂದ ಬಾಳಿರಿ, ನಗೆಮೊಗದಿಂದ ಬಾಳಿರಿ.— ಇದೇ ಶರಣ ವಾಣಿಯ ರಹಸ್ಯವು.

ದ್ರಾಕ್ಷಾಫಲಗಳಂತೆ ಕೆಲವು ವಚನಗಳು ಕೇಳಿದೊಡನೆಯೇ ಆನಂದವನ್ನುಂಟು ಮಾಡಿದರೆ, ಕೆಲವು ವಚನಗಳು ನಾರಿಕೇಳ ಫಲದಂತೆಯೂ ಇರುತ್ತವೆಂಬುದು ಸುಳ್ಳಲ್ಲ. ಇನ್ನು ಹಲವು ವಚನಗಳು ಸೂತ್ರರೂಪವಾಗಿದ್ದು ದೊಡ್ಡ ಭೂವಲಯದಷ್ಟು ಲೋಕಾನುಭವವನ್ನು ತುಂಬಿಕೊಂಡಿರುವವು. ಅವುಗಳಲ್ಲಿ ಒಂದು ಕಾವಿದೆ, ಒಂದು ವೇಗವಿದೆ; ಒಂದು ಮೊನೆಯಿದೆ. ಅದು ಮನಸ್ಸನ್ನು ಮುಟ್ಟಿ ತಟ್ಟಿ ಎಚ್ಚರಗೊಳಿಸುತ್ತದೆ. ಆತ್ಮಸಂಸ್ಕಾರಕ್ಕೆ ಅನುಭವದಿಂದಾಗುವಷ್ಟು ಸಹಾಯವು ಒಣ ಆಚಾರಗಳಿಂದಾಗದು. ಅಜ್ಞಾನ ಕತ್ತಲೆಯಲ್ಲಿ ತಡವರಿಸುತ್ತಿರುವ ಕನ್ನಡಿಗರಿಗೆ ವಚನಾನುಭವವು ಕೈದೀವಟಿಗೆಯಾಗಿದೆ. ವಚನ ವಾಙ್ಮಯವನ್ನು ಒಳಗಣ್ಣಿನಿಂದ ದಿಟ್ಟಿಸಿ ನೋಡಿದರೆ ಅದರಲ್ಲಿರುವ ಅರ್ಥಗಾಂಭೀರ್ಯವೂ, ಉಪಮಾನ ಉಪಮೇಯ ಭಾವವೂ, ಪದಲಾಲಿತ್ಯವೂ ಕಂಡು ಕೌತುಕವಾಗಬಹುದು.

ಈ ಬರಹದ ಮುಗಿತಾಯದ ಮೊದಲು ಕೆಲವು ವಚನಗಳನ್ನು ಬರೆದರೆ ಅದು ಅಪ್ರಸ್ತುತವಾಗಲಾರದು.

"ನೆಲದ ಮರೆಯ ನಿಧಾನದಂತೆ, ತಿಲದ ಮರೆಯ ತೈಲದಂತೆ, ಬಯಲ ಮರೆಯ ಮರೀಚಿಯಂತೆ ಗುಹೇಶ್ವರಾ ನಿಮ್ಮ ನಿಲವು."

ಇಲ್ಲಿ "ತತ್ಸೃಷ್ಟ್ವಾ ತದೇವಾನುಪ್ರಾವಿಶತ್" ಎಂಬ ಉಪನಿಷತ್ಸಾರವನ್ನು ಪ್ರಭುದೇವರು ತಮ್ಮ ಚೆನ್ನ ಕನ್ನಡ ನುಡಿಯಲ್ಲಿ ಸುಲಭವಾಗಿ ಸುಂದರವಾಗಿ ಹೇಳಿರುವರು.

"ಹೊನ್ನು ಮಾಯೆ ಎಂಬರು. ಹೆಣ್ಣು ಮಾಯೆ ಎಂಬರು. ಮಣ್ಣು ಮಾಯೆ ಎಂಬರು. ಹೊನ್ನು ಹೆಣ್ಣು ಮಣ್ಣು ಮಾಯೆಯಲ್ಲ ಮನದ ಮುಂದಣಾಶೆಯೇ ಮಾಯೆ ಕಾಣಾ ಗುಹೇಶ್ವರಾ."

ಈ ವಚನವನ್ನು "ಚಿತ್ತಮೇವ ಹಿ ಸಂಸಾರಃ" ಎಂಬ ಉಪನಿಷದುಕ್ತಿಗೆ ಹೊಂದಿಸಿ ಚೆಲುವಾಗಿ ನುಡಿದಿರುವರು ನಮ್ಮ ಪ್ರಭುದೇವರು. ಯಾವಾಗಲೂ ಬದಲಾಗಬೇಕಾದದ್ದು ಈಶ ಸೃಷ್ಟಿಯಲ್ಲ. ನಮ್ಮ ದೃಷ್ಟಿ. ದೃಷ್ಟಿ ಸಂಕುಚಿತವಾದರೆ ಸೃಷ್ಟಿಯು ವಿಷಕುಂಭವಾಗುವದು. ದೃಷ್ಟಿಯು ಅರಳಿದರೆ ಸೃಷ್ಟಿಯು ಮಧುಮಯ ಘಟವಾಗುವದು. ಯಾವದನ್ನು ಮಾಡಿಕೊಳ್ಳುವದು ತನ್ನ ಕಡೆಗೆ?

"ಕಳಬೇಡ. ಕೊಲಬೇಡ. ಹುಸಿಯ ನುಡಿಯಲು ಬೇಡ. ಮುನಿಯಬೇಡ. ಅನ್ಯರಿಗೆ ಅಸಹ್ಯಪಡಬೇಡ. ತನ್ನ ಬಣ್ಣಿಸಬೇಡ. ಇದಿರು ಹಳಿಯಲು

ಬೇಡ. ಇದೇ ಅಂತರಂಗ ಶುದ್ಧಿ. ಇದೇ ಬಹಿರಂಗ ಶುದ್ಧಿ. ಇದೇ ಕೂಡಲ ಸಂಗನನೊಲಿಸುವ ಪರಿ."

ಇಲ್ಲಿ ಆಡಂಬರದ ದೇವಪೂಜೆಗಿಂತಲೂ ಗುಣಮಯ ಪೂಜೆಗೆ ಮಹತ್ವವನ್ನು ಬಸವೇಶನು ಕೊಟ್ಟಿರುವನು.

"ಲೋಕದ ಡೊಂಕ ನೀವೇಕೆ ತಿದ್ದುವಿರಿ. ನಿಮ್ಮ ನಿಮ್ಮ ಮನವ ಸಂತೈಸಿಕೊಳ್ಳಿ. ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ. ನೆರೆಮನೆಯವರ ದುಃಖಕ್ಕೆ ಅಳುವರ ಮೆಚ್ಚ ನಮ್ಮ ಕೂಡಲ ಸಂಗಮದೇವ."

ದಿನ ಬೆಳಗಾದರೆ ನೂರಾರು ತಪ್ಪುಗಳನ್ನು ಮಾಡುವ ಮನೋವೃತ್ತಿಯುಳ್ಳವರು ಅನ್ಯರಿಗೆ ಧರ್ಮಬೋಧೆ ಮಾಡಲು ಹೆಣಗಬೇಡಿರಿ. ಮೊದಲು ನೀವು ಶುದ್ಧರಾಗಿರಿ. ತಾನು ಶುದ್ಧನಾಗದೆ ಇನ್ನೊಬ್ಬರಿಗೆ ಹೇಳಹೋಗುವದು ಸರಿಯಲ್ಲ.

"ನೀರ ಬೊಬ್ಬುಳಿಕೆಗೆ ಕಬ್ಬಿಣದ ಕಟ್ಟು ಕೊಟ್ಟು ಸುರಕ್ಷಿತತೆಯ ಮಾಡುವ ಭರವ ನೋಡಯ್ಯ. ಮಹಾದಾನಿ ಕೂಡಲ ಸಂಗನ ಪೂಜಿಸಿ ಬದುಕೋ—ಕಾಯವ ನಿಶ್ಚಯಿಸದೆ."

"ಆನೆಯನೇರಿಕೊಂಡು ಹೋದಿರಿ ನೀವು. ಕುದುರೆಯನೇರಿಕೊಂಡು ಹೋದಿರಿ ನೀವು. ಕುಂಕುಮ ಕಸ್ತುರಿ ಪೂಸಿಕೊಂಡು ಹೋದಿರಿ ನೀವು. ಸತ್ಯದ ನಿಲವನರಿಯದೆ ಹೋದಿರಲ್ಲ! ಸದ್ಗುಣವೆಂಬ ಫಲವ ಬಿತ್ತದೆ ಬೆಳೆಯದೆ ಪೋದಿರಲ್ಲ! ಅಹಂಕಾರವೆಂಬ ಮದಗಜವನೇರಿ ಕೆಟ್ಟುಹೋದಿರಲ್ಲ! ನಮ್ಮ ಕೂಡಲ ಸಂಗಮದೇವರನರಿಯದೆ ನರಕಭಾಜನರಾದಿರಲ್ಲ!"

ಕೆಟ್ಟುಹೋಗುವ ಕಾಯವನ್ನು ನಂಬಿ ನೀನು ಮಾಡಬೇಕಾದ ಮಹತ್ಕಾರ್ಯವನ್ನು ಮರೆಯಬೇಡವೆಂದು ಶ್ರೀ ಬಸವಣ್ಣನವರು ಹೇಳುವದಲ್ಲದೆ, ಅತ್ಯಂತ ಕನಿಕರದಿಂದ ತಾಯಿಯಂತೆ ತಳೆವಡವಿ. ಮಿದುವಾಗಿ ಮುದ್ದಾಗಿ ನುಡಿದಿರುವರು.

"ಉಭಯ ದೃಷ್ಟಿಯಿಂದ ದೃಷ್ಟವ ಕಾಂಬಂತೆ ದಂಪತಿ ಏಕಭಾವವಾಗಿ ನಿಂದಲ್ಲಿ ಗುಹೇಶ್ವರ ಲಿಂಗದಲ್ಲಿ ಅರ್ಪಿತವಾಯಿತ್ತು ಸಂಗನ ಬಸವಣ್ಣ."

"ಸತಿಪತಿಯೊಂದಾಗಿ ಮಾಡಿದ ಭಕ್ತಿ ಹಿತವಹುದು. ಸತಿಪತಿಗಳೊಂದಾಗದ ಭಕ್ತಿ ಅಮೃತದಲ್ಲಿ ವಿಷಬೆರಸಿದಂತೆ ಕಾಣಾ ರಾಮನಾಥ."

"ಹೆಣ್ಣು ಹೆಣ್ಣಲ್ಲ. ಹೆಣ್ಣು ರಾಕ್ಷಸಿಯಲ್ಲ. ಹೆಣ್ಣು ಪ್ರತ್ಯಕ್ಷ ಕಪಿಲಸಿದ್ಧ ಮಲ್ಲಿಕಾರ್ಜುನ."

"ಸ್ತ್ರೀಶೂದ್ರಾನಾಧೀಯಾತಾಂ" ಎಂದು, ಹೆಣ್ಣುಮಕ್ಕಳನ್ನು ಹಿಂದುಳಿಸದೆ ಸ್ತ್ರೀಯರಾದರೂ ಧಾರ್ಮಿಕ ವಿಷಯದಲ್ಲಿ ಪುರುಷರಿಗೆ ಸಮನಾಗಿರಬೇಕು, ಅವರಿಗೂ ಸದ್ಗತಿಯುಂಟು, ದೇವರ ಸಾನ್ನಿಧ್ಯದಲ್ಲಿ ಸ್ಥಾನವುಂಟು—ಎಂದು ಶರಣರು ಬಾಯಿಂದ ಹೇಳಿದರಿಷ್ಟೇ ಅಲ್ಲ. ಅದರಂತೆ ಶಿವಾನುಭವ ಮಂಟಪದಲ್ಲಿ ಸರಿಸಮಾನವಾದ ಗದ್ದುಗೆಯನ್ನು ಕೊಟ್ಟರು. ಜ್ಞಾನಾನುಭವಗಳಿಗೆ ತವರಾದ ಮಹಾದೇವಿಯಕ್ಕ, ನಿಂಬೆಕ್ಕ, ನೀಲಾಂಬಿಕೆಯರ ಉಜ್ಜ್ವಲ ಜೀವನದಿಂದ ನಾವು ಅನೇಕ ಪಾಠಗಳನ್ನು ಕಲಿಯಬೇಕಾಗಿದೆ.

> “ಸೆಟ್ಟಿ ಎಂಬೆನೆ ಸಿರಿಯಾಳನ! ಮಡಿವಾಳನೆಂಬೆನೆ ಮಾಚಯ್ಯನ! ಡೋಹರನೆಂಬೆನೆ ಕಕ್ಕಯ್ಯನ! ಆನು ಹಾರುವನೆಂಬರೆ ಕೂಡಲ ಸಂಗಯ್ಯ ನಗುವನಯ್ಯ.”

> “ಹರನು ಮೂಲಿಗನಾಗಿ ಪುರಾತನರೊಳಗಾಗಿ ಬಳಿ ಬಳಿಯಲು ಬಂದ ಮಾದಾರ ಚೆನ್ನಯ್ಯನ ಮಗ ನಾನಯ್ಯ.”

ಎಂದು ಬಸವ ಮಹಾನುಭಾವನು ಆನಂದದಿಂದ ನುಡಿದದ್ದು ಸಾಮಾನ್ಯವಾದುದಲ್ಲ. ಮೇಲಿನವರ ಅಹಂಕಾರದಿಂದ ಕೆಳಗಿದ್ದವರ ಅಜ್ಞಾನ ಅಪ್ರಯತ್ನಗಳಿಂದ ಜೀವನವು ಕೆಲವರಿಗೆ ಸುರಲೋಕವಾಗಿಯೂ, ಕೆಲವರಿಗೆ ಭೀಷಣ ಸ್ಮಶಾನವಾಗಿಯೂ ಕಾಣುತ್ತಿರುವ ಕಾಲದಲ್ಲಿ ಅಸಾಧಾರಣ ವೃತ್ತಿಯ ಮೂಲಕವಾಗಿ ಎಲ್ಲರೂ ಮೋಕ್ಷವನ್ನು ಸಂಪಾದಿಸಬಹುದು ಎಂದು ಹೇಳಿ ಅದರಂತೆ ನಡೆದು ತೋರಿಸಿದ ಎದೆಗಾರಿಕೆಯೇನು ಸಾಮಾನ್ಯವಾದುದೇ ?

> “ಹೊತ್ತಾರೆ ಎದ್ದು ಕಣ್ಣ ಹೊಸೆವುತ್ತ ಎನ್ನ ಒಡಲಿಂಗೆ ಎನ್ನ ಮಡದಿ ಮಕ್ಕಳಿಗೆಂದು ಕುದಿದೆನಾದರೆ ಮನಕ್ಕೆ ಮನವೇ ಸಾಕ್ಷಿ. ಹೊಲೆ ಹೊಲೆಯರ ಮನೆಯ ಹೊಕ್ಕಾದರೂ ಸಲೆ ಕೈಕೂಲಿಯ ಮಾಡಿ ನಿಮ್ಮ ನಿಲವಿಂಗೆ ಕುದಿವೆನಲ್ಲದೆ ಎನ್ನ ಒಡಲವಸರಕ್ಕೆ ಕುದಿದೆನಾದರೆ ತಲೆದಂಡ ತಲೆದಂಡ.”

ಈ ವಚನವನ್ನು ಹಾಡಿ ಬಸವಣ್ಣನವರು ಕಾಯಕದ ರೀತಿಯನ್ನು ತಿಳಿಸುವದಲ್ಲದೆ ಕಾಯಕ ಪ್ರೇಮವನ್ನೂ ತೋರಿಸಿರುವರು.

> “ಹೊನ್ನಿನೊಳಗೊಂದೊರೆಯ, ಅನ್ನದೊಳಗೊಂದಗುಳ, ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದಡೆ ನಿಮ್ಮಾಣೆ ನಿಮ್ಮ ಪುರಾತನರಾಣೆ.”

ಎಂದು ವೀರಪ್ರತಿಜ್ಞೆಯಿಂದ ನಡೆದ ಶರಣರಲ್ಲಿ ನಿರಿಚ್ಛಾಭಾವದ ಪರಮಾವಧಿಯನ್ನು ಕಾಣಬಹುದು.

> “ವಿತ್ತ ಬಹುವಾಗಿದ್ದು ಫಲವೇನು ಆಯುಷ್ಯವಿಲ್ಲದನ್ನಕ್ಕರ? ಹೇಡಿಯ ಕೈಯಲ್ಲಿ ಚಂದ್ರಾಯುಧವಿದ್ದರೇನು? ಅಂಧಕನ ಕೈಯಲ್ಲಿ ದರ್ಪಣವಿದ್ದರೇನು? ಕೂಡಲಸಂಗನನರಿಯದವರ ಕೈಯಲ್ಲಿ ಲಿಂಗವಿದ್ದು ಫಲವೇನು ಶಿವಪಥವನರಿಯದನ್ನಕ್ಕರ?”

> “ಹಾಲ ಹರವಿಯ ಮೇಲೆ ಮಜ್ಜಿಗೆ ತುಂಬಿರಿಸಿದಡೇನು, ಹೆಪ್ಪಾಗಬಲ್ಲದೇ ಸಮ್ಮಿಶ್ರದಿಂದಲ್ಲದೆ? ಅಂಗದಲ್ಲಿ ಲಿಂಗಧಾರಣ ಮಾಡಿದರೇನು, ಸಮರಸವಾಗಬಲ್ಲುದೇನಯ್ಯ ಶಿವಭಕ್ತಿ ಶಿವಜ್ಞಾನವಿಲ್ಲದೆ ಅಖಂಡೇಶ್ವರ?”

> “ಅರೆದೆರೆದೆವೆ ದೃಷ್ಟಿಯ ಲಿಂಗದಲ್ಲಿರಿಸಿ ಹೃದಯ ಕಮಲದಲ್ಲಿ ಅಚಲಲಿಂಗವಂ ಜ್ಞಾನಲೋಚನದಿಂ ನಿಟ್ಟಿಸುತ್ತ ತನುಮನೇಂದ್ರಿಯ ತರಹರವಾಗಿ ಮನ ನಿವಾತಜ್ಯೋತಿಯಂತೆ ನಿಂದು ನಿಜವ ಕೂಡ ಬಲ್ಲಾತನೆ ಸ್ವತಂತ್ರ ಸಿದ್ಧಲಿಂಗನಲ್ಲಿ ಸಹಜಯೋಗಿ.”

ಲಿಂಗಧಾರಣವನ್ನು ಮೇಲೆ ಮಾಡಿದ ಮಾತ್ರಕ್ಕೆ ವೀರಶೈವದ ಮೇರೆಯನ್ನು ಮುಟ್ಟದಂತಾಗಲಿಲ್ಲ. ಶಿವಭಕ್ತಿ ಶಿವಜ್ಞಾನಗಳೊಡನೆ ಶಿವಯೋಗ ಸಾಧನೆಮಾಡಿ, ಮನದಲ್ಲಿ ಮಹಾಲಿಂಗವನ್ನು ಮಹಾಲಿಂಗದಲ್ಲಿ ಮನವನ್ನು ತುಂಬಿ, ಸರ್ವತ್ರ ಬ್ರಹ್ಮಭಾವನೆಯು ಕರಿಗೊಂಡು ಕಡೆಗೆ ಆ ಭಾವವೂ ಸಹ ಲಯವಾಗಬೇಕೆಂಬೀ ರಹಸ್ಯವನ್ನು ಶರಣರು ಇಲ್ಲಿ ಹೇಳಿರುವರು.

"ಹರನೀವಕಾಲಕ್ಕೆ ಹರಿದು ಹೆದ್ದೊರೆಯು ಬಂದು ಕೆರೆಯ ಹೊಕ್ಕಂತೆ ಸಿರಿಯು ಬೆನ್ನಲಿ ಬಕ್ಕು. ಅರಸು ಪರಿವಾರ ಕೈವಾರವಕ್ಕು. ಹರಮುನಿದ ಕಾಲಕ್ಕೆ ತುಂಬಿದ ಹರವಿಗೆ ಕಲ್ಲುತಾಗಿದಂತೆ ಕಾಣಾ ಪ್ರಭುವೆ."

ಯಾವದಕ್ಕಾದರೂ ದೇವರ ಪ್ರಸಾದವು ಬೇಕೆಂಬುದನ್ನೂ ಅದು ತಪ್ಪಿದರೆ ಆಗುವ ಹಾನಿಯನ್ನೂ ಸಹ ಇಲ್ಲಿ ಹೇಳಿರುವರು.

"ಹೊಯ್ದರೆ ಹೊಯ್ಗಳು ಕೈಯಮೇಲೆ, ಬೈದರೆ ಬೈಗುಳು ಕೈಯಮೇಲೆ, ಕೂಡಲ ಸಂಗಮನಾಥ ನಿಮ್ಮ ಮನಮುಟ್ಟಿ ಪೂಜಿಸಿದ ಫಲವು ಕೈಯ ಮೇಲೆ."

ಅನನ್ಯಮನಸ್ಕನಾಗಿ ದೃಢಭಕ್ತಿಯಿಂದ ದೇವರನ್ನು ಭಜಿಸಿದವನಿಗೆ ಇದೇ ಜನ್ಮದಲ್ಲಿ ಶಾಂತಿಯು ಸಿಗುವದು.

ಶರಣರು ಈ ರೀತಿಯಾಗಿ ಐಹಿಕ ಆಮುಷ್ಮಿಕ ಸುಖಸಾಧನಗಳನ್ನು ಆತ್ಮ ಸಂಶೋಧನೆಗಾಗಿ ಅಂತಃಕರಣದಿಂದ ಜಗತ್ತಿಗೆ ತಿಳಿಸಿ ಉದಾರಚರಿತರಾದರು. ಅವರ ಸಾಹಿತ್ಯದಿಂದ ಜನತೆಯ ಸಂಸ್ಕೃತಿಮಟ್ಟವು ಮೇಲಕ್ಕೇರಿತು. ಕನ್ನಡವು ಎಲ್ಲರಿಗೂ ಕೈಗನ್ನಡಿಯಾಯಿತು. ಅವರ ಅನುಭವವು ಎಲ್ಲರ ಎದೆಯಲ್ಲಿ ಅಚ್ಚಳಿಯದೆ ಉಳಿಯಲಿ. ಉಳಿದು ಬೆಳಗಲಿ.

**ಶ್ರೀ ಶ್ರೀ ಬಸವಲಿಂಗಸ್ವಾಮಿಗಳವರು**

# ಕನ್ನಡ ಸಾಹಿತ್ಯದಲ್ಲಿ ವಚನಗಳ ಸ್ಥಾನ

ಕನ್ನಡ ಸಾಹಿತ್ಯ ಪ್ರವಾಹವು ಕಳೆದ ಸಾವಿರ ವರ್ಷಗಳಿಂದ ನಾನಾ ಮುಖ ವಾಗಿ ಹರಿದಿರುವುದಷ್ಟೆ. ಇಂತಹ ಪ್ರಾಚೀನವಾದ ಸಾಹಿತ್ಯದಲ್ಲಿ ಜೈನರೂ, ವೀರಶೈವರೂ, ಬ್ರಾಹ್ಮಣರೂ ಮತ್ತು ಕ್ರಿಶ್ಚಿಯನ್ನರೂ ಮೊದಲಾದ ಕವಿಗಳು ಅನೇಕ ತರದ ಗ್ರಂಥಗಳನ್ನು ಬರೆದು ಈ ಸಾಹಿತ್ಯವನ್ನು ಬೆಳಕಿಗೆ ತಂದಿರುತ್ತಾರೆ. ಈ ಸಾಹಿತ್ಯದಲ್ಲಿ ಹರಿದಾಸರು ತಮ್ಮ ಅದ್ಭುತಗಳಾದ ವೇದಾಂತದ ಹಾಡುಗಳಿಂದ ಜನರನ್ನು ತಲೆದೂಗಿಸಿರುವರು. ಅದರಂತೆಯೇ ಶಿವಶರಣರು ವಚನವಾಙ್ಮಯವನ್ನು ರಚಿಸಿ ನಮ್ಮ ಕನ್ನಡ ಸಾಹಿತ್ಯವನ್ನು ಪೋಷಿಸುತ್ತ ಬಂದಿದ್ದಾರೆ. ಈ ವಚನ ವಾಙ್ಮಯವು ಕನ್ನಡದಲ್ಲಿ ಪೂಜ್ಯವಾದ ಸ್ಥಾನವನ್ನು ಹೊಂದಲು ಯೋಗ್ಯವಾಗಿರು ತ್ತದೆ. ಯಾವುದಾದರೊಂದು ಸಾಹಿತ್ಯವು ಬೆಳೆಯಬೇಕಾದರೆ ಅದರಲ್ಲಿ ಎಲ್ಲ ತರದ ವಿಷಯಗಳಿರಬೇಕಾಗುತ್ತದೆ. ಈ ವಚನವಾಙ್ಮಯಕ್ಕೆ ಬಸವಣ್ಣನವರೇ ಮೂಲ ಪುರುಷರು. ಬಸವನಿಗಿಂತಲೂ ಪೂರ್ವದಲ್ಲಿ ಜೇಡರ ದಾಸಿಮಯ್ಯ ಮೊದಲಾ ದವರು ಈ ವಚನಗಳನ್ನು ಬರೆದಿದ್ದಾರೆ. ಈತನ ಅನುಕರಣವನ್ನೇ ಮಾಡಿ ಮುನ್ನೂರು ಜನ ಶಿವಶರಣರು ಎರಡೆಂಬತ್ತುಕೋಟಿ ವಚನಗಳನ್ನು ರಚಿಸಿರುತ್ತಾ ರೆಂಬುವ ಐತಿಹ್ಯವಿರುತ್ತದೆ. ಈ ಸಂಖ್ಯೆಯು ಸರಿಯಾಗಿರದಿದ್ದರೂ ವಚನ ವಾಙ್ಮಯವು ಅಪಾರವಾದುದು.

"ಆದ್ಯರ ವಚನ ಜ್ಞಾನದ ನೆಲೆಯ ತೆಗೆದಿರಿಸಿತ್ತು. ನಮ್ಮ ಆದ್ಯರ ವಚನ ಮದಮಾತ್ಸರ್ಯಾದಿ ಅರಿಷಡ್ವರ್ಗ ಸಪ್ತವ್ಯಸನ ಪಂಚೇಂದ್ರಿಯ ದಶವಾಯುಗಳ ಇಚ್ಛೆಗೆ ಹರಿವ ಮನವ ಸ್ವಸ್ಥವಾಗಿ ನಿಲ್ಲಿಸಿತ್ತು. ನಮ್ಮ ಆದ್ಯರ ವಚನ ಅಂಗೇಂದ್ರಿ ಯಂಗಳ ಲಿಂಗೇಂದ್ರಿಯವೆನಿಸಿತ್ತು. ನಮ್ಮ ಆದ್ಯರ ವಚನ ನೂರೊಂದು ಸ್ಥಲವ ಮೀರಿದ ಮಹದಲ್ಲಿ ನೆಲೆಸಿತ್ತು. ಇಂತಪ್ಪ ಆದ್ಯರ ವಚನ ಭಂಡಾರವ ನಮ್ಮ ಪ್ರಭುದೇವರು ಮುಖ್ಯರಾದ ೭೭೦ ಅಮರಗಣಂಗಳು ಅಸಂಖ್ಯಾತ ಪುರಾತನರು. ಪ್ರಮಥಗಣಂಗಳು, ಕೇಳಿ ಹೇಳಿ ಕೊಂಡಾಡಿದ ಕಾರಣ ನಮ್ಮ ಕೂಡಲ ಚೆನ್ನ ಸಂಗಯ್ಯನಲ್ಲಿ ಸರ್ವಸುಖವ ಸೂರೆಗೊಂಡು ಸ್ವಯಲಿಂಗವಾದರು. ಇಂತಪ್ಪ ಪುರಾತನರ ವಚನಂಗಳ ಎರಡಿಲ್ಲದೆ ಕೊಂಡಾಡಿ ತನುಮನಧನವ ಎರಡಿಲ್ಲದೆ ಸಮರ್ಪಿಸುವ ಭೃತ್ಯರ ಭೃತ್ಯ ನಾನು. ಆಳಿನಾಳಯ್ಯ ನಾನು."

—ಶ್ರೀ ಚೆನ್ನಬಸವಣ್ಣನವರು

ಹೀಗೆಯೇ ಅನೇಕ ಪುರಾತನರು ಕೂಡ ಈ ವಚನಗಳ ಮಹತ್ವವನ್ನು ಹೊಗಳಿ ರುತ್ತಾರೆ. ಕನ್ನಡ ಭಾಷೆಗೆ ಈ ವಚನವಾಙ್ಮಯದಿಂದ ಹೆಚ್ಚು ಶೋಭೆಯುಂಟಾ ಗಿರುತ್ತದೆ. ಕೆಲವರು ವಚನಕಾರರು ಸಂಪ್ರದಾಯ ವ್ಯಾಕರಣದ ಕಟ್ಟಿಗೆ ಒಳಪಡದೇ ಇದ್ದರೂ ಅವರ ಭಾಷಾಸೌಷ್ಠವವು ಅಪೂರ್ವವಾಗಿರುತ್ತದೆ.

ಅಕ್ಕಮಹಾದೇವಿಯರು ಪರಮಾತ್ಮನನ್ನು ಹುಡುಕಿಕೊಳ್ಳುತ್ತ ಶ್ರೀ ಶೈಲಕ್ಕೆ ಹೋದಾಗ್ಗೆ ಅಲ್ಲಿಯೂ ದೇವರನ್ನು ಕಾಣದೆ ಅಲ್ಲಿರುವ ಪಶುಪಕ್ಷಿಗಳನ್ನು ಕುರಿತು ಹೇಳುವ ವಚನವು ಅತ್ಯಂತ ಮನೋಹರವಾಗಿದೆ.

"ಚಿಲಿಮಿಲಿ ಎಂದೋದುವ ಗಿಳಿಗಳಿರಾ ನೀವು ಕಾಣಿರೆ?
ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ ನೀವು ಕಾಣಿರೆ?
ಎರಗಿ ಬಂದಾಡುವ ತುಂಬಿಗಳಿರಾ ನೀವು ಕಾಣಿರೆ?
ಸರೋವರದೊಳಗಾಡುವ ಹಂಸಗಳಿರಾ ನೀವು ಕಾಣಿರೆ?
ಗಿರಿಗಂಹರದೊಳಗಾಡುವ ಪುಳಿಂದರೆ ನೀವು ಕಾಣಿರೆ?
ಚೆನ್ನಮಲ್ಲಿಕಾರ್ಜುನನೆಲ್ಲಿದ್ದಾನೆಂದು ಹೇಳಿರೆ?"

ಈ ವಚನವನ್ನು ಓದಿನೋಡಿದರೆ ಇದೇ ವಚನದಂತೆ ಕಾಣುವ ಪದ್ಯಗಳನ್ನೂ ಇದೇ ತರದ ರೀತಿಯನ್ನೂ ಕನ್ನಡ ಕವಿಗಳಲ್ಲಿ ಪ್ರಸಿದ್ಧರಾಗಿರುವ ಲಕ್ಷ್ಮೀಶನ 'ಜೈಮಿನಿಯಲ್ಲಿ'ಯೂ, ವಿರೂಪಾಕ್ಷ ಪಂಡಿತನ 'ಚೆನ್ನಬಸವ ಪುರಾಣ'ದಲ್ಲಿಯೂ, ಕಾಣಬಹುದು.

ಘೋರಾರಣ್ಯದಲ್ಲಿ ಲಕ್ಷ್ಮಣನು ಸೀತೆಯನ್ನು ಬಿಟ್ಟು ಹೋಗುವ ಕಾಲಕ್ಕೆ

"ಎಲೆ ವನಸ್ಥಳಗಳಿರ ವೃಕ್ಷಂಗಳಿರ ಮೃಗಂ
ಗಳಿರ ಕ್ರಿಮಿಕೀಟಂಗಳಿರ ಪಕ್ಷಿಗಳಿರ ಲತೆ
ಗಳಿರ ತೃಣಗುಲ್ಮಂಗಳಿರ ಪಂಚಭೂತಂಗಳಿರ ದೆಸೆಗಳಿರ ಕಾವುದು
ಎಲೆ ಧರ್ಮದೇವತೆ ಜಗಜ್ಜನನಿ ಜಾಹ್ನವಿಯೆ
ಸಲಹಿಕೊಂಬುದು ತನ್ನ ಮಾತೆಯಂ ಜಾನಕಿಯ
ನೆಲೆತಾಯೆ ಭೂದೇವಿ ನಿನ್ನ ಮಗಳೆಂದು ಸೌಮಿತ್ರಿ ಕೈಮುಗಿದನು"

('ಜೈಮಿನಿ' ಸಂಧಿ ೧೯, ಶ್ಲೋಕ ೨೮)

ಇದರಂತೆ 'ಚೆನ್ನಬಸವ ಪುರಾಣ'ದಲ್ಲಿಯೂ ಕೆಳಗಿನ ಪದ್ಯವನ್ನು ನಾವು ಕಾಣಬಹುದು. ರತಿಯು ದುಃಖದಿಂದ ಮನ್ಮಥನನ್ನು ಕಾಣದೆ,

"ತರುಗಳಿರ ಲತೆಗಳಿರ ಮೃಗಪಕ್ಷಿಗಳಿರ ಭಾ
ಸುರಸುರಾಂಗನೆಯರಿರ ದಿಗ್ದೇವಿಯರಿರ ವರಗಿಳಿಗ
ಳಿರ ಭೂದೇವಿ ವನಲಕ್ಷ್ಮಿಯರಿರಾ ಕಂಡಿರೇ ಎನ್ನ ವಿಧಿಯನೀಗ"

(ಕಾಂಡ ೩, ಸಂಧಿ ೩೫)

ಅನೇಕ ವಚನಗಳನ್ನು ನಾವು ತೆಗೆದು ನೋಡಿದರೆ ಅವು ಉಪನಿಷತ್ತಿನ ಮಂತ್ರಗಳಿಗೆ ಸರಿಹೋಲುತ್ತವೆ.

"ಉಳ್ಳವರು ಶಿವಾಲಯವ ಮಾಡುವರು. ನಾನೇನು ಮಾಡುವೆನಯ್ಯಾ? ಬಡವನಯ್ಯ ಎನ್ನ ಕಾಲೆ ಕಂಬ ದೇಹವೇ ದೇಗುಲ ಶಿರ ಹೊನ್ನಕಳಸವಯ್ಯಾ ನೋಡಯ್ಯ ಕೂಡಲಸಂಗಮದೇವಯ್ಯ." (ಬಸವಣ್ಣನವರ ವಚನ)

"ದೇಹವೆಂಬ ದೇಗುಲದೊಳಗೆ ಭಾವಸಿಂಹಾಸನವ ಮಾಡಿ ಜೀವದೊಡೆಯನ ಪೂಜಿಸಬಲ್ಲ ದೇವರಿಗೆ ದೇವನೆಂದೆಂಬೆನಯ್ಯ ಅಖಂಡೇಶ್ವರ."

(ಅಖಂಡೇಶ್ವರ ವಚನ)

"ಎನ್ನ ಪಾದವೇ ಪಾದ ಶಿಲೆಯಾಗಿ, ಎನ್ನ ಕಾಲೇ ಕಡಹದ ಕಂಬಗಳಾಗಿ, ಎನ್ನ ತೋಳೇ ನಾಗವೇದಿಗೆಯಾಗಿ, ಎನ್ನ ಅಸ್ಥಿಯೇ ಸುತ್ತಲ ಜಂತೆಯಾಗಿ, ಎನ್ನ ಅಧರವೇ ಬಳ್ಳಿಯ ಬಾಗಿಲವಾಗಿ, ಎನ್ನ ಗುರುಕರುಣವೇ ಲಿಂಗವಾಗಿ, ಎನ್ನಂಗವೇ

ರಂಗಮಧ್ಯವಾಗಿ, ಎನ್ನ ಹೃದಯವೇ ಕಮಲ ಪೂಜೆಯಾಗಿ, ಎನ್ನ ಕಿವಿಗಳೇ ಕೀರ್ತಿ ಮುಖವಾಗಿ, ಎನ್ನ ನೆನೆವ ನಾಲಗೆಯೆ ಗಂಟೆಯಾಗಿ, ಎನ್ನ ಶಿರವೇ ಸುವರ್ಣ ಕಲಶ ವಾಗಿ, ಎನ್ನ ನಯನವೇ ಕುಂದದ ಜ್ಯೋತಿಯಾಗಿ, ಎನ್ನ ಚರ್ಮವೇ ನಿರ್ಮಲ ಹೊದಿಕೆಯಾಗಿ, ಎನ್ನ ನೆನಹೆ ನಿನಗೆ ಉಪಹಾರವಾಗಿ ಗುರುಪುರದ ಮಲ್ಲಯ್ಯ ನಿಂದಲಾಗಿ" ಎಂದು ಮತ್ತೊಬ್ಬ ಶರಣ ಹಾಡಿದ್ದಾನೆ.

ಮೇಲೆ ಉದಾಹರಿಸಿದ ಮೂರು ವಚನಗಳಿಗೂ ಸರಿಹೋಲುವ ಉಪನಿಷ ದ್ವಾಕ್ಯವು ಕೆಳಗೆ ಬರೆದಂತಿರುತ್ತದೆ.

ದೇಹೋ ದೇವಾಲಯಃ ಪ್ರೋಕ್ತೋ ।
ಜೀವೋಯಂ ಶಂಕರಃ ಸ್ಮೃತಃ ॥

ಹೀಗೆಯೇ ಅನೇಕ ವಚನಗಳು ಉಪನಿಷತ್ತುಗಳಿಗೆ ಸರಿಯಾಗಿರುತ್ತವೆ. ಇನ್ನೂ ವಚನಗಳಲ್ಲಿ ಕೆಲವರು ಯೋಗಶಾಸ್ತ್ರದ ಮರ್ಮವನ್ನು ಬಹಳ ಚೆನ್ನಾಗಿ ಪ್ರತಿಪಾದಿಸಿರುತ್ತಾರೆ. ಆ ವಚನಗಳಿಗೂ ಯೋಗಶಾಸ್ತ್ರದ ತತ್ವಕ್ಕೂ ನಾವು ಇಲ್ಲಿ ಒರೆಹಚ್ಚಿ ನೋಡೋಣ.

ಯೋಗಶಾಸ್ತ್ರದ ತತ್ವಗಳೆಲ್ಲ ವಚನಗಳಲ್ಲಿ ಚೆನ್ನಾಗಿ ಅಡಗಿಕೊಂಡಿರುತ್ತವೆ. ಶಿವಶರಣರು ರಾಜಯೋಗ, ಹಠಯೋಗಗಳಿಗಿಂತಲೂ ಭಕ್ತಿಯೋಗ, ಶಿವಯೋಗ ಗಳನ್ನು ಚೆನ್ನಾಗಿ ಪ್ರತಿಪಾದಿಸಿರುತ್ತಾರೆ. ಯೋಗಶಾಸ್ತ್ರಕ್ಕೆ ಎಂಟು ಅಂಗಗಳಾದ ಯಮನಿಯಮಾದಿಗಳನ್ನು ವೀರಶೈವ ಸ್ಥಲಗಳಿಗೆ ಚೆನ್ನಾಗಿ ಜೋಡಿಸಿರುತ್ತಾರೆ.

"ದೇಹವಾಸನೆ ಹರಿದು ಆತ್ಮಭವ ಬಂಧನಗಳ ಕೀಲ ಮುರಿದು ಪರಾತ್ಪರವಾದ ಪ್ರಾಣಲಿಂಗವನೊಡಗೂಡುವುದಕ್ಕೆ ಆವುದು ಸಾಧನವೆಂದರೆ, ಎಲ್ಲಾ ಗುಣಂಗಳೂ ತಿಳಿಯುವಂತೆ ಹೇಳುವೆ ಕೇಳಿರಯ್ಯ. ಎಂಬತ್ತೆಂಟು ಆಸನಗಳಲ್ಲಿ ಮುಖ್ಯ ವಾಗಿರ್ಪುದು ಸಿದ್ಧಾಸನವು. ಆ ಸಿದ್ಧಾಸನದ ವಿವರವೆಂತೆಂದೊಡೆ— ಗುದ, ಗುಹ್ಯ ಮಧ್ಯಸ್ಥಾನವಾದ ಯೋನಿಮಂಡಲವೆಂಬ ದ್ವಾರ. ಆ ದ್ವಾರಕ್ಕೆ ಎಡ ಹಿಮ್ಮಡವನಿಕ್ಕಿ ಬಲಹಿಮ್ಮಡವ ಮೇಢ್ರಸ್ಥಾನದಲ್ಲಿರಿಸಿ ಅತ್ತಿತ್ತಲುಕದೆ ಬೆನ್ನೆಲುವ ಕೊಂಕಿಸದೆ ನೆಟ್ಟನೆ ಕುಳ್ಳಿರ್ದು ಉಭಯಲೋಚನವನೊಮ್ಮ ಮಾಡಿ ಉನ್ಮನಿಯ ಸ್ಥಾನದಲ್ಲಿರಿಸಿ ತ್ವಕ್, ನೇತ್ರ, ಜಿಹ್ವೆ, ಶ್ರೋತ್ರ, ಘ್ರಾಣ, ಹೃದಯವೆಂಬ ಆರು ದ್ವಾರಗಳನ್ನು ಆರಂಗುಲದಿಂದೆತ್ತಲು ಮೂಲಾಧಾರದಲ್ಲಿರ್ದ ಮೂಲಾಗ್ನಿ ಪಟುತರವಾಗಿ ಪವನ ನೊಡಗೂಡಿ ಮನಸ್ಥಿರಗೊಂಡು ಊರ್ಧ್ವಕ್ಕೆ ಹೋಗಿ ಉಭಯಲಿಂಗದೊಳಗಿರ್ದ ಮಹಾಲಿಂಗವನೊಡಗೂಡಿ ಅನಂತಕೋಟ ಸೂರ್ಯಾಗ್ನಿ ಚಂದ್ರಪ್ರಕಾಶವನೊಳ ಗೊಂಡು ಅಲ್ಲಿ ಸೂಕ್ಷ್ಮವಾಗಿ ಅಂಗುಲ ಪ್ರಮಾಣವಾಗಿ ಶುದ್ಧ ತಾರೆಯಂತೆ ಕಂಗಳ ನೋಟಕ್ಕೆ ಕರತಲಾಮಲಕವಾಗಿ ಕಾಣಿಸುತಿರ್ಪ ಪ್ರಾಣಲಿಂಗದಲ್ಲಿ ಪ್ರಾಣ ಸಂಯೋಗ ಮಾಡಬಲ್ಲಾತನೇ ಯೋಗಿ." (ಅಖಂಡೇಶ್ವರರು)

ಮೇಲಿನ ವಚನವನ್ನು ವಿಚಾರಪೂರ್ವಕವಾಗಿ ಓದಿನೋಡಿದರೆ ವಚನಶಾಸ್ತ್ರ ಕಾರರ ವಿಷಯ ವಿವೇಚನೆಯು ಎಷ್ಟು ಆಳವಾಗಿದೆ ಎಂಬುವುದು ನಿಚ್ಚಳವಾಗಿ ಕಾಣುತ್ತದೆ. ಇದರ ಸಂಗಡ ಅವರ ಅನುಭವವು ಹೊರಹೊಮ್ಮುತ್ತಲಿದೆ. ಇಂತಹ ಅನೇಕ ವಚನಗಳು ಯೋಗಶಾಸ್ತ್ರ ವಚನದಲ್ಲಿರುತ್ತವೆ.

ದೇವರು ಎಲ್ಲಿದ್ದಾನೆ? ಹೇಗೆ ಇದ್ದಾನೆ? ಅವನ ನಿಜ ಸ್ವರೂಪವೇನು? ಜಗತ್ತಿಗೂ ಆತನಿಗೂ ಇರತಕ್ಕ ಸಂಬಂಧವೇನು? ದಯೆಯ ಆವಶ್ಯಕತೆಯು ಧರ್ಮದಲ್ಲಿ ಎಷ್ಟರಮಟ್ಟಿಗೆ ಬೇಕಾಗುತ್ತದೆ? ಸತ್ಯದಿಂದಾಗತಕ್ಕ ಲಾಭಗಳೇನು? ಅಹಿಂಸಾವ್ರತವನ್ನು ಹೇಗೆ ಪಾಲಿಸಬೇಕು? ಇತ್ಯಾದಿ ನೂರಾರು ವಿಷಯಗಳನ್ನು ವಚನಗಳು ಚೆನ್ನಾಗಿ ಪ್ರತಿಪಾದಿಸುತ್ತವೆ. ಅಂತು ವಚನಶಾಸ್ತ್ರಕಾರರು ಎಲ್ಲ ವೇದಶಾಸ್ತ್ರ ವಿಷಯಗಳ ಮರ್ಮಗಳನ್ನು ವಿವರಿಸಿದ್ದಾರೆ.

ಹೀಗೆಯೇ ಭಗವದ್ಗೀತೆಗೂ ಕೆಲವು ವಚನಕಾರರ ವಚನಗಳನ್ನು ಸರಿಹೋಲಿಸಿ ನೋಡಿದರೆ ಗೀತೆಯ ತಿರುಳೆಲ್ಲ ವಚನಗಳಲ್ಲಿ ಬಂದುಹೋಗಿರುತ್ತದೆ.

"ಕೆಡೆನಡೆಯದೆ ಕೆಡೆನುಡಿಯದೆ ಅನ್ಯರ ಪ್ರತಿಪಾದಿಸದಿದ್ದರೆ ಏನು ಮಾಡ ನಯ್ಯ ಲಿಂಗವು? ಏನು ಕೊಡನಯ್ಯ ಲಿಂಗವು? ತಾನೇನ ಬೇಡಿದುದ ನೀವನಾಗಿ ನಂಬಿಕೆಯುಳ್ಳ ಶಿವಭಕ್ತಂಗೆ ಇದೇ ಕೂಡಲಸಂಗಮದೇವ."

(ಬಸವೇಶ್ವರನ ವಚನ)

ನಹಿ ಕಲ್ಯಾಣಕೃತ್ ಕಶ್ಚಿತ್ ।
ದುರ್ಗತಿಂ ತಾತ ಗಚ್ಛತಿ ॥ (ಭಗವದ್ಗೀತಾ)

ಹೀಗೆಯೇ ಅನೇಕ ವಚನಗಳಿಗೂ ಗೀತೆಗೂ ಸರಿಹೋಲಿಸಿ ನೋಡಬಹುದಾಗಿರುತ್ತದೆ.

ಹೀಗೆಯೇ ಎಲ್ಲಾ ಶಾಸ್ತ್ರಗಳ ವಿಷಯಗಳು ವಚನಗಳಲ್ಲಿ ಅಡಕವಾಗಿರುತ್ತವೆ. ಉಪನಿಷತ್ತುಗಳಿಂದಲೂ ಆಗದಷ್ಟು ವೇದಾಂತ ಪ್ರಚಾರವು ಕನ್ನಡ ಜನರಲ್ಲಿ ಈ ವಚನಗಳಿಂದಾಗಿರುತ್ತದೆ. ಕನ್ನಡ ತಾಯಿಯ ನುಡಿಯಲ್ಲಿ ಈ ತರದ ವೇದಾಂತದ ವಿಷಯಗಳಿರುವುದು ಕನ್ನಡಿಗರಿಗೆ ಹೆಮ್ಮೆಯ ಮಾತಾಗಿರುತ್ತದೆ. ಇಂತಹ ವಚನಗಳು ಇತ್ತೀಚೆಗೆ ಜನರ ಕೈಸೇರಿದಂತೆಯೇ ಅವುಗಳ ಯೋಗ್ಯತೆಯು ಜನಗಳಿಗೆ ಹೆಚ್ಚಾಗಿ ತಿಳಿಯುತ್ತಲಿವೆ. ವಚನಗಳ ವಿಷಯಗಳು ಬಹಳ ಇರುತ್ತವೆ. ಅವುಗಳನ್ನೆಲ್ಲಾ ಈ ಚಿಕ್ಕ ಲೇಖದಲ್ಲಿ ವಿವೇಚನಮಾಡಲು ಸಾಧ್ಯವಿಲ್ಲ.

**ವ್ಯಾಕರಣತೀರ್ಥ ಚಂದ್ರಶೇಖರಶಾಸ್ತ್ರಿಗಳು**

# ಕನ್ನಡ ಸಾಹಿತ್ಯಕ್ಕೆ ವೀರಶೈವರ ಮುಡಿಪು

ನೃಪತುಂಗನಿಗಿಂತ ಹಿಂದೆ ಇದ್ದು, ಕರ್ಣಾಟಕ ದೇಶದಲ್ಲೇ ಹುಟ್ಟಿ, ಬೆಳೆದ ಸಮಂತಭದ್ರ, ಕವಿಪರಮೇಷ್ಠಿ, ಪೂಜ್ಯಪಾದ ಮೊದಲಾದವರು ಸಂಸ್ಕೃತದಲ್ಲೇ ತಮ್ಮ ಗ್ರಂಥಗಳನ್ನು ಬರೆದಿರುತ್ತಾರೆ. ಮುಖ್ಯವಾಗಿ ಮತಗ್ರಂಥಗಳನ್ನು ಸಂಸ್ಕೃತ ಪ್ರಾಕೃತಗಳ ವಿನಾ ಇತರ ಭಾಷೆಗಳಲ್ಲಿ ಬರೆಯುವುದಕ್ಕೆ ಆಗಿನ ಕಾಲದ ಗ್ರಂಥಕರ್ತೃಗಳಿಗೆ ಧೈರ್ಯವು ಮೈಗೂಡಲಿಲ್ಲ. ಇದರಿಂದ ವೇದಾಗಮೋಪನಿಷತ್ತುಗಳಲ್ಲಿ ಯಾವ ವಿಧವಾದ ಧರ್ಮತತ್ವಗಳು ಅಡಗಿವೆ? ಮನ್ವಾದಿ ಧರ್ಮಶಾಸ್ತ್ರಗಳಲ್ಲಿ ಬೋಧಿತವಾಗಿರುವ ನೀತಿ ಸೂಕ್ಷ್ಮಗಳ ನೆಲೆಗಟ್ಟೇನು? ಇವೇ ಮುಂತಾದುವು ಕನ್ನಡ ಜನತೆಗೆ ತಿಳಿಯಲು ಸಾಕಷ್ಟು ಅವಕಾಶವಿಲ್ಲದೆ ಹೋಯಿತು.

ವೀರಶೈವ ಮತೋದ್ಧಾರಕನಾದ ಬಸವನು ಅವತರಿಸಿ, ಕನ್ನಡ ಜನಾಂಗಕ್ಕೆ ಸರಳವೂ ಸುಲಭವೂ ಆದ ಕನ್ನಡ ನುಡಿಯ ಬಳಕೆಮಾತುಗಳಲ್ಲಿಯೇ ವೇದಾಗಮೋಪನಿಷತ್ತುಗಳಲ್ಲಿ ಅಡಗಿ, ಗಾಢವೂ ಗೂಢವೂ ಆಗಿದ್ದ ಆಧ್ಯಾತ್ಮಿಕ ತತ್ವಗಳನ್ನೂ ನೀತಿಗಳನ್ನೂ ತಾನು ಆಚರಿಸಿ, ಅನುಭವಿಸಿ, ಇದು ಸರಿಯೆಂದು ತನಗೆ ತೋರಿಬಂದ ಸಂಗತಿಗಳನ್ನು ವಚನಗಳ ರೂಪವಾಗಿ ಬರೆದು, ಧರ್ಮಕ್ರಾಂತಿಯನ್ನು ಕೈಗೊಂಡಂತೆ, ಕನ್ನಡ ಸಾಹಿತ್ಯದಲ್ಲಿ ಹೊಸದಾರಿಯ ಕ್ರಾಂತಿಯೊಂದಕ್ಕೆ ಕಾರಣನಾಗಿ, ಕನ್ನಡ ಮಾತೆಗೆ ಅಜರಾಮರವಾದ ಸೇವೆಯನ್ನು ಸಲ್ಲಿಸಿದನು.

ಬಸವನಿಂದಲೂ ಆತನ ಅನುಯಾಯಿಗಳಿಂದಲೂ ಅವ್ಯವಹಿತವಾಗಿ ಅಗಣಿತವಾಗಿ ಬೆಳೆಸಲ್ಪಟ್ಟ ಈ ವಚನವಾಙ್ಮಯವು ೧೨ನೆಯ ಶತಮಾನದಿಂದ ೧೬ನೆಯ ಶತಮಾನದವರೆಗೂ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ದೊಡ್ಡದೊಂದು ಕ್ರಾಂತಿಯನ್ನೆಸಗಿತು. ಇದರ ಪರಿಣಾಮವಾಗಿ ಕನ್ನಡ ಸಾಹಿತ್ಯದಲ್ಲಿ ಉಂಟಾದ ಮಾರ್ಪಾಟುಗಳನ್ನು ೧೨ನೆಯ ಶತಮಾನದಿಂದೀಚಿನ ಸಾಹಿತ್ಯದ ಶೈಲಿ ಮುಂತಾದ ಸಾಹಿತ್ಯಾಂಗಗಳ ಸೂಕ್ಷ್ಮನಿರೂಪಣೆಯಿಂದ ನಾವು ಮನಗಾಣಬಹುದಾಗಿದೆ.

**ಶೈಲಿ.**—ವ್ಯಾಕರಣ ಛಂದೋಲಂಕಾರ ಮುಂತಾದ ವಿಷಯಗಳಲ್ಲಿ ಭಾಸ, ಕಾಳಿದಾಸ, ಬಾಣ ಮುಂತಾದ ಕವಿಗಳ ಸಂಸ್ಕೃತ ಮಹಾಕಾವ್ಯಗಳನ್ನೇ ಅನುಕರಿಸಿ, ಕವಿಸಮಯವನ್ನೂ ಕಾವ್ಯ ಲಕ್ಷಣಗಳನ್ನೂ ಕಾಪಾಡಿಕೊಂಡು, ಸಂಸ್ಕೃತ ಭೂಯಿಷ್ಠವಾಗಿ ಕನ್ನಡ ಕಾವ್ಯವೆಂದು ಕರೆಯುವುದಕ್ಕೆ ಬೇಕಾದ ಕೆಲವು ಕನ್ನಡ ಶಬ್ದಗಳನ್ನೂ ಪ್ರತ್ಯಯಗಳನ್ನೂ ಸೇರಿಸಿ, ಕೇವಲ ಪಂಡಿತರಂಜಕವಾಗುವಂತೆ ಗ್ರಂಥಗಳನ್ನು ರಚಿಸುತ್ತಿದ್ದ ಜೈನ ಕವಿಗಳ ಕಷ್ಟವೂ ಕ್ಲಿಷ್ಟವೂ ಆದ ಶೈಲಿಯು ವೀರಶೈವ ಯುಗದ ಕ್ರಾಂತಿಯ ಮೊದಲಲ್ಲಿಯೇ ಕೊನೆಗಂಡಿತು. ವ್ಯಾಕರಣ, ಛಂದಸ್ಸು ಮೊದಲಾದುವುಗಳ ಕಟ್ಟುಪಾಡುಗಳು ಕಿತ್ತುಹೋದುವು. ಸರಳವೂ ಸುಲಭವೂ ಸುಗಮವೂ ಆದ ಶೈಲಿಯು ಬಳಕೆಗೆ ಬಂದಿತು. ಕನ್ನಡ ನುಡಿಯು ತನ್ನದೇ ಆದ ಸ್ವತಂತ್ರನಾಡಿಯಿಂದ ಮಿಡಿಯಲೂ ನುಡಿಯಲೂ ನಡೆಯಲೂ ತೊಡಗಿತು. ಕರುಣದ ಒಡಲಿನಿಂದ, ಕರಗುವ ಕರುಳಿನಿಂದ, ಆತ್ಮಾನುಭವದ ಕಡಲಿನಿಂದ ಮಿಡಿದು ಬಂದ ವೀರಶೈವ ವಚನಕಾರರ ವಾಙ್ಮಯವು ಕನ್ನಡಿಗರಿಗೆಲ್ಲ

ತಿರುಳ್ಗನ್ನಡದ ಸೊಬಗಿನ, ಸೊಗಸಿನ ಸವಿಯೂಟವನ್ನು ಊಡಿಸಿತು. ತಿಳಿಯಾದ ಮೋಹಕವಾದ ರೀತಿ, ಮೊನೆಯಾದ ಮಾತು, ಎಲ್ಲರೂ ಕಂಡು ಕೇಳಿದ ಉಪಮೆ, "ಅಯ್ಯಾ, ಅಣ್ಣಾ" ಎಂಬ ಒಲುಮೆಯ ಬಳಗದ ನುಡಿ, "ಕಿರಿದರೊಳ್ ಪಿರಿದರ್ಥಮಂ" ತೋರುವ ಜಾಣ್ಮೆ, ಡಂಭವನ್ನು ಹಳಿಯುವೆಡೆ ಕಠಿಣೋಕ್ತಿ, ಇದರ ಜತೆಗೆ ವಿಶ್ವಪ್ರೇಮವನ್ನೂ ವಿಶ್ವಕಲ್ಯಾಣವನ್ನೂ ಸೂಚಿಸುತ್ತ ಅಂತರಂಗದಿಂದ ಹೊರಹೊಮ್ಮುವ ಪ್ರೇಮದ ಹೊನಲು – ಇವೆಲ್ಲವೂ ಈ ವಚನವಾಙ್ಮಯದ ವಿಶಿಷ್ಟ ಗುಣಗಳೆಂದು ಹೇಳಬಹುದು.

ಈ ವಚನಕಾರರು ಕನ್ನಡ ದೇವಿಯು ಅದುವರೆಗೆ ಹೊತ್ತಿದ್ದ ಆಡಂಬರದ ಆಭರಣದ ಹೊರೆಯನ್ನು ಇಳುಹಿ, ಆಕೆಯ ದಾಸ್ಯವನ್ನು ತಪ್ಪಿಸಿ, ಆಕೆಯು ತನ್ನ ಸಹಜವಾದ ಸೊಬಗಿನಿಂದ ಎಲ್ಲೆಡೆಯಲ್ಲಿಯೂ ಎಡೆಯಾಡುವಂತೆ ದೃಢತೆಯಿಂದ ದುಡಿದು, ಕನ್ನಡ ಭಾಷೆಯ ಕನ್ನಡತನವನ್ನು ಕಾಯ್ದುಕೊಟ್ಟರೆಂದರೆ ಅತ್ಯುಕ್ತಿಯಾಗಲಾರದು. ಇವರ ವಚನಗಳ ಶೈಲಿಯ ಫಲವಾಗಿ ಕನ್ನಡ ನುಡಿಯಲ್ಲಿ ಹಿಂದೆ ಇಲ್ಲದಿದ್ದ ಸುಲಲಿತವಾದ ಸುಗಮವಾದ ವಾಗ್ವೈಖರಿಯೊಂದು ಸೇರಿಕೊಂಡಿತು. ಅಲ್ಲದೆ ಇದೇ ಶೈಲಿಯನ್ನನುಸರಿಸಿಯೇ ರಗಳೆ, ಷಟ್ಪದಿ, ಹಾಡು ಮುಂತಾದುವುಗಳ ಗ್ರಂಥಗಳು ಆವಿರ್ಭವಿಸಿದುವು.

ಈ ವಚನಕಾರರು ಸುಮಾರು ೭೭೦ರವರೆಗೆ ಇದ್ದರೆಂಬ ಮತ್ತು ಅಲ್ಲಮಪ್ರಭುವೊಬ್ಬನೇ ಎರಡೆಂಬತ್ತು ಕೋಟಿ ವಚನಗಳನ್ನು ಬರೆದನೆಂಬ ಹೇಳಿಕೆಯು ಈ ವಚನವಾಙ್ಮಯವು ಬಹು ವಿಸ್ತಾರವಾದುದೆಂಬ ಭಾವನೆಯನ್ನು ಸೂಚಿಸುತ್ತದೆ.

ಕನ್ನಡ ಸಾಹಿತ್ಯದಲ್ಲಿ ವೀರಶೈವ ಕವಿಗಳು ಕಾವ್ಯಗಳ ಶೈಲಿಗೆ ನವೀನತೆಯೊಂದನ್ನು ನಿರ್ಮಿಸಿಕೊಟ್ಟಂತೆ, ಕಾವ್ಯಗಳ ಛಂದಸ್ಸು, ವಸ್ತು, ಉದ್ದೇಶ ಮುಂತಾದುವುಗಳಲ್ಲಿಯೂ ಸಂಪ್ರದಾಯಸಿದ್ಧವಾದ ಸಂಕೋಲೆಗಳನ್ನು ಕತ್ತರಿಸಿ ತಮ್ಮದೇ ಆದ ಅಚ್ಚ ಹೊಸ ದಾರಿಗಳನ್ನು ರಚಿಸಿಕೊಟ್ಟರು.

**ಛಂದಸ್ಸು.—** ಚಂಪಕಮಾಲಾ, ಸ್ರಗ್ಧರಾ, ಉತ್ಪಲ, ನೀಲೋತ್ಪಲ ಮುಂತಾದ ಸಂಸ್ಕೃತ ವೃತ್ತಗಳ ಪ್ರಣಾಳಿಗಳನ್ನು ಮುಚ್ಚಿ, ಅಚ್ಚಗನ್ನಡ ವೃತ್ತಗಳಾದ ವಚನ, ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ, ಹಾಡು ಮುಂತಾದ ವಿವಿಧವಾದ ನೂತನವಾದ ನಾಳಿಗಳ ಮೂಲಕ ಕನ್ನಡ ನುಡಿಯ ಹೊನಲನ್ನು ಹರಿಯಿಸ ತೊಡಗಿದರು.

ವಚನಗಳ ರಚನೆಯು ಸುಲಭವಾದ, ಸರಳವಾದ ಹೊಸಗನ್ನಡ ಗದ್ಯಕ್ಕೆ ದಾರಿಯನ್ನು ತೋರಿಸಿಕೊಟ್ಟು, ಕರ್ಣಾಟಕ ಸರಸ್ವತಿಯ ಅಂಗವೊಂದನ್ನು ಸಂಪುಷ್ಟಗೊಳಿಸಿತು. ಈ ವಚನಗಳನ್ನು ಕಾವ್ಯಮಯ ಗದ್ಯಗಳೆಂದು ಹೇಳಬಹುದು. ಏಕೆಂದರೆ ಕಾವ್ಯಗಳಲ್ಲಿ ಕಂಡುಬರುವ ಶಬ್ದಾರ್ಥಾಲಂಕಾರ, ಭಾವ, ಪ್ರತಿಭೆ, ರಸಾಭಿವ್ಯಕ್ತಿ ಮೊದಲಾದುವನ್ನು ಈ ವಚನಗಳಲ್ಲಿ ನಾವು ಕಾಣಬಹುದಾಗಿದೆ. ಉದಾ.—
"ಒಡೆತ್ತ ಬಲ್ಲುದು ಅವಲಕ್ಕಿಯ ಸವಿಯ? ಕೋಡಗವೆತ್ತ ಬಲ್ಲುದು ಸೆಳೆಮಂಚದ ಸುಖವ? ಕಾಗೆ ನಂದನವನದೊಳಿದ್ದರೇನೋ, ಕೋಗಿಲೆಯಾಗಬಲ್ಲುದೇ ಹೇಳಾ? ಕೊಳನ ತಡಿಯುಲೊಂದು ಬಕ ಕುಳಿತಿದ್ದರೇನು, ಕಳಹಂಸನಾಗಬಲ್ಲುದೆ ಕೂಡಲ ಸಂಗಮದೇವಾ?" (ಬಸವೇಶ್ವರ)

"ಹೊಳೆವ ಕೆಂಜಡೆಗಳ, ಮಣಿಮಕುಟದ, ಒಪ್ಪುವ ಸುಲಿಪಲ್ಲ, ನಗೆಮೊಗದ ಕರಗಳ ಕಾಂತಿಯಿಂ ಈರೇಳು ಭುವನವಂ ಬೆಳಗುವ, ದಿವ್ಯಸ್ವರೂಪನ ಕಂಡೆ ನಾನು. ಸಾವಿಲ್ಲದ, ಕೇಡಿಲ್ಲದ, ರೂಹಿಲ್ಲದ, ಚೆಲುವಂಗೆ, ಭವವಿಲ್ಲದ, ಭಯವಿಲ್ಲದ, ನಿರ್ಭಯದ ಚೆಲುವಂಗೆ ನಾನೊಲಿದೆನಯ್ಯಾ." (ಮಹಾದೇವಿಯಕ್ಕ)

ವೀರಶೈವ ಕವಿಗಳಲ್ಲಿ ಅಗ್ರಿಮಕವಿಯಾದ ಹರಿಹರನು ಈ ವಚನಗಳಲ್ಲಿ ಅಡಗಿರುವ ಮಾಧುರ್ಯವನ್ನೇ ತನ್ನ ಮೃದು ಮಧುರ ಮನೋಹರವಾದ ಶಿವಗಣದ ರಗಳೆಗಳಲ್ಲಿ ತುಂಬಿ, ಸಾಹಿತ್ಯ ತೃಷಾರ್ತರಿಗೆ ಅಮೃತದ ಅರವಟ್ಟಿಗೆಯನ್ನಿಟ್ಟು ಹೋದನು. ಇವನ ಸೋದರಳಿಯನಾದ ರಾಘವಾಂಕನು ಈ ರಗಳೆಯ ಓಟವನ್ನೇ ಷಟ್ಪದಿ ರೂಪಕ್ಕೆ ತಿರುಗಿಸಿ, ಪ್ರೌಢವೂ ದೇಶ್ಯಪದಪ್ರಚುರವೂ ಆದ ಹರಿಶ್ಚಂದ್ರ ಕಾವ್ಯವೆಂಬ ಉದ್ಗ್ರಂಥವನ್ನು ಬರೆದು, ಷಟ್ಪದೀ ಗ್ರಂಥಕರ್ತರಲ್ಲಿ ಆದಿಕವಿಯಾದನು. ಅಲ್ಲದೆ ತನ್ನ ಕಾವ್ಯದಲ್ಲಿ ಅಚ್ಚಗನ್ನಡ ಶಬ್ದಗಳನ್ನೂ ತಿಳಿಗನ್ನಡದ ಸವಿನುಡಿಗಳನ್ನೂ ಕೆಲವು ಸ್ವಚ್ಛಂದವಾದ ನೂತನ ಪ್ರಯೋಗಗಳನ್ನೂ ಉಪಯೋಗಿಸಿ, ಮುಂದೆ ಕನ್ನಡ ಕಾವ್ಯಗಳನ್ನು ಬರೆಯತಕ್ಕವರಿಗೆ ಹೊಸದಾದ ಹೆದ್ದಾರಿಯೊಂದನ್ನು ಹಾಕಿಕೊಟ್ಟನು. ಈ ದಾರಿಯನ್ನನುಸರಿಸಿಯೇ ಬರೆದ ಬಸವಪುರಾಣ, ಚೆನ್ನಬಸವಪುರಾಣ, ಕುಮಾರ ವ್ಯಾಸನ ಭಾರತ, ಪ್ರಭುಲಿಂಗಲೀಲೆ, ಜೈಮಿನಿಯ ಭಾರತ ಮುಂತಾದ ಷಟ್ಪದೀ ಗ್ರಂಥಗಳು ಈಗಲೂ ಸಹ ಜನಸಾಮಾನ್ಯದ ಅಚ್ಚುಮೆಚ್ಚಿನ ಓದುಗಬ್ಬಗಳಾಗಿ ಹೃದಯಕ್ಕೆ ಆಹ್ಲಾದವನ್ನೂ ಆನಂದವನ್ನೂ ಕೊಡುತ್ತ, ಕನ್ನಡ ಕಾವ್ಯಗಳೂ ಅವುಗಳ ಅಭಿರುಚಿಯೂ ಉಳಿಯುವುದಕ್ಕೂ ಬೆಳೆಯುವುದಕ್ಕೂ ಕಾರಣವಾಗಿವೆ.

ಸಾಂಗತ್ಯದಲ್ಲಿ ವೀರಶೈವ ಕವಿಗಳು ಬರೆದಿರುವ ಗ್ರಂಥಗಳು ಹೇರಳವಾಗಿವೆ. ಇವುಗಳಲ್ಲಿ ಕೆಲವನ್ನು ಇಲ್ಲಿ ಹೇಳಬಹುದು. ಚೋಳರಾಜ ಸಾಂಗತ್ಯ, ಚಿಕ್ಕಯ್ಯನ ಸಾಂಗತ್ಯ, ಹರಿಶ್ಚಂದ್ರ ಸಾಂಗತ್ಯ, ಸಾನಂದ ಗಣೇಶ ಸಾಂಗತ್ಯ, ಹೇರೂರು ಹೆಣ್ಣಿನ ಸಾಂಗತ್ಯ, ಸಿರಿಯಾಳ ಸೆಟ್ಟಿಯ ಸಾಂಗತ್ಯ, ನಂಜುಂಡನ ಕುಮಾರರಾಮ ಸಾಂಗತ್ಯ, ಆವುಗಿ ದೇವಯ್ಯಗಳ ಸಾಂಗತ್ಯ. ಶಿವಲಿಂಗಕವಿ ವಿರಚಿತವಾದ ಕೊನೆಯ ಸಾಂಗತ್ಯವು ಜೈಮಿನಿ ಕಾವ್ಯದಂತೆ ಅನೇಕ ಸುಂದರವರ್ಣನೆಗಳಿಂದ ತುಂಬಿದೆ. ಓದುವುದಕ್ಕೂ ಸಂಗೀತದ ನಾನಾ ರಾಗಗಳ ಮಟ್ಟುಗಳಿಂದ ಹಾಡುವುದಕ್ಕೂ ಯೋಗ್ಯವಾಗುವಂತೆ ತ್ರಿಪದಿ ಮತ್ತು ಹಾಡುಗಳ ರೂಪದಲ್ಲಿ ನಿಜಗುಣ ಶಿವಯೋಗಿಯು ಬರೆದಿರುವ ಅನುಭವಸಾರ, ಕೈವಲ್ಯ ಪದ್ಧತಿಗಳೆಂಬ ತಿಳಿಗನ್ನಡದಲ್ಲಿ ವೇದವೇದಾಂತಗಳ ಪರಮಾರ್ಥದ ತಿರುಳನ್ನು ತಿಳಿಸುವ ಗ್ರಂಥಗಳೂ, ಸರ್ವಜ್ಞನ ಧರ್ಮನೀತಿಗಳ ನೆಲೆಯನ್ನು ನಿರೂಪಿಸುವ ವಚನಗಳೂ, ಸರ್ವಭೂಷಣ ಕವಿಯ ಕೈವಲ್ಯ ಕಲ್ಪ ವಲ್ಲರಿಯೂ ಕನ್ನಡ ಸಾಹಿತ್ಯೋದ್ಯಾನದಲ್ಲಿ ರಸವತ್ತಾದ ರಸಾಲಗಳಂತೆ ಸಾಹಿತ್ಯ ಪಿಪಾಸುಗಳಿಗೂ ಧರ್ಮಜಿಜ್ಞಾಸುಗಳಿಗೂ ಸ್ವರ್ಗೀಯಾನಂದವನ್ನು ನೀಡುವ ನಿಕ್ಷೇಪಗಳಾಗಿ ಕಂಗೊಳಿಸುತ್ತಿವೆ.

ಜೈನ ಕವಿಗಳ ಕಾಲದಲ್ಲಿ ಸಂಸ್ಕೃತ ವೃತ್ತಗಳ ಸುಳಿಗೆ ಸಿಕ್ಕಿಬಿದ್ದಿದ್ದ ಕನ್ನಡ ನುಡಿಯನ್ನು ವೀರಶೈವ ಕವಿಗಳು ಸೆಳೆತಂದು, ಮೇಲೆ ಕಂಡಂತೆ ಕನ್ನಡ ಜನಾಂಗಕ್ಕೆ

ಬಲವನ್ನೂ ಗೆಲವನ್ನೂ ತಂದುಕೊಡುವ ಹೊಸಹೊಸ ಸ್ವತಂತ್ರವಾದ ದಾರಿಗಳಲ್ಲಿ ನಡೆಯಿಸಿಕೊಂಡುಬಂದು, ತಮ್ಮ ತಾಯ್ನುಡಿಯನ್ನು ಸರ್ವತೋಮುಖವನ್ನಾಗಿ ಮಾಡಿದರು.

ಇದರಂತೆ ತಾವು ರಚಿಸಿದ ಕಾವ್ಯಗಳ ಉದ್ದೇಶ ಮತ್ತು ವಸ್ತುಗಳ ಕಲ್ಪನೆಯಲ್ಲಿಯೂ ವೀರಶೈವ ಕವಿಗಳು ತಮ್ಮದೇ ಆದ ವಿಶಿಷ್ಟಮಾರ್ಗವೊಂದನ್ನು ಆರಿಸಿಕೊಂಡು, ಕನ್ನಡ ಸಾಹಿತ್ಯ ದೇವಿಯನ್ನು ಮಹೋನ್ನತ ಪೀಠಕ್ಕೆ ಆರೋಹಣ ಮಾಡಿಸಿದರು.

**ಉದ್ದೇಶ.**—ಜೈನ ಕವಿಗಳಲ್ಲಿ ರತ್ನತ್ರಯರೆನಿಸಿದ ಪಂಪ, ರನ್ನ, ಪೊನ್ನರು ರಚಿಸಿರುವ ಆದಿಪುರಾಣ, ಶಾಂತಿಪುರಾಣ, ಅಜಿತನಾಥ ಪುರಾಣಗಳನ್ನೂ ಕಥಾನಾಯಕನನ್ನು ತಮಗೆ ಆಶ್ರಯವಿತ್ತ ರಾಜನಿಗೆ ಹೋಲಿಸಿ ಬರೆದಿರುವ ಭಾರತ, ಗದಾಯುದ್ಧ, ಭುವನೈಕ ರಾಮಾಭ್ಯುದಯಗಳೆಂಬ ಕಾವ್ಯಗಳನ್ನೂ ನೋಡಿದರೆ ಜೈನ ಕವಿಗಳು ಸಾಮಾನ್ಯವಾಗಿ ತಮ್ಮ ಮತ ಪ್ರಸಾರಕ್ಕಾಗಿಯೋ ಅಥವಾ ತಮಗೆ ಆಶ್ರಯವಿತ್ತ ರಾಜರನ್ನು ಮೆಚ್ಚಿಸುವುದಕ್ಕಾಗಿಯೋ ಕಾವ್ಯಗಳನ್ನು ರಚಿಸಿರುವಂತೆ ತೋರುತ್ತದೆ. ವೀರಶೈವ ಕವಿಗಳಲ್ಲಿ ಅಗ್ರಿಮಕವಿಯಾದ ಹರೀಶ್ವರನು "ಮನುಜರ ಮೇಲೆ, ಸಾವವರ ಮೇಲೆ, ಕನಿಷ್ಠರ ಮೇಲೆ" ಕಾವ್ಯವನ್ನು ರಚಿಸಬಾರದೆಂಬ ಪೀಠಿಕೆಯನ್ನು ಹಾಕಿಕೊಟ್ಟು, ಹರನನ್ನೂ ಹರಗಣಂಗಳನ್ನೂ ಮಾತ್ರವೇ ಕೀರ್ತಿಸಿ, ವಸ್ತುಕ, ವರ್ಣಕ ಕಾವ್ಯಗಳನ್ನು ಬರೆದನು. ಅಲ್ಲದೆ ಹರಿಶ್ಚಂದ್ರ ಕಾವ್ಯವನ್ನು ರಚಿಸಿ ನರಸ್ತುತಿ ಮಾಡಿದನೆಂದು ತನ್ನ ಸೋದರಳಿಯನಾದ ರಾಘವಾಂಕನ ಮೇಲೆ ಖತಿಗೊಂಡು, ಅವನ ಐದು ಹಲ್ಲುಗಳನ್ನು ಮುರಿದು ಬಿಸುಟು, ಅವನಿಂದ ಐದು ಶಿವಸ್ತುತಿ ಕೃತಿಗಳನ್ನು ಬರೆಯಿಸಿ, ಪುನಃ ಅವನಿಗೆ ಆ ಹಲ್ಲುಗಳು ಬರುವಂತೆ ಮಾಡಿದನೆಂಬ ಆಖ್ಯಾಯಿಕೆಯು ಹರೀಶ್ವರನ ಪ್ರತಿಜ್ಞೆಯ ಪರಾಕಾಷ್ಠ ದಶೆಯನ್ನು ಸೂಚಿಸುವುದು. ಇದೇ ಮಾರ್ಗವನ್ನು ಪೋಷಿಸಿಯೇ ಷಡಕ್ಷರ ಕವಿಯು "ರಸವತ್ಕವಿತಾಶಕ್ತಿಯನ್ನು ಪಡೆದು, ಅಸಮನಯನನಂ ಪೊಗಳದೆ, ಮಾನಿಸರಂ ಸುರರಂ ಪೊಗಳ್ವುದು ಕಸವರಮಂ ಕಳೆದು ಕಸಮಂ ಕೊಂಡಂತೆ" ಆಗುವುದೆಂದೂ, ಅಂತಹ "ದುರ್ನರಕೃತಿಕರನು ಲಬ್ಧವರ್ಣವರಾಕ"ನೆಂದೂ ಹಳಿದು, ಶಿವನ ಮತ್ತು ಶಿವಶರಣರ ನುತಿಗೇ ತನ್ನ ಕವಿತೆಯನ್ನು ಮೀಸಲಾಗಿಟ್ಟನು. ರಾಘವಾಂಕನು ಮತ್ತು ಪಾಲ್ಕುರಿಕೆ ಸೋಮನಾಥನು ಓರಂಗಲ್ಲಿನ ಪ್ರತಾಪರುದ್ರದೇವನಿಂದಲೂ ಚಾಮರಸನು ವಿಜಯನಗರದ ಪ್ರೌಢದೇವರಾಯನಿಂದಲೂ ಸನ್ಮಾನವನ್ನು ಪಡೆದವರಾಗಿದ್ದರೂ, ಅವರ ಹೆಸರುಗಳನ್ನು ತಮ್ಮ ಗ್ರಂಥಗಳಲ್ಲಿ ಎಲ್ಲಿಯೂ ಸ್ಮರಿಸಿದಂತೆಯೂ ತೋರುವುದಿಲ್ಲ. ದೈವಕೃಪಾಲಬ್ಧವಾದ ಕವಿತಾ ವಾಣಿಯನ್ನು ದೈವಸ್ತುತಿಗಲ್ಲದೆ ನರಸ್ತುತಿಗೆ ಉಪಯೋಗಿಸಬಾರದೆಂಬ ತತ್ವವನ್ನು ಸಾಮಾನ್ಯವಾಗಿ ವೀರಶೈವ ಕವಿಗಳೆಲ್ಲರೂ ಪರಿಪಾಲಿಸಿಕೊಂಡು ಬಂದರೆಂದು ಹೇಳಬಹುದು.

**ವಸ್ತು.**—ವೀರಶೈವ ಸಾಹಿತ್ಯದ ಪ್ರಾರಂಭದಶೆಯಲ್ಲಿ ವೆಗ್ಗಳವಾಗಿ ಕಂಡು ಬರುವ ವಚನ ವಾಙ್ಮಯದಲ್ಲಿ ಕೆಲವೆಡೆ ವೀರಶೈವ ಮತದ ಲಕ್ಷಣಗಳಾದ ಲಿಂಗಾಂಗ ಸಾಮರಸ್ಯ, ಅಷ್ಟಾವರಣ, ಪಂಚಾಚಾರ, ಷಟ್ಸ್ಥಲ ಮುಂತಾದುವುಗಳ ವಿವರಣೆ

ಯಿದ್ದರೂ, ಮಾನವ ಕುಲಕ್ಕೇ ಸಾಮಾನ್ಯವಾದ ತಾತ್ತ್ವಿಕ ನೈತಿಕ ವಿಷಯಗಳೂ, ವಿಶ್ವಕುಟುಂಬದ ಉದಾತ್ತ ನಿರ್ಮಲಭಾವನೆಯನ್ನು ಬೋಧಿಸುವ ಪ್ರೇಮದ ಮಾತುಗಳ ಹೊನಲುಗಳೂ ವಚನ ಸಾಹಿತ್ಯದಲ್ಲಿ ತುಂಬಿರುವುದನ್ನು ನಾವು ನೋಡ ಬಹುದು. ಹೀಗೆ ಕನ್ನಡ ಕಾವ್ಯಗಳ ರಚನಾ ರೀತಿಯಲ್ಲಿ ತಾವು ತೋರಿಸಿದ ಸ್ವಾತಂತ್ರ್ಯ ವೈಶಿಷ್ಟ್ಯಗಳಿಂದ ವೀರಶೈವ ಕವಿಗಳು ಕನ್ನಡ ಸಾಹಿತ್ಯದ ವಿವಿಧಾಂಗ ಗಳಿಗೆ ಪುಷ್ಟಿಯನ್ನಿತ್ತು ಕಳೆಗೂಡಿಸಿರುತ್ತಾರೆ.

ವೀರಶೈವ ಸಾಹಿತ್ಯದಲ್ಲಿ ಹನ್ನೆರಡನೆಯ ಶತಮಾನದಿಂದ ಹತ್ತೊಂಬತ್ತನೆಯ ಶತಮಾನದವರೆಗೆ, ಅಂದರೆ ಬಸವಣ್ಣನಿಂದ ಬಸವಪ್ಪಶಾಸ್ತ್ರಿಯ ವರೆಗಿನ ಕವಿಗಳು ಬರೆದ ಗ್ರಂಥಗಳ ಹಕ್ಕಿನೋಟದಿಂದ ವೀರಶೈವ ಗ್ರಂಥ ಕುಸುಮಗಳು ಗಣನೆ ಯಲ್ಲಿ ಮಾತ್ರವಲ್ಲದೆ ಗುಣದಲ್ಲಿಯೂ ಗಣ್ಯತೆಯನ್ನು ಪಡೆದಿರುತ್ತವೆ. ಬಸವ, ಚೆನ್ನಬಸವ, ಅಲ್ಲಮ, ಸಿದ್ಧರಾಮ, ಮಹಾದೇವಿಯಕ್ಕ— ಇವರುಗಳ ಭಕ್ತಿ, ಅನುಭವ, ಜ್ಞಾನ, ವೈರಾಗ್ಯಬೋಧಕಗಳಾದ ವಚನಗಳು; ಹರಿಹರ, ರಾಘವಾಂಕ, ನಿಜಗುಣಶಿವಯೋಗಿ, ಷಡಕ್ಷರದೇವ—ಇವರುಗಳು ರಚಿಸಿದ ವೀರ ದೈವಭಕ್ತಿ, ಸತ್ಯಧರ್ಮದ ದಿಗ್ವಿಜಯ, ಸಕಲ ವೇದೋಪನಿಷತ್ತುಗಳ ತತ್ವದ ತಿರುಳು, ಧರ್ಮದ ರಹಸ್ಯ ಮತ್ತು ಸಂಸ್ಕೃತ ಕನ್ನಡ ಕವಿತಾ ಚಾತುರ್ಯ ಮಾಧುರ್ಯಗಳ ಪರಮಾವಧಿ ಗಳನ್ನು ಪ್ರತಿಬಿಂಬಿಸುವ ಕಾವ್ಯರತ್ನ ಫಲಕಗಳು; ಭೀಮಕವಿ, ಪದ್ಮಣಾಂಕ, ಬೊಮ್ಮರಸ, ಸಿಂಗಿರಾಜ, ಚೆನ್ನಬಸವಾಂಕ, ತೋಂಟದಾರ್ಯ, ವಿರೂಪಾಕ್ಷಪಂಡಿತ, ಹರೀಶ್ವರ, ಪರ್ವತೇಶ್ವರ— ಇವರೇ ಮೊದಲಾದವರು ಬರೆದ ಮಹಿಮಾಪುರುಷರ ಜೀವನಚರಿತ್ರರೂಪವಾದ ಪುರಾಣಗಳು; ನೀತಿಬೋಧಕಗಳಾದ ಸರ್ವಜ್ಞನ ತ್ರಿಪದಿ, ಬಸವಪ್ಪಶಾಸ್ತ್ರಿಯ ನೀತಿಸಾರ ಸಂಗ್ರಹಗಳು, ಸಿದ್ಧನಂಜೇಶನ ಗುರುರಾಜ ಚಾರಿತ್ರ ಮತ್ತು ಶಾಂತಲಿಂಗದೇಶಿಕನ ಭೈರವೇಶ್ವರ ಕಥಾಸೂತ್ರರತ್ನಾಕರಗಳೆಂಬ ಚಾರಿತ್ರಿಕ ಗ್ರಂಥಗಳು, ನಿಟ್ಟೂರು ನಂಜಯ್ಯನ ಶಬ್ದಮಣಿದರ್ಪಣದ ಟೀಕೆ, ಮರಿತೋಂಟದಾರ್ಯನ ಶಬ್ದಕೋಶ ಮತ್ತು ಹಳಗನ್ನಡ ಪದಗಳ ಅರ್ಥ ವನ್ನು ವಿವರಿಸುವ ಲಿಂಗಮಂತ್ರಿಯ ಕಬ್ಬಿಗರ ಕೈಪಿಡಿ, ಅಭಿನವಕಾಳಿದಾಸ ಬಸವಪ್ಪಶಾಸ್ತ್ರಿಯು ಕನ್ನಡಕ್ಕೆ ಪರಿವರ್ತಿಸಿದ ಶಾಕುಂತಲ, ಉತ್ತರರಾಮಚರಿತ ಮೊದಲಾದ ನಾಟಕಗಳು—ಇವು ವೀರಶೈವ ಕವಿಗಳು ರಚಿಸಿದ ಗ್ರಂಥಗಳ ವಿಷಯ ವೈವಿಧ್ಯಕ್ಕೂ, ಅವರು ಎಸಗಿರುವ ಅನೇಕ ಮುಖವಾದ ಉತ್ಕೃಷ್ಟವಾದ ಕನ್ನಡ ಭಾಷಾ ಸೇವೆಗೂ ನಿತ್ಯವಾದ ನಿದರ್ಶನಗಳಾಗಿವೆ.

ಕನ್ನಡ ಸಾಹಿತ್ಯದೇವಿಯ ಸೇವೆಯಲ್ಲಿ ಲೇಖಣಿಯ ಕೈಯ ಕವಿಗಳೇ ಅಲ್ಲದೆ ಕರವಾಳದ ಕೈಯ ವೀರಶೈವ ಕ್ಷತ್ರಿಯರೂ ಸಹ ಹೆಸರನ್ನು ಪಡೆದಿದ್ದಾರೆ. ಮುಸಲ್ಮಾನರ ದಾಳಿಯಿಂದ ವಿಜಯನಗರವು ತಾಳೀಕೋಟೆಯ ಕಾಳಗದಲ್ಲಿ ನಾಮಾವಶೇಷವಾದನಂತರ ಸುಮಾರು ೨೦೦ ವರ್ಷಗಳ ವರೆಗೆ ಕರ್ಣಾಟಕದ ಸಂಸ್ಕೃತಿಯನ್ನು ಕಾಯ್ದು, ಗ್ರಂಥಕರ್ತರಿಗೆ ಆಶ್ರಯವನ್ನು ಕೊಟ್ಟು, ಸ್ವತಃ ಅನೇಕ ಗ್ರಂಥಗಳನ್ನು ರಚಿಸಿ ಕನ್ನಡ ದೇಶವನ್ನೂ ಕನ್ನಡ ಭಾಷೆಯನ್ನೂ ಪೋಷಿಸಿದವರು ಇಕ್ಕೇರಿಯ ಅಥವಾ ಕೆಳದಿಯ ಅರಸರು. ಇವರಲ್ಲಿ ಕೆಳದಿಯ

ವೆಂಕಟಪ್ಪನಾಯಕನ ವಾಙ್ಮಯ ಸೇವೆಯೂ ಕವಿಗಳಿಗೆ ಅವನಿತ್ತ ಉತ್ತೇಜನವೂ ಚಾರಿತ್ರಕವಾದ ವಿಷಯಗಳಾಗಿವೆ. ೧೮ ಅಧ್ಯಾಯಗಳುಳ್ಳ ಶಿವಗೀತೆಯನ್ನು ಕವಿ ತಿರುಮಲಭಟ್ಟನಿಂದ ವಾರ್ಧಕ ಷಟ್ಪದಿಯಲ್ಲಿ ವೆಂಕಟಪ್ಪನಾಯಕನು ಭಾಷಾಂತರ ಮಾಡಿಸಿದುದು ಸ್ತುತ್ಯವಾದ ಸಂಗತಿ.

ಕನ್ನಡ ಭಾಷೆಗೆ ವೀರಶೈವ ಗ್ರಂಥಕಾರರಿಂದಾದ ಮತ್ತೊಂದು ಮಹೋಪಕಾರವನ್ನು ಡಾ॥ ಫ್ಲೀಟ್ ಎಂಬವರು "ಉತ್ತರ ದಿಕ್ಕಿನಿಂದ ಅಡಿಗಡಿಗೆ ಆಕ್ರಮಣ ಮಾಡುತ್ತಿದ್ದ ಮಹಾರಾಷ್ಟ್ರರ ಅವಾಂತರದಲ್ಲಿ ಇತ್ತೀಚೆಗೆ ಅಂದವಾದ ಕನ್ನಡ ಭಾಷೆಯನ್ನು ಉಳಿಸಿದ ಕೀರ್ತಿ ಬಹು ಮಟ್ಟಿಗೆ ವೀರಶೈವರಿಗೆ ಸಲ್ಲತಕ್ಕದ್ದು" ಎಂದು ಹೇಳಿರುತ್ತಾರೆ.

ಕನ್ನಡ ಸಾಹಿತ್ಯದೇವಿಗೆ ಹೊರಿಸಿದ್ದ ಎರವಲಾದ ಆಭರಣಗಳ ಹೊರೆಯನ್ನು ಇಳುಹಿ, ವಚನ, ರಗಳೆ, ಷಟ್ಪದಿ, ತ್ರಿಪದಿ ಮುಂತಾದ ವಿವಿಧ ಸಾಹಿತ್ಯ ರೂಪಗಳ ಕನ್ನಡ ದೇಶದ ಉಡಿಗೆ ತೊಡಿಗೆಗಳ ಮುಡಿಪನ್ನು ಆಕೆಗೆ ಸಮರ್ಪಿಸಿ, ಕನ್ನಡ ತಾಯಿಯನ್ನು ಸ್ವತಂತ್ರವಾದ ಮಾನ್ಯವಾದ ಮಹೋನ್ನತ ಪೀಠಕ್ಕೆ ಕರೆದೊಯ್ದು ಕೂಡಿಸಿದ ಕೀರ್ತಿಯು ವೀರಶೈವ ಕವಿಗಳ ಪಾಲಿನದು.

ಎಂ. ಎಸ್. ಬಸವಲಿಂಗಯ್ಯ

# ಲಿಂಗವಂತರೂ ಕನ್ನಡವೂ

ಅತಿ ಪ್ರಾಚೀನಕಾಲದಿಂದಲೂ ಈ ಕನ್ನಡ ನಾಡು ಕಲೆ, ಸಾಹಿತ್ಯ, ಸಂಸ್ಕೃತಿ ಮೊದಲಾದವುಗಳಲ್ಲಿ ತನ್ನದೊಂದು ಹೆಚ್ಚಿನತನವನ್ನು ಕಾಯ್ದುಕೊಂಡುಬಂದಿರುವದೆಂದು ಇತಿಹಾಸ ಸಂಶೋಧಕರು ಒಡಂಬಟ್ಟಿದ್ದಾರೆ; ಮತ್ತು ಈ ನಾಡಿನಲ್ಲಿ ಜೈನರು, ಲಿಂಗಾಯತರು, ಬ್ರಾಹ್ಮಣರು ತಮ್ಮ ತಮ್ಮ ಸಾಹಿತ್ಯ ಸಂಸ್ಕೃತಿ ತತ್ವಗಳ ಪ್ರಚಾರಕ್ಕಾಗಿ ಬಹುಕಾಲದಿಂದ ಪರಿಶ್ರಮಿಸುತ್ತ ಬಂದಿರುವದಲ್ಲದೆ ನಾಡಿನ ಹೆಸರನ್ನು ಅಜರಾಮರವನ್ನಾಗಿಮಾಡಿರುವದು ಎಲ್ಲರಿಗೂ ಗೊತ್ತಿದೆ. ಆದರೆ ಜೈನರೂ ಬ್ರಾಹ್ಮಣರೂ ಪ್ರಾಕೃತ ಸಂಸ್ಕೃತ ಭಾಷೆಯ ಮೂಲಕ ಕನ್ನಡದಲ್ಲಿ ಸಾಹಿತ್ಯ ಸಂಸ್ಕೃತಿಗಳ ಬೆಳಕನ್ನು ಹೆಚ್ಚಿಸಿರುವರು. ಲಿಂಗಾಯತರು ಕನ್ನಡ ನುಡಿಯ ಮೂಲಕ ಕನ್ನಡ ನಾಡಿನವರಿಗೆ ಸಾಹಿತ್ಯ, ಸಂಸ್ಕೃತಿ, ತತ್ವ ಇವುಗಳ ಅರಿವನ್ನು ಸರಳವಾಗಿ ಮಾಡಿಕೊಟ್ಟಿರುವರೆಂದು ಸಹಜವಾಗಿ ಹೇಳಬೇಕಾಗುತ್ತದೆ.

ಅದಕ್ಕಾಗಿ ಕನ್ನಡ ನುಡಿಯಲ್ಲಿ ಲಿಂಗವಂತರು ತಮ್ಮದೊಂದು ವೈಶಿಷ್ಟ್ಯವನ್ನು ನೆಲೆಗೊಳಿಸಿ ಕನ್ನಡದ ಸಿರಿಯನ್ನು ಮೆರೆಸಿರುತ್ತಾರೆ. ಈ ಬಗೆಯ ಕೆಲವು ವಿಚಾರಗಳನ್ನು ಓದುಗರಿಗೆ ಗೊತ್ತುಮಾಡಿಸಿಕೊಡುವದೇ ಈ ಬರಹದ ಹೆಗ್ಗುರಿ.

ಅವ್ವ, ಅಪ್ಪ, ಅಣ್ಣ, ತಮ್ಮ, ಅಕ್ಕ, ತಂಗಿ—ಮೊದಲಾದ ಕನ್ನಡ ನುಡಿಯ ಮೇಲ್ಮೆಯನ್ನು ತೋರಿಸುವ ಶಬ್ದಗಳು ಲಿಂಗವಂತ ಗಂಡು ಹೆಣ್ಣುಮಕ್ಕಳ ಹೆಸರಿನ ಮುಂದೆ ಸುಲಭವಾಗಿ ಬೆರೆತು ಬಳಕೆಯಲ್ಲಿ ಬಂದಿರುವದರಿಂದ ಲಿಂಗವಂತರೆಂದರೆ ಕನ್ನಡಿಗರು, ಕನ್ನಡಿಗರೆಂದರೆ ಲಿಂಗವಂತರು ಎಂದೆನಿಸಿಕೊಳ್ಳುವಷ್ಟು ಭಾಷೆಯು ಸಂಸ್ಕೃತಿಯಲ್ಲಿ ಬೆರೆತಿರುವದಲ್ಲದೆ ಲಿಂಗ, ಅಂಗ, ಸಂಗ ಸ್ವರೂಪವಾದ ತತ್ವದಲ್ಲಿ ಲಿಪಿಯು, ಆ ಲಿಪಿಯಲ್ಲಿ ತತ್ವವು, ಒಡಮೂಡಿರುತ್ತದೆ. ಕನ್ನಡ ಅಕ್ಷರಗಳಲ್ಲಿ ಅಂಗವು ಲಿಂಗವಾಗುವಷ್ಟು ಸುಲಭ ಇನ್ನಾವ ಬರಹಗಳಲ್ಲಿ ತೋರಿಬರುವದಿಲ್ಲ. ಹೇಗಂದರೆ ಅಂಗ–ಲಿಂಗ ಇವೆರಡರಲ್ಲಿ ಅಕಾರದ ನಡುವಿರುವ ಗೆರೆಯನ್ನು ತೆಗೆದರೆ ಅಂಗವು ಸಹಜವಾಗಿ ಲಿಂಗವಾಗುವದರಿಂದ ಲಿಂಗವಂತರ ತತ್ವಕ್ಕೂ ಕನ್ನಡಲಿಪಿಗೂ ಇರುವ ನಿಕಟಸಂಬಂಧವನ್ನು ಎಲ್ಲರೂ ಮನಗಾಣಬಹುದು.

ಭಾರತ ದೇಶವು ಅನೇಕ ಭಾಷೆ, ತತ್ವ, ಮತಪಂಥ, ಸಿದ್ಧಾಂತಗಳಿಗೆ ತವರೂರಾಗಿರುವಂತೆ ನಮ್ಮ ಕರ್ಣಾಟಕವು ಅನೇಕ ಮತಾಚಾರ್ಯರ ಸಿದ್ಧಾಂತಕ್ಕೆ ನೆಲೆಮನೆಯಾಗಿರುವದು. ಅಹಿಂಸಾತತ್ವ ಪ್ರಧಾನವಾದ ಜೈನರ ಸ್ಯಾದ್ವಾದವು, ಭಗವಾನ್ ಬುದ್ಧನ ನಿರೀಶ್ವರವಾದವು, ಶ್ರೀ ಶಂಕರಾಚಾರ್ಯರ ಅದ್ವೈತವು, ಶ್ರೀ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತವು, ಶ್ರೀ ಮಧ್ವಾಚಾರ್ಯರ ದ್ವೈತವು, ದ್ವೈತಾದ್ವೈತ ವಿಲಕ್ಷಣವಾದ ವೀರಶೈವರ ಲಿಂಗಾಂಗ ಸಾಮರಸ್ಯವೇ ಮೊದಲಾದ ಮತಸಿದ್ಧಾಂತಗಳು ಕನ್ನಡ ನಾಡಿನಲ್ಲಿ ನೆಲೆಗೊಂಡಿರುವವು. ಸಾಮಾನ್ಯವಾಗಿ ಇವೆಲ್ಲವೂ ಪ್ರಾಕೃತ ಸಂಸ್ಕೃತಾದಿ ಭಾಷೆಗಳಲ್ಲಿ ಹುಟ್ಟಿ ಬೇರೆ ಬೇರೆ ಪ್ರಾಂತಭಾಷೆಗಳಲ್ಲಿ ಬೆಳವಣಿಗೆಯನ್ನು ಪಡೆದಿರುತ್ತವೆ. ಆದರೆ ಲಿಂಗಾಯತರ ಷಟ್‌ಸ್ಥಲಾತ್ಮಕವಾದ ಲಿಂಗಾಂಗ ಸಾಮರಸ್ಯ ಸಿದ್ಧಾಂತವು ಮಾತ್ರ ವಿಶೇಷವಾಗಿ

ಕನ್ನಡಕ್ಕೆ ಸಂಬಂಧಪಟ್ಟದ್ದಾಗಿರುತ್ತದೆಂದರೆ ತಪ್ಪಾಗಲಿಕ್ಕಿಲ್ಲ. ಕನ್ನಡವೂ ಪ್ರಾಚೀನ ಭಾಷೆಗಳಲ್ಲಿ ಒಂದಾಗಿ ಬೆಳೆದು ಬಾಳಿದ ಭಾಷೆಯಾಗಿದೆ. ಅಲ್ಲದೆ ಲಿಂಗಾಯತರ ಲಿಂಗಾಂಗಸಾಮರಸ್ಯ ಸಿದ್ಧಾಂತವು ಕನ್ನಡನುಡಿಯಲ್ಲೇ ಬೇರೂರಿ ಬೆಳೆದಿರುವದ ರಿಂದ ಕನ್ನಡವು ತನ್ನದೇ ಆದ ತತ್ವಮಯವಾದ ಸ್ವತಂತ್ರ ಸಿದ್ಧಾಂತದಿಂದ ಬೆಳಗುತ್ತಿರುವದು. ಅದಕ್ಕಾಗಿ ಕನ್ನಡಿಗರೆಲ್ಲರೂ ಹೆಮ್ಮೆಪಡಬೇಕಾಗಿದೆ. ಪ್ರಾಯಃ ಸಂಸ್ಕೃತಭಾಷೆಯೊಂದನ್ನು ಬಿಟ್ಟರೆ ಬೇರೆ ಯಾವ ಭಾಷೆಗಳಲ್ಲಿಯೂ ತನ್ನದಾದ ತತ್ವವು ವಿಶೇಷವಾಗಿ ಕಂಡುಬರುವದಿಲ್ಲ. ಷಡ್‌ದರ್ಶನಕಾರರ ತತ್ವವನ್ನಂಗೀಕರಿಸು ವವರೆಲ್ಲರಿಗೂ ಸಂಸ್ಕೃತಭಾಷೆಯ ಮೂಲಕ ಎಲ್ಲ ಮತಗಳ ಸಿದ್ಧಾಂತವನ್ನರಿಯಲು ಅವಕಾಶವಿರುವದು. ಆದರೆ ಲಿಂಗಾಯತ ಮತ ಸಿದ್ಧಾಂತವನ್ನೂ, ಸಾಹಿತ್ಯವನ್ನೂ ಚೆನ್ನಾಗಿ ಅರಿಯಬೇಕೆಂದಿದ್ದರೆ ಕನ್ನಡ ವಾಙ್ಮಯದಲ್ಲಿ ಹೆಚ್ಚಾಗಿ ಕಾಣಬಹುದು. ಸಂಸ್ಕೃತ ಭಾಷೆಯಲ್ಲಿ ಇಲ್ಲವೆಂತಲ್ಲ. ಆ ಭಾಷೆಯಲ್ಲಿಯೂ ಅನೇಕ ಉದ್ದಾಮ ಗ್ರಂಥಗಳು ಬರೆಯಲ್ಪಟ್ಟಿರುವವು.

ಈಗ 'ಲಿಂಗವಂತರೂ–ಕನ್ನಡವೂ' ಎಂಬ ವಿಷಯ ಪ್ರಸ್ತಾಪಿಸುತ್ತಿರುವದ ರಿಂದ ಕನ್ನಡ ಭಾಷೆಯಲ್ಲಿ ಲಿಂಗಾಯತರ ಸಾಹಿತ್ಯ, ಸಂಸ್ಕೃತಿ, ತತ್ವಗಳು ಸರಳ ವಾಗಿ ಮನವರಿಕೆಯಾಗುವಂತೆ ಕಾಣುವವು. ಮತಸಿದ್ಧಾಂತ ತತ್ವಗಳಲ್ಲಿರುವ ತೊಡಕನ್ನು ಬಿಡಿಸುವ ಗೋಜಿಗೆಹೋಗದೆ, ವಿವಾದಾಸ್ಪದ ವಿಷಯಗಳನ್ನು ಚರ್ಚಿಸದೆ, ಕನ್ನಡವಚನ ಸಾಹಿತ್ಯ ಮೊದಲುಮಾಡಿ ಈವರೆಗೂ ನಡೆದುಕೊಂಡು ಬಂದಿರುವ ಕನ್ನಡನುಡಿಗಾಗಿ ಶಿವಶರಣರು, ಲಿಂಗಾಯತ ಕವಿಗಳು ಯಾವ ಬಗೆಯಿಂದ ದುಡಿದಿರುವರೆಂಬ ಅಂಶವನ್ನು ಓದುಗರ ತಿಳುವಳಿಕೆಗೆ ತಂದುಕೊಡು ವದೇ ಮುಖ್ಯ ಕೆಲಸ.

ಮೊಟ್ಟಮೊದಲು ವಚನಕಾರರು ಮಾನವ ಜೀವನದ ಬೆಳವಣಿಗೆಗೆ ಅತ್ಯಾ ವಶ್ಯಕವಾದ ಕೆಲವು ವಿಚಾರಗಳು ಎಲ್ಲರಿಗೂ ಸರಿಯಾಗಿರಬೇಕೆಂದು ಬಗೆದು, ಮಾನವ ಪ್ರಾಣಿಗಳಿಗೆ ಕಾಲದೇಶವಸ್ತುಗಳಿಗನುಸರಿಸಿ ಅವರವರ ಯೋಗ್ಯತಾನುಗುಣವಾಗಿ ಆಹಾರವು ಎಷ್ಟು ಆವಶ್ಯಕವೋ, ವಿಚಾರ ಮತ್ತು ಜ್ಞಾನವಾದರೂ ಅಷ್ಟೇ ಆವಶ್ಯಕ ವೆಂದು ತಾಯಿನುಡಿಯಾದ ಕನ್ನಡದಲ್ಲಿ ಸೊಗಸಾದ ವಚನಗಳನ್ನು ಪ್ರತಿಪಾದಿಸಿದರು. ಭಾಷೆಯಲ್ಲಿರುವ ಕಠಿಣತ್ವ, ಶ್ಲೇಷ, ಮೊದಲಾದ ತೊಡಕಿನ ಹೊದಿಕೆಯನ್ನು ತೆಗೆದು ಸರಳ, ಸಹಜ, ಭಾವಪೂರ್ಣವಚನಗಳನ್ನಾಡುತ್ತ ತತ್ವವು ನೇರವಾಗಿ ಪಂಡಿತ ಪಾಮರರ ಮನಮುಟ್ಟುವಂತೆಮಾಡಿ ಜೀವನಕ್ಕೆ ಸುತ್ತಿಕೊಂಡಿರುವ ನಾನಾ ಬಗೆಯ ತೊಡಕನ್ನು ಹಗುರಾಗಿ ಹರಿದಿರುವರು. ಇಲ್ಲಿ ಎದೆಯನ್ನರಳಿಸುವಂತಹ ಕೆಲವು ವಚನಗಳನ್ನು ಮನವರಿಕೆಮಾಡಿಕೊಳ್ಳಬೇಕು.

> "ತಾಯಿ ತಂದೆ ಇಲ್ಲದ ಕಂದ ನಿನಗೆ ನೀನೆ ಹುಟ್ಟಿ ಬೆಳೆದೆಯಲ್ಲಾ, ನಿನ್ನ ಪರಿಣಾಮವೇ ನಿನಗೆ ಪ್ರಾಣತೃಪ್ತಿಯಾಗಿ ಇದ್ದೆಯಲ್ಲಾ, ಭೇದಕರಿಗೆ ಅಭೇದ್ಯನಾಗಿ ನಿನ್ನ ನೀನೆ ಬೆಳಗುತ್ತಿರ್ದ್ದೆಯಲ್ಲಾ, ನಿನ್ನ ಚಾರಿತ್ರ ನಿನಗೆ ಸಹಜ ಗುಹೇಶ್ವರಾ."

"ಅಳಿಯು, ಬೆಳಿಯು, ಸುಳಿಯು, ಪ್ರಳಯವಿಲ್ಲದ ವಿಜಯನು"
ಎಂದು ಮೊದಲಾಗಿ ಪರಮಾತ್ಮನ ಇರುವಿಕೆಯನ್ನು ಎಷ್ಟು ತಿಳಿಯಾಗಿ ತಿಳಿಸಿದ್ದಾರೆ.

ಎಲ್ಲೆಡೆಯಲ್ಲಿಯೂ ತುಂಬಿ ತುಳುಕುತ್ತಿರುವ ಪರವಸ್ತುವಿನ ಸ್ವರೂಪವನ್ನು ತನ್ನೊಳಗೇ ಕಂಡು ಉಂಡು ಸುಖಿಸುವದೆ ಜೀವನದ ಕೊನೆಯ ಗುರಿಯಾಗಿದೆ. ಆ ವಿಚಾರವನ್ನು ಹಿರಿಯರಾದ ಶಿವಶರಣರು ಮುದ್ದಾದ ನುಡಿಗಳಿಂದುಸಿರಿರುವರು.

"ಕಣ್ಣಬೆಳಗು, ಸೂರ್ಯಬೆಳಗು ಕೂಡಿಕಾಂಬಂತೆ ನನ್ನ ನಿನ್ನರುವಿನ
ಸಂಬಂಧ ಬೆಂಬಳಿಯಲಿ ಅರಿದೆನು ಕಾಣಾ"

ಎಂಬ ವಚನವು ವಸ್ತು ಸಾಕ್ಷಾತ್ಕಾರದಲ್ಲಿ "ಆಲೋಕಸಹಕೃತಚಕ್ಷುಃ ಸಂಯೋಗಃ ಕಾರಣಂ" ಎಂದು ಹೇಳಿರುವಗೌತಮರ ಸಿದ್ಧಾಂತವನ್ನನುಸರಿಸಿರುವದು. ಜೀವಾತ್ಮ ಪರಮಾತ್ಮರು ಬೆರೆತು ಕಲೆತುಕೊಂಡಿರುವದೇ ಪರಾತ್ಪರ ವಸ್ತುವಿನ ಸಹಜ ಸುಖಾನುಭವವಾಗಿರುವದು.

"ಮರೀಚಿಯೊಳಗಣ ಬಿಸಿಲಿನಂತೆ, ಕ್ಷೀರದೊಳಗಣ ತುಪ್ಪದಂತೆ, ಚಿತ್ರಿಕ
ನೊಳಡಗಿದ ಚಿತ್ರದಂತೆ, ಆಲಿಯೊಳಡಗಿದ ತೇಜದಂತೆ, ನುಡಿಯೊಳಡಗಿದ
ಅರ್ಥದಂತೆ ಇದ್ದಿತ್ತು ಕೂಡಲ ಚೆನ್ನಸಂಗಯ್ಯ ನಿಮ್ಮ ನಿಲವು."

"ಕಲ್ಲೊಳಗಣ ಕಿಚ್ಚು ಉರಿಯಬಲ್ಲುದೆ? ಬೀಜದೊಳಗಣ ವೃಕ್ಷ ಉಲಿಯ
ಬಲ್ಲುದೆ? ತೋರಲಿಲ್ಲಾಗಿ ಬೀರಲಿಲ್ಲಾರಿಗೆಯೂ ಗುಹೇಶ್ವರಾ ನಿಮ್ಮ
ನಿಲವು ಅನುಭವಸುಖಿ ಬಲ್ಲ."

"ನೆಲದ ಮರೆಯ ನಿಧಾನದಂತೆ, ಮುಗಿಲಮರೆಯಡಗಿರ್ದ ಮಿಂಚಿನಂತೆ,
ಕಂಗಳ ಮರೆಯಲಡಗಿರ್ದ ಬೆಳಗಿನಂತೆ ಗುಹೇಶ್ವರಾ ನಿಮ್ಮ ನಿಲವು."

ಇಲ್ಲಿ ಉದಾಹರಿಸಿದ ವಚನಗಳಲ್ಲಿ ತನ್ನೊಳಗೆ ಪರಾತ್ಪರವಸ್ತುವಿನ ಅವ್ಯಕ್ತ ಸ್ಥಿತಿಯು ಅಭಿನ್ನವಾಗಿ ತೋರಿಬರುತ್ತದೆ. ಬೀಜದಲ್ಲಿ ಮರವಾಗುವ ಶಕ್ತಿಯು ಅಡಗಿಕೊಂಡಿರುವಂತೆ ಪ್ರತಿಯೊಬ್ಬ ಮಾನವನಲ್ಲಿ ದೇವರಾಗುವ ಶಕ್ತಿಯು ಹುದುಗಿ ಕೊಂಡಿರುವದು. ಅದನ್ನು ಹೊರಹೊಮ್ಮಿಸಲು ಪ್ರಯತ್ನಿಸುವದೇ ಬಾಳಿನ ತಿರುಳಾಗಿರುವದು.

"ಬೀಜದೊಳಗಿಹ ವೃಕ್ಷಫಲವ ಸವಿಯಬಹುದೇ?
ಮಳೆವನಿಯೊಳಿಪ್ಪ ಹುರಮುಂಜ ಮುತ್ತುಗಳಂ ಸರಗೊಳಿಸಿಕೊರಳೊಳು
ಧರಿಸಬಹುದೇ?
ಹಾಲೊಳಗಿಪ್ಪ ತುಪ್ಪವು ಅರಸಿದರೆ ಸಿಕ್ಕುವದೇ?
ಕಬ್ಬಿನೊಳಗಿಪ್ಪ ಬೆಲ್ಲವು ಕಣ್ಣಿಗೆ ಕಾಣಿಸುವದೇ?
ತನ್ನೊಳಗಿಪ್ಪ ಶಿವತತ್ವವು ನೆನೆದಾಕ್ಷಣವೆ ಅನುಭವಕ್ಕೆ ಬರುವದೇ?
ಭಾವಿಸಿ, ತಿಳಿದು, ಮಥಿಸಿ, ಪ್ರಯೋಗಾಂತರದಿಂ ಪ್ರಸನ್ನತ್ವಮಂ
ಮಾಡಿಕೊಂಡು ತದನುಭವಸುಖದೊಳೋಲಾಡುವದು ಅತಿಚತುರನಾದ
ಶಿವಶರಣಂಗಲ್ಲದೆ ಉಳಿದರ್ಗುಂಟೆ?"

ಎಂಬ ವಚನ ಸದ್ಭಾವ ಸಮ್ಯಗ್‌ಜ್ಞಾನ ಸದಾಚಾರಗಳಿಲ್ಲದೆ ದೇವತ್ವಪ್ರಾಪ್ತವಾಗುವದಿಲ್ಲೆಂಬದನ್ನು ತೋರಿಸುತ್ತದೆ.

ಈ ಪ್ರಕಾರ ಅನೇಕ ವಿಧಾನಗಳಿಂದ ಜೀವನದ ತೊಡಕನ್ನು ಬಿಡಿಸಲು ಪ್ರಯತ್ನಿಸಿ ಜೀವದೇವರಲ್ಲಿ (ಅಂಗಲಿಂಗ)ದಲ್ಲಿ ಸತಿಪತಿ ಸಂಬಂಧದಿಂದ ಬಾಳಿನಲ್ಲೇ ಬೆಳಕನ್ನುಂಟುಮಾಡುವದೇ ವಚನಕಾರರ ಮುಖ್ಯೋದ್ದೇಶವೆಂದು ನಿಃಸಂಶಯವಾಗಿ ಹೇಳಬಹುದು.

ಜೀವದೇವರ ಸಂಬಂಧದ ಪ್ರಶ್ನೆಯು ಬಹು ತೊಡಕಿನದಾಗಿದ್ದರೂ ಶಿವ ಶರಣರು ಈ ಜಟಿಲಸಮಸ್ಯೆಯನ್ನು ತಮ್ಮ ಸೂಳ್ನುಡಿಗಳಿಂದ ಸರಳವಾಗಿ ಬಿಡಿಸಲು ಸಾಹಸಮಾಡಿ ಅದರಲ್ಲಿ ಪರಿಪೂರ್ಣತೆಯನ್ನು ಪಡೆದಿದ್ದಾರೆಂಬುದು ಎಲ್ಲ ಕನ್ನಡಿಗರ ಮನವರಿಕೆಯಾಗಿರಲಿಕ್ಕೇಬೇಕು.

ಹೀಗೆ ವಚನವಾಙ್ಮಯಾವತಾರದನಂತರ ಹರಿಹರ, ರಾಘವಾಂಕ, ಮೊದಲಾದ ಶಿವಕವಿಗಳು ರಗಳೆ ಮತ್ತು ಷಟ್ಪದಿ ಕಾವ್ಯ ಬರೆದು ಮುಂದಿನವರಿಗೆ ಹೊಸ ದೊಂದು ಹಾದಿಹಾಕಿಕೊಟ್ಟರು. ಸರ್ವಜ್ಞನು ತ್ರಿಪದಿಕಾವ್ಯ ರಚನೆಯಿಂದ ಕನ್ನಡಿ ಗರನ್ನೆಲ್ಲ ತನ್ನತ್ತ ಸೆಳೆದನು. ನಿಜಗುಣ ಶಿವಯೋಗಿಗಳು ತಮ್ಮ ಹಾಡುಗಬ್ಬ ಗಳಿಂದ ಹೆದ್ದಾರಿಯನ್ನು ತೋರಿ ದಾಸಕೂಟದವರಿಗೆ ಚಿರಪರಿಚಿತರಾಗಿದ್ದಾರೆ. ಈ ಪ್ರಕಾರ ವಚನ, ರಗಳೆ, ಷಟ್ಪದಿ, ತ್ರಿಪದಿ, ಹಾಡುಗಬ್ಬ ಮೊದಲಾದ ಪ್ರಬಂಧಗಳ ರಚನೆಯಿಂದ ಕನ್ನಡ ಸಾಹಿತ್ಯದಲ್ಲಿ ತಮ್ಮದಾದ ಹೊಸದೊಂದು ಪಥವನ್ನು ತೋರಿ ಗಜಗತಿಯ ಕವಿಗಳೆನಿಸಿಕೊಂಡಿರುತ್ತಾರೆ. ಅಲ್ಲದೆ ಸಾಸಿವೆಯನ್ನು ಕೊರೆದು ಕಡಲ ತುಂಬಿದಂತೆ ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಅತಿ ಮಹತ್ತರವಾದ ಅರ್ಥ ಮತ್ತು ಭಾವ ಗಳನ್ನು ತುಂಬಿ "ಕಾವ್ಯಂ ಕಲ್ಪಾಂತರಸ್ಥಾಯಿ" ಎನ್ನುವಂತೆ ತಮ್ಮ ಕೃತಿಗಳನ್ನು ಚಿರಾಯುಗಳನ್ನಾಗಿ ಮಾಡಿರುತ್ತಾರೆ. ಈ ವಿಷಯದಲ್ಲಿ ಒಂದೆರಡು ವಾಕ್ಯಗಳನ್ನು ಉದಾಹರಿಸಿದರೆ ಅಪ್ರಕೃತ ಮತ್ತು ಅಸಮಂಜಸವೆನಿಸಲಿಕ್ಕಿಲ್ಲೆಂದು ಭಾವಿಸು ತ್ತೇನೆ. "ಅಧರಕ್ಕೆ ಕಹಿ ಉದರಕ್ಕೆ ಸಿಹಿ", "ಅರಿದರೆ ಶರಣ ಮರೆದರೆ ಮಾನವ" —ಈ ವಚನಗಳಿಂದ ಬಸವಣ್ಣನವರ ಭಾವಪರಿಪೂರ್ಣತೆಯು ವ್ಯಕ್ತವಾಗುತ್ತದೆ. "ಬಸವಣ್ಣನ ಭಾವದ ಕಾಣ್ಕೆ ಕಾಣ್ಕೆ ಹೋ" ಎಂಬ ಹರಿಹರ ಮಹಾಕವಿಯ ಉಕ್ತಿಯೂ ಅರ್ಥಪೂರ್ಣವಾಗಿರುವದು.

ಎಷ್ಟೋ ಕವಿಗಳು ತಮ್ಮ ಕಾವ್ಯಗಳಲ್ಲಿ ದೇಶ, ವನ, ಕುಸುಮಗಳನ್ನು ವರ್ಣಿಸಿ ಓದುಗರಿಗೆ ಬೇಸರಿಕೆಯನ್ನುಂಟುಮಾಡಿರುತ್ತಾರೆ. ಆದರೆ ಹರಿಹರದೇವನ ಕಿರಿಯ ಮಾತುಗಳನ್ನೋದುತ್ತೋದುತ್ತ ಓದಬೇಕೆನಿಸುತ್ತದೆ. "ಅಳಿಯೆರಗದಸಿಲ ನಲುಗದ ರವಿಕರಂ ಪುಗದ." "ಬೆಳೆಯಿಲ್ಲದೆಡೆಯಿಲ್ಲ ಜನವಿಲ್ಲದೂರಿಲ್ಲ." ಇಲ್ಲಿ ಕುಸುಮಗಳ ಮನೋಹರತ್ವ, ದೇಶದ ಸಂಪತ್ತು, ಜನಗಳ ಆರೋಗ್ಯಭಾಗ್ಯ, ಮೊದಲಾದವು ಸಣ್ಣ ವಾಕ್ಯಗಳಲ್ಲಿ ಎಷ್ಟು ಹೃದಯಂಗಮವಾಗಿ ವರ್ಣಿಸಲ್ಪಟ್ಟಿ ರುವದು !

"ಕುಲದೊಳ್ ಕಿರಿಯಂ ಮನದೊಳ್ ಪಿರಿಯಂ
ನೆಲದೊಳ್ ಕಿರಿಯಂ ಪರದೊಳ್ ಪಿರಿಯಂ"

ಇಲ್ಲಿ ವ್ಯಕ್ತಿಯ ಒಳಜೀವನವು ಮನಮುಟ್ಟುವಂತೆ ಚಿತ್ರಿತವಾಗಿರುವದು.

"ನೋಡುತೆ ನೋಡುತೆ ನೋಡುತ್ತಿರ್ದಂ
ನೋಡಿದ ನೋಟದೊಳಿವೆ ಮರೆದಿರ್ದಂ"

ಇಲ್ಲಿ ಸಹಜ ಸಮಾಧಿಯೋಗದ ಸ್ವರೂಪವು ಪರಮಾವಧಿಯನ್ನು ಕಂಡಿರುತ್ತದೆ. ಮಹಾಕವಿಯಾದ ಹರಿಹರದೇವನ ಗಿರಿಜಾಕಲ್ಯಾಣ, ಶರಣರ ರಗಳೆ ಮೊದಲಾದ ಕಾವ್ಯಗಳ ರಸ, ಪಾಕ, ಶೈಲಿಗಳು ಓದುಗರ ಮನವನ್ನು ಕೂಡಲೆ ತಮ್ಮತ್ತ ಸೆಳೆದುಕೊಳ್ಳುವವು. ವೇದಾಂತಶಾಸ್ತ್ರದ ರಹಸ್ಯವು ನಿಜಗುಣಶಿವಯೋಗಿಗಳ ಕಿರಿಯ ಕೃತಿಯಾದ ಕೈವಲ್ಯ ಪದ್ಧತಿಯಲ್ಲಿ ಹಾಸುಹೊಕ್ಕಾಗಿರುವದು. ಸಂಸ್ಕೃತಸಾಹಿತ್ಯದಲ್ಲಿ ಶ್ರೀ ಶಂಕರಾಚಾರ್ಯರು ವೇದಾಂತ ಶಾಸ್ತ್ರಗ್ರಂಥಗಳನ್ನು ಬರೆದು ಲೋಕೋಪಕಾರ ಮಾಡಿರುವಂತೆ ನಿಜಗುಣಶಿವಯೋಗಿಗಳ ಗ್ರಂಥಗಳು ಕನ್ನಡಿಗರಿಗೆ ವೇದಾಂತ ತತ್ವವನ್ನು ಸುಲಭವಾಗಿ ತಿಳಿಸಿಕೊಡುವದಕ್ಕೆ ಅತಿ ಸಹಾಯಕವಾಗಿರುವವೆಂದು ಎಲ್ಲರ ಮನದಟ್ಟಾದ ಮಾತು.

ಸುಮಾರು ನೂರಾರು ವರ್ಷಗಳ ಪೂರ್ವದಲ್ಲಿ ಸುಪ್ರಸಿದ್ಧ ಶಿವಾನುಭವಿಗಳಾದ ಬೆಂಗಳೂರ ಶ್ರೀ ಸರ್ಪಭೂಷಣ ಶಿವಯೋಗಿಗಳು 'ಕೈವಲ್ಯಕಲ್ಪವಲ್ಲರಿ' ಎಂಬ ಹಾಡುಗಬ್ಬವನ್ನು ನಿರ್ಮಿಸಿ ಕನ್ನಡಿಗರಿಗೆ ಸುಪರಿಚಿತರಾಗಿದ್ದಾರೆ. ಅವರು ಜ್ಞಾನಪ್ರತಿಪಾದನದ ಸ್ಥಲದ ಒಂದೇ ಪದದಲ್ಲಿ ವೇದಾಂತ ಶಾಸ್ತ್ರದ ಪ್ರಮೇಯವನ್ನು ಸಮಗ್ರವಾಗಿ ಪ್ರತಿಪಾದಿಸಿರುತ್ತಾರೆ. ಮತ್ತು ಅದೇ ಗ್ರಂಥದ ಶಿವಯೋಗ ಪ್ರತಿಪಾದನ ಸ್ಥಲದ ಒಂದೇ ಪದ್ಯದಲ್ಲಿ ವೀರಶೈವ ಮತತತ್ವದ ಸಾರಭೂತವಾದ ಇನ್ನೂರ ಹದಿನಾರು ಸಕೀಲಗಳ ಮರ್ಮವನ್ನು ಅತಿ ರಮಣೀಯವಾಗಿ ವರ್ಣಿಸಿದ್ದಾರೆ.

ಸಾರಾಂಶ: ಕಿರಿಮಾತುಗಳಲ್ಲಿ ಹಿರಿದಾದ ಅರ್ಥವನ್ನು ತುಂಬುವ ಜಾಣತನವು ಲಿಂಗವಂತ ಕವಿಗಳ ಪರಂಪರಾಗತವಾದ ಸರಣಿಯಾಗಿದೆ ಎಂದರೆ ಅತಿಶಯೋಕ್ತಿಯಾಗಲಾರದು.

ಒಟ್ಟಿನಲ್ಲಿ ಲಿಂಗಾಯತರು ವಚನ, ರಗಳೆ, ಷಟ್ಪದಿ, ಸಾಂಗತ್ಯ, ತ್ರಿಪದಿ ಹಾಡುಗಬ್ಬಗಳ ರೂಪದಲ್ಲಿ ಸಾಹಿತ್ಯವನ್ನು ಬೆಳೆಸಿ, ಅದರ ಮೂಲಕ ಮತದಲ್ಲಿ ಸುನೀತಿ, ಸದಾಚಾರ, ಸಮ್ಯಗ್ಜ್ಞಾನ, ಸದ್ಭಕ್ತಿಗಳು ಪ್ರತಿಯೊಬ್ಬರಲ್ಲಿ ಅಂಕುರಿಸಿ, ಜ್ಞಾನಕ್ರಿಯೆಗಳು ಕೊನೆಯವರೆಗೂ ಜೀವನದಲ್ಲಿ ಬೆರೆತು, ಜೀವಭಾವವು ನಷ್ಟವಾಗಿ ಶಿವತ್ವವು ಪ್ರಾಪ್ತವಾಗುವದರಿಂದ, ಭೋಗಮೋಕ್ಷಗಳು ಸ್ವಾಭಾವಿಕವಾದವುಗಳೆಂದು ಸಿದ್ಧಾಂತಗೊಳಿಸಿದ್ದಾರೆ. ಇಂತಹ ಸರ್ವಾಂಗ ಸುಂದರವೂ, ವಿಮರ್ಶ ಪರಿಪೂರ್ಣವೂ ಆದ ಸಾಹಿತ್ಯವನ್ನು ಕನ್ನಡ ನಾಡಿಗೆ ಕಾಣಿಯಾಗಿ ಕೊಟ್ಟು ಮಹದುಪಕಾರಮಾಡಿ ನಾಡಿನಲ್ಲಿ ತಮ್ಮ ಕೀರ್ತಿಗೌರವವನ್ನು ಸ್ಥಿರವಾಗಿ ನೆಲೆಗೊಳಿಸಿರುತ್ತಾರೆ.

**ಶ್ರೀ ಶ್ರೀ ಮಹಾದೇವಸ್ವಾಮಿಗಳವರು**

# ಕನ್ನಡದಲ್ಲಿ ಕಾವ್ಯಮಾರ್ಗ

ಕಾವ್ಯ ಮೀಮಾಂಸೆಯೂ ಒಂದು ಶಾಸ್ತ್ರ. ಎಲ್ಲ ಸಾಹಿತ್ಯಗಳಲ್ಲಿಯೂ ಈ ಶಾಸ್ತ್ರ ಗ್ರಂಥಗಳು ತಕ್ಕಷ್ಟು ಹೇರಳವಾಗಿಯೇ ಹುಟ್ಟವೆ. ಸಂಸ್ಕೃತದಲ್ಲಿ ಈ ಶಾಸ್ತ್ರಕ್ಕೆ ಅಲಂಕಾರಶಾಸ್ತ್ರವೆಂದು ಹೆಸರು. ಕಾವ್ಯದ ಸ್ವರೂಪವೇನು, ಕಾವ್ಯದ ಸೊಬಗು ಯಾವುದರಿಂದ ಎಂಬೀ ವಿಚಾರಗಳೇ ಈ ಶಾಸ್ತ್ರ ವಿಚಾರಕ್ಕೆ ಸೇರಿದ್ದು. "ಅಲಂಕಾರ" ಎಂಬುದು ಸಂಕುಚಿತಾರ್ಥದಲ್ಲಿ ಕಾವ್ಯವಧುವಿಗೆ ಸೊಬಗನ್ನು ಕೊಡುವ ಶಬ್ದಾರ್ಥ ವೈಚಿತ್ರ್ಯಕ್ಕೂ ಅನ್ವಯಿಸುತ್ತದೆ.

ಕನ್ನಡ ಸಾಹಿತ್ಯದಲ್ಲಿಯೂ ಕಾವ್ಯ ಮೀಮಾಂಸಾ ಗ್ರಂಥಗಳು ಹಲವಿವೆ. ಈಗ ದೊರೆತಿರುವ ಕನ್ನಡ ಗ್ರಂಥಗಳಲ್ಲೆಲ್ಲ ಅತಿ ಪ್ರಾಚೀನವೆನಿಸಿಕೊಂಡಿರುವ ಗ್ರಂಥವು ಒಂದು ಅಲಂಕಾರ ಗ್ರಂಥ—ನೃಪತುಂಗನ "ಕವಿರಾಜ ಮಾರ್ಗ" (ಸು. ೮೧೫). ಅಲ್ಲಿಂದೀಚೆಗೆ ಹುಟ್ಟಿರುವ ಅಲಂಕಾರ ಗ್ರಂಥಗಳಿವು: ನಾಗವರ್ಮನ "ಕಾವ್ಯಾವಲೋಕನ" (ಸು. ೧೧೪೫); ಉದಯಾದಿತ್ಯನ "ಉದಯಾದಿತ್ಯಾಲಂಕಾರ"(ಸು. ೧೧೫೦); ಕವಿಕಾಮನ "ಶೃಂಗಾರ ರತ್ನಾಕರ" (ಸು. ೧೨೦೦); ಮಾಧವನ "ಮಾಧವಾಲಂಕಾರ" (ಸು. ೧೫೦೦); ಸಾಳ್ವನ "ರಸರತ್ನಾಕರ" ಮತ್ತು "ಶಾರದಾವಿಲಾಸ" (ಸು. ೧೫೦೦); ತಿಮ್ಮನ "ನವರಸಾಲಂಕಾರ" (ಸು. ೧೬೦೦); ತಿರುಮಲಾರ್ಯನ "ಅಪ್ರತಿಮ ವೀರಚರಿತೆ" (ಸು. ೧೭೦೦); ಲಿಂಗರಾಜನ "ನರಪತಿವಿಜಯ" (ಸು. ೧೮೬೭).

ಈ ಗ್ರಂಥಗಳಲ್ಲಿ ಕಾವ್ಯ ತತ್ತ್ವದ ಜೊತೆಗೆ ವ್ಯಾಕರಣ, ಛಂದಸ್ಸು, ಅಲಂಕಾರ, ರಸಪ್ರಕ್ರಿಯೆ, ನಾಯಕ ನಾಯಿಕಾ ಲಕ್ಷಣಗಳು — ಈ ಎಲ್ಲ ವಿಷಯಗಳೂ ವಿಚಾರಕ್ಕೆ ಬಂದಿವೆ. ಕನ್ನಡ ಲಕ್ಷಣ ಗ್ರಂಥಗಳಲ್ಲಿ ತೋರಿಬರುವ ಕೇವಲ ಕಾವ್ಯ ತತ್ತ್ವವನ್ನು ಮಾತ್ರ ಪರಿಶೀಲಿಸುವುದು ಇಲ್ಲಿನ ಮುಖ್ಯ ಉದ್ದೇಶ.

ನೃಪತುಂಗನ ಮತದಲ್ಲಿ ಕಾವ್ಯವು "ಸವಿಶೇಷ ಶಬ್ದರಚನಂ ವಿವಿಧಾರ್ಥ ವ್ಯಕ್ತಿವರ್ತಿತಾಲಂಕಾರಂ." ಹೇಳುವ ವಿಷಯವನ್ನು ಉಚಿತ ಮಾತುಗಳಲ್ಲಿ ಹೇಳಬೇಕು; ಶಬ್ದವು ಉಚಿತ ಅರ್ಥವನ್ನು ಸೂಚಿಸುವಂತಿರಬೇಕು. "ಅವಗುಣ ಮಿನಿತಾದೊಡವಾ ಕವಿತಾ ಬಂಧಮನಶೇಷಮಂ ದೂಷಿಸುಗುಂ", "ಅದ ಱಿಂದಲಸದೆ ಪೀನಂ ಪದೆಯದೆ ಪಾಂಗಱಿದು ದೋಷಮಂ ಪಿಂಗಿಸಿ ತಪ್ಪದೆ ಬಗೆದು ಪೇೞ್ವುದು" ಎಂದು ಶಬ್ದಪ್ರಯೋಗದಲ್ಲಿ ಉಂಟಾಗಬಹುದಾದ ದೋಷಗಳನ್ನು ಕುರಿತು ಮೊದಲು ವಿಚಾರಮಾಡುವನು.

ಶ್ರುತದುಷ್ಟಮರ್ಥದುಷ್ಟಂ
ಶ್ರುತಿಕಷ್ಟಂ ಕಲ್ಪನೋಕ್ತಿ ಕಷ್ಟಮುಂ

ಶಬ್ದ ದೋಷಗಳು. ಇವುಗಳ ಜೊತೆಗೆ

"ಯತಿಭಂಗಮರ್ಥಶೂನ್ಯಂ
ಸತತ ವಿರುದ್ಧಾರ್ಥಮುಕ್ತಪುನರುಕ್ತಾರ್ಥಂ
ಚ್ಯುತಯಾಥಾಸಂಖ್ಯಂ ವ್ಯವ
ಹಿತವಚ್ಛಂದಂ ವಿಸಂಧಿಕಂ ನೇಯಾರ್ಥಂ"

"ಆಗಮ ಸಮಯ ನ್ಯಾಯವಿ
ಭಾಗ ಕಳಾ ಕಾಲ ಲೋಕ ದೇಶ ವಿರುದ್ಧಂ
ಭೋಗಿ ವಿಷಂಬೋಲ್ ಪ್ರಾಣ
ತ್ಯಾಗಮನಾಗಿಸುಗುಮಮಳಕೃತಿವಧುಗಿನಿತುಂ"

ನೃಪತುಂಗದೇವ ಮತದಲ್ಲಿ ಶಬ್ದರಚನಾದೋಷಗಳು ಮಾತ್ರವೇ ದೋಷ ಗಳಲ್ಲದೆ ವ್ಯಾಕರಣ, ಛಂದಸ್ಸು, ಕಾಲ, ದೇಶ, ಲೋಕ ವಿರುದ್ಧವಾದುವೂ ಕಾವ್ಯದೋಷಗಳೇ. ಮೇಲೆ ಹೇಳಿದ ದೋಷಗಳ ಜೊತೆಗೆ ಶುದ್ಧ ವ್ಯಾಕರಣಕ್ಕೇ ಅನ್ವಯಿಸುವ ಕಾರಕ, ವಚನ ಸಮುಚ್ಚಯ ದೋಷಗಳನ್ನೂ, ಛಂದಸ್ಸಿಗೆ ಅನ್ವಯಿ ಸುವ ಗುರು ಲಘು ದೋಷಗಳನ್ನೂ ಹೇಳಿರುವನು.

ನೃಪತುಂಗನಿಗೆ ಕಾವ್ಯ ದೋಷಗಳೆಂದರೆ ಬರಿ ಶಬ್ದ ದೋಷಗಳು ಮಾತ್ರವೇ ಅಲ್ಲದೆ ಪದಾರ್ಥದೋಷವೂ, ವಾಕ್ಯದೋಷವೂ, ವಾಕ್ಯಾರ್ಥ ದೋಷವೂ, ಕಾವ್ಯ ದೋಷಗಳೇ. ದೋಷವಾವುದಾದರೂ ಎಷ್ಟಾದರೂ ಕಾವ್ಯವಧುವಿಗೆ ಕಳಂಕ ತರತಕ್ಕದ್ದೇ.

"ದೋಸಮೇನಾನುಂ ಸ್ವಲ್ಪಮಾದೊಡಂ
ಮಾಸಿಸಿರ್ಕುಮಣಂ ಕೃತಿವಧುವಂ"

ದೋಷವಿಲ್ಲದಿರುವುದು ಆವಶ್ಯಕವಾದರೂ ಉತ್ತಮ ಕೃತಿಗೆ ಅಷ್ಟೇ ಸಾಲದು. ಎಂದರೆ ಕಾವ್ಯದೋಷಗಳಿಲ್ಲದಿರುವುದರಿಂದಲೇ ಉತ್ತಮ ಕೃತಿಯಾಗದು. ಇವುಗಳ ಜೊತೆಗೆ ಕಾವ್ಯಗುಣಗಳೂ ಸೇರಬೇಕು. ಈ ಕಾವ್ಯಗುಣಗಳನ್ನೇ ಅಲಂಕಾರ ಗಳೆಂದು ನೃಪತುಂಗನು ಭಾವಿಸಿರುವನು:

"ಪರಮ ಶ್ರೀ ಕೃತಿ ವಧುವಾ
ಶರೀರ ಶೋಭಾಕರಂಗಳಪ್ಪ ಗುಣಂಗಳ್
ನಿರತಿಶಯಾಲಂಕಾರ
ಪ್ರರೂಪಿತಂಗಳ್ ಪುರಾಣ ಕವಿ ವಿದಿತಂಗಳ್"

ಅಲಂಕಾರವೆಂಬುದನ್ನು ಇಲ್ಲಿ ಅದರ ಸಾಮಾನ್ಯಾರ್ಥದಲ್ಲಿ ಉಪಯೋಗಿಸಿ ದ್ದಾನೆ. ಕೃತಿ ವಧುವಿಗೆ ಸೌಂದರ್ಯವನ್ನು ಕೊಡತಕ್ಕದ್ದೆಲ್ಲವೂ ಅಲಂಕಾರವೇ. ಆದುದರಿಂದ ಅಲಂಕಾರದ ವಿಸ್ತೀರ್ಣದಲ್ಲಿ ಗುಣಗಳೂ ಶಬ್ದಾಲಂಕಾರ ಅರ್ಥಾ ಲಂಕಾರಗಳೂ ಸೇರುವುವು. ಕಾವ್ಯಗುಣಗಳೇ ಒಳ್ಳೆಯ ಕಾವ್ಯ ಶೈಲಿಗೆ ಆವಶ್ಯಕ ವಾದುವು; ಅಲಂಕಾರವು ಉತ್ತಮ ಕಾವ್ಯರಚನೆಯಲ್ಲಿ ಗೌಣಸ್ಥಾನವನ್ನು ಪಡೆದಿರು ವುದು. ಶಬ್ದ ಬಂಧದಲ್ಲಿ "ಇಲ್ಲಿಗಿದು ತಕ್ಕುದಿಲ್ಲಿಗೆ ಪೊಲ್ಲದಿದೆಂದಱಿದು ಸಮಱಿ ಬಲ್ಲಂತೆಲ್ಲಂ ತಲ್ಲಣಿಸದಲಸದಿಡು ಮೃದುಪದಮಂ". ದೋಷಗಳನ್ನು ಕುರಿತು ಹೇಳುವಾಗ ಹೇಗೆ ವ್ಯಾಕರಣ ದೃಷ್ಟಿಯಿಂದ, ಛಂದಸ್ಸಿನ ದೃಷ್ಟಿಯಿಂದ, ದೋಷಗಳು ಸಂಭವಿಸಬಹುದೆಂದು ಹೇಳಿದನೋ ಹಾಗೆಯೇ ಗುಣಗಳನ್ನು ಹೇಳುವಾಗಲೂ "ಗಱಯಿಸಿದರ್ಥಂ ಸಲೆ ಪಾಂಗಱಯುದೆಯುಂ ಶಬ್ದಮೊಂದಿ" ಇರಲು ದೀರ್ಘಸ್ವರಗಳ ಪ್ರಯೋಗಗಳನ್ನೂ, ವಿಶೇಷಣಗಳ ಪ್ರಯೋಗಗಳನ್ನೂ, "ನುತ ಶಬ್ದಾಲಂಕಾರದೊಳತಿಶಯಮಿಾ ಕನ್ನಡಕ್ಕೆ ಸತತಂ" ಆದ ಪ್ರಾಸ ವಿಚಾರವನ್ನೂ

ಹೇಳಿ ಶಬ್ದಗುಣಗಳ ವಿಚಾರಕ್ಕೆ ಬರುವನು. "ಕರ ಚರಣ ಶರೀರ ಶಿರೋದರ ವದನಾದ್ಯವಯವಂಗಳು" ಮಾನವವರ್ಗಕ್ಕೆ ಸಾಮಾನ್ಯವಾದರೂ "ನರರೊರ್ವ ರೊರ್ವರಂ ಪೋಲದವೋಲ್"

"ಸವಿಶೇಷೋಕ್ತಿಗಳುಮನಂ
ತವಿಧಂಗಳನಂತಭೇದವದಱಿಂ ಮಾರ್ಗಂ"

ಈ ಅನಂತವಿಧ, ಅನಂತ ಭೇದಗಳಲ್ಲಿ ಉತ್ತರ ದಕ್ಷಿಣಮಾರ್ಗಗಳನ್ನು ವಿಶದ ಪಡಿಸಿರುವನು. ಈ ಸಂದರ್ಭದಲ್ಲಿಯೇ ಗುಣ ವಿಚಾರ ಬರುವುದು.

"ಸಮ ಮಧುರ ನಿಬಿಡ ಕಾಂತ ಸು
ಕುಮಾರ ಸುಸಮಾಹಿತ ಪ್ರಸನ್ನೋದಾರ
ಪ್ರಮಿತಾಽಗ್ರಾಮ್ಯೋಜಸ್ವಿ
ಕ್ರಮದಿಂ ದಶಭೇದಮಲ್ಲಿ ದಕ್ಷಿಣಮಾರ್ಗಂ"

ಈ ಹತ್ತು ಗುಣಗಳೂ ಉತ್ತಮ ಕಾವ್ಯ ಗುಣಗಳು. ಈ ಗುಣಗಳೆಲ್ಲ ದಕ್ಷಿಣ ಮಾರ್ಗದಲ್ಲಿ ಪ್ರಕಾಶಿತವಾಗುವುವು. ಇವೆಲ್ಲ ಶಬ್ದ ಬಂಧಕ್ಕೆ ಮಾತ್ರ ಅನ್ವಯಿಸ ತಕ್ಕದ್ದು; ಆದರೂ ಮಾಧುರ್ಯ, ಸೌಕುಮಾರ್ಯ, ಮೊದಲಾದುವು ಅರ್ಥ ಗುಣಗಳಿಗೂ ಅನ್ವಯಿಸುವುವು. ಈ ದಶವಿಧಗಳಲ್ಲಿನ "ವಿಪರ್ಯಯ ವೃತ್ತಿ"ಯೇ ಉತ್ತರ ಮಾರ್ಗದ ಲಕ್ಷಣ. ಈ ಶಬ್ದ ಗುಣಗಳ ಜೊತೆಗೆ ಕ್ರಿಯಾಪದ ಪ್ರಯೋಗ ದಲ್ಲಿಯೂ ಭೇದವುಂಟು.

ನೃಪತುಂಗನು ವಿವರಿಸಿರುವ ಅರ್ಥಾಲಂಕಾರಗಳ ಸಂಖ್ಯೆ ೩೬. ಆದರೆ ಅವುಗಳಲ್ಲನೇಕಗಳಲ್ಲಿ ಪ್ರಭೇದಗಳುಂಟು. ಉಪಮಾನಾಲಂಕಾರದಲ್ಲಿ ೨೭ ಭೇದ ಗಳುಂಟು. ಇವುಗಳಲ್ಲಿ ಪ್ರತಿವಸ್ತೂಪಮೆಯೇ ಮೊದಲಾದ ಕೆಲವಾದರೂ ಪ್ರತ್ಯೇಕ ಅಲಂಕಾರಗಳಾಗಿ ನಿಲ್ಲುವಂತಹವುಗಳು. ಇಲ್ಲಿನ ಅಸಾಧಾರಣೋ ಪಮೆಯು ಮುಂದಿನ ಅಲಂಕಾರ ಗ್ರಂಥಗಳಲ್ಲಿ ಅನನ್ವಯಾಲಂಕಾರವೆನಿಸಿಕೊಂಡಿದೆ. ಊರ್ಜಿತ, ಪ್ರಿಯತರ, ಆಶೀರ, ಭಾವಿಕ— ಈ ಅಲಂಕಾರಗಳು ಈಚಿನ ಆಲಂಕಾರಿಕರ ಮತದಂತೆ ಅಲಂಕಾರವೆಂದೇ ಎನಿಸಿಕೊಳ್ಳದು. ರಸವೂ ಧ್ವನಿಯೂ ಅಲಂಕಾರಗಳ ಗುಂಪಿನಲ್ಲಿ ಸೇರಿಹೋಗಿರುವುವು. "ನವವಿಧ ರಸಂಗಳಂ ಮನಕೆವರೆ ನಿರೂಪಿಸುವ ವಚನ ವಿರಚನೆ" ರಸವದಲಂಕಾರ. "ಧ್ವನಿಯೆಂಬುದಳಂಕಾರಂ ಧ್ವನಿಯಿಸುಗುಂ ಶಬ್ದದಿಂದಂ". ನೃಪತುಂಗನು ಶಾಂತವೂ ನವರಸಗಳಲ್ಲಿ ಒಂದೆಂಬುದನ್ನೂ, ಅವೂ ಧ್ವನಿಯೂ ಕಾವ್ಯಕ್ಕೆ ಆವಶ್ಯಕಗಳೆಂಬುದನ್ನೂ ಒಪ್ಪಿ ಕೊಂಡಿದ್ದರೂ ಅವುಗಳೆಲ್ಲ ಶಬ್ದರಚನೆಗೆ ಅಂಗವಾಗಿರತಕ್ಕವೇ ಹೊರತು ಅವುಗಳಿಗೆ ಪ್ರಧಾನವಾದ ಪ್ರತ್ಯೇಕವಾದ ಸ್ಥಾನವಿಲ್ಲ. ಶಬ್ದಾಲಂಕಾರಗಳಲ್ಲಿ ಮುಖ್ಯವಾದ ಯಮಕ, ಅರ್ಧಭ್ರಮಣ, ಮುರಜಬಂಧ, ಏಕಾಕ್ಷರಬಂಧ, ದ್ವ್ಯಕ್ಷರಬಂಧ, ಪ್ರಹೇಳಿಕೆಗಳ ವಿವರಣೆಯಿದೆ.

ನೃಪತುಂಗನ ಮತದಲ್ಲಿ ಪದರಚನೆಯೇ ಕಾವ್ಯದ ಪ್ರಾಣ. ಉತ್ತಮ ಕಾವ್ಯವು ದೋಷರಹಿತವಾಗಿ ಗುಣಯುಕ್ತವಾಗಿರಬೇಕು. ಶಬ್ದದೋಷಗಳು ವ್ಯಾಕರಣ ಛಂದಸ್ಸುಗಳಿಂದ ಒದಗುವುವು. ಹಾಗೆಯೇ ಗುಣಗಳೂ ವ್ಯಾಕರಣ

ಛಂದಸ್ಸುಗಳಿಂದಾಗುವುವು. ಅಲಂಕಾರಗಳೂ ಗುಣವನ್ನು ಹೆಚ್ಚಿಸುವ, ಸೊಬಗನ್ನು ಕೊಡುವ, ಒಂದು ಅಂಶ. ಆದರೆ ಅಲಂಕಾರವು ಆವಶ್ಯಕವಲ್ಲ; ಗುಣಗಳೇ ಮುಖ್ಯ; ರಸ, ಧ್ವನಿಗಳು ಅಲಂಕಾರದಲ್ಲಿ ಭೇದಗಳು. ನೃಪತುಂಗನ ದೃಷ್ಟಿಯಲ್ಲಿ ಶಬ್ದರೂಪವು ಮುಖ್ಯವಾದುದರಿಂದ ವ್ಯಾಕರಣ ಛಂದಸ್ಸುಗಳ ನಿಯಮಗಳೂ ಕಾವ್ಯತತ್ತ್ವನಿರೂಪಣೆಯಲ್ಲಿ ಬೇಕಾಯಿತು.

ನೃಪತುಂಗನ ಗ್ರಂಥವು ಕಾವ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಅನೇಕ ವಿಚಾರಗಳನ್ನೊಳಗೊಂಡ ಕವಿಗಳ ಕೈಗನ್ನಡಿಯಾಗಿದೆ. ವ್ಯಾಕರಣ, ಛಂದಸ್ಸು, ಅಲಂಕಾರಗಳ ಮೂಲರೇಖೆಗಳನ್ನೆಲ್ಲ ಒಳಗೊಂಡಿರುವ ಒಂದು ಸಮಗ್ರ ಲಕ್ಷಣ ಗ್ರಂಥ. ಅಲ್ಲಿಂದೀಚಿನ ಆಲಂಕಾರಿಕರು ಆ ಮೂಲ ಸೂತ್ರಗಳ ಆಧಾರದಮೇಲೆ ಪ್ರತ್ಯೇಕ ಶಾಸ್ತ್ರಗ್ರಂಥಗಳನ್ನೇ ರಚಿಸಿರುವರು.

ಕಾವ್ಯ ತತ್ತ್ವ ದೃಷ್ಟಿಯಿಂದ ಮುಖ್ಯವಾದ ಎರಡನೆಯ ಗ್ರಂಥ ನಾಗವರ್ಮನ 'ಕಾವ್ಯಾವಲೋಕನ'. 'ಕವಿರಾಜಮಾರ್ಗ'ದಂತೆ ಇದೂ ವ್ಯಾಕರಣ, ಛಂದಸ್ಸು, ಅಲಂಕಾರ ಶಾಸ್ತ್ರಗಳನ್ನೆಲ್ಲ ಒಳಗೊಂಡಿದ್ದರೂ ಇದರ ನಿರೂಪಣೆಯಲ್ಲಿ ಒಂದು ಕ್ರಮವಿದೆ. ನಾಗವರ್ಮನ ಮತದಲ್ಲಿ ಕಾವ್ಯಲಕ್ಷಣವು ಹೀಗಿರುವುದು :

ಇರೆ ಶಬ್ದಾರ್ಥಂಗಳ್ ತ
ತ್ಪರತೆಯಿನದು ಕಾವ್ಯಮದಱೊಳುಚಿತೈಕಾರ್ಥಾಂ
ತರವಾಚಿ ಶಬ್ದಮವಭಾ
ಸರೂಪಮಾಹ್ಲಾದಕಾರಿಯಪ್ಪುದದರ್ಥಂ

ತಕ್ಕ ಶಬ್ದದಲ್ಲಿ ಉಚಿತ ಅರ್ಥದ ಹೊಂದಿಕೆಯೇ ಕಾವ್ಯ. ಪದಕ್ಕೆ ಅರ್ಥವು ಹಲವು ಕಾರಣಗಳಿಂದ ಬೇರೆಬೇರೆಯಾಗುವುದು. ಹೀಗೆ ಕಾವ್ಯ ಮೂಲವಾದ ಪದದಲ್ಲಿ ದೋಷಗಳೊದಗುವುವು :

ಅಸಮರ್ಥಮಪ್ರತೀತಂ
ವಿಸಂಧಿ ವಿಪರೀತಕಲ್ಪನಂ ಕಷ್ಟಂ ನೀ
ರಸಮೆಂದು ದೋಷಮಿವು ಸಮ
ನಿಸುಗುಂ ಪದದೊಳ್ ಪದಾಗಮಜ್ಞರ ಮತದಿಂ

ನೃಪತುಂಗನು ಹೇಳಿರುವ ಶಬ್ದದೋಷಗಳು ಶ್ರುತದುಷ್ಟವೇ ಮೊದಲಾಗಿ ನಾಲ್ಕು. ನಾಗವರ್ಮನು ಅವುಗಳಲ್ಲಿ ಕೆಲವನ್ನು ಬಿಟ್ಟು ಮತ್ತೆ ಕೆಲವನ್ನು ಸೇರಿಸಿ ಒಟ್ಟು ಆರು ದೋಷಗಳನ್ನು ಹೇಳಿರುವನು. ಆದರೆ ನೃಪತುಂಗನು ಈ ದೋಷಗಳನ್ನೆಲ್ಲ ಕಾವ್ಯ ದೋಷಗಳ ಗುಂಪಿನಲ್ಲಿ ಸೇರಿಸಿರುವನು. ನೀರಸವೆಂದರೆ ಗ್ರಾಮ್ಯ ಅಥವಾ ಅನುಚಿತ ಪದಪ್ರಯೋಗ, ಅಶ್ಲೀಲ ಅರ್ಥಸೂಚನೆ. ಈ ಪದದೋಷಗಳಲ್ಲದೆ "ಪದ ಸಮುದಾಯ"ವಾದ ವಾಕ್ಯದಲ್ಲಿ ವ್ಯವಹಿತ, ಏಕಾರ್ಥ, ವ್ಯರ್ಥ, ಅಪಕ್ರಮ, ಲೋಕ-ಶಾಸ್ತ್ರ ವಿರುದ್ಧ, ಯತಿಭಂಗ, ಭಿನ್ನವೃತ್ತ—ಈ ದೋಷಗಳು ಸೇರುವುವು.

"ಕೃತಿಸತಿಗೆ ಶಬ್ದಾರ್ಥಜಾತಮುಂತೆರಡು ತೆಱದಲಂಕೃತಿಯಕ್ಕುಂ". ಇದರಲ್ಲಿ ಶಬ್ದಾಲಂಕಾರ ಜಾತಿಯಲ್ಲಿ ನೃಪತುಂಗನು ಹೇಳಿರುವಂತೆಯೇ ಯಮಕ,

ಅನುಪ್ರಾಸಗಳನ್ನು ಹೇಳಿದ್ದಾನೆ. ಜೊತೆಗೆ ಚಿತ್ರವಿಚಿತ್ರಭಿತ್ತಿ, ವಕ್ರೋಕ್ತಿ, ವಿಶೇಷಗಳನ್ನು ಸೇರಿಸಿದ್ದಾನೆ. ಇಲ್ಲಿ ಕಾಣುವಷ್ಟು ಶಬ್ದಾಲಂಕಾರ ಜಾತಿಗಳು 'ಕವಿರಾಜಮಾರ್ಗ'ದಲ್ಲಾಗಲಿ ಈಚಿನ ಅಲಂಕಾರ ಗ್ರಂಥಗಳಲ್ಲಾಗಲಿ ಕಾಣಲಾಗುವುದಿಲ್ಲ.

ನಾಗವರ್ಮನು ಅರ್ಥಾಲಂಕಾರಗಳನ್ನು ವಾಸ್ತವ, ಉಪಮೆ, ಅತಿಶಯ, ಶ್ಲೇಷ ಎಂಬ ನಾಲ್ಕು ಜಾತಿಗಳನ್ನಾಗಿ ಮಾಡಿದ್ದಾನೆ. ಒಂದೊಂದರಲ್ಲಿಯೂ ಹಲವು ಒಳಭೇದಗಳುಂಟು. ನಾಗವರ್ಮನು ಹೇಳಿರುವ ಅಲಂಕಾರಗಳು ಒಟ್ಟು ೫೬—ನೃಪತುಂಗನು ಹೇಳಿರುವುದಕ್ಕಿಂತ ೨೦ ಹೆಚ್ಚು. ಶ್ಲೇಷೆಯೆಂಬುದು ಈಚಿನ ಆಲಂಕಾರಿಕರಲ್ಲಿ ಒಂದು ಪ್ರತ್ಯೇಕ ಅಲಂಕಾರವೇ ಹೊರತು ಒಂದು ಜಾತಿಯಲ್ಲ. ನಾಗವರ್ಮನ ಅನ್ಯೋನ್ಯೋಪಮೆಯು ನವೀನರ ದೃಷ್ಟಿಯಲ್ಲಿ ಉಪಮೇಯೋಪಮೆ ಎನಿಸಿದೆ; ವಿಪರ್ಯಾಸೋಪಮೆಯು ಪ್ರತೀಪವೆನಿಸಿದೆ. ನೃಪತುಂಗನು ಹೇಳಿರುವ ರಸವತ್, ವ್ಯಾವೃತ್ತ, ಧ್ವನಿ— ಇವುಗಳನ್ನು ನಾಗವರ್ಮನು ಹೇಳಿಲ್ಲ.

ಕಾವ್ಯದಲ್ಲಿ ರೀತಿರಸಗಳ ವಿಚಾರದಲ್ಲಿ ನಾಗವರ್ಮನು ಹೀಗೆ ಹೇಳಿರುವನು:

> ರೀತಿ ವಿನೂತ ವಸ್ತುಕೃತಿಗೊಪ್ಪುವ ಮೆಯ್ ರಸಭಾವವೃತ್ತಿ ನಿ
> ರ್ಣೀತಿಯೆ ಜೀವಮಂತದಱಿನನ್ವಿತನಪ್ಪ ಕವೀಶ್ವರಂ ಬುಧ
> ವ್ರಾತಮೊಜಲ್ಲು ಬಿಚ್ಚಟಿಸಿ ನಚ್ಚುವಳಂಕೃತಿ ಕೂಡದಿರ್ದೊಡಂ
> ರೀತಿಯೊಳೊಂದೆ ಪೇೞ್ವುದು ರಸಂಬಿಡೆ ಬಂಧುರ ಕಾವ್ಯಬಂಧಮಂ

ರೀತಿಯೇ ಕಾವ್ಯದ ದೇಹ, ರಸವೇ ಜೀವ. ಅಲಂಕಾರವಿಲ್ಲದಿದ್ದರೂ ರೀತಿಯು ಉತ್ತಮವಾಗಿರಬೇಕು. ರಸವು ಕಾವ್ಯದ ಜೀವವೆಂದು ಹೇಳಿದರೂ ನಾಗವರ್ಮನಿಗೆ ರೀತಿಯೇ ಮುಖ್ಯ. ನೃಪತುಂಗನಿಗೂ ಇದೇ ಸಮ್ಮತವಾಗಿದ್ದರೂ "ರೀತಿ"ಯೇ ಮುಖ್ಯವೆಂದು ಅವನು ವಾಚ್ಯವಾಗಿ ಹೇಳಿಲ್ಲ. ನಾಗವರ್ಮನ ದೃಷ್ಟಿಯಲ್ಲಿ "ಪದರಚನಾತಿಶಯಂ ರೀತಿ." ರೀತಿಗೆ ಸಂಬಂಧಿಸಿ ಹೊಂದಿಕೊಂಡಿರುವುದು ಕಾವ್ಯಗುಣಗಳು. "ನಿರತಿಶಯ ಕಾವ್ಯಶೋಭಾಕರಂಗಳಾಗಿರ್ಪ ಧರ್ಮವುವು ಗುಣಮಕ್ಕುಂ." ನೃಪತುಂಗನು ಹೇಳಿರುವಂತೆಯೇ ನಾಗವರ್ಮನೂ ಹತ್ತು ಕಾವ್ಯಗುಣಗಳನ್ನು ಹೇಳಿದ್ದಾನೆ. ಸಮ, ಸಂಶ್ಲಿಷ್ಟ, ಅರ್ಥವ್ಯಕ್ತಿ, ಮಧುರ, ಕಾಂತ, ಪ್ರಸನ್ನ, ಸೌಕುಮಾರ್ಯ, ಓಜಸ್ಸು, ಉದಾರ, ಸಮಾಧಿ—ಇವು ನಾಗವರ್ಮನು ಹೇಳುವ ಕಾವ್ಯಗುಣಗಳು. "ಪದರಚನಾತಿಶಯ"ವಾದ ರೀತಿಯು ಮೇಲಿನ ಹತ್ತು ಗುಣಗಳನ್ನು ಆಶ್ರಯಿಸಿದೆ. ಈ "ನಿಯತವರ್ಣಗುಂಫನಗುಣ"ದ ಒದವು ಮೂರು ತೆರನಾಗಿರತಕ್ಕದ್ದು. ಇವುಗಳಲ್ಲಿ ಹತ್ತು ಕಾವ್ಯಗುಣಗಳೂ ವೈದರ್ಭೀರೀತಿಯಲ್ಲಿ ಪ್ರಸಿದ್ಧವಾಗಿರತಕ್ಕವು. ಇದರ ವಿಪರ್ಯಯ ವೃತ್ತಿಯೆ ಗೌಡರೀತಿ. ಇದನ್ನೇ ನೃಪತುಂಗನೂ ಉತ್ತರ ಮಾರ್ಗ ದಕ್ಷಿಣಮಾರ್ಗ ಎಂದು ಕರೆದಿರುವುದು. ಉತ್ತರ ಮಾರ್ಗವು ವಕ್ರೋಕ್ತಿ ಭೂಯಿಷ್ಠವಾದುದೆಂದೂ ದಕ್ಷಿಣ ಮಾರ್ಗವು ಸ್ವಭಾವೋಕ್ತಿ ಭೂಯಿಷ್ಠವಾದುದೆಂದೂ ನೃಪತುಂಗನು ಮತ್ತೊಂದು ಭೇದವನ್ನು ಕಲ್ಪಿಸಿರುವನು. ನಾಗವರ್ಮನು ವೈದರ್ಭೀ, ಗೌಡರೀತಿಗಳೆರಡೂ ಒಂದೇ; ಆದರೂ ಹಿಂದಿನಿಂದ ಬಂದಿರುವುದರಿಂದ ಅವು ಆದರಣೀಯ

ವೆಂದಿರುವನು. ಈ ಎರಡರ ಜೊತೆಗೆ ಪಾಂಚಾಲಿ ರೀತಿಯೆಂಬ ಮತ್ತೊಂದು ಭೇದವನ್ನು ತೋರಿಸಿದ್ದಾನೆ. ಈ ಮೂರು ರೀತಿಗಳಲ್ಲಿ ವೈದರ್ಭಿಯೇ ಉತ್ತಮ ವೆಂಬ ಭಾವನೆ. ಹೀಗೆಯೇ ಕೆಲವು ರಸಗಳ ನಿರೂಪಣೆಗೆ ವೈದರ್ಭೀರೀತಿಯೂ ಮತ್ತೆ ಕೆಲವಕ್ಕೆ ಪಾಂಚಾಲವೂ ಮತ್ತೆ ಕೆಲವಕ್ಕೆ ಗೌಡರೀತಿಯೂ ಉತ್ತಮವೆಂದು ಎಣಿಸಲ್ಪಟ್ಟಿದೆ.

ನೃಪತುಂಗನ ದಕ್ಷಿಣೋತ್ತರ ಮಾರ್ಗಗಳಂತೆಯೇ ನಾಗವರ್ಮನ ಮೂರು ರೀತಿಗಳೂ ಆ ಕಾಲದ ಸಾಹಿತ್ಯ ರಚನೆಯಲ್ಲಿ ಕಾಣಬರುತ್ತಿದ್ದ ಪ್ರಾಂತೀಯ ಭೇದ ಗಳಾಗಿರಬೇಕೆಂಬುದು ಭಾಷಾಶಾಸ್ತ್ರಜ್ಞರ ಅಭಿಪ್ರಾಯವಾಗಿದೆ.

ನೃಪತುಂಗನ ಮತದಲ್ಲಿ ರಸವು ಕಾವ್ಯಕ್ಕೆ ಸೊಬಗು ಕೊಡತಕ್ಕದ್ದೇ ಹೊರತು ಆವಶ್ಯಕವಾದುದಲ್ಲ. ನಾಗವರ್ಮನು ಒಂದು ಹೆಜ್ಜೆ ಮುಂದೆ ಹೋಗಿ ರಸವು ಕಾವ್ಯಕ್ಕೆ ಕೇವಲ ಅಲಂಕಾರಪ್ರಾಯವಲ್ಲ, ಅವಶ್ಯವೂ ಆದುದೆಂದು ಹೇಳಿದ್ದಾನೆ. ರಸಗಳನ್ನು ವಿವರಿಸುವಾಗ ಭರತಶಾಸ್ತ್ರ ಕ್ರಮದಂತೆ ಭಾವ, ವಿಭಾವ, ಅನುಭಾವ ಸಂಚಾರಿ ಭಾವಗಳನ್ನೂ ಅವುಗಳ ಬಣ್ಣಗಳನ್ನೂ ವೃತ್ತಿಗಳನ್ನೂ ಅವುಗಳಿಗೆ ಹೊಂದುವ ರಸಗಳನ್ನೂ ಹೇಳಿದ್ದಾನೆ. ವೃತ್ತಿಗಳು ನಾಟಕಕ್ಕೆ ಸಂಬಂಧಪಟ್ಟವು; ನಟನ ಅಭಿನಯ, ಅಂಗವಿನ್ಯಾಸಗಳನ್ನು ತಿಳಿಸತಕ್ಕವು. ಕನ್ನಡದಲ್ಲಿ ರಸೋತ್ಪತ್ತಿಯ ಕ್ರಮವನ್ನು ವಿವರಿಸಿರುವವರಲ್ಲಿಯೂ ರಸವು ಕಾವ್ಯ ನಾಟಕಗಳ ಮುಖ್ಯ ಲಕ್ಷಣ ವೆಂದು ಹೇಳಿರುವವರಲ್ಲಿಯೂ ನಾಗವರ್ಮನೇ ಮೊದಲನೆಯವನು.

ನೃಪತುಂಗನು ಧ್ವನಿಯನ್ನು ಅಲಂಕಾರದಲ್ಲಿಯಾದರೂ ಸೇರಿಸಿದ್ದರೆ ನಾಗ ವರ್ಮನು ಧ್ವನಿಯ ಹೆಸರನ್ನೇ ಎತ್ತಿಲ್ಲ.

ನೃಪತುಂಗನ ಕಾವ್ಯ ತತ್ತ್ವಕ್ಕೂ ನಾಗವರ್ಮನ ಕಾವ್ಯ ತತ್ತ್ವಕ್ಕೂ ಹೆಚ್ಚು ವ್ಯತ್ಯಾಸ ಕಾಣಬರುವುದಿಲ್ಲ. ಇಬ್ಬರೂ ರೀತಿಗೇ ಹೆಚ್ಚು ಪ್ರಾಶಸ್ತ್ಯವನ್ನು ಕೊಟ್ಟಿದ್ದರೂ ನಾಗವರ್ಮನು ರಸವನ್ನು ನಿರಾಕರಿಸಿಲ್ಲ. ಇಬ್ಬರೂ ಸಂಸ್ಕೃತ ಆಲಂಕಾರಿ ಕರನ್ನೇ ಅನುಸರಿಸಿದವರು. ನೃಪತುಂಗನು ಬಹುಮಟ್ಟಿಗೆ ದಂಡಿಯ ಮಾರ್ಗವನ್ನು ಅನುಸರಿಸಿದ್ದರೆ ನಾಗವರ್ಮನು ದಂಡಿಯ ಜೊತೆಗೆ ವಾಮನ, ರುದ್ರಟ ಮತ್ತು ಭಾಮಹರನ್ನು ಅನುಸರಿಸಿದ್ದಾನೆ.

ಕನ್ನಡ ಅಲಂಕಾರ ಶಾಸ್ತ್ರಗಳಲ್ಲಿ 'ಕಾವ್ಯಾವಲೋಕನ'ವು ಬಹು ಮುಖ್ಯ ವಾದುದು. ಕಾವ್ಯ ತತ್ತ್ವದ ಸಂಪೂರ್ಣ ವಿವರಣೆಯು ಇಲ್ಲಿ ದೊರೆಯುವುದು. ಮುಂದಿನ ಆಲಂಕಾರಿಕರಿಗೆ ಇದು ಮಾರ್ಗದರ್ಶಿಯಾಯಿತು. ನಾಗವರ್ಮನ ಸಂಗ್ರಹವಾದ ಶಬ್ದಸ್ಮೃತಿಯ ಆಧಾರದ ಮೇಲೆ ಕೇಶಿರಾಜನು 'ಶಬ್ದಮಣಿದರ್ಪಣ' ವೆಂಬ ದೀರ್ಘವಾದ ವ್ಯಾಕರಣವನ್ನು ರಚಿಸಿದನು. ಅಲ್ಲಿಂದೀಚೆಗೆ ಅಲಂಕಾರ ಶಾಸ್ತ್ರಗಳಲ್ಲಿ ವ್ಯಾಕರಣಭಾಗಕ್ಕೆ ಎಡೆಯಿಲ್ಲವಾಯಿತು.

ಕವಿಸಾಳ್ವನು ಅಲಂಕಾರಶಾಸ್ತ್ರ ವಿಷಯವಾಗಿ 'ರಸರತ್ನಾಕರ'ವನ್ನು ಬರೆದಿದ್ದಾನೆ; 'ಶಾರದಾವಿಲಾಸ'ವೆಂಬ ಮತ್ತೊಂದು ಅಸಮಗ್ರ ಗ್ರಂಥವೂ ಈ ಕವಿ ಕೃತವೇ ಎಂದು ಹೇಳಲ್ಪಟ್ಟಿದೆ. 'ರಸರತ್ನಾಕರ'ದಿಂದ ಕಾವ್ಯದಲ್ಲಿ ರಸವೇ ಪ್ರಧಾನವೆಂದು ನಿರ್ವಿವಾದವಾಗಿ ತೋರಿಬರುವುದು. ಗ್ರಂಥಾರಂಭ ದಲ್ಲಿಯೇ ಕವಿಯು ಇದನ್ನು ಸ್ಪಷ್ಟಪಡಿಸಿದ್ದಾನೆ.

"ರಸಮಿಲ್ಲದ ಕಾವ್ಯಂ ನೀ
ರಸಮುದಱಿಂ ಕೃತಿಗೆ ರಸಮೆ ಸಾರಂ ನೆಗಱ್ದೀ
ರಸರತ್ನಾಕರದೊಳ್ ನೆಱೆ
ರಸಭಾವಮುನಱಿದ ಕವಿಯ ಕಬ್ಬಮೆ ಸಾರಂ".

ಈ ಗ್ರಂಥದಲ್ಲಿ ರಸೋತ್ಪತ್ತಿ ಕ್ರಮವೂ, ನವರಸಗಳೂ, ಅವುಗಳಿಗೆ ಸಂಬಂಧಿಸಿದ ವಿಭಾವ, ಅನುಭಾವ, ಸಂಚಾರಿಭಾವಗಳೂ ದೀರ್ಘವಾಗಿಯೂ ವಿಶದವಾಗಿಯೂ ಉಕ್ತವಾಗಿವೆ. "ಎಲ್ಲಾ ರಸದೊಳಂ ಶೃಂಗಾರರಸಮೆ ಲೋಕಕ್ಕೆ ಸೊಗಯಿಪ್ಪುದಾದ ಕಾರಣದೆ ಮೊದಲೊಳೀ ಶೃಂಗಾರರಸಂ ಪೇೞೆ ಪಟ್ಟುದು" ಎಂದು ಹೇಳಿ ಇತರ ಎಲ್ಲ ರಸಗಳಿಗಿಂತಲೂ ದೀರ್ಘವಾಗಿ ಶೃಂಗಾರರಸದ ವಿವರಣೆಯನ್ನು ಮಾಡಿರುವನು. ಅಲ್ಲದೆ ನಾಟಕಕ್ಕೆ ಅನ್ವಯಿಸುವ ನಾಯಕ ನಾಯಕೀ ಲಕ್ಷಣಗಳನ್ನೂ ವಿಸ್ತಾರವಾಗಿ ವಿವರಿಸಿದ್ದಾನೆ.

ಕಾವ್ಯತತ್ತ್ವ ವಿವರಣೆಯಲ್ಲಿ ಮುನ್ನಡೆದು ಹೊಸದೂ ಮುಖ್ಯವೂ ಆದ ಮತವೊಂದನ್ನು ಸ್ಥಾಪಿಸತಕ್ಕದ್ದಾಗಿರುವುದು 'ಶಾರದಾವಿಲಾಸ'. ಆದರೆ ಇದು ಒಂದೇ ಪ್ರಕರಣವುಳ್ಳ ಅಸಮಗ್ರ ಗ್ರಂಥ. ಸಿಕ್ಕಿರುವ ಒಂದು ಪ್ರಕರಣದಿಂದ ಕಾವ್ಯದ ಮುಖ್ಯ ಲಕ್ಷಣವು ಧ್ವನಿಯೆಂದು ತಿಳಿದುಬರುವುದು. ಪ್ರತಿ ಶಬ್ದಕ್ಕೂ ಒಂದು ಶಕ್ತಿಯಿರುವುದು. ಶಬ್ದವನ್ನು ಉಚ್ಚರಿಸಿದ ಕೂಡಲೆ ಅದರಿಂದ ಒಂದು ಮುಖ್ಯವಾದ ಮತ್ತು ಸಾಮಾನ್ಯವಾದ ಅರ್ಥ ವಿವಕ್ಷೆಯಾಗುವುದು. ಇದಕ್ಕೆ ವಾಚ್ಯಾರ್ಥ ಅಥವಾ ಅಭಿಧಾರ್ಥವೆಂದು ಹೆಸರು. ಊರು, ನದಿ, ಹೂ, ಹಣ್ಣು–ಈ ಶಬ್ದಗಳನ್ನು ಕೇಳಿದಾಗ ಕೇಳುವವನ ಮನಸ್ಸಿನಲ್ಲಿ ಒಂದು ಅರ್ಥ ಹೊಳೆಯುವುದು. ಆದರೆ ಕೆಲವು ವೇಳೆಗಳಲ್ಲಿ ಶಬ್ದದ ಅರ್ಥಗ್ರಹಣಕ್ಕೆ ಈ ಅಭಿಧಾರ್ಥವೊಂದೇ ಸಾಲುವುದಿಲ್ಲ. ಅಂಥ ಸಂದರ್ಭಗಳಲ್ಲಿ ಅಭಿಧಾರ್ಥಕ್ಕೆ ಸಂಬಂಧಿಸಿದಂತೆ ರೂಢಿಯಮೂಲಕವಾಗಲಿ ಒಂದು ಉದ್ದೇಶದಿಂದಾಗಲಿ ಮತ್ತೊಂದು ಅರ್ಥ ಬರುವುದು. ಇದು ಲಕ್ಷಣಾರ್ಥವೆನಿಸಿಕೊಳ್ಳುವುದು. "ಊರೇ ಆನಂದಿಸಿತು" ಎನ್ನುವಾಗ "ಊರು" ಶಬ್ದಕ್ಕೆ ಅಭಿಧಾರ್ಥದಿಂದ ಭಿನ್ನವಾದ ಊರಿನ ಜನರು ಎಂಬ ಲಕ್ಷಣಾರ್ಥವನ್ನು ಕಲ್ಪಿಸಬೇಕಾಗುವುದು. ಈ ಅಭಿಧಾರ್ಥ ಮತ್ತು ಲಕ್ಷಣಾರ್ಥಗಳಿಂದ ಹುಟ್ಟಿ ಆದರೆ ಅವುಗಳಿಗಿಂತ ಭಿನ್ನವಾದ ಮತ್ತೊಂದು ಅರ್ಥ ಶಕ್ತಿಯೂ ಶಬ್ದಗಳಿಗಿರುವುದು. ಇದು ವ್ಯಂಗ್ಯಾರ್ಥವೆನಿಸಿಕೊಳ್ಳುವುದು. ಈ ವ್ಯಂಗ್ಯಾರ್ಥಸೂಚಕ ಶಬ್ದವೂ ಅದರಿಂದ ಸೂಚಿತವಾಗುವ ಅರ್ಥವೂ ಧ್ವನಿ ಎನಿಸಿಕೊಳ್ಳುವುದು. ಶಬ್ದದಲ್ಲಿಯೇ ಇರುವ ವಾಚ್ಯ ಮತ್ತು ಲಕ್ಷ್ಯಾರ್ಥಗಳ ಜೊತೆಗೆ–ಅವುಗಳಿಂದ ಭಿನ್ನವಾಗಿ— ಮಾತನಾಡುವವನ ಉಚ್ಚಾರಣಾರೀತಿಯಿಂದಲೂ, ಎಂದರೆ ಶಬ್ದವನ್ನು ಮೆಲ್ಲಗೋ ಗಟ್ಟಿಯಾಗಿಯೋ, ರಭಸದಿಂದಲೋ ಸಾವಕಾಶವಾಗಿಯೋ, ತೇಲಿಸಿಯೋ ಒತ್ತಿಯೋ ಉಚ್ಚರಿಸುವುದರಿಂದಲೂ ಸಂದರ್ಭ ಸನ್ನಿವೇಶಗಳಿಂದಲೂ ಶಬ್ದಕ್ಕೆ ಹೊಸ ಅರ್ಥ ಬರುವುದು. ಇದಕ್ಕೂ ಧ್ವನಿಯೆಂದು ಹೆಸರು.

ಸಾಳ್ವನು ಹೇಳುವಂತೆ "ವಾಚ್ಯದತ್ತಣಿಂದಧಿಕಮಪ್ಪ ವ್ಯಙ್ಗ್ಯಮನುಳ್ಳುದುತ್ತಮ ಕಾವ್ಯಂ. ಆ ಕಾವ್ಯಮುಂ 'ಧ್ವನಿ'ಯೆಂದು ಪೂರ್ವಾಚಾರ್ಯರಿಂ

ಹೇಳಿಸಿಪಟ್ಟುದು. ವಾಚ್ಯಾರ್ಥದತ್ತಣಿಂದತಿಶಯಮಾಗಿ ತೋರುತ್ತಿರ್ದ ವ್ಯಙ್ಗ್ಯಮನುಳ್ಳುದು ಮಧ್ಯಮ ಕಾವ್ಯಂ". ಇದಕ್ಕೆ "ಗುಣೀಭೂತ ವ್ಯಂಗ್ಯ ಕಾವ್ಯ" ಎಂದೂ ಹೇಳುವುದುಂಟು. "ಶಬ್ದಾರ್ಥೋಭಯ ಚಿತ್ರವಾಗಿ ವ್ಯಂಗ್ಯರಹಿತಮಪ್ಪುದಧಮ ಕಾವ್ಯಂ". ಇದಕ್ಕೆ "ಚಿತ್ರ" ಕಾವ್ಯವೆಂದೂ ಹೇಳುವುದುಂಟು.

ಶಬ್ದದಿಂದ ಭಾಸವಾಗುವ ವ್ಯಂಗ್ಯದಲ್ಲಿ ಅನೇಕಾರ್ಥಗಳುಳ್ಳ ಶಬ್ದಕ್ಕೆ ಸಂದೇಹಾರ್ಥತೋರುವಾಗ ಸಂಯೋಗ, ವಿಪ್ರಯೋಗ, ಸಾಹಚರ್ಯ, ವಿರೋಧ, ಅರ್ಥ, ಪ್ರಕರಣ, ಲಿಂಗ, ಅನ್ಯಶಬ್ದ ಸನ್ನಿಧಿ, ಸಾಮರ್ಥ್ಯ, ಔಚಿತ್ಯ, ದೇಶ, ಕಾಲ, ವ್ಯಕ್ತಿ, ಸ್ವರ— ಇವು ಮೊದಲಾದುವುಗಳಿಂದ ನಿಶ್ಚಯವಾದ ಅರ್ಥವು ತೋರುವುದು. ಉದಾಹರಣೆಗಾಗಿ: "ದೇವರಜ್ಞೆಯದ ವಿಷಯಮಿಲ್ಲ" ಎಂಬಲ್ಲಿ ಪ್ರಕರಣದಿಂದ ದೇವ ಶಬ್ದಕ್ಕೆ ನೀನೆಂಬುದರ್ಥ; "ಮಧುವಿಂ ಸೊರ್ಕಿತು ಕೋಕಿಳಂ" ಎಂಬಲ್ಲಿ ಮಧುಶಬ್ದಕ್ಕೆ ಪುಷ್ಪರಸ ಮೊದಲಾದ ಅನೇಕಾರ್ಥವಿದ್ದರೂ ಸಾಮರ್ಥ್ಯದಿಂದ ವಸಂತಕಾಲವೆಂದರ್ಥ; ಭೋಜನದಲ್ಲಿ "ಸೈಂಧವಮಂ ಕೊಂಡು ಬಾ" ಎಂಬಲ್ಲಿ ಔಚಿತ್ಯದಿಂದ ಸೈಂಧವಶಬ್ದಕ್ಕೆ ಲವಣವೆಂದರಿವುದು; "ನಾರಿಗಳಂ ಕಡಿದಂ" ಎಂಬಲ್ಲಿ ನಪುಂಸಕ ವ್ಯಕ್ತಿಯಿಂದ ಬಿಲ್ಲ ಹೆದೆಗಳನ್ನು ಕಡಿದನೆಂದರ್ಥ.

ರೀತಿ ಮತ್ತು ಅಲಂಕಾರ ಮತಗಳಲ್ಲಿ ಸಾಮಾನ್ಯ ಶಬ್ದದಿಂದಲೇ ವ್ಯಂಗ್ಯಾರ್ಥ ಸೂಚನೆಯಾಗುತ್ತಿತ್ತು. ಸಮಾಸೋಕ್ತಿ ಅಲಂಕಾರದಲ್ಲಿ ವ್ಯಂಗ್ಯವಸ್ತುವೂ ದೀಪಕದಲ್ಲಿ ವ್ಯಂಗ್ಯಅಲಂಕಾರವೂ ರಸವದಲಂಕಾರದಲ್ಲಿ ವ್ಯಂಗ್ಯರಸವೂ ಸೂಚಿತವಾಗುತ್ತಿತ್ತು. ಧ್ವನಿಮತದವರು ಈ ಬಗೆಯ ಕಾವ್ಯವನ್ನು ನಿಷಿದ್ಧವೆಂದು ಭಾವಿಸಲಿಲ್ಲ. ರೀತಿ ಮತ್ತು ಅಲಂಕಾರ ಮತಗಳಲ್ಲಿ ಧ್ವನಿಯು ಮೂರು ತೆರದ್ದಾಗುವುದು: ವಸ್ತುಧ್ವನಿ, ಅಲಂಕಾರಧ್ವನಿ ಮತ್ತು ರಸಧ್ವನಿ. ಒಂದು ವಸ್ತುವನ್ನಾಗಲಿ ಭಾವವನ್ನಾಗಲಿ ಸೂಚಿಸುವುದು ವಸ್ತುಧ್ವನಿ; ಕಲ್ಪಿತ ಅಭಿಪ್ರಾಯವು ಶಬ್ದಗಳ ಮೂಲಕ ಅಲಂಕಾರರೂಪದಲ್ಲಿ ಚಿತ್ರಿತವಾಗಿದ್ದಲ್ಲಿ ಅಲಂಕಾರಧ್ವನಿಯೆನಿಸುವುದು; ಒಂದು ಭಾವವು ವಾಚ್ಯವಾಗಿ ತೋರಿಬರದೆ ವ್ಯಂಗ್ಯವಾಗಿ ಸೂಚಿತವಾಗುತ್ತಿದ್ದರೆ ರಸಧ್ವನಿಯೆನಿಸುವುದು. ಈ ಮೂರು ರೀತಿಗಳಲ್ಲಿ ಧ್ವನಿಮತೀಯರು ರಸಧ್ವನಿಗೆ ಪ್ರಾಶಸ್ತ್ಯಕೊಡುತ್ತಿದ್ದರೆನ್ನಬಹುದು. ಈ ದೃಷ್ಟಿಯಿಂದ ಧ್ವನಿಮತವು ರಸಮತದ ವ್ಯಾಪ್ತಿಯೆಂದು ಹೇಳಬಹುದು. ಕಾವ್ಯದಲ್ಲಿ ಕಾಣಬರುವ ಧ್ವನಿಯಲ್ಲಿ ರಸವು ಒಂದು ಅಂಶಮಾತ್ರ ಎಂದು ಧ್ವನಿ ಮತದವರು ಅಂಗೀಕರಿಸಿದ್ದರು. ಕಾವ್ಯ ಗುಣಗಳು, ದೋಷಗಳು, ಅಲಂಕಾರಗಳು— ಇವೆಲ್ಲ ಧ್ವನಿಮತದವರಿಗೆ ಅವಶ್ಯವಾಗಿ ಕಾಣಲಿಲ್ಲ. ಏಕೆಂದರೆ ಅವು ಕಾವ್ಯ ಜೀವವಾದ ಧ್ವನಿಗೆ ನಿಯತವಲ್ಲ, ಆದರೂ ನಿರಾಕರಣೀಯವಲ್ಲ; ವ್ಯಂಗ್ಯಾರ್ಥ ಸೂಚನೆಗೆ ಅವು ಸಾಧನ.

ವ್ಯಂಗ್ಯಾರ್ಥವು ವಾಚ್ಯಾರ್ಥದೊಂದಿಗೆ ಹೆಣೆದುಕೊಂಡೇ ಇರುವುದು. ಈ ವ್ಯಂಗ್ಯಾರ್ಥವು ಎಲ್ಲರಿಗೂ ಸುಲಭವಾಗಿ ಹೊಳೆಯತಕ್ಕದ್ದಲ್ಲ. ಅದು ಕಾವ್ಯಾಭ್ಯಾಸಿಗಳಿಗೂ ಕಾವ್ಯಸ್ವಾರಸ್ಯವನ್ನು ಗ್ರಹಿಸಬಲ್ಲ ಸಹೃದಯರಿಗೂ ಮಾತ್ರ ಹೊಳೆಯತಕ್ಕದ್ದು. ಈ ಧ್ವನಿಮತವು ರೀತಿ, ರಸ, ಮತಗಳಿಗಿಂತ ಹೆಚ್ಚು ಆದರಣೀಯವಾಯಿತು. ಇದು ಕಾವ್ಯತತ್ತ್ವದಲ್ಲಿ ನವೀನ ಮತ.

ಈಚಿನ ಅಲಂಕಾರಗ್ರಂಥಗಳಲ್ಲಿ ತಿರುಮಲಾರ್ಯನ 'ಅಪ್ರತಿಮವೀರ ಚರಿತೆ'ಯು ಮುಖ್ಯವಾದುದು. ಇದರಲ್ಲಿ ಕಾವ್ಯಲಕ್ಷಣಗಳೂ ಕಾವ್ಯಭೇದಗಳೂ ಅಲಂಕಾರಗಳೂ ವಿಸ್ತೃತವಾಗಿವೆ. ಧ್ವನಿಪ್ರಧಾನವಾದ ಕಾವ್ಯವೇ ಉತ್ತಮ ಕಾವ್ಯವೆಂಬುದು ಈ ಆಲಂಕಾರಿಕನ ಮತ. ಆದರೆ ಕಾವ್ಯಗುಣಗಳು ಎಲ್ಲ ಕಾವ್ಯಗಳಿಗೂ ಸಾಮಾನ್ಯ ಲಕ್ಷಣ. ಕಾವ್ಯಗುಣಗಳು ಶಬ್ದಮೂಲವಾದುವು ಹತ್ತು, ಅರ್ಥಮೂಲವಾದುವು ಹತ್ತು. "ಇಂತಪ್ಪ ಶಬ್ದಾರ್ಥ ಗುಣಂಗಳುಳ್ಳ ಪದರಚನೆ ರೀತಿಯೆನಿಪುದು. ಇದು ಪಾಂಚಾಲಿಯೆಂದುಂ ವೈದರ್ಭಿಯೆಂದುಂ ಗೌಡಿಯೆಂದುಂ ಮೂರು ತೆರಂ."

ಇದರಲ್ಲಿ ಹೊಸ ಕಾವ್ಯತತ್ತ್ವ ನಿರೂಪಣೆಯು ಕಾಣಬರುವುದಿಲ್ಲ. ಹಿಂದಿನ ಆಲಂಕಾರಿಕರ ಸೂತ್ರಗಳೇ ಕಾಣಬರುವುವು. ಆದರೆ ಅಲಂಕಾರಗಳ ಸಂಖ್ಯೆಯು ಮಾತ್ರ ಬಹುಮಟ್ಟಿಗೆ ಬೆಳೆದಿದೆ. ನಾಗವರ್ಮನು ಅರ್ಥಾಲಂಕಾರಗಳನ್ನು ೫೬ಕ್ಕೆ ನಿಲ್ಲಿಸಿದ್ದರೆ, 'ಅಪ್ರತಿಮವೀರಚರಿತೆ'ಯಲ್ಲಿ ೧೧೭ ಅಲಂಕಾರಗಳನ್ನು ನೋಡುತ್ತೇವೆ. ಕೆಲವದರಲ್ಲಿ ಒಳಭೇದಗಳೂ ಉಂಟು. ನಾಗವರ್ಮನು ಉಪಮಾ ಇತ್ಯಾದಿಗಳಲ್ಲಿ ಸೇರಿಸಿರುವ ಭೇದಗಳೆಲ್ಲ ಇಲ್ಲಿ ಪ್ರತ್ಯೇಕವಾದ ಅಲಂಕಾರಗಳಾಗಿವೆ.

ಈ ಗ್ರಂಥದಲ್ಲಿ ಹೊಸವಿಚಾರವು ಪ್ರತಿಪಾದಿತವಾಗದಿದ್ದರೂ ಅಲಂಕಾರ ಶಾಸ್ತ್ರಕ್ಕೆ ಸಂಬಂಧಿಸಿದ ಎಲ್ಲ ವಿಚಾರಗಳನ್ನೂ ಒಳಗೊಂಡು ಇದು ಒಂದು ಕೈಪಿಡಿ ಯಂತಿದೆ.

ಅಲಂಕಾರಶಾಸ್ತ್ರವು ಕನ್ನಡದಲ್ಲಿ ಸ್ವತಂತ್ರವಾಗಿ ಬೆಳೆದದ್ದಲ್ಲ. ಹುಟ್ಟಿರುವ ಎಲ್ಲ ಗ್ರಂಥಗಳೂ ಸಂಸ್ಕೃತ ಅಲಂಕಾರಶಾಸ್ತ್ರಗಳ ಅನುವಾದ ಅಥವಾ ಭಾಷಾಂತರ ಗಳಾಗಿರುವುವು. ಅಲ್ಲದೆ ಸಂಸ್ಕೃತ ಅಲಂಕಾರಗ್ರಂಥಗಳಲ್ಲಿ ಕಾಣಬರುವ ಮತ ವೈವಿಧ್ಯತೆಯಾಗಲಿ ವಿಚಾರಪೂರ್ಣತೆಯಾಗಲಿ ಕನ್ನಡದಲ್ಲಿ ಕಾಣಬರುವುದಿಲ್ಲ. ಸಂಸ್ಕೃತ ಕವಿಗಳು ವಿವರಿಸಿದ ಕಾವ್ಯಮೀಮಾಂಸೆಯು ಕನ್ನಡ ಕವಿಗಳಿಗೆ ಒಪ್ಪಿಗೆ ಯಾಗಿದ್ದಿರಬೇಕು. ಕನ್ನಡದಲ್ಲಿ ಕಾವ್ಯರಚನೆ ಮಾಡಿದ ಉತ್ತಮ ಕವಿಗಳೆಲ್ಲ ಸಂಸ್ಕೃತದಲ್ಲಿಯೂ ಪಾಂಡಿತ್ಯ ಪಡೆದಿದ್ದವರು. ಆದುದರಿಂದ ಅವರು ತಮ್ಮ ಕಾವ್ಯರಚನೆಯಲ್ಲಿ ಸಂಸ್ಕೃತದ ಹೆದ್ದಾರಿಯನ್ನೇ ಅನುಸರಿಸಿದರು. ಕಾವ್ಯವಸ್ತು ವಿಗಲ್ಲದಿದ್ದರೂ ಕಾವ್ಯರೀತಿಮಾರ್ಗಗಳಿಗಾದರೂ ಸಂಸ್ಕೃತಸಾಹಿತ್ಯವನ್ನು ಕನ್ನಡ ಕವಿಗಳು ಆಶ್ರಯಿಸಿದರು. ಸಂಸ್ಕೃತದಲ್ಲಿಯೂ ಅಲಂಕಾರಶಾಸ್ತ್ರದ ಬೆಳವಣಿಗೆಯು ಸುಮಾರು ಹತ್ತನೆಯ ಶತಮಾನದವೇಳೆಗೇ ನಿಂತುಹೋಗಿ ಆಮೇಲೆ ಹುಟ್ಟಿದ ಗ್ರಂಥಗಳೆಲ್ಲ ಹಿಂದಿನ ಗ್ರಂಥಗಳ ವ್ಯಾಖ್ಯಾನವಾಗಲಿ ವಿವರಣೆಯಾಗಲಿ ಆಗಿ ಪರಿಣಮಿಸಿತು. ಆದುದರಿಂದ ಕನ್ನಡದಲ್ಲಿಯೂ ಹೊಸ ವಿಚಾರದಿಂದ ಕೂಡಿದ ಅಲಂಕಾರ ಗ್ರಂಥಗಳು ಹುಟ್ಟಲಿಲ್ಲ.

ಹಿಂದೆ ಸಂಸ್ಕೃತಸಾಹಿತ್ಯದಿಂದ ಕನ್ನಡಕ್ಕೆ ರೀತಿಮಾರ್ಗಗಳಲ್ಲಿ ಪ್ರೇರಣೆ ಬಂದಿದ್ದರೆ ಈಚೆಗೆ ಪಾಶ್ಚಾತ್ಯ ಸಾಹಿತ್ಯಗಳಿಂದ ವಸ್ತುವಿನಲ್ಲಿ ಮಾತ್ರವಲ್ಲದೆ ರೀತಿ ಯಲ್ಲಿಯೂ ಪ್ರೇರಣೆಯೊದಗುತ್ತಿದೆ. ಇದರ ಪರಿಣಾಮವಾಗಿ ಕಾವ್ಯಪರಿಶೀಲನೆ ಯಲ್ಲಿ ಸಾಂಪ್ರದಾಯಿಕವಾದ ಏಕದೇಶೀಯ ದೃಷ್ಟಿಗೆ ಬದಲು ಸಮಷ್ಟಿ ದೃಷ್ಟಿಯು

ಬೆಳೆಯುತ್ತಿದೆ. ಒಂದು ಪದ್ಯದಲ್ಲಿನ ಪದರಚನೆ, ಅಲಂಕಾರ, ರಸ ಈ ಯಾವೊಂದರ ಪರಿಶೀಲನೆಗಿಂತ ಒಟ್ಟು ಕಾವ್ಯವನ್ನು ಕವಿಯು ಹೇಗೆ ಜೋಡಿಸಿದ್ದಾನೆ, ಅದರಲ್ಲಿನ ಸನ್ನಿವೇಶಗಳನ್ನು ಹೇಗೆ ರಚಿಸಿದ್ದಾನೆ, ಪಾತ್ರಪೋಷಣೆ ಹೇಗೆ ಮಾಡಿದ್ದಾನೆ, ವರ್ಣನೆಯ ಉದ್ದೇಶವೇನು, ಕವಿಯು ತನ್ನ ಆಶಯವನ್ನು ಎಷ್ಟರಮಟ್ಟಿಗೆ ನೆರವೇರಿಸಿದ್ದಾನೆ— ಇತ್ಯಾದಿ ವಿಚಾರಗಳು ಒಂದು ಕಾವ್ಯ ವ್ಯಾಸಂಗದಲ್ಲಿ ಹೆಚ್ಚು ಪರಿಶೀಲನೆಗೆ ಬರುತ್ತಿವೆ. ಇವುಗಳ ರೀತಿಯನ್ನು ನಾವು ಪಾಶ್ಚಾತ್ಯ ಸಾಹಿತ್ಯ ಪದ್ಧತಿಗಳಿಂದ ತಿಳಿಯುತ್ತೇವೆ. ಹೀಗೆ ಕಾವ್ಯತತ್ತ್ವದಲ್ಲಿ ಹೊಸ ಬೆಳಕು ಈಗ ಪಾಶ್ಚಾತ್ಯ ಸಾಹಿತ್ಯಗಳಿಂದ ಬರುತ್ತಿದೆ. ಇದರಿಂದ ಮುಂದೆ ಕನ್ನಡದಲ್ಲಿ ಕಾವ್ಯ ತತ್ತ್ವವೂ ಹೊಸ ದಾರಿಗೆ ತಿರುಗಬಹುದು.

ಡಿ. ವಿ. ಶೇಷಗಿರಿರಾವ್

# ಸಾಹಿತ್ಯವಿಹಾರ

ಮನುಷ್ಯನ ಸುಖಸಾಧನಗಳಲ್ಲೆಲ್ಲ ಸಾಹಿತ್ಯವಿಹಾರವು ಅಧಿಕವು. ಆನಂದವೇ ಪರಮಧ್ಯೇಯವಾಗಿರುವ ನವರಸೋತ್ಪಾದನೆಗೆ ಕಾವ್ಯಗಳು ಸಾಹಿತ್ಯವಾದುದರಿಂದ ಅವುಗಳ ಸಮುದಾಯವು ಆಯಾ ಭಾಷೆಯ ಸಾಹಿತ್ಯವಾಯಿತು. ಸಾಹಿತ್ಯ ವಿಸ್ತಾರವು ಆಯಾ ಭಾಷೆಯ ಯೋಗ್ಯತೆಯನ್ನು ಸಾರುವುದು. ಋಷಿಸಮಾನರಾದ ಕವಿಗಳು ಪರಮೋಪಕಾರಬುದ್ಧಿಯಿಂದ ರಚಿಸಿದ ಸಾಹಿತ್ಯೋದ್ಯಾನದಲ್ಲಿ ವಿಹರಿಸಿ ಸುಖಿಸುವ ಮನೋಧರ್ಮವನ್ನೂ ಸಾಹಿತ್ಯಾಭಿಮಾನವನ್ನೂ ತಕ್ಕ ವಿದ್ಯಾವ್ಯಾಸಂಗ ದಿಂದ ಪಡೆದವರು ಧನ್ಯರು — ಸಾಹಿತ್ಯವಿಹಾರಸುಖವು ಅವರ ಕೈವಶವಾಗಿದೆ.

ಈ ಸಾಹಿತ್ಯವಿಹಾರಸುಖವು ಸರ್ವಸುಲಭವಾದುದು. ಅಭಿನವ ಪಂಪನು, "ರಸಮಂ ನಾಲಗೆ, ಕವಿತಾ ರಸಮಂ ಕವಿ, ಕುಸುಮರಸಮನಳಿಮಾಲೆ, ಸುಧಾರಸಮಂ ಸುರರ್, ಅಕ್ಷಯಸುಖರಸಮಂ ಪರಮಾತ್ಮನರಿವಂ — ಉಳಿದವ ರರಿಯರ್" ಎಂದು ಎಚ್ಚರಿಸಿದರೂ, ಆತನ ಅನಂತರ ಬಂದ ಕವಿರಾಜಕುಂಜರನು, 'ಹೂಗಳ ಕಂಪನ್ನು ಹಿಡಿಯಲಾರೆವಾದರೂ ಅದನ್ನು ವಾಸಿಸಬಲ್ಲೆವು; ತಂಗಾಳಿ ಯನ್ನು ಹಿಡಿದು ನಿಲ್ಲಿಸಲಾರೆವಾದರೂ ಅದರ ಸ್ಪರ್ಶಸುಖವನ್ನು ಪಡಬಲ್ಲೆವು; ಬೆಳುದಿಂಗಳನ್ನು ಬೊಗಸೆಯಲ್ಲಿ ಹಿಡಿದು ಕುಡಿಯಲಾರೆವಾದರೂ ಅದರಲ್ಲಿ ವಿಹರಿಸಿ ಆನಂದಿಸಬಲ್ಲೆವು; ಅಂತಿಂತೆಂದು ಬಣ್ಣಿಸಲಾರೆವಾದರೂ ಕಾವ್ಯಾಮೃತಾಸ್ವಾದನ ವನ್ನು ಅನುಭವಿಸಬಲ್ಲೆವು' ಎಂದು ಭರವಸವಿತ್ತುದಲ್ಲದೆ, 'ಅಗ್ಗದ ಇಂಪು ಅಮರ್ದಿಂಗೆ ಒಚ್ಚತಮುಲ್ತು, ಮತ್ತಿವರ(ಮಹಾಕವಿಗಳ) ವಾಕ್ಶ್ರೀಯೊಳಪ್ಪುದರಕ್ಕ ಮುಂಟು; ಅಮರರ್ಗೆ ಅರ್ಪಿತಮುಲ್ತು ಸೌಖ್ಯಂ, ಇವರೀ ಸಂಸೇವ್ಯ ಕಾವ್ಯಂಗಳಂ ಸಮಸಂದು ಆಲಿಸುವರ್ಗಮುಂಟು' ಎಂದು ಘಂಟಾಘೋಷವಾಗಿ ಸಾರಿರುವನು.

ಸಾಹಿತ್ಯೋದ್ಯಾನದಲ್ಲಿ ವಿಹರಿಸುವವರ ರುಚಿ ಒಂದೇ ತೆರನಾಗಿಲ್ಲ. 'ಅಳಿ ಅಲರಂ, ಗಿಳಿ ಪಣ್ಣಂ, ತಳಿರಂ ಪಿಕಂ ಒಲ್ಪ ತೆರದೆ. . . . ವಿಲಸಿತಪದಮುಂ ಅರ್ಥಮುಂ ಅಲಂಕೃತಿ ಪ್ರಹಿತಭಾವಮುಂ ಕೆಲರು ಒಲ್ವರ್. . . . . . . .' ಹೂವಿನ ಬಂಡನುಂಡು ಸುಖಿಸುವ ತುಂಬಿ ಚಿಗುರನಗಿವ ಕೋಗಿಲೆಯನ್ನು ಹೆಡ್ಡೆಂದು ನಗಬಹುದು. ಫಲವನ್ನುಂಡು ಆನಂದಿಸುವ ಗಿಳಿಯು ಇವೆರಡೂ ತಿಳಿಗೇಡಿಗಳೆಂದು ನುಡಿಯ ಬಹುದು. ಇವೆರಡರ ನುಡಿಗಳಿಗೆ ಕಿವಿಗೊಡದೆ, 'ಕೊನರುಗಳನು ಅರೆಗಚ್ಚಿ ಕಂಗಳ ಕೊನೆಗೆ ನಸುಗೆಂಪೇರೆ, ತೀವಿದ ಸೊಸೆ ವದನದಿಂದಿಳಿದು ತೊಟ್ಟಿಡೆ ಕೋಡು ಗರಿಗಳಲಿ ತನಿ ಸೊಗಸಿ ಪಂಚಮ ಸ್ವರದಿಂದ' ಪಿಕವು ಹಾಡುತ್ತಿರಬಹುದು. ಮೃದು ಮಧುರವಚನ ರಚನೆಗೆ ಕೆಲರ ಮನಸ್ಸು ಒಲಿದರೆ ಉದಾತ್ತ ಭಾವನೆಗೆ ಕೆಲರ ಎದೆ ಸೋಲುವುದು; ಮಾತಿನ ಚಮತ್ಕೃತಿಗೆ ಕೆಲರ ತಲೆ ತೂಗುವುದು. ತುಂಬಿ ಗಿಳಿ ಕೋಗಿಲೆಗಳಂತೆ ಏಕಗ್ರಾಹಿಗಳಾಗಿರದೆ ಗುಣಗ್ರಾಹಿಗಳು, 'ಕಳಕಂಠ ಸ್ವನಮುಂ ಪಳಂಚಲೆವ ಶಬ್ದಂ ಬಂದ ಮಾಕಂದದೊಳ್ಮೆಳೆಯುಂ ಪಾಳಿಸುವರ್ಥಂ ಅಗ್ಗದ ಬಸಂತಕ್ಕಾಚ್ಚವೆಳ್ದಿಂಗಳುಜ್ಜಳಿಪಂ ತಾಳ್ದ ಗುಣಂ ರಸಕ್ಕೆಸೆಯೆ ಪೇಳ್ದ' ಕಾವ್ಯಗಳನ್ನು ಮೆಚ್ಚಿ ಅವನ್ನು ಪುನಃ ಪುನಃ ಓದಿ ಆನಂದಿಸುವರು.

ಆ ಕಾವ್ಯಗಳಿಗೆ ಸದಾ ಆನಂದಗೊಡುವ ಶಕ್ತಿ ಇದೆ. ಅವು 'ನಿಚ್ಚಂ ಪೊಸತು; ಅರ್ಣವಂಬೊಲತಿಗಂಭೀರಂ'. ಒಮ್ಮೆ ಓದಿದೆನೆಂದರೆ ಪುನಃ ಓದುವ ಕುತೂಹಲಕ್ಕೆಡೆಗೊಡದ, ಕ್ಷಣಿಕ ಹರ್ಷವನ್ನೀವ ಗದ್ಯ ಕಥೆಗಳಂತಲ್ಲವವು. ಬಹು ಆಳವಾಗಿರುವುದರಿಂದ ಮೇಲೆ ಕಾಣದ ಸಿರಿ ಒಳಹೊಕ್ಕು ನೋಡಿದಾಗ ಅಧಿಕಾಧಿಕ ವಾಗಿ ಕಾಣುವುದು. 'ಕುವಲಯದ ಅಲರಂ ಕೌಮುದಿಯ ವಿಭವಮಂ ಕಂಡು ಕೊಂಡು ಕೊನೆವ' ಕವಿಕುಂಜರನಂತಹ ಕವಿಗಳು, 'ನಿಲ್ಲದ ತಣ್ಣೆಲರನ್ನು, ಗಳಿಗೆಯಲ್ಲಿ ಕಳಿವಾ ಫಲವನ್ನು, ಒಂದು ಮುಹೂರ್ತವೂ ನಿಲ್ಲದ ಬೇಟವನ್ನು, ಇರುಳಲ್ಲಿ ಇದ್ದು ಹೊತ್ತಾರೆಗಿಲ್ಲದ ಬೆಳುದಿಂಗಳನ್ನು, ಕ್ಷಣಕಾಲ ಹೊಳೆದು ಮಾಯ ವಾಗುವ ಮಿಂಚನ್ನು' ಪ್ರಕೃತಿಯಲ್ಲಿ ಕಂಡು ಅವುಗಳಿಂದೊದಗುವ ಆನಂದವನ್ನು ತಾವನುಭವಿಸಿ, ಕ್ಷಣಿಕವಾದ ಅವನ್ನು ಶಾಶ್ವತವಾಗಿರುವಂತೆ ಅಮರವಾದ ಕೃತಿ ಬಂಧದಲ್ಲಿ ಬಂಧಿಸಿ ಸುಖಕೇಳಸುವ ರಸಿಕಜನರಿಗೆ ಅವನ್ನು ಅರ್ಪಿಸಿದರು. ತಣ್ಣೆಲರು ಬೀಸದಾಗಲೂ, ಮಾಮರದೆಳಗೊಂಬಿನಲ್ಲಿ ಮಾವು ತೂಗದಾಗಲೂ, ಬೇಟಕ್ಕೆ ಮನವೆಳಸದಾಗಲೂ, ಬೆಳುದಿಂಗಳಿಲ್ಲದೆ ಕತ್ತಲೆ ಕವಿದಾಗಲೂ, ಮಿಂಚಿನ ಗೊಂಚಲು ಕಂಗೊಳಿಸದಾಗಲೂ ಅವುಗಳ ಚಿತ್ರವು ನಮ್ಮ ಕಣ್ಣಮುಂದೆ ಸದಾ ಹೊಳೆವಂತೆ ಮನೋಹರವಾದ ಕೃತಿಗಳು ಮಾಡುವುದರಿಂದ ಅವುಗಳು ಕಾಮಿಸಿದಾಗ ಆನಂದ ಗೊಡುವ ಕಾಮಧೇನುಗಳಂತಿರುವುವು. ಅವುಗಳ 'ಮಾಹಾತ್ಮ್ಯವೆನಿತೆಂದು ಬಣ್ಣಿಸಬಹುದು? ಒದಗಿದ ಶಿಶಿರದೊಳಗೆ ಚೈತ್ರವನು ಬರಿಸುವುವು, ಕವಿದ ಕಾರ್ಮುಗಿಲನೋಡಿಸಿ ನೀಲ ನಭದೊಳಗೆ ರವಿಯ ಮೂಡಿಸಿ ಮುದವ ನೀಡುವುವು ತಾವರೆಗೆ'. ಆದುದರಿಂದಲೇ ಸುಂದರವಾದ ಕಾವ್ಯವು ಸದಾ ಆನಂದವೀವುದೆಂಬರು.

ಆದರೂ ಘನವಾದ ಸುಖದ ಕಡೆಗೆ ಮನಸ್ಸು ಹರಿಯಗೊಡುವಂತೆ ಸತ್ಕವಿ ಗಳು ಆನಂದವೀವ ವಸ್ತುಗಳನ್ನು ಉದಾತ್ತ ವಸ್ತುವಿನೊಂದಿಗೆ ಬೆರಸಿ ರಸಿಕ ಸಮುದಾಯಕ್ಕೆ ಅರ್ಪಿಸಿದರು. ಕವಿತಾ ಶಕ್ತಿ ಎಂಬ ಸುರಧೇನು ಪುಣ್ಯಾಯತ್ತವಾಗಿ ಕೈಸೇರಿದಾಗ, 'ಆ ವಚಸ್ಸುಧೆಯನು ಅನ್ಯರ್ಗಿತ್ತು ಕಾಳ್ಬೆಕ್ಕಿಗೆ ಊಡುವವೊಲ್ ತುಯ್ಯಲನು', 'ಜಾರ ಚೋರ ವೀರರ ಕಥೆಗಳಲ್ಲಿ, ಬರಿಕೆಯ್ಪು ಚರ್ಚೆಗಳಲ್ಲಿ' ಅಪವ್ಯಯಮಾಡದೆ, ಸರ್ವಕಾಲಕ್ಕೂ ನಿಲ್ಲತಕ್ಕ ಧರ್ಮವನ್ನೂ ಸರ್ವಕಾಲಕ್ಕೂ ಉಪಾದೇಯವಾದ ವಿಷಯಗಳನ್ನೂ ಪ್ರತಿಪಾದಿಸಿ ಚಿರವಾದ ಕಾವ್ಯಗಳನ್ನು ರಚಿಸಿದರು. ಆ ಕಾವ್ಯಗಳು ಸೂರ್ಯಚಂದ್ರರಿರುವನಕವೂ ಸರ್ವಾದರಣೀಯಗಳು: ಅವನ್ನು ಪುನಃಪುನಃ ಓದಿ ಆನಂದಿಸುವವರುಂಟು.

ಜನ್ನನು ತನ್ನೊಂದು ಆವುದೋ ಅನುಭವದಿಂದ, 'ಎನಿತನೊರಲ್ದು ಪೇಳ್ದ ಕವಿಯೇವನು? ಅವಂ ಪೆಸರಿಟ್ಟು ಮೆಚ್ಚಬಲ್ಲವನನು ಅರಸಲ್ಕೆವೇಳ್ಪುದು. ಅವನಂ ಜಗದೊಳ್ ಪಡೆಯಲ್ಕೆಬಾರದು. ಆತನ ಮುಖದಿಂದಮಲ್ಲದೆ ಅದು ಸಲ್ಲದು. ಕಟ್ಟಿಯುಂ ಮೇಣೊ ಮಾಲೆಗಾರನ ಪೊಸಬಾಸಿಗಂ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೇ?' ಎಂದು ಉದ್ಗಾರಗರೆದಂತಿದೆ. ಆದರೆ ಜನ್ನನ 'ಬೆಡಂಗು ಬೇರೆ, ಅವನ ವಕ್ರೋಕ್ತಿ ಬೇರೆ, ಅವನೊಂದು ದೇಸೆ ಬೇರೆ, ಅವನ ರಸಜ್ಞತಾವಿಷಯಸಂಗತಿ ಬೇರೆ' ಆಗಿರುವಾಗ ತನ್ನ ಹುಟ್ಟಿಗೆ ಆ ಮಾತನ್ನು ಹೇಳಿರಲಾರನೆಂದು ನಾವು ತಿಳಿಯ

ಬಹುದು. ‘ಬಗೆಗೊಂಡು ಓದಪೆ, ಕೇಳಪೆ ಎಲ್ಲ ಕಳೆಯಂ, ಕಾವ್ಯಜ್ಞರಿಂ ಕಲ್ತಪೆ ಅಚ್ಚಿಗದಿಂ ಕಟ್ಟಿದ ಕೆಟ್ಟ ಕನ್ನಡದ ಕಾರ್ಗಬ್ಬಂಗಳಂ ಬಂಟಸಾವಿಗಳಿಂ ಕೇಳಿಸಿ ತಾವೆ ತಮ್ಮಮನದೊಳ್ ಸರ್ವಜ್ಞರೆಂದಿರ್ಪ ಕಬ್ಬಿಗರು’ ತಮ್ಮ ಕೃತಿಯನ್ನು ಎತ್ತಿ ಹಿಡಿವವರು ಯಾರು? ಅದನ್ನು ಮೆಚ್ಚುವವರು ಎಲ್ಲಿ? ಎಂದು ಹಾತೊರೆಯ ಬೇಕಲ್ಲದೆ, ಯಾರ ಕಾವ್ಯಸರಸ್ಸಿನಲ್ಲಿ ‘ಸರಸ್ವತಿ ಮನೋಮುದದಿಂ ಜಲಕೇಳಿ ಯಾಡುವಳೋ’ ಆ ಕವಿಗಳು, ‘ಬೇಕಾದರಾಲಿಸುವುದು, ಬೇಡವಾಗೆ ಪರಾಕು ಮಾಡುವುದು’ ಎಂದು, ತಮ್ಮ ಕಾವ್ಯಗಳ ಆನಂದೋತ್ಪಾದಕ ಶಕ್ತಿಯಲ್ಲಿ ವಿಶ್ವಾಸವುಳ್ಳವರಾಗಿರುತ್ತಾರೆ. ಮನೋಹರವಾದ ಆ ಕಾವ್ಯಗಳು ಮುದ್ದಾದ ಮಕ್ಕಳು ಸರ್ವರಿಂದಲೂ ಎತ್ತಿಸಿಕೊಂಬಂತೆ ಸರ್ವಾದರಣೀಯವಾಗುವುವು.

ಮಾತ್ರವಲ್ಲ; ಪೊಸಬಾಸಿಗವು ಸದಾ ಭೋಗಕ್ಕೆ ದೊರೆವ ವಸ್ತುವಲ್ಲ. ಅದು ಬಾಡಿ ನಶಿಸುವುದು. ಅದು ಅಮರವಾಗಿರತಕ್ಕ ಕಾವ್ಯಕ್ಕೆ ಸುಗಮವಾದ ಉಪಮಾನವಲ್ಲ. ಅದಕ್ಕೆ, ‘ಸೇವಂತಿಗೆಯ ಸೊಬಗು, ಮಲ್ಲಿಗೆಯ ಸರುಗಂಪು ಆವಾಗಲೂ ತಪ್ಪದು.’ ‘‘ಮಧುವೂ ಮಲಯಾನಿಲನೂ ಕೌಮುದಿಯೂ ಕಾಲಾನು ಕಾಲಕ್ಕೆ ಬರುವಂತೆ ಸತ್ಕಾವ್ಯವು ಭುವನದ ಭಾಗ್ಯದಿಂದ ಬರುವುದು.’’ ಕೌಮುದಿಗೆ ತನ್ನನ್ನುಂಡು ಆನಂದಿಸುವ ಚಕೋರಗಳುಂಟೇ ಎಂಬ ಸಂದೇಹಬೇಡ. ಅದಕ್ಕೇ ಬಾಯ್ದೆರೆದು ಕಾದಿರುವ ಚಕೋರಗಳುಂಟು.

‘ಅರಮನೆಗಲ್ತು, ಸೂಳೆಮನೆಗಲ್ತು, ಸವಣ್ಮನೆಗಲ್ತು, ಬಲ್ಲರ ಬಗೆಗಲ್ತು ಪೇಳ್ದ’ ರಸವತ್ಕೃತಿಗೆ ಸಂಶಯವುಂಟೆ? ಬುಧರು ಸೇರುವ ರಾಜಸಭೆಗಳಲ್ಲಿಯೂ ರಸಿಕರು ಕೂಡುವ ಸೂಳೆಮನೆಗಳಲ್ಲಿಯೂ, ಪಂಡಿತರು ಸಂಧಿಸುವ ಗುರುಮಠ ಗಳಲ್ಲಿಯೂ, ವಿದ್ವಾಂಸರ ಸಭೆಗಳಲ್ಲಿಯೂ ಅದು ಆದರಣೀಯವಾಗುವುದು. ಇವನ್ನೊಂದನ್ನೂ ಕಲಿಯದೆ, ‘ಪಳೆಕಬ್ಬಿಗರು ನುಡಿದ ಮಾತನೆ ಪಲ್ಲಟವಿಟ್ಟು ಕಟ್ಟಿ ದವನ ಕಾವ್ಯವು’, ‘ಅರಮನೆಗಲ್ತು, ಸೂಳೆಮನೆಗಲ್ತು, ಸವಣ್ಮನೆಗಲ್ತು, ಬಲ್ಲರ ಬಗೆಗಲ್ತು — ಆವ ಎಡೆಗೂ ಅಲ್ತು’. ‘ಮಾಲೆಗಾರನ ಪೊಸ ಬಾಸಿಗದಂತೆ ಮುಡಿವ ಭೋಗಿಗಳಿಲ್ಲದೆ ಬಾಡಿಪೋಗದೆ?’

ಕೃತಿಕಲ್ಪತರುಗಳಿಂದ ಸಾಹಿತ್ಯೋದ್ಯಾನವನ್ನು ವಿಸ್ತರಿಸುವ ಭಾಗ್ಯವು ಕವಿಗಳದಾದರೆ ಅದರೊಳಗೆ ವಿಹರಿಸಿ ಆನಂದಿಸುವ ಭಾಗ್ಯವು ಗುಣಗ್ರಾಹಿಗ ಳಾದವರದು. ಇವರು ಹೆಚ್ಚು ಕಡಮೆ ಸಮಾನ ಯೋಗ್ಯತೆಯುಳ್ಳವರೆಂಬ ಅಂಶವು ಕವಿಕುಂಜರನ ‘ಜಸಮಂ ಪಡೆವೊಡೆ ವಿದಗ್ಧಕವಿ ವೃಷಭನಾಗು. ಏಗೈದುಂ ಅದಾಗದೊಡೆ ಗುಣಿಯಾಗು’ ಎಂಬ ಮಾತಿನಿಂದ ಸ್ಪಷ್ಟವಾಗುವುದು. ಕಾವ್ಯದ ಗುಣವನ್ನು ಗ್ರಹಿಸಲರಿಯದೆ ಬರಿದೆ ಕುಂದಿಟ್ಟು ಅದನ್ನು ಹಳಿದರೆ, — ‘ಕೆನೆವಾಲ ಕಡೆದು ನವನೀತಮಂ ತೆಗೆದು ಬಾಯ್ಗಿಸಿದಾಗ ಸವಿಯದೆ ಅದರೊಳಗೆ ಪುಳಿವಿಳಿದು ರಸವನೆ ಕಿಡಿಸಿದೊಡೆ ಕರೆದ ಸುರಭಿಗಿಪ್ಪುದೆ ಕೊರತೆ?’ ಇಂತಹ ದುರ್ಮತಿಗಳು ಕೆಲರು ಇದ್ದೇ ಇರುವರು. ಮಣಿಯೊಡನೆ ಫಣಿಯೂ, ಅಮೃತ ದೊಡನೆ ವಿಷವೂ, ಕಡಲಿನಲ್ಲಿ ಸುಳಿಯೂ, ಮಳೆಯೊಡನೆ ಸಿಡಿಲೂ ಕೂಡಿರುವಂತೆ, ಗುಣಗ್ರಾಹಿಗಳೊಡನೆ ಮತ್ಸರಿಗಳೂ ಇರುವುದು ಸಹಜವು. ಕೀಟಗಳಿಗೆ

ಕೆದರಿ ಹೂಗಳು ಹುಟ್ಟದಿರುವುವೆ? ಕೀಟಗಳೊಂದೆರಡು ಕೋಟಲೆಗೊಳಿಸಿದರೂ ತುಂಬಿಗಳು ಹಲವು ಬಂದೆರಗಿ ಸುಖದಿಂದುಂಡು ಹೂವನ್ನು ಹಾಡಿ ಹೊಗಳುವುವು.

ಕನ್ನಡ ಸಾಹಿತ್ಯೋದ್ಯಾನವು ಅತಿವಿಸ್ತಾರವಾಗಿದೆ. ಎಲ್ಲಕ್ಕೂ ಹಳೆಯವಾದ, ಆದರೆ ಗುಣದಲ್ಲಿ ನಿತ್ಯವೂ ಹೊಸತಾದ ಚಂಪೂಕೃತಿಗಳು, ಮೃದು ಮಧುರವಾಗಿ ಝೇಂಕರಿಸುವ ಷಟ್ಪದಗಳು, ಹೃದ್ಯವಾದ ವಚನ ಕಾವ್ಯಗಳು, ನವನೂತನವಾದ ಹೂಬಳ್ಳಿ ಗಿಡಗಳು ಗುಂಪು ಗುಂಪಾಗಿ ಸೊಂಪುವಡೆದು ಕಂಗೊಳಿಸುತ್ತಿವೆ. ಇಲ್ಲಿ ಸದಾ ವಸಂತವು. ಇಲ್ಲಿಗೆ ಒಮ್ಮೆ ವಿಹರಿಸ ಬಂದವರು ಮತ್ತೆಮತ್ತೆ ಬರುವರು. 'ಕೆಂದಳಿರ ಪೂವಿನ ಬಿಣ್ಪೊರೆಯಿಂ ಬಳಲ್ದು ತುಂಬಿಗಳಿನೆ ತುಂಬಿ ಕೋಗಿಲೆಯ ಬಗ್ಗಿಸೆ ಸುಗ್ಗಿಯೊಳೊಪ್ಪುವ' ಎಳಮಾವಿನಂತೆ, ಪೊಸಬಗೆಯಿಂದಲೂ ಮೃದುಬಂಧದಿಂದಲೂ ದೇಸಿಯಿಂದಲೂ ಕವಿಮಾರ್ಗದಿಂದಲೂ ಸದಾ ರಂಜಿಸುವ ಆದಿಪುರಾಣವೂ ವಿಕ್ರಮಾರ್ಜುನ ವಿಜಯವೂ, 'ವಸುಧೆಯೊಳಗೊಂದು ರತ್ನಮಿದು ಎಸೆದಿರ್ಪುದು ಪಲವು ರತ್ನಮಿಲ್ಲ ಎನಿಪ್ಪ' ಕವಿರತ್ನನ ಪುರಾಣತಿಲಕವೂ ಸಾಹಸಭೀಮ ವಿಜಯವೂ, 'ಕವಿತಾವಲ್ಲೀ ಸುಧಾವೃಷ್ಟಿ, ಸರ್ವರಸೋತ್ಪಾದ ನವೀನ ಸೃಷ್ಟಿ, ಸರ್ವಾಂಗಸುಂದರಿ ವಿದ್ಯಾನಟ ನಾಟಕಂ ನಲಿವ' ಅಭಿನವ ಪಂಪನ ಮಲ್ಲಿನಾಥ ಪುರಾಣವೂ ರಾಮಚಂದ್ರಚರಿತ ಪುರಾಣವೂ, 'ಮೃದುಪದ ಬಂಧ ಬಂಧುರ ಸರಸ್ವತೀ ಸೌಭಾಗ್ಯ ವ್ಯಂಗ್ಯಭಂಗಿ ನಿಧಾನದೀಪವರ್ತಿ ಚತುರ್ಭಾಷಾ ಕವಿಚಕ್ರವರ್ತಿ'ಯಾದ ಕವಿಕುಂಜರನ ಮನೋರಂಜಕವಾದ ಲೀಲಾವತಿ ಪ್ರಬಂಧವೂ ನೇಮಿನಾಥ ಪುರಾಣವೂ, 'ಪೊಸ ಮಾವಿನ ಜೊಂಪದಂತೆ, ನನೆಯೇರಿದ ಮಲ್ಲಿಗೆಯಂತೆ' ಮೆರೆವ ರುದ್ರಭಟ್ಟನ ಜಗನ್ನಾಥವಿಜಯವೂ, ಲೀಲಾವತಿಗೆ ಸರಿದೊರೆಯೆನ್ನಿಸಿದ ಅಗ್ಗಳನ ಚಂದ್ರಪ್ರಭ ಪುರಾಣವೂ, ಮೃದುಮಧುರವಾದ ನಯಸೇನನ ಧರ್ಮಾಮೃತವೂ, 'ಎಳಗಿಳಿವಿಂಡಿನಂತೆ ಮಿಳಿರ್ದಾಡುವ ತುಂಬಿಯ ಬಂಬಲಂತೆ ಕೆಂದಳಿರ್ಗಳ ತೊಂಗಲಂತೆ' ಸೋಲಿಸುವ ಆಂಡಯ್ಯನ ಕಬ್ಬಿಗರ ಕಾವವೂ, 'ಸುರ ತರುವಿನಂತೆ, ಸರೋಜದಂತೆ' ಸೇವ್ಯವೂ ನವ್ಯವೂ ಆದ ಗಿರಿಜಾಕಲ್ಯಾಣವೂ, ಕವಿಶರಭಭೇರುಂಡನೆಂದು ಮೆರೆದ ರಾಘವನ ಸಹಜ ಸೌಂದರ್ಯದಿಂದೊಪ್ಪುವ ಹರಿಶ್ಚಂದ್ರ ಕಾವ್ಯವೂ, ಹೃದಯಂಗಮವಾದ ಶರಣರ ವಚನ ಕಾವ್ಯಗಳೂ, 'ಸುಧಾಮಧುರ ಕರ್ನಾಟ ಭಾಷಾಭಾಮಿನೀಪತಿ'ಯಾದ ಕುಮಾರವ್ಯಾಸನ ಭಾರತವೂ, ಜರಿಯಂತೆ ಹರಿಯುವ ತೊರವೆಯ ರಾಮಾಯಣವೂ, ಕರ್ನಾಟಕ ಕವಿಚೂತವನ ಚೈತ್ರನಾದ ಲಕ್ಷ್ಮೀಶನ ಜೈಮಿನಿ ಭಾರತವೂ, ವಿರೂಪಾಕ್ಷಪಂಡಿತನ ಬಲು ಚೆನ್ನಾದ ಚೆನ್ನಬಸವ ಪುರಾಣವೂ, 'ತಂಬೆಲರಂತೆ, ಪೆಣ್ದುಂಬಿಯ ಗಾನದಂತೆ ಚಿತ್ತಂ ಬಿಡದಿಪ್ಪ' ಷಡಕ್ಷರಿಯ ರಾಜಶೇಖರವಿಲಾಸವೂ ಶಬರಶಂಕರ ವಿಲಾಸವೂ ವೃಷಭೇಂದ್ರ ವಿಜಯವೂ, 'ಅಯ್ಯಯ್ಯ ಚೆನ್ನಾದುದೆನೆ ಕನ್ನಡಿಗರು, ರಯ್ಯ ಮಂಚಿದೆಯನೆ ತೆಲುಗಾ, ಅಯ್ಯಯ್ಯ ಯೆಂಚಪೊರ್ಲಾಂಡೆಂದು ತುಳುವರು ಮೈಯುಬ್ಬಿ' ಕೇಳುವ ಕಾವ್ಯರತ್ನಾಕರನಾದ ರತ್ನಾಕರ ಕವಿಯ ಭರತೇಶವೈಭವವೂ, ಮುದ್ದಣನ ಬಲು ಮುದ್ದಾದ ರಾಮಾಶ್ವಮೇಧವೂ ಸಾಹಿತ್ಯೋದ್ಯಾನವನ್ನು ಹೊಕ್ಕ ರಸಿಕ ಜನರ ಕಣ್ಮನಗಳನ್ನು ಸೂರೆಗೊಳ್ಳುವುವು. ಮನಸ್ಸಿಗೆ ಬಹು ಹರ್ಷವಾದಾಗ, ಬಲು ಜೇಸರ

ವಾದಾಗಲೂ, ಬೇರೆ ಕೆಲಸವಿಲ್ಲದಾಗ, ಕೆಲಸದಿಂದ ಬೇಸತ್ತಾಗಲೂ, ಹಾಗೂ ಮನಸ್ಸಿಗೆ ಬಂದಾಗ ಈ ಉದ್ಯಾನವನ್ನು ಹೊಕ್ಕು ವಿಹರಿಸುವವರು ಇಲ್ಲಿ ಬಹು ಆನಂದದಿಂದ ಕಾಲಕಳೆವರು. ಈ ಉದ್ಯಾನದ ಗಡಿಗಳನ್ನು ನಿಶ್ಚಯಿಸಿದುವೆಂಬಂತೆ ಇದರ ಸುತ್ತಲೂ ಕವಿರಾಜಮಾರ್ಗವೂ ಛಂದೋಂಬುಧಿಯೂ ಕಾವ್ಯಾವಲೋಕನವೂ ಶಬ್ದಮಣಿದರ್ಪಣವೂ ನಿಂದಿರುವುವು.

ಈ ಉದ್ಯಾನವನದ 'ಹೊಸಾಗಮೆ' ಹೊಸ ಹೂದೋಟದಂತೆ ಹಸನಾಗಿ ಕಂಗೊಳಿಸುತ್ತಿದೆ. ಒಂದು ಕಡೆಯಲ್ಲಿ **ಸೊಬಗಿನ ಬಳ್ಳಿ** ಅಂದವಾಗಿ ಮುಗುಳ್ಳು ಪರಿಮಳಿಸುತ್ತಿದೆ. ಅಲ್ಲಿ ಕೊಳವು ಕಣ್ಬಿಟ್ಟಂತೆ **ತಾವರೆ** ಅರಳಿರುವುದು. **ಗರಿಗೆದರಿ ನವಿಲು** ಇಲ್ಲಿ ಕುಣಿಯುತ್ತಿರುವುದು. ಈ ಮಾಮರವು **ಹಣ್ಣುಕಾಯನ್ನು** ಹೇರಿರುವುದು. ಅಲ್ಲೆ **ಗಿಳಿವಿಂಡು** ನೆಲಸಿರುವುದು. **ಚೆಂಗಲವೆ** ಇಲ್ಲಿ ಕೆಂಪಗೆ ಕಂಗೊಳಿಸುವುದು. ಎಲ್ಲಿಂದಲೋ **ಕೊಳಲು**ದನಿ ಕೇಳುತ್ತಿರುವುದು. ಅದೋ ಅಲ್ಲಿ ಈ ವನದ **ಶ್ರೀ**ಯ ವೈಭವವು ಶೋಭಿಸುತ್ತಿರುವುದು. ಮುಂದೆ **ಬಾವುಟ**ವು ನೆಟ್ಟಿದೆ. **ನಿವೇದನ** ಅಂದೆ ಅರ್ಪಿತವಾಗಿದೆ. **ಗೀತಗಳು** ಪಠನವಾಗುತಿವೆ. ಅದೋ ಆ ಕಟ್ಟೆಯಲ್ಲಿ ಎಂಡಕುಡ್ಕನು **ರತ್ನನ ಪದಗಳನ್ನು** ಬಾಯ್ತುಂಬ ಹಾಡುತ್ತಿರುವನು. ಮೇಲೆ **ನಕ್ಷತ್ರ** ಮಿನುಗುವುದು. ಇಲ್ಲಿ ವಿಹರಿಸುವ ಜನರ ಆನಂದಕ್ಕೆ ಕೊರತೆಯಿಲ್ಲ.

ಈ ಉದ್ಯಾನವನವನ್ನು ಕರುಣೆಯಿಂದ ಕಾಯುತ್ತಿರುವುದರಿಂದ ಇಲ್ಲಿ,

> ಜಗದೊಳ್ ಮುನ್ನೆಗಳ್ದಿರ್ದ ಸತ್ಕವಿಗಳಂ ಕಾವ್ಯಂಗಳಂ ಕೇಳ್ದು ತಾಂ
> ಪೊಗಳುತ್ತಿರ್ದ ನೃಪಾಲರಂ ಪ್ರಿಯದಿನೋದುತಿರ್ದ ವಿದ್ವಾಂಸರಂ
> ತೆಗೆದೊಯ್ದೋಡುವ ವೇಳೆಯಲ್ಲಿ ಜನರೊಳ್ ಕಾರುಣ್ಯಮುಂ ತಾಳ್ದು ಕಾ
> ವ್ಯಗಳಂ ಬಿಟ್ಟುದರಿಂದ ನಾಂ ವಿನಯದಿಂದಾ ಕಾಲನಂ ವಂದಿಪಂ

**ಉಗ್ರಾಣ ಮಂಗೇಶರಾವ್**

# ಅನ್ಯೋಕ್ತಿ

ಸಾಹಿತ್ಯ ಪ್ರಪಂಚದಲ್ಲಿ ಕಾವ್ಯ, ಕಾದಂಬರಿ, ನಾಟಕ ಮೊದಲಾದವು ಗಳಿಗೆ ಹೇಗೊ ಹಾಗೆ ಅನ್ಯೋಕ್ತಿಗೂ ಪ್ರತ್ಯೇಕವಾದ ಸ್ಥಾನವಿದೆ. ಯಾವು ದಾದರೂ ಒಂದು ವಸ್ತುವಿನ ಸಮಗ್ರ ವರ್ಣನೆಯಿಂದ ಬೇರೆಯೆ ಆದ ಒಂದು ಭಾವ (ಧ್ವನಿ) ಸೂಚನೆಯಾಗಿ ಸ್ಫುರಿಸುವುದೇ ಅನ್ಯೋಕ್ತಿಯ ಮುಖ್ಯ ಲಕ್ಷಣ. ಹೀಗೆ ಸ್ಫುರಿಸುವ ಭಾವಕ್ಕೇ ಅನ್ಯೋಕ್ತಿಯಲ್ಲಿ ಹೆಚ್ಚು ಪ್ರಾಧಾನ್ಯ; ಅದರಲ್ಲಿ ವರ್ಣಿಸಿರುವ ವಸ್ತುವಿಗಲ್ಲ. ವಸ್ತುವರ್ಣನೆಯೂ ರಮಣೀಯವಾಗಿದ್ದು ಭಾವವೂ ಉದಾತ್ತವಾಗಿದ್ದರೆ ಅನ್ಯೋಕ್ತಿಯ ಕಳೆ ಇಮ್ಮಡಿಯಾಗುತ್ತದೆ.

ಅನ್ಯೋಕ್ತಿಗೆ 'ಗುರಿ ಮಾತು' ಎಂದು ಕೆಲವರು ಅರ್ಥಮಾಡುತ್ತಾರೆ. ಈ ಅರ್ಥ ಕೆಲಮಟ್ಟಿಗೆ ಹೊಂದಿಕೆಯಾಗಿದ್ದರೂ ಅನ್ಯೋಕ್ತಿಯ ಉದ್ದೇಶ ಮತ್ತು ಪ್ರಯೋಜನಗಳನ್ನು ವಿವೇಚಿಸಿ ನೋಡಿದರೆ, ಅದು ವ್ಯಂಗ್ಯವಾಗಿ (ಇಲ್ಲಿ ವ್ಯಂಗ್ಯ ಎಂದರೆ ಧ್ವನಿ ಎಂದು ಮಾತ್ರ ಅರ್ಥ) ತೋರುವ ಪ್ರಬೋಧಕ ಪ್ರಯೋಜನವುಳ್ಳ ಒಂದು ವಾಕ್ಯದ ಧಾಟಿ ಎಂದು ಸ್ಥೂಲವಾಗಿ ಅರ್ಥಮಾಡಬಹುದು.

ಕೆಲವರು ಅಪ್ರಸ್ತುತಪ್ರಶಂಸೆ ಎಂಬ ಅಲಂಕಾರವೊಂದಿದೆ, ಅದನ್ನೆ ಅನ್ಯೋಕ್ತಿ ಎಂದು ಹೇಳಿಬಿಡಬಹುದು ಎನ್ನುತ್ತಾರೆ. ಆದರೆ ಅನ್ಯೋಕ್ತಿ ಅಲಂಕಾರವಲ್ಲ; ಲಾಕ್ಷಣಿಕರು ಹೇಳಿರುವ ನೂರು ಅಲಂಕಾರಗಳಲ್ಲಿ ಅನ್ಯೋಕ್ತಿ ಎಂಬ ಅಲಂಕಾರ ಇಲ್ಲ. ಅಪ್ರಸ್ತುತಪ್ರಶಂಸೆ ಕೆಲವುವೇಳೆ ಅನ್ಯೋಕ್ತಿ ಆಗಬಹುದು; ಕೆಲವುವೇಳೆ ಆಗದಿರಬಹುದು. ಆದರೆ ಅನ್ಯೋಕ್ತಿಯಲ್ಲಿ ಗೂಢಾರ್ಥ ಪ್ರತೀತಿ ಮೂಲಕವಾದ ಅಲಂಕಾರಗಳೆಲ್ಲವೂ—ಅವುಗಳಲ್ಲಿಯೂ ವ್ಯಾಜೋಕ್ತಿ, ವಕ್ರೋಕ್ತಿ, ಶ್ಲೇಷ, ಪರ್ಯಾಯೋಕ್ತಿ ಮೊದಲಾದವೂ, ಕೆಲವು ಸಂದರ್ಭಗಳಲ್ಲಿ ಸಾದೃಶ್ಯ ಮೂಲಕವಾದ ಉತ್ಪ್ರೇಕ್ಷೆ, ಅತಿಶಯೋಕ್ತಿ ಮೊದಲಾದವೂ—ಸಂಕರ ಸಂಸೃಷ್ಟಿ ಗಳಾಗಿ ಕಂಡುಬರುತ್ತವೆ.

ಕೆಲವರು ವಕ್ರೋಕ್ತಿ ಅನ್ಯೋಕ್ತಿಗಳೆರಡೂ ಒಂದೆ ಏಕಾಗಬಾರದು ಎನ್ನುತ್ತಾರೆ. ವಕ್ರೋಕ್ತಿ ಜೀವಿತ (ಧ್ವನಿ) ಅನ್ಯೋಕ್ತಿಯ ಪ್ರಾಣ. ಮೇಲೆ ಹೇಳಿದಂತೆ ವಕ್ರೋಕ್ತಿ ಅಲಂಕಾರ ಕೆಲವುವೇಳೆ ಅದರಲ್ಲಿ ಬಂದರೂ ಬರಬಹುದು. ಇಷ್ಟಲ್ಲದೆ ವಕ್ರೋಕ್ತಿಯೇ ಅನ್ಯೋಕ್ತಿ, ಅನ್ಯೋಕ್ತಿಯೇ ವಕ್ರೋಕ್ತಿ ಎಂದು ಹೇಳುವುದಕ್ಕಾಗುವುದಿಲ್ಲ.

ಸಾಮಾನ್ಯವಾಗಿ ಅನ್ಯೋಕ್ತಿಯಲ್ಲಿ ವ್ಯಕ್ತಿವರ್ಣನೆ ಇರುವುದಿಲ್ಲ. ಈಗ ಸಾಹಿತ್ಯದಲ್ಲಿ ನಮಗೆ ಕಂಡುಬರುವ ಅನ್ಯೋಕ್ತಿಗಳಲ್ಲೆಲ್ಲಾ ಬಹುತರ ಗಿಡ, ಮರ, ಬಳ್ಳಿ, ಮೃಗ, ಪಕ್ಷಿ, ಹೊಳೆ, ಕೊಳ, ಕಡಲು, ಮುಗಿಲು, ತಂಗಾಳಿ, ಸೂರ್ಯ, ಚಂದ್ರ—ಮೊದಲಾದವು ವರ್ಣಿತವಾಗಿವೆ. ಕಾವ್ಯದ ಪ್ರಣಾಳಿಯಲ್ಲಿಯೆ ಒಡಮೂಡಿ ಬರುವ ಅನ್ಯೋಕ್ತಿಗಳು ಪ್ರಾಸಂಗಿಕಾನ್ಯೋಕ್ತಿಗಳಾಗಿರುತ್ತವೆ. ಜನ ಜೀವನಕ್ಕೆ ಸಂಬಂಧಿಸಿದ ಅನ್ಯೋಕ್ತಿಗಳು ಆ ಉದ್ದೇಶವನ್ನಿಟ್ಟುಕೊಂಡೆ ಹೊರಟವು. ಇಂಥವೇ ಸಾಹಿತ್ಯದಲ್ಲಿ ಪ್ರತ್ಯೇಕ ಸ್ಥಾನವನ್ನು ಪಡೆದಿರುವುದು.

ಕವಿಗಳು ಕೇವಲ ವ್ಯಂಗ್ಯಮೂಲಕವಾಗಿ, ಪ್ರಕಾರಾಂತರದಿಂದ ವ್ಯಕ್ತಿಯ ಅಥವಾ ಜನದ ಜೀವನದಲ್ಲಿ ಕಾಣುವ ಗುಣದೋಷಗಳನ್ನು ವರ್ಣಿಸುವ ಸಂದರ್ಭ

ಗಳಿರುತ್ತವೆ. ಅಂಥ ಸಂದರ್ಭಗಳಲ್ಲಿ ಅವರು ಅನ್ಯೋಕ್ತಿಗಳನ್ನು ತಮ್ಮ ಕೃತಿಗೆ ರೀತಿಯೊಡನೆಯೇ ಅಳವಡಿಸಿಕೊಳ್ಳುತ್ತಾರೆ. ಅಥವಾ ಕವಿಗೆ ವ್ಯಕ್ತಿಯ ವಿಷಯದಲ್ಲಿ ಉಂಟಾದ ವಿಷಮ ಭಾವನೆಗಳನ್ನೊ, ಜನಜೀವನದಲ್ಲಿ ಕಾಣಬರುವ ಗುಣದೋಷಗಳನ್ನೊ ಮನಮುಟ್ಟುವಂತೆ ಪ್ರಕಾರಾಂತರವಾಗಿ, ಉಕ್ತಿವೈಚಿತ್ರ್ಯ ದಿಂದ ಹೇಳಬೇಕಾದರೆ ಅನ್ಯೋಕ್ತಿಯೇ ಸಾಧನ. ಏಕೆಂದರೆ, ಕವಿ ಹೃದಯ ಯಾರೊಬ್ಬರ ಮನಸ್ಸನ್ನೂ ನೋಯಿಸಬಾರದೆಂಬ ಉಚ್ಚಧ್ಯೇಯದಿಂದ ಕೂಡಿ ರುತ್ತದೆಯಲ್ಲದೆ, ಜೀವನದಲ್ಲಿ ಅವನು ಎದುರಿಸಬೇಕಾದ ಎಡರುಗಳನ್ನೆಲ್ಲ, ಆ ಮೂಲಕ ಅವನ ಮನಸ್ಸಿನಲ್ಲಿ ಮೂಡಿದ ಅಸಹನೆಯನ್ನೆಲ್ಲ ಪ್ರಕಟವಾಗಿ, ಕಟುವಾಗಿ ಟೀಕಿಸದಿದ್ದರೆ ಅವನಿಗೆ ಸಮಾಧಾನವಿಲ್ಲ.

ಇಂಗ್ಲಿಷ್ ಸಾಹಿತ್ಯದಲ್ಲಿ ಸೆಟೈರ್ (Satire) ಪ್ಯಾರಡಿ (Parody)ಗಳು ಎಷ್ಟು ಪ್ರಾಧಾನ್ಯವನ್ನು ಪಡೆದಿವೆಯೊ, ಜನತೆಯ ಮೇಲೆ ಎಷ್ಟು ಪರಿಣಾಮಕಾರಿಯಾಗಿ ವೆಯೊ ಅಷ್ಟೇ ಮಟ್ಟಿಗೆ ನಮ್ಮ ಸಾಹಿತ್ಯಪ್ರಪಂಚದಲ್ಲಿ ಅನ್ಯೋಕ್ತಿ ಪ್ರಧಾನವೂ ಪರಿಣಾಮಕಾರಿಯೂ ಆಗಿದೆ. ಸೆಟೈರ್ ಪ್ಯಾರಡಿಗಳ* ಸ್ಥೂಲ ಲಕ್ಷಣಗಳೆಲ್ಲ ಅನ್ಯೋಕ್ತಿಯಲ್ಲಿ ಹೆಚ್ಚು ವ್ಯತ್ಯಾಸವಿಲ್ಲದೆ ಗಮನಕವಾಗಿ ಕಂಡುಬರುತ್ತವೆ.

ನಮ್ಮ ಜನಕ್ಕೆ ಈ ಅನ್ಯೋಕ್ತಿಗಳು ಬಳಕೆಯ ಮಾತಿನಲ್ಲೆ ಪರಿಚಿತವಾಗಿವೆ. ನಮ್ಮಲ್ಲಿ ಈಗ ಬಳಕೆಯಲ್ಲಿರುವ ಗಾದೆ ವಚನಗಳಲ್ಲಿ, ದಾಸರ ಪದಗಳಲ್ಲಿ ಕೆಲವು, ಒಂದು ವಿಧದಲ್ಲಿ ಈ ಅನ್ಯೋಕ್ತಿ ಜಾತಿಗೆ ಸೇರುತ್ತವೆಯೆಂದು ಹೇಳಬಹುದು. ಇವನ್ನು ಸಂಪೂರ್ಣವಾಗಿ ಅನ್ಯೋಕ್ತಿಗಳೆಂದೆ ಹೇಳಲಾಗದಿದ್ದರೂ ಇವುಗಳಲ್ಲಿ ಅನ್ಯೋಕ್ತಿ ಧ್ವನಿ ಇರುವುದನ್ನು ಕಾಣಬಹುದು.

ಸಂಸ್ಕೃತ ಸಾಹಿತ್ಯದಲ್ಲಿ ಅನ್ಯೋಕ್ತಿ ಮೊದಲಿಂದ ಕಡೆವರೆಗೆ ಸ್ಪಷ್ಟವಾಗಿ ಕಾಣುತ್ತದೆ. ಕಡೆಗೆ, ನೀತಿ ಶ್ಲೋಕಗಳಿಂದ ಮೊದಲ್ಗೊಂಡು ಚಾಟು ಪದ್ಯ, ಲೋಕೋಕ್ತಿ, ಕಾವ್ಯ, ನಾಟಕ, ಕಾದಂಬರಿ—ಮೊದಲಾದವುಗಳಲ್ಲೆಲ್ಲ ಅನ್ಯೋಕ್ತಿ ಮತ್ತು ಅನ್ಯೋಕ್ತಿ ಧ್ವನಿ ಅಲ್ಲಲ್ಲಿ, ಕೆಲವೆಡೆ ಬಹುತರ, ಇಲ್ಲದೆ ಇರುವುದಿಲ್ಲ. ಕೆಲ ಕವಿಗಳಂತೂ ಅನ್ಯೋಕ್ತಿ ಸಾಹಿತ್ಯ ಸಾಧನೆಗಾಗಿಯೇ ಕಾವ್ಯಗಳನ್ನು ಬರೆದಿರು ವುದುಂಟು. ವೇಂಕಟಾಧ್ವರಿ ಒಂದು ಚಂಪೂ ಕಾವ್ಯವನ್ನೆ—'ವಿಶ್ವಗುಣಾದರ್ಶ'— ಅನ್ಯೋಕ್ತಿ ಅಥವಾ ಅನ್ಯೋಕ್ತಿ ಧ್ವನಿಗೆ ಮೀಸಲಾಗಿಸಿದ್ದಾನೆ. ಸಂಸ್ಕೃತ ಸಾಹಿತ್ಯ ದಲ್ಲಿ—ವಿಶ್ವಸಾಹಿತ್ಯದಲ್ಲಿ ಎನ್ನಬಹುದು—ಪ್ರಸಿದ್ಧವಾಗಿರುವ 'ಪಂಚತಂತ್ರ' 'ಹಿತೋಪದೇಶ'ಗಳು, ಕೇವಲ ನೀತಿಬೋಧಕ ಪ್ರಯೋಜನವನ್ನೆ ಸಾಧಿಸಿರುವ ಅನ್ಯೋಕ್ತಿ ಕಾವ್ಯಗಳೆಂದರೆ ತಪ್ಪಾಗಲಾರದು. ಏಕೆಂದರೆ, ಅನ್ಯೋಕ್ತಿಗಳಿಗೆ ಕೇವಲ ಅನ್ಯೋಕ್ತಿಯೇ ಪ್ರಯೋಜನವಾಗಿಲ್ಲದೆ ಒಂದು ನೀತಿ ಪ್ರಬೋಧಕ ಪ್ರಯೋಜನವೂ ಇರುತ್ತದೆ. ಸಂಸ್ಕೃತದಲ್ಲಿ ಅನೇಕ ಅನ್ಯೋಕ್ತಿ ಶತಕಗಳು ದೊರೆಯುತ್ತವೆ. 'ಸುಭಾಷಿತರತ್ನಭಾಂಡಾಗಾರ'ದಲ್ಲಿ ಸಂಸ್ಕೃತ ಸಾಹಿತ್ಯದಲ್ಲಿ ದೊರಕುವ ಗ್ರಾಹ್ಯ ವಾದ ಅನ್ಯೋಕ್ತಿಗಳನ್ನೆಲ್ಲ ಒಕ್ಕಡೆ ಕೊಟ್ಟಿದೆ.

---

* ಸೆಟೈರ್ ಪ್ಯಾರಡಿಗಳ ವಿಷಯದಲ್ಲಿ ಹೆಚ್ಚು ತಿಳಿಯ ಬಯಸುವವರು ಶ್ರೀ॥ ರಾಜರತ್ನಂ ಅವರ 'ಪುರುಷ ಸರಸ್ವತಿ' ಕಾವ್ಯಕ್ಕೆ ಹಲವರು ವಿದ್ವಾಂಸರು ಬರೆದಿರುವ ಮುನ್ನುಡಿಗಳನ್ನು ನೋಡಬಹುದು.

ಅನ್ಯೋಕ್ತಿ ಶತಕಗಳನ್ನು ಬರೆದವರಲ್ಲಿ, ಆಲಂಕಾರಿಕರಲ್ಲಿ ನವೀನನೆನಿಸಿದ ಜಗನ್ನಾಥ ಕವಿ ಒಬ್ಬ. ಈತನು ಕವಿ ಮಾತ್ರವಲ್ಲದೆ ಆಗಿನ ಕಾಲದಲ್ಲಿ ಉದ್ದಾಮ ಪಂಡಿತನೂ ಆಗಿದ್ದನು. ಸಾಹಿತ್ಯದಲ್ಲಿ ಜಗತ್ತಿಗೆ ಒಂದು ಹೊಸ ದೃಷ್ಟಿಯನ್ನು ತೋರಿಸಿಕೊಟ್ಟವರಲ್ಲಿ ಜಗನ್ನಾಥನೂ ಒಬ್ಬ. ಈತನು ಜೀವಂತನಾಗಿದ್ದಾಗ ಸಮಕಾಲೀನ ಪಂಡಿತರೂ ಕವಿಗಳೂ, ಕಡೆಗೆ ಈತನಲ್ಲಿಯೇ ವ್ಯಾಸಂಗ ಮಾಡಿ ವಿದ್ವಾಂಸರಾದವರೂ ಈತನ ಆಂತರಿಕ ಜೀವನವನ್ನೆ ವ್ಯಾಜವಾಗಿಟ್ಟುಕೊಂಡು ಅವಹೇಳನಮಾಡಲು ಮೊದಲಿಟ್ಟರು. ನಿಜವಾಗಿ ಈ ಅವಹೇಳನಕ್ಕೆ ಜಗನ್ನಾಥ ಕವಿ ಪಾತ್ರನಾಗಿರಲಿಲ್ಲ. ಮತ್ಸರಪಿಶಾಚ ಈ ಹಲವರಮೇಲೆ ಬಂದು, ಜಗನ್ನಾಥ ಕವಿ ಅವರ ಉಪಟಳದಿಂದ ಕಂಗೆಡಬೇಕಾದ ಪ್ರಸಂಗಗಳು ಒದಗಿದುವು. ಇವರ ಪರಿಣಾಮವಾಗಿ ಈತನು ತನ್ನ ಮನಸ್ಸಿನಲ್ಲಿ ಹುದುಗಿದ್ದ ಅಸಹನೆಯನ್ನೆಲ್ಲ ಅನ್ಯೋಕ್ತಿ ರಚನೆಯ ಮೂಲಕ ತೋಡಿಕೊಂಡನು. ಸಾಮಾನ್ಯವಾಗಿ ಕವಿಗಳ ಜೀವನದಲ್ಲಿ ಇಂಥ ಪ್ರಸಂಗಗಳು ಅನೇಕ ಬರುವುವು. ಅವುಗಳ ಪರಿಣಾಮವಾಗಿ ಅವರಲ್ಲಿ ಮೂಡಿದ ಪ್ರತಿಕ್ರಿಯೆ ಅನ್ಯೋಕ್ತಿ ರೂಪದಲ್ಲಿ ಅಭಿವ್ಯಕ್ತವಾಗುವುದು.

ಸಾಹಿತ್ಯ ಪ್ರಪಂಚದಲ್ಲಿ ಕವಿಯ ಜೀವನ, ಅನುಭವ, ದೃಷ್ಟಿ ಮತ್ತು ಧ್ಯೇಯಗಳು ಲೋಕಾತೀತವಾಗಿರುತ್ತವೆ. ಕವಿಯ ಮನಸ್ಸಂತೂ ಬಹು ವಿಜಾತೀಯವಾದುದು. ಕವಿಹೃದಯವನ್ನು ಒಳಹೊಕ್ಕು ಅವನ ದೃಷ್ಟಿಯಲ್ಲಿ ತಮ್ಮ ದೃಷ್ಟಿಯನ್ನು ಬೆರಸಿಕೊಂಡು, ಅವನ ಅನುಭವ ಮತ್ತು ಧ್ಯೇಯಗಳನ್ನು ಮನ್ನಿಸುವ ಸಹೃದಯರು ತೀರಾ ವಿರಳ. ಎಂದರೆ, ಕವಿ ಸತ್ಯವೆಂದು ಹೇಳಿದ್ದನ್ನೆಲ್ಲ ಎಲ್ಲರೂ ಒಪ್ಪಬೇಕೆಂದಲ್ಲ. ಕವಿ ತಾನು ನಿರ್ಮಿಸಿರುವ ಕಾವ್ಯದಲ್ಲಿ ಒಳ ಮೂಡಿಸಿರುವ ತನ್ನ ಅನುಭವ ಎಲ್ಲರಿಗೂ ಪಥ್ಯವಾಗಿರುತ್ತದೆ ಎಂದೂ ಅಲ್ಲ. ಆದರೆ ಆ ಅನುಭವ, ಆ ಸತ್ಯ ಜನಜೀವನದಲ್ಲಿ ಅವನು ಕಂಡುವೇ ಆಗಿರುತ್ತವೆ; ಅವು ಗಳನ್ನು ತಿಳಿದು ಅನುಭವಿಸಿ ಹೊಗಳದಿದ್ದರೂ ಜನ ಸ್ವೈರಣೆಯಿಂದ ತೆಗಳದಿದ್ದರೆ ಕವಿಗೆ ಕನಕಾಭಿಷೇಕ ಮಾಡಿದಷ್ಟು ಆನಂದ. ಆದರೆ ಜನ ಹೀಗಿಲ್ಲ. ಪ್ರತಿ ಯೊಬ್ಬನೂ ತನ್ನ ಅನುಭವದ ಮಾನದಂಡದಿಂದ ಕವಿಯ ಅನುಭವವನ್ನು ಅಳೆಯ ಹೋಗುತ್ತಾನೆ. ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ತನ್ನ ಅನುಭವಕ್ಕೆ ಸರಿಹೋಗುವ ಅನುಭವವೇ ಇಲ್ಲವೆಂದು ಬೀಗುತ್ತಾನೆ. ಈ ಕಾರಣದಿಂದ ಕವಿ ಕೆಲವುವೇಳೆ ಸಜಾತೀಯ ಸಹವಾಸವನ್ನು ದೂರಮಾಡಿ, ತನ್ನದೇ ಆದ ಒಂದು ಪ್ರಪಂಚವನ್ನು ಕಲ್ಪಿಸಿಕೊಂಡು, ಅಲ್ಲಿ ತನಗೆ ಕಾಣಬರುವ ಸಹವಾಸಯೋಗ್ಯಗಳಾದ ವಸ್ತುಗಳೊಡನೆ ಸಲ್ಲಪಿಸುತ್ತಾನೆ, ಸಂತೋಷಪಡುತ್ತಾನೆ. ಇಂಥ ಸ್ಥಿತಿ ಕವಿ ಜಗನ್ನಾಥನಿಗೆ ಉಂಟಾಯಿತೆಂದು ಆತನ ಜೀವನದ ವಿಷಮಪರಿಸ್ಥಿತಿಗಳನ್ನು ಚಿತ್ರಿಸುವ ಈ ಅನ್ಯೋಕ್ತಿಗಳಿಂದ ತಿಳಿದುಬರುತ್ತದೆ:—

ಕಾಡ ಬೀಡನು ಮಾಡಿ ಕಳೆಯುವುದು ಕೆಲಕಾಲ.<br>
ಬೇಸರವೆ, ಬಿಡು ಚಿಂತೆ, ಲೇಸಹುದು ಕೋಗಿಲೆಯೆ !<br>
ಇವ್ಮಾವು ತಳಿತಂದು, ಅಳಿವಿಂಡು ನುಡಿದಂದು,<br>
ಬಂದು ನೀ ನಲಿದಾಡು, ಬೇಡವೆನ್ನುವರಾರು ?

ಜಲ ಕಣವ ಕೊಂಡೊಯ್ದು ಬಾನ ಸೇರಿದ ನೀನು
ಹಿರಿದು ಹಿರಿದಾಗುತ್ತೆ ಮೈಮರೆತು, ಓ ಮುಗಿಲೆ!
ಉಪಕೃತಿಯ ನೆನೆಯದಲೆ ಕಡಲಮೇಲೆಯೆ ನಿಂತು
ಗರ್ಜಿಸುವೆ ಏಕಿಂತು ಸಾಕು ಸಾಕು.

ಲೋಕವೇ ನಿನ್ನಿಂದ ಜೀವಿಪುದು ಮಾರುತನೆ!
ಮುಗಿವುದೈ ಈ ಲೋಕ ಅಗಲಿ ನಿನ್ನನು ಬೇಗ.
ಶಿವನೊಂದು ಮೈ ನೀನು ಶುದ್ಧಾತ್ಮನಾಗಿದ್ದು
ನರುಗಂಪು ನಾತವೆನ್ನದೆ ಹೊರುವೆಯೇಕೈ.

ತಲ್ಲಣಿಸಿ ನಿಲ್ಲದಿರು, ನಡೆ ಮುಂದೆ, ಓ ಪಾಂಥ
ಗುಡುಗು ದನಿಯಾಲಿಸುತೆ ಬೆದರಿದೆಯ ಮರುಳೆ,
ದನಿಯದುವೆ, ಕೇಳಯ್ಯ, ಜಗದ ಕಷ್ಟವ ಕಳೆದು
ಜೀವನವ ಹದಗೊಳಿಪ ಮುಗಿಲ ನಿನದ.

ರೂಪು ನೋಡಲು ಕತ್ತಿಯಂಚಿನಂತೆಯೆ ಚೂಪು,
ಕ್ರೌರ್ಯವೋ ಕೆರಳಿರುವ ಸರ್ಪಕ್ಕೆ ಸಮನು.
ಒಳಹೊಕ್ಕು ನೋಡಿದರೆ ಕೆಲಜನರ ಮಾನಸವು
ದ್ರಾಕ್ಷೆಗಿಂತಲು ಮೆದುವು, ಹಿರಿಯರವರೆ.

ರತ್ನಗಳ ರಾಶಿಯೇ ತುಂಬಿಹುದು ನಿನ್ನಲ್ಲಿ,
ನಿನ್ನೊಡಲ ನೋಟವೋ ನೀಲಮೇಘೋಪಮವು.
ಏನಾದರೇಂ, ಜಲಧಿ! ಬಾಯಾರಿ ಬಂದವರ
ಬಳಲಿಕೆಯ ಬೇಗೆಯನು ಕಳೆವೆಯೇನೈ.

ಅನ್ಯೋಕ್ತಿಗಳು ಕನ್ನಡ ಸಾಹಿತ್ಯದಲ್ಲಿ ಅಲ್ಲೊಂದು ಇಲ್ಲೊಂದು ಪ್ರಾಸಂಗಿಕವಾಗಿ ಕಂಡುಬರುತ್ತವೆ. ಕನ್ನಡ ಕವಿಗಳು ತಮ್ಮ ಕಾವ್ಯಗಳಲ್ಲಿ ಒಕ್ಕಣಿಸಿರುವ ಕುಕವಿನಿಂದೆಗಳೆಲ್ಲ ಒಂದು ವಿಧದಲ್ಲಿ ಅನ್ಯೋಕ್ತಿಗಳೆಂದೆ ಹೇಳಬಹುದು. ಹಿಂದೆಯೆ ಹೇಳಿದಂತೆ ಗಾದೆಗಳು, ದಾಸರ ಪದಗಳಲ್ಲಿ ಕೆಲವು, ವಚನ ಸಾಹಿತ್ಯದಲ್ಲಿ ಕೆಲವು ಅನ್ಯೋಕ್ತಿ ಜಾತಿಗೆ ಸೇರುತ್ತವೆ. ಅವುಗಳಲ್ಲಿ ಪ್ರಾಯಿಕವಾಗಿ ಸೂಚ್ಯಾರ್ಥವೇ ಮೂಡಿ, ಕವಿಗಳ ಲಕ್ಷ್ಯ ಪ್ರಕಾರಾಂತರವಾಗಿ ತೋರುವುದೇ ಇದಕ್ಕೆ ಕಾರಣ.

ಜನ್ನನ 'ಯಶೋಧರ ಚರಿತೆ', ನಾರಣಪ್ಪನ 'ಭಾರತ', ದುರ್ಗಸಿಂಹನ 'ಪಂಚತಂತ್ರ' ಮೊದಲಾದ ಕಾವ್ಯಗಳಲ್ಲಿ ಒಂದೊಂದು ಕಡೆ ಅನ್ಯೋಕ್ತಿ ಪದ್ಯಗಳು ಕಂಡುಬರುತ್ತವೆ. ಇತರ ಕಾವ್ಯಗಳಲ್ಲಿ ಇಲ್ಲವೆಂದಲ್ಲ. ದಿಙ್ಮಾತ್ರ ಪ್ರದರ್ಶನಕ್ಕಾಗಿ ಈ ಕಾವ್ಯಗಳನ್ನು ಸೂಚಿಸಿದೆ.

'ಯಶೋಧರ ಚರಿತೆ'ಯಲ್ಲಿ, ಮಾವುತನಿಗೆ ತನ್ನ ಹೆಂಡತಿ ಮನಸೋತಿರುವಳೆಂಬ ಅಸಹ್ಯವಾರ್ತೆಯನ್ನು ಯಶೋಧರನು ತನ್ನ ತಾಯಿಗೆ ತಿಳಿಸುವಾಗ ಅನ್ಯೋಕ್ತಿಯಿಂದ ಹೀಗೆ ಹೇಳುತ್ತಾನೆ:—

"ಪೊಂದಾವರೆಗೊಳದಂಚೆ ಕನಲ್ದಾವಲ್‌ಗೊಳದೊಳಗೆ ನಲಿವ ಕನಸಂ ಕಂಡೆನ್."

ನಾರಣಪ್ಪನ 'ಭಾರತ'ದಲ್ಲಿ, ಕೀಚಕನಿಂದ ಅವಮಾನಿತೆಯಾದ ದ್ರೌಪದಿ ವಿರಾಟನ ಸಭೆಗೆ ಬಂದು, ಗೋಳಿಟ್ಟು ದೂರುತ್ತಾಳೆ. ಬಾಣಸಿಗ ಭೀಮ ಕನಲಿ, ವಿರಾಟನ ವಂಶವನ್ನೆ ತೊಡೆದುಹಾಕುತ್ತೇನೆ ಎಂಬ ಅರ್ಥವನ್ನು ಸೂಚಿಸುವಂತೆ ಬಳಿಯ ಹೆಮ್ಮರವೊಂದನ್ನು ದುರದುರನೆ ನೋಡುತ್ತಾನೆ. ಕಂಕಭಟ್ಟ ಧರ್ಮನಂದನ ಅವನ ಇಂಗಿತವನ್ನು ತಿಳಿದು,

ಈ ತರುವ ಮುರಿಯದಿರು ಸುಜನ
ವ್ರಾತಕಾಶ್ರಯ ಊರ ಹೊರಗೆ ಮ
ಹಾತಿಶಯ ತರುವುಂಟು ನಿನ್ನಯ ಬಾಣಸಿನ ಮನೆಗೆ

ಎಂದು ಹೇಳುತ್ತಾನೆ.

'ಹಿತೋಪದೇಶ'ದಲ್ಲಿ ಅನೇಕ ಅನ್ಯೋಕ್ತಿಗಳಿವೆ. ಅವುಗಳಲ್ಲಿ ಒಂದಾದ ಮಶಕಾನ್ಯೋಕ್ತಿ ಇದು :

ಮೊದಲೊಳಡಿವಿಡಿದು ಬೆನ್ನೊಳು
ಪುದಿದಡಗನೆ ತಿಂದು, ಕಿವಿಯೊಳಿನಿ ನುಡಿಗುಡುತುಂ ।
ಮುದದಿಂ ರಂಧ್ರವ ತೋರುತೆ
ಬೆದರದೆ ಪುಗುತಿಹುದು ಕಳನ ತೆರದೊಳು ಮಶಕಂ

ಈಗ್ಗೆ ಸುಮಾರು ೧೬೫ ವರ್ಷಗಳ ಹಿಂದಿನವನಾದ ಶಾಲ್ಯದ ಕೃಷ್ಣರಾಜ ಕವಿ* 'ಪ್ರಾಣೇಶ್ವರ ಶತಕ' ಎಂಬ ಕಾವ್ಯ ಬರೆದಿದ್ದಾನೆ. ಇದು ವೇದಾಂತಕ್ಕೆ ಸಂಬಂಧಿಸಿದ ಅನ್ಯೋಕ್ತಿ ಶತಕವಾಗಿದೆ. ಇದರಿಂದ ಒಂದು ಪದ್ಯವನ್ನು ಉದಾಹರಿಸಬಹುದು :—

ಕಾಕವ್ಯೂಹಗಳಿಂದ ಕೂಡಿ ಘನಬರ್ಬೂರಾಸುರಾಗ್ರ ದ್ರುಮೋ
ಚ್ಛೂಕಾವೇಷ್ಟಿತ ಕಾಯಮಾಗಿ ವಿಪದಸ್ತಿತ್ಯುದ್ಭವಂಬೆತ್ತು ನಾ
ನಾ ಕಾಠಿನ್ಯಲತಾನುಷಂಗದೆ ನಿಬಂಧಂಬಟ್ಟ ಮಾಕಂದ ಶಾ
ಖಾಕಾಂಕ್ಷಾಮತಿಯೇಕೆ ಕೋಕಿಲವೆ ನೋಡಿತ್ತೆನ್ನ ಪ್ರಾಣೇಶ್ವರಾ

ಈ ಒಂದು ಶತಕ ಮಾತ್ರ ವೇದಾಂತದ್ದಾದರೂ ಅನ್ಯೋಕ್ತಿಗಾಗಿಯೆ ಬರೆದದ್ದಾಗಿದೆ. ಇದನ್ನುಳಿದು ಅನ್ಯೋಕ್ತಿ ಕಾವ್ಯಗಳು ಕನ್ನಡ ಸಾಹಿತ್ಯದಲ್ಲಿ ತೀರಾ ವಿರಳವೆಂದೇ ಹೇಳಬಹುದು.

ವಚನಗಳಲ್ಲಿ ಮತ್ತು ದಾಸ ಸಾಹಿತ್ಯದಲ್ಲಿ ಅನ್ಯೋಕ್ತಿ ಧ್ವನಿ ತೋರುವ ಕೆಲವು ಉದಾಹರಣೆಗಳು :—

ಎನಿಸು ಕಾಲ ಕಲ್ಲು ನೀರೊಳಗಿದ್ದರೇನು
ನೆನೆದು ಮೃದುವಾಗಬಲ್ಲುದೆ?
ಜಲವ ತಪ್ಪಿದ ಮತ್ಸ್ಯ ಬದುಕುವುದೆ? —ಬಸವಣ್ಣ

---

* ಈ ಕವಿ ಯಾರೆಂಬುದು ಇನ್ನೂ ಜಿಜ್ಞಾಸೆಯಲ್ಲಿದೆ. 'ಪ್ರಾಣೇಶ್ವರ ಶತಕ' ಮಾತ್ರ ಹಿಂದೆ ಕೆಲಕಾಲ ನಡೆಯುತ್ತಿದ್ದ 'ಬೆಳಕು' ಮಾಸಪತ್ರಿಕೆಯಲ್ಲಿ ಪ್ರಕಟವಾಗಿತ್ತು.

ಗಿರಿಯಲ್ಲಲ್ಲದೆ ಹುಲ್ಲುಮೊರಡಿಯಲ್ಲಾಡುವುದೆ ನವಿಲು?
ಕೊಳನಲ್ಲದೆ ಕಿರಿವಳ್ಳಕ್ಕೆಳಸುವುದೆ ಹಂಸೆ?
ಮಾಮರ ತಳಿತಲ್ಲದೆ ಸ್ವರಗೈವುದೆ ಕೋಗಿಲೆ?
ಪರಿಮಳವಿಲ್ಲದ ಪುಷ್ಪಕ್ಕೆಳಸುವುದೆ ಭ್ರಮರ? —ಮಹಾದೇವಿಯಕ್ಕ

ಕರದೊಳು ಜಪಮಣಿ ಬಾಯೊಳು ಮಂತ್ರವು
ಅರಿವೆಯ ಮುಸುಕನು ಮೋರೆಗೆ ಹಾಕಿ
ಪರಸತಿ ಪರಧನಕಾಗಿ ಚಿಂತಿಸುತೆ
ಪರಮ ವೈರಾಗ್ಯಮೂರ್ತಿಯೆನಿಸುವುದು
(ಉದರ ವೈರಾಗ್ಯವಿದು) —ಪುರಂದರದಾಸ

ಕೆಸರೊಳು ತಾವರೆ ಪುಟ್ಟಲು ಅದ ತಂದು
ಬಿಸಜನಾಭನಿಗರ್ಪಿಸಲಿಲ್ಲವೆ?
ಹಸುವಿನ ಮಾಂಸದೊಳುತ್ಪತ್ತಿ ಕ್ಷೀರವು
ವಸುಧೆಯೊಳಗೆ ಭೂಸುರರುಣಲಿಲ್ಲವೆ?
(ಕುಲ ಯಾವುದು ಸತ್ಯ ಸುಖವುಳ್ಳ ಜನರಿಗೆ) —ಕನಕದಾಸ

ಅನ್ಯೋಕ್ತಿ ಧ್ವನಿಯುಳ್ಳ ಒಂದೆರಡು ಗಾದೆಗಳು:—
'ಕೋಣನ ಮುಂದೆ ಕಿನ್ನರಿ ಬಾರಿಸಿದಂತೆ'
'ಅತ್ತೆಗೊಂದು ಕಾಲ ಸೊಸೆಗೊಂದು ಕಾಲ'
'ಕುಂಬಾರನಿಗೊಂದು ವರುಷ, ದೊಣ್ಣೆಗೊಂದು ನಿಮಿಷ'

ಹೀಗೆ ಅನ್ಯೋಕ್ತಿಗಳಲ್ಲಿ ಕವಿಯ ಜೀವನದ ಪರಿಸ್ಥಿತಿಗಳು ಕಂಡುಬರುವುದೆ ಅಲ್ಲದೆ, ಹೇಳುವ ಸಂದರ್ಭ ಮತ್ತು ಕವಿಯ ಇಂಗಿತದಂತೆ ಅವುಗಳಲ್ಲಿ ಪ್ರಕಾರಾಂತರ ವಾದ ಎಷ್ಟೋ ಸೂಕ್ಷ್ಮಾರ್ಥಗಳು ತೋರಿಬರುತ್ತವೆ. ಜನಜೀವನದ ಎಷ್ಟೋ ಗುಣದೋಷಗಳು ಅನ್ಯೋಕ್ತಿಗಳಿಂದ ಪ್ರಕಟವಾಗಿ ಅವುಗಳನ್ನು ಓದುವ ಅಥವಾ ಕೇಳುವ ಜನತೆಯ ಮೇಲೆ ಒಳ್ಳೆಯ ಪರಿಣಾಮವಾಗುತ್ತದೆ. ಅನ್ಯೋಕ್ತಿ ಸಾಹಿತ್ಯ ಬೆಳೆಯುವುದು—ಬೆಳೆಯುವ ಲಕ್ಷಣ ಕಂಡುಬರುತ್ತಿದೆ—ಸಾಹಿತ್ಯಕ್ಕೆ ಒಂದು ಭೂಷಣವಲ್ಲದೆ ಜನತೆಯ ಶ್ರೇಯಸ್ಸಿಗೂ ಸಹಕಾರಿ. ಕನ್ನಡ ಕಾವ್ಯಗಳಲ್ಲಿ ಅಲ್ಲಲ್ಲಿ ಅಡಗಿರುವ ಅನ್ಯೋಕ್ತಿಗಳನ್ನೆಲ್ಲ ಪುಸ್ತಕ ರೂಪವಾಗಿ ಪ್ರಕಟಿಸಿದರೆ ಮಹೋಪಕಾರ ವಾಗುತ್ತದೆ.

ಈ ಬರಹವನ್ನು ಮುಗಿಸುವ ಮುನ್ನ, ಜಗನ್ನಾಥಕವಿಯ ಒಂದು ಅನ್ಯೋಕ್ತಿ ಯನ್ನು ಸಹೃದಯರ ಅವಗಾಹನೆಗೆ ತರಬಯಸುತ್ತೇನೆ.

ಆಸೆಯಲಿ ಬಳಿವಂದ ದುಂಬಿಯಿದನೆಂದಿಗೂ
ಕಡೆಗಣಿಸಬೇಡಯ್ಯ ಕರಿರಾಜಕುವರ
ತಾಳುವರು ತಲೆಯಲ್ಲಿ ದಾನಸುಂದರರಾದ
ದ್ವಿಪಧುರ್ಯರಿದನೆಂದು ಮನ್ನಿಸಯ್ಯ

**ಮೋಟಗಾನಹಳ್ಳಿ ಸುಬ್ರಹ್ಮಣ್ಯಶಾಸ್ತ್ರಿ**

## ಕವಿಯ ಆನಂದಾನುಭೂತಿ - ಪ್ರಕೃತಿ

ವಿಷ್ಣುಕ್ರಾಂತಿಯ ಹೂ ಬಲು ಸಣ್ಣದು. ಹಚ್ಚಸೆಯ ಗರುಕೆಯ ನಡುವೆ ಪರಿಮಿತ ನೀಲದ ಈ ಹೂವು ಬೇಕು ಎಂದು ನೋಡುವವರ ಕಣ್ಣಿಗೆ ಅಂದವಾಗಿ ತೋರುತ್ತದೆ. ಅಷ್ಟೇನೂ ಅಪೂರ್ವವಾದದ್ದಲ್ಲ. ಚಿಕ್ಕಂದಿನಲ್ಲಿ ನಾವು ಅದನ್ನು ಅರಸಿಕೊಂಡು ಹೋದುದುಂಟು. ಹೂವಿನ ಅಂದಕ್ಕಲ್ಲ; ಸೊಪ್ಪನ್ನು ಗುರುತಿಸುವುದಕ್ಕಾಗಿ. ಈಗ ಅದನ್ನು ನೋಡಿದಾಗಲೆಲ್ಲಾ ಶ್ರೀನಿವಾಸರು "ಕಾಡು ಹೂಗಳು" ಎಂಬ ಪದ್ಯದಲ್ಲಿ ಈ ಹೂವನ್ನು ಕುರಿತು ಹೇಳಿರುವ ಮಾತು ನೆನಪಿಗೆ ಬರುತ್ತದೆ. "ವಿಷ್ಣುಕ್ರಾಂತಿಯ ಪರಿಮಿತ ನೀಲ!" ಈ ಮಾತುಗಳಲ್ಲಿ ವಿಶಿಷ್ಟವಾದದ್ದೇನೂ ಇಲ್ಲ. ನಿರಲಂಕಾರವಾದ ನೆನಕೆಯ ಮಾತುಗಳಿವು. ಆದರೆ ಇವನ್ನು ನೆನೆದು ಹೂವನ್ನು ನೋಡಿದರೆ ಮನಸ್ಸಿಗೇನೋ ಒಂದು ತರದ ಸಂತೋಷವಾಗುತ್ತದೆ. ಹೂವಿಗೂ ನಮಗೂ ಒಂದು ತರದ ಮಧುರ ಬಾಂಧವ್ಯ ಬೆಳೆದು ಅದು ನಮಗೆ ಹತ್ತಿರವಾದಂತೆ ತೋರುತ್ತದೆ. ನಮ್ಮರಿವಿನಲ್ಲಿ ಅದರ ಸ್ಪಷ್ಟತೆ ಹೆಚ್ಚುತ್ತದೆ. ಒಂದು ದಿನ ಆ ಕವಿಯ ಮನಸ್ಸು ಸಾಮ್ಯಸ್ಥಿತಿಯಲ್ಲಿದ್ದಾಗ ಈ ಹೂವು ಅವರ ಕುಶಲದೃಷ್ಟಿಗೆ ಬಿದ್ದು ಭಗವಂತನ ನಿರಂತರಾನಂದದ ಒಂದು ತುಂತುರಾಗಿ ಕಂಡಿತು. ಮರೆಯ ದೈವ ಇಂತು ಚೆಲುವಿನ ರೂಪದಲ್ಲಿ ತನ್ನ ನಲವನ್ನು ಹರಿಸದಿದ್ದರೆ ನಮ್ಮ ಗತಿ ಏನು! ಎಂದು ಕವಿ ಈ ಕಾಡು ಹೂಗಳ ಅಭಾವದ ಸ್ಥಿತಿಯನ್ನು ಕುರಿತು ಆಲೋಚಿಸುತ್ತಾ ತಲ್ಲಣಗೊಳ್ಳುತ್ತಾರೆ. ಈ ಅನುಭೂತಿಯನ್ನು ಸರಳವಾದ ಮಾತಿನಿಂದ ನಮ್ಮ ಹೃದಯಕ್ಕೆ ಹರಿಸಿ ಈ ಹೂಗಳ ಅಂದವನ್ನೂ ಬೆಲೆಯನ್ನೂ ನಮ್ಮರಿವಿನಲ್ಲಿ ಹೆಚ್ಚಿಸುತ್ತಾರೆ. ಈ ಪದ್ಯ ಓದಿ ಕವಿಯ ಅನುಭವವನ್ನು ಪಡೆಯುವುದಕ್ಕೆ ಮುಂಚೆ ನಮಗೂ ಈ ಲೋಕಕ್ಕೂ ಇದ್ದ ಸಂಬಂಧ ಒಂದು ರೀತಿಯದು; ಇದನ್ನು ಓದಿ ಕವಿಯ ಅನುಭವವನ್ನು ಪಡೆದಮೇಲೆ ಈ ಪ್ರಪಂಚವು ನಮ್ಮರಿವಿನಲ್ಲಿ ಎಷ್ಟೊಂದು ವಿಸ್ತಾರವನ್ನು ಹೊಂದುತ್ತದೆ! ಸೃಷ್ಟಿಯಲ್ಲಿ ನಾವು ಅಸಡ್ಡೆಗೈದ ಎಷ್ಟು ಹೂಗಳು ನಮಗೆ ಆತ್ಮೀಯವಾಗಿಬಿಟ್ಟವು — ಕವಿಯ ಮಾತಿನ ಬೆಳಕಿನಲ್ಲಿ ನಮಗೆ ಎಂಥ ಚೆಲುವು ಕಂಡಿತು!

ಕವಿಯ ಕಾವ್ಯದ ರೀತಿ ಹೆಳವನಿದ್ದಲ್ಲಿಗೆ ಹೊಳೆ ಹರಿದು ಬರುವ ರೀತಿ. ವಿಜಿಗೀಷುವಾದ ಶೂರನ ದೆಸೆಯಿಂದ ಪುರಜನರಿಗೆ ಕೂತ ಕಡೆಯಲ್ಲಿ ಸಿರಿ ಸಂಪತ್ತು ಒದಗುವಂತೆ, ತನ್ನ ವಿಶೇಷ ಗುಣೋಪಯುಕ್ತ ಶಿಕ್ಷಿತಾಂತಃಕರಣದಿಂದ ಕವಿ ಲೋಕದಲ್ಲಿ ತನ್ನ ಬಾಳಿಗೆ ಗೆದ್ದುಕೊಳ್ಳುವ ಆನಂದ ಕಾವ್ಯಮುಖವಾಗಿ ನಮ್ಮೆಡೆಗೆ ಹರಿದು ನಮ್ಮ ಆತ್ಮದಾರಿದ್ರ್ಯವನ್ನು ನೀಗಿಸುತ್ತದೆ. ಈ ಹೂಗಳನ್ನು ನೋಡಿ ಅಮಿತಾನಂದವನ್ನು ಕವಿ ಹೊಂದಿದರೆಂಬುದು ಸ್ಪಷ್ಟ. ಆದುದರಿಂದಲೇ ತೌರಿನಿಂದ ಹೊರಟ ಹೆಣ್ಣಿನಂತೆ ಬಹುಮತವಾಗಿ ಅವರ ಹೃದಯದಿಂದ ಶಬ್ದವಾಹನವೇರಿ ಛಂದೋಗಮನದಲ್ಲಿ ಹೊರಟುಬರುವ ಈ ಹೂಗಳ ಸಂಭ್ರಮಕ್ಕೆ ಮನತೆತ್ತು ನಾವು ಸುಖಿಗಳಾಗಿ ಹೀಗೆಂದುಕೊಳ್ಳುತ್ತೇವೆ: "ಕವಿಯ ಆನಂದವಲ್ಲಿ ಅಲ್ಲವೇ

ಇವುಗಳ ಜನನ— ಸಹೃದಯ ಹೃದಯಾಭಿಮುಖವಾಗಿ ಅಲ್ಲವೇ ಇವುಗಳ ಗಮನ — ತದಾನಂದವಲ್ಲವೇ ಇವುಗಳ ಶಮನ?" ಇಂತು ತನ್ನ ಬಾಳಿಗೆ ಕಳೆತಂದು ಹೃದಯ ಹೃದಯಕ್ಕೂ ಹರಿದು ಅಕ್ಷಯ್ಯವಾಗುವ ತನ್ನ ಆನಂದವನ್ನು ಕವಿ ಯಾವ ಕೌಶಲದಿಂದ ಪಡೆಯುತ್ತಾನೆ—ಕೆಲಸಕ್ಕೆ ಬಾರದ ಸಾಮಾನ್ಯ ವಸ್ತು ಈತನಿಗೆಂತು ರಸಪ್ರದವಾಯಿತು, ಈ ಮನಮೋಹನ ವಿದ್ಯೆಯ ರಹಸ್ಯವೇನು? ಕಾವ್ಯ ಕುತೂಹಲಿಗೆ ಈ ಪ್ರಶ್ನೆ ಸಹಜವಾದದ್ದು.

ಆನಂದ ಶಬ್ದೋಚ್ಚಾರದಿಂದ ನಾವು ಈಗ ಆಧ್ಯಾತ್ಮಶಾಸ್ತ್ರಕ್ಕೆ ಕಾಲಿಟ್ಟಂತಾಯಿತು. ವ್ಯಕ್ತಸೃಷ್ಟಿಯ ಆದ್ಯಂತಿಮ ಸ್ವರೂಪವನ್ನು ಕುರಿತು ಈ ಶಾಸ್ತ್ರ ಪ್ರವರ್ತಿಸುತ್ತದೆ. ಸ್ವಾಂತದಿಂದ ಪರಾಂತವನ್ನು ಅರಿತುಕೊಳ್ಳ ಬಯಸುವ ಪ್ರಯತ್ನವಿದು. ಚೇತನರು ತಾವು ಪಡುವ ವಿವಿಧಾನುಭೂತಿಗಳಿಂದ ಸೃಷ್ಟಿಯ ಮೂಲಭಾವ ಇಂತಿರಬೇಕು, ಅಂತಿರಬೇಕು ಎಂದು ಊಹಿಸುತ್ತಾರೆ. ಈ ಅನುಭೂತಿಗಳ ಸಮಗ್ರ ರಸ ಆನಂದವಾದರೆ ಸೃಷ್ಟಿಯ ಮೂಲ ಸ್ಥಾಯಿಭಾವ ಆನಂದವೆಂದು ಅವರು ಕೈಯೆತ್ತಿ ಹೇಳುತ್ತಾರೆ. ವಿಷಾದವಾದರೆ ಇವುಗಳ ಮೂಲ ದುಃಖವೆನ್ನುತ್ತಾರೆ. ಆದರೆ ಈ ಸೃಷ್ಟಿಯ ವೈವೀಮಾಯೆ ದುರತ್ಯಯವಾದುದು. ಏಕೆಂದರೆ ಒಂದೇ ವಸ್ತು ಸುಖಪ್ರದವಾಗುವಂತೆ ದುಃಖವನ್ನೂ ತರಬಲ್ಲದು. ಈ ಕಾಡು ಹೂಗಳು ನಮ್ಮ ಬಂಧುವೊಬ್ಬನ ಹೊಲದಲ್ಲೊ ಹಿತ್ತಿಲಿನಲ್ಲೊ ವಿಜೃಂಭಿಸಿದ್ದರೆ, ಅವುಗಳ ದರ್ಶನವು ನಮಗೆ ವಿಷಾದವನ್ನುಂಟುಮಾಡುತ್ತಿತ್ತು. ಅಷ್ಟೇಕೆ ಇದೇ ಕವಿ ಹಾಳೂರನ್ನು ನೋಡಿ ವಿಷಾದಾವಿಷ್ಟರಾದಾಗ ಹೇಳಿರುವ ಈ ಮಾತು ನಿದರ್ಶನಕ್ಕೆ ಸಾಕು: "ಅಗಳಿನಲಿ ನೀರಿಲ್ಲ ಅದರ ತಳದಿ। ಮಿಗೆ ಬಳೆದ ಮುಳ್ಳ ಗಿಡ ಪೊದೆಯಾಗಿದೆ— ಹಾಳೂರು ನೋಡು ಹಾಳು ಗೋಡೆಗಳ। ಹಾಳಾದ ಹೊಲಮಡಿಯ ಹಾಳು ಗುಡಿಯು." ಈ ಸಂದರ್ಭದಲ್ಲಿ ತನ್ನ 'ಬಣ್ಣದ ಹುಚ್ಚ' ಇಲ್ಲಿಯೂ ಹರಡಿರಬಹುದಾದ 'ರೋಜಿ'ಯ ಪುಷ್ಪೋತ್ಸವವು ಕವಿಗೆ ಮೃತ್ಯುದೇವತೆಯ ವಿಕಟಾಟ್ಟಹಾಸವಾಗಿ ತೋರಿರಬಹುದೇ ಹೊರತು ಭಗವಂತನ ಆನಂದದ ಪ್ರತೀಕದಂತಲ್ಲ. "ಕಾಡು ಹೂಗಳು ಜಗವನು ಗೆಲಿದವು ಎಂದು ಕೂಗುತಿದೆ ಇಲ್ಲಿ ತುತೂರಿ" ಎಂಬ ಮಾತನ್ನು ಇಲ್ಲಿಗೆ ಅನ್ವಯಿಸಿದರೆ ಎಂಥ ವಿಷಾದವನ್ನು ಧ್ವನಿಸುತ್ತದೆ. ಹಾಗಾದರೆ ಈ ಕಾಡು ಹೂಗಳ ಮೂಲ ಸ್ಥಾಯಿಭಾವ ಏನೆಂದು ಹೇಳೋಣ? ಅಂತೆಯೇ ಸೃಷ್ಟಿ. "ಅತ್ತರಳುವುದು ನಗಲು ನಗುವುದು ಎತ್ತಣದು ಈ ಸೋಜಿಗ!" ಎಂದು ತೀ. ನಂ. ಶ್ರೀ. ಅವರು ಹೊಳಲನ್ನು ಕುರಿತು ಹೇಳಿದ ಮಾತಿನಲ್ಲೇ ಪ್ರಕೃತಿಯನ್ನು ವರ್ಣಿಸಬೇಕು. "ಎತ್ತಣದು ಈ ಸೋಜಿಗ!" ಇದು ಈ ವಿಷಯದಲ್ಲಿ ಕೊನೆಯದಾಗಿ ನಿಲ್ಲುವ ಮಾತು. ಇದರ ಆದಿ ಅವ್ಯಕ್ತ. ಅಂತವೂ ಅವ್ಯಕ್ತ. ಆದರೆ ಮಾನವರಿಗೆ ಇಷ್ಟು ಮಾತ್ರ ಗೊತ್ತು— ತಮ್ಮ ಅತ್ಯಂತ ಮಂಗಳಕರವಾದ ಸ್ಥಿತಿ ಆನಂದವೆಂದು. ಇದನ್ನು ಪ್ರಕೃತಿನಿರೀಕ್ಷಣದಿಂದ ಪಡೆಯಬಹುದೆಂದು ಕವಿಗಣ ಮೊದಲಿನಿಂದ ಸಾರುತ್ತಿದೆ. ನಮ್ಮ ಕಾಳಿದಾಸ ಕವಿ ಕ್ಷೀರಸಾಗರದಲ್ಲಿ ವಿಷ್ಣುವನ್ನು ದೇವತೆಗಳು ಕಂಡರೆಂದು ವರ್ಣಿಸುವಾಗ ಅವರು ಪಟ್ಟ ಸುಖ ಅರಳುವ ಕಮಲದ ಕಣ್ಣುಳ್ಳ, ಎಳಬಿಸಿಲಿನ ಚೀನಾಂಬರವನ್ನು ಹೊದ್ದಿರುವ

ಶರತ್ಕಾಲದ ಹಗಲನ್ನು ಕಂಡ ಸುಖದಷ್ಟಿತ್ತು ಎಂದೂ ಯೋಗಿಗಳಿಗೆ ಪರಬ್ರಹ್ಮವು ಕೊಡುವ ದರ್ಶನಾನಂದ ಈ ಸುಖಕ್ಕೆ ಮಿಗಿಲಿಲ್ಲವೆಂದೂ ಧ್ವನಿಕೊಡುವ ಹಾಗೆ 'ರಘುವಂಶ'ದಲ್ಲಿ ವರ್ಣಿಸಿದ್ದಾನೆ. ವೇದದೃಷ್ಟ ದೇವತೆಗಳೆಲ್ಲರೂ ನಮ್ಮ ಋಷಿಗಳು ಪ್ರಕೃತಿನಿರೀಕ್ಷಣದಿಂದ ಪಟ್ಟ ಭಯ, ವಿಸ್ಮಯ, ಪ್ರೇಮ ಭಾವಗಳ ರುಚಿಯುಳ್ಳ ಆನಂದರಸದಲ್ಲಿ ಜನ್ಮವೆತ್ತಿದವರು. ಪ್ರಕೃತಿ ಎಂದ ಕೂಡಲೇ ನಮ್ಮ ಮನಸ್ಸಿಗೆ ಬರುವ ವರ್ಡ್ಸ್‌ವರ್ತ್ ಕವಿಯ ಕಾವ್ಯದಲ್ಲಿ ಈ ಆನಂದವನ್ನು ಕುರಿತ ವಿಪುಲವಾದ ಜಿಜ್ಞಾಸೆ ಇದೆ. "ಛಂದಸ್ಸಿನಲ್ಲಿ ನಡೆಗೊಳುವ ಮನೋಹರವಾದ ಎಲ್ಲ ಶಬ್ದ ಸಮುಚ್ಚಯಕ್ಕಿಂತಲೂ, ಪುಸ್ತಕದಿಂದ ಲಭ್ಯವಾಗುವ ಸಮಸ್ತ ಜ್ಞಾನಭಂಡಾರ ಕ್ಕಿಂತಲೂ, ಎಲೆ ಭವವನ್ನು ತಿರಸ್ಕರಿಸುವ ಬಾನಾಡಿಯೇ, ನಿನ್ನ ಕೌಶಲ ಮಾತ್ರ ಕವಿಗಿದ್ದಿದ್ದರೆ" ಎಂದು ಷೆಲ್ಲಿಕವಿ ಸ್ಕೈಲಾರ್ಕ್ ಹಕ್ಕಿಯನ್ನು ಕುರಿತು ಹೇಳುವ ಮಾತಿನಲ್ಲಿ ಕವಿಯ ಹೃದಯದಲ್ಲಿ ಆನಂದವೊಂದಿದ್ದರೆ ಸಾಕು; ಮಿಕ್ಕದ್ದು ತನಗೆ ತಾನಾಗಿ ಹಿಂಬಾಲಿಸಿ ಬರುತ್ತದೆ— ಎಂಬ ಸ್ಪಷ್ಟಧ್ವನಿ ಕೇಳಬರುತ್ತದೆ. ಆಧುನಿಕ ರಾದ ನಮ್ಮ ಕವಿಗಳ ಕಾವ್ಯದಲ್ಲಂತೂ ಇದು ವಾಚ್ಯವಾಗಿ, ರಾಗಪೂರ್ವಕವಾಗಿ ನಿರೂಪಿತವಾಗುತ್ತಿದೆ. ಆದುದರಿಂದ ಆಧುನಿಕ ಕಾವ್ಯವನ್ನು ಕುರಿತು ಹೇಳ ಹೊರಟವರು ಈ ಆನಂದಜಿಜ್ಞಾಸೆಯನ್ನು ಅನಿವಾರ್ಯವಾಗಿ ಮಾಡಬೇಕಾಗು ತ್ತದೆ. ಏಕೆಂದರೆ ಈ ಕಾವ್ಯದಲ್ಲಿ ಪ್ರಕೃತಿ ಆತ್ಮೋದಯದ ಸಾಕ್ಷಿಯಂತೆ ನಿರೂಪಿತವಾಗುತ್ತಿದೆ.

ಭಾವಿಸಿ ನೋಡಿದರೆ ಇದು ಅತ್ಯಾಶ್ಚರ್ಯಕರವಾದ ಸಂಗತಿ—ಪ್ರಕೃತಿಯಲ್ಲಿ ಮುಕ್ಕಾಲು ಮುಳುಗಿರುವ ಮಾನವ ಅರಿವಿನುದ್ದ ಮೇಲೆದ್ದು ತೇಲಿ ತನ್ನಿರೀಕ್ಷಣ ದಿಂದ ವಿವಿಧಾನುಭೂತಿಯನ್ನು ಪಡೆಯುತ್ತಿರುವುದು! ಈತನ ಕರಣವಿಷಯ ಸಂಸರ್ಗದಿಂದ ಎಂಥ ವಿಸ್ಮಯಜನಕವಾದ ಪ್ರಕಾಶನ ಶಕ್ತಿಯುದಿಸಿತು! ಈ ತೇಜೋನಿರ್ಮಾಣಕ್ಕೆಂದೇ ಸೃಷ್ಟಿ ಈ ತೆರ ದ್ವೈಧೀಭಾವವನ್ನು ಹೊಂದಿತೋ ಏನೊ! ಮನದಲ್ಲಿ ಜ್ಞಾನ, ಬುದ್ಧಿಯಲ್ಲಿ ವಿಜ್ಞಾನ, ಹೃದಯದಲ್ಲಿ ಭಾವ ಹೀಗೆ ಈ ಬೆಳಕು ಕುಡಿವರಿಯುವ ರೀತಿ. ಈ ಬೆಳಕಿನ ಸಕಲಾಂಶುಪೂರ್ಣಸ್ವರೂಪ ಆನಂದ. ಇದನ್ನು ವ್ಯಂಜಿಸುವ ವಸ್ತುವನ್ನು ಮನಸ್ಸು ಸತ್ಯವೆನ್ನುತ್ತದೆ; ಹೃದಯ ಸುಂದರವೆನ್ನುತ್ತದೆ. ಚೇತನರ ಅನುಭವಗಳೆಲ್ಲಾ ಹೀಗೆ ದ್ವಿಮುಖವಾದುವು. ನಾವು ಕವಿಯನ್ನು ಗುರುತಿಸುವುದು ಆತನ ಅನುಭವಗಳ ಆನಂದಸುಂದರತೆಯಿಂದ.

ಆನಂದ ಹೃದಯದಲ್ಲಿ ತೋರುವ ಬೆಳಕು. ಇದೇ ಆತ್ಮದ ಕಾಂತಿ. ನಮಗೆ ತಿಳಿದ ಭೌತಿಕ ತೇಜಸ್ಸು, ದೈಹಿಕ ಪ್ರಾಣ, ಮನೋಬುದ್ಧಿಜನ್ಯ ಜ್ಞಾನ ವಿಜ್ಞಾನ ಈ ಬೆಳಕುಗಳಿಗಿಂತ ಭಿನ್ನವಾದುದು; ತತ್ಪುಷ್ಟವಾದುದು. ತೇಜಃಪ್ರಗತಿಯ ಚರಮಸ್ವರೂಪವಿದು. ಇದು ನಷ್ಟವಾದರೆ ದುಃಖ; ತಿರೋಹಿತವಾದರೆ ವಿಷಾದ; ಸಮಸ್ತ ಭಾವಗಳೂ ಇದರ ವರ್ಣಾಂಶುಗಳು. ಸೌಂದರ್ಯ ಇದು ಬಾಹ್ಯದಲ್ಲಿ ಹೊಳೆಯುವ ರೀತಿ. ಆತ್ಮದಲ್ಲಿ ಇದು ಪ್ರಜ್ವಲಿತವಾದರೆ ನಮ್ಮ ಸಮಸ್ತ ಕರಣಗಳೂ ಪ್ರಬುದ್ಧವಾಗುತ್ತವೆ; ಪ್ರಜ್ವಲಿತವಾಗುತ್ತವೆ. ಇದನ್ನು ಹೃದಯದಲ್ಲಿ ಪಡೆಯ ಬೇಕೆಂಬೇ ಸಕಲ ಚೇತನರ ಪ್ರವೃತ್ತಿ. ನೋಡದ ಅಂಚಿನಲ್ಲಿ ಮಿಂಚು ಹೊಳೆದು

ಹೋಗುವಂತೆ ಮರ್ತ್ಯಹೃದಯದಲ್ಲಿ ಆಗಾಗ ಹೊಳೆದು ಹೋಗುವ ಚಂಚಲವೂ ಸ್ವತಂತ್ರವೂ ಆದ ಈ ಆನಂದಪ್ರದೀಪ್ತಿಯನ್ನು ತಮ್ಮ ಆತ್ಮವರ್ತಿಯನ್ನಾಗಿ ಮಾಡಿಕೊಳ್ಳಲು ಎಷ್ಟು ಸಾಧಕರು, ಎಷ್ಟು ಶಾಸ್ತ್ರಗಳು! ಮಾನವನಿಗೆ ಇದರ ಮೊದಲರಿವು ಹುಟ್ಟಿದುದು ತಾನೇ ಹೇಗೆ—ಮಾತ್ರಾ ಸ್ಪರ್ಶದಿಂದ. ಚಕ್ಕಮುಕ್ಕಿಯ ಕಲ್ಲಿನ ಸಂಘರ್ಷಣದಿಂದ ಕಂಡ ಬೆಂಕಿಯನ್ನು ಅದೊಂದು ಬಗೆಯಿಂದಲೇ ಪಡೆವ ದಾರಿಯನ್ನು ಹೊರತು ಬೇರೆ ದಾರಿ ಕಾಣದಿದ್ದ ಶಿಲಾಯುಗದ ಅಪ್ರಗಲ್ಭರಂತೆ ಮುಕ್ಕಾಲು ಮೂರುವೀಸ ಪಾಲು ಮಾನವರು ಆನಂದವನ್ನು ಪಡೆಯುವುದಕ್ಕೆ ಇನ್ನೂ ವಿಷಯಾಸಕ್ತಿಗಿಂತ ಬೇರೆ ದಾರಿ ಕಾಣರು. ಇದಕ್ಕೆ ಮುಂದುವರಿದ ರೀತಿ ಅನಾಸಕ್ತನ ರೀತಿ. ಅವನ ಮತವಿಷ್ಟು—ನಿನ್ನ ಸುಖಕ್ಕೆ ನೀನು ಹೊಣೆಯಾಗು. ಆಗಮಾಪಾಯಿಗಳಾದ ಮಾತ್ರಾಸ್ಪರ್ಶಗಳನ್ನು ನೆಚ್ಚಬೇಡ. ಅವು ಮಾಡುವ ಆತ್ಮಪ್ರಚೋದನವನ್ನೇ ಸಾಧನದಿಂದ ಪಡೆ—ಎಂದು. ಸಂಯಮಿಯ ರೀತಿ ತಳಿರಿನಲ್ಲಿ ಮೈದೋರಿದ ಮಧು ಮಿಡಿಯಾಗಿ ಮೊಗ್ಗಿಗಿಳಿಯುವ ರೀತಿ. ಇದಕ್ಕೂ ಮುಂದುವರಿದ ಬಗೆ ಯೋಗಯುಕ್ತಿಯ ಕೌಶಲ. ತಪಸ್ಸಿನಿಂದ ಪಕ್ವನಾದವನು ಲೋಕದಲ್ಲಿ ಆಸಕ್ತನಾಗುವ ರೀತಿ. ಅನಾಸಕ್ತಿಯಿಂದ ಇಂದ್ರಿಯಾರಾಮನು ಅಂತರಾರಾಮನಾಗುತ್ತಾನೆ. ಯೋಗಾಸಕ್ತಿಯಿಂದ ಅಂತರಾರಾಮನು ಬ್ರಹ್ಮಾರಾಮನಾಗಿ ಪೂರ್ಣವಿಕಾಸವನ್ನು ಪಡೆಯುತ್ತಾನೆ. ಅಂತರಾರಾಮನ ಸುಖ ಅವನೊಬ್ಬನಿಗೆ ತಿಳಿವಾದೀತೋ ಏನೊ—ಇದೂ ಸಂದೇಹಾಸ್ಪದವೇ. ಏಕೆಂದರೆ ಅನಾಸಕ್ತನ ಸುಖವನ್ನು ವ್ಯಂಜಿಸುವ ವಸ್ತು ಯಾವುದೂ ಇಲ್ಲ. ಆದರೆ ಬ್ರಹ್ಮಾರಾಮನಿಗೆ ಎಲ್ಲಾ ವಸ್ತುವೂ ರಸದರ್ಶಕವಾಗುತ್ತದೆ. ಈ ಸಾಕ್ಷಿತ್ವವನ್ನು ಅಪೇಕ್ಷಿಸಿಯೇ ಆತ ಲೋಕದಲ್ಲಿ ಅನುರಕ್ತನಾಗುವುದು. ಆಸಕ್ತನ ರೀತಿ ಸವಾರಿ ಬಾರದೆ ಕುದುರೆಯೇರಿ ನಗೆಗೇಡಾದ 'ರಂಗ ಸೆಟ್ಟಿ'ಯ ರೀತಿ. ಅನಾಸಕ್ತನದು ಕುದುರೆಯ ಹಮ್ಮನ್ನು ಮುರಿದು ಪಳಗಿಸುವ ಚಿರಶಿಕ್ಷಣ ನೀತಿ. ಈತನ ಆಸಕ್ತಿ ಇಂದ್ರಿಯಾಶ್ವಗಳನ್ನು ಹದಕ್ಕೆ ತರುವುದರಲ್ಲಿಯೇ ಮುಗಿಯುತ್ತದೆ. ಇವರಿಬ್ಬರಿಗಿಂತ ಕುಶಲ ಬ್ರಹ್ಮಯೋಗ ಯುಕ್ತ. ಈತ ಅಶ್ವಹೃದಯವನ್ನು ಬಲ್ಲ ರಥಿಕನಂತೆ ಹಾಯಾಗಿ ತನ್ನ ಜೀವರಥೋತ್ಸವವನ್ನು ಲೋಕದಲ್ಲಿ ನಡಸುತ್ತಾನೆ. ಅನಾಸಕ್ತ ಚಿರಸಾಧಕ; ಯೋಗಿ ಸ್ಥಿರಸಿದ್ಧ. ಇಬ್ಬರಿಗೂ ಆತ್ಮಾಪೇಕ್ಷೆ. "ನಾಯಮಾತ್ಮಾ ಬಲಹೀನೇನ ಲಭ್ಯಃ" ಎಂದು ತಪಸ್ವಿ. "ಯಮೇವೈಷ ವೃಣುತೇ ತೇನ ಲಭ್ಯಃ", "ತ್ಯಾಗವಿಲ್ಲದ ತಪಸ್ಸು ವ್ಯರ್ಥ"—ಎಂದು ಯೋಗಿ. ಗೀತಾಕಾರರು ಇವರಿಬ್ಬರಿಗೂ ಸುಖದೊರಕುತ್ತದೆ ಎಂದು ಹೇಳಿ ತಪಸ್ವಿಗಳಿಗಿಂತಲೂ ಜ್ಞಾನಿಗಳಿಗಿಂತಲೂ ಯೋಗಿ ಹೆಚ್ಚಿನವನೆಂದೂ ಈತನು ಅನುಭವಿಸುವ ಸುಖ ಅಕ್ಷಯ್ಯವೆಂದೂ ಹೇಳುತ್ತಾರೆ. ಕವಿಯದು ಯೋಗಿಯ ರೀತಿ. ಈತ ಲೋಕದಲ್ಲಿ ಆಸಕ್ತನಾಗುವುದು ಅಹಂಕಾರ ಭಂಗೇಚ್ಛೆಯಿಂದ; ಪರಾಭವದ ಸುಖಕ್ಕಾಗಿ.

ನಮ್ಮಾತ್ಮವನ್ನು ಉಲ್ಬದಂತೆ ಯಾವಾಗಲೂ ಮುಚ್ಚಿಕೊಂಡು ಅದರ ಕೋಶದಂತಿರುವ ಅಹಂಕಾರ—ಇದು ಆತ್ಮಪೋಷಕವೂ ಹೌದು, ಶೋಷಕವೂ ಹೌದು. ಇದರ ಉದ್ಭಿಜ್ಜ ಆನಂದ. ಇದರ ಭಂಗವಾದ ಹೊರತು ಆನಂದ

ಹುಟ್ಟಿದು. ಸ್ವಭಾವತಃ ಸಕಲಾಂಶುಪೂರ್ಣವಾದ ಆನಂದಕ್ಕೆ ಕೆಲವು ವೇಳೆ ರಾಗ ದ್ವೇಷಗಳ ಏಕವರ್ಣ ಪ್ರಾಚುರ್ಯವನ್ನು ತೋರುವುದು ಇದೇ. ಇದು ಬಲಿತಷ್ಟು ಹೊರವಾದಷ್ಟು ತತ್ಪ್ರೀದ್ಭಿನ್ನ ಆನಂದದ ಕಾಂತಿ ಹೆಚ್ಚು. ಇದು ಬಂಜರಾದಷ್ಟು ಇದರ ಬೆಳೆಯಾದ ಆನಂದದ ಹುಲುಸು ಕಡಮೆ. ಎಳಮಕ್ಕಳು ಆನಂದಿಗಳಾಗಿರುವುದಕ್ಕೆ ಅವರ ಅಹಂಕಾರ ಎಳತನದಲ್ಲಿರುವುದೇ ಕಾರಣ. ಅನಾಸಕ್ತಿ ಇದು ಪುಷ್ಟವಾಗುವ ಸ್ಥಿತಿ. ಆಸಕ್ತಿ ಇದು ಭಂಗವಾಗುವ ರೀತಿ. ಯಾವುದು ನಮ್ಮ ಅಹಂಕಾರವನ್ನು ಭಂಗಮಾಡುತ್ತದೋ ಅದರಲ್ಲಿ ನಮಗೆ ಆಸಕ್ತಿ. ಮಿಕ್ಕುದರಲ್ಲಿ ನಮಗೆ ಅನಾದರ. ಇದು ಭಂಗವಾಗಬೇಕಾದರೆ ಭಯದಿಂದ, ವಿಸ್ಮಯದಿಂದ ಅಥವಾ ಪ್ರೇಮದಿಂದ. ಅದಕ್ಕೇ ನಮಗೆ ಪ್ರತಾಪವಂತರಲ್ಲಿ ಆಸಕ್ತಿ, ಅವರಿಗೆ ನಮ್ಮನ್ನು ಕಂಡರೆ ಅನಾದರ. ಅವರ ವಿದ್ಯೆ ಬುದ್ಧಿಗಳಲ್ಲಿ ನಮಗೆ ತೀರ ಆದರ; ನಮ್ಮ ವಿದ್ಯೆ ಬುದ್ಧಿಗಳಲ್ಲಿ ಅವರಿಗೆ ತೀರ ಅನಾಸಕ್ತಿ. ಏಕೆಂದರೆ ಅವರಿಂದ ನಮ್ಮ ಅಹಂಕಾರ ಪದೇ ಪದೇ ಭಂಗವಾಗುತ್ತದೆ. ನಮ್ಮಿಂದ ಅವರದು ಬೆಳೆಯುತ್ತದೆ. ಈ ಅಹಂಕಾರದ ಸಂತತವಾದ ಭಂಗದಿಂದ ಅದು ಪುಷ್ಟಿಯನ್ನು ಕಳೆದುಕೊಂಡು ನಷ್ಟವಾಗುವ ಸ್ಥಿತಿಗೆ ಬರುವುದರಿಂದ ನಮ್ಮ ಆತ್ಮದ ಕಾಂತಿ ಕುಂದುತ್ತದೆ. ಅದಕ್ಕೇ ನಮ್ಮಲ್ಲಿ ಕೆಲವರು ಆತ್ಮದ ರುಚಿಯನ್ನು ಕಂಡ ಮಹಾತ್ಮರಿಗೆ ತಮ್ಮ ಜನಗಳಲ್ಲಿ ಆತ್ಮಾಭಿಮಾನವನ್ನು ಭೀತಿ ನಿವೃತ್ತಿಯಿಂದ ಬೆಳಸುವ ಪ್ರವೃತ್ತಿ. ಅಭಿಮಾನಶಾಲಿಗಳಿಗೆ ಅದನ್ನು ಉಳಿಸಿಕೊಳ್ಳಬೇಕೆಂಬ ಛಲ. ಅಹಂಕಾರ ಬೆಳೆದಷ್ಟೂ ಅದು ಪೋಷಿಸುವ ಆತ್ಮ ಬಲಗೊಳ್ಳುತ್ತದೆ. ಇದನ್ನು ಮೂರ್ಖತೆಗೆ ಹೋಲಿಸಬಾರದು. ಮೂರ್ಖತೆ ಮಂದವಾದ ಮನಸ್ಸನ್ನು ಸೂಚಿಸುತ್ತದೆ. ಅಹಂಕಾರ ಪ್ರಾಣತುಂಬಿ ತುಳುಕುವ ಜ್ಞಾನಪುಷ್ಟವಾದ ಬದುಕನ್ನು ಸೂಚಿಸುತ್ತದೆ. ಮಾನವರು ತಮ್ಮ ಬಾಳು ಬೆಳೆದಂತೆಲ್ಲಾ ಇದಕ್ಕೆ ಬಾಗಿಲು ಕಿಟಕಿಗಳನ್ನು ಕೆಲವು ನಿರ್ದಿಷ್ಟವಾದ ಆಸಕ್ತಿಗಳಿಂದ ಮಾಡಿಕೊಳ್ಳುತ್ತಾರೆ—ಆನಂದದರ್ಶನಾಪೇಕ್ಷೆಯಿಂದ. ಮತ, ಧರ್ಮ, ಬ್ರಹ್ಮ, ಶಿವ, ವಿಷ್ಣು, ಜಿನ, ಬುದ್ಧ, ಸ್ರಕ್ಚಂದನ ವನಿತಾ ಇತ್ಯಾದಿ ಆಸಕ್ತಿಗಳು. ಇವರ ಹೃದಯಕ್ಕೆ ಇವೇ ಪ್ರವೇಶ ದ್ವಾರಗಳು. ಭೋಗಿಗಳಿಗೆ ಅಲಭ್ಯಲಾಭೇಚ್ಛೆ ಅವರ ದುಸ್ಸಹವಾದ ಅಹಂಕಾರ ಭಂಗಕ್ಕಾಗಿ. ಜ್ಞಾನಿಗಳಿಗೆ ಭಕ್ತಿ ಬೇಕಾದುದೂ ಇದಕ್ಕೇನೆ. ಭಕ್ತರ ಮುಕ್ಕಾಲು ಮೂರುವೀಸ ಪಾಲು ವಿರಹಗೀತಗಳು ಈ ಅಹಂಕಾರದ ಪ್ರಾಬಲ್ಯದಿಂದ ಹುಟ್ಟಿದುವು. ಇವರು ಎಷ್ಟೆಷ್ಟು ನೈಚ್ಯಾನುಸಂಧಾನ ಮಾಡಿಕೊಂಡರೂ ಇದು ಆನಂದಕ್ಕೆ ದಾರಿಗೊಡದು. ಷೆಲ್ಲಿ ಕವಿಯ ಮನೋಹರವಾದ ಗೀತೆಗಳ ಹಿಂದೆ "ಮೋಡ ಕವಿದ ಹಗಲಿನಲ್ಲಿ ಪ್ರಬುದ್ಧವೂ ಸುಪ್ತವೂ ಅಲ್ಲದ ಸ್ಥಿತಿಯಲ್ಲಿ ಅರೆ ಬಿರಿದು ಅರೆ ಮುಗಿದ ಸ್ಥಲಕಮಲದಂತಿರುವ" ಆತ್ಮಕಮಲವನ್ನು ನೋಡುತ್ತೇವೆ. ಆತನ ಪುಷ್ಟವಾದ ಇಂದ್ರಿಯ ಮನೋಬುದ್ಧಿ ದಳಗಳ ಹೊರಸುತ್ತು ತೆರೆದರೂ ಒಳಸುತ್ತಿನ ಅಹಂಕಾರ ಮಾತ್ರ ಬಿರಿಯದೆ ರಾಹುಗ್ರಸ್ತವಾದ ಸೂರ್ಯನ ಹಗಲಿನಂತೆ ಈ ಕವಿಯ ಆತ್ಮ ಆನಂದದ ಪ್ರಪೂರ್ಣದೀಪ್ತಿಯನ್ನು ಪಡೆಯಲೊಲ್ಲದು. ಪ್ರಕೃತಿ ಈತನ ಕೊರಗಿಗೆ ಮಾತ್ರ ಸಾಕ್ಷಿಯಾದಳು. ವರ್ಡ್ಸ್‌ವರ್ತ್

ಕವಿಯ ಹಿರಿಯ ಬದುಕಿನಲ್ಲೂ ಇದು ತನ್ನ ಪರಾಕ್ರಮವನ್ನು ತೋರದೆ ಬಿಟ್ಟಿಲ್ಲ. ಆತ ಪ್ರಕೃತಿಗೆ ಮಾಡುವ ವಿಪುಳ ಗುಣಾರೋಪಣದಲ್ಲಿ ನಾವು ಅವಿನಯವನ್ನು ಕಾಣುತ್ತೇವೆ. ಕೆಲವುವೇಳೆ ಈತನನ್ನು ಕಂಡು ಪ್ರಕೃತಿ ಇಲ್ಲ ನಾಚಿರಬೇಕು, ಇಲ್ಲ ಮರೆಯಲ್ಲಿ ನಕ್ಕಿರಬೇಕು. ಪ್ರಿಯನು ಪ್ರೇಯಸಿಗೆ ವಶವಾಗುವುದು ಆಕೆಗೆ ಅವನ ಅಹಂಕಾರವನ್ನು ಭಂಗಮಾಡುವ ವಿಸ್ಮಯಕರವಾದ ಕೌಶಲವಿರುವುದರಿಂದ. ಸಮಸ್ತ ಕಲೆಯ ಮೂಲದಲ್ಲಿ ಈ ಅಹಂಕಾರ ಭಂಗೇಚ್ಛೆಯಿದೆ. ಇನಿದಾದ ನಾದಗಳು, ಬಗೆಬಗೆಯ ಬಣ್ಣದ ರೂಪ ಲೇಖನಗಳು, ನರ್ತನದ ವಿವಿಧಾಂಗ ಭಂಗಿಗಳು, ಇವುಗಳು ಚಿನ್ನದ ತುಪ್ಪುಳವನ್ನು ಸುತ್ತುವರಿದ ಘಟಸರ್ಪವನ್ನು ಅತಿಕ್ರಮಿಸಲೆಳಸುವ ಜೇಸನಿನಂತೆ ನಮ್ಮ ಈ ಅಹಂಕಾರವನ್ನು ಕ್ರಮಿಸಲೆಳಸುವ ಕೌಶಲವನ್ನು ತೋರುತ್ತವೆ. ಸ್ವಾಭಿಮಾನವುಳ್ಳ ಜನಾಂಗದವರು ಕಲೆಗಳನ್ನು ಬೆಳಸಿಕೊಳ್ಳುವುದು ದುಸ್ಸಹವಾದ ಈ ಅಹಂಕಾರವನ್ನು ಹದ್ದಿನಲ್ಲಿಡುವುದಕ್ಕಾಗಿ. ಈ ಕಲೆಯ ದಳದವರು ಜನಾಂಗದ ಆತ್ಮದರ್ಶಕರು; ಅಂತೆಯೇ ಅವರ ಅಭಿಮಾನ ಪ್ರದರ್ಶಕರು. ಈ ದಳದ ಕವಾಯಿತ್ತಿನ ರೀತಿ ಇದರ ಫಲಾಫಲದ ನೀತಿ ಕಲಾ ಶಾಸ್ತ್ರ ಸೌಂದರ್ಯಶಾಸ್ತ್ರಗಳಲ್ಲಿ ಬೆಳೆಯುತ್ತದೆ, ಬದಲಾಗುತ್ತದೆ. ಇದರ ಧ್ಯೇಯ ಅಹಂಕಾರಭಂಗಕಾರಕವಾದ ಭಯ ವಿಸ್ಮಯ ಪ್ರೇಮ ಭಾವೋತ್ಪತ್ತಿ.

ಉನ್ನತವಾದ ಪರ್ವತಸ್ತೋಮ ಮಧ್ಯದಲ್ಲಿ, ವಿಶಾಲವಾದ ಬಯಲಿನೊಳಗೆ, ನಿಬಿಡಾರಣ್ಯವಾದ ಕಂದರ ದೇಶದಲ್ಲಿ, ಎರಡು ದಡಗಳನ್ನೂ ತುಂಬಿಕೊಂಡು ಭೋರ್ಗರೆದು ಹರಿವ ನದಿಗಳೆಡೆ, ನಿಸ್ಸೀಮವಾದ ಸಾಗರತೀರದಲ್ಲಿ, "ಭೀಮ ಸುಂದರ ಬೃಹದ್ರೂಪ"ವಾದ ಜಲಪ್ರಪಾತದಿದಿರು ನಾವು ಆನಂದಿಗಳಾಗುವ ಮರ್ಮ"— ಇಲ್ಲಿ ನಾವು ನಮ್ಮ ಅಹಂಕಾರಭಂಗವನ್ನು ಹೊಂದುತ್ತೇವೆ.

"ನನ್ನನತಿಕಿರಿದು ಮಾಡೆ ನೀನುನ್ನತಾಕಾಶವನು ಸೃಷ್ಟಿಸಿರುವೆ
ಎನ್ನಹಂಕಾರವನು ಹಂಗಿಸಲು ನೀನು ನಿನ್ನಹಂಕಾರವನು ತೋರುತಿರುವೆ"

ಎಂಬ ನುಡಿ ಈ ಭಾವವನ್ನು ಚೆನ್ನಾಗಿ ಬಣ್ಣಿಸುತ್ತದೆ. ಅದಕ್ಕೇ ರಸವ್ಯಂಜಕ ವಾದ ಇಂಥ ಸ್ಥಳಗಳನ್ನು ನಾವು ಸೌಂದರ್ಯದ ಬೀಡೆಂದು ಆದರಿಸುತ್ತೇವೆ. ಆದರೆ ಒಂದು ಹಕ್ಕಿ ಕೂಗಿದರೆ, ಕಾಗೆ ಕುಣಿದರೆ, ಹೂವು ಬಿರಿದರೆ, ತಾರೆ ಮೂಡೆ, ಗಾಳಿಯಾಡೆ ಸಾಕು ಆನಂದವೆಂದು ರಸೋತ್ಕರ್ಷವನ್ನು ತೋರಿಸುವ ಕವಿಯ ಮರ್ಮವೇನು? ಇಷ್ಟು ಸ್ವಲ್ಪ ಉತ್ತೇಜನ ಸಾಕು ಆತನ ಅಹಂಕಾರ ರಸಾನು ಭೂತಿಗೆ ದಾರಿಗೊಡುವುದಕ್ಕೆ, ಇದರ ಸಂಕೋಚನ ವಿಕಾಸನ ಶಕ್ತಿ ಆತನಿಗೆ ಪೂರ್ಣವಾಗಿ ಸ್ವಾಧೀನವಾಗಿದೆ ಎಂದು ತೋರುವುದಕ್ಕೆ. ಈ ಶಕ್ತಿ ಆತನಿಗೆ ಬಂದದ್ದು ವಿನಯವೆಂಬ ದಿವ್ಯಗುಣದಿಂದ. ನಿಜವಾದ ಕವಿ ಹುಟ್ಟಿನಿಂದ ಕುಶಲ ವಾದ ಕರಣಗಳನ್ನೂ ಪ್ರಬಲವಾದ ಸ್ವಾಭಿಮಾನವನ್ನೂ ಪಡೆದುಬರುವಂತೆ, ವಿನಯದ ಅಸದೃಶಗುಣವನ್ನೂ ಪಡೆದುಬರುತ್ತಾನೆ. ಇದರಿಂದ ಅವನ ಅಂತಃ ಕರಣ ಯಾವಾಗಲೂ ಸಸ್ನೇಹವಾಗಿರುತ್ತದೆ. ಚೇತನ ಪ್ರಾಣ ಜ್ಞಾನ ವಿಜ್ಞಾನಾಂಶ ಭೂತವಾದ ಪ್ರಖರ ಆನಂದದೀಪ್ತಿಯನ್ನು ಬೇಗ ಪಡೆಯುತ್ತದೆ.

ವಿನಯ ಸೌಜನ್ಯತೆಯಲ್ಲ. ಸಂಘ ಸಮಾಜದಲ್ಲಿ ತೋರುವ ನಯದ ನಡೆವಳಿಕೆಯಲ್ಲ. ಸ್ವೇಚ್ಛಾನುಸಂಧಾನವಂತೂ ಅಲ್ಲ. ಸಂಪೂರ್ಣವಾಗಿ ವಸ್ತುವಶವಾಗುವಿಕೆ ವಿನಯ. ಇದನ್ನು ಗೀತಾಕಾರರು ಬ್ರಹ್ಮನಿರ್ವಾಣವೆನ್ನುತ್ತಾರೆ. ಏಕಗುಣಾನುರಕ್ತಿ, ಏಕಪದಾರ್ಥಾನುರಕ್ತಿ ಕಾಮ ವ್ಯಾಮೋಹವೆನ್ನಿಸಿಕೊಳ್ಳುತ್ತದೆ. ಇವೆನ್ನದೆ ಅವೆನ್ನದೆ, ಇವಕ್ಕೆನ್ನದೆ ಅವಕ್ಕೆನ್ನದೆ ಸಮಸ್ತ ಪದಾರ್ಥಗಳಲ್ಲಿಯೂ ಸಂಪೂರ್ಣಾನುರಕ್ತಿ ವಿನಯವೆನ್ನಿಸಿಕೊಳ್ಳುತ್ತದೆ. ಅನಾಸಕ್ತನು ವಿನಯಶೀಲನಾದರೆ ಮಾತ್ರ ಬ್ರಹ್ಮಯೋಗಯುಕ್ತನಾಗುತ್ತಾನೆ. ಅನಾಸಕ್ತಿ ಇಂದ್ರಿಯದಮನವನ್ನು ಸೂಚಿಸಿದರೆ, ವಿನಯ ಅಹಂಕಾರ ಶಮನವನ್ನು ಸೂಚಿಸುತ್ತದೆ. ಗಾಂಧಿಯವರು ಇದನ್ನು ಕುರಿತ ಉಪನಿಷತ್ತಿನಂತಿರುವ ಒಂದು ದಿವ್ಯ ಪ್ರಬಂಧದಲ್ಲಿ ಇದು ದೈವದತ್ತವಾದ ಗುಣವೆಂದೂ, ಇದನ್ನು ಅಭ್ಯಾಸಮಾಡುವುದು ಕಷ್ಟವೆಂದೂ ಹೇಳುತ್ತಾರೆ. ಶ್ರೀ ರಾಮಕೃಷ್ಣ ಪರಮಹಂಸರು ಶ್ರೀ ತೋತಾಪುರಿಯವರಿಗಿಂತ ಹಿರಿಯ ಯೋಗಿಗಳಾದುದು ಈ ವಿನಯ ಗುಣದಿಂದ. ಮಹಾತ್ಮರು ಎಲ್ಲರಿಗಿಂತ ಹಿರಿಯರಾಗಿರುವುದು ಈ ವಿನಯಶಾಲೀನತೆಯಿಂದ. ವಿಕಾಸೋನ್ಮುಖವಾದ ಹೃದಯದಲ್ಲಿ ಈ ವಿನಯ ತಾನಾಗಿ ಬರುತ್ತದೆ. ಈ ಗುಣ ಪೂರ್ಣವಾಗಿಲ್ಲದವನು ಹಿರಿಯ ಕವಿ ಆಗಲಾರ. ಈ ಗುಣವೇ ಇಲ್ಲದವ ಕವಿಯೇ ಆಗಲಾರ. ಅಪಕ್ವಾತ್ಮರಿಗೆ ಅಲಭ್ಯವಾದ ಇದನ್ನು ಪಕ್ವಾತ್ಮರು ಉಳಿಸಿಕೊಳ್ಳುವುದೂ ಸಂತತವಾದ ಎಚ್ಚರದಿಂದ ಮಾತ್ರ ಸಾಧ್ಯ. ಏಕೆಂದರೆ ಇದು ಬಹು ಬೇಗನೆ ವ್ಯಸನಕ್ಕೆ ತಿರುಗುತ್ತದೆ. ಇದನ್ನು ಕಾಪಾಡಿಕೊಳ್ಳುವ ಮರ್ಮವನ್ನು ವಿಶಾಲಬುದ್ಧಿಗಳಾದ ವ್ಯಾಸರು ಈ ರೀತಿಯಾಗಿ ಹೇಳುತ್ತಾರೆ: “ಇದು ಸತ್ಯ, ಇದು ಅನೃತ, ಇದು ಧರ್ಮ, ಇದು ಅಧರ್ಮ, ಎಂಬ ನಿರುಕಾದ ಮನೋಧರ್ಮವನ್ನು ಬಿಡು; ಮನದ ಕುಡಿಯನ್ನು ಆಗಾಗ ಮಿಡಿದುಕೋ, ಇದನ್ನು ಬಿಟ್ಟೆನೆಂಬ ಅಹಂಕಾರವನ್ನೂ ಪದೇ ಪದೇ ಬಿಡುತ್ತಿರು”. ಸಕಲ ವಸ್ತುಗಳಲ್ಲಿಯೂ ರವಿಯಂತೆ ತನ್ನ ಆತ್ಮದ ಕಾಂತಿಯ ಭಾವಾಂಶುವೊಂದನ್ನು ಕಾಣುವಿಕೆ—ಅಂದರೆ ಎಲ್ಲಾ ವಸ್ತುವನ್ನೂ ತನ್ನ ಆತ್ಮಾನಂದದ ಸತ್ಯಕ್ಕೆ ಸಾಕ್ಷೀಭೂತವಾಗುವಂತೆ ಮಾಡಿಕೊಳ್ಳುವಿಕೆ, ಬಹುವರ್ಣ ಪೂರ್ಣವಾದ ಆನಂದವನ್ನು ಹೃದಯದಲ್ಲಿ ಹೊಂದಿ ವಿನಯದಿಂದ ಹೊರಗೆಡಹಬಲ್ಲ ಕವಿಗೆ ಮಾತ್ರ ಸಾಧ್ಯ. ಚಿನ್ನ ರನ್ನ ತುಂಬಿದ ಪ್ರಾಕಾರಗಳನ್ನು ಅನಾಸಕ್ತಿಯಿಂದ ದಾಟಿ, ಮಧ್ಯದಲ್ಲಿದ್ದ ಭೂತಾಧಿಷ್ಠಾನವಾದ ದೀಪವನ್ನು ಕರಗತ ಮಾಡಿಕೊಂಡ ಅಲ್ಲಾವುದೀನನಿಗೆ ಸಮಸ್ತ ಭಾಗ್ಯವೂ ವಶವಾದಂತೆ, ಅನಾಸಕ್ತಿಯಿಂದಲೂ ವಿನಯ ಸಂಪತ್ತಿಯಿಂದಲೂ ಕರಣ ಮನೋಬುದ್ಧಿಗಳನ್ನು ದಾಟಿ, ಅಹಂಕಾರವನ್ನು ವಶಮಾಡಿಕೊಂಡ ನಿಃಸ್ಪೃಹನಾದ ಕವಿಗೆ ಸೃಷ್ಟಿಯೊಲಿದು ವಶವಾಗುತ್ತದೆ. ಇಂಥವನಿಗೇ ಆತ್ಮ ತನ್ನ ಹೃದಯವನ್ನು ಬಿಚ್ಚಿ ತೋರುವುದು. “ನನ್ನ ಹಾಡು ನಿನ್ನ ಕಣ್ಣಿನ ಪಾಪೆಯಲ್ಲಿ ಕುಳಿತು ನಿನ್ನ ನೋಟವನ್ನು ವಸ್ತುಗಳ ಹೃದಯದೊಳಕ್ಕೊಯ್ಯುತ್ತದೆ”—ಎಂಬ ಮಾತನ್ನು ತನ್ನ ಮಗುವಿಗೆ ತಾಯಿಯೆನ್ನುತ್ತಾಳೆ ರವೀಂದ್ರರ ಒಂದು ಕವನದಲ್ಲಿ. ಪ್ರೇಮಧೀರರಿಗೆ ಸಹಜವಾದ ಮಾತಿದು. “ನನ್ನದೆಲ್ಲವೂ ನಿನ್ನದು; ನಿನಗಾಗಿ ಮಿಕ್ಕದ್ದು ನನ್ನದಾದರೂ ನಿನ್ನದೇ”

ಎಂಬ ವಿನಯದ ಧೀರತ್ಯಾಗ ವಿಪುಲಾತ್ಮನಾದ ಕವಿಗೆ ಮಾತ್ರ ಸಾಧ್ಯ. ಇಂಥವನೇ ಪ್ರಕೃತಿನಿರೀಕ್ಷಣದಿಂದ ಅತ್ಯಂತ ರಸಪ್ರದವಾದ ಅನುಭವಗಳನ್ನು ಪಡೆಯ ಬಲ್ಲವನು. ಏಕೆಂದರೆ ಎಲ್ಲ ವಸ್ತುವೂ ಈತನಿಗೆ ರಸಪರ್ಶಕವಾಗುವುದರಿಂದ ಸುಂದರವಾಗುತ್ತದೆ, ಆತ್ಮಪ್ರಚೋದಕವಾಗುತ್ತದೆ.

ಮಹಾಕವಿಗಳ ಸಮಗ್ರಕಾವ್ಯದಲ್ಲಿ ನಾವು ಈ ವಿನಯವನ್ನು ಕಾಣುತ್ತೇವೆ. ಅಲ್ಲಿ ವ್ಯಂಜಿತವಾದ ವಸ್ತುಗಳೆಲ್ಲವೂ ನಮಗೆ ಸತ್ಯಸುಂದರ. ಇದು ಹಸುರು, ಇದು ಹಳದಿ, ಇದು ನೀಲ, ಇದು ಕೆಂಪು ಎಂದು ಬೆಳಕಿನ ಗುಣವನ್ನು ಅದು ದ್ಯೋತನಮಾಡುವ ಪದಾರ್ಥಕ್ಕೆ ಆರೋಪಣಮಾಡಿ ನಾವು ಹೇಳುವಂತೆ, ಈ ಕವಿಯ ಆತ್ಮಪ್ರಭಾನುಲಿಪ್ತ ವಸ್ತುಗಳ ಗುಣ ಅವುಗಳಿಗೆ ಸಹಜವಾಗಿ ತೋರುತ್ತದೆ. ವಿನಯಶೀಲನಾದ ಕವಿಯ ಕಾವ್ಯದಲ್ಲಿ ಕವಿ ಮರೆಯಾಗುತ್ತಾನೆ, ವಸ್ತು ಸತ್ಯ ವಾಗುತ್ತದೆ. ಚಿದಾಕಾಶದಲ್ಲಿ ಬಪ್ಪಂಪುಪರಿಪ್ಲುತನಾದ ರವಿಯಂಥ ಕವಿತಾರಕೆ ಗಳು ಬಹಳ ವಿರಳ. ಏಕವರ್ಣ ದ್ವಿವರ್ಣ ತಾರೆಗಳೇ ಹೆಚ್ಚು. ಇವುಗಳ ಬೆಳಕಿನಲ್ಲಿ ಆಯಾ ಬಣ್ಣದ ಮತ್ತು ಆ ಸುತ್ತುಮುತ್ತಿನ ಬಣ್ಣಗಳ ವಸ್ತುಗಳು ಕಳೆಗೊಂಡು ಸ್ವರೂಪವನ್ನು ತೋರುತ್ತವೆ. ಮಿಕ್ಕವು ವಿರೂಪವಡೆಯುತ್ತವೆ. ಇಂಥವರ ಕೃತಿ ನಮ್ಮಾತ್ಮದ ಮಂದತೆಯನ್ನು ಕಳೆಯುತ್ತದೆ—ದಿಟ. ಇದೇನೂ ನಾವು ಅಲ್ಪವಾಗಿ ಎಣಿಸಬಹುದಾದ ಗುಣವಲ್ಲ. ಆದರೆ ರಸತೃಪ್ತಿಯನ್ನು ತರಲಾರದು. ನಮ್ಮ ಸತ್ಯಸೌಂದರ್ಯ ತೃಷೆಗೆ ನಾವು ವಿನಯಸಂಪನ್ನನ ಕೃತಿಗೆ ಶರಣುಹೊಗಬೇಕು. ಶ್ರೀನಿವಾಸರು ಆ ಕಾಡು ಹೂಗಳಿಗೆ ಒಲಿದ ರೀತಿ ವಿನಯದ ರೀತಿ. ಅವರ ಸಮಗ್ರಕಾವ್ಯದ ಮರ್ಮ 'ವಿನಯ'. ವಿಷ್ಣುಕ್ರಾಂತಿ ಮುಂತಾದ ಹೂಗಳಿಗೆ ಇವರ ಅಹಂಕಾರ ಎಡೆಗೊಟ್ಟುದನ್ನು ನೆನೆದಾಗ ನನಗೆ ಷೆಲ್ಲಿ ಕವಿಯ "Tender blue-bells at whose birth the sod scarce heaved" ಎಂದು ಒಂದು ಹೂವಿನ ಬಗೆಯನ್ನು ಕುರಿತ ಮಾತು ಜ್ಞಾಪಕಕ್ಕೆ ಬರುತ್ತದೆ. ಸಸ್ನೇಹಾಂತಃಕರಣರಾದ ಅಮಂದಾತ್ಮರ ಹೃದಯದಲ್ಲಿ ಆನಂದ ಹುಟ್ಟುವುದು ಇಷ್ಟು ಕುಶಲವಾದದ್ದು, ಪೂರ್ವವೇದನಾ ರಹಿತವಾದದ್ದು.

'ವಿನಯ'ದಿಂದ ಪ್ರಕೃತಿಯನ್ನು ನೋಡಿದ ಮಹಾತ್ಮರು ಸಾಹಿತ್ಯದಲ್ಲಿ ಬಹಳ ಕಡಮೆ. ನಮ್ಮವರು ಈ ಗುಣದಲ್ಲಿ ಪಾಶ್ಚಾತ್ಯರಿಗಿಂತ ಹಿರಿಯರೆಂದು ತೋರುತ್ತದೆ. ನಮ್ಮ ಸಂಸ್ಕೃತಿಯ ತಳಹದಿಯೇ ಪ್ರಕೃತಿವಿನಯದಲ್ಲಿ. ಕಲ್ಲಿಗೂ ಮರಕ್ಕೂ ಜಲಕ್ಕೂ ಕೈಮುಗಿವ ಜನವಿದೆಂದು ಮಿಕ್ಕವರು ಹಾಸ್ಯಮಾಡುವ ಮಟ್ಟಿಗೆ ನಾವು ಪ್ರಕೃತಿವಿನೀತರು. ಪದ್ಮಮುಖಿ, ಮೀನನೇತ್ರೆ, ಪನ್ನಗವೇಣಿ, ಭೃಂಗಕುಂತಳೆ, ಪಲ್ಲವಾಧರೆ, ಲತಾಂಗಿ, ಮರಾಳಗಮನೆ— ಇತ್ಯಾದಿ ನೂರು ಮಾತುಗಳ ಹಿಂದಿರುವ ಪ್ರಕೃತಿಪ್ರೇಮ ಸಾಧಾರಣವಾದದ್ದಲ್ಲ. ಋಗ್ವೇದದ ಋಷಿಗಳ ಸ್ತುತಿಗಳೂ, ವಾಲ್ಮೀಕಿ, ಕಾಳಿದಾಸ, ಬಾಣ, ರವೀಂದ್ರರ ಪ್ರಕೃತಿ ವರ್ಣನೆಗಳೂ ಸಂಪೂರ್ಣ ರಸತೃಪ್ತಿಯನ್ನು ಕೊಡುತ್ತವೆ. "ದಿನದಿನವೂ ಹುಟ್ಟಿಬಂದರೂ ಈಕೆ ಸನಾತನಳು. ಈಕೆಯ ಮೈಬಣ್ಣ ಒಂದೇಸಮನಿದ್ದು ಕಾಂತಿಗುಂದದು. ಈ ಶುಭದರ್ಶಿನಿ, ಚಿರವಿನೂತನೆ, ಉಷಾದೇವಿ, ನಮ್ಮ

ಆಯುಷ್ಯವನ್ನು ಜೂಜುಗಾರನು ಪಿತ್ತವನ್ನು ಒತ್ತಿಯಿಟ್ಟು ಕ್ಷಯಿಸುವಂತೆ, ಕ್ಷಯಿಸುತ್ತಾಳೆ'' ಎಂಬ ಉಷಾ ಸೂಕ್ತ ವಿಸ್ಮಯದಿಂದ ನಮ್ಮ ಉಸಿರನ್ನು ತಡೆದುಬಿಡುತ್ತದೆ. ''ಪ್ರಸನ್ನವಾದ ಜಲದಲ್ಲಿ ತರುಣ ಸೂರ್ಯನಂತೆ ನಲಿನಗಳು ಪ್ರಕಾಶಿಸುತ್ತಿವೆ. ಇಂದುಮುಖಿ ರಾತ್ರಿ ತಾರೆಕಂಗಳನ್ನು ತೆರೆದು, ಬೆಳುದಿಂಗಳ ಮೇಲುದುವನ್ನು ಹೊದೆದು, ಬಿಳಿಯ ದುಕೂಲವನ್ನು ಉಟ್ಟಿರುವ ನಾರಿಯಂತೆ ಬಂದಳು. ಪಕ್ವವಾದ ನೆಲ್ಲ ತೆನೆಯನ್ನುಂಡು ಸಂತಸಗೊಂಡ ಬೆಳ್ವಕ್ಕಿಯ ಸಾಲು, ಗಾಳಿಯಲ್ಲಿ ಹಾರಾಡುವ ಮಾಲೆಯಂತೆ ಮನೋಹರವಾಗಿ ಆಕಾಶಕ್ರಮಣವನ್ನು ಶೀಘ್ರವೇಗದಿಂದ ಮಾಡುತ್ತಿವೆ''— ಇತ್ಯಾದಿ ವಾಲ್ಮೀಕಿ ಗಿರಿಜನ್ಯ ವರ್ಣನಾ ಪ್ರವಾಹವು ನಮ್ಮ ಮನಸ್ಸಿನ ಮಾಲಿನ್ಯವನ್ನು ಪುಣ್ಯತೀರ್ಥಸ್ನಾನದಂತೆ ಕಳೆಯುತ್ತದೆ. ಪ್ರಕೃತಿಯಲ್ಲಿ ಕಾಳಿದಾಸ ಕವಿ ಕಂಡಷ್ಟು ಆತ್ಮಾಂಶುಗಳನ್ನು ಮತ್ತೊಬ್ಬ ಕವಿ ಕಂಡಿಲ್ಲವೆಂದು ನಮ್ಮ ಭಾವನೆ. ಈತನಿಗೆ ಮಾನವರಲ್ಲಿಯೂ ಪ್ರಕೃತಿಯಲ್ಲಿಯೂ ಸಮಾನ ಪ್ರೇಮ.

''ಜಲವನದಾವಳೀಂಟಳಿರೆದಲ್ಲದೆ ನಿಮ್ಮಯ ಪಾತೆಗಂಬುವಂ
ತಳಿರ್ಗಳ ಕೊಯ್ಯಳಾವಳೊಲವಿಂ ಮಿಗೆ ಸಿಂಗರದಾಸೆಯುಳ್ಳಡಂ''

ಎಂದು ಈತ ವರ್ಣಿಸುವ ಶಕುಂತಳಾ–ಲತೆಗಳಲ್ಲಿ ಯಾರು ಹೆಚ್ಚು ಕೋಮಲರು, ನಾವು ಯಾರನ್ನು ಹೆಚ್ಚು ಆದರಿಸಬೇಕೆಂದು ನನಗಂತೂ ತಿಳಿಯದು. ಮಾನವರು ಮಾನವರಲ್ಲಿ ಪಡುವ ಸಮಸ್ತ ಭಾವರಸಗಳನ್ನೂ ಪ್ರಕೃತಿಯಿಂದಲೂ ಪಡೆಯಬಹುದೆಂದು ನೂರಾರು ಉಪಮೆಗಳಲ್ಲಿ ಈತ ಹೊಳೆಸಿಹೋಗಿದ್ದಾನೆ. ಉದಾಹರಣೆಗಾಗಿ: ಗರ್ಭವತಿ ದಿಲೀಪನ ರಾಣಿ ಸುನಂದೆ ಶರೀರಾಲಸ್ಯದಿಂದ ಅಸಮಗ್ರಭೂಷಣೆಯಾಗಿ ಲೋಧ್ರಪಾಂಡುವಾದ ಮುಖದಿಂದ ಹೇಗೆ ಕಾಣಿಸುತ್ತಿದ್ದಳೆಂದರೆ ''ಮಂದಕಾಂತಿಯುಳ್ಳ ಚಂದ್ರನೊಡಗೂಡಿರುವ ವಿರಳ ತಾರಕೆಯಾದ ಪ್ರಭಾತ ಗರ್ಭವತೀ ಶರ್ವರಿಯಂತೆ.'' ಬ್ರಾಹ್ಮಮುಹೂರ್ತದಿರುಳಿನ ಸುಂದರ ಮಂಗಳ ಸ್ವರೂಪವು ಈ ವರ್ಣನೆಯಲ್ಲಿ ನಮಗೆ ಉದಿಸಿತೆನ್ನಬಹುದು. ಹೀಗೆ ಈ ಮಹಾಕವಿ ಹೇಳುತ್ತಾ ಹೋಗುತ್ತಾನೆ. ಈತ ಶರತ್ಕಾಲದ ಎಳೆಯ ಹಗಲನ್ನು ಕಂಡ ದರ್ಶನದ ಸುಖವನ್ನು ಕುರಿತು ಹಿಂದೆ ಹೇಳಿದ್ದಾಗಿದೆ. ಕಾಳಿದಾಸನ ಕಾಲಕ್ಕೆ ಜನದ ಬಾಳು ಬೀಳಿಗೆ ಬರುವಷ್ಟು ತುಂಬಿ ಬೆಳೆದಿತ್ತು. ಅದಕ್ಕೆ ತಕ್ಕಂತೆ ಕಲೆಯೂ ಬೆಳೆದು ಆಲಂಕಾರಿಕರ ಹಾವಳಿ ಹೆಚ್ಚಿತ್ತು. ಆ ಕಾಲದಲ್ಲೂ ಈ ಕವಿ ತನ್ನಾತ್ಮಕ್ಕೆ ವಂಚನೆಯನ್ನು ಮಾಡಿಕೊಳ್ಳದೆ, ವಿಮರ್ಶಕಗಣಕ್ಕೂ ಅವಿನಯವನ್ನು ತೋರದೆ ಕಾವ್ಯ ಮಾರ್ಗಾನುಕ್ರಮಣವನ್ನು ವಿಸ್ಮಯಕರವಾದ ರೀತಿಯಲ್ಲಿ ಮಾಡಿ ಹಿರಿಯ ಕವಿ ಎಂದೆನಿಸಿಕೊಂಡುದು ಈ ವಿಪುಳಾತ್ಮನ ವಿನಯಸಂಪತ್ತನ್ನು ತೋರುತ್ತದೆ. ಸಂಧಿ ಕಾಲದಲ್ಲಿ ಈತ ವ್ಯಾಸ ವಾಲ್ಮೀಕಿ ಸಮನಾಗುತ್ತಿದನೇನೊ? ಇನ್ನು ಕಲೆ ಬೆಳೆದು ಕಾಡಾದ ಬಾಣನ ಕಾಲವನ್ನು ಏನು ಹೇಳೋಣ? ಆದರೆ ಈತ ನಮ್ಮ ಪಂಪನಂತೆ ಈ ಕಾಡಿನಲ್ಲಿ ಸಲಗನಂತೆ ಓಡಾಡಿದನು. ಮಿಕ್ಕವರು ಶಾಸ್ತ್ರಶರಣರಾದರು. ಬೆಳೆದ ಬಾಳಿನ ಬೇಸರ— ಭೋಗಿಯ ಬೇಸರ— ಬಳಕೆಯ ಅನಾದರ ಜನಕ್ಕೆ ತಗುಲಿತು. ಈ ಜನಕ್ಕೆ ರುಚಿಸುವಂತೆ ಕಾವ್ಯ ನಿರ್ಮಾಣಮಾಡಬಯಸಿ ಕವಿ ಕಷ್ಟಕ್ಕೆ ಗುರಿಯಾದನು. ಅಗ್ನಿಮಾಂದ್ಯಕ್ಕೀಡಾದವರಿಗೆ ರುಚಿಸುವಂತೆ ಪಾಕ

ಮಾಡಬೇಕಾದ ಪಾಚಕನ ಸ್ಥಿತಿ ಕವಿಗೆ ಬಂತು. ಸರಸ್ವತಿ ಕೆಲವು ನಿರ್ದಿಷ್ಟವಾದ ಹರಕೆಗಳನ್ನು ಮಾತ್ರ ಸಲ್ಲಿಸಬಲ್ಲ ದೇವತೆಯಾದಳು. ಈ ದೇವಿಯ ಉತ್ಸವಕ್ಕೆ ಬೇಕಾಗುವ ತೇರಿನಂತೆ ಪ್ರಕೃತಿವರ್ಣನೆಯ ಆಯಕಟ್ಟು ಸ್ಥಿರವಾಯಿತು. ಬೊಂಬೆಯಲ್ಲಿ, ಬಾವುಟದಲ್ಲಿ, ಗಾತ್ರದಲ್ಲಿ, ಎತ್ತರದಲ್ಲಿ, ಸಿಂಗರಿಸುವ ರೀತಿಯಲ್ಲಿ, ಸಾರಥಿ ಕುದುರೆಗಳನ್ನು ಹಚ್ಚುವ ಬಗೆಯಲ್ಲಿ ವ್ಯತ್ಯಾಸವಿರಬಹುದು. ಆದರೆ ಉತ್ಸವದ ಅಚ್ಚುಕಟ್ಟು ಒಂದೇ ರೀತಿಯದು. ಕಾವ್ಯಪ್ರಯೋಜನವೂ ಸ್ಪಷ್ಟ ವಾಗಿ ನಿರ್ದೇಶಿತವಾಯಿತು. ಕಾವ್ಯ ಏತಕ್ಕೆ? ಯಶೋಲಾಭಕ್ಕೆ, ಧನಲಾಭಕ್ಕೆ, ಪಾತಕನಷ್ಟವಾಗಿ ದೇವತಾ ಪ್ರಸಾದ ಲಾಭಕ್ಕೆ, ಆತ್ಮಾನಂದ ಸಾಕ್ಷಿತ್ವಕ್ಕೆ, ಉಪ ದೇಶದ ಕಹಿಯನ್ನು ಸ್ವಾದುವಾಗಿ ಮಾಡುವುದಕ್ಕೆ. ಆದರೆ ಈ ಪಟ್ಟಿಯಲ್ಲಿ 'ಆತ್ಮಾನಂದ ಸಾಕ್ಷಿತ್ವಕ್ಕೆ' ಎಂಬುದು 'ಬೇಸರ ಕಳೆಯುವುದಕ್ಕೆ' ಎನ್ನುವ ಅರ್ಥದಲ್ಲಿ ಮುಗಿಯಿತು. "ಯಂ ಲಬ್ಧ್ವಾ ಚಾಪರಂ ಲಾಭಂ ಮನ್ಯತೇ ನಾಧಿಕಂ ತತಃ" ಎಂಬ ರಸಲಾಭದೃಷ್ಟಿ ಕವಿಗೆ ಹೋಯಿತು. ಕವಿ ಪರಾವಲಂಬಿಯಾದನು. ಅವಾಂತರ ಫಲಗಳೇ ಮುಖ್ಯ ಪ್ರಯೋಜನವಾಗಿ ನಿಂತವು. ಮುಖ್ಯಪ್ರಯೋಜನ ಅವಾಂತರ ಫಲವಾಯಿತು. ದರ್ಶನ ಮತವಾಗುವ, ಕ್ರಾಂತಿ ಸಂಪ್ರದಾಯ ವಾಗುವ ಬಗೆ ಈ ತೆರ.

ಕಾವ್ಯಮಾರ್ಗ ಕ್ರಮಣಕ್ಕೆ, ಕತೆಯ ಹಿನ್ನೆಲೆಗಾಗಿ, ಸಂಚಾರಿ ಭಾವಗಳ ಉದ್ದೀಪ್ತಿಗಾಗಿ ನಮ್ಮ ಹಳಗನ್ನಡ ಕಾವ್ಯದಲ್ಲಿ ಪ್ರಕೃತಿ ಎಂತು ನಿಯೋಜಿತಳಾಗಿ ದ್ದಾಳೆ— ಎಂಬುದನ್ನು ಅರಿಯಬೇಕೆಂಬ ಕುತೂಹಲವುಳ್ಳವರು ಶ್ರೀ. ಡಿ. ಎಲ್. ನರಸಿಂಹಾಚಾರ್ಯರು 'ಕ. ಸಾ. ಪ. ಪತ್ರಿಕೆ'ಯ ೧೯೩೮ನೆಯ ಅಕ್ಟೋಬರ್ ಸಂಚಿಕೆ ಯಲ್ಲಿ ಪಾಂಡಿತ್ಯಪೂರ್ವಕವಾಗಿಯೂ ಕೂಲಂಕಷವಾಗಿಯೂ ವಿಮರ್ಶಿಸಿರುವ ಪ್ರಬಂಧವನ್ನು ಓದಬಹುದು. ಆ ಕಾವ್ಯಕಲೆಯಲ್ಲಿ ಸಂಪ್ರದಾಯ ಶರಣತೆ ಇದೆ; ವಸ್ತುವಶತೆ ಇಲ್ಲ. ಕವಿ ಪರಾಜಯದ ಸುಖವನ್ನು ಅಷ್ಟಾಗಿ ಅನುಭವಿಸಲಿಲ್ಲ. ವಿಜಿಗೀಷುವಾಗಬೇಕೆಂದು ಆಸೆಪಟ್ಟನು.

"ಮಲ್ಲಿಗೆಯಲ್ಲದೆ ಸಂಪಗೆಯಲ್ಲದೆ ದಾಳಿಂಬಮಲ್ಲದೊಪ್ಪುವ ಚೆಂದೆಂ
ಗಲ್ಲದೆ ಮಾವಲ್ಲದೆ ಕೌಂಗಲ್ಲದೆ ಗಿಡುಮರಗಳೆಂಬುವಿಲ್ಲಾ ನಾಡೊಳ್"

ರಸಿಕಜನ ಯಾವ ಪ್ರಹರಣಕ್ಕೆ ಸೋಲುವುದನ್ನು ಕಲಿತಿತೋ ಅದಕ್ಕೆ ವಿನಾ ಬೇರೆ ಯದಕ್ಕೆ ಈ ಶಸ್ತ್ರಾಗಾರದಲ್ಲಿ ಸ್ಥಳವಿಲ್ಲ.

"ಕವಿ ಜೀವದ ಬ್ಯಾಸರ ಪರಿಸಾಕ
ಹಾಡ ನುಡಿಸಾಕ
ಹೆಚ್ಚಿಗೇನು ಬೇಕ
ಒಂದು ಹೂತ ಹುಣಸಿಮರ ಸಾಕ"

ಎಂಬ ಧೈರ್ಯ ಆಗಿನ ಕವಿಗಿರಲಿಲ್ಲ. ಈ ವಿಜಿಗೀಷು ಕವಿಗಳಿಗೆ ಬೇಕಾದದ್ದು ಚಮತ್ಕಾರ. ಹಾವಾಡಿಗನ ಬುಟ್ಟಿಯ ಯಕ್ಷಿಣಿ ಪದಾರ್ಥಗಳಂತೆ ಸೃಷ್ಟಿಯ ವಿವಿಧ

ವಸ್ತುಗಳು ಇವರ ಪ್ರಸಾದದ ಬೆಳಕಿಗೆ ಬರುತ್ತವೆ. ಇವರ ಶಬ್ದಸಂಭ್ರಮವನ್ನು ಮನದ ಊಹೆಯ ಚಳಕವನ್ನೂ ನಾವು ಕಂಡು ಬೆರಗಾದರೂ, ಅತೃಪ್ತಿಯಿಂದ "ಅವ್ಯಕ್ತವಾವುದನು ಸದೆಬಡಿಯಲಾಶಿಸುವೆ — ಮರ್ಮವಾವುದನೊರೆದು ಸರಿಯುತಿಹೆ ನೀನು" ಎಂದು ಪ್ರಶ್ನಿಸಿ ನಿಟ್ಟುಸಿರಿಡುತ್ತಾ, ಹೊತ್ತಗೆಯನ್ನು ಮುಚ್ಚಿಟ್ಟು ಹೋಗುತ್ತೇವೆ. ಪುಷ್ಟಾಹಂಕಾರ ಬದ್ಧಾತ್ಮರ ಜಗಳವಿದು. ಕವಿಗೂ ಜನಕ್ಕೂ ನಡೆದ ಈ ಪ್ರಬಲ ಸಂಗ್ರಾಮದ ಹಿಂಬದಿಯಲ್ಲಿ ಆತ್ಮಲಾಭೇಚ್ಛೆಯಿದ್ದರೂ, ವಿನಯ ಕೌಶಲವಿಲ್ಲದೆ ಈ ಸಂಗ್ರಾಮ ಸ್ಥಿರ ವಿಜಯದಲ್ಲಿ ಪರ್ಯವಸಾನ ಹೊಂದುವುದಿಲ್ಲ. ಇದು ಭೋಗಿಯ ರೀತಿ; ಯೋಗಿಯ ರೀತಿಯಲ್ಲ. ಈ ಯೋಗದ ರೀತಿ ವಿಪ್ಲವಕ್ಕೆ ಸಿಕ್ಕಿ ನಷ್ಟಾಭಿಮಾನವಾಗಿ, ಆದುದರಿಂದ ನಷ್ಟಾತ್ಮವಾಗಿ, ಪುನಃ ಕಾಲಕ್ರಮದಲ್ಲಿ ಜೀವಗೂಡಿಕೊಂಡು ಪ್ರಬುದ್ಧವಾಗುವ ಜನದಲ್ಲಿ ತಾನಾಗಿ ಬರುತ್ತದೆ. ಬೆಳೆಬೆಳೆಯುತ್ತ ಮರೆಯಾಗುತ್ತದೆ. ರವೀಂದ್ರರು ಉದಯವಾಗುವ ವರೆಗೆ ಋಷಿವಾಣಿ ನಮ್ಮ ನಾಡಿನಲ್ಲಿ ತಿರುಗಿ ಕೇಳಿಸದೆಹೋಯಿತು. ಅದಕ್ಕೆ ನಾವು ಅಗ್ನಿಪರ್ವತದ ಸ್ರೋತದಂತೆ ಹರಿದು ನಮ್ಮ ಹೆಮ್ಮೆಯ ಬಾಳನ್ನು ಸರ್ವತೋಮುಖವಾಗಿ ಭಗ್ನಮಾಡಿದ ಪಾಶ್ಚಾತ್ಯ ಜನಾಂಗಕ್ಕೆ ಋಣಿಯಾಗಬೇಕು. ಈ ಪ್ರವಾಹದಲ್ಲಿ ನಮ್ಮ ನಾಡಳಿಯಿತು, ನುಡಿ ಹೋಯಿತು, ಸಂಸ್ಕೃತಿ ಮುರಿದು ಬಿತ್ತು. ಆತ್ಮ ಮಾತ್ರ ತೀರ ನಷ್ಟವಾಗದೆ ಸ್ವಾಭಿಮಾನಿಗಳ ಹೃದಯದ ಬಂಡೆಯ ಅಡಿಯಲ್ಲಿ ರಕ್ಷಿತವಾಯಿತು. ಅಗ್ನಿಸ್ರೋತದಲ್ಲಿ ಒಂದು ಗುಣವಿದೆಯಂತೆ. ತನ್ನಿಂದ ಬೆಂದುಹೋದ ನೆಲಕ್ಕೆ ತಾನು ತಂಪಾದಮೇಲೆ ಸಾರವಿತ್ತು ಫಲವತ್ತಾಗಿ ಮಾಡುತ್ತದೆಯಂತೆ. ನಮ್ಮಾತ್ಮಾಂಕುರ ಈ ಸಾರವನ್ನು ಹೀರಿ ಪುಷ್ಟವಾಗಿ ಬೆಳೆದು ತಳಿರುಟ್ಟು ಮಲರ ಸೂಡುವ ಸೊಬಗನ್ನು ಇಂದಿನ ಸಾಹಿತ್ಯದಲ್ಲಿ ಕಾಣುತ್ತಿದೇವೆ. ಈ ಸಾಹಿತ್ಯದಲ್ಲಿ ಕಾಣುವ ಪ್ರಕೃತಿ ನಮ್ಮ ಅಂತರಾತ್ಮೋದಯದ ಬಹಿರ್ಮುಖ. ಆದುದರಿಂದ ಸರಳ, ಸತ್ಯ, ಸುಂದರ. ವಿಮರ್ಶಕರು ಈ ರಸೋದಯದ ಹೊಳಹನ್ನು ಪ್ರತಿಭೆ ಎನ್ನಲಿ, ತದ್ವ್ಯಂಜಕವಸ್ತುವನ್ನು ನವಸೃಷ್ಟಿ ಎನ್ನಲಿ, ಈ ವಸ್ತು ರಸಿಕರ ಮನದಲ್ಲಿ ಹೊರಳಿ ತನ್ನ ಅಂತರ್ಮುಖವಾದ ರಸವನ್ನು ತೋರುವ ರೀತಿಯನ್ನು ಧ್ವನಿಯೆನ್ನಲಿ, ಕವಿಗೆ ಈ ಕಾವ್ಯ ತನ್ನ — ಅದರಿಂದ ಸಮಷ್ಟಿಯಾದ ಜನದ–ಆತ್ಮೋದಯಕ್ಕೆ ಸಾಕ್ಷಿ ಮಾತ್ರ. ಪ್ರಳಯಾಂತದಲ್ಲಿ ತಿರುಗಿ ಸೃಷ್ಟವಾಗುವ ತೆರೆಯಂತೆ ಈ ಸಾಹಿತ್ಯದಲ್ಲಿ ಹೊಸ ನಾಡು, ಹೊಸ ಬಾಳು ಮೂಡುವುದು ಕಾಣುತ್ತದೆ. ಇಲ್ಲಿಗೆ ನೆಲ ಬೇಕು, ಜಲ ಬೇಕು, ಬೆಂಕಿ ಬೇಕು, ಮಿಂಚು ಬೇಕು, ಮುಗಿಲು ಬೇಕು, ಎಲ್ಲವೂ ಬೇಕು. ಎಲ್ಲದಕ್ಕೂ ಕವಿಯ ಆಹ್ವಾನವುಂಟು. ಇಲ್ಲಿ ಕಂಡ ವಸ್ತು ಸೋಜಿಗ. "ಮೂಡಲ ಮನೆಯಾ ಮುತ್ತಿನ ನೀರಿನ ಎರಕವ ಹೊಯ್ದಾ. ನುಣ್ಣನ್ನೆರಕವ ಹೊಯ್ದಾ, ಬಾಗಿಲ ತೆರೆದೂ ಬೆಳಕೂ ಹರಿದೂ — ಜಗವೆಲ್ಲಾ ತೋಯ್ದಾ, ಹೋಯ್ತೋ! ಜಗವೆಲ್ಲಾ ತೋಯ್ದಾ", "ಇದೆಕೊ ದಾರಿಯ ಬದಿಯಲಿ ಹುಲ್ಲಲಿ ವಿಷ್ಣುಕ್ರಾಂತಿಯ ಪರಿಮಿತ ನೀಲ", "ಹುಲ್ಗರಿಯ ಶಿರದಲ್ಲಿ, ಮಾಂದಳಿರ ತಳದಲ್ಲಿ ಮೊಲ್ಲೆ ಮಲ್ಲಿಗೆ ತೆರೆದು ಬಿರಿಯುತಿರುವಲ್ಲಿ, ಚೆಲ್ವ ಪಸುರ್ಗೊನೆಯಲ್ಲಿ, ನೆಲ್ಲ ಮೊನ್ನೆನೆಯಲ್ಲಿ ಚೆಲ್ಲಿಹವು ಇಬ್ಬನಿಯ ಮುತ್ತುಗಳಿವಿಲ್ಲಿ", "ಪಾತರ

ಗಿತ್ತಿ ಪಕ್ಕ, ನೋಡಿದೇನೆ ಅಕ್ಕ", "ಮೊರೆಯುತೆ ಸರಿಯುತೆ ಭರದಿಂ ಪರಿದೋಡುತೆ ಜಾರಿ ಪಾರಿ ಮುಕ್ತಾಂಜಲಿಯಂ। ಎರಚುತಲೆರಗುತೆ ರಭಸದಿ ಬರುತಿರ್ಪಾ ಜಲ ವಿಲಾಸಮೇನತಿಶಯಮೋ!", "ಮೇಲೆ ಕಾಣಿಸೆ ಮೈಯ ನಡುಗಿಸುವ ಮಾಯಿ। ನಾಳೆ ಬಿರಿಯುವ ಮುಗುಳ ತಳೆದಿರುವ ತಾಯಿ। ರಾತ್ರಿಯೆಂಬಿವಳಾವ ಧಾತ್ರಿ!" ಇತ್ಯಾದಿ ಸಹಜಸುಂದರವಾದ ಪ್ರಕೃತಿವರ್ಣನೆಗಳು ಈಗಿನ ಕಾವ್ಯದಲ್ಲಿ ತುಂಬಿವೆ. ಈ ಕವನದಲ್ಲಿ ಅರ್ಥಾಲಂಕಾರ, ಶಬ್ದಾಲಂಕಾರ, ಚಮತ್ಕಾರಗಳು ಬಹು ಕಡಮೆ. ಇದ್ದರೂ ಇತ್ತೀಚಿನ ಬೆಳಸು. "ತುಂಬಿ ತುಳುಕುವ ಜೀವ ತನ್ನ ಉದಿಸಿದ ಭಾವವನ್ನು ಸಿಂಗರಿಸದಿರೆ ದೋಷವೇನು?" ಆತ್ಮವನ್ನು ಮೊದಲು ಕಂಡ ಆನಂದದ "ಹಾ ಹು ಹಾ" ಎಂಬ ಅರ್ಥವೂ ಸ್ವಾರ್ಥವೂ ಇಲ್ಲದ ಮುಕ್ತಾತ್ಮರ ವ್ಯಂಜಕ ಶಬ್ದದಂತೆ— ಈ ಕವನಗಳ ಧಾಟಿ. "ಆಶ್ಚರ್ಯವತ್ಪಶ್ಯತಿ ಕಶ್ಚಿದೇನಂ। ಆಶ್ಚರ್ಯ ವದ್ವದತಿ ತಥೈವ ಚಾನ್ಯಃ॥" ಎಂಬ ರೀತಿ ಈಗಿನ ಕವಿಗಳು ತಮ್ಮ ಆತ್ಮವಿವರಣ ವನ್ನು ಪ್ರಕೃತಿ ವಿವರದಲ್ಲಿ ಕಂಡು ಸುಖವನ್ನು ಪಡೆಯುತ್ತಾರೆ. ಈ ಪ್ರತ್ಯಕ್ಷಾ ನಂದದ ಸಿದ್ಧಿಗಿಂತ ಮಿಗಿಲಾದುದನ್ನು ಮತ್ತಾವ ಕಲೆ ತೋರಬಲ್ಲುದು?

ಹೀಗೆ "ಕಲ್ಪಕಲ್ಪಕ್ಕೂ ಪುನರ್ರಚಿತವಾಗುವ ಸಾಗರ ತೀರದಲ್ಲಿ ಮಕ್ಕಳು ಕೂಡಿ ಕುಣಿದು ಕೇಕೆ ಹಾಕುತ್ತವೆ. ಅವುಗಳ ಆಟದ ಸಾಮುಗ್ರಿ ಬರಿ ಕಪ್ಪೆಚಿಪ್ಪು. ಅವು ಹೆಣೆವ ತೆಪ್ಪ ತರಗೆಲೆಯದು. ಇವನ್ನೇ ಅವು ನಗುನಗುತ್ತಾ ಮೇರೆಯಿಲ್ಲದ ಕಡಲಿ ನಲ್ಲಿ ತೇಲಬಿಡುತ್ತವೆ." ಈ ಪುಣ್ಯ ಸೈಕತಭೂಮಿ ಕೆಲಕಾಲದ ಹಿಂದೆ ಬಂಗಾಳ ದಲ್ಲಿ ರಚಿತವಾಗಿದ್ದು ಇಂದು ಕನ್ನಡ ದೇಶದಲ್ಲಿ ಮೂಡುತ್ತಿರುವ ಸೌಭಾಗ್ಯವನ್ನು ಈ ನಿಸರ್ಗಸುಂದರವಾದ ಕವನಗಳ ಮೂಲಕ ನಾವು ಕಾಣುತ್ತಿದ್ದೇವೆ. ಈ ಜನದ ಸ್ವಾಭಿಮಾನ ಬಿರಿಯುವಷ್ಟು ಬೆಳೆದೀತೆ— ಇದು ತನ್ನ ಆತ್ಮವನ್ನ ಮತ್ತೆ ಕಂಡೀತೇ — ಎಂದು ಹಂಬಲಿಸುತ್ತಿದ್ದ ಹಿರಿಯರ ಹಂಬಲು ತುಂಬುವ ಕಾಲವಿದು. ವಸಂತದ ಎಳಗಾಲ, ಮಾಗಿಯ ಮುದುಗಾಲವಲ್ಲ. ಈಚೀಚಿನ ಕವನಗಳಲ್ಲಿ "ಅವಿನಯ"ವೂ "ಪ್ರಕೃತಿ ವ್ಯಸನ"ವೂ ತೋರುತ್ತಿರಬಹುದು. ಆದರೆ ಒಟ್ಟು ಕಾವ್ಯದ ಬಗೆ ವಿನಯದಬಗೆ; ಹಂಬಲು ಆತ್ಮಲಾಭ; ವಿನಯಶೀಲರಾದ ಸಹೃದಯರಿಗೂ ಇಲ್ಲಿ ಬ್ರಹ್ಮಾಸ್ವಾದ ರಸಕ್ಕೆ ಕೊರತೆಯಿಲ್ಲ.

"ಸುಂದರ ದಿನ, ಸುಂದರ ಇನ, ಸುಂದರ ವನ ನೋಡು ಬಾ! ಎಳೆ ಬಿಸಿಲೊಳು ತಿಳಿಗೊಳದೊಳು ಜಲದಲೆಗಳು ನಲಿನಲಿಯಲು ಆಡು ಬಾ ಕೂಡು ಬಾ, ಬೇಗ ಬಾ, ಬಾ, ಬಾ" ಎಂದು ಈ ನಾಡಿಗೆ ಕವಿಯ ನಿರಂತರಾಹ್ವಾನವುಂಟು. ಈ ವನದಲ್ಲಿ ಹಿಂದೆ ಪುಣ್ಯಾಶ್ರಮಗಳ ತೆರದಂತೆ, "ನೂರು ಮರ, ನೂರು ಸ್ವರ, ಒಂದೊಂದೂ ಅತಿ ಮಧುರ, ಬಂಧವಿರದೆ ಬಂಧುರ— ಸ್ವಚ್ಛಂದ ಸುಂದರ." ಈ ವಸಂತೋದಯವನ್ನು ಮೊದಲರಿತು ಪ್ರಬುದ್ಧಾತ್ಮರಾಗಿ,

> "ವಸಂತ ಬಂದ ಋತುಗಳ ರಾಜ ತಾ ಬಂದ
> ಚಿಗುರನು ತಂದ– ಹಕ್ಕಿಗಳುಲಿಗಳೆ ಚೆಂದ
> ಕೂವೂ– ಜಗ್ ಜಗ್, ಪುವ್ವೀ ಟೂವಿಟ್ಟವೂ"

ಎಂದು ತಾವು ಹಾಡಿ, ಹಾಡುವ ಕಿರಿಯರಿಗೆ ತಲೆದೂಗಿ— ತಮ್ಮ ಆತ್ಮಸಾಂಶಿಕ ಯನ್ನೂ ರಸಾಭಿಜ್ಞತೆಯನ್ನೂ ತೋರಿ, ಹರಸಿದ ಹಿರಿಯರಲ್ಲಿ ಮೊದಲಿಗರು 'ಶ್ರೀ'ಯವರು. ಇವರ ಹರಕೆಗೆ ನೆರವಾಗಿ ತಮ್ಮನ್ನು ನಿರ್ವಂಶತೆಯಿಂದ ಕಾಪಾಡಿ ಋಷಿ ಋಣವನ್ನು ತೀರಿಸಬಲ್ಲ ಮಕ್ಕಳುದಿಸಿದರೆಂದು ತುಷ್ಟರೂ ಕೃತಜ್ಞರೂ ಆದ ವೇದದ ಋಷಿಗಳೂ ವಾಲ್ಮೀಕಿ ಕಾಳಿದಾಸಾದಿ ಕವಿಗಳೂ ಪುನಃಪ್ರಾಣರಾಗಿ ನಿಂತಿದ್ದಾರೆಂದು ಹೇಳಬೇಕೇ ?

**ಪು. ತಿ. ನರಸಿಂಹಾಚಾರ್**

# ಕಾವ್ಯ ಸತ್ಯ

ನಮ್ಮಲ್ಲಿ ಅನೇಕ ಜನ ಕವಿಗಳಿದ್ದಾರೆ, ಅನೇಕ ಸುಂದರವಾದ ಕೃತಿಗಳನ್ನು ಬರೆದಿದ್ದಾರೆ. ಹಾಗೆಯೇ ಸಜ್ಜನರಾದ ಮಹಾನುಭಾವರನೇಕರು ಕಾವ್ಯವನ್ನು ಪ್ರೀತಿಸುತ್ತಿದ್ದಾರೆ. ಭಾರತೀಯರಿಗೆ ಸಂಗೀತ, ಸಾಹಿತ್ಯ, ನೃತ್ಯ, ಚಿತ್ರ ಇತ್ಯಾದಿ ಕುಶಲ ಕಲೆಗಳನ್ನು ಕಂಡರೆ ದ್ವೇಷವೇನೂ ಇಲ್ಲ. ಇಷ್ಟಾದರೂ ಬಹು ಜನರಿಗೆ ಕಾವ್ಯವೆಂದರೆ ಏಕೋ ಅನಾದರ, ಕವಿಗಳೆಂದರೆ ಏನೋ ಉಪೇಕ್ಷೆ. ಹೀಗೆ ಕವಿ ಬರೆದ ಕಾವ್ಯ, ಸಾಮಾನ್ಯ ಜನರ ಹೃದಯಕ್ಕೆ ಇಳಿಯದೆ ಅವರ ಉಪೇಕ್ಷೆ, ಅನಾದರಣೆ ಗಳಿಗೆ ಗುರಿಯಾಗಿರುವುದಕ್ಕೆ ಮುಖ್ಯ ಕಾರಣಗಳು ಎರಡು : ಕಾವ್ಯ ತಿಳಿದುಕೊಳ್ಳಲು ಕಷ್ಟವಾಗಿರುವಂತೆ ಬರೆದಿದೆ ಎನ್ನುವುದು ಮೊದಲನೆಯ ಕಾರಣ. ಕಷ್ಟವಾದ ಕಾವ್ಯದ ಹೊರಮೈಯಂತಿರುವ ಶಬ್ದ, ಅರ್ಥಗಳನ್ನು ಪ್ರಯತ್ನದಿಂದ ಸಾಧಿಸಿ ಕೊಂಡರೂ ಅದರ ಒಳಮೈಯಂತಿರುವ ಭಾವ, ಧ್ವನಿ ಇವುಗಳ ಪರಿಚಯವಾಗದೆ ಕವಿಜೀವನದ ಅನುಭವ ಸಾಲದಾಗಿ ತೊಳಲಬೇಕಾಗುತ್ತದೆ ಎನ್ನುವುದು ಎರಡ ನೆಯ ಕಾರಣ. ಮೊದಲನೆಯ ಕಾರಣವನ್ನು "ಸತತಾಭ್ಯಾಸ ಪ್ರಯತ್ನ"ದಿಂದ ನಿವಾರಿಸಿಕೊಳ್ಳಬಹುದೆಂದು ವಾಚಕಜನ ತಿಳಿದಿದೆ. ಆದರೆ ಎರಡನೆಯ ಕಾರಣದ ನಿವಾರಣೆಗೆ ತಕ್ಕ ಉಪಾಯ ಜನತೆಗೆ ತಿಳಿಯದಿದೆ. ಜೀವನದ ಅನುಭವವಾಗಿ ಕಾವ್ಯದಲ್ಲಿ ಕವಿಯಿಂದ ಪ್ರತಿಪಾದಿತವಾಗಿರುವ ಭಾವದ ಪರಿಚಯ ಸಾಕಷ್ಟು ದೊರೆಯದೆ ಜನ "ಕವಿಯ ಭಾವ ಇಲ್ಲಿ ಅರ್ಥವಾಗುವುದಿಲ್ಲ. ಈ ಕಡೆ ಹೇಳಬೇಕೆಂದಿರುವ ವಿಷಯದಲ್ಲಿ ಅಸ್ಪಷ್ಟತೆಯಿದೆ. ಇಲ್ಲಿ ಕವಿ ಹೇಳಿರುವ ಅನುಭವ ತೀರ ಅಸಂಗತ, ಅಷ್ಟೇಕೆ ಅಸತ್ಯ" ಎಂದು ಮುಂತಾಗಿ ಹೇಳುವವರಿದ್ದಾರೆ. ಅವರ ವಾದ ಮೊತ್ತದಲ್ಲಿ ಇಷ್ಟು: 'ಕವಿ ಬರೆದ ಕಾವ್ಯ ಅಸತ್ಯ, ಅಸಂಗತ'.

ಇದಕ್ಕೆ ಉತ್ತರವಾಗಿ ಕವಿ ಬರೆದ ಕಾವ್ಯವೂ ಸತ್ಯ ಅವನ ಅನುಭವವೂ ಸತ್ಯ ಎಂಬುದನ್ನು ಅರಿತುಕೊಳ್ಳಬೇಕಾದರೆ ಮೊಟ್ಟಮೊದಲು ಒಂದು ವಿಷಯವನ್ನು ಗಮನಿಸಬೇಕಾಗುತ್ತದೆ. ಅದೇನೆಂದರೆ, ಗದ್ಯದ ಭಾಷೆಗೂ ಪದ್ಯದ ಭಾಷೆಗೂ ತೋರಿಕೆಯಲ್ಲಿ ಕಾಣುವ ವ್ಯತ್ಯಾಸ. ಕಾವ್ಯ ತನ್ನದೇ ಆದ ತರ್ಕ ಪದ್ಧತಿಯೊಂದನ್ನು ಏರ್ಪಡಿಸಿಕೊಂಡಿರುತ್ತದೆ ಎಂದರೆ ಕಾವ್ಯವು ಕುತರ್ಕವಲ್ಲ ; ಅದರ ತರ್ಕ ಗದ್ಯದ್ದಲ್ಲ ವೆಂದು ಮಾತ್ರ. "ನಾನು ಒಂದು ಹಂದಿಯನ್ನು ಕೊಂದು ಬಂದಿದ್ದೇನೆ" ಎಂದು ಗದ್ಯದಲ್ಲಿ ಬರೆದುದನ್ನು ಓದಿದರೆ ವಿಷಯ ನಮ್ಮ ಮನಸ್ಸಿಗೆ ನೇರವಾಗಿ ಇಳಿಯು ತ್ತದೆ. ಆದರೆ—

ಹುಲಿಯೇ ಹುಲಿಯೇ ಹೊಳೆಯುತಲುರಿದು
ಕಾಣದ ಕತ್ತಲ ಕಾಡೊಳು ಮೆರೆದು

ಎಂದು ಪದ್ಯಭಾಗವೊಂದನ್ನು ಓದಿದಾಗ ಮನಸ್ಸಿಗೆ ಒಂದು ವಿಧವಾದ ತೀವ್ರಾನು ಭವವುಂಟಾದರೂ ಬುದ್ಧಿಗೆ ವಿಷಯ ಸ್ಪಷ್ಟವಾದಂತೆ ಹೊಳೆಯುವುದಿಲ್ಲ. ಗದ್ಯದ ತರ್ಕ ಸರಣಿಯಲ್ಲಿ ವಿಚಾರಮಾಡುವುದಾದರೆ ಹುಲಿಯು ಉರಿಯುವುದುಂಟೆ?

ಕಾಣದ ಕತ್ತಲಿನಲ್ಲಿ ಕಾಣುವುದುಂಟೆ? ಇದೆಲ್ಲಾ ಅಸತ್ಯ ಎಂಬ ಭಾವನೆ ಬರುತ್ತದೆ. ಆದರೆ ಸುತ್ತಲೂ ಹಬ್ಬಿದ ಗಾಢವಾದ ಕತ್ತಲಿನಲ್ಲಿ ದಟ್ಟವಾಗಿ ಬೆಳೆದ ಕಾಡಿನ ನಡುವೆ ಏಕಾಕಿಯಾಗಿ ಹೋಗುತ್ತಿರುವಾಗ ಎದುರಿನಲ್ಲಿ ಹುಲಿಯು ಕಣ್ಣರಳಿಸಿತೆಂದರೆ ಆಗ ಅನುಭವಗೋಚರವಾಗಬಹುದಾದ ಭಯ, ಕಾತರ, ಇತ್ಯಾದಿ ಮನೋಭಾವ ಗಳನ್ನೆಲ್ಲಾ ಕವಿ ಈ ಎರಡು ಪಾದಗಳಲ್ಲಿ ಮೂಡಿಸಿದ್ದಾನೆ. ನಿಜವಾಗಿಯೂ ಹುಲಿಯ ಎದುರಿನಲ್ಲಿ ಸಿಕ್ಕಿ ಹೆದರಿದವನಿಗೆ ಕವಿಯ ಈ ಮಾತು ಸತ್ಯವೆಂದೇ ತೋರುತ್ತದೆ. ಇದು ಪದ್ಯದ ತರ್ಕ. ಈ ತರ್ಕಸರಣಿಯಲ್ಲಿ ವಿಚಾರಮಾಡಿದರೆ ಕಾವ್ಯಸತ್ಯದ ಸ್ವರೂಪ ತುಸುಮಟ್ಟಿಗೆ ಗೋಚರವಾದೀತು.

ಕವಿ ಹೀಗೆ ತನಗೆ ಅನುಭವಗೋಚರವಾದ ಸತ್ಯವನ್ನು ತನ್ನ ಹೃದಯದ ಭಾಷೆಯೆಂಬಂತೆ ಕಾವ್ಯದ ಮಾತಿನಲ್ಲಿ ಒಡಮೂಡಿಸಿರುತ್ತಾನೆ. ಹೊಸ ಹೊಸ ಅಭಿಪ್ರಾಯಗಳನ್ನು ಶಬ್ದಗಳಲ್ಲಿ ಹಿಡಿದಿಟ್ಟಿರುತ್ತಾನೆ. ಕವಿ ಬರೆದ ಕಾವ್ಯವನ್ನು ಖಂಡ ಖಂಡವಾಗಿ ಓದುವಾಗ ಪಂಕ್ತಿಯಿಂದ ಪಂಕ್ತಿಗೆ ಮುಂದುವರಿಯುವಾಗ ನಾವೂ ಮೇಲೆ ಸೂಚಿಸಿದ ನಮ್ಮ ತರ್ಕಬುದ್ಧಿಗನುಸಾರವಾಗಿ ಕವಿಯೊಂದಿಗೆ ಮುಂಬರಿವೆವಾದರೂ ಕವಿ ವಿಹಂಗಮವೇಗದಿಂದೆಂಬಂತೆ ಶಿಖರದಿಂದ ಶಿಖರಕ್ಕೆ ಹಾರಿಕೊಂಡು ಹೋಗುತ್ತಿರುವ ಓಟದೊಂದಿಗೆ, ವಿಶ್ರಾಂತಿಗೃಹ, ವಾಹನಗಳು, ದಾರಿಗರ ನೆರವು ಇತ್ಯಾದಿಗಳನ್ನು ಬಯಸುತ್ತಿರುವ ಕಾಲ್ನಡಗೆಯ ಪಥಿಕರಾದ ನಾವು ದಾರಿ ನಡೆಯಲಾರದೆ ಮಾರ್ಗ ಮಧ್ಯದಲ್ಲಿ ನಿಲ್ಲಬೇಕಾಗುವುದು. ಕವಿ ಯಾದರೋ ಶಿಖರದಿಂದ ಶಿಖರಕ್ಕಿರುವ ನಡುವಣ ಪ್ರಯಾಣವನ್ನೆಲ್ಲಾ ತನ್ನ ಅನುಭವವೆಂಬ ವಾಹನದಿಂದ ವಿದ್ಯುದ್ವೇಗದಿಂದೆಂಬಂತೆ ದಾಟಿಬಿಡುವನು. ಅವನ ಅನುಭವ ನಮಗಿಲ್ಲದೆ ನಮ್ಮ ದಾರಿ ಸಾಗುವುದರಲ್ಲಿ ಸಾವಕಾಶವಾಗುತ್ತದೆ. ಈ ಸಾವಕಾಶವನ್ನು ಸಹಿಸುವುದರಲ್ಲಿ ಸಹನೆಯಿಲ್ಲದೆ ನಾವು ಕವಿಯ ಅನುಭವ ಅಸತ್ಯವೆಂದೇ ಸಾರುತ್ತೇವೆ. ಅದರ ಬದಲು ಕವಿಯ ಅನುಭವ ಸತ್ಯವೆಂದು ಒಪ್ಪಿಕೊಂಡರೆ ಆ ಅನುಭವ ಪ್ರತಿಪಾದಿತವಾಗಿರುವ ಕಾವ್ಯವೂ ಸತ್ಯವೆಂದಂತೆಯೇ. ಎಂದಮೇಲೆ ಕವಿ ಪಡೆಯುವ ಅನುಭವದ ಸತ್ಯದ ಸ್ವರೂಪವನ್ನು ಸ್ವಲ್ಪ ವಿವರ ವಾಗಿ ತಿಳಿದುಕೊಳ್ಳಬೇಕಾಗುತ್ತದೆ. ಈ ವಿವರಣೆಗೆಂದು ಈ ಕೆಲವು ಉದಾಹರಣೆ ಗಳನ್ನು ತೆಗೆದುಕೊಳ್ಳಬಹುದು.

ಕಬ್ಬಿಣದ ಮುರುಕುಗಳನ್ನು ಹೇರಿದ ಒಂದು 'ಲಾರಿ' ಬೆಳಗಿನ ಜಾವದಲ್ಲಿ ವಿಕಟವಾಗಿ ಶಬ್ದಮಾಡುತ್ತಾ ಹೋಗುತ್ತಿದ್ದರೆ ಆ ಶಬ್ದ ಬೀದಿಯ ಮಗ್ಗುಲು ಮನೆ ಗಳಲ್ಲಿ ನಿದ್ರೆಮಾಡುವವರನ್ನು ಎಚ್ಚರಿಸುತ್ತದೆ ಎನ್ನೋಣ. ಅದೃಷ್ಟಶಾಲಿಗಳಾದ ಕೆಲವರಿಗೆ ಅದು ಯಾವ ವಿಧವಾದ ಅನುಭವವನ್ನೂ ಉಂಟುಮಾಡುವುದಿಲ್ಲ. ಇನ್ನು ಕೆಲವರಿಗೆ ಶಬ್ದವೇನೋ ಕೇಳುತ್ತದೆ, ಆದರೆ ಅದರಿಂದ ಅವರು ಎಚ್ಚರಗೊಳ್ಳು ವುದಿಲ್ಲ. ಕನಸಿನ ಮರೆಯಲ್ಲಿ ಅದರ ಕುರುಹನ್ನು ಅವರು ಹಿಡಿದಿರುತ್ತಾರೆ. ನಿವೃತ್ತ ನೌಕಾಧಿಕಾರಿಯೊಬ್ಬನು ಗಡುಸಾಗಿ ಜೆಳೆದ ನೌಕಾ ಯುದ್ಧದ ಕನಸು ಕಾಣುತ್ತಾನೆ. ಅವನ ಮಗಳು ಹೊಸದಾಗಿ ಬಂದ ಅಡಿಗೆಯವನು ತಿಂಡಿಯ ತಟ್ಟೆಯನ್ನು ಅಟ್ಟದಿಂದ ಕೆಡವಿಹಾಕಿದ ಶಬ್ದಾನುಕರಣದ ಕನಸು ಕಾಣುತ್ತಾಳೆ.

ಅವನ ಮಗ ಚೆಂಡಾಟದ ಪಂದ್ಯವನ್ನು ನೋಡುತ್ತಿರುವ ಗದ್ದಲದಲ್ಲಿರುವವನಂತೆ ಕನಸು ಕಾಣುತ್ತಾನೆ. ಒಬ್ಬ ತಲೆನರೆತ ಮುದುಕನಿಗೆ ತುಂಟನೊಮ್ಮಗನು ಪದೇ ಪದೇ ರೇಗಿಸುವುದಕ್ಕಾಗಿ ಪದೇ ಪದೇ ಬಾಗಿಲು ಬಡಿದು ಶಬ್ದಮಾಡುವ ಕನಸು ಬೀಳುತ್ತದೆ. ಹೀಗೆಯೇ ನಿದ್ರಿಸುತ್ತಿರುವ ಇನ್ನೂ ಎಷ್ಟೋ ಜನರಿಗೆ ಏನೇನೋ ಕನಸು ಬೀಳುತ್ತದೆ.

ಈ ಪ್ರತಿಯೊಂದು ಕನಸೂ ದಾರಿಯಲ್ಲಿ ಉಂಟಾದ ನಿದ್ರಾಭಂಗಕಾರಿಯಾದ 'ಲಾರಿ'ಯ ಶಬ್ದವನ್ನು ಅರ್ಥಮಾಡಿಕೊಂಡುದರಿಂದ ಉಂಟಾದುದು. ಹೀಗೆ ಮೂಲತಃ ವಿಧವಿಧವಾದ ಕನಸುಗಳಿಗೆ ಕಾರಣವಾಗಿರುವುದು ಆ ಶಬ್ದವೊಂದೇ ಆದರೂ ಅದರ ಪರಿಣಾಮವಾಗಿ ಬೇರೆ ಬೇರೆ ಜನಗಳಿಗೆ ಅವರವರ ಮನೋಭಾವ, ರಾಗ ಸಂಸ್ಕಾರಗಳಿಗನುಗುಣವಾಗಿ ಕನಸು ಕಾಣಿಸಿತು. ಇಲ್ಲಿ ನಾವು ತಿಳಿಯಬೇಕಾದ ಅಂಶ ಇದು: ಯಾವ ಅನುಭವಕ್ಕಾದರೂ ಮೂಲಕಾರಣ ಒಂದೇ. ಅದು ಸತ್ಯವಾಗಿರುತ್ತದೆ. ಆದರೆ ಆ ಸತ್ಯ ಒಬ್ಬೊಬ್ಬರಿಗೆ ಒಂದೊಂದು ತೆರನಾಗಿ ಗೋಚರಿಸುತ್ತದೆ. ವಾಸ್ತವ ಜಗತ್ತಿನಲ್ಲಿ ಕವಿ ಒಬ್ಬ ಕನಸುಗಾರ. ಅವನು ತಾನು ಕಂಡ ಕನಸಿನ ಅನುಭವವನ್ನೇ ತನ್ನ ಕಾವ್ಯದಲ್ಲಿ ಪ್ರತಿಪಾದಿಸಿರುತ್ತಾನೆ.

ಈಗ ವಾಸ್ತವ ಜಗತ್ತಿನಲ್ಲಿ ಸತ್ಯದ ವಿವರಣೆ ಹೇಗಿರುತ್ತದೆ ಎಂಬುದನ್ನು ನೋಡೋಣ. ಉದಾಹರಣೆಗೆ ಕಣ್ಣೆದುರಿನ ಪ್ರತಿದಿನ ನಾವು ಬಳಸುವ ಪದಾರ್ಥವನ್ನೇ (ಕುರ್ಚಿ) ತೆಗೆದುಕೊಳ್ಳೋಣ. ಒಂದು ಕುರ್ಚಿ ಎಂದರೆ ಸಾಮಾನ್ಯವಾಗಿ ಮರದಿಂದ ಮಾಡಿದ ಕಾಲುಗಳುಳ್ಳ (ಮೂರು ಇಲ್ಲವೇ ನಾಲ್ಕು), ಒಂದು ಬೆನ್ನಿರುವ, ಕುಳಿತುಕೊಳ್ಳುವ (ಇದೇ ಮುಖ್ಯವಾದ ಗುಣ) ಪದಾರ್ಥ. ಆದರೆ ಈ ಒಂದು ಸೂತ್ರವು ವೈಜ್ಞಾನಿಕ ಮನೋವೃತ್ತಿ ಉಳ್ಳವನಿಗಾಗಲಿ ಕುಶಲ ವಿಶ್ವಕರ್ಮನಿಗಾಗಲೀ ಹೆಚ್ಚು ರುಚಿಸದು. ನಮಗೆ ಪ್ರತ್ಯಕ್ಷವಾಗಿ ಕಾಣಿಸುವುದಕ್ಕಿಂತಲೂ ಹೆಚ್ಚು ವಿಷಯವನ್ನು ಗ್ರಹಿಸಲು ಇಬ್ಬರೂ ಪ್ರಯತ್ನಿಸುವರು. ವೈಜ್ಞಾನಿಕ ಸಂಶೋಧನೆಗಳಿಂದ, ಯಾಂತ್ರಿಕ ಸಲಕರಣೆಗಳಿಂದ ಅವರು ಆ ಪದಾರ್ಥವನ್ನು ಕುರಿತು ಎಷ್ಟೆಷ್ಟು ವಿಷಯಗಳನ್ನು ಸಂಗ್ರಹಿಸಿದರೂ ಅವು ಎಷ್ಟೆಷ್ಟು ಕುತೂಹಲವನ್ನು ಹುಟ್ಟಿಸುವುದಿದ್ದರೂ ನಮಗೆ ಅವುಗಳಿಂದ ದಿನಚರಿಯ ವ್ಯವಹಾರಜ್ಞಾನಕ್ಕೆ ಅಷ್ಟೇನೂ ಸಹಾಯವಾಗುವಂತಿಲ್ಲ. ಆದ್ದರಿಂದ ಅವರ ಪಾಲಿಗೆ ಸತ್ಯವಾದ ಆ ಸಂಶೋಧನೆಗಳೆಲ್ಲಾ ನಮ್ಮ ಪಾಲಿಗೆ ಅಸತ್ಯ.

ಇದೇ ರೀತಿಯಲ್ಲಿ ನಮಗೆ ವೈದ್ಯರಿಂದ ನಿಯೋಜಿತವಾದ ಔಷಧಿಯು ಹಿತಕರವಾದ ರುಚಿಯಿಲ್ಲದ ಕೆಂಪು ಕಂದು ಬಣ್ಣದ ಮಂದವಾದ ಒಂದು ದ್ರಾವಕವಾಗಿ ಕಾಣಬರುವುದು. ಆದರೆ ಇದೇ ದ್ರಾವಕ ವೈದ್ಯರ ಕಣ್ಣಿಗೆ ರಸಾಯನ ಶಾಸ್ತ್ರದ ಚಿಹ್ನೆಗಳ ಒಂದು 'ಫಾರ್ಮ್ಯುಲ'ವಾಗಿ ತೋರುವುದು.

ರೈಲಿನಲ್ಲಿ ಮೈಸೂರಿನಿಂದ ಬೆಂಗಳೂರಿಗೆ ಹೋಗುವಾಗ ಶ್ರೀರಂಗಪಟ್ಟಣದ ಬಳಿ ಕಾವೇರಿಯನ್ನು ಸೇತುವೆಯ ಮೂಲಕ ದಾಟುವ ಸಂದರ್ಭವು ನಮಗೆ ನೂರಾರು ಬಗೆಯ ಸಂಯೋಜಿತ ಸಾಂಕೇತಿಕ ಚಿತ್ರಗಳನ್ನು ತಂದೊಡ್ಡುವುದಲ್ಲದೆ ನಮಗೆ ಸೇತುವೆಯೊಂದನ್ನೇ ಊಹಿಸಿಕೊಳ್ಳುವುದು ದುಸ್ಸಾಧ್ಯವಾಗುವುದು. ರೈಲಿನ

ಕರ್ಕಶವಾದ ಶಬ್ದ; ಕೆಳಗೆ ಹರಿಯುತ್ತಿರುವ ಜುಳುಜುಳುಗುಟ್ಟುವ ನದಿ; ದೂರದಲ್ಲಿ ಮೇಯುವ ದನಕರುಗಳು; ಪ್ರಯಾಣಿಕರು ಕಿಟಕಿಯಲ್ಲಿ ನದಿಯ ನೀರು ನೋಡಲು ಬಾಗುವ ಸಡಗರ; ಇನ್ನೂ ಈ ಬಗೆಯ ನೂರಾರು ಚಿತ್ರಗಳು ಸೇತುವೆಯೊಂದಿಗೆ ನಮಗೆ ಅಂಟಿಕೊಂಡುಬಂದಿರುತ್ತವೆ.

ನಮ್ಮ ಔಷಧಿಯ ಕಲ್ಪನೆಯಾಗಲಿ ಸೇತುವೆಯ ಕಲ್ಪನೆಯಾಗಲಿ ಭಿನ್ನ ಭಿನ್ನ ಸಂಸ್ಕೃತಿಯ ವ್ಯಕ್ತಿಯೊಡನೆ ಭಿನ್ನ ಭಿನ್ನ ದೃಷ್ಟಿಕೋನದಿಂದ ನೋಡಿ ತೂಗಿದ ಒಂದು ಬಗೆಯ ಲೌಕಿಕ ಸತ್ಯವಾಗುವುದು. ಈ ಕಲ್ಪನೆಗೆ ಪ್ರತ್ಯಕ್ಷ ಪ್ರಮಾಣಗಳು ಕೇವಲ ಉಪಕರಣಗಳಾಗಿ ನಿಲ್ಲುವುವು ಮಾತ್ರ. ನಮಗೆ ಪ್ರತ್ಯಕ್ಷವಾಗಿ ಕಾಣುವ ಔಷಧಿಯಿಂದ ಅದರ ವಿಭಜನೆ ಹೇಗೆ; ಯಾವ ಯಾವ ರಸಗಳು ಯಾವ ಯಾವ ಪ್ರಮಾಣದಲ್ಲಿ ಬಿದ್ದಿವೆ; ಅದು ದೇಹಕ್ಕೆ ಹೇಗೆ ಉಪಕಾರಿಯಾಗಿದೆ; ಅದರ ಸಾಂಕೇತಿಕ ಚಿಹ್ನೆಗಳ ಅರ್ಥವೇನು?— ಇವು ಒಂದೂ ನಮಗೆ ತಿಳಿಯದು. ಅದು ರಕ್ತಪೋಷಕವೋ ಪಚನಕಾರಿಯೋ ಇಲ್ಲವೆ ಪ್ರಾಣಾಪಾಯಕಾರಕವಾದ ವಿಷವೋ ಆವುದೊಂದೂ ನಮಗೆ ವೈದ್ಯರು ಕೊಟ್ಟಿರುವ ಚೀಟಿಯನ್ನು ಓದಿದ ಮಾತ್ರದಿಂದಾಗಲಿ ಆ ಔಷಧಿಯನ್ನು ನೋಡಿದ ಮಾತ್ರದಿಂದಾಗಲಿ ನಮಗೆ ತಿಳಿಯುವುದಿಲ್ಲ. ಈ ಅರ್ಥದಲ್ಲಿ ಆ ಚೀಟಿ ನಮಗೆ ನಿಜವಲ್ಲ. ಹೀಗೆಯೇ ಖಗೋಳಶಾಸ್ತ್ರದ ಅನೇಕ ವಿವರಣೆಗಳು ನಿಜವಾಗಿ ನಮಗೆ ಅರ್ಥವಾಗುವುದಿಲ್ಲ. ಗಣಿತಶಾಸ್ತ್ರದ ಚಿಹ್ನೆಗಳೂ ಈ ದೃಷ್ಟಿಯಲ್ಲಿ ನಮಗೆ ನಿರರ್ಥಕ. ಇಷ್ಟು ವಿಚಾರ ಮಾಡಿದುದರ ಮಥಿತಾರ್ಥವಿದು: "ಯಾವುದು ಯಾವನಿಗೆ ಗ್ರಹಿಸಲು ಅಸಾಧ್ಯವೋ ಅದು ಅವನಿಗೆ ಅಸತ್ಯ."

ನಾವು ಹಿಂದೆ ಹೇಳಿದ ಸೇತುವೆಯ ಉದಾಹರಣೆಯನ್ನು ಸ್ವಲ್ಪ ವಿವರವಾಗಿ ನೋಡೋಣ. ನಾವು ಅದರ ಬಗ್ಗೆ ಹೆಚ್ಚು ವಿಷಯಗಳನ್ನು ಸಂಗ್ರಹಿಸಬಹುದು. ಹೆಚ್ಚು ಚಾರಿತ್ರಕವಾಗಿ, ಹೆಚ್ಚು ವೈಜ್ಞಾನಿಕವಾಗಿ ವಿಷಯ ಜಿಜ್ಞಾಸೆ ಬೆಳೆಸಬಹುದು. ಆದರೆ ನಾವು ಮೊಟ್ಟಮೊದಲು ಈ ಅರಿವೊಂದೂ ಇಲ್ಲದೆ ಬುದ್ಧಿಯ ಬಲದ ಬಳಕೆಯಿಲ್ಲದೆ ಕಂಡು ಅನುಭವಿಸಿದ ಕಣ್ಣಿನ ನೋಟವೇ ಅರ್ಥವತ್ತಾಗಿ ಉಳಿಯುವುದು. ಈ ಕಣ್ಣಿನ ನೋಟವು ಅನೇಕವೇಳೆ ವಿಷಯಕ್ಕೆ ಒಳಪಡದ ವಸ್ತುಗಳನ್ನು ಗ್ರಹಿಸಿದುವುದೂ ಉಂಟು. ನಾವು ಸೇತುವೆಯನ್ನು ರೈಲಿನಲ್ಲಿ ದಾಟಿದಾಗ ಆ ಶಬ್ದವೂ ಸೇತುವೆಯ ಜೊತೆಗೆ ಬಿಡಿಸಲಾರದ ಬಣ್ಣವಾಗಿಬಿಟ್ಟಿದೆ. ನಾವು ಸೇತುವೆಯನ್ನು ನೆನಸಿಕೊಂಡಾಗಲೆಲ್ಲ ಆ ನೆನಪಿನೊಡನೆ ಅದರಮೇಲೆ ರೈಲು ಹರಿದ ಶಬ್ದವೂ ಕೂಡಿಕೊಂಡೇ ಬರುವುದು. ಹೀಗಾದರೂ ಶಬ್ದವು ಸೇತುವೆಯ ಒಂದು ಮುಖ್ಯ ಲಕ್ಷಣವಲ್ಲ. ಏಕೆಂದರೆ ಹುಟ್ಟುಕಿವುಡನೊಬ್ಬನು ಆ ಶಬ್ದವನ್ನು ತನ್ನ ಸೇತುವೆಯ ಕಲ್ಪನೆಗೆ ಸೇರಿಸುವುದಿಲ್ಲ. ಹುಟ್ಟುಕುರುಡನಿಗಾದರೊ ಆ ಶಬ್ದವೇ ಸೇತುವೆಯನ್ನು ಗುರುತಿಸುವ ಮುಖ್ಯ ಸಾಧನ. ನಮಗೆ ಸೇತುವೆಯ ನೋಟ ಹೇಗೆ ಕಣ್ಣಿಗೆ ತೋರುವುದೋ ಹಾಗೆ ಅವನಿಗೆ ಸೇತುವೆಯ ಶಬ್ದ ಕಿವಿಗೆ ಕೇಳುವುದು. ಅವನಿಗೆ ಮಾನಸಿಕ ಚಿತ್ರಗ್ರಹಣಕ್ಕೆ ಬದಲು ಮಾನಸಿಕ ಶಬ್ದಗ್ರಹಣ ಶಕ್ತಿಯಿದೆ. ಅವನಿಗೆ ಆ ಶಬ್ದವು ಸೇತುವೆಯಿಂದ ಕಿತ್ತುಹಾಕಬಹುದಾದ ಲಕ್ಷಣವಾಗಿರುವುದಿಲ್ಲ. ನನಗಾದರೊ ಆ ಸೇತುವೆಯ ನೋಟವೇ ಅದರ ವಿಷಯಕವಾದ

ಸತ್ಯವನ್ನು ತೋರುವುದೆಂದು ಭಾಸವಾಗುವುದು. ಕಾರಣ, ಮುಕ್ಕಾಲುಮೂರುವೀಸ ಪಾಲು ಜನರು ನೋಟದಿಂದಲೇ ಸೇತುವೆಯನ್ನರಿಯುವರು. ಅಂತೆಯೇ ಕಣ್ಣಿದ್ದವರಿಗೆ ನೋಟದಿಂದ ದೊರೆತ ಅನುಭವವೇ ಸತ್ಯ; ಕಣ್ಣಿಲ್ಲದವರಿಗೆ ಶಬ್ದದಿಂದ ದೊರೆತ ಅನುಭವವೇ ಸತ್ಯ. ಎಂದಮೇಲೆ ಶಬ್ದವಾಗಲಿ ನೋಟವಾಗಲಿ ಸೇತುವೆಯ ವಿಷಯಕ್ಕೆ ಸಂಬಂಧಪಟ್ಟ ಪೂರ್ಣಜ್ಞಾನವನ್ನೂ ಸತ್ಯವನ್ನೂ ಹೊರಗೆಡಹುವುದೆಂದು ಹೇಳುವಂತೆಯೂ ಇಲ್ಲ; ಹೊರಗೆಡಹುವುದಿಲ್ಲವೆಂದು ಹೇಳುವಂತೆಯೂ ಇಲ್ಲ. ಕಾರಣ, ಇವು ಎರಡೂ ಇಂದ್ರಿಯಗಳ ಹೇಳಿಕೆ. ಇವುಗಳಿಂದ ರೈಲಿನ ಪ್ರಯಾಣಿಕರು ಸೇತುವೆಯನ್ನು ಸಮೀಪಿಸಿದುದರ ಸತ್ಯವನ್ನು ಅರಿಯುವರು. ಅವರಲ್ಲಿ ಕುರುಡನಿಗೂ ಕಿವುಡನಿಗೂ ಏಕಕಾಲದಲ್ಲಿ ಸೇತುವೆಯ ಜ್ಞಾನವುಂಟಾಗುತ್ತದೆ. ಆದರೆ ಈ ಜ್ಞಾನ ಬರುವ ಅನುಭವದ ಮಾರ್ಗ ಮಾತ್ರ ಬೇರೆ.

ಇರುವೆಗಳು ತಮ್ಮ ಇಂದ್ರಿಯೋಪಕರಣಗಳಿಂದ ವಸ್ತುವಿನ ವಾಸನೆಯನ್ನು ಹಿಡಿದು ಅದರಿಂದಲೇ ಆ ವಸ್ತುವಿನ ಗಾತ್ರ ರೂಪಗಳನ್ನು ಕೂಡ ಗುರುತಿಸಬಲ್ಲವಂತೆ. ನಮಗೆ ಈ ಅನುಭವ ಅಸತ್ಯವಾದರೂ ಇರುವೆಗಳಿಗೆ ವಾಸನೆಯ ಆಕಾರವೂ ಅದರ ಮುಖ್ಯವಾದ ಲಕ್ಷಣಗಳಲ್ಲಿ ಒಂದು. ಇದೇ ರೀತಿಯಲ್ಲಿ ಕೆಲವು ಪ್ರಾಣಿಗಳಿಗೆ ಅವು ನೋಡುವ ವಸ್ತುಗಳು ಗಾತ್ರದಲ್ಲಿ ದ್ವಿಗುಣವಾಗಿ ದೊಡ್ಡದಾಗಿರುವಂತೆ ಕಾಣಿಸುತ್ತವೆಯಂತೆ. ಆದ್ದರಿಂದಲೇ ಅವು ಮನುಷ್ಯನಿಗೆ ಹೆದರಿ ನಡೆಯುವುವೆಂದು ಹೇಳುತ್ತಾರೆ. ನಿಜವಾಗಿಯೂ ಆ ಪ್ರಾಣಿಗಳ ಬೃಹದ್ಗಾತ್ರದೆದುರು ಮಾನವನು ಬಹು ಸಣ್ಣ ಪ್ರಾಣಿ. ಇದು ನಮಗೆ ಸತ್ಯ. ಆದರೆ ಆ ಪ್ರಾಣಿಗಳಿಗೆ ಸುಳ್ಳು. ನಮ್ಮ ಗಾತ್ರದ ದ್ವಿಗುಣವಾದ ಬೃಹದ್ರೂಪ ಅವುಗಳ ಅನುಭವಕ್ಕೆ ಸತ್ಯ.

ನಿಜವಾಗಿ ನೋಡಿದರೆ ನಾವು ಪ್ರತ್ಯಕ್ಷ ಪ್ರಮಾಣಗಳಮೇಲೆ, ಇಂದ್ರಿಯಗಳ ಮೂಲಕ ಗೋಚರವಾಗುವ ಅನುಭವಗಳಮೇಲೆ, ವಿಷಯದ ಸತ್ಯಾಸತ್ಯತೆಯನ್ನು ನಿರ್ಧರಿಸುತ್ತೇವೆ. ಈ ಪ್ರಮಾಣಗಳಾಗಲಿ ಈ ಇಂದ್ರಿಯಾನುಭವಗಳಾಗಲಿ ಎಷ್ಟರ ಮಟ್ಟಿಗೆ ಅಪೂರ್ಣ ಎಂಬುದನ್ನು ನಾವು ಮೇಲೆ ನೋಡಿದ ಉದಾಹರಣೆಗಳಿಂದ ತಿಳಿದುಕೊಂಡಿದ್ದೇವೆ. ಇಷ್ಟಾದರೂ ಸತ್ಯದ ಒಂದು ಮುಖವನ್ನಾದರೂ ತಿಳಿದುಕೊಳ್ಳಲು ನಮ್ಮ ಇಂದ್ರಿಯವನ್ನೇ ನಾವು ಶರಣುಹೊಗಬೇಕು. ಹೊರಗಣ ನಿಜಸ್ಥಿತಿಯು ಇಂದ್ರಿಯಗಳನ್ನು ಹೊಕ್ಕು ಅಲ್ಲಿ ಅವರವರ ಸಂಸ್ಕಾರದಂತೆ ತನ್ನನ್ನು ಅರ್ಥಮಾಡಿಸಿಕೊಡುತ್ತದೆ, ಕನಸು ಕಾಣುವವರು ವಿಧವಿಧವಾಗಿ ಒಂದೇ ಬಾಹ್ಯ ಸತ್ಯವನ್ನು ಅರ್ಥಮಾಡಿಕೊಂಡಂತೆ. ಹಾಗಾದರೆ ಈ ಇಂದ್ರಿಯಗಳನ್ನು ನಂಬಬಹುದೋ ಎಂದರೆ ನಂಬಬಹುದು. ಕಾರಣ, ನಮ್ಮ ಇಂದ್ರಿಯಗಳು ದಾರಿ ತಪ್ಪಿಲ್ಲ, ಕೆಟ್ಟುಹೋಗಿಲ್ಲ. ಔಷಧಿಯ ಚೀಟಿಯಲ್ಲಿರುವ ಸಂಕೇತದಂತೆ ಔಷಧಿಯನ್ನು ಪ್ರಮಾಣವರಿತು ಬೆರಸುವುದಾದರೆ ನಿಜವಾಗಿಯೂ ಅದು ಕೆಂಪು ಕಂದು ಬಣ್ಣದ್ದಾಗುವುದು, ಮಂದವಾದ ಅಸಹ್ಯ ವಾಸನೆಯ ದ್ರಾವಕವಾಗುವುದು. ಇದಕ್ಕೆ ಸರ್ವಸಾಧಾರಣವಾಗಿ ಎಲ್ಲರ ಒಪ್ಪಿಗೆಯೂ ಇದೆ. ಕಾವೇರಿಯ ಸೇತುವೆ ನಾವು

ನೀವು ನೋಡಿದಂತೆ ಇನ್ನೂ ಬಹು ಜನಕ್ಕೆ ಕಾಣುವುದು. ಹೀಗಿರುವಾಗ ಇಂದ್ರಿಯಗಳ ಅನುಭವಗಳನ್ನು ಅಲ್ಲಗಳೆಯುವುದು ಸರ್ವಥಾ ಕೂಡದು.

ಹೆಚ್ಚು ಉಪಯುಕ್ತವಾದ ದೃಷ್ಟಿಯಿಂದ ತೆಗೆದುಕೊಳ್ಳುವುದಾದರೆ ಸತ್ಯದಲ್ಲಿ 'ಅಲೌಕಿಕ' ಅಥವಾ 'ಅನನುಭಾವಿಕ' ಸತ್ಯ, 'ಲೌಕಿಕ' ಅಥವಾ 'ಅನುಭವವೇದ್ಯವಾದ' ಸತ್ಯ ಎಂದು ಎರಡು ಬಗೆಯಿದೆ ಎನ್ನಬಹುದು.

"ನಮ್ಮ ಮನೆಯ ದಾರಿಯನ್ನು ಬೆಳಗುತಿರುವ ಚಿಕ್ಕಮಕ್ಕಳಂತೆ ಚುಕ್ಕಿ ಮಿಣಗುತಿವೆ" ಎಂಬುದು ಒಬ್ಬ ಸಾಹಿತಿಯ ಮಾತು. ಈ ಇಲ್ಲಿ ಹೇಳಿದ ಸತ್ಯ ಖಗೋಳಶಾಸ್ತ್ರಜ್ಞನಿಗೆ ಪ್ರಯೋಜನವಿಲ್ಲ. ಆದರೂ ಅದು ಕವಿಗೆ ಅನುಭವವೇದ್ಯವಾದ ಸತ್ಯ. ಬೇಸಗೆಯ ಬಿಸಿಲಿನಲ್ಲಿ ಮೈ ಬೆವರಿರಲು ಸಾಲಗಾರರ ಮನೆಗೆ ಹೋಗಿ ಕೊಟ್ಟ ಹಣ ಕೈಗೆ ಬರದೆ ಹಿಂದಿರುಗುವಾಗ ನಾವು ನಡೆದುಹೋದ ಒಂದು ಮೈಲಿ ಹತ್ತು ಮೈಲಿಯಂತೆ ತೋರುವುದು. ಆದರೆ ಅದೇ ಒಂದು ಬೆಳ್ದಿಂಗಳ ರಾತ್ರಿ ಯಕ್ಷಗಾನವನ್ನು ನೋಡಲು ಹತ್ತು ಜನ ಕೂಡಿ ಹೋಗುವುದಾದರೆ ಹತ್ತು ಮೈಲಿಯೂ ಒಂದು ಮೈಲಿಯಂತೆ ಭಾಸವಾಗುವುದು. ದಂತವೈದ್ಯನ ಕುರ್ಚಿಯ ಮೇಲೆ ಕಳೆದ ಹದಿನೈದು ನಿಮಿಷಗಳು ಹದಿನೈದು ಗಂಟೆಗಳಾದರೆ ನಮ್ಮ ಪ್ರಿಯೆಯೊಡನೆ ಮಾತನಾಡುವ ಹದಿನೈದು ಗಂಟೆಗಳು ಹದಿನೈದು ನಿಮಿಷಗಳಾಗಿ ಬಿಡುವುವು. ಇಲ್ಲಿ ಯಾವುದು ಸತ್ಯ? ಯಾವುದು ಅಸತ್ಯ? ಇಲ್ಲಿಯೂ ಸತ್ಯವು ದ್ವಿಮುಖವಾಗಿಲ್ಲವೆ?

ಒಂದು ಸತ್ಯ ವಿಷಯಪ್ರಾಮಾಣ್ಯವನ್ನೊಳಗೊಂಡ ಶಾಸ್ತ್ರಸತ್ಯ. ಮತ್ತೊಂದು ವಿವಿಧ ದೃಷ್ಟಿಕೋನದಿಂದ ಇಂದ್ರಿಯಗಳ ಮೂಲಕ ಅನುಭವಿಸಿದ ಕಾವ್ಯಸತ್ಯ. ಮೊದಲನೆಯದು ಬುದ್ಧಿಗೋಚರ, ಎರಡನೆಯದು ಹೃದಯಗೋಚರ. ಎಂದ ಮೇಲೆ ಕಾವ್ಯಸತ್ಯ ಭಾವನಾಮಯವಾದ ಅನುಭವ ಪ್ರಾಮಾಣ್ಯವುಳ್ಳ ಹೃದಯಕ್ಕೆ ಮಾತ್ರ ಗೋಚರವಾಗಬಲ್ಲ ಸತ್ಯ.

ಕಾವ್ಯಸತ್ಯವನ್ನು ಕುರಿತು ಹೇಳಬಹುದಾದ ಎಲ್ಲ ವಿಷಯವೂ ಇಲ್ಲಿ ಬಂದಿಲ್ಲ. ಒಂದೆರಡು ಉದಾಹರಣೆಗಳನ್ನಿಟ್ಟುಕೊಂಡು ವಿಷಯದ ವಿವರಣೆಗೆ ಮಾತ್ರ ಇಲ್ಲಿ ಪ್ರಯತ್ನಿಸಿದೆ. ಈ ಪ್ರಯತ್ನ ಕೂಡ ಒಂದು ಅರುಂಧತೀ ಪ್ರದರ್ಶನವೆಂದು ಮಾತ್ರ ಹೇಳಬಹುದು.

ಎಸ್. ವಿ. ಪರಮೇಶ್ವರಭಟ್ಟ

# ಕುಮಾರವ್ಯಾಸ

“ನಮ್ಮ ಈ ದಿವ್ಯಕವಿ (ಕುಮಾರವ್ಯಾಸ) ನಮ್ಮವನು ; ಕನ್ನಡಿಗನು ; ಕನ್ನಡಿಗರ ಕುಲವನ್ನು ಒಂದಾಗಿ ಬೆಸೆಯುವವನು ; ಕನ್ನಡಿಗರ ದೊಡ್ಡ ಹೆಮ್ಮೆ ; ದೊಡ್ಡ ಕಣ್ಣು ; ಮಹಾತ್ಮ ;......ಕನ್ನಡ ಕಾವ್ಯವೃಷ್ಟಿಯ ಕಾಮನಬಿಲ್ಲಿನಲ್ಲಿ ಈತನ ನೆಲೆ ನಟ್ಟನಡು ; ನೆತ್ತಿಯ ಮುಡಿ ; ಹಳೆಯ ಹೊಸ ಕನ್ನಡದ ತಲೆಯ ಕಿರೀಟ ;...... .ನಾಡು ನಾಡೇ ಮೊಳಗಿ ರೋಮಾಂಚಗೊಳ್ಳುವಂತೆ ರಸವನ್ನ, ಇಂಪನ್ನ, ಲಯವನ್ನ, ತಾನವನ್ನ, ಮಾತಿನ ಹರಹನ್ನ, ಛಂದಸ್ಸಿನ ಕುಣಿತವನ್ನ ಲೀಲಾಜಾಲವಾಗಿ ಹೊಮ್ಮಿಸಿ ಹರಿಯಿಸಿದ ಮಾಟಗಾರ. ಕನ್ನಡದ ಹೊಸ ಹುಟ್ಟಿನಲ್ಲಿ ಹೊಸ ಮಾರ್ಗಕ್ಕೆ, ಹೊಸ ಶಕ್ತಿಗೆ ದಿಕ್ಸೂಚಿ, ಧ್ರುವತಾರೆ.”

ಬಿ. ಎಂ. ಶ್ರೀಕಂಠಯ್ಯನವರು

ವಿಸ್ತಾರವಾಗಿರುವ ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಪಂಪನಂತಹ ಉದ್ದಾಮ ಕವಿಗಳಿದ್ದಾರೆ. ಸರ್ವಜ್ಞನಂತಹ ಜನಸಾಮಾನ್ಯರ ಕವಿಗಳಿದ್ದಾರೆ. ಹರಿಹರನಂತಹ ಭಕ್ತಿಯ ಆವೇಶದ ಕವಿಗಳಿದ್ದಾರೆ. ಲಕ್ಷ್ಮೀಶನಂತಹ ಮಂಜುಳ ನಿನಾದದಿಂದ ತಣಿಸುವ ಕವಿಗಳಿದ್ದಾರೆ. ಆದರೆ ವಿಶಾಲಭಾವನೆ, ಉದಾತ್ತ ಪಾತ್ರಗಳ ನಿರೂಪಣೆಗಳಿಂದ ಜನಸಾಮಾನ್ಯರ ಭಾಷೆಯಲ್ಲಿ ಅವರ ಅನುಭವಗಳನ್ನು ಹೇಳುವುದರ ಮೂಲಕ, ವೀರ ಸಂಗ್ರಾಮಗಳ ವರ್ಣನೆಗಳಿಂದ, ಕೃಷ್ಣನ ಭಕ್ತಿಯ ಆವೇಶದಿಂದ, ಸರಳ ಷಟ್ಪದಿಗಳಲ್ಲಿ ಕನ್ನಡದ ಕೆಚ್ಚು ಇಂಪುಗಳನ್ನು ಸೂರೆಗೊಳ್ಳುವುದರ ಮೂಲಕ ಕುಮಾರವ್ಯಾಸನು ಭಿನ್ನರುಚಿಗಳ ಜನರಿಗೆ ಒಂದು ಸಮಾರಾಧನೆಯನ್ನು ಒದಗಿಸಿಕೊಟ್ಟ ಕನ್ನಡದ ಬಹು ಜನಪ್ರಿಯ ಕವಿಯಾಗಿದ್ದಾನೆ.

ಕರ್ನಾಟಕದ ಹಿರಿಯ ಕವಿ ಕುಮಾರವ್ಯಾಸ, ಅಂದರೆ ನಮ್ಮ ನಾರಣಪ್ಪ, ಗದುಗಿನ ಬಳಿಯ ಕೋಳಿವಾಡದ ಕರಣಿಕನೆಂಬ ಹೇಳಿಕೆಯಿದೆ. ಆತನು ಹೆಚ್ಚು ಶಿಕ್ಷಣ ಸಂಸ್ಕಾರ ಪಡೆದಿಲ್ಲವೆಂಬ ಮಾತನ್ನು ಹೇಳಲಾಗುತ್ತಿದೆ. ‘ಕುಱಿತೋದದೆಯುಂ ಕಾವ್ಯಪ್ರಯೋಗ ಪರಿಣತಮತಿ’ ಗಳಾಗಿರುವವರ ನಾಡಿನವನಾದುದರಿಂದ ಆ ಹೇಳಿಕೆಯನ್ನು ನಿಜವೆಂದು ಭಾವಿಸಿದರೂ ತಪ್ಪಲ್ಲ. ಅದೇನಿದ್ದರೂ ನಾರಣಪ್ಪ ಕನ್ನಡ ನಾಡಿನಲ್ಲಿ ಹಲಗೆ ಬಳಪವ ಹಿಡಿದವರನ್ನೂ ಹಿಡಿಯದವರನ್ನೂ ತನ್ನ ನುಡಿಯ ಗಾರುಡಿಯಿಂದ ಮುಗ್ಧಗೊಳಿಸದೆ ಇಲ್ಲ. ಈತನ ಅನ್ಯಭಾಷಾ ಪ್ರಯೋಗಗಳನ್ನು ಕಂಡು ಆಂಡಯ್ಯನೂ, ವ್ಯಾಕರಣಕ್ಕೆ ಸಲ್ಲದ ರೂಪಗಳನ್ನು ನೋಡಿ ಕೇಶಿರಾಜನೂ ಕೋಪಗೊಳ್ಳುವುದು ಸಹಜವಾದರೂ ಈತನ ‘ಸೊಗಸಿನ ಸಾಗರದ ಲಹರಿ’, ‘ನೂತನಾಲಾಪ’ಗಳನ್ನು ಕಂಡು ಅವರೂ ಮೆಚ್ಚಿಗೆಯನೀಯದಿರಲಾರರು. ಕವಿ ಗದುಗಿನ ವೀರನಾರಾಯಣನ ಭಕ್ತನಾದ ಬ್ರಾಹ್ಮಣನಾಗಿದ್ದರೂ ಈತನ ಮತದ ವಿವರವನ್ನು ನಿರ್ಣಯಿಸುವುದು ಸಂಶೋಧಕರಿಗೆ ಒಂದು ದೊಡ್ಡ ಸಮಸ್ಯೆಯಾಗಿದೆ. ಈತನು ದ್ವೈತಿಯೋ, ಅದ್ವೈತಿಯೋ, ವೈಷ್ಣವನೋ, ಸ್ಮಾರ್ತನೋ, ಭಾಗವತನೋ ಅಥವಾ ಯಾವ ಮತದ ಗೋಜಿಗೂ ಹೋಗದ ಭಕ್ತನೋ—ಎಂಬ ಅನೇಕ ಸಂದೇಹಗಳಿಗೆ ಎಡೆಗೊಡುತ್ತಿದೆ ಈತನ ಕಾವ್ಯ.

ಅಂತೆಯೇ ಶ್ರೀಕಂಠಯ್ಯನವರು 'ಆತನ ಹಣೆಯಮೇಲೆ ಯಾವ ಲಾಂಛನ ವಿದ್ದರೇನು ನಮಗೆ? ಈ ಕವಿ ನಮ್ಮವನು; ಕನ್ನಡಿಗನು' ಎಂದು ಹೇಳಿರುವುದು ಉಚಿತವೇ ಆಗಿದೆ. ಆದುದರಿಂದ ನಾವು ನಾರಣಪ್ಪನನ್ನು ವಿಶಾಲ ಹೃದಯದ ಕನ್ನಡಿಗನೆಂದು ತಿಳಿದರೆ ಸಾಕೆಂದು ತೋರುತ್ತದೆ. ಆತನ ಹಣೆಯಮೇಲೆ ಯಾವುದೊಂದು ಲಾಂಛನವಿರಲೇಬೇಕೆಂದು ಯಾರಾದರೂ ಹಟತೊಟ್ಟರೆ ಅಲ್ಲಿ ನಾವು ಕನ್ನಡ ಬಾವುಟದ ಲಾಂಛನವನ್ನು ತೋರಿಸೋಣ. ಕವಿಯ ಮತವೇನೇ ಇದ್ದರೂ ಆತನು ಭಕ್ತನೆಂಬುದು ನಿಜ. ವೀರನಾರಾಯಣನೆದುರು ತೊಯ್ದು ಬಟ್ಟೆ ಒಣಗುವವರೆಗೆ ಆತನ ಕಾವ್ಯಸ್ಫೂರ್ತಿ ಹರಿದು ಕಾವ್ಯ ಹೊರಬೀಳುತ್ತಿತ್ತೆಂದು ದಂತಕಥೆ ಹೇಳುತ್ತದೆ. ಅದು ಸಾಧ್ಯವೋ, ಅಲ್ಲವೋ, ಎಂಬುದನ್ನು ಅಂತಹ ಉತ್ಕಟವಾದ ಭಕ್ತಿಯುಳ್ಳವರೇ ಹೇಳಲಿ. ನಮಗೆ ಮಾತ್ರ ಈ ದಂತಕಥೆ ಕವಿಯ ಭಕ್ತಿಪರವಶತೆ, ಆತನ ಕಾವ್ಯದ ನಿರರ್ಗಳ ಸ್ಫೂರ್ತಿ— ಇವುಗಳ ಸಂಕೇತ ವೆಂದು ತೋರದಿರಲಾರದು. ಕನ್ನಡ ಭಾರತವನ್ನು ಓದುವಾಗಿನ ಉತ್ಸಾಹದ ತುದಿಯಿಂದ ನೆಗೆಯುತ್ತಿರುವಾಗ ವಾಚಕನ ತೊಯ್ದ ಬಟ್ಟೆ ಒಣಗಲೂ ಬಹುದು. ನಾರಣಪ್ಪನ ವಾಗ್ಝರಿ ಮಾತ್ರ ಎಂದಿಗೂ ಒಣಗಲಾರದೆಂಬ ಅನುಭವವನ್ನು ವಾಚಕರು ಪಡೆಯಬಲ್ಲರು. ಕುಮಾರವ್ಯಾಸನ ಬಗೆಗಿರುವ ದಂತಕಥೆಗಳು ಆತನ ಶಿಕ್ಷಣ, ಮತ ಇವುಗಳ ಬಗೆಗೆ ಭಿನ್ನಾಭಿಪ್ರಾಯಗಳನ್ನುಂಟುಮಾಡಿದಂತೆ ಆತನ ಕಾಲದ ಬಗೆಗೂ ಉಂಟುಮಾಡಿವೆ. ಹರಿಹರ, ರಾಘವಾಂಕ, ಕೆರೆಯ ಪದ್ಮರಸರ ಜೊತೆಗೆ ಈತನ ಹೆಸರನ್ನು ಸೇರಿಸಿ ಹೇಳುವುದೂ ಉಂಟು. ಹಾಗಿದ್ದರೆ ಈತನು ಹನ್ನೆರಡನೆಯ ಶತಮಾನದ ಕೊನೆಯ ಭಾಗ ಹಾಗೂ ಹದಿಮೂರನೆಯ ಶತಮಾನದ ಆದಿಭಾಗದಲ್ಲಿದ್ದನೆಂದಾಗುತ್ತದೆ. ಚಾಮರಸ, ಕುಮಾರವ್ಯಾಸರ ಬಗೆಗಿರುವ ದಂತಕಥೆಯಿಂದ ಈತನು ಸು. ೧೪೩೦ ರಲ್ಲಿದ್ದನೆಂದೂ ಚಾಮರಸನ ತಂಗಿಯ ಗಂಡನೆಂದೂ ತಿಳಿಯುತ್ತದೆ. ಕವಿಚರಿತ್ರಕಾರರು ಇದೇ ಅಭಿಪ್ರಾಯ ವನ್ನಿಟ್ಟುಕೊಂಡಿದ್ದಾರೆ. ಅಂದರೆ ವಿಜಯನಗರದ ಪ್ರೌಢದೇವರಾಯನ (೧೪೧೯-೧೪೪೬) ಆಳಿಕೆಯಲ್ಲಿ ಈ ಕವಿ ಕಾವ್ಯ ರಚಿಸಿದನೆಂದು ಅನೇಕರ ಅಭಿಪ್ರಾಯ. ವಿಜಯನಗರದ ಕೃಷ್ಣದೇವರಾಯನು (೧೫೦೯-೧೫೨೯) ತಿಮ್ಮಣ್ಣಕವಿಗೆ "ಕುಮಾರ ವ್ಯಾಸನು ಭಾರತದ ದಶಪರ್ವಗಳನ್ನು ಕನ್ನಡದಲ್ಲಿ ಮೊದಲು ಹೇಳಿದನು. ನೀನು ಉಳಿದ ಪರ್ವಗಳನ್ನು ಹೇಳು" ಎಂದು ಆಜ್ಞೆಮಾಡಿದನೆಂದು ತಿಳಿಯುತ್ತದೆ. ಈ ಹೇಳಿಕೆಯನ್ನು ಅನುಸರಿಸಿ ಅನೇಕರು ನಾರಣಪ್ಪ ೧೫೦೯ಕ್ಕೆ ಮೊದಲೇ ಇದ್ದಿರಬೇಕೆಂದು ಅಭಿಪ್ರಾಯಪಟ್ಟರೆ ಇನ್ನೊಂದು ಪಂಗಡದವರು ಇದೇ ಹೇಳಿಕೆಯ ಆಧಾರದಮೇಲೆ ಈ ಕವಿಯು ಕೃಷ್ಣದೇವರಾಯನ ಆಳಿಕೆಯಲ್ಲಿಯೇ ಇದ್ದಿರ ಬಹುದೆಂದು ಊಹಿಸುತ್ತಾರೆ. ಮೇಗಣ ಹೇಳಿಕೆಗಳು ಕುಮಾರವ್ಯಾಸನು ಹೊಯ್ಸಳ, ವಿಜಯನಗರ ರಾಜರುಗಳ ಕಾಲದವನೆಂದು ಸೂಚಿಸುತ್ತವೆ. ಆದರೆ ಶ್ರೀಮಾನ್ ಗೋವಿಂದ ಪೈ ಅವರು ಈ ಕವಿಯು ಹೊಯ್ಸಳ ಅರಸುಮನೆತನ ಅದೇ ಮುಗಿದು 'ಸೇವುಣ'ರು ಕರ್ನಾಟಕವನ್ನು ಆಳತೊಡಗಿದ ಕಾಲಕ್ಕೆ ಇದ್ದಿರಬಹುದೆಂದು ಅಭಿಪ್ರಾಯಪಡುತ್ತಾರೆ. ಕವಿಯ ದೃಷ್ಟಿಕೋನ ಹಾಗೂ ಆತನ ಕಾವ್ಯದ

ಭಾಷೆ ಇವುಗಳನ್ನು ನಾವು ನೋಡಿದಾಗ ಈತನು ಭಕ್ತಿಯುಗಕ್ಕೆ ಸೇರಿದವನೆಂದೂ, ಸುಲಭ ನಡುಗನ್ನಡದ ಕಾಲದವನೆಂದೂ ಸ್ಪಷ್ಟವಾಗಿ ತಿಳಿಯುತ್ತದೆ. ಹೇರಳವಾಗಿ ಬರುವ ಮರಾಠಿ ಭಾಷೆಯ ಪ್ರಯೋಗಗಳಿಂದ ಈತನು ಬಹಳ ಪ್ರಾಚೀನನಲ್ಲ ವೆಂದೂ ತೋರುತ್ತದೆ. ಕನ್ನಡದಲ್ಲಿ ಷಟ್ಪದಿಗಳು ನಯುವನ್ನು ಪಡೆದು ಜನ ಸಾಮಾನ್ಯರನ್ನು ಮೆಚ್ಚಿಸುವ ಸ್ಪರ್ಧೆಯ ಯುಗದಲ್ಲಿ ಇದ್ದನೆಂಬುದಂತೂ ನಿಶ್ಚಿತ. ಈ ಯುಗಧರ್ಮದ ಪ್ರಭಾವವನ್ನು ಆತನ ಸರಳ ಹಾಗೂ ಆವೇಶಪೂರ್ಣ ಷಟ್ಪದಿ ಗಳಲ್ಲಿ, ಆತನ ಭಕ್ತಿಯ ಉದ್ರೇಕದಲ್ಲಿ ನಾವು ಕಾಣುತ್ತೇವೆ.

ಕುಮಾರವ್ಯಾಸ ಸರಸ್ವತಿಯ ವರಪ್ರಸಾದವನ್ನು ಪಡೆದವನೂ, ಪರಿಪಕ್ವ ಮನಸ್ಸಿನವನೂ, ಭಕ್ತಿಯುಗದ ನಡುಗನ್ನಡದ ಸುಲಭ ಷಟ್ಪದಿಗಳ ಕಾಲದವನೂ ಆಗಿದ್ದಾನೆ. ಈತನು ಸಂಸ್ಕೃತ ಮಹಾಭಾರತದ ಮೊದಲಿನ ಹತ್ತು ಪರ್ವಗಳನ್ನು —ಅಂದರೆ ಕುರುಕ್ಷೇತ್ರದ ನಂತರ ಧರ್ಮರಾಯನ ಪಟ್ಟಾಭಿಷೇಕದ ವರೆಗಿನ ಕಥಾಭಾಗವನ್ನು — 'ಕರ್ನಾಟಕ-ಭಾರತ-ಕಥಾಮಂಜರಿ' ಎಂಬ ಹೆಸರಿನಲ್ಲಿ ಕನ್ನಡದಲ್ಲಿ ಬರೆದಿದ್ದಾನೆ. ಈತನು ಸಂಸ್ಕೃತ ಗ್ರಂಥದ ಕೇವಲ ಅನುವಾದ ಮಾಡಿಲ್ಲ: ವ್ಯಾಸರ ಕೃತಿಯನ್ನು ಆಧಾರವಾಗಿಟ್ಟುಕೊಂಡು ತನ್ನ ಸ್ವಯಂ ಸ್ಫೂರ್ತಿಯಿಂದ, ಸ್ವತಂತ್ರ ದೃಷ್ಟಿಯಿಂದ ನವೀನ ಕಲಾಕೃತಿಯನ್ನು ರಚಿಸಿದ್ದಾನೆ. ವ್ಯಾಸರ ಭಾವ, ನಾರಣಪ್ಪನ ಭಾಷೆಗಳನ್ನು ಹೆಣೆಯುವುದರ ಮೂಲಕ ಈ ಕನ್ನಡ ಭಾರತವಾಗಲಿಲ್ಲ. ವ್ಯಾಸರ ಕಥೆಯ ರೂಪರೇಖೆ, ನಾರಣಪ್ಪನ ಭಾವ, ಭಾಷೆ ಇವುಗಳ ಸಮನ್ವಯವಿದೆ ಈ ಕಾವ್ಯದಲ್ಲಿ. ಕವಿಯು ತನ್ನ ಕಾವ್ಯಕ್ಕೆ ಕೊಟ್ಟ ಹೆಸರು ಹಿಂದೆ ಉಳಿದು 'ಕನ್ನಡ ಭಾರತ'ವೆಂಬ ಹೆಸರೇ ಹೆಚ್ಚು ಜನಪ್ರಿಯವಾಗಿದೆ. ಅಹುದು, ಈ ಭಾರತ ಕನ್ನಡ ಭಾರತವೇ, ನಾರಣಪ್ಪನ ಭಾರತವೇ. ಹದಿನೆಂಟು ಜನ ಋತ್ವಿಜರ ಹತ್ಯದ ಪಾಪವನ್ನು ನಿವಾರಿಸಲು ಜನಮೇಜಯನು 'ಹರಿಕಥಾ ಮೃತವೆಂಬ ಭಾರತ ವರಕಥೆ'ಯ ಹದಿನೆಂಟು ಪರ್ವಗಳನ್ನು ವ್ಯಾಸರಿಂದ ಕೇಳ ಬೇಕಾಯಿತಂತೆ. ನಾರಣಪ್ಪನಿಂದ ಹತ್ತು ಪರ್ವಗಳನ್ನು ಕೇಳುವ ಭಾಗ್ಯ ಪಡೆದ ಕನ್ನಡಿಗರು ಏನಾದರೂ ಹತ್ತು ಪುಣ್ಯದ ಕಾರ್ಯ ಮಾಡಿರಬಹುದು. ಇಳೆಯ ಜಾಣರೆಲ್ಲ—ಅರಸನ ಆಸ್ಥಾನದ ನಾಲ್ಕು ಜನ ಪಂಡಿತರು ಮಾತ್ರವಲ್ಲ—ಮೆಚ್ಚು ವಂತಿರೆ ನಾರಣಪ್ಪ ಇಲ್ಲಿ ಕೃಷ್ಣ ಕಥೆಯನ್ನು ತಿಳಿದು ಹೇಳಿದ್ದಾನೆ. ಮಹಾ ಭಾರತದ ವಿಸ್ತಾರವಾದ ಪ್ರಪಂಚವು ಅನೇಕ ವ್ಯಕ್ತಿಗಳ ಕಥೆಯಾಗಿದ್ದರೂ ನಾರಣಪ್ಪನಿಗೆ ಮಾತ್ರ ಅದು 'ಕೃಷ್ಣಕಥೆ'ಯೇ ಆಗಿದೆ. 'ಮಹಾಕೃತಿಗೆ ನಾಯಕ ಗದುಗಿನ ವೀರನಾರಾಯಣ'. ಈ ಕಾವ್ಯದಲ್ಲಿ ನೋಡಬೇಕಾದುದು 'ಪದುಮನಾಭನ ಮಹಿಮೆ'. ಮಹಾಭಾರತವು ಅರಸುಗಳಿಗೆ ವೀರ, ದ್ವಿಜರಿಗೆ ಪರಮವೇದದ ಸಾರ, ಯೋಗೀಶ್ವರರ ತತ್ವವಿಚಾರ, ಮಂತ್ರಿಜನಕೆ ಬುದ್ಧಿ ಗುಣ, ವಿರಹಿಗಳ ಶೃಂಗಾರ, ವಿದ್ಯಾಪರಿಣತರಲಂಕಾರ, ಕೋವಿದರಿಗೆ ಮೆಚ್ಚು, ಜಾಣರ ಜೀವ, ಪರಿಣತರ ಹರಣ, ಮೂರ್ಖರಿಗೂ ಪಿಯೂಷಾವಗಾಹನ, ಸಕಳರ ಕುತೂ ಹಳಿಕೆ—ಇಷ್ಟೆಲ್ಲಾ ಆಗಿರಬೇಕೆಂದು ನಾರಣಪ್ಪನ ಅಪೇಕ್ಷೆಯಿರುವಂತೆಯೆ ಇದು ಮುಖ್ಯವಾಗಿ 'ಭಾವುಕರ ಕುಲದೈವ'ವೂ ಆಗಿರುವಂತೆ ಕವಿ ಕಾವ್ಯ ರಚಿಸಿದ್ದಾನೆ.

ತನ್ನ ಕಾವ್ಯ 'ಮಾಧವ ತಿಳಕನನು ಮನಮುಟ್ಟಿ ಹೊಗಳುವ ಪಂಚಮ ಶ್ರುತಿ' ಎಂದೇ ಆತನ ಭಾವನೆ. ಅಲ್ಲದೆ ಒಮ್ಮೆ ಕವಿಯು,

ಪದಪ ಪ್ರೌಢಿಯ ನವರಸಂಗಳ । ವುದಿತವನುಪಭಿಧಾನ ಭಾವದ
ಬೆದಕಲಾಗದು ಬಲ್ಲ ಪ್ರೌಢರುಯೀ ಕಥಾಂತರಕೆ
ಇದ ವಿಚಾರಿಸೆ ಬಜಿಯ ತೊಳಸಿಯ । ವುದಕದಂತಿರೆಯಿಲ್ಲಿ ನೋಟ್ಪುದು
ಪದುಮನಾಭನ ಮಹಿಮೆ ಧರ್ಮವಿಚಾರ ಮಂತ್ರವನು ॥

ಎಂದು ಹೇಳಿದ್ದರೂ ತನ್ನ 'ಕಲಾವಿಲಾಸದ ಚಮತ್ಕಾರ'ವು ಸರಸರಿಗೆ, ಸಾಹಿತ್ಯರಿಗೆ, ಪರಿಶರಣರಿಗೆ, ಸುಜನರಿಗೆ, ಶಾಂತಾತ್ಮರಿಗೆ ಪರವೆಂದೂ ಅಜ್ಞರಿಗೂ ಕೂಡ ಚಿತ್ತಾಕರಷಣವೆಂದೂ ಕವಿಯು ತಿಳಿದುಕೊಂಡಿದ್ದಾನೆ. ಎಲ್ಲರಿಗಾಗಿ ಕನ್ನಡ ಕಾವ್ಯ ರಚಿತವಾಗುವ ಯುಗದಲ್ಲಿದ್ದ ನಾರಣಪ್ಪನು ಭಾರತದ ಕಥೆ ಎಲ್ಲರಿಗಾಗಿ ಇದೆ ಎಂಬುದನ್ನು ತಿಳಿಸಿದ್ದಾನೆ:

ಪೃಥ್ವಿಯಮರರು ಕೇಳೆ ವೇದಪ । ವಿತ್ರರಹರು ಮಹಾವಿಭೂತಿಯ
ಕ್ಷತ್ರಿಯರು ಕೇಳಿದರೆ ಶೌರ್ಯ ಸಮರ್ಥರೆನಿಸುವರು
ಅರ್ಥಪತಿಯೆನಿಸುವರು ವಿಶರು ಚ । ತುರ್ಥಕರು ಧನಧಾನ್ಯದಿಂದ ಸ
ಮರ್ಥರೆನಿಸುಗುವೊಲಿದು ಭಾರತ ಕಥೆಯ ಕೇಳ್ದಡೆಗೆ ॥

ಭಾರತ ಕಥೆ ಚತುರ್ವರ್ಣದವರಿಗೂ ಉಪಯುಕ್ತವಾಗಿದೆ. ಕನ್ನಡ ಭಾರತದ ಕಾವ್ಯ ಶೈಲಿಯು ಇಂದು ಕವಿಗಳಿಗೆ ಸ್ಫೂರ್ತಿಯನ್ನೂ, ರಸಿಕರಿಗೆ ಆನಂದವನ್ನೂ, ಸಂಶೋಧಕರಿಗೆ ವಿಸ್ತಾರ ಕ್ಷೇತ್ರವನ್ನೂ, ವಿದ್ಯಾರ್ಥಿಗಳಿಗೆ ವಿಪುಲ ಅನ್ನವನ್ನೂ ಕೊಟ್ಟು ಸಾಹಿತ್ಯ ಕ್ಷೇತ್ರದ ಚತುರ್ವರ್ಗಗಳನ್ನು ತಣಿಸುತ್ತಿದೆ.

ನಾರಣಪ್ಪ ಯಾರ ಮನೆಯಲ್ಲಿಯೋ ಆಳಾಗಿ ದುಡಿಯುವಾಗ ಸಂಸ್ಕೃತ ಭಾರತದ ಹತ್ತು ಪರ್ವಗಳನ್ನು ಕೇಳಿ ಸ್ಫೂರ್ತಿ ಪಡೆದು ಅದನ್ನು ತನಗೆ ತಿಳಿದಂತೆ ಕನ್ನಡಿಸಿ ಓರ್ವ ಸಹಾಯಕನಿಂದ ಅದನ್ನು ಬರೆಸಿದಂತೆ ಒಂದು ದಂತಕಥೆ ಇದೆಯಂತೆ. ಈ ಕಥೆಯ ಉದ್ದೇಶವು ಕನ್ನಡ ಭಾರತವು ಪಾಮರರ ಸಾಹಿತ್ಯವೆಂದಿರಬೇಕು. ಆದರೆ ಅದೆಷ್ಟು ಜನ ಪಂಡಿತರನ್ನು ಈ ಕಾವ್ಯ ತಣಿಸಿಲ್ಲ? ಪಂಡಿತರಿಗೂ ಪಾಮರರಿಗೂ ಮೆಚ್ಚಿಗೆಯಾಗಿ ಕನ್ನಡ ಶಬ್ದಶಕ್ತಿಯ ವಿಸ್ತಾರವನ್ನು ಸಿದ್ಧಮಾಡಿ ತೋರಿಸಿ, ವಿವಿಧ ರುಚಿಯವರಿಗೆ ಒಂದು ಸಮಾರಾಧನೆಯನ್ನೇರ್ಪಡಿಸಿ ಕನ್ನಡದ ವಚನ ಗಾರುಡಿಯಿಂದ ತಣಿಸುತ್ತಿರುವ ಕುಮಾರವ್ಯಾಸನು ಕನ್ನಡ ಕಾವ್ಯ ಸೌಧದಲ್ಲಿಯ ಒಂದು ಬೆಲೆಯುಳ್ಳ ಭಾಂಡಾರವಾಗಿದ್ದಾನೆ. ಚಂಪೂ ಕಾವ್ಯಗಳ ಕ್ಲಿಷ್ಟತೆ, ಮತೀಯ ಕಾವ್ಯಗಳ ಹೋರಾಟ, ರಸಿಕಕಾವ್ಯಗಳ ಹವಣು ಮೀರಿದ ಶೃಂಗಾರದ ಅಸಹ್ಯತೆ— ಇವುಗಳು ಬೇಸರವನ್ನುಂಟುಮಾಡುತ್ತಿದ್ದಾಗ,

ಮಾತು ಜೆಜಿಗಿನ ಬಳಕೆ ರಾಗದ । ರೀತಿ ಕರ್ಣಾಮೃತದ ಬೆಳೆದ ಸು
ಧಾತು ಜಾಣರ ಧಾತು ಸೊಗಸಿನ ಸಾಗರದ ಲಹರಿ
ನೂತನಾಳಾಪವನು ಲೋಕದ । ಧಾತುಗಳ ಬಳಕೆಗಳ ಬೆಳಪ ಸು
ಧಾತು ರಂಗದಸಮ ಕುಮಾರವ್ಯಾಸ ಕೃತಿವಚನ ॥

— ಇವು ಕನ್ನಡಿಗರಿಗೆ ಹರುಷವನ್ನುಂಟುಮಾಡಿರಬೇಕು. ಈ ಲೇಖನದ ಉದ್ದೇಶವು ನಾರಣಪ್ಪನ 'ಕವಿಕಲಾ ವಿಲಾಸದ ವರ ಚಮತ್ಕಾರ'ವನ್ನು ವಿವರವಾಗಿ ನಿರ್ದೇಶಿಸುವುದಲ್ಲ, ಆದರೆ ನವಕರ್ನಾಟಕದ ಉದಯಕಾಲದಲ್ಲಿ 'ಕುಮಾರವ್ಯಾಸ

ಕೃತಿವಚನ' ಕನ್ನಡಿಗರನ್ನು ಬಡಿದೆಬ್ಬಿಸಿ, ಉತ್ಸಾಹ ತುಂಬಿ ಕನ್ನಡಿಗರ ಒಕ್ಕೂಟಕ್ಕೆ ಕಾರಣವಾಗಬಲ್ಲದೆಂಬುದನ್ನು ಹೇಳುವುದಾಗಿದೆ. ಗಮಕಿಗಳೂ ಶ್ರೀಕಂಠಯ್ಯ ನವರಂತಹ ವಾಗ್ಮಿಗಳೂ ಈ ಪ್ರಯೋಗವನ್ನು ಯಶಸ್ವಿಯಾಗಿ ಮಾಡಿಯೂ ನೋಡಿದ್ದಾರೆ.

ನಾರಣಪ್ಪನ ಕಾವ್ಯದಲ್ಲಿ ಕನ್ನಡವು ಒಂದು ಗಡಿಯನ್ನು ಮುಟ್ಟಿದೆ. ಕನ್ನಡ ಭಾಷೆಯ ಶಬ್ದಗಳನ್ನು ಹಿಗ್ಗಿಸಿ ಹಿಗ್ಗಿಸಿ, ಅವುಗಳ ಅಂತಃಸತ್ತ್ವವನ್ನು ಜಿದಕಿ, ಮನೆಮಾತಿನ— ಜನಸಾಮಾನ್ಯರ ಜೀವಂತ ಭಾಷೆಯ — ರೀತಿಯನ್ನು ಅರಿತು, ಅದರಲ್ಲಿಯ ಕೆಚ್ಚನ್ನು ಕಂಡುಕೊಂಡು, ಅದನ್ನು ತನ್ನ ಕಾವ್ಯದಲ್ಲಿ ಬಳಸಿಕೊಂಡು ಕನ್ನಡದ ಶಕ್ತಿಯನ್ನು ಹೆಚ್ಚಿಸಿದನು ನಾರಣಪ್ಪ ಅಂದು. ಇಂದು ನಾವು ಮಾಡ ಬೇಕಾಗಿರುವ ಕಾರ್ಯವೂ ಅದೇ. ನಮ್ಮ ಹೊಸ ಯುಗದ ಹೊಸ ಭಾವಗಳನ್ನು ನಿರೂಪಿಸಲು ಕನ್ನಡದಲ್ಲಿ ಶಬ್ದಗಳಿಲ್ಲವೆಂದು ಕೊರಗುತ್ತ ಕೂಡುವ ಜನ ನಮ್ಮಲ್ಲಿ ಇನ್ನೂ ಇದ್ದಿರಬೇಕು. ಕುಮಾರವ್ಯಾಸನ ಕನ್ನಡದ ಅಭ್ಯಾಸ, ಅನುಕರಣ ಇಂತಹ ನಿರುತ್ಸಾಹಿಗಳನ್ನು ಎಚ್ಚರಿಸಬಹುದೆಂದು ನನಗೆ ತೋರುತ್ತದೆ. ನಾರಣಪ್ಪನು ಹಾಕಿದ ಹಾದಿಯಲ್ಲಿ ನಾವು ಮುಂದುವರಿದರೆ ಕನ್ನಡ ಭಾಷೆಯ ಕೆಚ್ಚು, ಹರಹು, ಇಂಪು, ಅರ್ಥಗಾಂಭೀರ್ಯ— ಇವುಗಳನ್ನು ನಾವು ಅರಿತುಕೊಂಡು ಅವುಗಳನ್ನು ಬೆಳೆಸಬಹುದು. ವೀರಸಂಗ್ರಾಮದ ಭಾಷೆಗೆ ಕುಮಾರವ್ಯಾಸನದೇ ಒಂದು ಶಬ್ದ ಕೋಶ. ಒಂದೆರಡು ಸಂದರ್ಭಗಳ ರುಚಿ ನೋಡಬೇಕು. ಆಶ್ರಮದಲ್ಲಿ ಜರಾಮನ್ಯು ವೆಂಬ ದೈತ್ಯನು ಯಜ್ಞಗಳನ್ನು ಕೆಡಿಸುತಿಹನೆಂಬ ಸುದ್ದಿಯನ್ನು ವಿಭಾಂಡಕರ ತನುಜನಿಂದ ತಿಳಿದು ಕರ್ಣನು ದೈತ್ಯನನ್ನು ಪರಿಹರಿಸಲು ಬಂದನು. ಆಗ,

ಎಲವೆಲವೊ, ಕವಿ ಕೊಲ್ಲೆನುತ್ತಾ । ಖಳನು ಮಾಯಾಜಾಲದಲಿ ರಿಪು
ಜಲಧಿ ಬಡಬನೊಳಾಂತು ನಿಂದನು ದೈತ್ಯಬಲ ಸಹಿತ
ಕಲಕಿದನು ಬಲ ಜಲಧಿಯನು ಬಲು । ಚಳಕದಲಿ ತೆಗೆದೆಸುತ ಸಲೆ ಮು
ಕ್ಕುಳಿಸಿದನು ವಿಜ್ಞಾನ ಸಂಜ್ಞಾನಾಸ್ತ್ರದಲಿ ಬಲವ॥

ಹೊಕ್ಕನಾ ಬಲ ಜಲಧಿಯನು ಸದೆ । ದಿಕ್ಕಿ ದೈತ್ಯನ ಮಾಯೆಯೆಲ್ಲವ
ಸುಕ್ಕಿಸಿದನದಟಂದ ಮಾಯಾಸಂಜ್ಞಿಕಾಸ್ತ್ರದಲಿ
ಮುಕ್ಕು ಖಳನೈತಂದ ಗದೆ ಗೊಂ । ಡೆಕ್ಕತುಳದಲಿ ಕೋಪದಲಿ ಕಿಡಿ
ಯುಕ್ಕಲೆಜಿಗಿದನಿವನನೈದಿ ನಭೋಂಗಣದೊಳಸುರ॥

ಬಲವ ಕಲಕಿದನು, ಮುಕ್ಕುಳಿಸಿದನು, ಮಾಯೆಯ ಸುಕ್ಕಿಸಿದನು, ಕೋಪದಲಿ ಕಿಡಿಯಿಕ್ಕಲೆಜಿಗಿದನು— ಈ ಬಗೆಯ ಶಬ್ದಗಳ ಕೆಚ್ಚನ್ನು ಓದುಗರು ಗಮನಿಸಬೇಕು. ಆ ಶಬ್ದಗಳಲ್ಲಿಯ ಶಕ್ತಿಯನ್ನು ಕಂಡು ಅನುಭವಿಸಿ ಕನ್ನಡವು ವೀರ ಭಾಷೆಗೆ ಕೊಡಬಹುದಾದ ಕಾಣಿಕೆಯನ್ನು ತಿಳಿದುಕೊಳ್ಳಬೇಕು. ಕವಾಯತು ಗಳಲ್ಲಿ ಆಜ್ಞೆಕೊಡಲು ಹಿಂದೀ ಶಬ್ದಗಳೇ ಯೋಗ್ಯವೆಂದು ಒಮ್ಮೆ ಒರ್ವರು ಹೇಳಿದ್ದು ನನಗೆ ನೆನಪಿದೆ. ಕನ್ನಡವನ್ನು ಸರಿಯಾಗಿ ಜೀರ್ಣಿಸಿಕೊಂಡರೆ, ಬಳಸಿಕೊಂಡರೆ ಇಂತಹ ತಪ್ಪು ಕಲ್ಪನೆಯು ದೂರಾಗಬಹುದೆಂದೂ ನಾನು ವಾದಿಸಿದ್ದೆ. ಕುಮಾರ ವ್ಯಾಸನ ಕನ್ನಡ ಶಬ್ದಸಂಪತ್ತಿನ ಪರಿಚಯದಿಂದ ಆ ಅಭಿಪ್ರಾಯ ಇನ್ನೂ ಪೃಥ

ವಾಗುತ್ತಿದೆ. ಕುರುಕ್ಷೇತ್ರದ ಆರಂಭದಲ್ಲಿ ಉಭಯ ಬಲಗಳು ಕವಿದು ಹಳಚುವುದನ್ನು ಕವಿ ಭೀಷ್ಮಪರ್ವದಲ್ಲಿ ವರ್ಣಿಸುತ್ತಾನೆ:

ಎಲೆಲೆ ಕವಿ ಬೆರಸು ಬೆರಸಿ । ಟ್ಟಳಿಸು ತಿವಿ ತಿವಿ ಭಲರೆ ಭಲರತಿ
ಭಲರೆ ಹಿಂಚದಿರಿನ್ನು ಹೊಯ್ ಹೊಯ್ ಚೂಣಿಗರನೆನುತ
ಬಲಜಲಧಿ ಮುಕ್ಕುಳಿಸಿ ಮಿಗೆ ಹೆ । ಕ್ಕಳಿಸಿ ಕವಿದುದು ಗಿರಿಯ ಬೈಸಿಕೆ
ಕಳಚಿತಹಿಪನ ಕೊರಳು ಕುಸಿದವು ಕಮಠನೆದೆ ಬಿರಿದ॥

—ಕವಿ ಕವಿ, ತಿವಿ ತಿವಿ, ಹೊಯ್ ಹೊಯ್, ಈ ಆಣತಿ ಮಾತುಗಳಲ್ಲಿ ಸತ್ತ್ವವಿಲ್ಲವೇ? ಆದರೆ ಅದೆಷ್ಟು ಜನ ಕನ್ನಡಿಗರು ಅದನ್ನು ಬಳಸಿಕೊಂಡಿದ್ದಾರೆ? ಬಲವೆಂಬ ಜಲಧಿ ಮುಕ್ಕುಳಿಸಿ, ಮಿಗೆ ಹೆಕ್ಕಳಿಸಿ ಕವಿಯುತ್ತಿರುವಾಗ ಗಿರಿಯ ಬೆಸಿಕೆ ಕಳಚಿತು, ಅಹಿಪನ ಕೊರಳು ಕುಸಿದವು, ಕಮಠನು ಎದೆ ಬಿರಿದ. ಇದನ್ನು ಓದುವ ಕನ್ನಡಿಗ ತನ್ನ ನುಡಿಯ ಕೆಚ್ಚನ್ನು ತಾನೇ ಕಂಡುಕೊಂಡ.

ಬಿಡದೆ ಕಡಿದಾಡಿದರು ಸೇನಾ । ಗಡಲು ರಕುತದ ಕಡಲನುಗುಳಿತು
ಬಿಡದೆ ಸುಂಟರುಗಾಳಿ ವಿಲಯದ ಮಳೆಯ ಪಡೆದಂತೆ
ಒಡೆದು ನಾನಾ ಥಟ್ಟುಗಳ ಮೈ । ವಿಡಿದುವಾರಿದುವರುಣಜಲದಲಿ
ಕಡಿಕುಗಳು ಬೆಂಡೇಳೆ ದಂತಿಗಳಟ್ಟೆ ಕೊಡೆ ನೆಗೆಯೆ ॥

ಲಗ್ಗೆ ಮಸಗಿತು ಸೂಳುವೊಯಿಲಿನ । ಬೊಗ್ಗಿನಲಿ ಮುಂಕೊಂಡು ಮೋಹರ
ವೊಗ್ಗೊಡೆದು ಹೆಣಗಿದುದು ಕೇಶಾಕೇಶಿ ಯುದ್ಧದಲಿ
ವೊಗ್ಗರವ ಕೆದಱಿದರು ಹೊಯ್ದರೆ । ಮುಗ್ಗಿದರು ಕಡಲಿಡುವ ರಕುತದ
ಸುಗ್ಗಿ ಶಾಕಿನಿಯರಿಗೆ ಸೇರಿತು ಭೂಪ ಕೇಳೆಂದ ॥

. . . . . . . . . . . . . . . . . . . . . . . . . . . . .
. . . . . . . . . . . . . . . . . . . . . . . . . . . . .

ಕುಣಿದೆಸುವ ಕುಕಿಲಿಱುವ ಬಿರುದರ । ನಣಕಿಸುವ ಬಲುಬಿಲ್ಲನೊದಱಿಸಿ
ಹಣುಗಿ ಕಣು ನಟ್ಟಾಲಿಗೊಳೆ ತಳಮುಂಡಿ ಮುರನಾಗೆ
ಹೊಣಕಿಗರು ರಣದವಕಿಗರು ಬಿಱು । ಗಣೆ ಸವೆಯಲೆಚ್ಚಾಡಿದರು ಮಿಗೆ
ಮಣಿಯದದಟರು ಸುರಗಿಗಳನುಗಿದೊಡನೆ ಹಳಚಿದರು ॥

. . . . . . . . . . . . . . . . . . . . . . . . . . . . .

ಅಣಿದರೌಕುವ ಸೋಂಕಿ ತಿವಿದರೆ । ಹೆಣನ ತೋಱುವ ಹಜ್ಜೆದೆಗೆದರೆ
ಜುಣುಗಲೀಯದೆ ಮೇಲೆ ಕವಿಸುವ ಮೀಱಿ ಕೈಮಾಡಿ
ಕೆಣಕಿದರೆ ಝುಂಕಿಸುವ ನಿಟ್ಟಿಸಿ । ಹಣುಗಿ ಮೊನೆಗೊಡೆ ದಂಡೆಯೊಳು ಖಣಿ
ಖಣಿಲ್ಲು ರವವೆಸೆಯಲ್ಕೆ ಕಾದಿತು ಸುರಗಿಯುತಿಬಲರು ॥

ಸಂಗ್ರಾಮದ ವರ್ಣನೆಯಲ್ಲಿಯ ಕುಮಾರವ್ಯಾಸನ ಈ ಮೇಲಣ ನುಡಿಗಡಣವನ್ನು ಮೊದಲಿನಿಂದಲೂ ಕೇಳಿದ್ದರೆ ಬಹುಶಃ ಉತ್ತರಕುಮಾರ ಕೇವಲ ವಾಗ್ವೀರನಾಗಿಯೇ ಉಳಿಯುತ್ತಿರಲಿಲ್ಲವೋ ಏನೋ! ಕುಮಾರವ್ಯಾಸನ ಈ ‘ರೌದ್ರರಂಜನೆ’ಯನ್ನು ಕನ್ನಡ ಭಾರತದಲ್ಲಿ ವಿಪುಲವಾಗಿ ಬರುವ ಯುದ್ಧದ ಪ್ರಸಂಗಗಳಲ್ಲೆಲ್ಲ ಓದುಗರು ಕಾಣಬಲ್ಲರು. ನಾರಣಪ್ಪನ ಬರವಣಿಗೆಯಲ್ಲಿ ಗಡುಸು ಹೆಚ್ಚು; ಶಕ್ತಿಯೂ ಹೆಚ್ಚು. ವಿರಾಟಪರ್ವದಲ್ಲಿ ಕುರುಸೇನೆಯ ಭೀಕರತೆ ಉತ್ತರಕುಮಾರನಿಗೆ ಕಂಡ ರೀತಿ ಹೀಗಿದೆ:

ಜಡಿವ ಖಡ್ಗದ ಕಿಡಿಯು ಸೇನೆಯ । ತೊಡರುಗಳ ಕೇಸುರಿಯು ಬಲದು
ಗ್ಗಡದ ರಭಸದ ರೌದ್ರರವ ಛಟಛಟಿತ ನಿಸ್ವನದ
ಇಡಿದ ಧೂಳಿಯು ಧೂಮರಾಶಿಯು । ಪಡೆ ವಿರಾಟನ ಸುತನ ಕಂಗಳಿ
ಗೊಡನೊಡನೆ ದಾವಾಗ್ನಿಯಂತಿರೆ ತೋಱುತಿದಿರಿನಲಿ॥

ಪ್ರಳಯ ಮೇಘದ ಮಾಲೆಯೋ ಕರಿ। ಕುಲವೊ ಸಿಡಿಲಿನ ಗರುಡಿಯೋ ಕಳ
ಕಳವೊ ಕಲ್ಪಾನಳನ ಧೂಮಾವಳಿಯೊ ಕೈದುಗಳೋ
ನೆಲನ ದಡ್ಡಿಯ ಬೆಟ್ಟದಡವಿಯೊ। ತಳಿತ ಠಿಕ್ಕೆಯವೋ ಜಗಂಗಳ
ನಳಿವ ಜಲಧಿಯೊ ಸೇನೆಯೋ ನಾನಱಿಯೆನಿದನೆಂದ॥

ಈ ಉಕ್ತಿಗಳಲ್ಲಿಯ ಜಡಿವ ಖಡ್ಗದ ಕಿಡಿಯಂತಿರುವ ನುಡಿಗಳು, ವರ್ಣನೆಯ ಯಥಾರ್ಥತೆ, ರೂಪಕದ ಮಾಲೆಗಳು ಕುಮಾರವ್ಯಾಸನ ಕಾವ್ಯಶೈಲಿಯ ವೈಶಿಷ್ಟ್ಯಗಳು. ಒಮ್ಮೆ ಅದ್ಭುತ ಧ್ವನಿಯನ್ನು ಬಣ್ಣಿಸುವಾಗ,

ತುರಗ ಹೇಷಿತ ರಥದ ಝೇಂಕೃತಿ । ವರ ಧನುಷ್ಟಂಕಾರ ಕಪಿಯ
ಬ್ಬರಣೆ ಪಾರ್ಥನ ಬೊಬ್ಬೆ ನಿಷ್ಠುರ ದೇವದತ್ತರವ
ಅರರೆ ಹೊದರೆದ್ದುದು ಗಿರಿವ್ರಜ । ಬಿರಿಯೆ ಜಲನಿಧಿ ಜರಿಯೆ ತಾರಕೆ
ಸುರಿಯೆ ಸುರಕುಲ ನೆರೆಯೆ ಭೀತಿಯೊಳಹಿತ ಬಲ ಹರಿಯೆ॥

ಎಂದು ಹೇಳುತ್ತಾನೆ. ಈ ಪದ್ಯವನ್ನು ಸ್ಮರಿಸಿದಾಗ ಕಿವಿ ಗಡುಚಿಕ್ಕಿದಂತೆ ಅನಿಸಬಹುದು. ಕುಮಾರವ್ಯಾಸನು ಶೂರರ ಸೆಣಸಾಟವನ್ನು ಬಣ್ಣಿಸುವಾಗ, ಒರಸಿದನು, ತೇಗಿದನು, ಸೀಳಿದನು, ಹಿಂಡಿದನು, ನಿಟ್ಟೆಲುವ ಮುರಿದನು, ತಱಿದು ತಿಱಿಕಲ್ಲಾಡಿದನು, ಅರೆಪರೆದು ಕಾಲಲಿ ತಿಕ್ಕಿದನು—ಎಂಬ ಪ್ರಯೋಗಗಳನ್ನು ಉಪಯೋಗಿಸುತ್ತಾನೆ. ಆ ಆ ಸಂದರ್ಭಗಳಿಗೆ ಅನುಸರಿಸಿ ಇರುವ ಅವುಗಳ ಔಚಿತ್ಯವನ್ನು, ಅರ್ಥದ ಆಳವನ್ನು ಆ ಆ ಪದಗಳು ಬಹು ಸ್ಫುಟವಾಗಿ ಪ್ರತಿಬಿಂಬಿಸುತ್ತವೆ. ಭಾವದ ಓಟವನ್ನು ಭಾಷೆಯಲ್ಲಿ ಮೂಡಿಸುವ ಕಲಾಕುಸುರಿ ಕುಮಾರವ್ಯಾಸನಿಗಿದೆ. 'ಮಾತಿನ ಲಗ್ಗಿಗ' ನಾದ ಉತ್ತರಕುಮಾರನಂತಹರ ಅರ್ಥವಿಲ್ಲದ ಮಾತುಗಳನ್ನು ಹೇಳಬೇಕಾದಾಗ, 'ಬರಿದೆ ಕೆಡಱಿದನು', 'ಜಿನುಗಿದನು', 'ಹೊಟ್ಟುಗುಟ್ಟಿದನು', 'ಸೊರಹಿದನು'—ಎಂಬ ಪ್ರಯೋಗಗಳನ್ನು ಕವಿಯು ಉಪಯೋಗಿಸಿದ್ದಾನೆ. ಮೇಲೆ ಸೂಚಿಸಿದ ಅಚ್ಚಗನ್ನಡ ಶಬ್ದಗಳ ತಿರುಳನ್ನು ತಾನು ಅರಿತು ಕನ್ನಡಿಗರಿಗೆ ತಿಳಿಸಿಕೊಟ್ಟಿದ್ದಾನೆ ನಾರಣಪ್ಪ.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಅಚ್ಚಗನ್ನಡದ ಚಳವಳಿ ಬಹಳ ಹಿಂದಿನಿಂದಲೂ ನಡೆದು ಬಂದಿದೆ. ಇಂದೂ ನಡೆಯಬೇಕಾಗಿದೆ; ನಡೆದಿದೆ. ನಯಸೇನನ ಸೂಚನೆ, ರಾಘವಾಂಕನ ಹೊಸಹಾದಿ, ಆಂಡಯ್ಯನ ಹಟ—ಇವುಗಳ ಪರಿಣಾಮ ಕುಮಾರವ್ಯಾಸನ ಕಾವ್ಯದಲ್ಲಿದೆ. ದಶಶಿರ, ಕಪಿಧ್ವಜ, ಕಾರ್ಮುಕಾಚಾರ್ಯಪುತ್ರ—ಈ ಶಬ್ದಗಳಲ್ಲಿ ಸಗರ್ವ ಗೀರ್ವಾಣದ ಗಾಂಭೀರ್ಯವಿದ್ದಿರಬಹುದು. ಆದರೆ ಕೋಳಿವಾಡದ ಕರಣಿಕ ನಾರಣಪ್ಪನು ಕನ್ನಡ ಭಾರತದಲ್ಲಿ ಅವುಗಳಿಗೆ ಪ್ರತಿಯಾಗಿ ಕೊರಳು ಹಲವಾದಸುರ, ಹನುಮನ ಹಳವಿಗೆಯ ಭಟ, ಕೋಲ ಗುರುವಿನ ಮಗ ಎಂಬ ಪ್ರಯೋಗಗಳನ್ನು ಅಲ್ಲಲ್ಲಿ ಉಪಯೋಗಿಸಿದ್ದಾನೆ. ಸುಪ್ರಸಿದ್ಧ ಸಂಸ್ಕೃತ ಹೆಸರುಗಳಿಗೆ ಕನ್ನಡ ಹೆಸರುಗಳನ್ನು ಉಪಯೋಗಿಸುವಲ್ಲಿ

ವ್ಯಕ್ತವಾಗುವ ಕುಮಾರವ್ಯಾಸನ ಅಚ್ಚಗನ್ನಡತನವನ್ನು ಇನ್ನು ಕೆಲವು ದೃಷ್ಟಿಯಿಂದ ನಾವು ಅವನ ಕಾವ್ಯದಲ್ಲಿ ಕಾಣುತ್ತೇವೆ.

ನಾಡಿನ ಜನತೆಯಲ್ಲಿ ರೂಢವಾಗಿರುವ ಗಾದೆಗಳು ಆಯಾ ಭಾಷೆಗಳ ವಿಶಿಷ್ಟ ಸೊತ್ತೆಂದು ಹೇಳಬೇಕು. ಅಂತಹ ಸೊತ್ತನ್ನು ನಾರಣಪ್ಪ ವಿಪುಲವಾಗಿ ಬಳಸಿಕೊಂಡಿದ್ದಾನೆ. ಹೇಳಬೇಕಾದ ಭಾವ ಅವುಗಳಿಂದ ಸ್ಪಷ್ಟವಾಗುವುದಲ್ಲದೆ, ಭಾಷೆಯ ಶಕ್ತಿಯನ್ನು ಸೂಚಿಸುವ ಸಾಧನಗಳೂ ಅವು ಆಗುತ್ತವೆ. ಪತಿಗಳು ಐವರಾಗಿರುವಾಗ ಕೀಚಕನಿಂದ ತನಗುಂಟಾದ ಬಾಧೆಯನ್ನು ಪರಿಹರಿಸುವ ಹೊಣೆಯನ್ನು ಯಾರೊಬ್ಬರೂ ಹೊರಲಾರರೆಂಬುದನ್ನು ಕಂಡುಕೊಂಡ ದ್ರೌಪದಿಯ ಬಾಯಿಯಲ್ಲಿ 'ನಾಲುವರ ನಡುವಣ ಹಾವು ಸಾಯದು' ಎಂಬ ಗಾದೆಯನ್ನು ಕವಿ ಹಾಕಿದ್ದಾನೆ. ವಾಗ್ಯುದ್ಧದಲ್ಲಿ ಕರ್ಣನನ್ನು ಯಾರಾದರೂ ಹೀಯಾಳಿಸಬೇಕಾದಾಗ 'ಕುಲವ ನಾಲಗೆ ಅರುಹಿತು' ಎಂದು ಹೇಳಿಸುತ್ತಾನೆ. 'ಕೆಲಬರು ಗಳಿಸಿದರೆ ಕೆಲರುಂಡು ಜಾರುವರು' —ಎಲ್ಲರಿಗೂ ಅರ್ಥವಾಗುವ, ಎಲ್ಲರೂ ಕಾಣುವ, ಕೇಳುವ ಮಾತಿದು. 'ಮದುವೆಯುಂಟೇ ಮನವ ಬೇರಿರಿಸಿ' ಎಂಬುದು ಎಷ್ಟೊಂದು ಅರ್ಥವತ್ತಾಗಿದೆ! 'ಜೇವು ತಾ ಪರಿಪಕ್ವವಾದರೆ ಹಾವುಮೆಕ್ಕಿಗೆ ಸಾಕ್ಷಿ' (ಓತೀಕಾಟಕ್ಕೆ ಬೇಲಿಯ ಸಾಕ್ಷಿ), 'ಹೋದ ಮಾರಿಯ ಕರೆದು ಮನೆಯೊಳಗಾದರಿಸಿದವರುಂಟೆ' (ಹಾದೀ ಹೋಗುವ ದೆವ್ವನನ್ನು ಮನೆ ಹೊಗಿಸಿದಂತೆ)—ಇತ್ಯಾದಿ ಉಕ್ತಿಗಳಲ್ಲಿಯ ವ್ಯವಹಾರ ಸತ್ಯವನ್ನು, ಅನುಭವವನ್ನು ಕವಿಯು ಕಾವ್ಯದಲ್ಲಿ ಚೆನ್ನಾಗಿ ಅಳವಡಿಸಿಕೊಂಡಿದ್ದಾನೆ. ಇಂತಹ ನಾಣ್ಣುಡಿಗಳನ್ನು ಓದಿದಾಗ ಜನಸಾಮಾನ್ಯರಿಗೆ ಸಹಜವಾಗಿಯೇ ಆ ಆ ಸಂದರ್ಭಗಳು ಸರಿಯಾಗಿ ಮನಸ್ಸಿಗೆ ಹಿಡಿಯುತ್ತವೆ. ಚಂಪೂ ಕಾವ್ಯಗಳಲ್ಲಿ ಅಲ್ಲಲ್ಲಿ ಇಂತಹ ಗಾದೆಗಳು ಹುದುಗಿದ್ದರೂ ಇಡಿಯ ಕಾವ್ಯಶೈಲಿಯ ಕ್ಲಿಷ್ಟತೆಯ ಮೂಲಕ ಅವುಗಳ ಉಪಯೋಗ ಆಗಬೇಕಾದಷ್ಟು ಆಗುವುದಿಲ್ಲ. ನಯಸೇನನ 'ಧರ್ಮಾಮೃತ'ವು ಮಾತ್ರ ಈ ಮಾತಿಗೆ ಅಪವಾದದಂತಿದೆ. ನಯಸೇನನು ಇಡಿಯ ಕಾವ್ಯವನ್ನು ಇಂತಹ ಸರಳ ನಾಣ್ಣುಡಿಗಳಿಂದ ತುಂಬಿದ್ದಾನೆ. ಕುಮಾರವ್ಯಾಸನಂತಹ ಜನಸಾಮಾನ್ಯರ ಕಾವ್ಯದಲ್ಲಿ ಹೇರಳವಾಗಿ ಬರುವ ಈ ನಾಣ್ಣುಡಿಗಳು ಸಫಲವಾಗುತ್ತವೆ. ತನ್ನ ಭಾಷೆ, ಭಾಷಾ ಪ್ರಯೋಗಗಳು ಜನತೆಯಲ್ಲಿ ಹರಡಿ ಸಫಲವಾಗುವುದಕ್ಕಿಂತ ಬೇರೆ ಇನ್ನಾವ ಸಾರ್ಥಕ್ಯವನ್ನು ಕವಿ ಅಪೇಕ್ಷಿಸಬಲ್ಲನು? ಕನ್ನಡಜನತೆಯಲ್ಲಿ ತನ್ನ ಕೃತಿಯ ಸಫಲತೆಯನ್ನು ಕಂಡ ಕುಮಾರವ್ಯಾಸನು ಧನ್ಯನಾದಂತೆಯೆ ಸರಿ.

ಉಚಿತ ಹಾಗೂ ಅರ್ಥಪೂರ್ಣ ಕನ್ನಡ ಪದಪ್ರಯೋಗದಲ್ಲಿ ಕುಮಾರವ್ಯಾಸ ತನ್ನ ಜಾಣ್ಮೆಯನ್ನು ತೋರಿದ್ದಾನೆ. ಸಿಟ್ಟನ್ನು ಸೂಚಿಸಬೇಕಾದಾಗ 'ಕಿಡಿಕಿಡಿಗಳ ನಾಲಿಗಳೊಳುಗುಳಿದನು', 'ಹಲುಹಲುದಿನುತೆ', 'ಕೊಪಾಯುಧವ ಮಸೆವನು ಧಾರೆಗಂಗಳಲಿ' ಎಂಬ ಪ್ರಯೋಗಗಳು ಕನ್ನಡ ಭಾರತದಲ್ಲಿವೆ. ಸೌಂದರ್ಯವನ್ನು ಸವಿಯುವುದು ಎಂಬರ್ಥದಲ್ಲಿ 'ಕಂಗಳೊಳೆ ಕುಡಿಕುಡಿದು' ಎಂಬ ಪ್ರಯೋಗ ಬರುತ್ತದೆ. ನೂಕುನೂಕಾಯಿತ್ತು, ನುಗ್ಗೊತ್ತಿದನು, ಗಜಬಜವಾಯ್ತು ಎಂಬ ಪ್ರಯೋಗಗಳಿಂದ ಸೂಚಿತವಾಗುವ ಅರ್ಥ, ಸನ್ನಿವೇಶ ಸ್ಫುಟವಾಗಿವೆ. ಅನೇಕ

ಬಾಣಗಳನ್ನು ಬಿಟ್ಟನು, ಎಂದು ಸಪ್ಪೆಯಾಗಿ ಹೇಳುವ ಮಾತು ನಾರಣಪ್ಪನ ವಾಣಿಯಲ್ಲಿ 'ಅದ್ದನೋ ಬಾಣಾಂಬುನಿಧಿಯಲಿ' ಎಂದಾಗುತ್ತದೆ. 'ಕಾಮಿನಿಗೆ ಕರಗುವ ಕೃಷ್ಣ', 'ಅಣ್ಣನ ಗೆರೆಯ ದಾಂಟುವ ಭೀಮ', 'ಹಗೆಗಳಿಗೆ ತಂಪಾಗಿ ಬದುಕುವ ಮುಗುದ'—ಈ ಪ್ರಯೋಗಗಳಲ್ಲಿಯ ಕೌಶಲ್ಯವನ್ನು ಸೂಚಿಸಲು ಭಾಷ್ಯವೇಕೆ ಬೇಕು? ಭೀಮನು ಬಹಿರಂಗವಾಗಿ ಏನನ್ನೂ ಮಾಡಲು ಸಾಧ್ಯವಿಲ್ಲದಾಗ ವೈರಿಗಳನ್ನು ಮನದೊಳಗೆ ಹಿಂಡುತ್ತಾನಂತೆ. ಅಪಕೀರ್ತಿಯನ್ನು ಹೊಂದುವುದು ಎಂಬ ಭಾವವನ್ನು ಸೂಚಿಸಬೇಕಾದರೆ ಈತನು 'ಅಪಕೀರ್ತ್ಯಂಗನೆಗೆ ಆಭರಣ ತೊಡಿಸುವುದು' ಎಂದು ಹೇಳುತ್ತಾನೆ. ಇದರಂತೆ 'ಆವ ಮಾತಿಗೆ ನೀ ಗಂಡನಹೆ', 'ಅಪಜಯಕೆ ವಿಟನಾಗು' ಎಂಬ ಪ್ರಯೋಗಗಳಿವೆ. ಕುಮಾರವ್ಯಾಸನ ಶಬ್ದ ಪದ ಪ್ರಯೋಗಗಳ ಕೋಶವೊಂದನ್ನು ಯಾರಾದರೂ ಸಿದ್ಧಗೊಳಿಸಿದರೆ ಕನ್ನಡಕ್ಕೆ ಒಂದು ದೊಡ್ಡ ಉಪಕಾರವಾದೀತು. ಸ್ವಾತಂತ್ರ್ಯ ಪ್ರಿಯನಾದ ಕುಮಾರವ್ಯಾಸನು ಕಟ್ಟುನಿಟ್ಟುಗಳನ್ನು ಲಕ್ಷಿಸದೆ ಕನ್ನಡ ಭಾಷೆಯನ್ನು ಬಳಸಿದ್ದಾನೆ; ಬೆಳಸಿದ್ದಾನೆ. ಕನ್ನಡ ಪ್ರಯೋಗಗಳ ಸತ್ವವನ್ನು ಈತನು ಅರಿತಿದ್ದಾನೆ; ತಿಳಿಸಿಕೊಟ್ಟಿದ್ದಾನೆ. ಈ ದೃಷ್ಟಿಯಿಂದ ಈತನು ಕನ್ನಡಕ್ಕೆ ದೊಡ್ಡ ಸೇವೆ ಸಲ್ಲಿಸಿದ್ದಾನೆ. ಆತನ ಬಗೆಗೆ ಕೇಶಿರಾಜನ ನಿರ್ಣಯವು ಏನಾಗಬಹುದಾಗಿತ್ತೋ! ಆದರೆ ಕನ್ನಡ ಜನತೆಯು ಮಾತ್ರ ನಾರಣಪ್ಪನನ್ನು ಮನ್ನಿಸುವುದು ನಿಜ. ಅವನ ವಾಗ್ಬಲವು ಅಪೂರ್ವವೇ ಆಗಿದೆ.

ಕುಮಾರವ್ಯಾಸನ ಜನಪ್ರಿಯತೆಗೆ ಇನ್ನೂ ಅನೇಕ ಕಾರಣಗಳಿವೆ. ಅವನ ಉತ್ತಮ ಪಾತ್ರಸೃಷ್ಟಿ, ಉದಾತ್ತ ಭಾವನೆಗಳು, ಯಥಾರ್ಥ ವರ್ಣನೆಗಳು, ನುಡಿಯಮೇಲಿನ ಅನುಪಮವಾದ ಅಧಿಕಾರ, ಭಕ್ತಿಯ ಆವೇಶ, ಸಂಗ್ರಾಮದ ಕೆಚ್ಚು, ರಸಿಕತೆ, ಹಾಸ್ಯಪ್ರಿಯತೆ—ಇವೆಲ್ಲ ಆತನ ಘನತೆಗೆ ಕಾರಣಗಳಾಗಿವೆ. ಅವನ ಕಾವ್ಯಶೈಲಿಯಲ್ಲಿ ದೋಷಗಳೂ ಇರಬಹುದು. ಆದರೆ ಅವನದು ಜೀವಂತ, ಶಕ್ತಿಯುತ ಶೈಲಿಯಾಗಿದೆ. ಆತನಿಗೆ ವಿಪುಲವಾದ ಅನುಭವವಿದೆ. ವಿವಿಧ ಭಾವನೆಗಳ ಹೋರಾಟವನ್ನು ಅವನು ಸರಿಯಾಗಿ ಚಿತ್ರಿಸಬಲ್ಲ. ಒಳ್ಳೆಯ ಚಿತ್ರಗಾರನೂ ಕತೆಗಾರನೂ ಆಗಿದ್ದಾನೆ ನಾರಣಪ್ಪ. ಆತನ ಸ್ಫುಟವಾದ ವರ್ಣನೆಯ ಚಾತುರ್ಯ, ಶಬ್ದಶಕ್ತಿ, ಭಾವತನ್ಮಯತೆಗಳನ್ನು ಮನಸಂದು ಇಂದಿನ ಕವಿಗಳಾದ ಶ್ರೀ॥ ಕೆ. ವಿ. ಪುಟ್ಟಪ್ಪನವರು,

> ಕುಮಾರವ್ಯಾಸನು ಹಾಡಿದನೆಂದರೆ
> ಕಲಿಯುಗ ದ್ವಾಪರವಾಗುವುದು
> ಭಾರತ ಕಣ್ಣಲಿ ಕುಣಿವುದು ; ಮೈಯಲಿ
> ಮಿಂಚಿನ ಹೊಳೆ ತುಳುಕಾಡುವುದು

ಎಂಬ ಹಾಡಿನ ಮೂಲಕ ಅಂದಿನ ಕವಿಗೆ ಯಥಾರ್ಥವಾದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ಕನ್ನಡ ಜನತೆಯನ್ನು ಆಕರ್ಷಿಸಿ ಕನ್ನಡದ ಹೆಚ್ಚಳವನ್ನುಂಟು ಮಾಡಿದ ಕುಮಾರವ್ಯಾಸನು ಕನ್ನಡದ ಬಾವುಟವೆತ್ತಿದನು. ಅಂತೆಯೆ, ಆತನ ಕಾವ್ಯಶೈಲಿಗೆ ಮನಸೋತು ಶ್ರೀ॥ ಬಿ. ಎಂ. ಶ್ರೀಕಂಠಯ್ಯನವರು ಈತನು

(ಕುಮಾರವ್ಯಾಸ) "ನಮ್ಮ ಕವಿಗಳಲ್ಲಿ ಹಿರಿಯತಲೆ; ಹಿರಿಯರಲ್ಲಿ ಹಿರಿಯ—ನಮ್ಮ ಸಾಹಿತ್ಯದ ಉತ್ತಮ ರತ್ನಗಳಲ್ಲಿ ನಾಯಕರತ್ನ; ಪಂಪ, ರನ್ನ, ಬಸವಣ್ಣ, ಹರೀಶ್ವರ, ಪುರಂದರ, ಲಕ್ಷ್ಮೀಶ—ಇವರ ಜೊತೆಯಲ್ಲಿ ನಾರಣಪ್ಪನನ್ನು ನಿಲ್ಲಿಸಿ, ಕೈಯಲ್ಲಿ ಕನ್ನಡ ಬಾವುಟವನ್ನು ಕೊಟ್ಟು, ಲೋಕದ ಯಾವ ದೊಡ್ಡ ಕವಿಯನ್ನಾದರೂ ಧೈರ್ಯದಿಂದ, ಪ್ರೇಮದಿಂದ ಎದಿರುಗೊಳ್ಳಬಹುದು!" ಎಂದು ಹೃದಯಂಗಮವಾಗಿ 'ಕುಮಾರವ್ಯಾಸ ಪ್ರಶಸ್ತಿ' ಗ್ರಂಥದ ಮುನ್ನುಡಿಯಲ್ಲಿ ಹೇಳಿದ್ದಾರೆ. ಇದಲ್ಲದೆ ಕನ್ನಡ ಗ್ರಂಥರಾಶಿಯನ್ನೆಲ್ಲ ನುಂಗುವ ಸಂಕಲ್ಪವನ್ನು ಕ್ರೂರವಿಧಿಯು ಕಲ್ಪಿಸಿಕೊಂಡು ಅವುಗಳಲ್ಲಿ ಮೂರು ಗ್ರಂಥಗಳನ್ನು ಆರಿಸಿ ಉಳಿಸಿಕೊಳ್ಳುವ ಅವಕಾಶವನ್ನು ಕೊಟ್ಟರೆ, ಪಂಪ ಭಾರತ, ಬಸವಣ್ಣನವರ ವಚನಗಳು, ಕುಮಾರವ್ಯಾಸನ 'ಕನ್ನಡ ಭಾರತ'—ಇವುಗಳನ್ನು ಆರಿಸುವೆನೆಂಬರ್ಥದ ಮಾತುಗಳನ್ನು ಅವರು ಹೇಳುತ್ತಿರುವುದುಂಟು. ಈ ಹೇಳಿಕೆಯು ಅರ್ಥವತ್ತಾಗಿದೆ. ಪಂಪನ ವಾಗ್ವಿಭವೋನ್ನತಿ, ಬಸವಣ್ಣನವರ ನಿರ್ಮಲವಾದ ಹೃದಯದಿಂದ ಹೊರಟ ವಚನಸುಧೆ, ಕುಮಾರವ್ಯಾಸನ ಕನ್ನಡದ ಕೆಚ್ಚು—ಇವು ಕನ್ನಡಿಗರ ಜನಮನದಿಂದ ಎಂದಿಗೂ ಅಳಿಯಲಾರದ, ಅಳುಕಲಾಗದ, ಗುರುತುಗಳಾಗಿವೆ.

ಎಸ್. ಎಸ್. ಮಾಳವಾಡ

# ಮಹೋಪಮೆ

ಉಪಮಾ ಅಲಂಕಾರಕ್ಕೂ ಕಾವ್ಯಕ್ಕೂ ಯಾವ ಸಂಗಮಹಿಮೆ ಇದೆಯೋ ಅದೇ ಸಂಗಮಹಿಮೆ ಮಹೋಪಮಾ ಅಲಂಕಾರಕ್ಕೂ ಮಹಾಕಾವ್ಯಕ್ಕೂ ಅದಕ್ಕಿಂತಲೂ ಮಹತ್ತಾಗಿಯೇ ಇದೆ.

ಉಪಮಾ ಎಂದರೆ ಹೋಲಿಕೆ. ಅಲಂಕಾರಾರ್ಥದಲ್ಲಿ 'ಬರಿಯ ಹೋಲಿಕೆ' ಯಲ್ಲ; ಸಂಪದ್ಯುಕ್ತವಾದ ಹೋಲಿಕೆ. ಎಂದರೆ ಉಪಮೆಯಿಂದ ಅರ್ಥ ವಿಶದತೆಗೆ ಅಥವಾ ವಿಷಯ ಸ್ಪಷ್ಟತೆಗೆ ಸಹಾಯವಾದರೆ ಸಾಲದು; ರಸಾನುಭೂತಿಯೂ ಆಗಲೇಬೇಕು, ಅವಶ್ಯವಾಗಿ. ಅಲಂಕಾರ ಎನ್ನಿಸಿಕೊಳ್ಳುವಾಗ ರಸಸ್ಪರ್ಶಿಯಾಗುವುದೇ ಉಪಮೆಗೆ ಮುಖ್ಯ ಪ್ರಯೋಜನ. ಉಳಿದುದೆಲ್ಲ ಅಪ್ರಯೋಜನವಲ್ಲದಿದ್ದರೂ ಉಪಪ್ರಯೋಜನ. ಯಾವುದಾದರೂ ಒಂದು ಗಹನತತ್ತ್ವಪ್ರತಿಪಾದನೆ ಮಾಡುವಾಗ ಪಂಡಿತರಲ್ಲದವರಿಗೂ ವಿಷಯವನ್ನು ಸ್ಪಷ್ಟಪಡಿಸುವುದಕ್ಕಾಗಿ ಒಂದು ಹೋಲಿಕೆ ಕೊಡಬಹುದು. ಅಂಥಾದ್ದು ಉದಾಹರಣೆ, ದೃಷ್ಟಾಂತ ಅಥವಾ ಸಾಮತಿ ಎನ್ನಿಸಿಕೊಳ್ಳಬಲ್ಲುದೆ ಹೊರತು ಉಪಮಾ ಅಲಂಕಾರವೆನ್ನಿಸಿಕೊಳ್ಳಲಾರದು. ಹೋಲಿಕೆ ರಸಸ್ಪೃಶವಾಗಿದ್ದರೆ ಮಾತ್ರ ಅಲಂಕಾರವಾಗುತ್ತದೆ. ಸಹೃದಯದಲ್ಲಿ ಭಾವಗಳನ್ನು ಎಚ್ಚರಿಸಿ, ತನ್ಮೂಲಕ ರಸಾನುಭವಕ್ಕೆ ಕಾರಣವಾಗುತ್ತದೆ ಉಪಮಾ ಅಲಂಕಾರ. ಒಮ್ಮೊಮ್ಮೆ 'ಕಾರಣ'ವಾಗದೆ 'ನೆವ' ಅಥವಾ 'ನಿಮಿತ್ತ ಮಾತ್ರ ಕಾರಣ'ವಾಗುವುದೂ ಉಂಟು. ಬಹುಶಃ ಉಪಮೆ ಅಲಂಕಾರವಾದಾಗ ಕಾರಣದ ಕಡೆಗಿಂತಲೂ ಹೆಚ್ಚಾಗಿ ನೆವದ ಕಡೆಗೇ ನಮ್ಮ ಗಮನ ತಿರುಗಬೇಕಾಗುತ್ತದೆ. ಸತ್ಯಾನ್ವೇಷಣೆಯ ವಿಜ್ಞಾನದಲ್ಲಿ ಮತ್ತು ಸತ್ಯಜಿಜ್ಞಾಸೆಯ ತತ್ತ್ವದಲ್ಲಿ ಕಾರಣಕ್ಕೆ ಪ್ರಾಧಾನ್ಯವಿರುತ್ತದೆ. ರಸಾನುಭೂತಿಯ ಕಲಾಪ್ರಪಂಚದಲ್ಲಿ 'ಕಾರಣ'ದಿಂದ ಪ್ರತಿಕೂಲವಾಗದಿದ್ದರೂ 'ನೆವ'ವೂ ಸಾಕಾಗುತ್ತದೆ.

ಕಾರಣ ಸಂಬಂಧವಿರಲಿ ನಿಮಿತ್ತ ಸಂಬಂಧವಿರಲಿ ಒಂದು ಪ್ರಕೃತ ವಿಷಯದ ಭಾವಕೋಶಕ್ಕೆ ಮತ್ತೊಂದು ಅನ್ಯವಿಷಯದ ಭಾವಕೋಶವನ್ನು ಸಂಗಗೊಳಿಸಿ, ಪ್ರಕೃತ ವಿಷಯದ ಭಾವಕೋಶದ ವೃದ್ಧಿಯಿಂದ ರಸವೃದ್ಧಿಯಾಗುವಂತೆ ಮಾಡುವುದೇ ಉಪಮಾ ಅಲಂಕಾರದ ಉದ್ದೇಶ. ಮೊದಲನೆಯದರ ಭಾವಕೋಶ ಪುಷ್ಟಿಗೊಳ್ಳಬೇಕಾದರೆ ಎರಡನೆಯದರ ಭಾವಕೋಶ ಅದಕ್ಕೆ ಅವಿರುದ್ಧವಾಗಿರಬೇಕೆಂದು ಬೇರೆ ಹೇಳಬೇಕಾಗಿಲ್ಲ.

ಪ್ರತಿಯೊಂದು ಪದಕ್ಕೂ ಅರ್ಥ ಮತ್ತು ಭಾವಗಳಿರುವಂತೆ ಅರ್ಥಕೋಶ ಮತ್ತು ಭಾವಕೋಶಗಳೂ ಇರುತ್ತವೆ. ನಿಘಂಟಿನಲ್ಲಿರುವ ಪದದ ಅರ್ಥ ಸರ್ವರಿಗೂ ಸಮಾನ; ಆದರೆ ಭಾವ ವ್ಯಕ್ತಿಯಿಂದ ವ್ಯಕ್ತಿಗೆ ವ್ಯತ್ಯಾಸವಾಗುತ್ತದೆ. ಅಥವಾ ಒಂದೇ ವ್ಯಕ್ತಿಯಲ್ಲಿಯೂ ಕಾಲದಿಂದ ಕಾಲಕ್ಕೆ ವ್ಯತ್ಯಾಸ ಹೊಂದುತ್ತದೆ. ಭಾವಕೋಶವೆಂದರೆ ಪದದ ಅರ್ಥವನ್ನು ಕೇಂದ್ರ ಬಿಂದುವಾಗುಳ್ಳ ರಾಗಾನುಭವಗಳ, ನಿಷ್ಕೃಷ್ಟತೀರವಿಲ್ಲದ, ಅಸ್ಪಷ್ಟ ಪಾರಾವಾರ ಅಥವಾ ಪರಿವೇಷ. ಭಾವಕೋಶವು ವ್ಯಕ್ತಿಯ ಸ್ವಯಂ ಅನುಭವದಿಂದ ಮಾತ್ರ ವೃದ್ಧಿಯಾಗುತ್ತದೆ. ಅದು ಎಷ್ಟು

ಪುಷ್ಟಿಗೊಂಡರೆ ಅಷ್ಟು ಹೆಚ್ಚಾಗುತ್ತವೆ ರಸಗ್ರಹಣಕಾರಿಯಾದ ಸೂಕ್ಷ್ಮಬುದ್ಧಿ ಮತ್ತು ರಸಾನುಭವಕಾರಿಯಾದ ಹೃದಯಶಕ್ತಿ. ಕಾವ್ಯಕಲೆಯ ರಸಾಸ್ವಾದನೆಗೂ ಆನಂದಾನುಭವಕ್ಕೂ ಅತ್ಯಂತ ಆವಶ್ಯಕವಾದ ಸಹಕಾರಿ ಈ ಭಾವಕೋಶಪುಷ್ಟಿ.

* ಉಪಮಾ ಅಲಂಕಾರವು ಒಂದು ರಸವತ್ತಾದ ಸಾಧನ, ಈ ಭಾವಕೋಶ ಪುಷ್ಟಿಗೆ. ಭಾವಕೋಶಪುಷ್ಟಿಗೆ ನೇರವಾಗಿ ನೆರವಾಗದ ಯಾವ ವಿಧಾನವೂ ಅಲಂಕಾರವಲ್ಲ. ಆದ್ದರಿಂದ ಉಪಮಾ ಅಲಂಕಾರವೊಂದೇ ನಿಜವಾದ ಅಲಂಕಾರ. ಉಪಮಾ ಮೂಲವಲ್ಲದ ಅಲಂಕಾರಗಳು ಅಲಂಕಾರಗಳಲ್ಲ. ಅವುಗಳನ್ನು ಅಲಂಕಾರಗಳೆಂದು ಕರೆದರೂ ಔಪಚಾರಿಕ. ಸ್ವಭಾವೋಕ್ತಿ, ವಿನೋಕ್ತಿ, ಸಂದೇಹಾಲಂಕಾರ, ಆಕ್ಷೇಪಾಲಂಕಾರ ಎಂದು ಮೊದಲಾಗಿ ಒಂದೊಂದು ಉಕ್ತಿ ವೈಚಿತ್ರ್ಯಕ್ಕೂ ಒಂದೊಂದು ಹೆಸರಿಡುತ್ತಾಹೋದರೆ ಅದಕ್ಕೆ ಕೊನೆಯೂ ಇಲ್ಲ; ಬೆಲೆಯೂ ಇಲ್ಲ. ವಿಪ್ಪತ್ತು ಕಣೆಗೆದರಿದ ಎಯ್ಯುಮಿಗದಂತೆ ಭಯಂಕರವಾಗುತ್ತದೆ.

ಉಪಮಾ ಅಲಂಕಾರಕ್ಕೆ ರೂಪೋಪಮೆ, ಗುಣೋಪಮೆ, ಭಾವೋಪಮೆ, ಮಿಶ್ರೋಪಮೆ, ಹೀನೋಪಮೆ, ಮಾಲೋಪಮೆ, ಮಹೋಪಮೆ—ಎಂದು ಬೇಕಾದರೆ ಅನುಕೂಲಕ್ಕೆ ತಕ್ಕಂತೆ ಬೇರೆಬೇರೆ ಹೆಸರಿಟ್ಟುಕೊಳ್ಳಬಹುದು.*

ಮಹೋಪಮೆ ಎಂದರೇನು? ಅದರ ಸ್ಥಾನವೇನು? ಅದರ ಸಾರ್ಥಕ್ಯವೇನು? ಅದನ್ನು ಪೂರ್ವಕಾಲದ ಮಹಾಕವಿಗಳು ಹೇಗೆ ಪ್ರಯೋಗಿಸಿದ್ದಾರೆ? ಇನ್ನಾದರೂ ಅದರಿಂದ ಪ್ರಯೋಜನವಿದೆಯೇ? ಎಂಬುದನ್ನು ಕುರಿತು ಸಂಕ್ಷೇಪವಾಗಿ ವಿಚಾರ ಮಾಡಲು ಪ್ರಯತ್ನಿಸುತ್ತದೆ, ಈ ಬರವಣಿಗೆ.

ಮಹೋಪಮೆ ಎಂದರೆ ಮಹಾ ಉಪಮೆ. ಮಹಾ ಎಂದರೆ ದೀರ್ಘ ಎಂದಷ್ಟೇ ಅರ್ಥವಾಗದಿದ್ದರೂ ದೀರ್ಘತೆಯೂ ಅದಕ್ಕೊಂದು ಅನಿವಾರ್ಯವಾದ ಆತ್ಮಲಕ್ಷಣ. ಬರಿಯ ದೀರ್ಘತೆಯಲ್ಲಿ ಏನಿದೆ? ಎಂದು ನಿರ್ಲಕ್ಷಿಸುವುದು ಅಲ್ಪಾನುಭವಕ್ಕೆ ಅಥವಾ ಅನುಭವದ ಅಲ್ಪತೆಗೆ ಕುರುಹಾಗುತ್ತದೆ. ಇನ್ನೇನಿಲ್ಲದಿದ್ದರೂ ಬರಿಯ 'ಮಹಾಗಾತ್ರ' ಮಾತ್ರದಿಂದಲೇ ಮಹತ್ತು ಸ್ಫುರಿಸುವುದನ್ನು ದಿನದಿನದ ಬಾಳಿನಲ್ಲಿ ನಾವು ಅನುಭವಿಸುತ್ತಿದ್ದೇವೆ. ಬಹುಶಃ ಮಹತ್ತಲ್ಲದುದಕ್ಕೆ ಬೃಹತ್ತು ಸಂಘಟಿಸುವುದಿಲ್ಲ ಎಂಬುದು ಸೃಷ್ಟಿರಹಸ್ಯವೊ ಏನೊ! ಅಂತೂ ಬೃಹತ್ತಾದುದೆಲ್ಲ ಮಹತ್ತಾಗಿ ತೋರುತ್ತದೆ ಎಂಬುದು ನಿರ್ವಿವಾದ. ನಾಲ್ಕಾರು ಅಡಿಗಳೆತ್ತರದಿಂದ ಬೀಳುವ ನಲ್ಲಿಯ ನೀರಿನ ಕಿರುಧಾರೆಗೂ ಮಹತ್ತಾದ ಮಲೆನಾಡುಗಳ ಹಿನ್ನೆಲೆಯಲ್ಲಿ ಒಂಬೈನೂರಡಿಗಳೆತ್ತರದಿಂದ ಧುಮು ಧುಮು ಧುಮುಕುವ ಭೀಷ್ಮ ಸುಂದರವಾದ ಜೋಗದ ಜಲಪಾತಕ್ಕೂ ವ್ಯತ್ಯಾಸವಿರುವುದು ಗಾತ್ರದಲ್ಲಿ ತಾನೆ! ಆದರೂ ಅವೆರಡೂ ಬೇರೆ ಬೇರೆ ಅನಂತ ದೂರಾಂತರದ ಪ್ರಪಂಚಗಳಿಗೆ ಸೇರುತ್ತವೆ: ಒಂದು ಸ್ವಲ್ಪ ಮತ್ತು ಅಲ್ಪ; ಮತ್ತೊಂದು ದಿವ್ಯ ಮತ್ತು ಭವ್ಯ.

ಉಪಮೆ ಮಾಡುವ ಕೆಲಸವನ್ನೇ ಮಾಡುತ್ತದೆ ಮಹೋಪಮೆ, ಇನ್ನೂ ಬೃಹತ್ತಾಗಿ, ಇನ್ನು ಮಹತ್ತಾಗಿ. ಪ್ರಕೃತ ವಿಷಯಕ್ಕೆ ದೂರವಾಗಿರುವುದರ

---

* 'ಕವಿಲಕ್ಷ್ಮೀಶ' ಎಂಬ ವಿಮರ್ಶಗ್ರಂಥದಲ್ಲಿರುವ 'ಉಪಮಾಲೋಲ ಲಕ್ಷ್ಮೀಶ' ಎಂಬ ಲೇಖನವನ್ನು ನೋಡಿ.

ಶ್ರೀಮಂತ ಭಾವಕೋಶವನ್ನು ಪ್ರಕೃತ ವಿಷಯದ ಭಾವಕೋಶಕ್ಕೆ ಜಲಕ್ಕನೆ ತಗುಳ್ಚುವುದೇ ಉಪಮೆಯ ಕರ್ತವ್ಯ. 'ಜಲಕ್ಕನೆ ತಗುಳ್ಚು'ವುದೆಂದರೆ ಆ ವ್ಯಾಪಾರವು ಅಪ್ರತ್ಯಕ್ಷ ಮತ್ತು ಅತಿಶೀಘ್ರ. ಅದೊಂದು ಆಧ್ಯಾತ್ಮಿಕ ರಾಸಾಯನಿಕ ಕ್ರಿಯೆ :

> ......ಹಂತಿಗೊಂಡುದು ಗಗನ ನೀಲಿಮೆಯ
> ಜಗಲಿಯೊಳ್ ನೀರ್ವೊರೆಗಳೆದ ಬೆಳ್ಳಿಯುಣ್ಣೆಯಾ
> ಮುಗಿಲ ಹಗುರಂ .......

ನೀರಿನ ಹೊರೆಯನ್ನು ಕಳೆದು ಹಗುರವಾದ ಬಿಳಿಯ ಮುಗಿಲು ನೀಲಾಕಾಶದಲ್ಲಿ ಸಾಲಾಗಿ ತೇಲುತ್ತದೆ. 'ಬೆಳ್ಳಿಯುಣ್ಣೆಯ ಮುಗಿಲ ಹಗುರಂ' ಎಂಬಲ್ಲಿ ಮುಗಿಲು ಬೆಳ್ಳಿಯ ಹಾಗೆ ಬೆಳ್ಳಗಿತ್ತು, ಹೊಳೆಯುತ್ತಿತ್ತು; ಆದರೆ ಭಾರವಾಗಿರಲಿಲ್ಲ; ಉಣ್ಣೆಯ ಹಾಗೆ ಹಿಂಜಿ ಹಿಗ್ಗಿತ್ತು, ಗರಿಹಗುರವಾಗಿತ್ತು; ಎಂದೆಲ್ಲಾ ವ್ಯಾಖ್ಯಾನಮಾಡಬಹುದು. ಸಾದೃಶ್ಯ ಸಂಪತ್ತನ್ನು ವಿವರಿಸಿ ವಿಸ್ತರಿಸಲೂ ಬಹುದು. ಆದರೆ ಅದೆಲ್ಲವೂ ಹಿಂದೆ ಹೇಳಿದ ರಾಸಾಯನಿಕ ಕ್ರಿಯೆಯ ವೈಜ್ಞಾನಿಕ ವಿಭಜನೆಯಾಯಿತೇ ಹೊರತು ಆ ರಾಸಾಯನಿಕ ಕ್ರಿಯೆ ಆಗಲಿಲ್ಲ. ಕವಿ ವರ್ಣಿಸುವ ಚಿತ್ರವೂ ಮತ್ತು ಅನುಭವಿಸುವ ಭಾವವೂ ಹೃದಯದಲ್ಲಿ ತಟಕ್ಕನೆ ಮಿಂಚಾಗಿ ಮಿಂಚಿದರೆ ಮಾತ್ರ, ರಸಾನುಭೂತಿ ಪರಮಾವಧಿಗೇರುತ್ತದೆ. ಆ 'ಮಿಂಚು' ಅತಿ ಮುಖ್ಯ. ಸೂಕ್ಷ್ಮ ಹಾಸ್ಯವನ್ನು ತಟಕ್ಕನೆ ಗ್ರಹಿಸದಿದ್ದರೆ ಹೇಗೆ ಹಾಸ್ಯವು ರಸವಾಗುವುದಕ್ಕೆ ಬದಲಾಗಿ ಬುದ್ಧಿಯ ಚರ್ಚೆ ಸರಿಯೆಂದೊಪ್ಪುವ ಸಪ್ಪೆಯಾಗುತ್ತದೆಯೋ ಹಾಗೆಯೆ ಸಾದೃಶ್ಯ ಸಂಪತ್ತಿಯ ಆಯ ವ್ಯಯದ ಪಟ್ಟಿಯನ್ನು ಲೆಕ್ಕಾಚಾರ ಹಾಕಿ, ತರುವಾಯ ಉಪಮೆಯಿಂದ ರಸವನ್ನು ಹಿಂಡಲು ಹೊರಟರೆ ಉತ್ತಮ ಪರಿಣಾಮ ಲಭಿಸುವುದಿಲ್ಲ. ಪರಿಣಾಮ ರಮಣೀಯವಾಗುವುದಿಲ್ಲ. ಏಕೆಂದರೆ ರಸಾನುಭೂತಿ ಒಂದು 'ಮಿಂಚು'; ಬರಿಯ 'ತಯಾರಿಕೆ'ಯಲ್ಲ. ಪ್ರತಿಭಾಶಾಲಿಯಾದ ಕವಿಯಲ್ಲಿಯೆ ಆಗಲಿ ಅಥವಾ ಉತ್ತಮ ಸಂಸ್ಕಾರದ ಸಹೃದಯನಲ್ಲಿಯೆ ಆಗಲಿ ಉಪಮಾ ಸೃಷ್ಟಿ ಹೊಳೆಯುತ್ತದೆ; ಬೆಳೆಯುವುದಿಲ್ಲ. ಬೆಳೆಯುವುದೇ ಇಲ್ಲವೆಂದಲ್ಲ. ಸಂಸ್ಕಾರ ಪಕ್ವವಾಗಬೇಕಾದರೆ ಅನೇಕ ಅನುಭವಗಳು ಸೇರಿ ಭಾವಕೋಶ ಬೆಳೆದಿರಲೇ ಬೇಕು. ಆದರೆ ಆ ಬೆಳವಣಿಗೆ ಅಂತಶ್ಚಿತ್ತದಲ್ಲಿ ಗುಪ್ತವಾಗಿರುತ್ತದೆ; ಸುಪ್ತವಾಗಿರುತ್ತದೆ. ಮುಟ್ಟಿದೊಡನೆ ಬುಸ್ಸೆಂದು ಹೆಡೆಯೆತ್ತುವ ನಾಗರಹಾವಿನಂತೆ ಸುರುಳಿ ಸುತ್ತಿಕೊಂಡಿರುತ್ತದೆ. ಬೆಳೆಯುವುದೆಲ್ಲ ಮನಶ್ಶಾಸ್ತ್ರದ್ದು; ಹೊಳೆಯುವುದೆಲ್ಲ ಕಾವ್ಯದ್ದು.

ಬೆಳ್ಳಿಯನ್ನು ರೂಪಾಯಿಯ ಅವಸ್ಥೆಯಲ್ಲಿ ಮಾತ್ರ ನೋಡಿದ್ದರಾಗಲಿ, ಉಣ್ಣೆಯನ್ನು ಬೀದಿಯಲ್ಲಿ ಅಲೆಯುವ ಒಂದೆರಡು ಕುರಿಗಳ ಚರ್ಮದ ಅವಸ್ಥೆಯಲ್ಲಿ ಮಾತ್ರ ಸಂಧಿಸಿದ್ದರಾಗಲಿ, ಅಂತಹ ವಾಚಕನಿಗೆ 'ಬೆಳ್ಳಿಯುಣ್ಣೆಯ ಮುಗಿಲ ಹಗುರಂ' ಎಂಬ ಅಲಂಕಾರವು ಅರ್ಥವಾದರೂ ವ್ಯರ್ಥ. ಏಕೆಂದರೆ, ಬೆಳ್ಳಿಯನ್ನೂ ಉಣ್ಣೆಯನ್ನೂ ಸ್ವಲ್ಪಮಟ್ಟಿಗಾದರೂ ರಾಶಿಯ ಸ್ಥಿತಿಯಲ್ಲಿ, ಕಲ್ಪನೆಯಲ್ಲಾದರೂ, ನೋಡಿ ಮುಟ್ಟಿ ಮೆಚ್ಚಿದವನಿಗೆ ಒದಗುವ ಚಿತ್ರವಾಗಲಿ ಭಾವವಾಗಲಿ ಅವನಿಗೆ ದೊರೆಯುವುದಿಲ್ಲ. ಎರಡನೆಯವನಿಗೆ ಕೂಡ ಬೆಳ್ಳಿ ಮತ್ತು ಉಣ್ಣೆ ಎಂಬ

ಪದಗಳಿಂದ ಮನಸ್ಸಿಗೆ ಬರಬೇಕಾದದ್ದು ಆ ಪದಾರ್ಥಗಳಲ್ಲ. ಆ ಪದಾರ್ಥಗಳ ರೂಪಗುಣಗಳಿಂದ ಪರಿಪುಷ್ಟವಾದ ಭಾವಕೋಶ ಸ್ಥಿತಿ. ಹಾಗೆ ಉದ್ದೀಪ್ತವಾದ ಆ ಭಾವಕೋಶವನ್ನು ಬಾನ್ನೀಲಿಯಲ್ಲಿ ತೇಲುವ ಬೆಳ್ಮುಗಿಲಿಗೆ 'ಜಲಕ್ಕನೆ ತಗುಳ್ಚು'ವುದೇ ಉಪಮೆಯ ಉದ್ದೇಶ.

ವಿಸ್ತಾರಗೊಂಡರೆ, ವಿವರ ವರ್ಣನೆಯಿಂದ ದೀರ್ಘವಾದರೆ, ಬೃಹತ್ತಾದರೆ ಉಪಮೆ ಮಹೋಪಮೆಯಾಗುತ್ತದೆ. ಹಿಂದೆ ಹೇಳಿದಂತೆ, ಬೆಳ್ಳಿಯನ್ನು ರೂಪಾಯಿಯ ಅವಸ್ಥೆಯಲ್ಲಿ ಮಾತ್ರ, ಉಣ್ಣೆಯನ್ನು ಕುರಿಯ ಚರ್ಮದ ಸ್ಥಿತಿಯಲ್ಲಿ ಮಾತ್ರ ನೋಡಿರುವಾತನಿಗೆ ಆ ಉಪಮೆ ಬಹುಮಟ್ಟಿಗೆ ವ್ಯರ್ಥವಾಗುತ್ತದೆ ; ರಾಶಿ ಸ್ಥಿತಿಯಲ್ಲಿ ಅನುಭವಿಸಿದಾತನಿಗೆ ಪೂರ್ಣಸಾರ್ಥಕತೆ ಲಭಿಸುತ್ತದೆ. ಹಾಗೆ ರಾಶಿ ರಾಶಿಯಾಗಿ ನೋಡಿ ಮುಟ್ಟಿ ಅನುಭವಿಸುವುದನ್ನು ಇನ್ನೂ ವಿವರವಾಗಿ, ಚಿತ್ರ ಪೂರ್ಣವಾಗಿ, ಭಾವಪೂರ್ಣವಾಗಿ ಹಿನ್ನೆಲೆಯೊಡನೆಯೂ ಸನ್ನಿವೇಶ ಸಹಿತವಾಗಿಯೂ ವರ್ಣಿಸಿ, ಅಂತಹ ಬೆಳ್ಳಿಯಂತೆ ಅಂತಹ ಉಣ್ಣೆಯಂತೆ 'ಮುಗಿಲ ರಾಶಿಯ ಹಗುರ ಹಬ್ಬಿತ್ತು' ಎಂದು ದೀರ್ಘವಾಗಿ ಬಣ್ಣಿಸಿದರೆ ಈ ಚಿಕ್ಕ ಉಪಮೆಯೇ ಮಹೋಪಮೆಯ ಮಟ್ಟಕ್ಕೂ ಪಟ್ಟಕ್ಕೂ ಏರಬಹುದು. ಆಗ ಬೆಳ್ಳಿಯನ್ನೂ ಉಣ್ಣೆಯನ್ನೂ ರಾಶಿ ರಾಶಿಯಾಗಿ ನೋಡದಿರುವಾತನಿಗೂ, ಆತನ ಕಲ್ಪನಾ ಶಕ್ತಿ ಸಜೀವವಾಗಿದ್ದರೆ, ಹಾಗೆ ನೋಡಿದಂತೆಯೇ ಅನುಭವವಾಗಿ, ಚಿತ್ರವು ರಮಣೀಯವಾಗಿ ಭಾವವು ಉಜ್ಜ್ವಲವಾಗುತ್ತದೆ. ಆಗ ಉಪಮೆ ಹೆಚ್ಚು ಭೂಮವಾಗಿ ಹೆಚ್ಚು ಸಾರ್ಥಕವಾಗುತ್ತದೆ; ಮಹೋಪಮೆಯಾಗುತ್ತದೆ.

ಕಾವ್ಯವೋದುವ ವ್ಯಕ್ತಿ ತನಗೆ ತಾನೆ ಬಹುಕಾಲದ ಅನುಭವದಿಂದ ತನ್ನ ಭಾವಕೋಶವನ್ನು ತುಂಬಿಕೊಂಡಿರಬೇಕಾಗುತ್ತದೆ. ಹಾಗೆ ಭಾವಕೋಶ ತುಂಬಿರದಿದ್ದರೆ ಉಪಮೆಯ ಉದ್ದೇಶ ವಿಫಲ. ಭಾವಕೋಶ ಬರಿದಾಗಿರುವಾತನಿಗೂ ಅಥವಾ ಅಲ್ಪಸ್ವಲ್ಪ ತುಂಬಿರುವಾತನಿಗೂ ಮಹೋಪಮೆ ಬಹಳ ಉಪಕಾರ ಮಾಡುತ್ತದೆ. ಓದುಗನೇ ಬಹುಕಾಲದ ಪ್ರಯತ್ನದಿಂದಲೂ ಶ್ರಮದಿಂದಲೂ ಪಡೆಯಬಹುದಾದ ಅನುಭವಗಳನ್ನೆಲ್ಲ ಮಹೋಪಮೆ ಒಟ್ಟಿಗೆ ತಂದುಕೊಡುತ್ತದೆ. ಆ ಅನುಭವಗಳು ಕವಿಯ ಅನುಭವಗಳಾಗಿಯೂ ಹೊರಹೊಮ್ಮಿರುವುದರಿಂದ ಹೊಸತಾಗಿಯೂ ರಸವತ್ತಾಗಿಯೂ ಇರುತ್ತವೆ.

ಹಾಗೆಂದು ಹೇಳಿ, ಸಣ್ಣ ಕವನಗಳಲ್ಲಿಯೂ ಭಾವಗೀತೆಗಳಲ್ಲಿಯೂ ಬರುವ ಉಪಮೆಗಳನ್ನೆಲ್ಲ ವಿಸ್ತರಿಸಿ ಮಹೋಪಮೆಗಳನ್ನಾಗಿ ಮಾಡಲೆಳಸಿದರೆ ಅಸಂಗತವಾಗುತ್ತದೆ: ಭೀಮನ ಗದೆಯನ್ನು ಹಸುಳೆಯ ಕೈಗೆ ಕೊಟ್ಟಂತೆ. ಅದರಿಂದ ಉಪಕಾರವಿಲ್ಲ; ಅಪಾಯವಿದೆ. ವಿಕಾರವಾಗುವುದು ಒಂದುವೇಳೆ ತಪ್ಪಿದರೂ ಹಾಸ್ಯಾಸ್ಪದವಾಗುವುದು ತಪ್ಪುವುದಿಲ್ಲ.

ಮಹಾಕಾವ್ಯಗಳಿಗೆ ಮಾತ್ರ ಮಹೋಪಮೆ ಒಪ್ಪುತ್ತದೆ. ಗರುಡಗಂಬವಿರಬೇಕಾದ್ದು ಗುಡಿಯ ಮುಂದೆ. ಕೊಟ್ಟಿಗೆಯಲ್ಲಿ ಅದನ್ನು ನಟ್ಟು, ಅದಕ್ಕೆ ದನದ ದಾವಣಿ ಕಟ್ಟದರೆ! ದೇವಾಲಯಗಳಲ್ಲಿದ್ದ ಉತ್ತಮ ಶಿಲ್ಪಕೃತಿಯ ಎನಿತೋ ಕಲಾಶಿಲೆಗಳು ಮುಖ ಅಡಿಯಾಗಿ, ಬೆನ್ನು ಮೇಲಾಗಿ, ಬಟ್ಟೆಯೊಗೆಯುವ

ಕಲ್ಲುಚಪ್ಪಡಿಗಳಾಗಿಲ್ಲವೇನು? ಯಾವುದರ ಪ್ರಯೋಜನ ಎಲ್ಲಿ ಪರಮವೋ ಅಲ್ಲಿದ್ದರೆ ಅದಕ್ಕೆ ಪರಮ ಬೆಲೆ: ಸೌಂದರ್ಯಜಗತ್ತಿನಲ್ಲಿ ಅದೇ ಪರಮ ಕಲೆ.

ಒಂದು ಗೊತ್ತಾದ ಕಾರ್ಯಕ್ಕಾಗಿ ಒಂದು ಗೊತ್ತಾದ ಸ್ಥಳಕ್ಕೆ ಸ್ವಲ್ಪದೂರ ಮಾತ್ರ ಪ್ರಯಾಣಮಾಡುವಾತನಿಗೆ ಅಡ್ಡದಾರಿಗಳಲ್ಲಿ ಅಡ್ಡಾಡುವುದು ಅಹಿತಕರ ಮತ್ತು ನಿಷಿದ್ಧ. ಶೀಘ್ರವಾಗಿ ಪೂರೈಸಬೇಕಾದ ಕರ್ತವ್ಯವಿರುವುದರಿಂದ ಆತನ ಅಡ್ಡದಾರಿಯ ಅಡ್ಡಾಟವು ಒಂದು ದೊಡ್ಡ ಅಪರಾಧ. ಅಂತಹನು ಕರ್ತವ್ಯಭ್ರಷ್ಟ, ಮತ್ತು ಗುರಿಗೇಡಿ. ಅಂತಹ ಅಡ್ಡಾಟದಿಂದ ಅವನಿಗೂ ಇತರರಿಗೂ ಕಷ್ಟನಷ್ಟಗಳಲ್ಲದೆ ಬೇರೆಯ ಫಲ ದೊರೆಯುವ ಸಂಭವವಿರುವುದಿಲ್ಲ.

ಆದರೆ ಮಹಾಯಾತ್ರೆ ಹೊರುಡುವಾತನ ವಿಷಯವೇ ಬೇರೆ. ಅಂತಹ ಪರಿವ್ರಾಜಕನಿಗೆ ದಾರಿಯೆಲ್ಲವೂ ಗುರಿಯೇ; ಯಾತ್ರೆಯುದ್ದಕ್ಕೂ ಆತನು ತೀರ್ಥದರ್ಶಿ ಮತ್ತು ಕ್ಷೇತ್ರಸ್ಪರ್ಶಿ. ಅವನದು ವಿರಾಮಾಯಣ. ಅವನಿಗೆ ಅವಸರವಿಲ್ಲ. ನಡೆದು ನಡೆದು ದಣಿದಾಗ ದಣಿವಾರುವವರೆಗೂ ಕೂತುಕೊಳ್ಳುತ್ತಾನೆ. ನೀರಡಿಕೆಯಾದರೆ ನಾಲ್ಕಾರು ಮೈಲಿಗಳಾಚೆ ಕಾಣಬಹುದಾದ ಸರೋವರಕ್ಕಾಗಿ ಅಡ್ಡದಾರಿ ಹಿಡಿಯುತ್ತಾನೆ. ನೀರ್ಕುಡಿದು ತಣಿದಮೇಲೆ, ಮರಳಿ ತನ್ನ ದಾರಿಗೆ ಸೇರಿ, ಹೊಸತುಗೊಂಡ ಹುರುಪಿನಿಂದ ಮುಂದುವರಿಯುತ್ತಾನೆ. ಎಲ್ಲಿ ಬೈಗಾದರಲ್ಲಿ ಬಳಿಯ ಹಳ್ಳಿಯಲ್ಲಿ ತಂಗುತ್ತಾನೆ. ದಾರಿ ನಡೆಯುವಾಗ ಯಾರಾದರೂ 'ಹತ್ತು ಮೈಲಿ ದೂರದಲ್ಲಿ ಒಂದು ಗೇರುಸೊಪ್ಪೆಯಿದೆ' ಎಂದರಾಗಲಿ, 'ಹದಿನೈದು ಮೈಲಿ ದೂರದಲ್ಲಿ ಒಂದು ಹಳೆಬೀಡೋ ಬೇಲೂರೋ ಸೋಮನಾಥಪುರವೋ ಇವೆ' ಎಂದರಾಗಲಿ, ಸರಿ, ಅಡ್ಡದಾರಿ ಹಿಡಿಯುತ್ತಾನೆ. ಅದರಿಂದ ನಷ್ಟವಿಲ್ಲ. ಆ ಜಲಪಾತವನ್ನೋ ಆ ಕಲೆಯ ಬಲೆಯ ದೇಗುಲವನ್ನೋ ಮನದಣಿಯೆ ನೋಡಿ ಹೊಸಜೀವ ತುಂಬಿಕೊಳ್ಳುತ್ತಾನೆ. ಬೇಸರ ಪರಿಹರಿಸಿಕೊಳ್ಳುತ್ತಾನೆ. ಏಕನಾದದಂತಾಗುತ್ತಿದ್ದ ದಾರಿಯನ್ನು ವಿವಿಧ ಸುಸ್ವರ ಮೇಳವನ್ನಾಗಿ ಮಾರ್ಪಡಿಸಿಕೊಳ್ಳುತ್ತಾನೆ. ಇಮ್ಮಡಿಸಿದ ಹುರುಪಿನಿಂದ, ಆನಂದದಿಂದ, ಉಲ್ಲಾಸದಿಂದ, ಉತ್ಸಾಹದಿಂದ ಹಾಡಿಕೊಳ್ಳುತ್ತಾ ಬಂದು, ಮತ್ತೆ ತನ್ನ ಬಟ್ಟೆವಿಡಿದು ಮುಂಬರಿಯುತ್ತಾನೆ. ಹೋಗುತ್ತಾ ಹೋಗುತ್ತಾ ಅವನ ಅನುಭವ ಹೆಚ್ಚುತ್ತದೆ. ಭಾವಕೋಶ ಬೆಳೆಯುತ್ತದೆ. ಆ ಯಾತ್ರೆ ಇನ್ನೂ ಹೆಚ್ಚು ಅರ್ಥಪೂರ್ಣವಾಗುತ್ತದೆ; ಇನ್ನೂ ಭಾವಮಯವಾಗುತ್ತದೆ. ಬಿಕಾರಿ ಬೀದಿವರಿಯುತ್ತಾ ಶ್ರೀಮಂತನಾಗುವ ಭವ್ಯವಾದ ಪವಾಡ ದೃಶ್ಯವನ್ನು ಸಂಧಿಸುತ್ತೇವೆ. ಅಂತಹ ಪರಿವ್ರಾಜಕನೊಡನೆ ಅರೆತಾಸು ಮಾತಾಡಿದರೆ ಸಾಕು, ನಾವೇ ಯಾತ್ರೆ ಮಾಡಿದಂತಾಗುತ್ತದೆ: ಹೊಳೆ, ಕೆರೆ, ಹಳ್ಳಿ, ಕಾಡು, ಪಟ್ಟಣ, ಪರ್ವತ, ಜಲಪಾತ, ದೇವಾಲಯ, ತರತರದ ಜಂತುಗಳು, ವಿವಿಧ ಶೀಲದ ಮಾನವರು!—ಕೂತಲ್ಲಿಯೆ ಯಾತ್ರೆಯಾಗುತ್ತದೆ. ಆತನ ಬೆನ್ನ ಜೋಳಿಗೆ ಪೊಳ್ಳಾಗಿರಬಹುದು; ಆದರೆ ಮನಸ್ಸಿನ ಜೋಳಿಗೆ ಕಾಳಿಡಿದು ಸಿಡಿಯುವಂತಿರುತ್ತದೆ.

ಮಹಾಕಾವ್ಯವು ಮೇಲೆ ಹೇಳಿದ ಮಹಾಯಾತ್ರೆಯಂತೆ. ಮಹೋಪಮೆ ಅಲ್ಲಿಯೆ ಕೊಟ್ಟಿರುವ ಆ ಯಾತ್ರೆಯ ವರ್ಣನಾ ಚಿತ್ರದಂತೆ.

'ಮಹಾಯಾತ್ರೆಯಂತೆ' ಎಂದಷ್ಟೇ ಹೇಳಿದ್ದರೆ ಉಪಮೆಯಾಗುತ್ತಿತ್ತು. ಅದರ ಬೃಹಚ್ಚಿತ್ರವರ್ಣನೆ ಮಹೋಪಮೆಯಾಗಿದೆ. ಆಗಿರದಿದ್ದರೂ ಆಗಬಹು ದಾದ ಲಕ್ಷಣಗಳನ್ನು ಒಳಗೊಂಡಿದೆ. ಮಹಾಯಾತ್ರೆಗೆ ಜಲಪಾತ, ದೇವಾಲಯ ಮೊದಲಾದುವುಗಳ ದರ್ಶನಗಳಿರುವಂತೆ ಮಹಾಕಾವ್ಯಕ್ಕೆ ಮಹೋಪಮೆಗಳಿರು ತ್ತವೆ: ಸುದೀರ್ಘ ದಾರಿಯ ಬೇಸರದ ಪರಿಹಾರ, ನವಾನುಭವಗಳ ಸಂಪಾದನೆ, ಉಲ್ಲಾಸಕರವಾದ ವಿವಿಧ ಭಾವಗಂಗಾಸ್ನಾನ, ಪಯಣಕ್ಕೆ ಆವಶ್ಯಕವಾಗಿ ಬೇಕಾದ ಸಲಕರಣೆಗಳ ಸಂಗ್ರಹ—ಇವೆಲ್ಲವೂ ಮಹೋಪಮೆಗಳಿಂದ ಸಿದ್ಧಿಸುತ್ತವೆ.

ಯಾವುದು ತನಗೆ ತಾನೆ ಇದ್ದಿದ್ದರೆ ಸಾಧಾರಣವಾಗಿಯೇ ಉಳಿಯುತ್ತಿತ್ತೊ ಅದು ಮಹೋಪಮೆಯ ಸಾನ್ನಿಧ್ಯದಲ್ಲಿ ಮಹತ್ತಿಗೇರುತ್ತದೆ; ಮನುಷ್ಯ ಸಾಮಾನ್ಯ ವಾಗಿರುವ ತಲೆ ಕಿರೀಟಧಾರಣೆ ಮಾಡಿ ದೊರೆತನಕ್ಕೇರುವಂತೆ. ಅಂಗಿ ಬಿಚ್ಚಿ ನಿಲ್ಲಿಸಿದರೆ ಸಾಮಾನ್ಯನಾಗಿ ತೋರುವಾತನಿಗೆ ರಣವಸ್ತ್ರಗಳನ್ನುಡಿಸಿ, ರಣಾಲಂಕಾರ ಗಳನ್ನು ತೊಡಿಸಿ, ಚಿನ್ನದ ಮುಲಾಮಿನಿಂದ ಹೊಳೆಯುವ ಕಟಿಬಂಧನಕ್ಕೆ ಒರೆ ಗೂಡಿದ ರಣಖಡ್ಗವನ್ನು ಸಿಕ್ಕಿಸಿ, ರಣತೇಜಿಯಮೇಲೆ ಕೂರಿಸಿದರೆ,—ದಶದಿಕ್ಕು ಗಳನ್ನೂ ತನ್ನ ಧವಳಕೀರ್ತಿಯಿಂದ ಬೆಳ್ಳಂಗೊಳಿಸುವ ಮಹಾಪ್ರತಾಪಶಾಲಿಯಾದ ಸೇನಾಪತಿಯಾಗುತ್ತಾನೆ. ವೇಷಮಾತ್ರವೇ ಅದಕ್ಕೆ ಕಾರಣವಾಗಿ ತೋರಿದರೂ, ವಿಚಾರಿಸಿ ನೋಡಿದರೆ, ಆ ವೇಷವು ನಮ್ಮಲ್ಲಿ ಪ್ರಚೋದಿಸುವ ಭಾವಕೋಶವೇ ಅದಕ್ಕೆ ನೈಜಕಾರಣವೆಂದು ಗೊತ್ತಾಗುತ್ತದೆ. ನಿಜವಾಗಿಯೂ ಸ್ವಭಾವತಃ ಪ್ರತಾಪಶಾಲಿಗಳಾದ ಅನೇಕ ಸೇನಾಪತಿಗಳು ಆ ವೇಷವನ್ನೇ ಧರಿಸಿ ಕಾಳಗವಾಡಿ ಕೀರ್ತಿವಂತರಾಗಿದ್ದಾರೆ. ಆದ್ದರಿಂದ ಆ ವೇಷಕ್ಕೂ ಅವರ ಪ್ರತಾಪಕ್ಕೂ ಒಂದು ಭಾವಸಂಬಂಧ ಕಲ್ಪಿತವಾಗಿದೆ. ಆದ್ದರಿಂದಲೇ ಆ ವೇಷಧಾರಣೆ ಮಾಡಿದ ಸಾಧಾರಣನೂ ನಮಗೆ ಪ್ರತಾಪಶಾಲಿಯಂತೆ ತೋರುತ್ತಾನೆ.

ಮೇಲಿನ ಉಪಮೆ ಮಹೋಪಮೆ ಹೇಗೆ ಮಹತ್ತನ್ನು ದಾನಮಾಡುತ್ತದೆ ಎಂಬುದನ್ನು ವಿವರಿಸುತ್ತದೆ. ಅಲ್ಲದೆ ಪರಿಚಿತವಾದುದರ ಸಹಾಯದಿಂದ ಪರಿಚಯ ದೂರವಾದುದನ್ನೂ ಅನುಭವಕ್ಕೆ ತರುತ್ತದೆ.

ಅತ್ಯಂತ ಅಧೋಲೋಕದಲ್ಲಿ ಹೊಸದಾಗಿ ಸೃಷ್ಟಿಸಿದ್ದ ನರಕಸೀಮೆಯಿಂದ ಹೊರಟ ದೇವರ ವೈರಿಯಾದ ಸೇಟನ್ನನು 'ಖೇಯಾಸ್' ಹೆಸರಿನ ಅಪಾರವಾದ ತಮಸ್ಸಿನ ಆಕಾಶವಿಸ್ತೀರ್ಣವನ್ನು ಲಂಘಿಸುವುದನ್ನು ಚಿತ್ರಿಸುವಾಗ ಹೀಗೆ ವರ್ಣಿಸಿದ್ದಾನೆ ಮಿಲ್ಟನ್ ಮಹಾಕವಿ:

> Meanwhile the Adversary of God and Man,
> Satan, with thoughts inflamed of highest design,
> Puts on swift wings, and toward the Gates of Hell
> Explores his solitary flight : sometimes
> He scores the right hand coast, sometimes the left ;
> Now shaves with level wing the Deep, then soars
> Up to the fiery concave towering high.—

As when far off at sea a fleet descried
Hangs in the clouds, by equinoctial winds
Close sailing from Bengala, or the Isles
Of Ternate and Tidore, whence merchants bring
Their spicy drugs : they on the trading flood
Thro' the wide Ethiopian to the Cape
Ply stemming nightly toward the Pole. So seemed
Far off the flying Fiend..............

ವಿಕ್ಷುಬ್ಧ ಸಾಗರದ ಮಧ್ಯೆ, ನೊರೆನೊರೆಯಾಗಿ ಭೋರ್ಗರೆವ ಮಹಾತರಂಗಗಳ ತಾಡನದಿಂದ ತತ್ತರಿಸುತ್ತಾ, ಕಡಲಿನ ನೀರೊಡಲನ್ನು ಸೀಳಿ, ತುಂತುರಿನ ಮಂಜು ಮುಗಿಲುಗಳನ್ನು ಬಗೆಬಗೆದು, ತೂರಿ, ತೋರಿ ತೋರಿ ಬರುತ್ತಿರುವ, ಒಂದು ಹಡಗನ್ನಲ್ಲ, ಒಂದು ನೌಕಾ ಸಮೂಹವನ್ನೇ ಚಿತ್ರಿಸಿಕೊಂಡು ಅನುಭವಿಸುವಾತನ ಭಾವಕೋಶ ಎಷ್ಟು ಉಜ್ಜ್ವಲವಾಗುತ್ತದೆ! ಎಂತಹ ಭವ್ಯತೆಗೇರುತ್ತದೆ! ಅದರಲ್ಲಿಯೂ ದೂರದ ತೀರದಲ್ಲಿ ನಿಂತು ನೋಡುತ್ತಿರುವ ನಮಗೆ ಆ ನೌಕಾ ಸ್ತೋಮದ ಭಯಂಕರ ಹೋರಾಟವೂ ಸಲಿಲಘೋಷವೂ ಕಲ್ಪನಾ ಮಾತ್ರ ವೇದ್ಯ. ಕಣ್ಣಿಗೆ ಕಾಣುವಷ್ಟರಿಂದ ಊಹಿಸಲು ಮಾತ್ರ ಸಾಧ್ಯ. ಆ ಚಿತ್ರದಿಂದ ಉಜ್ಜ್ವಲವಾದ ಸಹೃದಯನ ಭಾವಕೋಶವನ್ನು ಸೇಟನ್ನಿನ ಮಹಾಲಂಘನಕ್ಕೆ 'ಜಲಕ್ಕನೆ ತಗುಳ್ಚಿ' ಉಪಮೇಯಕ್ಕೆ ಎಂತಹ ಮಹತ್ತು ಬೃಹತ್ತುಗಳನ್ನು ದಯಪಾಲಿಸಿದ್ದಾನೆ ಮಹಾಕವಿ.

ಮಹೋಪಮೆಯಲ್ಲಿ ಪರಿಣಾಮರಮಣೀಯತೆಯೇ ಅಗ್ರಗಣ್ಯ ಫಲ ಮತ್ತು ಪರಮಗಮ್ಯ. ಅವಯವ ಸಾದೃಶ್ಯ ಇರಬಹುದು; ಅಥವಾ ಇಲ್ಲದಿರಬಹುದು. 'Ternate'ಗೆ ಸಾದೃಶ್ಯವಾವುದು? 'Tidore'ಗೆ ಸಾದೃಶ್ಯ ಎಲ್ಲಿ? ವ್ಯಾಪಾರಿಗಳಿಗೂ ಅವರು ಹಡಗುಗಳಲ್ಲಿ ತುಂಬಿರುವ ಸಂಬಾರದ ಸಾಮಾನುಗಳಿಗೂ ಸಾದೃಶ್ಯಸಂಪತ್ತಿಯೇನು? ಎಂದು ಮೊದಲಾಗಿ ವಿದ್ವತ್ತು ಕಲೆಯ ತಲೆಯ ಹೇನುಹಿಕ್ಕುತ್ತಾ ಕುಳಿತುಕೊಂಡರೆ ಅದಕ್ಕಷ್ಟೇ ಲಾಭ: ತಲೆತುರಿಕೆ ಕಡಮೆಯಾಗುತ್ತದೆ.

ಸಂಸ್ಕಾರಗಳನ್ನು ಉದ್ದೀಪನಗೊಳಿಸಿ ಮಹೋಪಮೆ ತನ್ನ ಕಾರ್ಯಸಾಧನೆ ಮಾಡಿಕೊಳ್ಳುತ್ತದೆ. ಸಂಸ್ಕಾರಗಳನ್ನು ಹೊಸದಾಗಿ ಸೃಷ್ಟಿಸಲೂ ಪ್ರಯತ್ನಿಸುತ್ತದೆ. ಆದರೆ ಆ ಪ್ರಯತ್ನಕ್ಕೂ ಅದರ ಸಫಲತೆಗೂ ಮಿತಿಯುದೆ: ಊದುಬತ್ತಿಯ ಸುವಾಸನೆಯನ್ನು ದೇವಸ್ಥಾನದಲ್ಲಿಯೇ ಯಾವಾಗಲೂ ಅನುಭವಿಸಿದಾತನಿಗೆ ಅದನ್ನೆಲ್ಲಿ ಎದುರುಗೊಂಡರೂ ದೇವರ ನೆನಪನ್ನು ತಂದುಕೊಟ್ಟು ಧ್ಯಾನಭಾವವನ್ನೂ ಶಾಂತಿರಸವನ್ನೂ ಪ್ರಚೋದಿಸುತ್ತದೆ; ಆ ಪರಿಮಳವನ್ನು ವೇಶ್ಯಾಗೃಹದಲ್ಲಿಯೇ ಯಾವಾಗಲೂ ಅನುಭವಿಸುವಾತನಲ್ಲಿ ಅದನ್ನು ಸಂಧಿಸಿದಾಗ ಉದ್ರಿಕ್ತವಾಗುವ ಭಾವಗಳೇ ಬೇರೆ, ರಸಗಳೇ ಬೇರೆ. ಅದಕ್ಕೇನು ಮಾಡುವುದು? ಉಪಮಾ ಅಲಂಕಾರಕ್ಕಿರಬಹುದಾದ ತೊಂಡುತೊಡಕೆಲ್ಲ ಮಹೋಪಮಾ ಅಲಂಕಾರಕ್ಕೂ ಇದೆ.

ಮಹೋಪಮೆಗೆ ನರಕದಲ್ಲಿಯೂ ಸ್ವರ್ಗದ ಗಾಳಿ ಬೀಸುವಂತೆ ಮಾಡಲು ಸಾಮರ್ಥ್ಯವಿದೆ. ಡಾಂಟೆಯ 'ಡಿವೈನ್ ಕಾಮೆಡಿ'ಯಲ್ಲಿ ಇಟಲಿಯ ಆ ಮಹಾಕವಿ ಮತ್ತೊಬ್ಬ ಪೂರ್ವ ಕವಿವರೇಣ್ಯನಾದ 'ವರ್ಜಿಲ್' ಒಡಗೂಡಿ ಸ್ವರ್ಗಯಾತ್ರೆಗೆ ಮುನ್ನ ನರಕಯಾತ್ರೆ ಮಾಡುತ್ತಾನೆ. ದುರ್ದರ್ಶನೀಯವಾದ ರುದ್ರ ದೃಶ್ಯಪರಂಪರೆಗಳ ಮಧ್ಯೆ ಬೀಭತ್ಸ ಭಯಾನಕ ರಸಗಳಲ್ಲಿ ಹಾದು ಹಾದು ಸಾಕಾಗುತ್ತದೆ. ನಾರಕ ನಿರಂತರತೆ ಅವಿರಾಮವಾಗುತ್ತದೆ. ಎಲ್ಲಿ ನೋಡಿದರೂ ಎತ್ತ ತಿರುಗಿದರೂ ನರಕ, ನರಕ, ಮತ್ತೂ ನರಕ. ಅನ್ಯಲೋಕಗಳಿಗೆ ಇಣುಕುವುದಕ್ಕೂ ಕೂಡ ಅಲ್ಲಿ ಅವಕಾಶವಿಲ್ಲ; ಅಪ್ಪಣೆಯಿಲ್ಲ. ಓದುವವನೂ ಡಾಂಟೆ ವರ್ಜಿಲರಂತೆ ಹೊಗೆತುಂಬಿದ ಕೋಣೆಯಲ್ಲಿ ಸಿಕ್ಕಿಬಿದ್ದು ಏದುತ್ತಿರುವಾಗ, ಕವಿಕರುಣೆ ಮಹೋಪಮೆಯ ಒಂದು ಕಿಟಕಿಯನ್ನು ತೆರೆಯುತ್ತದೆ: ಏನದ್ಭುತಂ! ನರಲೋಕದ ಎಂಟನೆಯ ಚಕ್ರದ ಏಳನೆಯ ಕೂಪದಲ್ಲಿರುವ ನಾವು ತಟಕ್ಕನೆ ತೆಂಕಣ ಇಟಲಿಯ ಮಲೆನಾಡಿನ ಮನೋಹರತೆಯಲ್ಲಿ ಉಸಿರೆಳೆಯುತ್ತೇವೆ; ಶ್ವಾಸಕೋಶಗಳನ್ನು ಮಾತ್ರವಲ್ಲದೆ ಪ್ರಾಣಕೋಶವನ್ನೂ ತುಂಬಿಕೊಳ್ಳುತ್ತೇವೆ!

ನರಕದ ಭಯಂಕರತೆಗೆ ಮಾರ್ಗದರ್ಶಿಯಾದ ವರ್ಜಿಲನ ಮುಖವೂ ಕಪ್ಪಾಗುತ್ತದೆ. ಡಾಂಟೆ ಅದನ್ನು ಕಂಡು ಎದೆಗೆಡುವನಿತರಲ್ಲಿಯೇ ಮರಳಿ ವರ್ಜಿಲನ ಮೊಗಕ್ಕೆ ಹೊಳಪು ಮರಳುತ್ತದೆ. ಡಾಂಟೆ ಮತ್ತೆ ಧೈರ್ಯಗೊಳ್ಳುತ್ತಾನೆ:

In that young year-time when the sun his hair
Tempers beneath Aquarius, and when
The nights already tow'rd the south land fare,—
The hoarfrost on the green sward copies then
His sister's image white, but by and by
Abates the dainty temper of his pen,—
The husbandman, who sees starvation nigh,
Rising and looking out, beholds the plain
All whitened over, whence he smites his thigh :
Returning in, doth to and fro complain
Like one who cannot mend his wretched case ;
Then out he comes and picks up hope again,
Beholding how the world has altered face
In little while, and catching up his crook
Drives forth his sheep to pasturage apace :
Thus when I saw perturbed my Master's look
Did I loose heart, and thus the balm applied
Suddenly from the wound the ailment took.

ಮಿಲ್ಟನ್, ಡಾಂಟೆ ಮೊದಲಾದ ಪಾಶ್ಚಾತ್ಯ ಪುರಾಣ ಕವಿಗಳಿಗೆಲ್ಲ ಪುರಾಣ ಕವಿಯಾದ ಹೋಮರನು ತನ್ನ ಮಹಾಕಾವ್ಯಗಳಲ್ಲಿ ಮೊತ್ತಮೊದಲಾಗಿ ಮಹೋಪಮೆಗಳನ್ನು ವಿಪುಲವಾಗಿ ಪ್ರಯೋಗಿಸಿದ್ದಾನೆ. ಆದ್ದರಿಂದಲೆ ಮಹೋಪಮೆಗೆ 'ಹೋಮರೋಪಮೆ' ಎಂಬ ಹೆಸರೂ ಬಳಕೆಗೆ ಬಂದುಹೋಗಿದೆ.

ಹೋಮರನ ಮಹಾಕಾವ್ಯಗಳೆರಡೂ ಉಜ್ಜ್ವಲ ಕವಿಕೃತಿಗಳಾದರೂ ಪುರಾಣ ಸಹಜವಾದ ಒರಟಿನಿಂದಲೂ ಪುರಾತನರ ಸ್ಥೂಲಾಭಿರುಚಿಗಳಿಂದಲೂ ಮೊರಡಾಗಿವೆ. ಕಥಾ ವಿಷಯದ ದೃಷ್ಟಿಯಿಂದಲಂತೂ ನಿರಾದರ್ಶವಾಗಿವೆ: ಸಾಹಸದಲ್ಲಿ ಆದರ್ಶ ಸೀಮೆಯನ್ನು ಮುಟ್ಟಿದರೂ ಆದರ್ಶಸೀಮೆಯ ಸಾಹಸಗಳು ಅಪೂರ್ವ. ಹಾಗೆಂದ ಮಾತ್ರಕ್ಕೆ ಕವಿಗೂ ಅವನ ಕವಿತೆಗೂ ಅಗೌರವವಾದಂತಾಗುವುದಿಲ್ಲ. ಕವಿ ವರ್ಣಿಸುವ ಆ ಯುಗಧರ್ಮವನ್ನು ಮಾತ್ರ ವಿಮರ್ಶಿಸಿದಂತಾಗುತ್ತದೆ. ಅವನ ಮಹೋಪಮೆಗಳಿಗೂ ಈ ವಿಮರ್ಶೆ ತಕ್ಕಮಟ್ಟಿಗೆ ಸಲ್ಲುತ್ತದೆ. ಆದರೆ ಒಂದು ವಿಚಾರ ಮಾತ್ರ ನಿರ್ವಿವಾದ: ನಯ, ಸಂಸ್ಕೃತಿ, ಕರುಣೆ, ದಯ—ಮೊದಲಾದ ಸಭ್ಯತಾಜನ್ಯ ವಿಷಯಗಳಲ್ಲಿ ಆ ಆದಿಕವಿಯ ಕೃತಿಶೈಲಗಳೂ ಬಂಡೆಮೊಗದ ಮಹೋಪಮೆಗಳೂ ಈಗಿನ ರುಚಿಗೆ ಎಷ್ಟೇ ಅಸಮರ್ಪಕವಾಗಿ ಕಂಡುಬಂದರೂ ದೈತ್ಯಬಲ, ರಾಕ್ಷಸಛಲ, ಭೀಮಪ್ರತೀಕಾರ, ಉನ್ಮತ್ತವೀರ್ಯ, ಅನಾಗರಿಕ ಶೌರ್ಯ, ಆರಣ್ಯಕ ಧೈರ್ಯ ಮತ್ತು ಪರ್ವತೋಪಮ ಸ್ಥೈರ್ಯಗಳಲ್ಲಿ ಮಾತ್ರ ಹೋಮರ್ ಮಹಾಕವಿಯ ಸೃಷ್ಟಿ ಮಹತ್ತಿನೊಡನೆ ಹೆಗಲೆಣೆಯಾಗಿ, ಹೊಯ್‌ಕಯ್ಯಾಗಿ, ನಿಲ್ಲುತ್ತದೆ. ಹಲವೆಡೆಗಳಲ್ಲಂತೂ ಆ ಸೃಷ್ಟಿ ಮಹಿಮೆಯೊಡನೆ ಮಲ್ಲಗಾಳೆಗವಾಡಿ, ಅದನ್ನು ಸೋಲಿಸಿ, ಕಂಸನೆದೆಯಮೇಲೆ ಮಂಡಿಯೂರಿ ಕುಳಿತು ಅವನ ಕೊರಳ ಬಳೆಯನ್ನು ನುಗ್ಗೊತ್ತುವ ಕೃಷ್ಣನಂತೆ ತೋರಿ ಭವ್ಯಭಯಂಕರವೂ ಆಗುತ್ತದೆ.

ಆತನ ಮಹೋಪಮೆಗಳಲ್ಲಿ ಬೇಟೆಯ ಬಾಳು ವಿಶೇಷವಾಗಿ ಚಿತ್ರಿತವಾಗಿದೆ:

ಈನಿಯಸ್ ಹೆಸರಿನ ಟ್ರಾಯ್ ಪಕ್ಷದ ಮಹಾವೀರನು ಅಖಿಲೀಸ್ ಹೆಸರಿನ ಗ್ರೀಕ್ ಪಕ್ಷದ ಭಯಂಕರ ವೈರಿಯೊಡನೆ ಕಾಳೆಗಕ್ಕೆ ನಡೆಯುತ್ತಾನೆ (Iliad, Book XX, 185—203).

Æneas first with threatening mein advanced,
Nodding his ponderous helm; before his breast
His shield he bore, and poised his brazen spear.
He met Achilles from the opposing ranks;
Fierce as a ravening lion, whom to slay
Pour forth the stalwart youths, the united strength
Of the roused village; he unheeding moves
At first; but wounded by a javelin thrown
By some bold youth, he turns, with gaping jaws,
And frothing fangs, collecting for the spring,
His breast too narrow for his mighty heart;
And with his tail he lashes both his flanks
And sides, as though to rouse his utmost rage;
Then on, in pride of strength, with glaring eyes
He dashes, if some hunters he may slay,
Or in the foremost rank himself be slain.
So moved his dauntless spirit Peleus' son
Æneas to confront......

ಭಯಂಕರವಸ್ತುವಿ ಇದಿರ್ಮಲೆತು ಮುನ್ನುಗ್ಗುವ ಚಿತ್ರದ ಮತ್ತು ಭಾವದ ಭೀಕರತೆಯನ್ನು ಓದುಗನ ನಾಳಗಳಲ್ಲಿ ಘುಮುಕಿಸುವುದಿಲ್ಲವೇ ಈ ದೃಶ್ಯ ಮಹೋಪಮೆ?

ಪಾಶ್ಚಾತ್ಯರಲ್ಲಿ ಮಹೋಪಮೆ ಒಂದು ವಿಶೇಷಕಲೆಯಾಗಿ ಪರಿಣಮಿಸಿದೆ. ಪೂರ್ವಕವಿಗಳನ್ನನುಸರಿಸಿ ನವೀನರಲ್ಲಿಯೂ ಕೆಲವರು ಉತ್ಕೃಷ್ಟ ಮಹೋಪಮೆಗಳನ್ನು ಸೃಷ್ಟಿಸಿದ್ದಾರೆ. ಎಂತಹ ಸೌಂದರ್ಯವೂ ಅತಿರೇಕದಿಂದ ಅಸಹ್ಯವಾಗಬಹುದು. ಹುಬ್ಬುಗಳ ನಡುವೆ ಬಿಂದುರೂಪದಿಂದಿರಬೇಕಾದ ಚಂದ್ರಕುಂಕುಮವನ್ನು ಹಣೆಯ ತುಂಬಾ ಬಳಿದುಕೊಂಡರೆ! ಹಣೆಯ ಅಗಲಕ್ಕೂ ಕುಂಕುಮದ ಬೊಟ್ಟಿಗೂ ಯಾವುದೋ ಒಂದು ಪ್ರಮಾಣಾಂತರವಿದ್ದರೆ ಮಾತ್ರ ಅದು ಚೆಲುವಿಗೆ ನೆರವಾಗುತ್ತದೆ. ಮಹಾಕಾವ್ಯದ ಬೃಹದ್ ವಿಸ್ತೀರ್ಣದಲ್ಲಿ ಮಹೋಪಮೆಗೆ ಮನೋಹರತೆ ಬರುತ್ತದೆಂದು ಲಘುಕಾವ್ಯಗಳಲ್ಲಿಯೂ ಅದನ್ನು, ಪ್ರಮಾಣಾಂತರದ ಪರಿಜ್ಞಾನವೂ ರಸವಿವೇಚನೆಯೂ ಇಲ್ಲದೆ, ಪ್ರಯೋಗಿಸಿದರೆ ಆಭಾಸವಾಗುತ್ತದೆ. ಕಾವ್ಯಸುಂದರಿಗಾದರೂ ಸೀರೆಯೆಲ್ಲ ಜರತಾರಿಯಂಚಾಗಿಬಿಟ್ಟರೆ, ಆಕೆಗೆ ತೊಂದರೆ, ನೋಡುವವರಿಗೆ ನಗೆ.

ಆದರೂ, ಮಹತ್ತೊಂದು ಇದ್ದರೆ, ಎಲ್ಲಿದ್ದರೂ ಮಹೋಪಮೆಗೆ ಸನ್ಮಾನ ಸಲ್ಲುತ್ತದೆಂಬುದನ್ನುಮಹಾಕವಿಯಾದವನು ಸಾಧಿಸಿ ತೋರಿಸಬಲ್ಲನು. ಅದಕ್ಕೊಂದು ನಿದರ್ಶನ, ಮ್ಯಾಥ್ಯೂಆರ್ನಾಲ್ಡ್. ಒಂಬೈನೂರಕ್ಕಿಂತಲೂ ಕಡಮೆ ಸಂಖ್ಯೆಯ ಪಂಕ್ತಿಗಳಿರುವ ಆತನ ''ಸೊಹ್ರಾಬ್ ಮತ್ತು ರುಸ್ತುಮ್'' ಎಂಬ ಕಥನ ಕಾವ್ಯದಲ್ಲಿ ಬರುವ ಶ್ಲಾಘ್ಯವಾದ ಮಹೋಪಮೆಗಳ ಮಾತಿರಲಿ. 'ರಗ್ಬಿ ಚಾಪೆಲ್' ಎಂಬ ಇನ್ನೂರೇಳು ಪಂಕ್ತಿಯ ಭಾವಗೀತೆಯಲ್ಲಿಯೂ ರೂಪಕರೀತಿಯ ಮಹೋಪಮೆಯೊಂದನ್ನು ಎಷ್ಟು ಪರಿಣಾಮ ರಮಣೀಯವಾಗಿ ಉಪಯೋಗಿಸಿದ್ದಾನೆ! ಎಂಬತ್ತುನಾಲ್ಕನೆಯ ಪಂಕ್ತಿಯಿಂದ ಪ್ರಾರಂಭವಾಗಿ ನೂರಿಪ್ಪತ್ತು ಮೂರನೆಯ ಪಂಕ್ತಿಯಲ್ಲಿ ಕೊನೆಮುಟ್ಟುತ್ತದೆ, ಆದರ್ಶ ಸಾಧನೆಗೆ ಉಪಮೆಯಾಗಿರುವ ಪರ್ವತಾರೋಹಣದ ಆ ವರ್ಣನೆ. ಯಾವ ಮಹಾಕವಿಯ ಯಾವ ಮಹಾಕಾವ್ಯದ ಮಹೋಪಮೆಗೂ ಬಿಟ್ಟುಕೊಡುವುದಿಲ್ಲ ಆ ಭಾವಗೀತೆಯ ಮಹೋಪಮೆ.

ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಮಹೋಪಮೆಯನ್ನು ಸರ್ವಾಂಶಗಳಲ್ಲಿಯೂ ಸಂಪೂರ್ಣವಾಗಿ ಹೋಲುವ ಉಪಮೆಗಳು ದುರ್ಲಭವಾಗಿದ್ದರೂ ಅದರ ಛಾಯೆಗಳೇನೊ ಅಲ್ಲಲ್ಲಿ ದೊರೆಯುತ್ತವೆ. ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ * ಸರೋವರದಲ್ಲಿ ಮಿಂದ ಲಲನೆಯರು 'ನನೆದ ಮೈಯೊಳಿಹ ವಸನಂಗಳಂ ಸಡಿಲ್ಚಿ......ಪಲವು ಬಣ್ಣಂಗಳಂ ತೆಗೆದುಟ್ಟು ರಂಜಿಸಿದರು' ಎಂಬುದನ್ನು ಮಾಗಿ ಜಾರಿ ವಸಂತ ಋತು ತಲೆದೋರುವ ಸಮಯಕ್ಕೂ (ಸಂ. ೩೧, ಪ. ೫೩), ಮಂದಮಾರುತನನ್ನು ತೂಣಗೊಂಡವನಿಗೂ (ಸಂ. ೩, ಪ. ೩೨), ಕೃಷ್ಣನನ್ನು ಮುಂಗಾರ ಜೀಮೂತ ದೊಡ್ಡಿಗೂ (ಸಂ. ೨೬, ಪ. ೫೯) ಹೋಲಿಸುವ ರೀತಿಯಲ್ಲಿ ಮಹೋಪಮೆಯ ಛಾಯೆ ಸುಳಿಯುತ್ತದೆ.

---

* 'ಉಪಮಾಲೋಲ ಲಕ್ಷ್ಮೀಶ' ಎಂಬ ಪ್ರಬಂಧವನ್ನು ನೋಡಿ.

ವಿಸ್ತರಿಸಿದರೆ, ವಿವರಿಸಿದರೆ, ವರ್ಣಿಸಿದರೆ, ಸೊಗಸಾದ ಮಹೋಪಮೆಗಳಾಗ ಬಹುದಾದ ಉಪಮೆಗಳಿಗಂತೂ ಗಣನೆಯಿಲ್ಲ. ಕುಶನ ಶರಾಘಾತಿಗೆ ಭರತಾನುಜನು 'ಗಿರಿತಟದೊಳ್ ಒಂದೊಂದರೊಳ್ ಪೆಣಗಿ ಸೋಲ್ತು ಮದಕರಿ ದರಿಗುರುಳ್ವಂತೆ' ಬಿದ್ದನೆಂಬುದನ್ನಾಗಲಿ (ಸಂ. ೨೦, ಪ. ೩೧), 'ಇದು ಭಗೀರಥ ರಥವ ಬೆಂಕೊಂಡು ಪರಿವ ಸುರನದಿಯ ಪ್ರವಾಹಮೆನಲ್' (ಸಂ. ೪, ಪ. ೨೮) ಎಂದು ದೊರೆಯ ಹಿಂದೆ ನಡೆತರುವ ಸೇನಾವಾಹಿನಿಗೆ ಒಡ್ಡಿದ ಉಪಮೆಯನ್ನಾಗಲಿ ಮಹೋಪಮೆಯ ಮಹತ್ತಿಗೆತ್ತಲಾರದೆ ಪ್ರತಿಭೆ?

ಒಂದು ದೃಷ್ಟಿಯಿಂದ ನೋಡಿದರೆ ಲಕ್ಷ್ಮೀಶನೇ ಆ ಕೆಲಸವನ್ನೂ ಮಾಡಿದ್ದಾನೆ. ಅರ್ಜುನನಿಗೂ ಬಭ್ರುವಾಹನನಿಗೂ ಆದ ಕಾಳಗವನ್ನು ರಾಮನಿಗೂ ಕುಶಲವರಿಗೂ ಆದ ಕಾಳೆಗಕ್ಕೆ ಹೋಲಿಸಿದ ಜೈಮಿನಿಯನ್ನು ಕುರಿತು ಜನಮೇಜಯನು ಅದನ್ನು ವಿವರಿಸಿ ತಿಳಿಸುವಂತೆ ಕೇಳಿಕೊಳ್ಳುತ್ತಾನೆ. ಆಗ ಜೈಮಿನಿ ರಾಮಾಯಣವನ್ನೆಲ್ಲ ಸಂಕ್ಷೇಪವಾಗಿ ಹೇಳಿ, ಸೀತಾವನವಾಸಾದಿ ಕಥೆಯನ್ನು ವಿಸ್ತಾರವಾಗಿ ವರ್ಣಿಸುತ್ತಾನೆ: ನಾಲ್ಕು ದೊಡ್ಡ ಸಂಧಿಗಳಲ್ಲಿ! ನಮ್ಮ ಮನಸ್ಸು ಭಾರತ ಪ್ರಪಂಚವನ್ನು ಮರೆತು ರಾಮಾಯಣದ ಜಗತ್ತಿನಲ್ಲಿ ಪರ್ಯಟನ ಮಾಡುತ್ತದೆ. ನಾಲ್ಕು ದೀರ್ಘ ಸಂಧಿಗಳ ರಸಪ್ರಯಾಣದ ತರುವಾಯ ಮತ್ತೆ ಅರ್ಜುನ ಬಭ್ರುವಾಹನರ ಕಾಳೆಗಕ್ಕೆ ಬರುತ್ತೇವೆ.

ಆದರೆ ಲಕ್ಷ್ಮೀಶನ ಪ್ರಯತ್ನವನ್ನು 'ಮಹೋಪಮೆ' ಎಂದು ಹೇಳಲಾಗು ವುದಿಲ್ಲ. ಸ್ವತಂತ್ರವಾಗಿ ನಿಲ್ಲಬಹುದಾದ ಒಂದು ದೀರ್ಘ ಕಥನ ಕಾವ್ಯವನ್ನೇ 'ಮಹೋಪಮೆ' ಎನ್ನಲಾಗುವುದಿಲ್ಲ. ಬೇಕಾದರೆ ಅದನ್ನು 'ಉಪಾಖ್ಯಾನೋಪಮೆ' ಎಂದು ಕರೆಯಬಹುದು!

ನಮ್ಮ ಕಾವ್ಯದೇವಿಗೆ ಪಾಶ್ಚಾತ್ಯ ಕಾವ್ಯದೇವಿಯಿತ್ತ ಹೊಸಕಾಣಿಕೆ— 'ಮಹೋಪಮೆ'. ಆ ಒಡವೆ ಸ್ವಲ್ಪ ವಿಲಕ್ಷಣವಾಗಿ ಕಂಡರೆ ಅದಕ್ಕೆ ಕಾರಣ— ಅಪರಿಚಯ. ರಸಲೋಕದಲ್ಲಿ 'ಅಪರಿಚಯ'ವನ್ನೇ ದೋಷವೆಂದು ಹಳಿದರೆ ನಮ್ಮ ಸ್ವಲ್ಪತೆಗೆ ನಾವೇ ಕನ್ನಡಿ ಹಿಡಿದಂತಾಗುತ್ತದೆ.

ಬಾಳಿನಲ್ಲಿ ಎನಿತೆನಿತೊ ಅಪರಿಚಯಗಳು ಸುಪರಿಚಯಗಳಾಗಿ ಸುಖಶಾಂತಿ ಗಳಿಗೆ ಕಾರಣವಾಗುತ್ತವೆ. ಪಶ್ಚಿಮದಿಂದ ಬಂದ, ಒಂದಲ್ಲ, ಎರಡಲ್ಲ, ಹಲವಾರು ಅಪರಿಚಿತಗಳು ಈಗ ಎಷ್ಟರಮಟ್ಟಿಗೆ ಸುಪರಿಚಿತಗಳಾಗಿವೆ ಎಂದರೆ ಅವು ಹೊರಗಿನಿಂದ ಬಂದವೆಂಬುದನ್ನೂ ನಾವು ಮರೆತಿದ್ದೇವೆ. 'ಮಹೋಪಮೆ' ಯೂ ಮುಂದೆ ಅಂತಹ ಸುಪರಿಚಿತಗಳೊಂದಿಗೆ ಸೇರುತ್ತದೆ ಎಂಬುದರಲ್ಲಿ ಸಂದೇಹವಿಲ್ಲ.

ಆ ಹೆಣ್ಣು ಕನ್ನಡದ ಮನೆಗೆ ಹೊಸ ಸೊಸೆ: ಅವಳು ಮೂರು ಜಡೆಗಳನ್ನು ಹಾಕಿಕೊಂಡಿರಬಹುದು. ಬಣ್ಣ ಬಣ್ಣದ ಸೀರೆಯನ್ನು ನೆಲಗುಡಿಸುವಂತೆ ಉಟ್ಟಿರ ಬಹುದು. ನಾನಾ ರತ್ನಗಳಿಂದ ತಯಾರಾದ ಅವಳ ಕೊರಳ ಹಾರಗಳು ಅತಿ ನೀಳವಾಗಿ ಜೋಲಾಡುತ್ತಿರಬಹುದು. ಒಟ್ಟಿನಲ್ಲಿ ಆಕೆಯದೆಲ್ಲವೂ ಕೊಂಚ ಅಧಿಕಾಲಂಕಾರವಾಗಿ ತೋರಬಹುದು. ಅತ್ತೆಗೆ ಮುನಿಸು; ಅತ್ತಿಗೆಗೆ ಕರುಬು.

ಕೆಲವರಿಗೆ ಕುತೂಹಲ; ಮತ್ತೆ ಹಲವರಿಗೆ ಕೈಗೆಟುಕದ ಅಪಕ್ವ ಕಟುಫಲ. ಕೈಹಿಡಿದ ಇನಿಯನಿಗೆ ಮಾತ್ರ ಎಷ್ಟು ನೋಡಿದರೂ ಸಾಲದು; ಎಷ್ಟು ಮೆಚ್ಚಿದರೂ ಸಾಲದು; ಎಷ್ಟು ಬಣ್ಣಿಸಿದರೂ ಸಾಲದು. ಇರಲಿ. ಹೊಸ ಸೊಸೆ ಕೆಲದಿನಗಳಲ್ಲಿಯೆ ಮನೆಯಾಳಾಗುತ್ತಾಳೆ. ತನ್ನ ಸೌಜನ್ಯ ಸದ್ಗುಣಗಳಿಂದ ಎಲ್ಲರ ಮನಸ್ಸನ್ನೂ ಅಕ್ಕರೆಯಿಂದ ಸೂರೆಗೊಳ್ಳುತ್ತಾಳೆ. ಹಿರಿಕುಲದ ಹೆಣ್ಣು ಹಿರಿತನದಿಂದ ಕೂಡಿಯೆ ಇದ್ದಾಳೆ; ಹಿರಿಯಳೆಂದು ಸನ್ಮಾನಿತಳೂ ಆಗುತ್ತಾಳೆ.*

ಕೆ. ವಿ. ಪುಟ್ಟಪ್ಪ

---

* 'ಚಿತ್ರಾಂಗದಾ' ಎಂಬ ಹೆಸರಿನ ಮಹಾಛಂದಸ್ಸಿನ ಕಾವ್ಯದಲ್ಲಿ ನಾಲ್ಕಾರು ಮಹೋಪಮೆಗಳಿವೆ. ಕುತೂಹಲವಿರುವವರು ನೋಡಬೇಕೆಂದು ಪ್ರಾರ್ಥನೆ.

# ಜೀವನ ರಸಿಕತೆ

ಯಾವುದೇ ಒಂದು ಕಾಲದಲ್ಲಿ ಇಂತಹ ದೇಶದಲ್ಲಿ ಜನ್ಮಿಸಬೇಕೆಂಬ ಆಕಾಂಕ್ಷೆ ನನಗಿದ್ದು, ಯಾವನಾದರೊಬ್ಬ ಸಿದ್ಧಪುರುಷನು—'ನಿನ್ನ ಆ ಆಕಾಂಕ್ಷೆಯನ್ನು ಪೂರ್ತಿಗೊಳಿಸುವೆ; ದೇಶವನ್ನೂ ಕಾಲವನ್ನೂ ಆರಿಸಿಕೊಳ್ಳು'—ಎಂದು ಹೇಳಿದರೆ ನಾನು ತತ್‌ಕ್ಷಣ ಸ್ವಯಂ ಪ್ರೇರಣೆಯಿಂದ ಆರಿಸಿಕೊಳ್ಳುವೆ: ನೈಮಿಷಾರಣ್ಯದಲ್ಲಿ ಲೋಮಹರ್ಷಣನು ಮಹಾಭಾರತದ ಕತೆಯನ್ನು ಹೇಳುತ್ತಿರುವ ಕಾಲ, ಅದನ್ನು ಕೇಳಲು ಗುಂಪುಕಟ್ಟಿ ಕುಳಿತವರಲ್ಲಿ ಸ್ಥಾನ. ಸ್ವರ್ಗ ಬೇಡ, ಮೋಕ್ಷ ಬೇಡ; ಸೂತನಿಂದ ಮಹಾಭಾರತವನ್ನು ಕೇಳುವ ಸೌಖ್ಯ ದೊರೆತರೆ ಸಾಕು.

ಹೀಗೆ ನಾನು ಹೇಳಿದರೆ ಲೋಮಹರ್ಷಣನಿಗಾಗಿ ಮತ್ತು ಮಹಾಭಾರತಕ್ಕಾಗಿ ನನಗೆ ಆದರವಿದೆ ಎಂದು ಕೆಲವರು ತಿಳಿಯಬಹುದು; ಇಲ್ಲವೆ ಋಷಿಯಾಗಿ ನಿರುದ್ಯೋಗದಿಂದ ಕಾಲಕಳೆಯ ಬಯಸುವೆ ಎಂದು ಬೇರೆ ಕೆಲವರು ಭಾವಿಸಬಹುದು. ಆದರೆ ಇಂತಹ ಯಾವ ಕಲ್ಪನೆಯೂ ನನ್ನ ನಿಜ ಹೃದ್ಗತವನ್ನು ಮುಟ್ಟಲಾರದು. ಆ ಕಾಲ, ಆ ದೇಶ ಇವು ನನಗೆ ಬೇಕೆನಿಸುವುದರಲ್ಲಿ ಬೇರೊಂದು ಕಾರಣವಿದೆ. ಅದೆಂದರೆ ಆ ಸಂದರ್ಭದಲ್ಲಿ ಸೂಚಿತವಾಗುವ ಜೀವನ ರಸಿಕತೆ.

ಮೇಲಿನ ಮಾತನ್ನು ಮೊದಲು ಸ್ಪಷ್ಟಗೊಳಿಸುವೆ. ನೈಮಿಷಾರಣ್ಯದ ಆ ಸಂದರ್ಭವನ್ನು ಸ್ವಲ್ಪ ವಿವರವಾಗಿ ತಿಳಿದುಕೊಳ್ಳೋಣ. ನೈಮಿಷಾರಣ್ಯದ ಋಷಿಗಳು ಮಿಕ್ಕ ಋಷಿಗಳಂತೆ ತಪೋನಿಷ್ಠರು, ವ್ರತಬದ್ಧರು, ಶೀಲಸಂಪನ್ನರು. ಸಂಸಾರದಲ್ಲಿ ಕೇವಲ ಇಂದ್ರಿಯಗಳಿಗೆ ಕ್ಷಣಿಕವಾದ ಸುಖವನ್ನುಂಟುಮಾಡುವ ಅನುಭವದ ಮೋಹ ಇಲ್ಲವೆ ಪರವಶತೆ ಅವರಿಗಿದ್ದಿಲ್ಲ. ಇಂತಹ ಋಷಿಗಳು ಸೂತನಾದ ಲೋಮಹರ್ಷಣನನ್ನು ತಡೆದು ಮಹಾಭಾರತದ ಕತೆಯನ್ನು ಕೇಳಲು ಯಾಕೆ ಕುತೂಹಲವನ್ನು ತೋರಿಸಿದರು? ಹೊತ್ತುಕಳೆಯಲು ವೃತ್ತಪತ್ರಿಕೆಗಳನ್ನೋದುವ ತೆರದ ಸಾಹಿತ್ಯಪ್ರೇಮ ಅಂತಹ ತಪೋನಿಷ್ಠರಲ್ಲಿ, ವ್ರತಬದ್ಧರಲ್ಲಿ ಇರುವುದು ಶಕ್ಯವಿಲ್ಲ. ಅದರಂತೆಯೆ ಮಹಾಭಾರತ ಶ್ರವಣದಿಂದ ಪುಣ್ಯ ಗಳಿಸಿಕೊಳ್ಳಬೇಕೆಂಬ ವಿಚಾರವೂ ಅವರಿಗಿದ್ದಿರಲಿಕ್ಕಿಲ್ಲ. (ಇತಿಹಾಸದ ದೃಷ್ಟಿಯಿಂದ ಈ ವಿಚಾರವು ತೀರ ತರುವಾಯದ್ದಿದೆ.) ಶೀಲಸಂಪನ್ನರಿಗೆ, ತಪೋನಿಷ್ಠರಿಗೆ, ಋಷಿಗಳಿಗೆ ಪುಣ್ಯದೊರಕಿಸುವ ಈ ಮಾರ್ಗದ ಆವಶ್ಯಕತೆ ಇದ್ದಿರಲಾರದು. ಹೊತ್ತು ಕಳೆಯುವ ಹಂಚಿಕೆಯೂ ಅಲ್ಲ, ಶೀಘ್ರವಾಗಿ ಪುಣ್ಯ ತುಂಬಿಕೊಳ್ಳುವ ಚುಚ್ಚುಮದ್ದೂ (ಇಂಜೆಕ್ಷನ್) ಅಲ್ಲ. ಹಾಗಾದರೆ ಆ ಋಷಿಗಳ ಉದ್ದೇಶವೇನಿದ್ದಿತು? ಜೀವನ ರಸಿಕತೆಯೆ ಆ ಉದ್ದೇಶ ಎಂದು ನನ್ನ ಅಭಿಪ್ರಾಯ.

'ಜೀವನ ರಸಿಕತೆ' ಎಂಬುದರ ಅರ್ಥವನ್ನು ತಿಳಿಸದ ಹೊರತು ಮೇಲಿನ ಮಾತು ಸ್ಪಷ್ಟವಾಗುವುದಿಲ್ಲ. ಅದಕ್ಕಾಗಿ ಒಂದು ನೇರವಾದ ಪದ್ಧತಿಯಿಂದ ಆ ಶಬ್ದದ ಅರ್ಥವನ್ನು ತಿಳಿಯಲು ಯತ್ನಿಸೋಣ. ಜೀವನದಲ್ಲಿಯ ರಸವನ್ನು

ಆಸ್ವಾದನಮಾಡುವ ಗುಣವೆ ಜೀವನರಸಿಕತೆ ಎಂದು ನೋಡಲು ಆ ಶಬ್ದರಚನೆಯನ್ನು ವಿಂಗಡಿಸಿ ಹೇಳಬಹುದು. ರಸವೆಂದರೇನು, ಅದನ್ನು ಆಸ್ವಾದಿಸುವುದು ಹೇಗೆ—ಎಂಬ ವಿಚಾರಗಳನ್ನು ಕೆಲಹೊತ್ತು ಬದಿಗಿರಿಸೋಣ. ಜೀವನದಲ್ಲಿಯ ರಸವನ್ನು ಆಸ್ವಾದಿಸುವ ಇಚ್ಛೆ ಇರಬೇಕಾಗಿದ್ದರೆ ಅದಕ್ಕೂ ಮುಂಚೆ 'ಜೀವನದಲ್ಲಿ ರಸವಿದೆ' ಎಂಬ ಭರವಸೆ ಬೇಕಾಗುವುದು; ಆ ಭರವಸೆ ಇಲ್ಲದೆ ಆಸ್ವಾದಿಸುವ ಯತ್ನದಲ್ಲಿ ಯಾರೂ ಬೀಳುವುದಿಲ್ಲ. ಲೋಮಹರ್ಷಣನ ಶ್ರೋತೃವೃಂದಕ್ಕೆ ಆ ಭರವಸೆ ಇದ್ದಿತು. ಜೀವನದಲ್ಲಿ ಸವಿ ಇದೆ ಎಂದು ತಿಳಿದುಕೊಂಡಿದ್ದರಲ್ಲದೆ, ಆ ಸವಿಯನ್ನು ಉಪಭೋಗಿಸಬೇಕು ಎಂಬ ಹೃದ್ಗತವನ್ನೂ ಅವರು ತಳಿದಿದ್ದರು.

ಋಷಿಗಳು ತಿಳಿದುಕೊಂಡ ಈ ರಸವು ಕ್ಷಣಿಕವಾದುದಲ್ಲ, ಐಹಿಕ ಸ್ವರೂಪದ್ದಲ್ಲ, ಕೇವಲ ಇಂದ್ರಿಯಗಳ ಮೋಹವಲ್ಲ ಎಂದು ಮೇಲೆ ಕಾಣಿಸಿದ ಋಷಿಸ್ವಭಾವ ವರ್ಣನೆಯಿಂದ ಸ್ಪಷ್ಟವಾಗುವುದು. ಜೀವನದಲ್ಲಿಯ ರಸವು ಆಸ್ವಾದನೀಯವಷ್ಟೇ ಅಲ್ಲ, ಶಾಶ್ವತ ಸ್ವರೂಪದ್ದೂ ಇದೆ ಎಂಬೇ ಈ ತಪೋಧನರ ಅಭಿಪ್ರಾಯ. ಆಸಕ್ತಿಯನ್ನು ಹುಟ್ಟಿಸದೆ ಆನಂದವನ್ನುಂಟುಮಾಡುವುದೆ ಶಾಶ್ವತ ಸ್ವರೂಪ. ಆಸಕ್ತಿಯಿಂದ ನಮ್ಮನ್ನು ಪರವಶಮಾಡುವುದು ಕೊನೆಗೆ ಆಶೆ ನಿರಾಶೆಗಳಲ್ಲಿ ಪರಿಣಮಿಸಿ ಕ್ಷಣಿಕವೆನಿಸುವುದು; ಆನಂದವನ್ನುಂಟುಮಾಡದಿದ್ದರೆ ಆಸ್ವಾದನೀಯವೆನಿಸದು. ಆದುದರಿಂದ ಜೀವನರಸವು ಆಸಕ್ತಿರಹಿತವಾದುದು, ಆನಂದದಾಯಕವಾದುದು ಎಂದು ಹೇಳಬಹುದು.

ಇನ್ನುಮುಂದೆ ರಸವೆಂದರೇನೆಂಬುದನ್ನು ಅರಿತುಕೊಳ್ಳದ ಹೊರತು ಚರ್ಚೆ ಸುಲಭವಾಗಲಾರದು. ಆದ್ದರಿಂದ 'ರಸ' ಎಂಬುದರ ಅರ್ಥವನ್ನು ನೋಡೋಣ. ಭರತ ನಾಟ್ಯಶಾಸ್ತ್ರ ಎಂಬ ಸಂಸ್ಕೃತ ಗ್ರಂಥದಲ್ಲಿ ಈ ಅರ್ಥವನ್ನು ತೀರ ಸುಲಭವಾದ ಶೈಲಿಯಲ್ಲಿ, ಸ್ಪಷ್ಟವಾದ ಶಬ್ದಗಳಲ್ಲಿ ವಿವರಿಸಿದೆ. ಅದಕ್ಕಾಗಿ ಯಾವ ಸಂಕೋಚವಿಲ್ಲದೆ ಪೂರ್ತಿಯಾಗಿ ಆ ವಿವರಣೆಯನ್ನು ಕೆಳಗೆ ಕಾಣಿಸುತ್ತೇನೆ:—

> ರಸ ಇತಿ ಕಃ ಪದಾರ್ಥಃ? ಅತ್ರ ಉಚ್ಯತೇ; ಆಸ್ವಾದ್ಯತ್ವಾತ್. ಕಥಂ ಆಸ್ವಾದ್ಯೋ ರಸಃ? ಅತ್ರ ಉಚ್ಯತೇ; ಯಥಾ ಹಿ ನಾನಾ-ವ್ಯಂಜನ ಸಂಸ್ಕೃತಂ ಅನ್ನಂ ಭುಂಜಾನಾ ರಸಾನ್ ಆಸ್ವಾದಯಂತಿ ಸುಮನಸಃ ಪುರುಷಾಃ ಹರ್ಷಾದೀಂಶ್ಚಾಪಿ ಅಧಿಗಚ್ಛಂತಿ, ತಥಾ ನಾನಾ-ಭಾವ ಅಭಿನಯ-ವ್ಯಂಜಿತಾನ್ ವಾಗಂಗಸತ್ತ್ವೋಪೇತಾನ್ ಸ್ಥಾಯಿಭಾವಾನ್ ಆಸ್ವಾದಯಂತಿ ಸುಮನಸಃ ಪ್ರೇಕ್ಷಕಾಃ.
>
> ['ಯಾವುದನ್ನು ಆಸ್ವಾದಿಸ (ಅನುಭವಿಸ)ಬಹುದೊ ಅದುವೆ ರಸ. ಬೇರೆಬೇರೆ ಪದಾರ್ಥಗಳಿಂದ ಕೂಡಿದ ಊಟವನ್ನು ಮಾಡುವ ಸವಿಗಾರರಿಗೆ (ಸುಮನಸಃ) ರುಚಿ (ರಸ) ಎನಿಸುವಂತೆ ಆನಂದವೂ ಎನಿಸುವುದು. ಅದೇ ಮೇರೆಗೆ ಶಬ್ದಗಳ—ಶರೀರಾವಯವಗಳ ಬೇರೆ ಬೇರೆ ಭಾವ ಚೇಷ್ಟಿತಗಳೊಡನೆ "ಸ್ಥಾಯಿಭಾವ"ವನ್ನು ಪ್ರೇಕ್ಷಕರು ಅನುಭವಿಸುವರು (ಅದೇ ರಸ).]

'ರಸ' ಎಂಬುದು ಕೇವಲ ರುಚಿ ಅಲ್ಲ ಎಂಬುದು ಮೊದಲು ಮೇಲಿನ ಮಾತಿನಿಂದ ತಿಳಿದುಬರುವುದು. ಇದಲ್ಲದೆ ರಸ ತಿಳಿದುಕೊಳ್ಳಬೇಕಾಗುವವನು 'ಸವಿಗಾರ' (ಸುಮನಸ್)ನಿರಬೇಕಾಗುವುದು. ಇಂತಹ ಸವಿಗಾರನಿಗೆ ರುಚಿಗಳನ್ನುಂಡತರುವಾಯ ಅನುಭವಕ್ಕೆ ಬರುವ ಆನಂದ ಇಲ್ಲವೆ ಸ್ಥಾಯಿಭಾವವೆ ರಸವೆನಿಸುವುದು. ಪದಾರ್ಥ, ಅದರ ರುಚಿ, ಅದರ ಸವಿಗಾರ—ಈ ಮೂರರ ಸಾಮರಸ್ಯವೆ ಆನಂದ ಇಲ್ಲವೆ ಸ್ಥಾಯಿಭಾವ. ಜೀವನ, ಅದರೊಳಗಿನ ಬೇರೆಬೇರೆ ಅನುಭವಗಳು, ಅವುಗಳ ಅನುಭೋಕ್ತಾ—ಈ ಮೂರರ ಸಾಮರಸ್ಯವೆ ಜೀವನದ ರಸ ಎಂದು ಹೇಳಿದಂತಾಯಿತು. ಈ ಮೂರರ ಸಾಮರಸ್ಯವೆಂದರೇನು ? ಜೀವನ, ಅನುಭವ, ಅನುಭೋಕ್ತಾ—ಇವುಗಳಲ್ಲಿ ಪೂರ್ತಿಯಾಗಿ ತನ್ಮಯತೆ ಇರಬೇಕು. ಯಾರಿಗೆ 'ವರ್ಣನೀಯ ವಿಷಯ ತನ್ಮಯೀಭವನ ಯೋಗ್ಯತೆ' ಇವೆಯೊ ಅವರು 'ಸಹೃದಯ'(ಸವಿಗಾರ)ರು ಎಂದು ಆನಂದವರ್ಧನ ಎಂಬ ಇನ್ನೊಬ್ಬ ವಿಮರ್ಶಕನು ಹೇಳಿದ್ದಾನೆ.

ಹೀಗೆ ತನ್ಮಯತೆಯನ್ನೆ ಪಡೆಯುವುದು ರಸಿಕತೆ ಎನಿಸಿದರೆ ಅದರಲ್ಲಿ ಅಷ್ಟೊಂದು ಸ್ಪೃಹಣೀಯವಾದುದೇನು ಎಂದು ಯಾರಾದರೂ ಕೇಳಬಹುದು. ಪರಬ್ರಹ್ಮನಲ್ಲಿ ಸಾಮರಸ್ಯ ಹೊಂದುವುದು ಅಂತಿಮ ಧ್ಯೇಯವೆಂದು ವೇದಾಂತಿಗಳು, ಪರಮಾತ್ಮನಲ್ಲಿ ಲೀನನಾಗುವುದೆ ಮೋಕ್ಷವೆಂದು ಭಕ್ತಿಮಾರ್ಗದವರು ನಮ್ಮ ದೇಶದಲ್ಲಿ ಎಂದಿನಿಂದಲೂ ಹೇಳಿದ್ದಾರೆ; ಈಗಲೂ ಅದೇ ಮಾತನ್ನೆ ಹೇಳಿದಂತಾಯಿತು, ಇದರಲ್ಲಿ ಹೊಸದೇನಿದೆ—ಎಂದು ಕೆಲವರು ಆಕ್ಷೇಪಿಸಬಹುದು. ಈ ಮಾತು–ಜೀವನ ರಸಿಕತೆ–ಪೂರ್ತಿಯಾಗಿ ಬೇರೆಯಾದುದು, ತೀರ ಹೊಸತು ಎಂದೇ ನಾನು ಹೇಳಬೇಕಾಗಿದೆ. ವೇದಾಂತಿಗಳ ತನ್ಮಯತೆಗೆ ಜ್ಞಾನ ಪ್ರೇರಕವಾಗಿದೆ. ಭಕ್ತನ ತಲ್ಲೀನತೆಗೆ ಭಾವನೆ ಪ್ರೇರಕವಾಗಿದೆ. ನಾನು ವಿವರಿಸುತ್ತಿರುವ ತನ್ಮಯತೆಗೆ ಜೀವನವೆ ತಳಹದಿಯಾಗಿದೆ. ವೇದಾಂತಿಯು ಜೀವನಪ್ರವಾಹದಿಂದ ಹೊರಬಂದು ದಂಡೆಗೆ ನಿಲ್ಲುವನು, ಭಕ್ತನು ಜೀವನಪ್ರವಾಹದಿಂದ ಮೇಲೇಳಲು ಯತ್ನಿಸುವನು; ಆದರೆ ಸವಿಗಾರನು ಜೀವನಪ್ರವಾಹದಲ್ಲಿಯೆ ಆನಂದವನ್ನು ಅನುಭವಿಸುವನು.

ಜ್ಞಾನಿಗಳೂ ಭಕ್ತರೂ ಆದ ಋಷಿಗಳು ಸವಿಗಾರರಾಗಬಯಸಿದರೆಂದರೆ ರಸಿಕತೆಯು ಸ್ಪೃಹಣೀಯವಾದುದಲ್ಲವೆ? ಜ್ಞಾನ ಭಕ್ತಿಗಳ ಮೋಕ್ಷಕ್ಕಿಂತ ರಸಿಕತೆಯ ಆನಂದವೆ ಹೆಚ್ಚಿನದೆಂದಂತಾಯಿತಲ್ಲವೆ? ಸಾಮಾನ್ಯವಾಗಿ ಎಲ್ಲದರ ಗುರಿಯೂ ಒಂದೇ ಇರುವಾಗ ಅದರಲ್ಲಿ ಒಂದು ಮೇಲು ಒಂದು ಕೆಳಗೆ ಎನ್ನುವುದು ಸಮಂಜಸವಾದುದೆ—ಎಂದು ಯಾರಾದರೂ ಸಂಶಯಪಡಬಹುದು. ಆ ಸಂಶಯಕ್ಕೆ ಉತ್ತರವೆಂದು ನಾನೊಂದು ಉದಾಹರಣೆಯನ್ನು ಕೊಡುವೆನು. ಶರೀರವನ್ನು ನಡೆಸಿಕೊಂಡುಹೋಗಲು ಅನ್ನದ ಆವಶ್ಯಕತೆ ಇದೆಯಷ್ಟೆ. ಒಬ್ಬ ಮನುಷ್ಯನು ಅನ್ನ ಮತ್ತು ಶರೀರಗಳ ಪರಸ್ಪರ ಸಂಬಂಧದ ಪೂರ್ತಿಯಾದ ಜ್ಞಾನವನ್ನು ಮಾಡಿಕೊಂಡು ಅನ್ನ ಸೇವನೆಯನ್ನು ಮಾಡುವನೆಂದು ಕಲ್ಪಿಸುವ. ಇಂತಹನ ಅನ್ನಸೇವನೆ ಎಂದರೆ ಅದೊಂದು ಕಷ್ಟಮಯ ತಪಃಸಾಧನೆಯೆ

ಆಗುವುದು. ಶರೀರದ ಬೇರೆಬೇರೆ ಘಟಕಗಳಿಗೆ ಪೋಷಕವಾದ ಬೇರೆ ಬೇರೆ ಆಹಾರ ಗಳನ್ನು ಯೋಗ್ಯವಾದ ಪ್ರಮಾಣದಲ್ಲಿ ತೂಗಿ ತಿನ್ನುವುದು!—ದಿನಾಲು ಅಲ್ಲ, ಇಂತಿಷ್ಟು ಕಾಲಾವಧಿಗೆ! ಇವನು ವೇದಾಂತಿ. ಇನ್ನೊಬ್ಬನಿದ್ದಾನೆ—ಅವನ ಅನ್ನಸೇವನೆಯ ವಿಧಿಯೆ ಬೇರೆ. 'ಮನುಷ್ಯನಾದುದಕ್ಕೆ ದೊರೆತ ಅನ್ನವನ್ನು ವಿಧಿಸಿದ ರೀತಿಯಲ್ಲಿ ತಿನ್ನುವೆ. ಆದರೆ ಯೋಗ್ಯ ಅನ್ನವನ್ನು ದೊರಕಿಸುವುದಕ್ಕಾಗಿ ಯೋಗ್ಯ ಜನ್ಮವನ್ನೆ ತಾಳಬೇಕಾಗುವುದು. ಆಗಲಿ ಅದನ್ನು ಕಲ್ಪಿಸುವೆ, ಕಣ್ಣು ಮುಚ್ಚಿ ತಿನ್ನುವೆ' ಎಂದು ಹಂಬಲವನ್ನು ಭಜಿಸುತ್ತ, ಹಲ್ಲು ತಾಳ ಕಟಿಯುತ್ತ ಇವನ ಉದರಪೂಜೆ! ಇವನು ಭಕ್ತನು. ಇವರಿಬ್ಬರಿಗೂ ಅನ್ನ ಸೇವನೆಯಲ್ಲಿ ಇದ್ದ ಅನ್ನದ ಕುಂದುಕೊರತೆಗಳನ್ನು ಕಾಣುವುದರಲ್ಲಿಯೆ ದೊಡ್ಡ ವ್ಯಾಸಂಗ. ಆದರೆ ಮೂರನೆಯವನೊಬ್ಬನಿದ್ದಾನೆ, ಸವಿಗಾರ. ಇವನ ರೀತಿ ಬೇರೆ. ರೀತಿ ಬೇರೆ ಎಂದರೆ ಸಿಕ್ಕಿದ್ದನ್ನೆಲ್ಲ ತಿನ್ನುವುದಿಲ್ಲ. ಇವನಿಗೆ ಅನ್ನವು ವಿಮರ್ಶೆಯ ವಿಷಯವಾಗುವುದಿಲ್ಲ, ನೈಸರ್ಗಿಕ ನೀತಿ ಎನಿಸುವುದು. ತಿನ್ನುವ ಅನ್ನವನ್ನು ಹುಡುಕುವುದಕ್ಕಿಂತ ತಿಂದ ಅನ್ನವನ್ನು ದಕ್ಕಿಸುವುದರಲ್ಲಿ ಇವನ ವ್ಯಾಸಂಗ. ಅನ್ನದಿಂದ ಶರೀರ ಬೆಳೆಯುವುದಿಲ್ಲ. ಅನ್ನ ಮೈಗೂಡಿಸಿಕೊಂಡರೆ ಶರೀರ ಬೆಳೆಯು ವುದು ನಿಸರ್ಗದ ನೀತಿಯಾಗಿದೆ. ಅನ್ನದ ಗುಣದಷ್ಟೆ ಮೈಗೂಡಿಸುವ ಕಲೆಗೂ ಮಹತ್ತ್ವವಿದೆ; ಹಾಗೆ ನೋಡಿದರೆ ಅನ್ನದ ಗುಣಕ್ಕಿಂತ ಮೈಗೂಡಿಸುವ ಕಲೆಗೇ ಹೆಚ್ಚು ಮಹತ್ತ್ವವಿದೆ. ಇಲ್ಲವಾದರೆ ಜಗತ್ತಿನಲ್ಲಿ ಒಬ್ಬ ಬಡವನ ಶರೀರವೂ ಆರೋಗ್ಯದಿಂದ ಬೆಳೆಯುತ್ತಿರಲಿಲ್ಲ. ಪಥ್ಯದ ವೇದಾಂತಿ, ಅತೃಪ್ತಿಯ ಭಕ್ತ, ಮೈಗೂಡಿಸುವ ಸವಿಗಾರ—ಈ ಮುವ್ವರ ಗುರಿ ಒಂದೇ ಆಗಿದ್ದರೂ ಇವುಗಳಲ್ಲಿ ಸವಿಗಾರನ ಮಾರ್ಗದಿಂದಲೆ ಆನಂದ-ಆರೋಗ್ಯಗಳು ಹೆಚ್ಚು ಎಂದು ಬೇರೆ ಹೇಳಬೇಕಾಗಿಲ್ಲ.

ಮೇಲಿನ ಉದಾಹರಣೆಯಲ್ಲಿ ಅನ್ನ ಮೈಗೂಡಿಸುವುದೆ ಮಿಗಿಲೆನಿಸುವಂತೆ, ಜೀವನದಲ್ಲಿ ಅನುಭವಗಳನ್ನು ಮೈಗೂಡಿಸಿಕೊಳ್ಳುವುದೆ ಮಿಗಿಲೆನಿಸುವುದು. ನೈಮಿಷಾರಣ್ಯದ ಋಷಿಗಳ ಅಭಿಪ್ರಾಯವು ಇದಾಗಿದ್ದಿತು. ಅವರು ರಸಿಕ ರಾಗಿದ್ದರು. ರಸಿಕರಾಗಿದ್ದರೆಂದೇ ಲೋಮಹರ್ಷಣನು ಬೇಜಾರಿಲ್ಲದೆ ಮಹಾ ಭಾರತವನ್ನು ಹಾಡಿ ಹೇಳಿದನು. ಮಹಾಭಾರತ ಶ್ರವಣದಿಂದ ರಸಾಸ್ವಾದ ವಾಗುವುದೆಂದು ತಿಳಿದಾಗ ಈ ಋಷಿಗಳು ಒಂದು ಹೊಸ ಸತ್ಯವನ್ನೆ ಸಾರಿದರು. ಅದೆಂದರೆ, ಕಾವ್ಯದ—ಸಾಹಿತ್ಯದ—ಶ್ರೇಷ್ಠತೆ. ಸಾಹಿತ್ಯದಿಂದ ಜೀವನ ರಸಿಕತೆಗೆ ತೃಪ್ತಿಯಾಗುವಂತಿದ್ದರೆ ಸಾಹಿತ್ಯವು ನಾನಾ ತೆರದ ಅನುಭವಗಳನ್ನೊಳಗೊಂಡ ಜೀವನದ ಪ್ರತಿಬಿಂಬವೆ ಆಗಿರಬೇಕಲ್ಲವೆ? ಸಾಹಿತ್ಯದಲ್ಲಿ ಕಂಡುಬರುವ ಜೀವನ, ಜೀವನದ ನಾನಾ ಅನುಭವಗಳು ಮತ್ತು ಶ್ರೋತೃವೃಂದ—ಈ ಮೂರರ ಸಾಮ ರಸ್ಯವೆ ಸಾಹಿತ್ಯದ ರಸ. ಅದರ ಆಸ್ವಾದವನ್ನು ಮಾಡಬೇಕಾದರೆ ಸುಮನಸ್ ಇಲ್ಲವೆ ಸಹೃದಯ ಎಂದರೆ ಸವಿಗಾರನಾಗಿರಬೇಕಾಗುವುದು. ಸವಿಗಾರನಲ್ಲದವ ನಿಗೆ ಸಾಹಿತ್ಯದ ರಸಾಸ್ವಾದ ಸಿಕ್ಕದು. ಅನುಭವಗಳೊಡನೆ ಸಾಮರಸ್ಯವನ್ನು ಹೊಂದುವುದಾದರೆ ಅನುಭವಗಳನ್ನು ಮೈಗೂಡಿಸಿಕೊಳ್ಳುವ ಕಲೆ ಇರಬೇಕು.

ದುಃಖಕ್ಕೆ ದುಃಖ, ಕೋಪಕ್ಕೆ ಕೋಪ, ಸಂತಸಕ್ಕೆ ಸಂತಸ ಪ್ರತಿಧ್ವನಿಸಿದಲ್ಲದೆ ಸಾಮರಸ್ಯ ಹುಟ್ಟುವುದು? ಯೋಗ್ಯ ಅನುಭವಕ್ಕೆ ಯೋಗ್ಯ ಪ್ರತಿಧ್ವನಿ ದೊರೆಯಬೇಕಾದರೆ— ಆ ಹೃದಯದಲ್ಲಿ ವಿಮರ್ಶಾಭಾವವಿರಬೇಕು, ಅನುಭವಗಳನ್ನು ವಿಂಗಡಿಸುವ ಶಕ್ತಿ ಇರಬೇಕು. ಇಂತಹ ವಿಮರ್ಶಾ ಶಕ್ತಿ ಇದ್ದಾಗ ಮಾತ್ರ ರಸಾಸ್ವಾದವು ಶಕ್ಯವಾಗುವುದು. Criticism at its best is hearty appreciation ಎಂಬ ಇಂಗ್ಲಿಷ್ ವಿಮರ್ಶೋಕ್ತಿಯಲ್ಲಿ ಇದೇ ಮಾತು ಅಡಕವಾಗಿದೆ. ಜೀವನ ರಸಿಕತೆ ಎಂದರೆ ವಿಮರ್ಶಾಬುದ್ಧಿಯ ವ್ಯವಹಾರ, ಅನುಭವ-ವಿಮರ್ಶೆಗಳ ಸಾಮರಸ್ಯ ಎಂದು ಹೇಳಬಹುದು.

**ಆರ್. ವಿ. ಜಾಗಿರದಾರ**

# ಕನ್ನಡಿಗರ ರಸಿಕತೆ

ರಸಿಕತೆಯೆಂಬುದು ಎಷ್ಟು ಸುಲಭ ಗ್ರಾಹ್ಯವಾಗಿದೆಯೋ ಅದರ ಲಕ್ಷಣವು ಅಷ್ಟು ಸುಲಭಸಾಧ್ಯವಾಗಿಲ್ಲ. ರಸಿಕತೆಯ ಲಕ್ಷಣವನ್ನು ಸೂಕ್ಷ್ಮ ಸೂತ್ರದಲ್ಲಿ ಹೇಳಲಾಗುವುದಿಲ್ಲ. ಕೆಲವಕ್ಕೆ ಸಮರ್ಪಕವಾದ ಲಕ್ಷಣ ದೊರೆಯದು. ಕಾವ್ಯದ ಲಕ್ಷಣವೇನೆಂದರೆ—ಒಬ್ಬನು ಧ್ವನಿಯೇ ಕಾವ್ಯಕ್ಕೆ ಆತ್ಮವೆಂದನು, ಇನ್ನೊಬ್ಬನು ರಸವಿದ್ದರೆ ಒಂದು ಮಾತೂ ಕಾವ್ಯವಾಗುವುದೆಂದನು, ಮತ್ತೊಬ್ಬನು ಅಲಂಕಾರಗಳಿಂದ ಕಾವ್ಯವೆಂದನು. ಹೀಗೆ ಒಬ್ಬೊಬ್ಬನು ಒಂದೊಂದು ಲಕ್ಷಣವನ್ನು ಹೇಳುತ್ತ ಹೊರಟನು. ಈ ಒಂದೊಂದು ಲಕ್ಷಣವೂ ಕಾವ್ಯದ ಯಥಾರ್ಥವಾದ ತಿಳಿವಳಿಕೆಯನ್ನುಂಟುಮಾಡಲು ಎಷ್ಟು ಅಸಮರ್ಪಕವಾಗಿದೆಯೆಂಬುದನ್ನು ಬೇರೆ ಹೇಳಬೇಕಾಗಿಲ್ಲ. ಧ್ವನಿಯೇ ಲಕ್ಷಣವೆಂದರೆ, ರಸವು ಕೈಬಿಟ್ಟುಹೋಗುತ್ತದೆ. ರಸವೇ ಕಾವ್ಯವೆಂದರೆ ಅಲಂಕಾರಕ್ಕೆಡೆಯಿಲ್ಲದಾಗುತ್ತದೆ. ಅಲಂಕಾರವೊಂದನ್ನಿಟ್ಟುಕೊಂಡರೆ ಭಾವವು ಅಭಾವವಾಗುತ್ತದೆ. ಕಾವ್ಯವು ತಕ್ಷಣ ಮನಸ್ಸಿಗೆ ಒಪ್ಪಿಗೆಯಾಗಬೇಕು, ಆನಂದವನ್ನುಂಟುಮಾಡಬೇಕು ಎಂಬುದನ್ನೆಲ್ಲರೂ ಒಪ್ಪಲೇಬೇಕು. ಹಾಗೆಯೇ ರಸಿಕತೆಯ ಲಕ್ಷಣವಾಗಿದೆ. ಅದು ಒಬ್ಬನ ನಡೆಯಲ್ಲಿ, ಮಾತಿನಲ್ಲಿ, ಅವನಿರುವ ರೀತಿಯಲ್ಲಿ, ಅಂಗಭಂಗಿಯಲ್ಲಿ, ಉಡುಪಿನಲ್ಲಿ, ಆಹಾರದಲ್ಲಿ, ವಿಹಾರದಲ್ಲಿ—ಹೀಗೆ ನಿತ್ಯಜೀವನದ ವಿಧವಿಧವಾದ ಕಾರ್ಯಗಳಲ್ಲಿ ಗೋಚರವಾಗುತ್ತದೆ. ಅದು ಒಬ್ಬನ ಹುಟ್ಟುಗುಣವೆಂದರೂ ಸಲ್ಲುತ್ತದೆ. ಅದು ಒಂದು ಜನತೆಯ ಸುಸಂಸ್ಕೃತ ಜೀವನದ ರಸಘಟ್ಟ. ಕಲಿಸಿದರೆ ಬರುವುದಲ್ಲ, ಶುಷ್ಕಾನುಕರಣಕ್ಕಿಳಿಯುವುದಲ್ಲ. ಕೋಗಿಲೆಗೆ ಸುಸ್ವರವು ಸಹಜವಾಗಿರುವಂತೆ ರಸಿಕಜೀವಿಗೆ ರಸಿಕತೆ ಸಹಜವಾಗಿರುತ್ತದೆ. ಸಹಜವಾಗಿರಬೇಕಾದುದು ಬೆಲೆಗೆ ದೊರೆಯದು, ಎರವಿಗೆ ಬಾರದು. ಹಣವೇನೊ ಬೇಕಾದಷ್ಟಿರುತ್ತದೆ, ಕಾರ್ಪಣ್ಯವು ಕೈಬಿಡದು. ದ್ರವ್ಯದಿಂದ ಬೇಕಾದುದನ್ನು ಪಡೆಯಬಹುದು, ರಸಿಕತೆಯನ್ನು ಪಡೆಯಲಾದೀತೆ? “ಮಧುವಂ, ಮಲೆಯಾನಿಲನಂ, ಮನೋಜನಂ, ಕೌಮುದಿಯಂ” ಬೆಲೆಗೊಟ್ಟು ಪಡೆಯಬಹುದಾದರೆ ರಸಿಕತೆಯನ್ನೂ ಬೆಲೆಗೊಟ್ಟು ಪಡೆಯಬಹುದು. ಹಣವು ರಸಿಕನಾಗಿದ್ದವನನ್ನು ಸುಖಿಯಾಗಿ ಮಾಡಿ ಅವನ ರಸಿಕತೆಯನ್ನು ಇಮ್ಮಡಿಸಬಹುದಲ್ಲದೆ ಹಣವೇ ರಸಿಕತೆಯನ್ನು ಹುಟ್ಟಿಸದು. ರಸಿಕತೆಯಿಲ್ಲದ ಧನಿಕನು ರಸಿಕಜೀವನವನ್ನು ದ್ರವ್ಯದ ಬಲದಿಂದ ಅನುಕರಿಸಿದರೆ ಕರಡಿ ಸಂಗೀತವನ್ನು ಕಲಿತುಕೊಂಡಂತಾಗುತ್ತದೆ, ಕಾಗೆ ಪುಷ್ಪಪರಾಗವನ್ನು ಬಳಿದುಕೊಂಡಂತಾಗುತ್ತದೆ. ರಸಿಕನಾದ ಬಡವನೂ ಭೋಗಿಯಾಗಿರುವನು. ಇದಕ್ಕೆ ಸಾಧಕವಾದದ್ದು ಪ್ರಕೃತಿ. ಪ್ರಕೃತಿ ಸೌಂದರ್ಯದ ಮಧ್ಯದಲ್ಲಿ ಹುಟ್ಟಿದವನು ರಸಿಕನಾಗಬಲ್ಲನು. ಕನ್ನಡದ ನಾಡು ಪ್ರಕೃತಿ ವೈಭವದ ಬೀಡು, ರಸಿಕತೆಯ ತವರೂರು. ಆದುದರಿಂದ ರಸಿಕತೆ ಕನ್ನಡ ಕಾವ್ಯಗಳಲ್ಲಿ ಅಡಿಗಡಿಗೆ ಚಿಮ್ಮುತ್ತಿದೆ. ಕನ್ನಡಿಗರ ರಸಿಕತೆ ಎಲ್ಲೆಲ್ಲಿ ಕಂಡುಬಂದಿದೆಯೋ

ಅದೆಲ್ಲವನ್ನು ಕನ್ನಡದ ಕವಿಗಳು ರಸವತ್ತಾಗಿ ತಮ್ಮ ಕಾವ್ಯಗಳಲ್ಲಿ ಪ್ರತಿಬಿಂಬಿಸಿದ್ದಾರೆ. ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಪ್ರತಿಬಿಂಬಿತವಾಗಿರುವ ರಸಿಕತೆಯನ್ನೇ ಇಲ್ಲಿ ಸಂಗ್ರಹವಾಗಿ ನಿರೂಪಿಸಲು ಪ್ರಯತ್ನಿಸಿದೆ.

ಕವಿಗಳು ಕನ್ನಡನಾಡಿನ ಪ್ರಕೃತಿ ಸೌಂದರ್ಯವನ್ನೇ ರಸಿಕತೆಯ ಪೀಠಿಕೆಯನ್ನಾಗಿಟ್ಟುಕೊಂಡಿದ್ದಾರೆ. ರಸಿಕಜೀವನಕ್ಕೆ ಸಾಧಕವಾದ ಸಕಲ ಸಾಮಗ್ರಿಯೂ ಇಲ್ಲಿ ಇಂಬುಗೊಂಡಿದೆ. ಜಲಜಲನೆ ಹರಿಯುತ್ತಿರುವ ನದಿಗಳು, ಕಾಲುವೆಗಳು, ನೆಯ್ದಿಲೆಗಳ ಕೊಳಗಳು, ಭ್ರಮರಗಳು, ಕೆಯ್ವೊಲಗಳು ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ. ತನಿಗಬ್ಬು ಮಿಡಿಮೊಡನೆಯೇ ರಸ ಬಿಡುವುದು, ಬಿರಿದ ಒಂದು ಮುಗುಳ ಕಂಪಿನಿಂದೆಯೇ ತುಂಬಿಗಳು ಮೊಗಗಿಡುವುವು, ಒಂದು ಹಣ್ಣಿನ ರಸವನ್ನು ಕುಡಿದು ಗಿಳಿಗಳಿಗೆ ಅಜೀರ್ಣವಾಗುತ್ತವೆ (ಜೀರ್ಣಶಕ್ತಿಯಿಲ್ಲದುದರಿಂದಲ್ಲ, ಹಣ್ಣು ಅಷ್ಟು ರಸಭರಿತವಾಗಿರುವುದರಿಂದ), ಯಾವ ನಂದನವನವನ್ನು ನೋಡಿದರೂ ಅಲ್ಲಿ ಒಳ್ಳೆ ಸೊಗಸಾಗಿ ಬೆಳೆದ ಫಲಭರಿತವಾದ ಮಾಮರಗಳೇ, ಅವುಗಳನ್ನಪ್ಪಿ ಹರಡಿದ ಬಳ್ಳಿಗಳೇ, ಅರಳಿ ಸುವಾಸನೆಯನ್ನು ಬೀರುವ ಜಾತಿ ಸಂಪಗೆಯೇ, ಕುಕಿಲುವ ಕೋಗಿಲೆಗಳೇ, ಹಾಡುವ ತುಂಬಿಗಳೇ, ಲಲ್ಲೆವಾತುಗಳಾಡುತ್ತ ವಿಹರಿಸುವ ನಲ್ಲನಲ್ಲೆಯರೇ ! ಹೀಗೆ, ನೆಯ್ದಿಲರಿಂದಲೂ, ಪೂತಕೊಳಗಳಿಂದಲೂ, ಕೆರೆಗಳಿಂದಲೂ, ಕಾಲ್ ಊರ್ಗಳಿಂದಲೂ, ಕೆಯ್ಗ (ಹೊಲಗ) ಳಿಂದಲೂ ಚೆಲುವಾದುದು ಕನ್ನಡನಾಡು. ಗಂಧಶಾಲಿ ವನಗಳಾದರೊ 'ತೂಗುತೆ, ತೊನೆಯುತೆ, ಬಳ್ಕುತೆ, ಬಾಗುತೆ, ಕಂಪಿಡುತೆ, ಕನಕರುಚಿತಾಳುತ್ತಂ ರಾಗಿಸುತೆ, ರಂಜಿಸುತೆ' ಸೊಂಪಾಗಿವೆ. ಹೂವೇ ಆಗಲಿ ಹಣ್ಣೇ ಆಗಲಿ ಬಾಡವು, ಬೀಯವು. ಆ ಹೊಲಗದ್ದೆಗಳಲ್ಲಿ "ಅಗೆವೊಯ್ವ, ಕಳೆಗೀಳ್ವ, ಬೆವೆಯ ಬಿರ್ಚುವ, ನೀರ ಬಗೆಯರಿದು ಊಡುವ, ಸಸಿಯ ತೆಗೆವ, ನೆಡುವ, ನಗೆನೊಗವ' ಪಾಮರಿಯರೆ. ಇವರಾದರೂ ಅಸಂಸ್ಕೃತರಾಗಿ ಕಾಡು ಬದುಕನ್ನು ಬಾಳುವವರಲ್ಲ. ಅವರ ತೋರದುರುಬು, ತೊಂಡೆ ಬಾಯ್ದೆರೆ, ಮುಗುಳ್ನಗೆ, ಮೇರೆಯರಿತು ಆಡುವ ಮೆಲ್ವಾತು, ಓರೆನೋಗದ ಜಾಣ್ಮೆ—ಒಂದೊಂದರಿಂದಲೂ ರಸಿಕತೆ ಹೊರಹೊಮ್ಮುತ್ತಿದೆ. ದಾರಿದಾರಿಗಳಲ್ಲಿ ನೆಲಸಿದ 'ಕುಳಿರ್ವನೆರಸಿದರವಟ್ಟಿಗೆಗಳು'. ಅಲ್ಲಿ 'ನೀರೆರೆವ ಕಾಮಿನಿಯರು', ರಸಿಕರಾದ ಪಥಿಕರು, ಅವರ ಬಳಲಿಕೆಯನ್ನು ಕಳೆಯಲು ಸುಳಿವ ತಂಗಾಳಿ. ಇದೆಲ್ಲವನ್ನು ಕವಿಗಳು "ಸಂಸಾರ ಸಾರ ಸರ್ವಸ್ವ ಫಲಂ" ಎಂದು ಕರೆದರು. ಇದು ಕವಿಗಳ ಬರಿಯ ಕಾಲ್ಪನಿಕ ಪ್ರಪಂಚದ ವರ್ಣನೆಯಲ್ಲ. ನಮ್ಮ ಕಣ್ಣಿಗೆ ಕಾಣುವ, ಸತ್ಯವಾದ ಪ್ರಪಂಚದ ಯಥಾರ್ಥವಾದ ವರ್ಣನೆ. ನಮ್ಮ ಅನುಭವದಲ್ಲಿರುವ ಕರ್ನಾಟಕದ ವರ್ಣನೆ. ಇಲ್ಲಿ ಹುಟ್ಟಿದ ಮಾನವನ ಬುದ್ಧಿ ಪ್ರಕೃತಿಯ ಮಡಿಲಲ್ಲಿ ಬೆಳೆಯಿತು, ಸಕಲ ರಸಿಕತೆಯ ಸಾರವನ್ನು ಹೀರಿ ವಿಕಾಸಹೊಂದಿತು.

ಪ್ರಪಂಚದ ನಿತ್ಯಜೀವನದ ಬಳಕೆಯಲ್ಲಿರುವ ಬಗೆಬಗೆಯ ಪದಾರ್ಥಗಳಿಗೆ ಹೆಸರಿಡುವುದರಲ್ಲಿಯೂ ಕನ್ನಡಿಗರ ರಸಿಕತೆ ಅಭಿವ್ಯಕ್ತವಾಗಿದೆ. ಊರುಗಳು, ಹೂಗಳು, ಪಕ್ಷಿಗಳು ಇವುಗಳ ಹೆಸರುಗಳು ಸರಸವಾಗಿವೆ. ಈ ಸಂದರ್ಭದಲ್ಲಿ ಊರುಗಳ ಹೆಸರುಗಳನ್ನು ಕುರಿತು 'ಶ್ರೀನಿವಾಸ'ರು ಬರೆದಿರುವ ಕವನಗಳ

ಜ್ಞಾಪಕವಾಗುತ್ತದೆ. ಊರುಗಳಿಗೆ ಹೆಸರಿಡುವ ಕನ್ನಡಿಗರ ರಸಿಕತೆಯು ಸವಿಯನ್ನು ಆ ಕವನಗಳನ್ನೋದಿಯೇ ಆಸ್ವಾದಿಸಬೇಕು. ಒಂದು ಊರಿಗೆ ಆ ಹೆಸರು ಅರ್ಥವತ್ತಾಗಿ ಸರಿಹೋಗಬೇಕು, ಅಥವಾ ಅದರಲ್ಲಿ ಯಾವುದಾದರೊಂದು ಲಕ್ಷಣವು ಎದ್ದು ಕಾಣಬೇಕು, ಅಥವಾ ಸನ್ನಿವೇಶ ಸಂದರ್ಭಗಳ ಔಚಿತ್ಯವಿರಬೇಕು. ಊರುಗಳಿಗೆ ಹೆಸರಿಡಬೇಕಾದಾಗ ನಮ್ಮವರು ಕೆಲವು ಲಕ್ಷಣಗಳನ್ನು ನಿಶ್ಚಯಮಾಡಿಕೊಂಡಿದ್ದರೆಂದು ಕಂಡುಬರುತ್ತದೆ. ಕೆಲವು ಊರುಗಳ ಹೆಸರುಗಳು ಪೌರಾಣಿಕ ಕಥೆಗಳಿಗೆ ಸಂಬಂಧಿಸಿದುವುಗಳಾಗಿವೆ. ಇಂಥ ಊರುಗಳ ಹೆಸರು ಕಿವಿಯಲ್ಲಿ ಬಿದ್ದೊಡನೆಯೇ ಜನರಲ್ಲಿ ಆ ಪುರಾಣಗಳ ವಿಷಯವಾದ ಅವರ ಆದರ ಗೌರವಗಳು ಜಾಗ್ರತವಾಗುತ್ತವೆ. ಉದಾಹರಣೆ: ಬಂದಳಿಕೆ, ಲೇಪಾಕ್ಷಿ, ಮೈಸೂರು, ರಾಮತಾಳು, ಇತ್ಯಾದಿ. ರಾಜರು ಊರುಗಳನ್ನು ನಿರ್ಮಿಸಿ ತಮ್ಮ ಹೆಸರಿನಿಂದ ಕರೆಯುತ್ತಿದ್ದರು: ವಿಕ್ರಮಪುರ, ಬಿಜ್ಜಳಬೀಡು, ಇತ್ಯಾದಿ. ದೇವಾಲಯಗಳನ್ನು ಸ್ಥಾಪಿಸಿ ದೇವತೆಯ ಹೆಸರನ್ನೇ ಊರಿಗಿಡುವುದೂ ಒಂದು ಸಂಪ್ರದಾಯವಾಗಿತ್ತು: ಕೇಶವಪುರ, ಸೋಮನಾಥಪುರ, ದೇವಿಪುರ, ಇತ್ಯಾದಿ. ಯಾವುದಾದರೊಂದು ವಿಶಿಷ್ಟವಾದ ಗುರುವಿನಿಂದಲೂ ಊರಿಗೆ ಹೆಸರು ಬರುತ್ತಿತ್ತು. ಉದಾಹರಣೆ: ಕಲ್ಲೂರು, ತಾವರೆಗೆರೆ, ಕೆಂಬಾವಿ—ಇಂಥ ಊರುಗಳೇ ಹೆಚ್ಚು. ಕೆಲವು ಊರುಗಳಿಗೆ ಲಕ್ಷಣವಿರುದ್ಧವಾದ ಹೆಸರುಗಳಿರುವುದುಂಟು. ನೀರಿಲ್ಲದಿದ್ದರೂ ಅದು ಗಂಗಾಪುರವಾಗಲಿ, ಜಲವಾಡಿಯಾಗಲಿ ಆಗಬಹುದು. ಹೆಸರಿಡುವ ಕುಶಲತೆಯನ್ನು ನೋಡಿ. ಸಂಸ್ಕೃತದಲ್ಲಿ ಇಂಗಡಲಿದೆ, ಮೊಸರುಗಡಲಿದೆ, ಜೇನೆಯ್ಗಡಲಿದೆ. ಬೆಣ್ಣೆಯ ಕಡಲಿದೆಯೇ? ಅದು ನಮ್ಮ ನಾಡಿನಲ್ಲಿದೆ. ಅದೇ ಈಗಿನ ಬೆಣ್ಣೆತೊರೆ.* ಭಾವವು ಚೆನ್ನಾಗಿ ವ್ಯಕ್ತವಾಗುವ ಹಾಗೆ ಒಂದೇ ಶಬ್ದದಲ್ಲಿ ವೈವಿಧ್ಯವನ್ನು ಕಲ್ಪಿಸುವುದೂ ರಸಿಕತೆಯ ಲಕ್ಷಣವಾಗಿದೆ. ಬಿಸಿಲಿನಲ್ಲಿ ಎಷ್ಟು ಬಣ್ಣವಿರಬಹುದು. ಎಳವಿಸಿಲ್, ಕಡುವಿಸಿಲ್, ಕೆಂಬಿಸಿಲ್, ತಂಬಿಸಿಲ್, ಪೂಬಿಸಿಲ್, ಪೊಂಬಿಸಿಲ್, ಪೊಸಬಿಸಿಲ್. ಒಂದೊಂದು ಶಬ್ದವೂ ಚಿತ್ರವನ್ನು ಕಣ್ಣೆದಿರು ತರುತ್ತದೆ. ಕಿರುನಗೆ, ಪೆರ್ನಗೆ, ಮುಗುಳ್ನಗೆ, ಮೆಲ್ನಗೆ, ನಸುನಗೆ ಮೊದಲಾದ ನಗೆಯ ಪ್ರಭೇದಗಳನ್ನರಿತಿದ್ದರು ನಮ್ಮ ರಸಿಕ ಕವಿಗಳು. ನಮ್ಮ ನಾಡಿನಲ್ಲಿ ನಾನಾ ವಿಧವ ವೃಕ್ಷಗಳಿವೆ. ಇತರ ದೇಶಗಳಲ್ಲಿಯೂ ಉಂಟು. ಆದರೆ ನಮ್ಮಲ್ಲಿಯ 'ಇಮ್ಮಾವಿನ' ವೈಭವವೇ ಬೇರೆ. ಪಂಪನಿಂದಾರಂಭಿಸಿ ಮತ್ತಿನ ಕವಿಗಳೆಲ್ಲರೂ ಇದಕ್ಕೆ ಮೋಹಗೊಂಡಿದ್ದಾರೆ. ರಸಿಕನ ಸರಸ ದೃಷ್ಟಿ ಇಮ್ಮಾವನ್ನು ಬಗೆಬಗೆಯಾಗಿ ಕಂಡಿದೆ. ಅನುಭವಿಕರಾದ ಕನ್ನಡನಾಡಿನ ರಸಿಕರು ಕನ್ನಡ ಕಾವ್ಯಗಳನ್ನೋದಿ ಇದನ್ನರಿಯಬೇಕು. ಪಂಪನಿಗೆ ಇಮ್ಮಾವು ಕಣ್ಣಿಗೆ ಬಿದ್ದಾಗ ಅವನ ಮುಖದಿಂದ ಹೊರಬಿದ್ದ ಮಾತುಗಳಿವು:

> ತಳಿರೊಳ್ ನೀನೆ ಬೆಡಂಗನೈ, ನನೆಗಳೊಳೆ ನೀಂ ನೀಜನ್ನೈ, ಪುಷ್ಪ ಸಂಕುಳದೊಳ್ ನೀನೆ ವಿಳಾಸಿಯೈ, ಮಿಡಿಗಳೊಳ್ ನೀಂ ಚೆಲ್ವನೈ, ಪಣ್ತ ಪಣ್ಗಳಿನೋವೋ!

* ಗುಲ್ಬರ್ಗ ಜಿಲ್ಲೆಯಲ್ಲಿ ಹರಿಯುವ ಒಂದು ನದಿ.

ಇಲ್ಲಿಗೆ ಕವಿಯ ಮಾತು ಮುಗಿಯಿತು. ಹೆಚ್ಚಿಗೆ ಹೇಳುವುದಕ್ಕೆ ಮಾತು ಸಾಲದೆ

ಪೆಱತೇನೋ ನೀನೆ ಭುವನಕ್ಕಾರಾಧ್ಯನೈ, ಭೃಂಗಕೋ
ಕಿಳಕೀರಪ್ರಿಯ ಚೂತರಾಜ ತರುಗಳ್ ನಿನ್ನಂತೆ ಚೆನ್ನಂಗಳೇ

ಎಂದು ಇಮ್ಮಾವಿಗೆ ಪಟ್ಟವನ್ನು ಕಟ್ಟಿಬಿಟ್ಟನು. ಒಬ್ಬ ರಸಿಕನು ಚಿಗುರಿದ, ಮುಗುಳ್ತ, ಪಣ್ತ ಇಮ್ಮಾವನ್ನು ಅಪ್ಪಿಕೊಳ್ಳುತ್ತಾನೆ. ಇದು ರಸಿಕತೆಯ ಪರಮಾವಧಿ. ಪ್ರಕೃತ್ಯುಪಾಸನೆಯ ಚರಮಾವಸ್ಥೆ.

ಹೀಗೆ ಚೇತೋಹಾರಿಯಾದ ಗಂಧಶಾಲಿ ವನಗಳಲ್ಲಿ, ಕೆಯ್ವೊಲಗಳಲ್ಲಿ, ಗದ್ದೆಗಳಲ್ಲಿ, ಕೊಳಗಳಲ್ಲಿ, ಬಣ್ಣಬಣ್ಣದ ಹಕ್ಕಿಗಳು ಸ್ವೇಚ್ಛೆಯಿಂದ ಹಾಡುತ್ತ ಹಾರಾಡುತ್ತಲಿವೆ ಕನ್ನಡನಾಡಿನಲ್ಲಿ. ಈ ಪಕ್ಕಿಗಳ ಹೆಸರಿನಲ್ಲಿಯೇ ಒಂದು ಸೊಬಗಿದೆ, ಚಿತ್ತಾಕರ್ಷಕವಾದ ರಸಿಕತೆಯಿದೆ.

ನಡೆವಕ್ಕಿ, ನುಡಿವಕ್ಕಿ, ಪೊಳೆವಕ್ಕಿ, ಪೊಣರ್ವಕ್ಕಿ
ಪಡಿಯುರವಕ್ಕಿ, ಕೇಳಿಸುವಾ
ಗೆಡೆವಕ್ಕಿ, ಗರಿಗಣ್ವಕ್ಕಿಗಳಾ ನೆಲ
ದೆಡೆಯ ಬನದೊಳಿರುತಿಹವು.

ಎಲ್ಲಾ ಕನ್ನಡ ಪದಗಳೇ, ಮುದ್ದಾದ ಕನ್ನಡ ಪದಗಳು. ಪಕ್ಷಿಗಳ ಗುಣ ಸ್ವಭಾವಗಳನ್ನರಿತು ಹೆಸರಿಡುವ ಕುಶಲತೆಯನ್ನು ಕನ್ನಡಿಗರಿಂದ ಕಲಿಯಬೇಕು. ಗಿಳಿ 'ಪಂಡಿತವಕ್ಕಿ', ಅಷ್ಟೇ ಅಲ್ಲ ಅದು 'ಕನ್ನಡವಕ್ಕಿ' ಯೂ ಹೌದು. ಉತ್ತರ ಹಿಂದುಸ್ಥಾನದ ಉರ್ದು ಪಂಡಿತರೊಬ್ಬರು "ಕನ್ನಡನಾಡಿನ ಗಿಳಿ ನಮ್ಮತ್ತ ಬಹಳ ಪ್ರಸಿದ್ಧವಾಗಿದೆ" ಎಂದು ಹೇಳಿದುದರ ಔಚಿತ್ಯವನ್ನೀಗ ಮನವರಿಕೆ ಮಾಡಿಕೊಳ್ಳ ಬೇಕು. ಬರಿ ಕೋಗಿಲೆಯೆಂದರೆ ಸಾಲದು, ಅದು ಎಲ್ಲ ಪಕ್ಷಿಗಳಂತೆ ಒಂದು ಹೆಸರಾಯಿತು ಅಷ್ಟೆ. ಅದನ್ನೆ 'ಪಡಿಯುರವಕ್ಕಿ' ಎಂದು ಕರೆದಲ್ಲಿ ಸ್ವಾರಸ್ಯ. ಅದು ವನಗಳಲ್ಲಿ ಪಡಿಯುರನ ಕೆಲಸಮಾಡುತ್ತ ಪುಗಲ್ ಪುಗಲ್ ಎಂದು ಹೆದರಿ ಸುತ್ತಿರಬೇಕು. ಅದನ್ನು ಲೆಕ್ಕಿಸದೆ ವನಪ್ರವೇಶಮಾಡುವ ವಿರಹಿಗಳು ತಿರುಗಿ ಪಾರಾಗಿ ಬರುವುದೆಂತು? ಎಷ್ಟೋ ಮಾತುಗಳ ಜೊತೆಗೆ ಈ ಮಾತುಗಳೂ ನಮ್ಮ ಈಗಿನ ನುಡಿಯಿಂದ ಕಣ್ಮಾಯವಾಗಿವೆ. ಮನುಷ್ಯರಲ್ಲಿಯೇ ಪಾಂಡಿತ್ಯವಿಲ್ಲದಿರು ವಾಗ, ಪಕ್ಷಿಗಳಲ್ಲಿರುವುದೆಂತು? ಪಾಂಡಿತ್ಯವಿಲ್ಲದಿರುವಾಗ ಆ ಪದಪ್ರಯೋಗವೇ ನಿಷ್ಪ್ರಯೋಜನ, ಅದಕ್ಕಾಗಿಯೇ ಅವುಗಳು ನಮ್ಮ ಕೈಬಿಟ್ಟುದು.

ಹೂಗಳು ಮನ್ಮಥನಿಗೆ ಪಂಚಬಾಣಗಳಂತೆ ಇರಬಹುದು. ನಮ್ಮವರಿಗೆ ಮಾತ್ರ ಅವು ಪಂಚಪ್ರಾಣ. ಅವುಗಳನ್ನು ಹೆಂಗಸರು, ಗಂಡಸರು ಕೂಡ ಅಲಂಕಾರವಾಗಿ ಧರಿಸುತ್ತಿದ್ದರು. ಬಗೆಬಗೆಯ ಪೂದೊಡಿಗೆಗಳಿಂದ ಕನ್ನಡಗಿತಿ ಯರು 'ಪಸದನ' ಮಾಡಿಕೊಳ್ಳುತ್ತಿದ್ದರು. ಬನದ ತಳಿರ್, ಕಳಿಕೆ, ಮುಗುಳ್, ನನೆ, ಬಿರಿಮುಗುಳ್, ಅಲರಗೊಂಚಲ್— ಇವೆಲ್ಲವೂ ಕೋಮಲೆಯರ ಪೂಮುಡು ಗೆಗೆ ಉಪಯೋಗವಾಗುತ್ತಿದ್ದುವು. ಇವುಗಳಿಂದ ಎಷ್ಟೆಷ್ಟು ಸಿಂಗರಿಸಿಕೊಂಡರೂ ಅವರಿಗೆ ತೃಪ್ತಿಯಾಗದು. ಇದಕ್ಕನುಕೂಲವಾಗಿ ನಮ್ಮ ನಾಡಿನಲ್ಲಿ ಹೂಗಳಿ ಗೇನೂ ಕೊರತೆಯಿರಲಿಲ್ಲ. ಒಂದೊಂದು ಜಾತಿಯಲ್ಲಿ ಎಷ್ಟೋ ಬಗೆಯ ಹೂಗಳು.

ಮಲ್ಲಿಗೆಯೊಂದರಲ್ಲಿಯೇ ಹತ್ತಾರು ಪ್ರಭೇದಗಳು. ಅಡವಿಮಲ್ಲಿಗೆ, ಕಸ್ತೂರಿ ಮಲ್ಲಿಗೆ, ಕೆಸರ್ಮಲ್ಲಿಗೆ, ಕೋಲುಮಲ್ಲಿಗೆ, ಹಿರಿಮಲ್ಲಿಗೆ, ಜಾಜಿಮಲ್ಲಿಗೆ, ದುಂಡು ಮಲ್ಲಿಗೆ, ದೊಡ್ಡಕಾಡುಮಲ್ಲಿಗೆ, ಸಂಜೆಮಲ್ಲಿಗೆ, ಹಸುರುಮಲ್ಲಿಗೆ, ಸೂಜಿಮಲ್ಲಿಗೆ. ಹೀಗೆ ಇನ್ನೆಷ್ಟೋ! ಮಲ್ಲಿಗೆಯನ್ನು ಕವಿಗಳು 'ಎಳದುಂಬಿಯ ಸಂಗೀತ ಶಾಲೆ' ಯೆಂದೂ, 'ಅರಲ ಕುಲಕೆ ಜೈತಲೆಯ ಚೊಕ್ಕಮುತ್ತು' ಎಂದೂ ಕರೆದಿದ್ದಾರೆ. ನಿರ್ಗಂಧಕುಸುಮಗಳೆಷ್ಟಿದ್ದರೇನು? ಸಂಪಗೆಯ ಈ ವೈಭವವನ್ನು ನೋಡಿ:

ಪಡೆದೊಡೆ ಕಂಪಂ ಬಣ್ಣಂ
ಬಡೆಯವು, ಬಣ್ಣಮನೆ ಪಡೆದುವಪ್ಪೊಡೆ ಕಂಪಂ
ಪಡೆಯವುಬೀದಲರ್ಗಳ್, ಎರಡುಮ
ನೊಡವೆಳೆದೀ ಚಂಪಕಕ್ಕೆ ಪೂಗಳ್ ದೊರೆಯೇ!

ದವನವನ್ನು 'ಹಬ್ಬದ ಹೂ' ಎಂದೂ ಕರೆಯುತ್ತಿದ್ದರೆಂಬುದರ ಸ್ವಾರಸ್ಯವನ್ನರಿತು ರಸಿಕರು ಜ್ಞಾಪಕದಲ್ಲಿಡಬೇಕು.

ಸಕಲ ಸಂಪತ್ಸಮೃದ್ಧಿಯಿರುವ ಕನ್ನಡನಾಡಿನಲ್ಲಿ ಎಲ್ಲೆಲ್ಲಿ ನೋಡಿದರೂ ಜನರಿಂದ ನಿಬಿಡವಾದ ಪುರಗಳು ಕಂಗೊಳಿಸುತ್ತಿದ್ದುವು. ಈ ಜನರಾದರೋ ಧನರಹಿತರಾದವರಲ್ಲ. ಧನವಿದ್ದರೂ ಅದರ ಉಪಯೋಗವನ್ನರಿಯದವರಲ್ಲವರು. ಬಗೆಬಗೆಯ ರಸಿಕ ಶಿರೋಮಣಿಗಳು ಊರುಗಳಲ್ಲಿ ವಾಸಿಸುತ್ತಿದ್ದರು. ಗರುವರು, ಗೊಟ್ಟಿಗಾರರು, ಮೇಳಗಾರರು, ಅಕ್ಕರಿಗರು, ಕಬ್ಬಿಗರು, ನೆತ್ತಗಾರರು, ಚದುರಂಗಗಾರರು, ಚದುರ್ನುಡಿಗಾರರು, ಬೀಣೆಗಾರರು, ಮಾಲೆಗಾತಿಯರು, ಅವರನ್ನು ಬಳಸಿದ ರಸಿಕರು—ಇವರೆಲ್ಲ "ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗಳ್ಗಾಗರವಾದ ಮಾನಸರೆ ಮಾನಸರು." ಊರುಗಳಲ್ಲಿ ಬಗೆ ಬಗೆಯ 'ಪಸರ'ವೂ ಎಸೆದಿತ್ತು. ಸರವಂದಿಗರು, ಗಂದಿಗರು, ಗಾಣಿಗರು, ಸೇಣಿಗರು, ಆವಟಿಗರು, ತೋವಟಿಗರು, ದೀವಟಿಗರು, ಕಲ್ಲುಕುಟಿಗರು, ನರ್ತಕರು, ವರ್ತಕರು, ಜೇಡರು, ಲಾಡರು—ಎಲ್ಲರೂ ತಂತಮ್ಮ ಕಸಬುಗಳಲ್ಲಿ ಅನುರಕ್ತರು, ನಿಷ್ಣಾತರು. ಇವರ ಕುಶಲತೆ ಪರಾಕಾಷ್ಠದಶೆಯನ್ನು ಮುಟ್ಟಿದುದು. ಚಿನ್ನವರದರ ಜಾಣ್ಮೆಯನ್ನು ಈ ಪದ್ಯದಲ್ಲಿ ಕಾಣಬಹುದು:

ಒರೆಯಂ ನೋಡದೆ ನೋಡಿ ಚಿನ್ನಮನೆ ಕಂಡಾ ಬಣ್ಣಮುಂ ಬಣ್ಣದಂ
ತರಮುಂ ತಪ್ಪದೆ ಪೇೞ್ವ, ತೂಗದೆನಸುಂ ಕೈತೂಕದಿಂ ತೂಕದಂ
ತರಮುಂ ಘಟ್ಟಿಗೆ ಪೇೞ್ವ ಮುಚ್ಚ[1]ಮನೆ ಲೀಲಾಮಾತ್ರದಿಂ ಕಟ್ಟುವ
ಚ್ಚರಿಯಿಂದಾ ಪುರದಲ್ಲಿ ಚಿನ್ನವರದರ್ ತಾವಿಂತು ವಿಭ್ರಾಜಿಪರ್.

ಆ ಊರುಗಳಲ್ಲಿ ಹುಟ್ಟಿದ ಗಂಡರೆಲ್ಲರು ಅತಿ ವೀರರು, ಹೆಂಡಿರಾದರೊ ಸೌಭಾಗ್ಯದ ಸೀಮೆಗಳು. ಮಕ್ಕಳೆಲ್ಲರೂ ಪಂಡಿತರು, ಸೆಟ್ಟಿಗಳೆಲ್ಲರೂ ಕಡುಚಾಗಿಗಳು, ಬಡವರೆಲ್ಲರೂ ಭೋಗಿಗಳು, ಮೂಕರು ಕೂಡ ಚದುರರು, ಪದನರಿದು ನುಡಿಯಲೂ

---

1 ಅಕ್ಕಸಾಲೆಗೆ ಆಭರಣವನ್ನು ಮಾಡಲು ಚಿನ್ನವನ್ನು ಕೊಟ್ಟರೆ ಅವನು ಅದರಲ್ಲಿ ಒಂದು ಚೂರನ್ನು ಕತ್ತರಿಸಿ ಕೊಡುತ್ತಾನೆ, ಅದೇ ಮುಚ್ಚ. ಒಡವೆ ಸಿದ್ಧವಾದಮೇಲೆ ಮುಚ್ಚ ಒಡವೆಗಳೆರಡನ್ನೂ ಒರೆ ಹಚ್ಚಿ ನೋಡಬೇಕು. ಬಣ್ಣದಲ್ಲಿ ವ್ಯತ್ಯಾಸವಾದರೆ ಮೋಸವಾಗಿದೆಯೆಂದು ಗೊತ್ತಾಗಿಬಿಡುವುದು. ಕನ್ನಡನಾಡಿನ ಚಿನ್ನವರದರು ಲೀಲಾಮಾತ್ರವಾಗಿ ಮುಚ್ಚವನ್ನು ಪರಿಕಿಸುತ್ತಿದ್ದರೆಂಬುದೇ ಜಾಣ್ಮೆ.

ನುಡಿದುದನ್ನರಿತು ವಿಚಾರಿಸಲೂ ಸಮರ್ಥರು. ಇವರು ಹುಟ್ಟುಚದುರರು. ಓದದೆಯೇ ಕಾವ್ಯಪ್ರಯೋಗಪರಿಣತ ಮತಿಗಳು.

ಇದು ಪುರಾಣದ ಬರಿಯ ಬಣ್ಣನೆಯೇ ? ಅಲ್ಲ. ಒಂದುಕಾಲದಲ್ಲಿ ನಮ್ಮ ನಾಡಿನ ಪರಿಸ್ಥಿತಿ ಹೀಗಿದ್ದುದು ನಿಜ. ರಾಜ್ಯವನ್ನಾಳಿದ ದೊರೆಗಳು ಕನ್ನಡಿಗರು, ರಾಜ್ಯ ಕನ್ನಡಿಗರದು, ಮಾತು ಕನ್ನಡ. ಎಷ್ಟೋ ರಾಜ್ಯಗಳನ್ನು ಕಟ್ಟಿದರು, ಸಂಸ್ಕೃತಿಯನ್ನು ನೆಲೆಗೊಳಿಸಿದರು. ಕವಿಗಳನ್ನು ಪೋಷಿಸಿದರು, ಕಲೆಗಳನ್ನು ಉದ್ಧರಿಸಿದರು, ಕಾವ್ಯರಾಶಿ ಸೃಷ್ಟವಾಯಿತು. ಎಲ್ಲರೂ ಓದುವವರಾದರೆ ಗ್ರಂಥಗಳು ಬೇಡವೇ ? ಸಾವಿರಾರು ಕವಿಗಳು ಹುಟ್ಟಿದರು. ಸ್ವಾತಂತ್ರ್ಯ, ಸಂಪತ್ತು, ವಿದ್ಯೆ, ಕಲಾ ಕುಶಲತೆ ಎಲ್ಲವೂ ಏಕತ್ರ ಸಮ್ಮಿಲಿತವಾಗಿತ್ತು, ವಿಪುಲವಾಗಿ ನೆಲಸಿತ್ತು. ಯುಗಗಳಮೇಲೆ ಯುಗಗಳು ಉರುಳಿದುವು. ಕಾಲಪ್ರವಾಹವು ಮುಂದುವರಿಯಿತು. ಎಷ್ಟೋ ಕೊಚ್ಚಿಕೊಂಡು ಹೋಯಿತು. ಈಗ ಉಳಿದುದು ಹಿಂದಿನ ವೈಭವದ ಅವಶೇಷ. ಉಳಿದುದನ್ನಾದರೂ ಬೆಳಸಿಕೊಂಡು ಬರುವುದು ಈಗಿನವರ ಕರ್ತವ್ಯ.

ಊರವರು ತಮ್ಮ ಊರುಗಳನ್ನೂ ಮನೆಗಳನ್ನೂ ಸಜ್ಜಾಗಿಡುವಲ್ಲಿ ಒಳ್ಳೆಯ ರಸಿಕತೆಯನ್ನು ತೋರಿಸುತ್ತಿದ್ದರು. ಅವರ ರಸಿಕತೆ ಒಂದೇ ವಿಧವಾದ ಮನೆಗಳಲ್ಲಿರಲು ಮೆಚ್ಚದು, ಒಪ್ಪದು. ಹೊಸಹೊಸ ಮನೆಗಳನ್ನು ರಚಿಸಿದರು. ಮನೆ, ಕಿರುವನೆ, ನೆಲೆವನೆ, ಉಪ್ಪರಿಗೆಮನೆ, ಮಾಡ, ಕರುಮಾಡ (ಶಿಲ್ಪ ಚಿತ್ರದಿಂದ ಕಟ್ಟಿದ ಎತ್ತರದ ಮನೆ), ಇವುಗಳ ಜೊತೆಗೆ ಕನ್ನೆ ಮಾಡಗಳೂ ಉಂಟು. ಮನೆಗಳಿಗೆ ನಮ್ಮವರು ಹೆಚ್ಚು ಮಹತ್ತ್ವ ಕೊಟ್ಟಂತಿದೆ. ಆದುದರಿಂದಲೇ 'ಮನೆಕಟ್ಟಿ ನೋಡು ಮದುವೆ ಮಾಡಿ ನೋಡು' ಎಂಬ ಅನುಭವಯುಕ್ತವಾದ ಗಾದೆ ಹುಟ್ಟಿದುದು. ಈ ಮನೆಗಳಲ್ಲಿ ಎಷ್ಟೋ ಅಂತರ್ಭೇದಗಳಿದ್ದುವು. ಅವು ವಾಸಿಸುವ ಸೌಕರ್ಯದ ದೃಷ್ಟಿಯಿಂದ ನಿರ್ಮಿತವಾದುವುಗಳು. ಇವುಗಳಲ್ಲಿ ಕೋಪಾಗಾರವೂ (ಮುನಿಸಿನ ಮನೆ) ಒಂದಾಗಿತ್ತು. ೧೬ನೆಯ ಶತಮಾನದ ಕೊನೆಯಲ್ಲಿದ್ದ ರುದ್ರಭಟ್ಟನು "ಜಗನ್ನಾಥವಿಜಯ"ದಲ್ಲಿ ಕೋಪಾಗಾರದ ವಿವರವನ್ನು ಹೇಳಿದ್ದಾನೆ. ಈ ಮನೆ ಆವಶ್ಯಕವಾಗಿತ್ತೆಂದು ಕಂಡುಬರುತ್ತದೆ. ಸ್ತ್ರೀಯರಿಗೆ ಕೋಪಬಂದರೆ ಮನೆಗೆಲಸಗಳೆಲ್ಲವನ್ನು ಬಿಟ್ಟು ಕೋಪಾಗಾರಕ್ಕೆ ಹೋಗಿ ಮಲಗಿಕೊಂಡುಬಿಡುತ್ತಿದ್ದರು. ಆಗಿನ ಅವರ ಉಡುಪೇ ಬೇರೆ, ರೀತಿಯೇ ಬೇರೆ. ಗಂಡನು ತನ್ನ ಪ್ರಿಯೆಯನ್ನು ಸಂತಯಿಸಲು ಏನೇನು ಉಪಾಯಗಳನ್ನು ಮಾಡಬೇಕೋ ಅವೆಲ್ಲವುಗಳನ್ನೂ ಆ ಕೋಪಾಗಾರದಲ್ಲಿಯೇ ಒಬ್ಬರಿಗೂ ಕಾಣದಂತೆ ಮಾಡಬಹುದಾಗಿತ್ತು. ಕೋಪಾಗಾರವಿಲ್ಲದೆ ಮುನಿಸಿನಿಂದ ಪತ್ನಿಯು ಮನೆಯಲ್ಲಿ ಸಿಕ್ಕಿದೆಡೆಯಲ್ಲಿ ಮಲಗಿಬಿಟ್ಟರೆ, ಮನೆಯಲ್ಲಿರುವವರಿಗೆ ತೊಂದರೆ, ಪತಿಯ ಗತಿಯೋ ದೇವರೇ ಗತಿ. ಅಂತೂ ನಮ್ಮವರು ಕೋಪಾಗಾರದ ಆವಶ್ಯಕತೆಯನ್ನರಿತಿದ್ದರೆಂದು ಕಂಡುಬರುತ್ತದೆ. ಮನೆಯಲ್ಲಿ ಕುಳಿತುಕೊಳ್ಳುವುದಕ್ಕೆ 'ಪಾಸು'ಗಳೂ ಇರುತ್ತಿದ್ದುವು. 'ಪಾಸು' ಎಂದರೆ ಬರಿಯ ಹಾಸುವುದಕ್ಕೆ ಅನುಕೂಲವಾದ ವಸ್ತುವೇ ಅಲ್ಲ. ಇವುಗಳ ಜೊತೆಗೆ ಸಂಸ್ಕೃತದ ವೇತ್ರಾಸನ ಮುಂತಾದುವುಗಳನ್ನೂ ಮಣೆಗಳನ್ನೂ ಸೇರಿಸಿಕೊಳ್ಳಬಹುದು. ಅತಿಥಿ ಅಭ್ಯಾಗತರುಗಳಿಗೆ

'ಪಾಸಿತ್ತು' ಕುಳ್ಳಿರಿಸುವುದು ಸಾಮಾನ್ಯವಾದ ಶಿಷ್ಟ ಸಂಪ್ರದಾಯವಾಗಿತ್ತು. ಹೀಗೆ ಜೀವನಾನುಕೂಲ್ಯಕ್ಕೆ ಬೇಕಾದ ಎಲ್ಲ ವಿಧದ ಸೌಕರ್ಯಗಳು ಮನೆಯಲ್ಲಿ ಅಣಿಯಾಗಿರುತ್ತಿದ್ದುವು. ಸಾಮಾನ್ಯವಾಗಿ ಎಲ್ಲ ದಿನಗಳಲ್ಲೂ, ಹೆಚ್ಚಾಗಿ ಹಬ್ಬ ಹುಣ್ಣಿವೆ ಮುಂತಾದ ದಿನಗಳಲ್ಲೂ, ಮನೆಗಳು ಕಸ್ತೂರಿ, ಕುಂಕುಮ, ಪನ್ನೀರು ಗಳ ಸಾರಣೆ, ಕಾರಣೆ, ಚಳೆಯಗಳಿಂದೊಪ್ಪುತ್ತಿದ್ದುವು. ಚಿತ್ರನೈಪುಣ್ಯದಿಂದಲೂ, ರೇಖಾವಿನ್ಯಾಸದಿಂದಲೂ ಕೂಡಿದ ರಂಗವಲ್ಲಿಗಳನ್ನು[1] ಬಗೆಬಗೆಯಾಗಿಟ್ಟು ಪೂಜಲ್ಲಿ ಗಳನ್ನು ಬಿಟ್ಟು ಮನೆಗಳನ್ನು ಸಿಂಗರಿಸುತ್ತಿದ್ದರು. ಶ್ರೀಮಂತರು ಪಚ್ಚೆಯ, ಹಾರದ, ಮಕರದ, ತೋರಣಗಳನ್ನೂ, ಸಾಮಾನ್ಯರು ಪಸ್ಟಳಿರ ತೋರಣಗ ಳನ್ನೂ ಕಟ್ಟುತ್ತಿದ್ದರು. ಕೇರಿಕೇರಿಗಳ ಉದ್ದಕ್ಕೂ ಕಟ್ಟಿದ ಗುಡಿಗಳೂ, ಪಳವಿಗೆ ಗಳೂ ಮೇಲ್ಗಡೆಯಲ್ಲಿ ಹಾರಾಡುತ್ತಿದ್ದುವು. ಕಂಬಗಳಿಗೆ "ಸುಯ್ಯಾಣದ ಚಿನ್ನದ ಪಟೆಯ ಸಕಳ ಬಟ್ಟೆ"ಗಳನ್ನು[2] ಸುತ್ತಿರುತ್ತಿದ್ದುದರಿಂದ ಅವು ಮನೋ ಹರವಾಗಿರುತ್ತಿದ್ದುವು. ಸುಗಂಧದ್ರವ್ಯಗಳ ಪರಿಮಳ ಭಾರದಿಂದ ಬಿರುಗಾಳಿಯೂ ಕುಸಿದುಹೋಗುತ್ತಿತ್ತಂತೆ. ಭವನಭಿತ್ತಿಗಳು 'ಚೈತನ್ಯಮಯ ಚಿತ್ರಾವಳಿಯ ಬೆಸುಗೆಗಳಲೆಸೆ'ಯುತ್ತಿದ್ದುವು. ಎಲೋರ ಅಜಂತೆಗಳ ಗುಹಾಂತರ್ಗತ ಭಿತ್ತಿ ಚಿತ್ರಗಳನ್ನು ನೋಡಿದರೆ ಈ ಮಾತಿನಲ್ಲಿ ಕವಿಯ ಅತಿಶಯೋಕ್ತಿಯಾಗಲೀ, ಅಮಾನುಷವಾದ ಕಲ್ಪನೆಯಾಗಲೀ ಇಲ್ಲವೆಂಬುದರ ಕಲ್ಪನೆಯಾಗುವುದು. ಕನ್ನಡಿಗರ ರಸಿಕತೆಯ ಪ್ರತಿಬಿಂಬವು ಇಲ್ಲಿ ಒಡೆಮೂಡಿದೆ. ಕುಮಾರವ್ಯಾಸನು ದ್ರೌಪದಿಯ ಸ್ವಯಂವರ ಸಭೆಯ ವರ್ಣನೆಯಲ್ಲಿ "ನವಯಂತ್ರಗಳ ಪುತ್ತಳಿ ಗಳೇ ನೀಡುವುವು ಬೇಡಿದವರಿಗೆ ವಸ್ತುಗಳ" ಎಂದು ಹೇಳಿದ್ದಾನೆ. ಇದು ವಿಜಯನಗರದ ರಾಜರ ಕಾಲದ ಒಡ್ಡೋಲಗದ ವೈಭವಕ್ಕೆ ನಿದರ್ಶನವಾಗಿದೆ.

ಹಿಂದಿನ ಕಾಲದ ಸ್ತ್ರೀಯರು ಅಲಂಕಾರವನ್ನು ಮೆಚ್ಚಿದವರು. ಅವರು ಹುಟ್ಟುಸೊಬಗೆಯರೂ ಹೌದು. ನಾಡಿನಲ್ಲಿ ಬೇಕಾದಷ್ಟು ಧನವಿತ್ತು. ಅದನ್ನು ಅನುಭವಿಸಬೇಕೆಂಬ ಬಯಕೆಯೂ ಇತ್ತು. ಅವರು ವಿಧವಿಧದ ಆಭರಣಗಳನ್ನು ಧರಿಸಿ ತಮ್ಮ ರಸಿಕತೆಯನ್ನು ಮೆರೆಯುತ್ತಿದ್ದರು. ಘಮಘಮಿಸುತ್ತಿರುವ ಪನ್ನೀರನ್ನು ಮಿಂದು, ಬಿಳಿಯ ಸವುರವನುಟ್ಟು, ಮಿಸುನಿರವುಕೆಯ ತೊಟ್ಟು, ಬಾವನ್ನಪಣ್ಪಿಟ್ಟು ಕೊಳ್ಳುವರು. ನಡುವಿನಲ್ಲಿ ಒಡ್ಯಾಣವು ಥಳಥಳಿಸುತ್ತಿತ್ತು. ಕಾಲಲ್ಲಿ ಅಂದುಗೆ ಅಂದವಾಗಿತ್ತು, ಕೊರಳಲ್ಲಿ ನಾನಾ ವಿಧದ ಹಾರಗಳೂ ಪದಕವೂ ತೊಳತೊಳ ಗುತ್ತಿದ್ದುವು. ಬಾಹುಪೂರವೂ, ಕಡಗಗಳೂ ಮಿರುಗುತ್ತಿದ್ದುವು. ಬೆರಳುಗಳು

---

[1] ರಂಗವಲ್ಲಿಯನ್ನಿಡುವುದರಲ್ಲಿ ಕನ್ನಡಿಗರಿಗೆ ಅಗಾಧವಾದ ನೈಪುಣ್ಯವಿದ್ದಿತೆಂದು ಕಂಡುಬರುತ್ತದೆ. ಜಗನ್ನಾಥದಾಸರು 'ರಂಗವಲಿ' ದಾಸರೆಂದು ಪ್ರಸಿದ್ಧರಾಗಿದ್ದರು. ಅಪರೋಕ್ಷ ಜ್ಞಾನಿಗಳಾದುದರಿಂದ ಅವರು ಭಗವಂತನ ಲೀಲೆಗಳನ್ನು ತಾವು ಕಂಡಹಾಗೆ ಬಗೆಬಗೆಯಾಗಿ ರಂಗವಲಿಯಿಂದ ಚಿತ್ರಿಸಿ ನೋಟಕ ರನ್ನು ಆನಂದಗೊಳಿಸುತ್ತಿದ್ದರು. ಅವರ ಇಷ್ಟದೇವತೆ ಅವರ ರಂಗವಲಿಗೆ ಒಲಿದಿದ್ದನಂತೆ. ಅವರಿಗೆ 'ರಂಗನೊಲಿದ' ದಾಸರೆಂಬ ಪ್ರತೀತಿಯೂ ಇದೆ. ಸ್ತ್ರೀಯರು ಮಿಂದು ಮಡಿಯುಟ್ಟು ಮನೆ ಯಲ್ಲಿಯೋ ದೇವಾಲಯದಲ್ಲಿಯೋ ರಂಗವಲಿಯನ್ನಿಡುತ್ತಿರುವುದನ್ನು ಈಗಲೂ ಕೆಲವೆಡೆಗಳಲ್ಲಿ ನೋಡ ಬಹುದು. ಈಗ ಈ ಕಲೆ ಹಳೆಯದೆಂದು ಕಡೆಗಣಿಸಲಾಗಿದೆ.

[2] ಈಗಿನಕಾಲದಲ್ಲಿ ಜರತಾರಿಯ ಕುಸುರುಗೆಲಸದ ರೇಷ್ಮೆಯ ವಸ್ತ್ರಗಳೆಂದು ಹೇಳಬಹುದು.

ಉಂಗುರಗಳಿಂದಲಂಕೃತವಾಗಿರುತ್ತಿದ್ದುವು. ಕಿವಿಯಲ್ಲಿನ ರತ್ನದ ಓಲೆಗಳೂ ಮೂಗಿನ ನತ್ತೂ ಮುಖಕ್ಕೆ ಲಾವಣ್ಯವನ್ನು ತರುತ್ತಿದ್ದುವು. ತಲೆವಿಕ್ಕಿ, ಸೋರ್ ಮುಡಿಯಲ್ಲಿ ಪೂಮಾಲೆಯನ್ನು ಮುಡಿದುಕೊಂಡು ಮುದ್ದಾಗಿ ತೋರುತ್ತಿದ್ದರು. ಕಣ್ಣಿಗೆ ಕಾಡಿಗೆಯನ್ನೂ, ತೆಳ್ಗದಪಿಗೆ ಮಕರಿಕೆಯನ್ನೂ ಅಂದಗೊಳಿಸಿ ನೊಸಲಲ್ಲಿ ಕತ್ತುರಿಬೊಟ್ಟಿಟ್ಟುಕೊಂಡರೆಂದರೆ ಅಲಂಕಾರವು ಪೂರ್ಣಗೊಳ್ಳುತ್ತಿತ್ತು. ಇದೇ ಮುತ್ತೈದೆಯರ 'ಮಂಗಳಪಸವನ'. ಸಹಜಸುಂದರಿಯರಾದ ಆ ಯುವತಿಯರಿಗೆ ಈ ತೊಡವಿನಿಂದ ಕಳೆಯೇರುತ್ತಿತ್ತೋ? ಪಂಪನು ದ್ರೌಪದಿಯನ್ನು (ಭಾರತದ ದ್ರೌಪದಿಯಲ್ಲ, ಪಂಪನ ದೃಷ್ಟಿಯಲ್ಲಿ ಆಕೆ ಕನ್ನಡಗಿತಿಯು) ಶೃಂಗರಿಸುವಷ್ಟು ಶೃಂಗರಿಸಿ ಆಮೇಲೆ "ಈ ತೊಡವೇವುದೊ ರೂಪೆ ಸಾಲದೆ" ಎಂದು ತೃಪ್ತಿಹೊಂದುತ್ತಾನೆ. ರೂಪೇ ಸರಿ ಎಂದು ಅವನು ಸಿಂಗರಿಸದೆ ಬಿಡಲಿಲ್ಲ. ಮುತ್ತೈದೆಗೆ ಸೌಭಾಗ್ಯವೂ ಬೇಕು, ಭಾಗ್ಯವೂ ಬೇಕು. ಮೇಲೆಹೇಳಿದ ಆಭರಣಗಳಲ್ಲದೆ ನಮ್ಮ ನಾಡಿನ ಸ್ತ್ರೀಯರಿಗೆ ಇನ್ನೂ ಹೆಚ್ಚಿನ ಆಭರಣಗಳು ಗೊತ್ತಿವೆ. ಮುಂದಲೆ ಹೂ, ಕಾಲುಂಗರ, ಪಿಲ್ಲೆ, ಕಾಲುಸುತ್ತು, ಮೂಗುತಿ, ಮೂಗುಬೊಟ್ಟು, ಚಳತುಂಬು, ಪಿಂಪಿಣಿ, ನಾಗರ, ಗೊಂಡೆ, ರಾಗಟೆ, ಬುಲಾಕು, ಪೈಜಣ, ಪಾಗಾಡ, ಗೆಜ್ಜೆ, ಬೆಂಡೋಲೆ, ಒಂಕೆ, ಕೇದಗೆ, ಗೋಪು, ಸರಿಗೆ, ತೋಡೆ, ಬಳೆ, ರುಳಿ, ಚಿಂತಾಕು, ಬುಗುಡಿ, ನಾಗಮುರುಗಿ, ಕತ್ತೆರಿಬಾವುಲಿ, ಹಾಲೆ, ನಾನು, ಅಡ್ಡಿಕೆ, ಗುಂಡಿನಡ್ಡಿಕೆ, ಗೂಬಿಬಾವುಲಿ, ತಳಕು, ತುಂಬುಗಾಯಿ, ಗೊಲಸು, ಚವುರಿ—ಹೀಗೆ ಪಟ್ಟಿಯನ್ನು ಇನ್ನೂ ಬೆಳಸಬಹುದು. ಈ ಹೆಸರುಗಳನ್ನು ಈಗಿನ ಕನ್ನಡಿತಿಯರಿಗೆ ಹೇಳಿದರೆ ಹೇಳಿದವರನ್ನು ಮಂಕೆಂದು ತೆಗಳಿಬಿಡುತ್ತಾರೇನೋ? ನಿರಾಭರಣಸುಂದರಿಯರಾದ ಈಗಿನವರು ರಸಿಕರಲ್ಲವೆಂದಲ್ಲ. ಇದು ಇಷ್ಟು ಆಭರಣಗಳನ್ನು ಧರಿಸಿಕೊಳ್ಳುವ ಕಾಲವಲ್ಲ. ಧನವಿಲ್ಲ, ಚಿನ್ನವೆಲ್ಲ ಕಣ್ಮರೆಯಾಯಿತು. ಅದಕ್ಕೆ ತಕ್ಕ ಹಾಗೆ ಅಪೇಕ್ಷೆಯೂ ಮಾಯವಾಯಿತು. ಬಡತನ ಬರುವುದಕ್ಕೂ ಬಯಕೆ ಬಯಲಾಗುವುದಕ್ಕೂ ಸರಿಹೋಯಿತು.

ಸ್ತ್ರೀಯರಂತೆ ಪುರುಷರೂ ಅಲಂಕಾರಪ್ರಿಯರಾಗಿದ್ದರು. ಬರಿಯ ಅಲಂಕಾರದಲ್ಲಿ ರಸಿಕತೆಯಿಲ್ಲವೆಂದು ಮೊದಲೇ ಹೇಳಿದೆ. ರಸಿಕತೆಯೂ ಅಲಂಕಾರವೂ ಸೇರಿದರೆ ಬಾವನ್ನಕ್ಕೆ ತಮ್ಮಣ್ಣೆ ಬೆರೆತಂತಾಗುತ್ತದೆ. ನಮ್ಮ ಪೂರ್ವಿಕರು ರಸಿಕತೆಯನ್ನು ಹೆಚ್ಚಿಸುವುದಕ್ಕಾಗಿ ಆಭರಣಗಳನ್ನು ಧರಿಸುತ್ತಿದ್ದರು. ಆಗಿನ ಕಾಲದ ರಸಿಕರಾದ ಗಂಡುಸರು ತಲೆಗೂದಲನ್ನು ಅಂದವಾಗಿ ಬೆಳೆಸುತ್ತಿದ್ದರು. ಸ್ತ್ರೀಯರಿಂದ ಕಮ್ಮೆಣ್ಣೆಯನ್ನು ನೆತ್ತಿಗೆ ಒತ್ತಿಸಿಕೊಳ್ಳುತ್ತಿದ್ದರು, ಹೂಮುಡಿಸಿಕೊಳ್ಳುತ್ತಿದ್ದರು. ಇದು ಈಗಿನ ಕಾಲದಲ್ಲಿ ಸ್ವಲ್ಪ ನಗೆಯುಂಟುಮಾಡುವ ಹಾಗಿದೆ. ಈಗಿನ ಕಾಲದಲ್ಲಿಯೂ ತಲೆಗೂದಲಿನ ರಸಿಕತೆಯಿದೆ. ಆದರೆ ಅದು ಹಿಂದುಮುಂದಾಗಿದೆ. ಮೊದಲವರಿಗೆ ಹಿಂದಲೆಯಲ್ಲಿ ಕೂದಲಿರುತ್ತಿದ್ದರೆ ಈಗಿನವರಿಗೆ ಮುಂದಲೆಯಲ್ಲಿದೆ. ಹಿಂದಲೆ ಕೂದಲು ಹೂವನ್ನು ಮುಡಿಯಲು ಅನುಕೂಲವಾಗಿರುತ್ತದೆ, ಮುಂದಲೆ ಕೂದಲು ಹಾಗಿಲ್ಲ. ಈಗಿನವರು ವಿಧವಿಧವಾಗಿ ಬಾಚಿಕೊಂಡು ಅಲಂಕಾರಮಾಡಿಕೊಳ್ಳುತ್ತಾರೆ. ಜೈತಲೆಯೂ ಇರುತ್ತದೆ. ಅದು

ಎಡಚೈತಲೆಯಾಗಬಹುದು, ಇಲ್ಲವೆ ಸಮಚೈತಲೆಯಾಗಬಹುದು. ಚೈತಲೆ ಇಲ್ಲದೆಯೂ ಇರಬಹುದು. ಈಗಿನ ಕಾಲದ ರಸಿಕತೆ ಇದು, ಆಗಿನ ಕಾಲದ ರಸಿಕತೆ ಅದು. ಮೊದಲವರು ಕಿವಿ, ಕೊರಳು, ತೋಳು, ಮುಂಗೈ, ಬೆರಳು, ಉಡಿ (ಸೊಂಟ), ಕಾಲು—ಇವುಗಳಲ್ಲಿ ಅನುಕ್ರಮವಾಗಿ ಓಲೆ, ಮುತ್ತಿನ ಸರಗಳು, ತೋಳು ಬಂದಿ, ಕಡಗ, ಉಂಗುರ, ಉಡಿದಾರ, ಪೆಂಡೆಯಗಳನ್ನು ಧರಿಸುತ್ತಿದ್ದರು. ಚೀನವಸನಗಳನ್ನುಟ್ಟು, ಭೂಷಣಗಳನ್ನು ಧರಿಸಿ, ಚಂದನದಣ್ಪುಗೈದು ಶೋಭಿಸುತ್ತಿದ್ದರು. ಇವರ ರಸಿಕತೆಯನ್ನು ಹೆಚ್ಚುಮಾಡುವಲ್ಲಿ ಮೀಸೆಯೂ ಒಂದು ಸಾಧನವಾಗಿತ್ತು. ಮೀಸೆ ಕ್ರಮಕ್ರಮವಾಗಿ ಹ್ರಾಸವಾಗುತ್ತಿರುವ ಈ ಕಾಲದಲ್ಲಿ 'ಮೀಸೆವೊತ್ತಿ'ರುವುದು ಅನಾಗರಿಕತೆಯೆಂಬ ಭಾವನೆಯಲ್ಲಿ ಬೆಳೆಯುವುದೋ ಎಂಬ ಸಂದೇಹಕ್ಕಾಸ್ಪದವಾಗಿದೆ. ಹೆಂಗುಸರಿಗೆ ಕುಡಿನೋಟವಾದರೆ ಗಂಡುಸರಿಗೆ ಕುಡಿಮೀಸೆ. ಕನ್ನಡ ಕವಿಗಳು ಕನ್ನಡಿಗರ ಪೌರುಷ, ರಸಿಕತೆಗಳನ್ನು ವ್ಯಕ್ತಮಾಡಬೇಕಾದ ಸಂದರ್ಭಗಳಲ್ಲೆಲ್ಲ ಮೀಸೆಯ ವರ್ಣನೆಯನ್ನು ತರುತ್ತಾರೆ. ಆ ಭಾಗದಲ್ಲಿ ಅದೆಷ್ಟು ಉಚಿತವಾಗಿಯೂ, ಪರಿಣಾಮಕಾರಿಯೂ ಆಗಿರುತ್ತದೆಂಬುದು ಕನ್ನಡದ ಉತ್ತಮ ಕಾವ್ಯಗಳನ್ನೋದಿದವರಿಗೆ ಗೊತ್ತಿದೆ. ಪಂಪ, ರನ್ನ ಮೊದಲಾದ ಉದ್ದಾಮ ಕವಿಗಳಾರೂ ಈ ಬಗೆಯ ವರ್ಣನೆಯನ್ನು ಆಭಾಸಕರವೆಂದು ಭಾವಿಸಿರಲಿಲ್ಲ. ದ್ರೋಣನು ಬಾಲ್ಯ ಸ್ನೇಹವನ್ನು ಜ್ಞಾಪಿಸಿ ಸಹಾಯಾರ್ಥಿಯಾಗಿ ದ್ರುಪದನಲ್ಲಿಗೆ ಬಂದಾಗ ಸಭಾಮಧ್ಯದಲ್ಲಿ ದ್ರುಪದನು ದ್ರೋಣನನ್ನು ಅಪರಿಚಿತನೆಂದು ದೂಷಿಸಿದನಷ್ಟೆ! ಆಗ ದ್ರೋಣನ ಮುಖದಿಂದ ಹೊರಬಿದ್ದ **ಮಾತುಗಳಿವು:**

..............................ಸಭಾ
ವಳಯದೊಳೆನ್ನನೇಟಿಸಿದ ನಿನ್ನನನಾಕುಳಮೆನ್ನ ಚಟ್ಟರಿಂ
ತಳವೆಳಗಾಗೆ ಕಟ್ಟಿಸದೆ ಮಾಣ್ದೊಡೆ ಕೆಮ್ಮನೆ ಮೀಸೆವೊತ್ತೆನೇ!

ದ್ರೋಣನು ಬ್ರಾಹ್ಮಣನೇನೋ ಹೌದು. ಆದರೆ ಪಂಪಭಾರತದಲ್ಲಿ ಅವನು ಕನ್ನಡದ ಕಲಿ; ಮೀಸೆವೊತ್ತ ಗಂಡುಗಲಿ. ಅರ್ಜುನನ ಯೌವನೋದಯ ಕಾಲದಲ್ಲಿ ಪಂಪನು 'ಪೊಸ ಜವ್ವನದ ಮುಂಬಣ್ಣದಂತೆ ಕರ್ಪಂ ಕೈಕೊಂಡು ಕತ್ತುರಿಯಲ್ ಬರೆದಂತಪ್ಪ ವಿಕ್ರಾಂತತುಂಗನ ಮೀಸೆಗಳ್' ಎಂದು ಮುಂತಾಗಿ ಸರಸವಾಗಿ ಬಣ್ಣಿಸಿದ್ದಾನೆ. ಮುದ್ದಣನು ಸಹಸ್ರಕಂಠ ರಾವಣನು ಯುದ್ಧಕ್ಕೆ ಹೊರಡುವಾಗ ಸಿಂಗರಿಸಿಕೊಂಡುದನ್ನು ವರ್ಣಿಸುವ ಭಾಗವಿದು: "ಇಂತು ಬಂತಿದಲೆಯುಂ ಚಲ್ಲಣಮುನಿಟ್ಟು, ದಟ್ಟಿಯುಂ ಬಿಗಿದು ಸೂಸಕಮುಂ ತೊಟ್ಟು, ಸಾಲೊಳ್ ಮಕುಟಗಳನಳವಡಿಸಿ, ಕೈಪಿಡಿಯುಂ ಕೊಂಡು, ಕತ್ತುರಿಯ ಬೊಟ್ಟಿಟ್ಟು, ಮೀಸೆಯುಂ ತಿರ್ದಿ ಪುರಿಗೆಯ್ದು, ಸೊಬಗಿಂಗೆ ನಸು ನಕ್ಕು, ನಜುದಂಬುಲಮುಂ ಸವಿದು"—ಇವನು ಕನ್ನಡದ ರಸಿಕನಾದ ರಾವಣನು. ಆ ರಾಕ್ಷಸರಾವಣನು ಹೇಗಿದ್ದನೆಂಬುದು ನಮಗೆ ಬೇಕಿಲ್ಲ. ಇಲ್ಲಿ ಕನ್ನಡಿಗನಾದ ಯೋಧನ ವೀರಶ್ರೀಯನ್ನೂ ಸೊಬಗನ್ನೂ ನೋಡಬೇಕಷ್ಟೆ.

ರಸಿಕತೆ ಬರಿಯ ರಾಜಕುಮಾರರ, ಶ್ರೀಮಂತರ ಸೊತ್ತಲ್ಲ; ಅವರಿಗಾಗಿಯೇ ಮೀಸಲಾದುದಲ್ಲ. ನಮ್ಮ ನಾಡಿನ ಬೇಡನ ರಸಿಕತೆಯನ್ನು ನೋಡಿ:

ಸುಲಿಪಲ್, ಕೊಂಕಿರ್ದಪುರ್ಬು, ಅಂಬುದನಿಭತನು, ಕೆಂಗಣ್ಗಳ್, ಒಳ್ಮೀಸೆ ಜೆಲ್ವಾ
ಗೆ, ಲಸನ್ಮತ್ತೇಭಮುಕ್ತಾಭರಣಮೆಸೆಯೆ, ಕೂರ್ಪಾಸಮಂ ತೊಟ್ಟು, ಕಟ್ಟಿ
ತ್ತೆ ಲತಾಸಂದೋಹದಿಂ ಕೇಶಮನಮರೆ, ಧನುರ್ಬಾಣಮಂ ತಾಳ್ದು, ಕೆರ್ಪಂ
ನಲದಿಂ ಮೆಟ್ಟುತ್ತೆ, ಕೂರ್ನಾಯ್ಪೆರಸು ಶಬರರೊಂದಾಗಿ ಬಂದಂ ಪುಳಿಂದಂ[1]

ಇವನು ನಿಜವಾಗಿಯೂ ಕನ್ನಡನಾಡಿನ ಬೇಡನು. ಇಲ್ಲಿ ಬೇಡನ ರಸಿಕತೆಯನ್ನು ವ್ಯಕ್ತಗೊಳಿಸುವ ಮಾತುಗಳನ್ನು ಗಮನಿಸಿ.

ಕನ್ನಡಿಗರ ರಸಿಕತೆಯನ್ನು ಅವರ ಆಹಾರದಿಂದಲೂ ತಿಳಿದುಕೊಳ್ಳಬಹುದಾಗಿದೆ. ಕನ್ನಡಿಗರು ಭೋಜನಪ್ರಿಯರು. ಎಂದರೆ ಕಾರ್ಯತತ್ಪರರಲ್ಲವೆಂಬ ಭಾವನೆಯಲ್ಲ. ಕೆಲಸಮಾಡುವಾಗ ಕೆಲಸ, ಊಟದ ಹೊತ್ತಿನಲ್ಲಿ ಊಟ. ಕನ್ನಡ ನಾಡಿನಲ್ಲಿ ಆಹಾರಕ್ಕಾಗಿ ಬೆಳೆಯುವ ಪದಾರ್ಥವಾವುದು? ಇಲ್ಲಿ ಹಾಲು, ಮೊಸರು, ಬೆಣ್ಣೆ, ತುಪ್ಪಕ್ಕೆ ಕೊರತೆಯಿದೆಯೇ? ಕರಡಿಕಲ್[2] ಶಾಸನದ ಈ ಪದ್ಯವನ್ನು ನೋಡಿ:

ಸಕಲ ಶ್ರೀಲೀಲೆಯಿಂ ಕಣ್ಗೆಸೆವೆಡೆದೋಱೆ ನಾಡೊಳ್ ಸುಧಾವಾಸಧಾನ್ಯ
ಪ್ರಕರಕ್ಷೇತ್ರದ್ರುಮಜ್ರಾತದಿನಖಿಳಜನೈಶ್ವರ್ಯ ಸೌಂದರ್ಯಗೋ
ನಿಕರಕ್ಷೀರಾಜ್ಯದಿಂ ಭೋರೆನೆ ಪರಿವ ನದೀಜಳದಿಂ ಭೂಜಗದ್ಬುಂ
ಭುಕ ಮಾಗಿರ್ದೊರ್ಗಳಿಂದಗ್ಗಳಿಸಿ ಕರಡಿಕಲ್ನಾಡು ಸಂತಂ ಬಸಂತಂ

ಇದು ಬರಿಯ ಕರಡಿಕಲ್ನಾಡಿನ ಸಂಪತ್ತಿನ ವರ್ಣನೆಯಲ್ಲ, ಇಡೀಯ ಕನ್ನಡ ನಾಡಿನ ಸಂಪತ್ತಿನ ವರ್ಣನೆ. ಕನ್ನಡಿಗರು ಭೋಜನಪ್ರಿಯರಾಗುವುದಕ್ಕೆ ಅವರ ನಾಡಿನ ಸಂಪತ್ತೇ ಕಾರಣ. ಇವರಿಗೆ ವಿಧವಿಧವಾದ ಭೋಜನದ ಪದಾರ್ಥಗಳನ್ನು ಮಾಡುವ ವಿಧಾನವೂ ಗೊತ್ತಿತ್ತು, ಅವುಗಳನ್ನು ಭಿನ್ನರುಚಿಮಾಡಿ ಭುಜಿಸುವ ವಿಧಾನವೂ ಗೊತ್ತಿತ್ತು. ಓಗರ, ತೊಗೆ, ಮೇಲೋಗರ, ತುಪ್ಪ, ಪಳಿದ್ಯ, ಕಲಸುವೋಗರ, ಇಡ್ಡಲಿಗೆ, ದೋಸೆ, ಸಕ್ಕರೆ ಬಟ್ಟವಾಲು, ಪಾಯಸ, ಕರಜಿಗೆಯ ಕಾಯಿ, ಎಣ್ಣೆಯೂರಿಗೆ, ಸಕ್ಕರೆಬುರುಡೆ, ಪುರಿವಿಳಂಗಾಯಿ, ಹಾಲಗಾರಿಗೆ, ಸವಡುರೊಟ್ಟಿ — ಮುಂತಾದುವುಗಳ ಜೊತೆಗೆ ಕೆಳಗಿನ ಪದ್ಯದಲ್ಲಿರುವ ಪದಾರ್ಥಗಳನ್ನೂ ಅವುಗಳ ವಿಶೇಷಣಗಳಲ್ಲಡಕವಾದ ರಸಿಕತೆಯನ್ನೂ ಗಮನಿಸಬೇಕು:

ಕರಜಿಗೆಯ ಕಾಯಿ ಅತಿರಸಮುದ್ದಿನೊಡೆಯು ಹಿಮ
ಕರನಂತೆ ರಾಜಿಸುವ ಇಡ್ಡಲಿಗೆ ಎಳ್ಳುಂಡೆ
ತರಣಿಮಂಡಲದಂತೆಯೆಸೆವ ಒಬ್ಬಟ್ಟು ಗಾರಗೆಯ ಚಕ್ಕುಲಿ ಸೇವಗೆ
ಹೊರೆಯ ಪೇಣಿಯು ಮನೋಹರದುಂಡೆ ಯರಗು ಸ
ಕ್ಕರೆ ಬುರುಡೆ ಹಾಲುಂಡಲಿಗೆಯು ಸ್ವಾದಿಸಲಮೃತ
ಸರಳಿನಿಂ ನಿರ್ಮಿಸಿದ ಲತೆಯಂತೆ ಜಿಲ್ಲಬಿಯ ಅಂಗಡಿಗಳೆಸೆದವು

'ಸ್ವಾದಿಸಲಮೃತ ಸರಳಿನಿಂ ನಿರ್ಮಿಸಿದ ಲತೆಯಂತೆ ಜಿಲ್ಲಬಿ' ಎಂಬ ಮಾತಿನಲ್ಲಿರುವ ಸ್ವಾರಸ್ಯವನ್ನು ಗಮನಿಸಬೇಕು. 'ತೊಟ್ಟಿನೊಳೆ ಪಸುರಡಗದಿರ್ದ ಉಪ್ಪಿನಕಾಯಿ' ಮಧ್ಯೇ ಮಧ್ಯೇ ಭಿನ್ನರುಚಿಗಾಗಿ ಉಪಯೋಗವಾಗುತ್ತಿತ್ತು. ಹೂರಣ

---

1 ಶಬ್ದಗಳನ್ನು ಬಿಡಿಸಿ ಬರೆವಿದೆ.

2 ರಾಯಿಚೂರಿನಿಂದ ಪಶ್ಚಿಮಕ್ಕೆ ಸುಮಾರು ೫೭ ಮೈಲಿಗಳ ಅಂತರದಲ್ಲಿ ಒಂದು ಸಣ್ಣ ಹಳ್ಳಿ. ಇಲ್ಲಿ ೪, ೫ ಕನ್ನಡ ಶಾಸನಗಳಿವೆ. ಶಾಸನಗಳಲ್ಲಿ 'ಅನಾದಿ ಪಟ್ಟಣಂ, ಪಿರಿಯ ಕರಡಿಕಲ್' ಎಂದು ಹೇಳಿದೆ. ಬಹಳ ಪ್ರಸಿದ್ಧವಾದ ಸ್ಥಳವಾಗಿತ್ತೆಂದು ಕಂಡುಬರುತ್ತದೆ.

ಗಡುಬನ್ನು ಕನ್ನಡಿಗರು ಮರೆಯರು. ಹಾಲುಗಳಲ್ಲಿ ಎಷ್ಟು ವಿಧ? ಚಿಲುಪಾಲು, ತಂಬಾಲು, ಕೆನೆವೆರಸಿದ ಪಾಲು, ಸುಲಲಿತ ಬಟ್ಟಪಾಲುಗಳು. ಮತ್ತೆ ಕೊನೆಯಲ್ಲಿ, ಸಲಿಕಟ್ಟು, ಮೊಸರ್ಗಳು ಘಟ್ಟಿ ಮಜ್ಜಿಗೆಗಳು. ಪದಾರ್ಥಗಳ ರುಚಿಯನ್ನು ಸವಿದು ಮೆಚ್ಚಿಗೆಯನ್ನು ವ್ಯಕ್ತಪಡಿಸುವಲ್ಲಿಯೂ ರಸಿಕತೆಯುಂಟು:

ಪಾಯಸದ ಪರಿಗಳಂ ನೋಡಿ ಪಂಡಿತರೆ ಸವಿ
ಯಾಯಿತೇ ಯಾಯ್ತುಪಾಧ್ಯಾಯರೇ ಕರಜಿಗೆಯ
ಕಾಯ ಪೋಸೆಗಳ ಪಸನಂ ಪುರೋಹಿತರೆ ಚೆನ್ನಾಗಿ ಸವಿಸವಿದು ನೋಡಿ
ಈಯೆಣ್ಣೆಯೂರಿಗೆಯ ಮೃದುತರಕೆ ಸರಿಯುಂಟೆ
ಜೋಯಿಸರೆ ಕೇಳಿ ಸಕ್ಕರೆಬುರುಡೆಗಳ್ ನಮ್ಮ
ಬಾಯ ಬಜಗಂ ಬಿಡಿಸುತಿವೆ ದೀಕ್ಷಿತರೆ ಎಂದು ಕೊಂಡಾಡುತಿರ್ದರಾಗ.

ಹಿಮಾಂಬು ಪಾನಕವೂ (ಕೋಲ್ಡ್ ಡ್ರಿಂಕು) ಇತ್ತು. ಇದನ್ನು ತಯಾರಿಸುವ ವಿಧಾನವನ್ನು ಮಂಗರಸನು ಬಹು ಸ್ವಾರಸ್ಯವಾಗಿ ಹೇಳಿ "ಚದುರರಂತದಕೆ ಸಲೆ ಸೊಗಯಿಪ ಹಿಮಾಂಬುಪಾನಕವೆಂದು ಹೆಸರಿಡುವುದು" ಎಂದು ಸೂಚಿಸಿದ್ದಾನೆ.

ಕನ್ನಡಿಗರು ನೃತ್ಯ, ಸಂಗೀತ, ಚಿತ್ರ, ಶಿಲ್ಪ ಮುಂತಾದ ಕಲೆಗಳಲ್ಲಿ ನಿಪುಣರಾಗಿರುವುದಕ್ಕೆ ಕಾರಣಗಳಲ್ಲಿ ರಸಿಕತೆಯೂ ಒಂದಾಗಿದೆ ಎಂದು ಹೇಳಬೇಕು. ನಮ್ಮ ಕಾವ್ಯಗಳಲ್ಲಿ ಬರುವ ನೃತ್ಯ, ಸಂಗೀತ, ಚಿತ್ರಕಲೆಗಳ ವಿವರಗಳನ್ನವಲೋಕಿಸಿದರೆ ನಮ್ಮವರು ಈ ಕಲೆಗಳಲ್ಲಿ ನಿಷ್ಣಾತರಾಗಿದ್ದುದಲ್ಲದೆ ಗುಣಗ್ರಾಹಿಗಳಾದ ರಸಿಕರೂ ಆಗಿದ್ದರೆಂಬಂಶವು ತೋರದಿರದು. ಕೆಳಗಿನ ಪದ್ಯಗಳಲ್ಲಿ ನೃತ್ಯದ ಕುಶಲತೆ ರಸಿಕತೆಗಳೆರಡನ್ನೂ ಕಾಣಬಹುದಾಗಿದೆ:

ಕರತಳದೊಳಭಿನಯಮನಮ
ರ್ದಿರೆ, ಚರಣದೊಳತುಳತಾಳಮಂ, ನೇತ್ರದೆ ಭಾ
ಸುರ ರಸಮನಸಮಗಾನಮ
ನರರೆ ಶರೀರದೊಳೆ ಪಿಡಿದವಳ್ ನರ್ತಿಸಿದಳ್

ಜರಿವೆತ್ತೊಪ್ಪುವ ಮೃದುಪದ
ಗತಿಯುಂ, ರಸಮೊಸರ್ವ ಭಾವಮುಂ, ವೃತ್ತಿವಿಳಾ
ಸತೆಯುಂ ತಳ್ತಿರೆ ವಿಳಸ
ತ್ಕೃತಿಯಂ ಪೋಲ್ತುಬಳೆ ರಸಿಕರಂ ಮೆಚ್ಚಿಸಿದಳ್

ಸಂಗೀತದ ರಸಿಕತೆಗಾಗಿ ಈ ಒಂದು ಪದ್ಯದ ನಿದರ್ಶನವೆ ಸಾಕು:

ಪುದಿದು ಪಳಚ್ಚನಪ್ಪ ಬೆಳದಿಂಗಳೊಳಂಗಣದಲ್ಲಿ ತೀವಿ ಪಾ
ಸಿದ ನೆಲೆವಾಸಿನೊಳ್ ಮಲಗಿ ಮೆಲ್ಲನುರೋಜದೊಳಿಟ್ಟ ವೀಣೆಯಂ
ಬಿದಿರ್ದು ಮೃದುಸ್ವನಂ ನೆಗಳೆ ಕನ್ನಡ ಗೌಳವನೊಲ್ದು ಪಾಡಿದಳ್
ಸುದತಿ ಪದಂಗಳಿಂ ಪ್ರಮದದಿಂ ಕವಿರಾಜ ವಿಲಾಸನಾ

ಎಂತಹ ಸನ್ನಿವೇಶ! ಮಲಗಿರುವ ರೀತಿ ಹೇಗೆ! ವೀಣೆಯನ್ನಳವಡಿಸಿಕೊಂಡಿರುವ ಪರಿಯೆಂತು! ಎಂತಹ ಕೋಮಲವಾದ ಧ್ವನಿ! ಹಾಡು ಎಷ್ಟು

ಸೊಗಸು ! ಹಾಡಿನ ವಸ್ತು ಎಷ್ಟು ಮನಮೆಚ್ಚುವಂತಹುದು ! ಎಲ್ಲವೂ ರಸಮಯವಾಗಿದೆ.

ಕಾವ್ಯಗಳಲ್ಲಿ ವ್ಯಕ್ತವಾಗಿರುವ ಕನ್ನಡಿಗರ ರಸಿಕತೆಯನ್ನಿಲ್ಲಿ ದಿಗ್ದರ್ಶನವಾಗಿ ಹೇಳಿದೆ. ಕಾವ್ಯಕ್ಕೆ ಸಿಕ್ಕದೆಯಿರುವ ರಸಿಕತೆಯೆಷ್ಟೋ ಕನ್ನಡಿಗರಲ್ಲಿದೆ. ಅದು ಅವರಾಡುವ ಮಾತಿನಲ್ಲಿಯೂ, ಕನ್ನಡದ ಗಾದೆಗಳಲ್ಲಿಯೂ, ಅವರ ಜೀವನದ ವಿಧಾನದಲ್ಲಿಯೂ ಕಂಡುಬರುತ್ತದೆ. ಕಾಲಕ್ಕೆ ತಕ್ಕಹಾಗೆ ಹೊಸಹೊಸ ಅಭಿರುಚಿಗಳೂ, ಅನುಭವಗಳೂ ತಲೆದೋರುತ್ತವೆ. ಇತರ ಸಂಸ್ಕೃತಿಗಳ ಸಂಪರ್ಕದಿಂದಲೂ ಕನ್ನಡಿಗರ ರಸಿಕತೆಯಲ್ಲಿ ಹೊಸತನವುಂಟಾಗಿದೆ. ಅದನ್ನು ನಾವು ಹೊಸತೆಂದು ತೆಗಳಬೇಕಾಗಿಲ್ಲ. ಯಾವುದು ಅಂದವಾಗಿರುತ್ತದೆಯೋ ಅದು ಅಪ್ರಯತ್ನವಾಗಿ ನಮ್ಮ ಚಿತ್ತವನ್ನಾಕರ್ಷಿಸುತ್ತದೆ. ಅದಕ್ಕೆ ನಾವು ಸೋಲುತ್ತೇವೆ. ಸೋತು ಅದನ್ನು ನಮ್ಮದನ್ನಾಗಿ ಮಾಡಿಕೊಳ್ಳುತ್ತೇವೆ. ಅದು ಕಾಲಾನುಕ್ರಮದಲ್ಲಿ ನಮ್ಮ ಸಂಸ್ಕೃತಿಯ ಅಂಗವಾಗಿಬಿಡುತ್ತದೆ. ಅನ್ಯ ಸಂಸ್ಕೃತಿಯಲ್ಲಿ ಎದ್ದು ಕಾಣುವ ರಸಿಕತೆಯನ್ನು ಮೆಚ್ಚಿ ಅದನ್ನನುಕರಿಸುವುದೂ ಒಂದು ರಸಿಕತೆಯೆಂಬುದನ್ನು ಮರೆಯಬಾರದು. ಆದರೆ ತಮ್ಮಲ್ಲಿಯ ರಸಿಕತೆಗೆ ಉತ್ಪಾಟನೆಯಾಗಬಾರದಷ್ಟೆ.

ಕನ್ನಡಿಗರು ಊಟತಿಂಡಿ, ಉಡುಗೆತೊಡಿಗೆ, ಬೆಡಗುಬಿನ್ನಾಣ, ಆಟಪಾಟಗಳಲ್ಲಿಯೇ ಕಾಲವನ್ನು ಕಳೆಯುತ್ತ ಉಂಡೊರಗರಾಗಿದ್ದರೆಂದು ಯಾರೂ ಗ್ರಹಿಸಬಾರದು. ಇವೆಲ್ಲವುಗಳಲ್ಲಿ ಅವರು ಸರಳವಾದ ರಸಿಕತೆಯನ್ನು ಹೇಗೆ ವ್ಯಕ್ತಗೊಳಿಸುತ್ತಿದ್ದರೆಂಬುವನ್ನು ತಿಳಿದುಕೊಳ್ಳುವುದು ಮುಖ್ಯ ವಿಷಯ. ರಸಿಕತೆ ಬರಿಯ ವಿಲಾಸವಲ್ಲ. ಅದು ಹಿತವೂ ಮಿತವೂ ಆಗಿದ್ದರೆ ಜೀವನಪಥವನ್ನು ಸುಗಮವಾಗಿ ಮಾಡುತ್ತದೆ. ಜಟಿಲವಾದ ಸಂಸಾರದ ಕೋಟಲೆಗೆ ಸಿಕ್ಕಿ ನರಳುವಂಥ ಮನುಷ್ಯನಿಗೆ ರಸಿಕತೆ ಸ್ವಲ್ಪಮಟ್ಟಿಗಾದರೂ ನೆಮ್ಮದಿಯನ್ನೂ ಆಪ್ಯಾಯನವನ್ನೂ ಉಂಟುಮಾಡಬಲ್ಲುದು. ದುಃಖಗಳಿರುವೆಡೆಯಲ್ಲಿ ರಸಿಕತೆಗೆ ಆಸ್ಪದವಿಲ್ಲ. ಆದರೆ ರಸಿಕತೆ ಬಾಳಿನ ಕಿರುಕುಳವನ್ನು ತಗ್ಗಿಸಬಲ್ಲುದು. ಭಾಗ್ಯ ಬಡತನವೆರಡರಲ್ಲಿಯೂ ರಸಿಕತೆ ಮೇಲೆದ್ದು ಕಾಣಬಹುದು. ಕನ್ನಡದ ನಾಡು ಸುಖಸಂಪತ್ತುಗಳಿಗೆ ಆಗರವಾಗಿದ್ದುದರಿಂದ ಕನ್ನಡಿಗರಲ್ಲಿ ರಸಿಕತೆ ಹುಟ್ಟುಗುಣವಾಗಿ ಬಂದಿದೆ. ಇದು ಕನ್ನಡನಾಡಿನ ಯಾವ ಭಾಗದಲ್ಲಿಯೇ ಆಗಲಿ ಹುಟ್ಟುವವನ ಪುಣ್ಯ. ಇದನ್ನೇ ಕನ್ನಡಕ್ಕೊಡೆಯನಾದ ರಸಿಕ ಕವಿ ಪಂಪನು

> ಚಾಗದ ಭೋಗದಕ್ಕರದ ಗೇಯದ ಗೊಟ್ಟಿಯಲಂಪಿನಿಂಪುಗ
> ಳ್ಗಾಗರವಾದ ಮಾನಸರೆ ಮಾನಸರಂತವರಾಗಿ ಪುಟ್ಟಲೇ
> ನಾಗಿಯುಮೇನೊ ತೀರ್ದಪುದೆ ತೀರದೊಡಂ ಮಱಿದುಂಬಿಯಾಗಿ ಮೇಣ್
> ಕೋಗಿಲೆಯಾಗಿ ಪುಟ್ಟುವುದು ನಂದನದೊಳ್ ವನವಾಸಿದೇಶದೊಳ್

ಎಂದು ರಸಿಕನಾದ ಅರ್ಜುನನ ಮುಖದಿಂದ ಮನವಾರೆ ಬಣ್ಣಿಸಿದನು.

ಡಿ. ಕೆ. ಭೀಮಸೇನರಾವ್

# ಹಾಸ್ಯದ ರೀತಿ, ವಸ್ತು

ಹಾಸ್ಯಕ್ಕೆ ಅಧಿದೇವತೆ ಗಣಪತಿ. ಸಂಸ್ಕೃತ ರಸಾಲಂಕಾರ ಶಾಸ್ತ್ರ ತತ್ತ್ವಜ್ಞರು ಆತನ ಆಕಾರ ಗುಣಾತಿಶಯಗಳನ್ನು ಗ್ರಹಿಸಿಯೇ ಹಾಸ್ಯರಸಕ್ಕೆ ಆತನನ್ನು ಅಧಿದೇವತೆ ಮಾಡಿರಬೇಕಲ್ಲವೆ?[1] ಕಾವ್ಯದಲ್ಲಿಯೂ ಈ ಗುಣಗಳೇ ಪ್ರಧಾನವಾಗಿರಬೇಕೆಂದು ಅವರ ಮತವೆಂಬುದನ್ನು ನಾವು ಇದರಿಂದ ಊಹಿಸಬಹುದು.

ತನ್ನ ಅಥವಾ ಇತರರ ವೇಷ ಭಾಷೆ, ಆಕಾರ ವಿಕಾರ, ವಿರುದ್ಧಾಲಂಕಾರ, ಅಸ್ಪಷ್ಟ ಭಾಷಣ, ಕುಬ್ಜಾದಿಗಳ ದರ್ಶನ, ಶ್ರವಣ—ಇವುಗಳಿಂದ ಉಂಟಾದ ಮನೋವಿಕಾರಕ್ಕೆ ಹಾಸ್ಯವೆಂದು ಪ್ರಾಚೀನರ ಮತ. ಇದು ಶೃಂಗಾರದಿಂದ ಹುಟ್ಟಿದೆ ಎಂದು ಹೇಳಿರುವುದಲ್ಲದೆ, ಇದಕ್ಕೆ ಭಾವ, ವಿಭಾವ, ಅನುಭಾವ, ಸಂಚಾರಿ ಭಾವಗಳನ್ನು ವಿಂಗಡಿಸಿದ್ದಾರೆ. ಯಾವುದನ್ನು ನೋಡಿ ನಾವು ನಗುತ್ತೇವೋ ಅದು ಆಲಂಬನ, ನಗುವುದಕ್ಕೆ ಪ್ರೇರೇಪಣೆಯನ್ನು ಮಾಡುವವನು ಉದ್ದೀಪನ. ಬಾಷ್ಪ, ನಿದ್ರೆ, ಆಲಸ್ಯ—ಇವು ಅನುಭಾವ; ಅಪಸ್ಮಾರ, ಹುಚ್ಚಾಟ, ಹೇ! ಇತ್ಯಾದಿಗಳು ಸಂಚಾರಿಭಾವ.

ಕಣ್ಣುಗಳಿಂದಲೇ ನಗೆ ತೋರಿಸುವುದು, ಸ್ವಲ್ಪ ನಗುವುದು (ಮುಗುಳು ನಗೆ), ಉತ್ತಮ; ಮಧುರಸ್ವರದಿಂದ ನಗುವುದು, ತಲೆ ಮೈ ಕೈ ಅಲ್ಲಾಡಿಸುವುದು, ಮಧ್ಯಮ; ಕಣ್ಣುಗಳಲ್ಲಿ ನೀರು ತುಂಬುವುದು, ಕೈಕಾಲು ಹೊಡೆದುಕೊಂಡು ನಗುವುದು, ಅಧಮ. ಇವನ್ನು ವಿವರಿಸಿದ್ದಾರೆ.[2]

ವಾಗ್ಹಾಸ್ಯಂ, ರೂಪಹಾಸ್ಯಂ ಮತ್ತು ಕ್ರಿಯಾಹಾಸ್ಯಂ ಎಂಬ ಮೂರು ಭೇದಗಳನ್ನು ಶೃಂಗಾರ ರತ್ನಾಕರದಲ್ಲಿ ನೋಡಬಹುದು.[3]

ಆದರೆ ಈ ತೆರದ ಹಾಸ್ಯರಸದ ವಿವೇಚನೆಯಲ್ಲಿ ರಸವೊಂದೇ ಅಲ್ಲ, ವ್ಯಕ್ತಿವೈಪರೀತ್ಯವೂ ಕಂಡುಬರುತ್ತದೆ. ಬೇರೆ ಬೇರೆ ಜನರು ನಗುವ ರೀತಿಯನ್ನು ಬಣ್ಣಿಸಿದರೆ, ಅವು ನಗುವಿನ ರೀತಿಯನ್ನು, ಬೇರೆ ಬೇರೆ ವಿಧದ ನಗುವನ್ನು ಬಣ್ಣಿಸಿದಂತಾಯಿತೆ? ಸಂಸ್ಕೃತದ ರೀತಿಯೊಂದನ್ನೇ ಅನುಸರಿಸಿ, ಕನ್ನಡದಲ್ಲಿಯೂ ಅದೇ ರೀತಿಯಾಗಿ ವಿಮರ್ಶೆಯನ್ನು ಹೂಡಿದರೆ, ಅಲ್ಲಿನ ನ್ಯೂನತೆಗಳೆಲ್ಲವೂ ಇಲ್ಲಿಯೂ ಕಾಣಲೇಬೇಕಲ್ಲವೆ? ಎಷ್ಟು ವಿಧಗಳು ನಗುವಿನಲ್ಲಿ ಎಂದು ಕೇಳಿದರೆ, ಅದಕ್ಕೆ ಪ್ರತ್ಯುತ್ತರ— ಇಂತಹ ಜನರಿದ್ದರೆ ನಗುಬರುವುದು; ಈ ರೀತಿಯಾಗಿ ಜನರು ನಗುತ್ತಾರೆ— ಎಂದು ಹೇಳಿದಂತಾಯಿತು. ಹೇಗೆ ವಿಶೇಷಣಗಳನ್ನೇ ಹೇಳಿದರೆ

---

1 ಶಾರೀರಕ—ಏಕದಂತಾಯ ನಮಃ, ಸ್ಥೂಲಕಂಠಾಯ ನಮಃ, ಗಜವಕ್ತ್ರಾಯ ನಮಃ, ಶೂರ್ಪಕರ್ಣಾಯ ನಮಃ, ಲಂಬೋದರಾಯ ನಮಃ, ಭಿನ್ನದಂತಾಯ ನಮಃ, ಹ್ರಸ್ವಗ್ರೀವಾಯ ನಮಃ, ಕಪಿಲಾಯ ನಮಃ. ಮಾನಸಿಕ—ಪ್ರಾಜ್ಞಾಯ ನಮಃ, ವಾಕ್ಪತಯೇ ನಮಃ, ಕಾಂತಿಮತೇ ನಮಃ, ಜಿತಮನ್ಮಥಾಯ ನಮಃ, ಗಂಭೀರನಿನಾದಾಯ ನಮಃ, ವಿಕಟಾಯ ನಮಃ, ಮಂಗಳಪ್ರದಾಯ ನಮಃ, "ಅಣಿಮಾದಿ ಸಿದ್ಧಿದಾಯಕಂ", "ಲಂಬೋದರಶ್ಚವಿಕಟೋ ವಿಘ್ನರಾಜೋ ಗಣಾಧಿಪಃ".

2 ಪ್ರತಾಪರುದ್ರೀಯ, ರಸಪ್ರಕರಣ ೪, ಶ್ಲೋ. ೨.

3 ಕವಿಕಾಮನ ಶೃಂಗಾರ ರತ್ನಾಕರ, ೬೩, "ವಾಗ್ರೂಪಕ ಕ್ರಿಯಾಖ್ಯ ಪ್ರಪಂಚ ಸಂಚಿತ ವಿಧಿಯಿಂ".

ಅರ್ಥವು ತೊಡಕಾಗುವುದೋ ಹಾಗೆ ಪೂರ್ವಿಕರ ಹಾಸ್ಯವಿಭಾಗದಲ್ಲಿ ನಗುವಿನ ನಾನಾ ಭೇದಗಳು ತೊಡಕಾದಂತೆ ತೋರುತ್ತವೆ. ವಿಮರ್ಶೆಯು ಮುಂದುವರಿದ ಹಾಗೆಲ್ಲಾ, ವೈಯಕ್ತಿಕ ವಿಚಾರಗಳ ಆಧಾರದಮೇಲೆ ನಿಂತಿರುವ ಅಂಶಗಳು ಕಡಿಮೆಯಾಗಿ ಸವಿಷಯಕ (Objective)ವಾಗಬೇಕಲ್ಲವೆ ?

ಸವಿಷಯಕ (Objective) ದೃಷ್ಟಿಯಿಂದ ನೋಡಬೇಕಾದರೆ ಪಾಶ್ಚಿಮಾತ್ಯ ರೀತಿಯಲ್ಲಿ ನಗುವಿನ ವಿಭಾಗಗಳನ್ನು ತೆಗೆದುಕೊಳ್ಳೋಣ.

ಪದಪ್ರಧಾನ ಹಾಸ್ಯ (Pun) : ಪದಗಳ ವಿಭಾಗ ಸಂಕುಲಗಳಿಂದ, ಹೇಳುವ ರೀತಿಯಿಂದ, ಊಹಿಸದೇ ಇರುವ ಒಂದರ್ಥವನ್ನು ಸಮಯುಕ್ತಾನುಚಿತವಾಗಿ ಕಲ್ಪಿಸಿ ನಗುವನ್ನುಂಟುಮಾಡುವುದು.

ಮೆಣಸು, ಜೀರಿಗೆಯನ್ನು ಮೇಣ, ಸೂಜಿ, ರೀಗೆ ಮಾಡುವುದು. ಅಥವಾ ಒಂದೇ ಪದಕ್ಕೆ ಹಲವು ಅರ್ಥಗಳಿದ್ದು ಆ ಸಮಯಕ್ಕೆ ಅಪ್ರಕೃತವಾದ ಅರ್ಥವನ್ನು ತೆಗೆದುಕೊಳ್ಳುವುದು. ಊಟಕ್ಕೆ ಕೂತಾಗ 'ಸೈಂಧವ' ಎಂದರೆ, 'ಕುದುರೆ'ಯನ್ನು ತರುವುದು. ಇದು ಕ್ರಿಯಾರೂಪಕವಾಗಿಯೂ ಇರುವುದುಂಟು; ಮೃಚ್ಛಕಟಿಕದಲ್ಲಿ ಮೈತ್ರೇಯನು ತಲೆಕೆಳಗಾಗಿ ಹೇಳಿದಂತೆ.

ತರ್ಕಪ್ರಧಾನ ಹಾಸ್ಯ (Wit) : ಇದರಲ್ಲಿ ಅರ್ಥಪ್ರಧಾನವಾಗಿ ಅಪ್ರಕೃತ, ಅಸಾಧಾರಣ, ಅಭಿಪ್ರಾಯವನ್ನು ತಂದಿಟ್ಟು ಅದರ ಮೂಲಕ ನಗಿಸುವುದು. ಜ್ವರಬಂದ ಮುದುಕಿಯನ್ನು ನೀರಿನಲ್ಲಿ ಮುಳುಗಿಸಿ ತಣ್ಣಗೆ ಮಾಡಲು ಪ್ರಯತ್ನ ಪಟ್ಟಂತೆ (ನಗೆಗಡಲು).

ಅಪಹಾಸ್ಯ (Satire) : ಮೇಲಿನದರಲ್ಲಿರುವ ಎಲ್ಲಾ ಅಂಶಗಳೂ ಇದರಲ್ಲಿವೆ. ಜೊತೆಗೆ ವೈರತ್ವ, ಅತೃಪ್ತಿ, ಇವುಗಳಿಂದುಂಟಾದ ವ್ಯಂಗ್ಯವು ಪ್ರಧಾನವಾಗಿ ಅದರ ಮೂಲಕ ನಗೆಯನ್ನುಂಟುಮಾಡುವುದು. ಬೈಸಿಕೊಳ್ಳುತ್ತಿರುವವನಿಗೆ ಇದರಿಂದ ನೋವು. ಬೆಕ್ಕಿಗೆ ಚೆಲ್ಲಾಟ ಇಲಿಗೆ ಪ್ರಾಣಸಂಕಟ.

ಹಾಸ (Humour) : ತಿಳಿಯ ಹಾಸ್ಯ. ಇದರಿಂದ ಯಾರಿಗೂ ನೋವಾಗ ಬಾರದು. ಬೈಸಿಕೊಳ್ಳುವವನೂ ನಮ್ಮೊಡನೆ ನಗುವಂತಿದ್ದರೆ ಅದು ನಿಜವಾದ ಹಾಸ್ಯ. ಈ ಹಾಸವು ಸಂಸ್ಕೃತಿ ವಿಶೇಷದ ಸೂಚನೆ.

ಕಾಲದೇಶಗಳ ಅರಿವು, ಯಾವ ಸಾಹಿತ್ಯದ ಹಾಸ್ಯವನ್ನು ಚೆನ್ನಾಗಿ ತಿಳಿದು ಕೊಳ್ಳಬೇಕೆಂದು ಪ್ರಯತ್ನಪಡುತ್ತೇವೋ ಆ ಜನರ ಸಂಸ್ಕೃತಿಯ ಅರಿವು, ಇವು ಹಾಸ್ಯರಸಾಸ್ವಾದನೆಗೆ ಇರಬೇಕಾದ ಮುಖ್ಯ ಅಂಶಗಳು. ಓದುವವರಿಗೆ ಸುಲಭ ವಾಗಿ ಅರ್ಥವಾಗುವ ಶೈಲಿಯನ್ನುಪಯೋಗಿಸಬೇಕೆಂಬುದನ್ನು ಪ್ರಾಚೀನ ಅಲಂಕಾರಶಾಸ್ತ್ರಜ್ಞರೂ ಒಪ್ಪುತ್ತಾರೆ. "ಮಿಕ್ಕವಿತರಕ್ಕಕ್ಕುಂ(೧೦)" (ಉದಯಾ ದಿತ್ಯಾಲಂಕಾರ) ಎಂಬುದರಿಂದ ಹಾಸ್ಯಕ್ಕೆ ಉಚಿತ ರೀತಿ ವೈದರ್ಭ ರೀತಿ ಎನ್ನ ಬಹುದು. "ಕಠಿಣವಾದ ಶಬ್ದಾರ್ಥಂಗಳಿಲ್ಲದೆ, ಶ್ಲೇಷಪ್ರಸಾದ ಗುಣಂಗಳ್ ಪೆರ್ಚಿರೆ, ವೈದರ್ಭೀ ರೀತಿಯೆನಿಪುದು."

ಅನೇಕ ಸ್ಥಳಗಳಲ್ಲಿ, ಅದರಲ್ಲಿಯೂ ಈಗಿನ ಸಣ್ಣಕತೆ ಹರಟೆ ಇವುಗಳಲ್ಲಿ, ಪದ ಗಳನ್ನು ಹಾಕುವುದರಲ್ಲೂ, ಪದಗಳನ್ನು ಬದಲಾಯಿಸುವುದರಲ್ಲೂ, ಹಾಸ್ಯರಸವನ್ನು

ತುಂಬುವುದುಂಟು. ಇದಕ್ಕೆ ಅನೇಕ ಉದಾಹರಣೆಗಳನ್ನು ಕೊಡಬಹುದಾದರೂ, ಪ್ರಕೃತಕ್ಕೆ ಬೇಕಾದ ಕೆಲವು ಅಂಶಗಳನ್ನು ಮಟ್ಟಿಗೆ ತೆಗೆದುಕೊಂಡು ಪದಗಳ ವಿಚಾರವನ್ನು ಹೇಳುತ್ತಲಿದ್ದೇನೆ. ಭಾಷಾಶಾಸ್ತ್ರದಲ್ಲಿ ಕಂಡುಬರುವ ಕೆಲವು ಅಂಶಗಳನ್ನು ಪ್ರಧಾನವಾಗಿಟ್ಟುಕೊಂಡು ಇಲ್ಲಿಯ ವಿಚಾರವನ್ನು ವಿವರಿಸಲು ಪ್ರಯತ್ನಪಡುತ್ತಿದ್ದೇನೆ. ಮಾಸ್ತಿ ವೆಂಕಟೇಶ ಅಯ್ಯಂಗಾರ್ರವರ 'ಕಾಮನ ಹಬ್ಬದ ಒಂದು ಕತೆ'ಯಲ್ಲಿ, ಶ್ರೀನಿವಾಸ ಶಾಸ್ತ್ರಿಯನ್ನು ಕೆಲವು ಕಡೆ 'ಶೀನಿ' ಎಂದಿದ್ದಾರೆ; ಕೆಲವು ಕಡೆ 'ಶಾಸ್ತ್ರಿ' ಎಂದಿದ್ದಾರೆ; ಇನ್ನು ಕೆಲವೆಡೆಗಳಲ್ಲಿ 'ಶ್ರೀನಿವಾಸ ಶಾಸ್ತ್ರಿ' ಎಂದಿದ್ದಾರೆ. ಶ್ರೀನಿವಾಸ ಶಾಸ್ತ್ರಿ ಎಂಬುದು ೬ ಸಲ; 'ಶೀನಿ' ಎಂಬುದು ೨೭ ಸಲ; 'ಶಾಸ್ತ್ರಿ' ಎಂಬುದು ೩ ಸಲ; ಓಗೆ ಬಂದಿವೆ. ಈ ವಿಧವಾದ ಸಂಕೋಚತ್ವ (Truncation) ಎಲ್ಲೆಲ್ಲೂ ಸಾಮಾನ್ಯವಾಗಿದೆ. ಆದರೆ ಈ ಸಂಕೋಚತ್ವಕ್ಕೆ ಒಂದರ್ಥವುಂಟು. ಶ್ರೀನಿವಾಸ ಶಾಸ್ತ್ರಿ ಎಂದರೆ ಯಾರೋ ನಮಗೆ ಅಪರಿಚಿತ ವ್ಯಕ್ತಿ; ಶೀನಿ ಎಂದರೆ ನಮಗೆ ಕೇವಲ ತಿಳಿದವನು. ಅಲ್ಲದೆ ಅವನೇನು ಅಷ್ಟು ವಿದ್ಯಾವಂತ, ಬಹಳ ದೊಡ್ಡವನು, ಎಂಬರ್ಥ ಬರುವುದಿಲ್ಲ. ನಿಜವಾಗಿಯೂ 'ಶೀನಿ' ವಿದ್ಯಾವಂತನಾದ ದೊಡ್ಡವನಾದ. ಆಗ 'ಶೀನಿ' ಬದಲಾಗಿ 'ಶಾಸ್ತ್ರಿ' ಬಂತು. ಈ ವಿಧವಾದ ಸಂಕೋಚತ್ವ ಒಂದು ವಾತಾವರಣವನ್ನು ಕೊಡುತ್ತದೆ; ಈ ವಾತಾವರಣವನ್ನು ನಿರ್ಮಿಸಬೇಕೆಂದೇ ಕವಿಯು ಇವುಗಳ ಪ್ರಯೋಗವನ್ನು ಸಮಯೋಚಿತವಾಗಿ ಮಾಡುವುದು.

ಒಂದು ಪದದ ಬದಲಾಗಿ ಮತ್ತೊಂದು ಪದವನ್ನು ಪ್ರಯೋಗಮಾಡಿ, ತನಗೆ ಬೇಕಾದ ವಾತಾವರಣವನ್ನು ಕಲ್ಪಿಸಿಕೊಳ್ಳುವುದಕ್ಕೆ ಸ್ಥಾನಾಂತರ (Substitution) ಎನ್ನಬಹುದು: 'ಮೊಸರಿನ ಮಂಗಮ್ಮ'ನ ಕತೆಯಲ್ಲಿ, ಮನೆಗೆ ಮಗನು ಬಂದರೆ 'ಸರದಾರ ಮನೆಗೆ ಬಂದ'; 'ಸುಬೇದಾರರಿಗೆ ಪ್ಯಾದೇ ಮಾತು' ಎನ್ನುವುದರಲ್ಲಿ ಮನೆಯ ಯಜಮಾನಿಯನ್ನು 'ಅಮ್ಮಾವರು' ಎಂದಿರುವುದು.

ಇವುಗಳಲ್ಲದೆ ಮಾತನಾಡುವ ಭಾಷೆ, ಅಲ್ಲದೆ ಸ್ವಭಾಷೆ ಪರಭಾಷೆಗಳ ಸಂಯೋಗ, ಇವುಗಳ ಉಪಯೋಗದಿಂದಲೂ ವಾತಾವರಣ ಪ್ರೇರೇಪಣೆಯಾಗಬಹುದು. 'ಅಣ್ಣಪ್ಪ' ಎನ್ನುವುದು 'ಅಣ್ಣೀ' ಆಗಿ, ಆಮೇಲೆ 'ಆನೀ' ಆಗಬಹುದು: ಈ 'ಆನೀ' ಎಂಬ ಪದವು 'ಆನೆ' ಪದದ ಹತ್ತಿರವಿರುವುದರಿಂದ ಹಾಸ್ಯಾಸ್ಪದವಾಗಿ ಪರಿಣಮಿಸಬಹುದು. 'ಸುಬೇದಾರರಿಗೆ ಪ್ಯಾದೇ ಮಾತು' ಎಂಬುದರಲ್ಲಿ 'ಡಿಸ್ಟ್ರಿಕ್ಟಿನಲ್ಲಿ ಫಾರ್ ಡಿಪ್ಯುಟಿ ಕಮಿಷನರ್', 'ಸಬ್ ಡಿವಿಜನ್‌ರು', 'ಕೊಕ್ಕೆ ಇಟ್ಟರು', 'ಪಾಯಿಂಟು ಪ್ಯಾಗಟ್', 'ಪೂರಾ ಫಜೀತಿ', 'ಕ್ಯಾಂಪಿನಲ್ಲಿ ಖರ್ಚಾಗದೆ', 'ಸೇವಿಂಗ್ಸ್ ಲೆಕ್ಕ'. ಸಂಕೇತಭಾಷೆಯೂ ಒಂದೊಂದು ಕಡೆ ಬಹಳ ಸಹಾಯಮಾಡುತ್ತದೆ; 'ಶಬರೀ ಸೇವೆ'. ಮಾತನಾಡುವ ಭಾಷೆಯಲ್ಲೇ ವಾಕ್ಯಗಳನ್ನು ಬರೆಯುವುದರ ಮೂಲಕವೂ ವಾತಾವರಣವನ್ನು ಅನುಕೂಲಮಾಡಿಕೊಳ್ಳಬಹುದು—"ಕಲ್ರಿಬ್ರನ್ನ ಕಂಡೀ ಇಡೀಕೊಂಡಿ." (ಕಳ್ಳರಿಬ್ಬರನ್ನು ಕಂಡೆ, ಹಿಡಿದುಕೊಂಡೆ).

ಹೇಗೆ ಪದಗಳನ್ನು ಉಪಯೋಗಿಸುವುದರಲ್ಲಿ ನಗುವಿಗೆ ಅನುಕೂಲಮಾಡಿ

ಕೊಳ್ಳಬಹುದೋ ಹಾಗೆಯೇ ಬರೆಯುವ ರೀತಿಯಲ್ಲೂ ಹಾಸ್ಯರಸವನ್ನು ಉಕ್ಕಿಸಲು ಅನುಕೂಲಮಾಡಿಕೊಳ್ಳಬಹುದು. ಇದರಲ್ಲಿನ ಅನೇಕ ಅಂಶಗಳ ಪೈಕಿ ಒಂದನ್ನು ತೆಗೆದುಕೊಂಡು ಇಲ್ಲಿ ನೋಡೋಣ. ಅನೇಕ ಗಾದೆಗಳಲ್ಲಿ ನಗು ತುಂಬಿದೆ; ವಸ್ತು (Matter) ವಿಚಾರವೊಂದೇ ಅಲ್ಲ, ಅದರ ಬಿಗಿಯಲ್ಲೂ ಈ ನಗುವಿಗೆ ಅನುಕೂಲವುಂಟು. ಎಂದರೆ, ಉದ್ದವಾದ ವಾಕ್ಯಗಳನ್ನೊಳಗೊಂಡ ಪ್ರಬಂಧಗಳಿಗಿಂತ, ಸಣ್ಣ ಸಣ್ಣ ವಾಕ್ಯಗಳನ್ನೊಳಗೊಂಡವುಗಳಿಂದ ಹಾಸ್ಯರಸಕ್ಕೆ ಅನುಕೂಲ.

ಇನ್ನು ವಸ್ತು ವಿಚಾರ. ಎಲ್ಲಾ ವಸ್ತು ವಿಚಾರವೂ ಹಾಸ್ಯಕ್ಕೆ ಅನುಕೂಲವೇ? ಎಂಬುದೊಂದು ಪ್ರಶ್ನೆ. ಪೂರ್ವಕಾಲದಲ್ಲಿ ವಿಕಟಕವಿಗಳು ಪ್ರತಿಯೊಂದನ್ನೂ ಹಾಸ್ಯಕ್ಕೆಳೆಯುತ್ತಿದ್ದರೆಂಬುದನ್ನು ಕೇಳಿದ್ದೇವೆ. ಆದರೆ ಸಾಮಾನ್ಯವಾಗಿ ಕೆಲವು ವಿಚಾರಗಳು ಅನುಕೂಲ ಮತ್ತೆ ಕೆಲವು ಪ್ರತಿಕೂಲ ಎಂಬುದನ್ನು ಎಲ್ಲರೂ ಒಪ್ಪುವರು. ಸಾಮಾಜಿಕ ವಸ್ತು ವಿಚಾರವನ್ನು ಇಟ್ಟುಕೊಂಡು ಬರೆದ ಸಣ್ಣ ಕತೆಯಲ್ಲಿ ಹಾಸ್ಯರಸಕ್ಕೆ ಅನುಕೂಲವು ಹೆಚ್ಚೆಂದು ಧಾರಾಳವಾಗಿ ಹೇಳಬಹುದಾಗಿದೆ; ನಮ್ಮ ಅನುಭವವೂ ಇದೇ ರೀತಿಯೆಂದು ತೋರುತ್ತದೆ.

ಪದಪ್ರಧಾನ (Pun) ಕ್ಕೂ ತರ್ಕಪ್ರಧಾನ (Wit) ಕ್ಕೂ ಒಂದುವಿಧವಾದ ಸಂಬಂಧ ತೋರಿಬರುತ್ತದೆ. ಪದಪ್ರಧಾನ ಹೆಚ್ಚಾಗುತ್ತ ಬಂದಹಾಗೆಲ್ಲಾ ತರ್ಕಪ್ರಧಾನವು ಕಡಿಮೆಯಾಗುತ್ತದೆ. ಹಾಗೆಯೇ ಪದಪ್ರಧಾನ ಮತ್ತು ತರ್ಕಪ್ರಧಾನ ಇವೆರಡರ ಮೊತ್ತಕ್ಕೂ ವ್ಯಂಗ್ಯಪ್ರಧಾನ (Satire) ಮತ್ತು ಹಾಸ (Humour) ಇವೆರಡರ ಮೊತ್ತಕ್ಕೂ ಇವೇ ರೀತಿಯ ಸಂಬಂಧವಿರಬಹುದೆಂದು ತೋರುತ್ತೆ. ಎಲ್ಲಿ ಹಾಸವು ಹೆಚ್ಚಾಗಿರುತ್ತದೆಯೋ ಅಲ್ಲಿ ಮಿಕ್ಕವು ಕಡಿಮೆ ಎಂದು ಇಷ್ಟು ಮಾತ್ರ ಊಹಿಸಬಹುದಾಗಿದೆ.

**ಎಂ. ಜಿ. ವೆಂಕಟೇಶಯ್ಯ**

# ಸಾಹಿತ್ಯ ವಿಮರ್ಶೆ

ಕೆಲಸವಿದ್ದ ಚಳಿಗದಿರನು, ಕೇಳದೆ
ಪ್ರೌಢವಿಮರ್ಶೆಯ, ಮೂಡಿದನು.
ಮೂಡಿಯೆ ಮೂಡಿದನು.
ಕೆಲಸವಿಲ್ಲದ ವಿಮರ್ಶಕನಾದರೊ
ನಿಂತು ವಿಮರ್ಶೆಯ ಮಾಡಿದನು.
ಮಾಡಿಯೆ ಮಾಡಿದನು.

ಶ್ರೀ|| ಕೆ. ವಿ. ಪುಟ್ಟಪ್ಪನವರ "ವಿಮರ್ಶಕ"

ಶ್ರೀ|| ಪುಟ್ಟಪ್ಪನವರು ಈ ಕವನವನ್ನು ಬಹು ಮಟ್ಟಿಗೆ ಹಾಸ್ಯಕ್ಕಾಗಿ ಬರೆದರೆನ್ನ ಬಹುದಾದರೂ ಅದರಲ್ಲಿ ಅಡಗಿರುವ ಭಾವವನ್ನು ನಾವು ಗಮನಿಸಬೇಕು. ವಿಮರ್ಶಕನೆಂದರೆ ಬಹು ಜನರಿಗೆ ಸ್ವಲ್ಪ ಅನಾದರ. ಈ ಕವನದ ದೃಷ್ಟಿಯಿಂದ ನೋಡಿದರೆ ವಿಮರ್ಶಕನು ಕೇವಲ ಚಂದ್ರನನ್ನು ನೋಡಿ ಬಗುಳುವ ನಾಯಿಯ ಸಮಾನ. ಅವನೇನು ಬಗುಳಿಕೊಂಡರೂ ಚಂದ್ರಬಿಂಬದ ಸೌಂದರ್ಯಕ್ಕೆ ಕುಂದಿಲ್ಲ. ನಷ್ಟವೇನಿದ್ದರೂ ಆ ಸೊಬಗನ್ನು ನೋಡಿ ಆನಂದಿಸಲಾರದ ವಿಮರ್ಶಕನಿಗೇ; ಚಂದ್ರನೇನೋ "ಮೂಡಿಯೆ ಮೂಡಿದನು."

ಅಂದರೆ ವಿಮರ್ಶಕನು ವೊಸರಿನಲ್ಲಿ ಕಲ್ಲು ಹುಡುಕುವವನು, ಅವನಿಂದ ಕವಿಗಾಗಲಿ ಜನತೆಗಾಗಲಿ ಯಾವ ಪ್ರಯೋಜನವೂ ಇಲ್ಲ. ಚಂದ್ರಿಕೆಯಂತೆಯೇ ಸಾಹಿತ್ಯ ಸರ್ವಜನಪ್ರಿಯವಾದದ್ದು; ಕವಿಯ ಹೃದಯದಿಂದ ಹೊರಟು ಶ್ರೋತೃಗಳ ಹೃದಯವನ್ನು ನೇರವಾಗಿ ಮುಟ್ಟುತ್ತದೆ. ಅದರ ಆನಂದವನ್ನನುಭವಿಸಬೇಕಾದರೆ ವಿಮರ್ಶಕನ ಮಧ್ಯಸ್ಥಿಕೆಯೇನೂ ಆವಶ್ಯಕವಿಲ್ಲ. ಶಾರದೆಗೂ ಆಕೆಯ ಭಕ್ತರಿಗೂ ನಡುವೆ ಈ ಪೂಜಾರಿಯೇಕೆ ನಿಲ್ಲಬೇಕು! ಇವನ ಆಡಂಬರದಲ್ಲಿ ದೇವಿಯ ಪ್ರಸಾದ ನಮ್ಮ ಕೈಸೇರದೆ ಇದ್ದರೂ ಇರಬಹುದು; ಅನೇಕರು ವಿಮರ್ಶೆಯನ್ನೋದುವುದರಲ್ಲೇ ತೃಪ್ತರಾಗಿ ಕಾವ್ಯದ ಗೊಡವೆಗೇ ಹೋಗದಿರುವುದುಂಟು. ಇದಲ್ಲದೆ ವಿಮರ್ಶಕನ ಹಾವಳಿಯಿಂದ ಕವಿಯ ಸ್ವಾತಂತ್ರ್ಯಕ್ಕೇ ಭಂಗ ಬರಬಹುದು. ದೈವಿಕ ಸ್ಫೂರ್ತಿಯ ಬೆಳಕಿನಲ್ಲಿ ಚಿಗುರಬೇಕಾದ ಕಾವ್ಯದಮೇಲೆ ವಿಮರ್ಶೆಯ ಮಂಜು ಕವಿದರೆ ಅದು ಸೊರಗಿಹೋಗಬಹುದು. ಕವಿಯ ಕೃತಿ ಸಜೀವವಾದದ್ದು; ಆತನ ಕೆಲಸ ಸೃಷ್ಟಿ. ವಿಮರ್ಶಕನ ಕೆಲಸವಾದರೋ ಆ ಸೃಷ್ಟಿಯನ್ನು ವಿಭಜನೆ ಮಾಡಿ ಕೊಲ್ಲುವುದು. ವಿಮರ್ಶಕನಿಗೆ ಸ್ವತಂತ್ರ ಜೀವನವೇ ಇಲ್ಲ; ವಿಮರ್ಶೆಯು ಸಾಹಿತ್ಯವೃಕ್ಷವನ್ನಾಶ್ರಯಿಸಿ ಅದರ ಸಾರವನ್ನು ಹೀರುವ ಬಂದಳಿಕೆ — ಇದೇ ಪ್ರತಿ ಪಕ್ಷದವರ ವಾದ. ಈ ವಾದವನ್ನು ನಾವು ಒಪ್ಪದಿದ್ದರೂ ಅದರ ಪರಿಶೀಲನೆಯಿಂದ ವಿಮರ್ಶೆಯ ಸ್ವರೂಪವನ್ನು ತಿಳಿಯಬಹುದು.

ವಿಮರ್ಶೆ ಮನುಷ್ಯನ ಹುಟ್ಟುಗುಣ. ಸಾಹಿತ್ಯವನ್ನೋದುವವರೆಲ್ಲರೂ ತಮ್ಮ ಶಕ್ತ್ಯನುಸಾರ ವಿಮರ್ಶೆ ಮಾಡುತ್ತಲೇ ಇರುತ್ತಾರೆ. ಅಭಿಜ್ಞಾನಶಾಕುಂತಲ

ವನ್ನೋದಿದಾಗ "ಆಹ, ಎಷ್ಟು ಚೆನ್ನಾಗಿದೆ" ಎಂದುಕೊಂಡರೆ, ಅಥವಾ ಬೇರೆ ಯಾವುದೋ ಗ್ರಂಥವನ್ನೋದಿ "ಏನೋ ಸಾಧಾರಣವಾಗಿದೆ" ಎಂದುಕೊಂಡರೆ, ವಿಮರ್ಶೆಯ ಪ್ರಥಮ ಸೋಪಾನವನ್ನು ಮೆಟ್ಟಿದಂತೆ. ಅನೇಕವೇಳೆ ವಿಮರ್ಶೆ ಈ ಬಗೆಯ ಆಸಕ್ತಿಯಿಂದ ಮೇಲ್ಮಟ್ಟಕ್ಕೆ ಏರುವುದೇ ಇಲ್ಲ. "ಆ ಕಾವ್ಯ ಏತಕ್ಕೆ ಚೆನ್ನಾಗಿದೆ" ಎಂಬ ಪ್ರಶ್ನೆಯನ್ನು ಹಾಕಿಕೊಂಡು ವಿಚಾರಮಾಡಲಾರಂಭಿಸಿದರೆ, ಕೇವಲ ಆಸಕ್ತಿಯಾಗಿದ್ದುದು ವಿಮರ್ಶೆಯಾಗಿ ಪರಿಣಮಿಸುತ್ತದೆ. ಈ ಬಗೆಯ ಪರಿಶೀಲನೆ ಎಲ್ಲರಿಗೂ ಸಾಧ್ಯವಿಲ್ಲ. ಸಾಹಿತ್ಯದಲ್ಲಿ ಆಸಕ್ತಿಯೂ ಆನಂದವೂ ಬಹು ಜನರಿಗಿವೆ; ಆದರೆ ಆಸಕ್ತಿ ಅನೇಕವೇಳೆ ತಪ್ಪುದಾರಿಯಲ್ಲಿ ಹೋಗಬಹುದು. ಸಾಹಿತ್ಯದ ವಿಷಯದಲ್ಲಿ ಯಾರು ಬೇಕಾದರೂ ಅಧಿಕಾರವಾಣಿಯಿಂದ ಮಾತಾಡಬಹುದೆಂಬುದು ತಪ್ಪುಭಾವನೆ. ಚಂದ್ರಿಕೆಯ ಸೌಂದರ್ಯವನ್ನು ಸವಿಯುವ ಭಾಗ್ಯ ಸಹ ಎಲ್ಲರ ಪಾಲಿಗೂ ಬರುವುದಿಲ್ಲ. ಶುಕ್ಲಪಕ್ಷದಲ್ಲೆಲ್ಲಾ ಒಂದು ದಿನ ಅರೆಘಳಿಗೆ ಬೆಳುದಿಂಗಳಿಗೆ ಗಮನಕೊಡದಿರುವವರು ಸಾವಿರಾರು ಮಂದಿ ಇರುವಂತೆಯೇ ಸಾಹಿತ್ಯಪ್ರಪಂಚದಲ್ಲಿ ಸಹ ಕಣ್ಣಿದ್ದೂ ನೋಡದಿರುವವರು ಬಹಳ ಮಂದಿ. ಅಥವಾ ಕೆಲವರಿಗೆ ಮಂಜುಮಂಜಾಗಿ ಸೌಂದರ್ಯದರ್ಶನವಾದರೂ ವಿಮರ್ಶಕನ ಸಹಾಯದಿಂದ ಆ ಸೌಂದರ್ಯಕ್ಕೆ ಸ್ಪಷ್ಟತೆ ಬರುತ್ತದೆ. ಸಾಹಿತ್ಯ ಸಾಗರದ ಅಲೆಗಳ ಮೇಲೆ ಕುಪ್ಪಳಿಸುವವರಿಗೂ ಆನಂದವಾಗಬಹುದು; ಆದರೆ ಅನರ್ಘವಾದ ರತ್ನಗಳು ಸಿಕ್ಕಬೇಕಾದರೆ ಆಳವಾಗಿ ಮುಳುಗಬೇಕು. ಹೀಗೆ ಮುಳುಗಿ ರತ್ನಗಳನ್ನು ತೆಗೆದು ಪ್ರದರ್ಶಿಸುವವನೇ ವಿಮರ್ಶಕ. ಕಾವ್ಯಕ್ಕೂ ನಮಗೂ ನಡುವೆ ವಿಮರ್ಶಕನೇಕೆ ನಿಲ್ಲಬೇಕು ಎನ್ನಬಹುದಾದರೆ, ವಿಶ್ವದ ಸೌಂದರ್ಯಕ್ಕೂ ನಮಗೂ ನಡುವೆ ಕವಿಯೇಕಿರಬೇಕೆಂಬ ಪ್ರಶ್ನೆಯೂ ಏಳಬಹುದು. ಕಾವ್ಯದಲ್ಲಿ ಎಲ್ಲರ ಕಣ್ಣಿಗೂ ಬೀಳದ ಸೌಂದರ್ಯ ವಿಮರ್ಶಕನಿಗೆ ಕಾಣುತ್ತದೆ. ಪ್ರಸಿದ್ಧ ಪಾಶ್ಚಾತ್ಯ ವಿದ್ವಾಂಸರೊಬ್ಬರ ಅನುಭವವನ್ನು ಇಲ್ಲಿ ಉದಾಹರಿಸಬಹುದು. ಎ. ಸಿ. ಬ್ರಾಡ್ಲೆಯವರು ಉಪಯೋಗಿಸುತ್ತಿದ್ದ ಷೇಕ್ಸ್‌ಪಿಯರ್ ಪ್ರತಿ ಅವರ ಕೈಗೆ ಸಿಕ್ಕಿತಂತೆ. ಷೇಕ್ಸ್‌ಪಿಯರನ್ನು ಹತ್ತಾರು ಸಾರಿ ಓದಿದ್ದರೂ ಅವರಿಗೆ ತೋರದಿದ್ದ ಎಷ್ಟೋ ಅಂಶಗಳನ್ನು ಬ್ರಾಡ್ಲೆಯವರು ತಮ್ಮ ಪ್ರತಿಯಲ್ಲಿ ಗುರುತು ಮಾಡಿದ್ದರಂತೆ. ಇದನ್ನು ಗಮನಿಸಿದರೆ ವಿಮರ್ಶಕನ ವಿಷಯದಲ್ಲಿ ನಮಗೆ ಸ್ವಲ್ಪ ಗೌರವ ಹುಟ್ಟಬಹುದು. ಬ್ರಾಡ್ಲೆಯವರಿಗಿಂತ ಷೇಕ್ಸ್‌ಪಿಯರ್ ಮುಖ್ಯನೆಂಬುದೇನೋ ನಿಜ. ಆದರೆ ಷೇಕ್ಸ್‌ಪಿಯರನ ನಾಟಕಗಳು ಬ್ರಾಡ್ಲೆಯವರ ಸಹಾಯದಿಂದ ಹೆಚ್ಚು ರಸವತ್ತಾಗಿ ಪರಿಣಮಿಸುವುವು.

ವಿಮರ್ಶಕನು ಕವಿಯನ್ನು ಹಿಂಬಾಲಿಸಿ ಬರುತ್ತಾನಾದರೂ "ಅವನು ಕೇವಲ ಪರಾಶ್ರಯಿ, ವಿಭಜಕ, ಸಾಹಿತ್ಯಸೃಷ್ಟಿ ಅವನಿಗೆ ಅಸಾಧ್ಯ" ಎನ್ನುವುದು ಸರಿಯಲ್ಲ. ಅವನ ಕೆಲಸ ಹುಳುಕು ಕಂಡುಹಿಡಿಯುವುದಲ್ಲ, ವಿಭಜನೆ ಮಾತ್ರವಲ್ಲ, ಕಾವ್ಯಪ್ರಪಂಚದಲ್ಲಿ ದಾರಿ ತೋರುವುದು ಮಾತ್ರವೂ ಅಲ್ಲ; ಕವಿಯಂತೆ ಅವನೂ ಸೃಷ್ಟಿ ಮಾಡಬಲ್ಲವನು. ಸೂಕ್ಷ್ಮವಾಗಿ ನೋಡಿದರೆ, ಕಾವ್ಯಕ್ಕೂ ವಿಮರ್ಶೆಗೂ ನಡುವೆ ನಾವು ಕೃತಕವಾದೊಂದು ಕಂದರವನ್ನು ಕಲ್ಪಿಸಿಕೊಂಡಿದ್ದೇವೆ.

ಕವಿಯೂ ವಿಮರ್ಶಕನೂ ಒಂದೇ ಗೋತ್ರದವರು. ಇಬ್ಬರಲ್ಲಿ ಹೊರಹೊಮ್ಮುವ ತೇಜಸ್ಸೂ ಒಂದೇ ಶಕ್ತಿಯದು; ಅದು ವಿಮರ್ಶಕನಲ್ಲಿರುವುದಕ್ಕಿಂತ ಕವಿಯಲ್ಲಿ ಹೆಚ್ಚು ಉಜ್ಜ್ವಲವಾಗಿದೆಯೆಂದು ಬೇಕಾದರೆ ಹೇಳಬಹುದು. ಪ್ರತಿಯೊಬ್ಬ ಕವಿಯಲ್ಲಿಯೂ ವಿಮರ್ಶಕನೊಬ್ಬನು ಅಡಗಿದ್ದಾನೆಂದು ಹೇಳುವುದುಂಟು; ಅಂತೆಯೇ ವಿಮರ್ಶಕನಲ್ಲಿಯೂ ಕವಿ ಅಡಗಿದ್ದಾನೆ. ಕವಿಯ ಹೃದಯವಿಲ್ಲದವನು ಎಂದಿಗೂ ವಿಮರ್ಶಕನಾಗಲಾರನು. ಇವರಿಬ್ಬರಿಗೂ ಇರುವ ಸಾದೃಶ್ಯವನ್ನು ಸ್ಥಾಪಿಸುವುದು ಈ ಲೇಖನದ ಮುಖ್ಯೋದ್ದೇಶ.

ಪ್ರಸಿದ್ಧ ಗ್ರೀಕ್ ವಿಮರ್ಶಕನಾದ ಅರಿಸ್ಟೋಟಲ್ ಹೇಳಿದಂತೆ, ಕಾವ್ಯವೆನ್ನುವುದು "ಅನುಕರಣ". ಅಂದರೆ ಅದು ಪ್ರಪಂಚವನ್ನು ಕನ್ನಡಿಯಂತೆ ಪ್ರತಿಬಿಂಬಿಸುತ್ತದೆಂದು ಅರ್ಥವಲ್ಲ. ವಿಶ್ವಸೃಷ್ಟಿಯನ್ನು ಒಳಹೊಕ್ಕು ನೋಡಿ ಅದರಲ್ಲಿ ಅಡಗಿರುವ ಅಂತರಾರ್ಥ ಅಥವಾ ಆದರ್ಶವನ್ನು ಕಾವ್ಯ ಅನುಕರಿಸುತ್ತದೆ. ಆದ್ದರಿಂದಲೇ ಅದಕ್ಕೆ "ಸೃಷ್ಟಿ" ಎಂಬ ಹೆಸರು ಸಲ್ಲುತ್ತದೆ. ತತ್ವಜ್ಞರು ವಿಶ್ವದಲ್ಲಿ ಯಾವ ಬಗೆಯ ಪೂರ್ಣತೆಯನ್ನೂ ಸೌಂದರ್ಯವನ್ನೂ ಕಾಣುವರೋ ಅದನ್ನೇ ಕವಿ ತನ್ನ ಕೃತಿಗಳಲ್ಲಿ ಸಾಧಿಸುತ್ತಾನೆ. ತನ್ನ ಉದ್ದೇಶಕ್ಕೆ ಸಹಕಾರಿಯಾಗುವ ಸಾಮಗ್ರಿಗಳನ್ನು ಪ್ರಾಪಂಚಿಕ ವ್ಯಾಪಾರದಿಂದ ಆರಿಸಿಕೊಂಡು, ಕಲೆಗೆ ಸಹಜವಾದ ಐಕ್ಯತೆಯನ್ನು ಅವುಗಳಿಗೆ ಕೊಟ್ಟು, ಆ ಮೂಲಕ ಅವುಗಳ ಅಂತರಾರ್ಥ ಹೊರಪಡುವಂತೆ ಮಾಡುತ್ತಾನೆ. ಕಾವ್ಯವು ಅನುಕರಣ ಮಾತ್ರವಾಗಿದ್ದಿದ್ದರೆ ಅದೂ ಸಹ ಪರಾಶ್ರಯಿಯೆಂಬ ಅಪಪ್ರಥೆಯನ್ನು ಹೊರಬೇಕಾಗುತ್ತಿತ್ತು. ಯಾವ ದೃಷ್ಟಿಯಿಂದ ಕಾವ್ಯ ಸೃಷ್ಟಿಯೆನ್ನಬಹುದೋ ಆ ದೃಷ್ಟಿಯಿಂದ ವಿಮರ್ಶೆಯನ್ನು ಪರೀಕ್ಷಿಸೋಣ.

ಸಾಹಿತ್ಯಕ್ಕೆ ವಿಶ್ವ ಜೀವನವು ಆಧಾರವಾದರೆ ವಿಮರ್ಶೆಗೆ ಸಾಹಿತ್ಯವೇ ಆಧಾರ. ಪ್ರಪಂಚದ ಸುಖದುಃಖಗಳನ್ನು ಕವಿ ತನ್ನ ಹೃದಯದಲ್ಲಿ ಅನುಭವಿಸಿ ಅವುಗಳನ್ನು ಕಲೆಯ ರೂಪದಲ್ಲಿ ಪುನಃ ಸೃಷ್ಟಿ ಮಾಡುತ್ತಾನೆ. ಆ ಕಲೆ ಜೀವನದ ಪ್ರತಿಚಿತ್ರವಲ್ಲದಿದ್ದರೂ ಜೀವನಜ್ಯೋತಿ ಅದರಲ್ಲಿ ಸದಾ ಹೊಳೆಯುತ್ತಿರುತ್ತದೆ. ಹಾಗೆಯೇ ವಿಮರ್ಶಕನು ಕಾವ್ಯಪ್ರಪಂಚದಲ್ಲಿ ಸಂಚರಿಸಿ ಕವಿಯ ಹೃದಯ ವ್ಯಾಪಾರವನ್ನು ಕೂಲಂಕಷವಾಗಿ ಅರಿತು, ಅವನ ಅನುಭವವನ್ನು ತನ್ನದಾಗಿ ಮಾಡಿಕೊಳ್ಳುತ್ತಾನೆ. ಜೀವನವನ್ನು ಚಿತ್ರಿಸುವುದರಲ್ಲಿ ಕವಿ ಪಡೆಯುವ ಆನಂದವನ್ನೇ ಕಾವ್ಯಾನುಭವ ನಿರೂಪಣೆಯಲ್ಲಿ ವಿಮರ್ಶಕನು ಕಾಣುತ್ತಾನೆ. ಕವಿ ಹೇಗೆ ಜೀವನವನ್ನು ತನ್ನದೇ ಒಂದು ವಿಶೇಷ ದೃಷ್ಟಿಯಿಂದ ನೋಡುತ್ತಾನೋ ಹಾಗೆ ವಿಮರ್ಶಕನು ಕಾವ್ಯವನ್ನು ತನ್ನ ಸ್ವಂತ ದೃಷ್ಟಿಯಿಂದ ನೋಡಬೇಕು. ಜೀವನದಿಂದ ಕವಿ ವಿಶೇಷಾರ್ಥವನ್ನು ಗ್ರಹಿಸುವಂತೆ ವಿಮರ್ಶಕನು ಕಾವ್ಯದಲ್ಲಿ ಒಂದು ವಿಶೇಷಾರ್ಥವನ್ನು ಕಂಡು ಆ ಅರ್ಥಕ್ಕೆ ಪುಷ್ಟಿಕೊಡಬಹುದಾದ ಅಂಶಗಳನ್ನು ಕಾವ್ಯದಿಂದ ಸಂಗ್ರಹಿಸುತ್ತಾನೆ. ಒಬ್ಬ ಕವಿ ಮತ್ತೊಬ್ಬನ ಪ್ರತಿಧ್ವನಿಯಲ್ಲ, ಜೀವನದ ಪ್ರತಿಧ್ವನಿಯೂ ಅಲ್ಲ. ವಿಮರ್ಶಕನೂ ಹಾಗೆಯೇ. ವಿಶ್ವವನ್ನವಲೋಕಿಸುವುದರಲ್ಲಿ ಕವಿಯ ಕಣ್ಣು ಹೇಗೋ ಕಾವ್ಯವನ್ನವಲೋಕಿಸುವುದರಲ್ಲಿ ವಿಮರ್ಶಕನ

ಕಣ್ಣು ಹಾಗೆಯೇ. ಕವಿಗೆ ಕಾವ್ಯವಿರುವಂತೆ, ವಿಮರ್ಶಕನಿಗೆ ತನ್ನ ಕೃತಿಯು ತನ್ನ ವ್ಯಕ್ತಿತ್ವವನ್ನು ಹೊರಗೆಡಹುವುದಕ್ಕೆ ಒಂದು ಸಾಧನ.

ಈ ವಾದ ಕೆಲವರಿಗೆ ವಿಚಿತ್ರವಾಗಿ ತೋರಬಹುದು. "ವಿಮರ್ಶಕ ಇರುವುದು ಕವಿಯ ಮನೋಧರ್ಮವನ್ನು ನಮಗೆ ತಿಳಿಸುವುದಕ್ಕೆ, ತನ್ನ ವ್ಯಕ್ತಿತ್ವ ವನ್ನು ಪ್ರದರ್ಶಿಸುವುದಕ್ಕಲ್ಲ" ಎಂಬ ಭಾವನೆ ಬಹು ಜನರಲ್ಲಿದೆ. ಆದರೆ ಯಾವ ವಿಮರ್ಶಕನಾಗಲಿ ತನ್ನ ಸ್ವಂತ ಮನೋಧರ್ಮವನ್ನು ಒತ್ತಟ್ಟಗಿಟ್ಟು ಕವಿಯ ದೃಷ್ಟಿಯಿಂದಲೇ ಕಾವ್ಯಾವಲೋಕನ ಮಾಡುವುದು ಅಸಾಧ್ಯ. ವಿಶ್ವವನ್ನು ಕವಿ ನೋಡುವಂತೆ ವಿಮರ್ಶಕನು ಕಾವ್ಯವನ್ನು ತನ್ನ ದೃಷ್ಟಿಯಿಂದಲೇ ನೋಡ ಬೇಕು. ಆದರೆ ವಿಶ್ವಕ್ಕೂ ಕಾವ್ಯಕ್ಕೂ ಇರುವಂತೆಯೇ ಕಾವ್ಯಕ್ಕೂ ವಿಮರ್ಶೆಗೂ ನಿಕಟ ಸಂಬಂಧವಿದೆ. ಕವಿಯ ಸೃಷ್ಟಿ ಸತ್ಯವಾಗಬೇಕಾದರೆ ಅವನ ದೃಷ್ಟಿ ಪ್ರಪಂಚದ ಅನುಭವದಿಂದ ಪಾಟವ ಪಡೆದಿರಬೇಕು. ಹಾಗೆಯೇ ವಿಮರ್ಶಕನು ಕಾವ್ಯದ ಪ್ರತಿಧ್ವನಿಯಲ್ಲವೆಂದರೂ ಕಾವ್ಯಾನುಭವದ ಅಂಜನದಿಂದ ಅವನ ಕಣ್ಣಿನ ಮಂಜು ಹರಿದು, ದೃಷ್ಟಿ ಸ್ವಚ್ಛವಾಗಿ, ಅದಕ್ಕೆ ತೀಕ್ಷ್ಣತೆ ಬರಬೇಕು. ವಿಶ್ವವ್ಯಾಪಾರದ ಪರಿಣಾಮ ಕಾವ್ಯದಲ್ಲಿರುವಂತೆ ಕಾವ್ಯದ ಪರಿಣಾಮ ವಿಮರ್ಶೆ ಯಲ್ಲಿರಬೇಕು.

ಜೀವನದ ಯಾವುದೋ ಒಂದು ಮುಖವು ಕವಿಯನ್ನಾಕರ್ಷಿಸುವಂತೆ ಯಾವುದೋ ಕಾವ್ಯವು ವಿಮರ್ಶಕನನ್ನು ಆಕರ್ಷಿಸುತ್ತದೆ. ಇಂಥ ಆಕರ್ಷಣ ದಿಂದ ಉತ್ಪನ್ನವಾದ ವಿಮರ್ಶೆ ಕಾವ್ಯದಂತೆ ತಾನಾಗಿಯೇ ಹೊರಹೊಮ್ಮ ಬಹುದು; ಅದೂ ಸಾಹಿತ್ಯವಾಗಿ ಪರಿಣಮಿಸಬಹುದು. ಛಾರಲ್ಸ್ ಲ್ಯಾಂಬ್ 'ಲಿಯರ್' ನಾಟಕದ ವಿಷಯ ಬರೆದಿರುವ ವಿಮರ್ಶೆಯಲ್ಲಿ ಕಾವ್ಯದ ಲಕ್ಷಣ ಗಳೆಲ್ಲಾ ಇವೆ. "ಆ ವಿಮರ್ಶೆ ಸ್ವತಃ ಸೃಷ್ಟಿಯಿರಬಹುದು, ಆದರೆ 'ಲಿಯರ್' ನಾಟಕದ ವಿಷಯದಲ್ಲಿ ಲ್ಯಾಂಬ್ ಹೇಳಿರುವುದೆಲ್ಲಾ ಸತ್ಯವೆ?" ಎಂದು ಕೇಳಿದರೆ, "ಷೇಕ್ಸ್‌ಪಿಯರ್ ಜೀವನವನ್ನು ಚಿತ್ರಿಸಿರುವುದು ಹೇಗೆ ಸತ್ಯವೋ ಇದೂ ಹಾಗೆಯೇ" ಎಂದು ನಾವು ಉತ್ತರ ಕೊಡಬಹುದು. ಕವಿಗೆ ಅನ್ವಯಿಸುವ ನಿಯಮ ಸ್ವಾತಂತ್ರ್ಯಗಳು ವಿಮರ್ಶಕನಿಗೂ ಅನ್ವಯಿಸುತ್ತವೆ.

ಜೀವನದ ಲಯದೊಂದಿಗೆ ಕವಿಯ ಹೃದಯ ಮಿಡಿಯುವಂತೆಯೇ ಕಾವ್ಯದ ಲಯದೊಂದಿಗೆ ವಿಮರ್ಶಕನ ಹೃದಯ ಮಿಡಿಯುವುದರಿಂದ, ವಿಮರ್ಶೆಯಲ್ಲಿ ಸಹ ಶೈಲಿಯ ಗಾಂಭೀರ್ಯ, ಆಲೋಚನಾ ಶಕ್ತಿ, ಪ್ರತಿಭೆ, ಭಾವಾವೇಶ— ಇವೆಲ್ಲಕ್ಕೂ ಅವಕಾಶವಿದೆ. ವಿಮರ್ಶಕನು ಯಾವಾಗಲೂ ಆವೇಶಕ್ಕೊಳ ಗಾಗದೆ, ಮನಸ್ಸನ್ನು ಹದದಲ್ಲಿಟ್ಟುಕೊಂಡು ವಿಚಾರಶಕ್ತಿಗೇ ಪ್ರಾಮುಖ್ಯ ಕೊಟ್ಟು ಬರೆಯುತ್ತಾನೆಂಬುದು ಪೂರ್ಣವಾಗಿ ಸತ್ಯವಲ್ಲ. ಕವಿಯ ಆವೇಶದಿಂದ ವಿಮರ್ಶಕನೂ ಕೆರಳದಿದ್ದರೆ ಅವನ ಕೃತಿ ಹುರುಳಿಲ್ಲದೆ ನೀರಸವಾಗುತ್ತದೆ. ತನ್ನ ಮನಮೆಚ್ಚಿದ ಕಾವ್ಯವನ್ನು ವಿಮರ್ಶೆಮಾಡುವಾಗ ತಾನೂ ಉದ್ರಿಕ್ತ ಸ್ಥಿತಿ ಯಲ್ಲಿರುವುದು ಸಹಜ.

ಆದ್ದರಿಂದ ಕಾವ್ಯಕ್ಕೂ ವಿಮರ್ಶೆಗೂ ನಾವು ಕೆಲವುವೇಳೆ ಭಾವಿಸುವಷ್ಟು

ಅಂತರವಿಲ್ಲ. ವಿಮರ್ಶಕನು ಕವಿಯ ಮಟ್ಟಕ್ಕೇರಲಾರನಾದರೂ ಅವನೂ
ಸರಸ್ವತಿಯ ಬಳಗವೇ. ಪ್ರತಿಭಾಶಾಲಿಗಳ ಕೈವಾಡವಿದ್ದಲ್ಲಿ ವಿಮರ್ಶೆಯೂ
ಸಾಹಿತ್ಯವಾಗುತ್ತದೆ. ಕವಿಗಳಲ್ಲಿ ಸಹ ಅವರು ಕಾವ್ಯಸೃಷ್ಟಿಯ ಆವೇಶದಲ್ಲಿರು
ವಾಗಲೂ ವಿಮರ್ಶನ ಶಕ್ತಿ ಕೆಲಸಮಾಡುತ್ತಿರುತ್ತದೆ. ಒಂದು ಕಡೆ ಸ್ಫೂರ್ತಿ,
ಮತ್ತೊಂದು ಕಡೆ ವಿಮರ್ಶನ ಶಕ್ತಿ — ಎರಡೂ ಕವಲು ಮಿಂಚು ಕೂಡಿದಂತೆ
ಅದ್ಭುತ ವೇಗದಿಂದ ಮೇಳೈಸಿ ಸಾಹಿತ್ಯ ಸೃಷ್ಟಿಯಾಗುತ್ತದೆ. ಇಂಥ ವಿಮರ್ಶೆ
ಯನ್ನು ಬೇರ್ಪಡಿಸಿ ನೋಡಲು ಸಾಧ್ಯವಿಲ್ಲ. ಕವಿಯಲ್ಲಿ ಅವನ ಅರಿವಿಲ್ಲದೆಯೇ
ಕೆಲಸಮಾಡುವ ಈ ಶಕ್ತಿ ವಿಮರ್ಶಕನಲ್ಲಿ ಅರಿವಿನಿಂದ ಕೆಲಸಮಾಡುತ್ತದೆ.
ಕವಿಯಲ್ಲಿ ಸ್ಫೂರ್ತಿಗೂ ವಿಮರ್ಶಕನಲ್ಲಿ ವಿಚಾರಶಕ್ತಿಗೂ ಪ್ರಾಶಸ್ತ್ಯ ಹೆಚ್ಚು;
ಆದರೆ ಇಬ್ಬರಲ್ಲೂ ಇವೆರಡು ಶಕ್ತಿಗಳೂ ಬೆರೆದಿವೆ.

ವಿಮರ್ಶೆಯಿಂದ ಕವಿಯ ಸ್ವಾತಂತ್ರ್ಯಕ್ಕೆ ಭಂಗ ಬರಬಹುದೆಂಬ ವಾದ
ವನ್ನು ಪರಿಶೀಲಿಸಿ ಈ ಲೇಖನವನ್ನು ಕೊನೆಗಾಣಿಸಬಹುದು. ಯೂರೋಪಿನಲ್ಲಿ
'ನಿಯೊಕ್ಲ್ಯಾಸಿಕ್' ಪಂಗಡದ ವಿಮರ್ಶಕರು ಕವಿಗಳ ಮೇಲ್ವಿಚಾರಣೆಯನ್ನು
ವಹಿಸಿಕೊಳ್ಳುವ ಸಾಹಸಕ್ಕೆ ಕೈಹಾಕಿದ್ದುಂಟು. ಹಿಂದೆ ಅರಿಸ್ಟೋಟಲ್ ತನ್ನ
ಕಾವ್ಯಾನುಭವದ ಆಧಾರದ ಮೇಲೆ ನಿರೂಪಿಸಿದ ಕೆಲವು ಲಕ್ಷಣಗಳನ್ನು
ಈ ಜನರು ಅನುಲ್ಲಂಘನೀಯವಾದ ಕಾಯಿದೆಗಳೆಂದು ತಿಳಿದರು. ಹಿಂದಿನ ಸಂಪ್ರ
ದಾಯದಂತೆ ಸಾಹಿತ್ಯವನ್ನು ರುದ್ರನಾಟಕ, ಹಾಸ್ಯನಾಟಕ, ಗೀತೆ — ಮುಂತಾದ
ಜಾತಿಗಳಾಗಿ ವಿಂಗಡಿಸಿ, ಪ್ರತಿಯೊಂದು ಕಾವ್ಯವೂ ಇಂಥ ಒಂದು ಜಾತಿಗೆ
ಸೇರಲೇಬೇಕೆಂದೂ, ಇವುಗಳಲ್ಲಿ ಒಂದರ ಸಂಪರ್ಕ ಮತ್ತೊಂದಕ್ಕಿರಕೂಡ
ದೆಂದೂ, ಹೊಸ ಜಾತಿಗಳು ಉದಯಿಸುವುದಕ್ಕೆ ಮಾರ್ಗವಿರಕೂಡದೆಂದೂ ಭಾವಿ
ಸಿದರು. ಹೀಗೆ ತಾವು ಅರಿಸ್ಟೋಟಲನ್ನು ಅಪಾರ್ಥಮಾಡಿಕೊಂಡು ನಿರ್ಮಿಸಿದ
ಕೆಲವು ಕಾಯಿದೆಗಳನ್ನಿಟ್ಟುಕೊಂಡು, ಆ 'ಸೆಕ್ಷನ್'ಗಳ ಪ್ರಕಾರ ಕವಿಯನ್ನು
ಅಪರಾಧಿಸ್ಥಾನದಲ್ಲಿ ನಿಲ್ಲಿಸಿ ವಿಚಾರಣೆಮಾಡುವ ಕಾಲ ಬಂತು. ಆದರೆ
ಈ ನಿಯಮಗಳನ್ನು ಮುರಿದೂ ಸಹ ಅದ್ಭುತ ಕಾವ್ಯಗಳನ್ನು ರಚಿಸಿರುವ
ಷೇಕ್ಸ್‌ಪಿಯರನಂಥ ಕವಿಗಳಿದ್ದಾರೆ. ಈ ಕವಿಗಳ ಸ್ವಾರಸ್ಯ 'ನಿಯೊಕ್ಲ್ಯಾಸಿಕ್'
ಪಂಗಡದವರಿಗೆ ಅರ್ಥವಾಗಲಿಲ್ಲ. ಅಲ್ಲಲ್ಲಿ ಡ್ರೈಡನ್, ಜಾನ್ಸನ್, ಮೊದಲಾದ
ಮೇಧಾವಿಗಳು ಕಾವ್ಯದ ಸೌಂದರ್ಯಕ್ಕೆ ಸೋತು, ಹಿಂದಿನ ಸಂಪ್ರದಾಯ
ವನ್ನೂ ತಮ್ಮ ನಿಯಮಗಳನ್ನೂ ಅರೆಘಳಿಗೆ ಮರೆತು ಕವಿಯ ಪ್ರತಿಭೆಗೆ ಕಾಣಿಕೆ
ಸಲ್ಲಿಸಿದ್ದಾರೆ. ಡ್ರೈಡನ್ ಒಂದು ಕಡೆ "ಅರಿಸ್ಟೋಟಲ್ ಹೀಗೆ ಹೇಳಿದನೆಂದರೆ
ಸಾಲದು; ಈಗ ಬದುಕಿದ್ದರೆ ಅವನು ತನ್ನ ಅಭಿಪ್ರಾಯವನ್ನು ಬದಲಾಯಿ
ಸುತ್ತಿದ್ದ" ಎಂದು ಸಹ ಹೇಳುವ ಧೈರ್ಯಮಾಡಿದ್ದಾನೆ. ಆದರೂ ಒಟ್ಟಿನಲ್ಲಿ
ಈ ಜಾತಿಯ ವಿಮರ್ಶಕರು ನ್ಯಾಯಾಧೀಶರಂತೆ ಠೀವಿಯಿಂದ ಪೀಠದಲ್ಲಿ ಕುಳಿತು
ಕವಿಗಳನ್ನು ವಿಚಾರಿಸಿ ದಂಡಿಸಹೊರಟವರು. ಅನೇಕವೇಳೆ ಹಿಂದಿನ ನಿಯಮ
ಗಳಿಗೂ ಸಂಪ್ರದಾಯಕ್ಕೂ ಶರಣುಹೊಡೆದು ಕವಿಗಳೂ ನಾಟಕಕಾರರೂ ತಮ್ಮ
ಪ್ರತಿಭೆಗೆ ದ್ರೋಹಿಗಳಾದದ್ದೂ ಉಂಟು. ಕಾದಂಬರಿ, ಸಣ್ಣಕಥೆ, ಪ್ರಬಂಧ —

ಇವುಗಳ ವಿಷಯದಲ್ಲಿ ಅರಿಸ್ಟೋಟಲ್ ಯಾವ ನಿಯಮವನ್ನೂ ರಚಿಸದೆ ಇದ್ದುದರಿಂದ ಅವು ಸ್ವತಂತ್ರವಾಗಿ ಬೆಳೆದು ರಸವತ್ತಾದ ಫಲ ಕೊಟ್ಟವು; ಅವುಗಳ ವೈವಿಧ್ಯಕ್ಕೆ ವಿಮರ್ಶಕರಿಂದ ಹೆಚ್ಚು ತೊಂದರೆ ಬರಲಿಲ್ಲ.

ಹತ್ತೊಂಬತ್ತನೆಯ ಶತಮಾನದಲ್ಲಿ ರೊಮ್ಯಾಂಟಿಕ್ ಸಾಹಿತ್ಯ ಬೆಳೆದ ಮೇಲೆ ಕವಿಗಳು ಅರಿಸ್ಟೋಟಲನ ಸಂಕಲೆಗಳನ್ನು ಕಿತ್ತೊಗೆದು, "ಹಿಂದಿನ ಕವಿಗಳ ಮತ್ತು ವಿಮರ್ಶಕರ ಘನತೆಯೆಷ್ಟಿದ್ದರೂ ಅವರ ಮಾತೇ ಕೊನೆಯ ಮಾತಲ್ಲ. ಹೋಮರ್ ಕವಿ ಯಾವ ವಿಮರ್ಶಕನ ಅಧಿಕಾರಕ್ಕೂ ಸಿಕ್ಕಿರಲಿಲ್ಲ. ಕವಿಯ ಪ್ರತಿಭೆಗೆ ಎಲ್ಲೆಗಳನ್ನು ನಿರ್ಮಿಸುವ ಹಕ್ಕು ಯಾರಿಗೂ ಇಲ್ಲ; ಅವನು ಸರ್ವಸ್ವತಂತ್ರ" ಎಂದು ಸಾರಿದರು. ಈ ಕ್ರಾಂತಿಕಾರರ ವಾದದಿಂದ ಸಾಹಿತ್ಯಪ್ರಪಂಚದಲ್ಲಿ ಅರಾಜಕತ್ವ ತಲೆದೋರಬಹುದೆಂಬ ಭೀತಿಯೂ ಇತ್ತು.

ಇವೆರಡು ಮತಗಳಲ್ಲಿ ನಾವು ಯಾವುದನ್ನು ಅನುಸರಿಸಬೇಕು? ಒಟ್ಟಿನಲ್ಲಿ ಕಾವ್ಯ ವಿಷಯವಾಗಿ ತೀರ್ಮಾನಕ್ಕೆ ಬರುವ ಹಕ್ಕು ವಿಮರ್ಶಕನಿಗಿದೆಯೆಂದು ಒಪ್ಪಬಹುದು. ನಿಷ್ಕೃಷ್ಟವಾದ ಒಂದು ಮತವಿಲ್ಲದೆ, ಒಂದು ತೀರ್ಮಾನಕ್ಕೆ ಬರದೆ, ಅವನ ಕೆಲಸ ಸಾಗುವುದಿಲ್ಲ. ಆದರೆ ಹಾಗೆ ತೀರ್ಪುಹೇಳುವ ಮೊದಲು ನಮ್ಮ ಮನಸ್ಸಿನ ಸಂಕುಚಿತ ಭಾವಗಳೂ ಪೂರ್ವನಿರ್ಣಯಗಳೂ ತೊಲಗಬೇಕು; ಹಿಂದಿನ ಸಾಹಿತ್ಯವನ್ನೂ ಆಧುನಿಕ ಸಾಹಿತ್ಯದಲ್ಲಿ ನಡೆದಿರುವ ಹೊಸ ಪ್ರಯೋಗಗಳನ್ನೂ ನಿಷ್ಪಕ್ಷಪಾತವಾಗಿ ಪರಿಶೀಲಿಸಿರಬೇಕು; ಇದಾದ ಮೇಲೆಯೂ "ನಾನು ಹೇಳುವುದು ವೇದವಾಕ್ಯ" ಎಂಬ ಅಹಂಕಾರವಿರಬಾರದು. ಹೀಗೆ ಅಪಾರವಾದ ಸಾಹಿತ್ಯಾನುಭವದಿಂದ ಪರಿಪಕ್ವವಾದ ಮನೋಧರ್ಮವುಳ್ಳವರು ಕೊಡುವ ತೀರ್ಪಿಗೆ ಬೆಲೆಯುಂಟು. 'ನಿಯೊಕ್ಲ್ಯಾಸಿಕ್' ಪಂಗಡದವರು ಒಂದು ಬಗೆಯ ಸಾಹಿತ್ಯಕ್ಕೆ ಮಾತ್ರ—ಪುರಾತನ ಗ್ರೀಕ್ ಮತ್ತು ಲ್ಯಾಟಿನ್ ಸಾಹಿತ್ಯಕ್ಕೆ—ವಿಶೇಷ ಪ್ರಾಶಸ್ತ್ಯ ಕೊಟ್ಟು ಆ ಸಾಹಿತ್ಯದ ನಿಯಮಗಳನ್ನೇ ಎಲ್ಲಾ ಬರಹಗಾರರಿಗೂ ಅನ್ವಯಿಸಹೊರಟದ್ದು ತಪ್ಪಾಯಿತು. ಸಾಹಿತ್ಯಪ್ರಪಂಚದಲ್ಲಿ ಹೊಸ ದಾರಿಗಳು ಗೋಚರಿಸುತ್ತಲೇ ಇರುತ್ತವೆ. ಕವಿಯ ಪ್ರತಿಭೆ, ಕಾಲ, ದೇಶ, ಭಾಷೆಯ ಬೆಳವಣಿಗೆ— ಇವುಗಳಿಗನುಸಾರವಾಗಿ ಸಾಹಿತ್ಯ ಬೇರೆ ಬೇರೆ ರೂಪಗಳನ್ನು ತಾಳುವುದು ಸಹಜ. 'ನಿಯೊಕ್ಲ್ಯಾಸಿಕ್' ಜನರು ಇದನ್ನು ಮರೆತರು.

ಆದ್ದರಿಂದ ವಿಮರ್ಶಕನಿಗೆ ಕಾವ್ಯದ ವಿಷಯದಲ್ಲಿ ತೀರ್ಪು ಕೊಡುವ ಹಕ್ಕಿದ್ದರೂ ಕವಿಯು ಆತನ ಆಜ್ಞಾನುವರ್ತಿಯಲ್ಲವೆಂಬುದನ್ನೂ ನಾವು ನೆನಸಿನಲ್ಲಿಡಬೇಕು. ಹೊಸ ಕಾಯಿದೆಗಳಿಗೆ ಮಾರ್ಗ ಮಾಡಿಕೊಡುವ ಶಕ್ತಿ ಕವಿಗಿದೆ. ಹೀಗೆಂದರೆ ಕವಿ ಸರ್ವಸ್ವತಂತ್ರನೆಂದು ಹೇಳಿದಹಾಗಾಗಲಿಲ್ಲ. ಕಾವ್ಯ ಯಾವ ಜಾತಿಯದೇ ಆಗಲಿ, ಸಂಪ್ರದಾಯ ಬದ್ಧವಾಗಿರಲಿ, ಸಂಪ್ರದಾಯ ವಿರೋಧಿಯಾಗಿರಲಿ, ಅದು ಕೆಲವು ನಿಯಮಗಳನ್ನು ಅನುಸರಿಸಿಯೇ ತೀರಬೇಕು. ಎಲ್ಲಾ ಕಾಲದ ಸಾಹಿತ್ಯದಲ್ಲೂ ಇರಬೇಕಾದ, ಜೀವನದ ಅನುಭವ, ಪ್ರತಿಭೆ, ಭಾವಾವೇಶ, ಕಾವ್ಯಕ್ಕೊಪ್ಪುವ ಶೈಲಿ, ಮೊದಲಾದ ಸಾಧಾರಣ ಲಕ್ಷಣಗಳು ಕೆಲವಿವೆ. ಆದರೆ ಅವುಗಳಿಗಿಂತಲೂ ಮುಖ್ಯವಾಗಿ ಪ್ರತಿಯೊಂದು ಕಾವ್ಯವೂ ಅನುಸರಿಸಬೇಕಾದ,

ಅದಕ್ಕೆ ಮಾತ್ರ ಅನ್ವಯಿಸುವ, ಒಳನಿಯಮವೊಂದು ಇದ್ದೇ ಇರುತ್ತದೆ. ಯಾವ ಮೊಳಕೆಯಿಂದ ವೃಕ್ಷ ಬೆಳೆಯುವುದೋ ಅದರ ಸ್ವಭಾವಕ್ಕನುಗುಣವಾಗಿಯೇ ಫಲ ಬರಬೇಕು. ಆ ಮೊಳಕೆಯ ಸ್ವರೂಪ, ಕಾವ್ಯದ ಒಳನಿಯಮ, ಕವಿಗೆ ಮೊದಮೊದಲು ತಿಳಿಯದೆ ಇರಬಹುದು — ಎಷ್ಟೋವೇಳೆ ಕವಿ ಬರೆಯಹೊರಟದ್ದೊಂದಾದರೆ ಬರೆದು ಮುಗಿಸಿದ್ದು ಬೇರೊಂದಾಗುವುದುಂಟು. ಬರವಣಿಗೆಯಲ್ಲಿ ಮುಂದುವರಿದಹಾಗೆಲ್ಲಾ ಆ ನಿಯಮ ಸ್ಪಷ್ಟವಾಗುತ್ತ ಬರಬಹುದು; ಅಥವಾ ಕೊನೆಗೂ ಅದು ತಿಳಿಯದೆ ಕಾವ್ಯ ಕೆಟ್ಟುಹೋದರೂ ಹೋಗಬಹುದು. ಅಂತೂ ಆ ನಿಯಮ, ಕಾವ್ಯದ ಮೂಲತತ್ವ, ಇದ್ದೇ ಇರುತ್ತದೆ. ಭಿನ್ನಭಿನ್ನವಾಗಿ ತೋರುವ ಅನೇಕ ಅಂಶಗಳು ಕಾವ್ಯದಲ್ಲಿ ಸೇರಿದರೂ ಅವೆಲ್ಲವೂ ಆ ಮೂಲತತ್ವಕ್ಕೆ ಒಳಪಟ್ಟು ಅದನ್ನು ಪೋಷಿಸಿ, ಅದರಿಂದ ಸಾರ್ಥಕ್ಯ ಪಡೆಯಬೇಕು. ರುದ್ರನಾಟಕದಲ್ಲಿ ಹಾಸ್ಯ ಸೇರಬಾರದೆಂದು ಪಾಶ್ಚಾತ್ಯರಲ್ಲಿ ಹಿಂದಿನವರ ಮತ. ಆದರೆ ಹಾಸ್ಯವು ರುದ್ರನಾಟಕದ ಐಕ್ಯತೆಗೆ ಕುಂದು ತರುವ ಬದಲು ಪುಷ್ಟಿಕೊಡುವುದಾದರೆ ಅದಕ್ಕೆ ನಾಟಕದಲ್ಲಿ ಸ್ಥಾನವಿದೆ. ಭಿನ್ನಾಂಶಗಳನ್ನು ಹೀಗೆ ಐಕ್ಯತೆಯಲ್ಲಿ ಹೊಂದಿಸುವುದು ಕವಿಯ ಶಕ್ತಿಯನ್ನವಲಂಬಿಸಿದ್ದು. ಅದು ಸಾಧ್ಯವೆಂದು ಷೇಕ್ಸ್‌ಪಿಯರ್ ತೋರಿಸಿದ್ದಾನೆ.

ಈ ಒಳನಿಯಮವನ್ನರಿತು ಅದರ ಸಹಾಯದಿಂದ ಕಾವ್ಯವನ್ನು ಪರಿಶೀಲಿಸಿ ತೀರ್ಪುಕೊಡುವುದು ವಿಮರ್ಶಕನ ಕೆಲಸ. ಕವಿ ತನ್ನ ಸ್ವಂತ ಕಾವ್ಯದ ಮೂಲತತ್ವವನ್ನು ಎಷ್ಟುಮಟ್ಟಿಗೆ ಅನುಸರಿಸಿದ್ದಾನೆ ಎನ್ನುವುದರ ಮೇಲೆ ಅವನ ಬೆಲೆ ನಿರ್ಣಯವಾಗಬೇಕು. ನಮಗೆ ಬೇಕಾದ ಪಾಕವನ್ನೇ ಇಳಿಸಬೇಕೆಂದು ಕವಿಯನ್ನು ಒತ್ತಾಯಪಡಿಸುವುದು ತರವಲ್ಲ; ಆದರೆ ಅವನು ಯಾವ ಪಾಕವನ್ನಿಳಿಸಲು ಹೊರಟನೋ ಅದರಲ್ಲಿ ಕೃತಕೃತ್ಯನಾಗಿದ್ದಾನೆಯೆ ಎಂದು ಕೇಳುವ ಹಕ್ಕು ನಮಗಿದೆ.

ಆದ್ದರಿಂದ ಕವಿ ಸ್ವತಂತ್ರನಾದರೂ ನಿಯಮ ಬದ್ಧನೇ. ಅಥವಾ ಬೇರೊಂದು ರೀತಿಯಲ್ಲಿ ಹೇಳುವುದಾದರೆ, ಹಾಗೆ ನಿಯಮಬದ್ಧನಾದ್ದರಿಂದಲೇ ಅವನು ಸ್ವತಂತ್ರ; ಏಕೆಂದರೆ ಅವನು ಪಾಲಿಸಬೇಕಾದ ನಿಯಮ ಅವನ ಪ್ರತಿಭೆಯಿಂದಲೇ ಉಗಮವಾದದ್ದು. ನಮ್ಮ ಆತ್ಮಸಾಕ್ಷಿಗೆ ಒಪ್ಪುವ ನಿಯಮವನ್ನು ಪಾಲಿಸುವುದೇ ನಿಜವಾದ ಸ್ವಾತಂತ್ರ್ಯ. ವಿಮರ್ಶಕನು ಕಾವ್ಯವನ್ನು ಅಳೆಯಲು ಉಪಯೋಗಿಸುವ ಮಾನದಂಡ ಕವಿಯ ಪ್ರತಿಭೆಯಿಂದಲೇ ಲಬ್ಧವಾದ ಈ ಒಳನಿಯಮ. ಈ ದೃಷ್ಟಿಯಿಂದ ನೋಡಿದರೆ, ವಿಮರ್ಶಕನು ನ್ಯಾಯಮೂರ್ತಿಯಾಗಿ ಪೀಠದಲ್ಲಿ ಕೂರುವುದರಿಂದ ಕವಿಯ ಸ್ವಾತಂತ್ರ್ಯಕ್ಕೆ ಭಂಗವೇನೂ ಬರದು; ಏಕೆಂದರೆ ಅವನು ಕವಿಗೆ ಅನ್ವಯಿಸುವ ನಿಯಮವು ಕವಿಯ ಪ್ರತಿಭೆಯಿಂದಲೇ ಒಪ್ಪಿಗೆ ಪಡೆದಿದೆ.

ಈ ಒಳನಿಯಮವನ್ನು ಕಂಡುಹಿಡಿಯುವುದು ಸುಲಭವಲ್ಲ. ಕವಿಯ ಮನೆತನ, ಓದುಗಾರಿಕೆ, ಕಾಲದ ಪರಿಸ್ಥಿತಿ ಮತ್ತು ಸಂಪ್ರದಾಯ, ಇವೆಲ್ಲದರಿಂದಲೂ ಲಬ್ಧವಾದ ಅವನ ವ್ಯಕ್ತಿತ್ವ, ಕಾವ್ಯದ ಮೂಲ ಮತ್ತು ಪೂರ್ವೇತಿಹಾಸ, ಅವನ ಇತರ ಕಾವ್ಯಗಳು,— ಇವೆಲ್ಲಕ್ಕೂ ಗಮನಕೊಟ್ಟು, ಆ ಗ್ರಂಥವನ್ನು ಅದೇ ಜಾತಿಯ ಇತರ ಗ್ರಂಥಗಳೊಡನೆ ಹೋಲಿಸಿ ನೋಡಬೇಕು. ಇಷ್ಟು ಮಾಡಿದರೂ

ವಿಮರ್ಶಕನ ಕೆಲಸ ಮುಗಿಯುವುದಿಲ್ಲ. ಈ ಬಗೆಯ ಅಧ್ಯಯನದಿಂದ ಆ ಕಾವ್ಯದ ಹಿನ್ನೆಲೆಯನ್ನು ಮಾತ್ರ ತಿಳಿದಂತಾಯಿತು; "ಈ ಕಾವ್ಯ ಹೀಗೆ ಬೆಳೆಯಲು ಕಾರಣವೇನು?" ಎಂಬ ಪ್ರಶ್ನೆಗೆ ಉತ್ತರ ಪಡೆದಂತಾಯಿತು. "ಈ ಕಾವ್ಯದ ಬೆಲೆಯೇನು?" ಎನ್ನುವುದು ಬೇರೆ ಪ್ರಶ್ನೆ. ಅದಕ್ಕೆ ಉತ್ತರ ದೊರೆಯಬೇಕಾದರೆ ಕಾವ್ಯವನ್ನು ಐತಿಹಾಸಿಕ ಅಥವಾ ತುಲನ ದೃಷ್ಟಿಯಿಂದ ಮಾತ್ರ ನೋಡಿದರೆ ಸಾಲದು. ಐತಿಹಾಸಿಕ ದೃಷ್ಟಿಯಿಂದ ಕೀಳುದರ್ಜೆಯ ಕಾವ್ಯವೂ ಬಹಳ ಪರಿಣಾಮಕಾರಿಯಾಗಿರಬಹುದು, ತುಲನ ದೃಷ್ಟಿಯಿಂದ ಒಂದು ಕಾವ್ಯ ಮತ್ತೊಂದ ಕ್ಕಿಂತ ಉತ್ತಮವಾಗಿರಬಹುದು. ಈ ದೃಷ್ಟಿಗಳು ಆವಶ್ಯಕವಾದರೂ ಕಾವ್ಯದ ನಿಜವಾದ ಬೆಲೆಯ ನಿರ್ಣಯಕ್ಕೆ ಸಹಾಯಕವಾಗುವುದು ಮುಖ್ಯವಾಗಿ ನಮ್ಮ ಮುಂದಿರುವ ಕಾವ್ಯದ ಅಧ್ಯಯನವೇ. ಉತ್ತಮ ವಿಮರ್ಶೆಯಲ್ಲಿ ಐತಿಹಾಸಿಕ ದೃಷ್ಟಿ, ತುಲನ ದೃಷ್ಟಿ, ಕಾವ್ಯದ ಅನುಭವ, ಸಾಹಿತ್ಯ ವಿಷಯದಲ್ಲಿ ವಿಮರ್ಶಕನ ಸ್ವಂತ ಮತ— ಇವೆಲ್ಲವೂ ಮಿಳಿತವಾಗುತ್ತವೆ. ವಿಮರ್ಶೆಯೆಂದರೆ ಕೇವಲ ಒಂದು ಆಶ್ಚರ್ಯ ಚಿಹ್ನೆಯಲ್ಲ, ಕಣ್ಣೀರು ಬಿಡುವುದಲ್ಲ; ಅದಕ್ಕೂ ಒಂದು ಬಗೆಯ ದಿವ್ಯದೃಷ್ಟಿ ಬೇಕು.

ಎಂಥ ಉದ್ದಾಮ ಕವಿಗಳಾಗಲಿ, ಸಾಹಿತ್ಯಾಚಾರ್ಯರಾಗಲಿ, ಅವರನ್ನೂ ಈ ರೀತಿಯ ವಿಮರ್ಶೆಗೆ ಒಳಪಡಿಸಲೇಬೇಕು; ಇಲ್ಲದಿದ್ದರೆ ಅವರಿಂದ ನಾವು ಪೂರ್ಣಪ್ರಯೋಜನವನ್ನು ಪಡೆಯಲಾರೆವು. ಅಂಥವರ ಗೊಡವೆಗೆ ಹೋಗ ಬೇಕಾದರೆ ವಿಮರ್ಶಕನು ಮರ್ಯಾದೆಯಿಂದಲೂ ನಮ್ರತೆಯಿಂದಲೂ ವರ್ತಿಸ ಬೇಕೆನ್ನುವುದು ನಿಜ. ಆದರೆ ಆ ಮಹಾಪುರುಷರು ಘನತೆಗೇರಿರುವುದು ವಿಮರ್ಶೆಗೆ ಹೆದರಿ ದೂರ ನಿಲ್ಲುವುದರಿಂದಲ್ಲ; ಎಂಥ ತೀಕ್ಷ್ಣ ದೃಷ್ಟಿಯ ವಿಮರ್ಶೆಯನ್ನಾದರೂ ಎದುರಿಸಿ ನಿಲ್ಲುವ ಶಕ್ತಿ ಅವರಲ್ಲಿರುವುದರಿಂದ. ಕವಿಯ ಔನ್ನತ್ಯಕ್ಕೆ ತಕ್ಕಂತೆ ಅವನು ವಿಮರ್ಶಕನನ್ನು ಆಕರ್ಷಿಸುತ್ತಾನೆ. ವಿಮರ್ಶಕರನ್ನು ಪದೇ ಪದೇ ಆಕರ್ಷಿಸುವ ಶಕ್ತಿಯಿದ್ದರೆ ಗ್ರಂಥದ ಔನ್ನತ್ಯಕ್ಕೆ ಅದೇ ಒಂದು ಸಾಕ್ಷಿಯೆನ್ನಬಹುದು.

ತಮ್ಮ ಜೀವನವನ್ನೆಲ್ಲಾ ಸಾಹಿತ್ಯದ ಅಧ್ಯಯನದಲ್ಲಿ ಕಳೆದು, ತಮ್ಮದೇ ಆದ ಒಂದು ನಿಷ್ಕೃಷ್ಟ ಜ್ಞಾನವನ್ನು ಪಡೆದು, ಹೊಸಬಗೆಯ ಸಾಹಿತ್ಯವನ್ನೂ ಸ್ವಾಗತಿಸುವಷ್ಟು ದೃಷ್ಟಿವೈಶಾಲ್ಯವನ್ನು ಹೊಂದಿ ಕವಿಯ ಪ್ರತಿಭೆಯೊಂದಿಗೆ ತಮ್ಮ ಪ್ರತಿಭೆಯನ್ನು ಬೆರಸಿ, ವಿಮರ್ಶೆಯನ್ನು ಸಾಹಿತ್ಯವಾಗಿ ಮಾರ್ಪಡಿಸುವ ಶಕ್ತಿಯಿರುವವರು ಬಹಳ ವಿರಳ. ಆದರೆ ಆ ಶಕ್ತಿಯನ್ನು ಪಡೆಯುವುದೇ ವಿಮರ್ಶಕನ ಗುರಿ.

**ಎ. ಎನ್. ಮೂರ್ತಿರಾವ್**

# ಲಿರಿಕಲ್ ಬ್ಯಾಲಡ್ಸ್

ಹತ್ತೊಂಬತ್ತನೆಯ ಶತಮಾನದ ಮೊದಲಲ್ಲಿ ಇಂಗ್ಲಿಷ್ ಸಾಹಿತ್ಯದಲ್ಲಿ ಒಂದು ಕ್ರಾಂತಿಯಾಯಿತೆಂದು ಹೇಳುವುದುಂಟು. ಕ್ರಾಂತಿಯಾದುದು ಸಾವಿರದ ಏಳನೂರು ತೊಂಬತ್ತೆಂಟರಲ್ಲಿ, 'ಲಿರಿಕಲ್ ಬ್ಯಾಲಡ್ಸ್' ಎಂಬ ಕವನಸಂಕಲನ ಪ್ರಕಟವಾದಾಗ. ಈ ಕವನ ಸಂಗ್ರಹದಲ್ಲಿ ಕಂಡುಬಂದ ಬದಲಾವಣೆಗಳು ಹಲವು ವರುಷಗಳಿಂದ ಗೋಲ್ಡ್‌ಸ್ಮಿತ್, ಕೂಪರ್, ಕ್ರ್ಯಾಬ್, ಬರ್ನ್ಸ್ ಕವಿಗಳಲ್ಲಿ ಅಲ್ಪಸ್ವಲ್ಪ ಕಂಡುಬರುತ್ತಿದ್ದವಾದರೂ ಲಿರಿಕಲ್ ಬ್ಯಾಲಡ್ಸ್‌ನಲ್ಲಿ ಕವನದ ವಿಷಯ, ಭಾಷೆ, ಶೈಲಿ, ಕವಿದೃಷ್ಟಿ, ಜೀವನದರ್ಶನ— ಎಲ್ಲವೂ ಬೇರೆಯಾಗಿವೆ. ದೃಷ್ಟಿಯಲ್ಲಿ ಆ ಭೇದ ವನ್ನು ಉಂಟುಮಾಡಿದವರು ವರ್ಡ್ಸ್‌ವರ್ತ್ ಮತ್ತು ಕೋಲ್‌ರಿಜ್. ಈ ಬದಲಾ ವಣೆಗೆ ತಾತ್ಕಾಲಿಕವಾಗಿ ಸ್ಫೂರ್ತಿಕೊಟ್ಟದ್ದು ಫ್ರಾನ್ಸಿನ ರಾಜಕೀಯ ಸಾಮಾಜಿಕ ರಂಗಗಳಲ್ಲಿ ನಡೆದ ಮಹಾಕ್ರಾಂತಿ. ಮಾನವರು ಸಮಾನರು, ಸೋದರರು, ಅವರಿಗೆ ಸ್ವತಂತ್ರರಾಗಿರುವ ಹಕ್ಕಿದೆ. ಪ್ರತಿ ವ್ಯಕ್ತಿಗೂ ಬೆಲೆ ಉಂಟು, ಗೌರವ ಉಂಟು, ಎಂಬವು ಕ್ರಾಂತಿಯ ತತ್ವಗಳಲ್ಲಿ ಮುಖ್ಯ.

ಫ್ರಾನ್ಸಿನಲ್ಲಿ ಉಂಟಾದ ಕ್ರಾಂತಿಯ ತತ್ವಗಳು ಜನರ ಮನಸ್ಸಿನಲ್ಲಿ ಆ ಹೊತ್ತಿಗೇ ನೆಲಸಿದ್ದು ಮಾನವನ ಆತ್ಮ ಅವಕ್ಕಾಗಿ ಹಂಬಲಿಸುತ್ತಿದ್ದುದರಿಂದ ಸಾಹಿತ್ಯದಲ್ಲಿ ಈ ಮುಂದೆ ಹೇಳುವ ಭಾವನೆಗಳು ಬಹುವಾಗಿ ಪ್ರಕಾಶಗೊಂಡುವು: ದೇಶವಾತ್ಸಲ್ಯಕ್ಕಿಂತ ದೊಡ್ಡದಾದ ಮಾನವಪ್ರೇಮ; ಸೋದರಿಕೆ; ಸ್ವಾತಂತ್ರ್ಯಕ್ಕೆ ಪಕ್ಷಪಾತ; ಅಧಿಕಾರದರ್ಪಕ್ಕೆ ವಿರೋಧ. ನಾಗರಿಕ ಮನುಷ್ಯನನ್ನು ಬಿಟ್ಟು ಹಳ್ಳಿ ಗಾಡುಗಳಲ್ಲಿರುವವರನ್ನೂ ಅವರ ಗುಣಶೀಲಗಳನ್ನೂ ಶ್ಲಾಘಿಸಿ ಹಳ್ಳಿಯನ್ನು ಪ್ರೀತಿಸುವುದರ ಮೂಲಕವಾಗಿ 'ಪ್ರಕೃತಿಗೆ ಹಿಂದಿರುಗಿ' ಎಂಬ ಕೂಗು ಎಲ್ಲೆಲ್ಲೂ ಕೇಳಿಸುತ್ತಿತ್ತು. ಅದರ ಪರಿಣಾಮವಾಗಿ ಪ್ರಕೃತಿಯ ಸುಂದರ ಮತ್ತು ಘೋರ ದೃಶ್ಯಗಳ ಪ್ರೀತಿ ಹುಟ್ಟಿತ್ತು. ಸ್ವಾಭಾವಿಕ ಜೀವನ, ಭಾಷೆ, ಭಾವ ರಾಗಗಳ ಗಾನಮಾಡಿ ಅವುಗಳ ಪ್ರಚಾರಮಾಡಿದವನು ರೂಸೊ. ಪ್ರಕೃತಿಯಿಂದಲೇ ನೇರವಾಗಿ ಶಿಕ್ಷಣ ಪಡೆಯಬಹುದು ಎಂದು ರೂಸೊ ಹೇಳಿದ ಮಾತನ್ನು ಕೆಲವರು ಅಂಗೀಕರಿಸಿದರು. ಪ್ರಕೃತಿಯ ಮಗುವಾಗಿ ಜೀವಿಸುವ ಮನುಷ್ಯನು ಪರಿಪೂರ್ಣನು ಎಂದು ಆತನು ಹೇಳಿದ ಮಾತನ್ನು ಹಲವರು ಪೂರ್ತಿ ಅನುಮೋದಿಸಿದರು. ಪ್ರಕೃತಿಯ ಒಂದು ಮುಖ್ಯಾಂಶ ಮನುಷ್ಯ. ಆದ್ದರಿಂದ ಮನುಷ್ಯಪ್ರಕೃತಿಯನ್ನು ಕುರಿತೇ ಹೇಳುವಾಗ ವ್ಯಕ್ತಿಜೀವನದ ಆಳಗಳನ್ನೂ ಅಚ್ಚರಿಗಳನ್ನೂ ಅರಿಯುವುದು ಅಗತ್ಯ ಎಂಬ ತಿಳಿವಳಿಕೆ ಬಂದಿತು. ಗಲಭೆಯಿಲ್ಲದೆ ಪ್ರಕೃತಿಯ ಆವರಣದಲ್ಲಿ ದಿನದಿನದ ಜೀವನವನ್ನು ನಡಸುತ್ತಿರುವ ಸಾಮಾನ್ಯ ಜನದಲ್ಲಿ ಕಾಣಲಾಗದ ಹಿರಿಮೆಯೇ ಇಲ್ಲ, ಅಲ್ಲಿ ಅಸಾಧಾರಣ ಸೌಂದರ್ಯ ತುಂಬಿದೆ ಎಂಬುದು ಜೊತೆಗೆ ಪ್ರಚಾರವಾಯಿತು. ಲಿರಿಕಲ್ ಬ್ಯಾಲಡ್ಸ್‌ನಲ್ಲಿ ಈ ತತ್ವಗಳ ಸ್ವರೂಪದರ್ಶನ ವಾಗುವುದು.

ಇಂಗ್ಲಿಷ್ ಸಾಹಿತ್ಯದಲ್ಲಿ ಸುಮಾರು ನೂರು ವರ್ಷಗಳ ಕಾಲ ಒಂದು ಬಗೆಯ ಅನೈಸರ್ಗಿಕತೆ ಹಬ್ಬಿತ್ತು. ಕವಿತೆಗೆ ವಿಷಯವನ್ನು ಆರಿಸಿಕೊಳ್ಳುವುದರಲ್ಲಿಯೂ ಜೀವನಚಿತ್ರಗಳಲ್ಲಿಯೂ ಉಕ್ತಿ ರೀತಿ ಅಲಂಕಾರಗಳಲ್ಲಿಯೂ ಬಹುಮಟ್ಟಿನ ಕೃತಕತೆ ಇತ್ತು. ಸಾಹಿತ್ಯದಲ್ಲಿ ಪ್ರತಿಭೆ, ಸಹಜತೆ, ತೀವ್ರವಾದ ರಾಗಭಾವಗಳ ಅಭಿವ್ಯಕ್ತಿ—ಇವಕ್ಕಿಂತಲೂ ನಿಯಮನಿಷ್ಠೆ, ಕವಿಸಮಯ ಪಾಲನೆ, ಹೊರನುಣುಪು, ಚಮತ್ಕಾರ, ಬುದ್ಧಿಯ ಬೆಡಗು, ಸುತ್ತಲ ಪ್ರಪಂಚದ ಈಕ್ಷಣದಿಂದ ಬರುವುದಕ್ಕಿಂತ ಹೆಚ್ಚಾಗಿ ಪುಸ್ತಕವ್ಯಾಸಂಗದಿಂದ ಪಡೆದ ತಿಳಿವು—ಇವಕ್ಕೆ ಹೆಚ್ಚಾಗಿ ಮನ್ನಣೆ ಇತ್ತು. ಅನುಕರಣ ಅಭ್ಯಾಸಗಳಿಂದ ಬಂದ ತಿಳಿವಳಿಕೆಗೂ—ಕುಮರುವ ಬರವಣಿಗೆಗೂ ಮೆಚ್ಚುಗೆ ಇತ್ತು. ಪುರಾತನ ಗ್ರೀಕ್, ಲ್ಯಾಟಿನ್ ಕವಿಗಳನ್ನು ವ್ಯಾಸಂಗಮಾಡಿ ಅವರ ರೀತಿ ಗುಣಗಳನ್ನುಕಂಡುಕೊಳ್ಳತಕ್ಕದ್ದೆಂಬುದೇ ವಾದ. ಅವರು ಆದರ್ಶರಾದರೆ ಆ ಮಾರ್ಗಕ್ಕೆ ಶರಣಾಗಬೇಕು, ಶಿಸ್ತಿಗೆ ಪ್ರಾಧಾನ್ಯಕೊಡಬೇಕು ಅಲ್ಲವೆ? ವಿಷಯ ಯಾವುದೇ ಆಗಲಿ ಸಾಣೆಹಿಡಿದು ಹೊಳಪುಕೊಟ್ಟಮಾತು, ಗಂಭೀರವಾದ ಛಂದೋ ವೃತ್ತ ಅಗತ್ಯ; ದಿನದಿನದ ಬಳಕೆಯ ಮಾತಿನಿಂದ ಶೈಥಿಲ್ಯ ಉಂಟಾಗುವುದು; ಛಂದಸ್ಸಿನ ಬಿಗಿ ತಪ್ಪಿ ಕವಿತೆ ಸಾಮಾನ್ಯವಾದೀತು; ನಾಗರಿಕ ಮರ್ಯಾದೆ ಮತ್ತು ಸಂಪ್ರದಾಯವೊಪ್ಪುವ ಅಭಿರುಚಿ ಕಟ್ಟುಗಳೇ ಮೇಲು; ಉಳಿದುದು ಗ್ರಾಮ್ಯ, ಅಶ್ಲೀಲ; ಹಿಡಿತ, ನಿಯಮ, ಸಮತೆ, ನುಣುಪು, ವಿವೇಕ, ಯುಕ್ತಿ, ಚಮತ್ಕಾರ, ತತ್ವವಿಮರ್ಶೆ, ಎಲ್ಲ ಕಾಲಕ್ಕೂ ಒಪ್ಪುವ ನಿರ್ವಿಶೇಷವಾದ ಧರ್ಮಗಳು—ಇವುಗಳಿಗೆ ಹೆಚ್ಚು ಬೆಲೆ ಬಂದು ಅನುಭವಕ್ಕಿಂತ ಉಕ್ತಿವಿಶೇಷಕ್ಕೆ ಬೆಲೆ ಉಂಟಾಗಿ ಇನ್ನೇನು ಕವಿತೆ ಬರಡಾಗುವ ಗತಿಗೆ ಬಂದಿತ್ತು. ಅಲ್ಲಲ್ಲಿ ಸ್ವಲ್ಪ ಸ್ವಲ್ಪವಾಗಿ ಹುಟ್ಟಿ ತೋರುತ್ತಿದ್ದ ಹೊಸ ಸ್ವಾತಂತ್ರ್ಯದ ಮಹಾನಿಕೇತನದಂತೆ ಹುಟ್ಟಿತು 'ಲಿರಿಕಲ್ ಬ್ಯಾಲಡ್ಸ್'.* ಕಾಲಮಹಿಮೆ ಒಂದು ಕಡೆ; ರೂಸೊ ದಾರ್ಶನಿಕನ ತತ್ವಬೋಧೆಯಲ್ಲಿ ಅಡಗಿದ್ದ ವ್ಯಕ್ತಿಸ್ವಾತಂತ್ರ್ಯವಾದ ಮತ್ತು ಪ್ರಕೃತಿಗೆ ಹಿಂದಿರುಗು ಎಂಬ ಕರೆ ಒಂದು ಕಡೆ; ಪರ್ಸಿ ಮುಂತಾದವರು ಸಂಗ್ರಹಿಸಿದ್ದ ಜನಪದ ಗೀತೆಗಳ ಸೊಗಸು ಸಹಜತೆಗಳ ಮೋಹಕತೆ ಒಂದು ಕಡೆ; ಚರಿತ್ರೆಯ ವ್ಯಾಸಂಗದಲ್ಲಿ ಆಸಕ್ತಿ ಹುಟ್ಟಿ ದೂರದ ದೇಶಕಾಲಗಳ ಸಂಗತಿಗಳಲ್ಲಿ ಒಮ್ಮೆಗೇ ಹುಟ್ಟಿದ ಕುತೂಹಲ ಒಂದು ಕಡೆ; ವರ್ಡ್ಸ್‌ವರ್ತ್‌ನ ಜೀವನದರ್ಶನ ಅಂತಃಪ್ರವೃತ್ತಿಗಳೊಂದು ಕಡೆ; ಆತನಮೇಲೆ ಬಿದ್ದ ಗೆಳೆಯ ಕೋಲ್‌ರಿಜ್, ತಂಗಿ ಡೋರೊತಿಯರ ಪ್ರಭಾವ ಒಂದು ಕಡೆ; ಅತಿಶಯ ಸೂಕ್ಷ್ಮಾಂತಃಕರಣಗಳುಳ್ಳ ಇಂಥ ಮೂವರ ಆಪ್ತವಾದ ಕೆಳೆಜೀವನದ ಸ್ಫೂರ್ತಿ ಒಂದು ಕಡೆ; ಜರ್ಮನಿಯಲ್ಲಿ ಸಂಚಾರ, ಜರ್ಮನ್ ತತ್ವದರ್ಶಿಗಳ ಉಪದೇಶ ಪ್ರಭಾವ ಒಂದು ಕಡೆ ಕವಿ ಮನಸ್ಸನ್ನು ಕೆರಳಿಸುತ್ತಿದ್ದುವು, ಕಲಕಿದ್ದುವು. ಸುತ್ತಲ ಅಶಾಂತಿ ನಿರಾಶೆಗಳ ಆವರಣದಲ್ಲಿ ವರ್ಡ್ಸ್‌ವರ್ತ್ ತೋರಿಸಿದ ಚಿತ್ತಶಾಂತಿಯ ಮಾರ್ಗ ಹೃದಯದ ಗಾಯಗಳನ್ನು ಮಾಯುವಂತೆ ಮಾಡಿತು. ಒಂದು ಹೊಸ ಸಹಜತೆ ಎಲ್ಲ ಜೀವದ ಆಳದಲ್ಲಿಯೂ ಅಡಗಿರುವ ಸೃಷ್ಟಿವೈಚಿತ್ರ್ಯ ರಹಸ್ಯಗಳನ್ನು ಅರಿಯಬೇಕೆಂಬ ಆಸಕ್ತಿಯನ್ನು ಹುಟ್ಟಿಸಿತು. ಕಣ್ಣು ಕಿವಿಗಳಿಗೆ ಗೋಚರವಾಗುವ

* ಇದರಲ್ಲಿ ಇರುವ ಒಟ್ಟು ಕವಿತೆಗಳು ೨೩.

ಸೌಂದರ್ಯದಲ್ಲಿ ಮುಳುಗಿ ಪ್ರಪಂಚದ ಮರ್ಮವನ್ನು ಅರಿತು ತೀವ್ರಾನುಭವ ಉಂಟುಮಾಡಿಕೊಳ್ಳುವುದು ಅಗತ್ಯ ಎಂಬುದಕ್ಕೆ ಒಲಿಯಿತು. ಎಲ್ಲರಿಗೂ ಸಾಮಾನ್ಯವಾದ ಗುಣಗಳಲ್ಲ ಮುಖ್ಯ; ಪ್ರತಿವ್ಯಕ್ತಿಯ ಹೃದಯವನ್ನೂ ಹೊಕ್ಕು ಕಾಣಬೇಕು; ಆಗಲೆಯೇ ಮನುಷ್ಯನ ಮೂಲಪ್ರವೃತ್ತಿ ಅರ್ಥವಾದೀತು; ವಿಷಯ ಎಷ್ಟು ಸಾಧಾರಣವಾದರೂ ಚಿಂತೆಯಿಲ್ಲ; ಅತಿ ಅಲ್ಪವೆನ್ನುವುದರ ಒಡಲಲ್ಲಿಯೂ ಆಳದಲ್ಲಿಯೂ ಅಸಾಮಾನ್ಯತೆ, ದಿವ್ಯತೆ ಗೋಚರವಾದಾವು; ಕಣ್ಣು ತೆರೆದು ನೋಡಿ, ಕಿವಿದೆರೆದು ಕೇಳಿ,* ಹೃದಯ ತೆರೆದು ಅನುಭವಿಸಿ, ಬಗೆದೆರೆದು ಅರ್ಥ ಮಾಡಿಕೊಳ್ಳಿ; ಅಲ್ಪವೆನ್ನುವ ಸಾಮಾನ್ಯವೆನ್ನುವುದರ ಅಂತರಾಳದಲ್ಲಿ ಕೂಡ ವ್ಯಾಪಿಸಿರುವ ಅಚ್ಚರಿ ಸೌಂದರ್ಯಗಳು ಆಗ ವೇದ್ಯವಾಗುವುವು; ಈ ಅಚ್ಚರಿಯನ್ನು ಕಳೆದುಕೊಂಡು ಒಣಬುದ್ಧಿಗೆ ಪ್ರಾಮುಖ್ಯತೆ ಕೊಟ್ಟು ನಾವು ಮನಸ್ಸನ್ನು ಮರಮಾಡಿದ್ದೇವೆ; ಬದುಕಿಗೆ ಅನ್ಯಾಯಮಾಡಿದ್ದೇವೆ; ಸಾಮಾನ್ಯ ಜನರ ನಡತೆ, ಆವೇಗಗಳಲ್ಲಿ ಅವರು ಬಳಸುವ ನುಡಿ ಇವುಗಳಲ್ಲಿ ಕಾವಿದೆ, ಕಾವ್ಯತೆಯಿದೆ; ನಾಗರಿಕತೆಯ ಸೋಂಕು ಬೀಳದೆ ಇರುವ ಹಳ್ಳಿಯಲ್ಲಿ ಗುಡಿಸಿಲಲ್ಲಿ ರೈತರಲ್ಲಿ ಬಡವರ ದಿನಜೀವನದಲ್ಲಿ ಕಾಣುವ ಸೌಂದರ್ಯ ಅತ್ಯಸಾಧಾರಣವಾದ್ದು; ಮನುಷ್ಯರ ಮೂಲ ಪ್ರವೃತ್ತಿಗಳನ್ನು ಹೆಚ್ಚು ಶುದ್ಧವಾಗಿ ತೋರಿಸತಕ್ಕದ್ದು; ಆ ಕಡೆ ನೋಡಿ; ಮನನಮಾಡಿ; ಹೊರಗಣ್ಣಿಂದ ಬಗೆಗಣ್ಣಿಗೆ, ಬಗೆಗಣ್ಣಿಂದ ತತ್ತ್ವಸಂಗ್ರಹಕ್ಕೆ, ಅಲ್ಲಿಂದ ಮಹಾನುಭೂತಿಗೆ ಅವಕಾಶವಾಗುವುದು; ಮಾತಿನಲ್ಲಾಗಲಿ ರೀತಿಯಲ್ಲಾಗಲಿ ಕೃತಕತೆ ಬೇಡ; ಕಂಡಹಾಗೆ ಸ್ವಭಾವಕ್ಕೆ ತಕ್ಕಂತೆ ವರ್ಣಿಸಿ—ಎಂಬ ತತ್ತ್ವ ಲಿರಿಕಲ್ ಬ್ಯಾಲಡ್ಸಿನ ಪ್ರಭಾವದಿಂದ ನೇರವಾಗಿ, ಪರೋಕ್ಷವಾಗಿ ಇಂಗ್ಲಿಷ್ ಸಾಹಿತ್ಯಕ್ಕೆ ಬಂದಿತು.

ವರ್ಡ್ಸ್‌ವರ್ತ್ ಮತ್ತು ಕೋಲ್‌ರಿಜ್ ಇಬ್ಬರೂ ಸೇರಿ ಹೊಸ ಬಗೆಯ ಕಾವ್ಯವನ್ನು ರಚಿಸುವ ನಿಶ್ಚಯಕ್ಕೆ ಬಂದ ವಿವರವನ್ನು ಕೋಲ್‌ರಿಜ್ ಹೀಗೆ ಹೇಳಿದ್ದಾನೆ: † "ಎರಡು ಬಗೆಯ ಕವನಗಳನ್ನು ರಚಿಸಬಹುದೆಂಬ ಯೋಚನೆ ನಮಗೆ ಹೊಳೆಯಿತು. ಯಾರಿಗೆ ಹೊಳೆಯಿತೊ ನೆನಪಿಲ್ಲ. ಒಂದರಲ್ಲಿ, ಕಡೆಯ ಪಕ್ಷ ಸ್ವಲ್ಪವಾದರೂ, ಘಟನೆಗಳೂ ಪಾತ್ರಗಳೂ ಅತಿಮಾನುಷವಾಗಿರಬೇಕು; ಇಂಥ ಸನ್ನಿವೇಶಗಳನ್ನು ವಾಸ್ತವವೆಂದು ಭಾವಿಸಿ ಅವುಗಳೊಡನೆ ಸಹಜವಾಗಿ ಹುಟ್ಟುವ ಭಾವಗಳ ಮನಮುಟ್ಟುವ ಸತ್ಯತೆಯ ಮೂಲಕ ನಮ್ಮ ರಾಗಗಳನ್ನು ಉದ್ರೇಕಗೊಳಿಸುವುದೇ ಕವನಗಳ ಶ್ರೇಷ್ಠ ಗುರಿ; ಯಾವ ಬಗೆಯ ಭ್ರಾಂತಿಯ ಮೂಲಕವಾಗಿಯೇ ಆಗಲಿ ಅತಿಮಾನುಷವೊಂದು ಇದೆಯೆಂದು ನಂಬುವವರಿಗೆ ಈ ಸನ್ನಿವೇಶಗಳು ವಾಸ್ತವವೇ ಎಂಬುದು ಬಗೆ. ಎರಡನೆಯ ಬಗೆಯ ಕವನಗಳಿಗೆ ವಿಷಯಗಳನ್ನು ಆರಿಸಬೇಕಾದುದು ಸಾಮಾನ್ಯಜೀವನದಿಂದ; ಪ್ರತಿಹಳ್ಳಿಯಲ್ಲಿಯೂ ಹತ್ತಿರದಲ್ಲಿಯೂ ಕಾಣುವ ಪಾತ್ರಗಳನ್ನೂ ಸಂಗತಿಗಳನ್ನೂ ಆರಿಸಿಕೊಳ್ಳಬೇಕು;

---

* ಕಣ್ಣು, ಕಿವಿ, ಹೃದಯಗಳಿಗೆ ದೊರೆತ ಈ ಬಿಡುಗಡೆಯೇ ಲಿರಿಕಲ್ ಬ್ಯಾಲಡ್ಸಿನ ಸಾಹಸದ ಫಲ.

† ಕವಿಗಳಾದ ವರ್ಡ್ಸ್‌ವರ್ತ್, ಕೋಲರಿಜ್ ಇವರ ವ್ಯಕ್ತಿ ಪರಿಚಯವೂ ಕೆಳೆತನವೂ ಎಂಥವು? ಡೋರೊತಿ ಎಂಬ ವರ್ಡ್ಸ್‌ವರ್ತ್ ಕವಿಯ ತಂಗಿಯ ಪ್ರತಿಭಾಪೋಷಕವಾದ ಸಹಕಾರದಿಂದ ಕವಿತೆ ಹೇಗೆ ಹೊಮ್ಮಿತು? ಎಂಬುದನ್ನೂ ಈ ಸಂಬಂಧದಲ್ಲಿ ತಿಳಿಯಬೇಕು. ಅದರ ವರ್ಣನೆಗೆ ಇಲ್ಲಿ ಅವಕಾಶವಿಲ್ಲ.

ಆ ಸ್ಥಳಗಳಿಗೆ ಅವರನ್ನು ಹುಡುಕಿಕೊಂಡುಹೋಗುವಂಥ ಅಥವಾ ಇದ್ದೆಡೆಯಲ್ಲಿಯೇ ಅವರನ್ನು ಪರಿಶೀಲಿಸುವಂಥ ಅನುಕಂಪೆಯುಳ್ಳ ಆಲೋಚನಾಪರನಾದ ಕವಿ ಮಾತ್ರ ಬೇಕು" ಎಂಬುದು ಎಣಿಕೆ. ಒಂದನೆಯ ಬಗೆಯ ವಿಷಯಸಂಪತ್ತಿ ಮತ್ತು ನೋಟವುಳ್ಳ ಕಾವ್ಯಗಳ ಬರವಣಿಗೆಯನ್ನು ಕೋಲ್‌ರಿಜ್ ಕೈಕೊಂಡನು. ಎರಡನೆಯದನ್ನು ವರ್ಡ್ಸ್‌ವರ್ತ್ ಬರೆದನು. ಇವುಗಳಲ್ಲಿ ಇರುವ ಆದರ್ಶಕ್ಕೂ ಅತಿಮಾನುಷಕ್ಕೂ ಮಾನುಷಕ್ಕೂ ಇರುವ ಆಂತರಿಕ ಆಪ್ತತೆಗಳನ್ನು ಈ ಕವಿಗಳು ತೋರಿಸಿಕೊಟ್ಟರು.

ಈ ಕವನಸಂಗ್ರಹ ೧೭೯೮ರಲ್ಲಿ ಪ್ರಕಟವಾದರೂ ಅದನ್ನು ಬಹಳ ಮಂದಿ ಮೆಚ್ಚಲಿಲ್ಲ. ಹೊಸ ಕವನಗಳ ಭಾಷೆ, ಶೈಲಿ, ಭಾವನೆಗಳು, ಸಂಪ್ರದಾಯ ರೀತಿಯ ಕಾವ್ಯರಾಶಿಗಿಂತ ಭಿನ್ನವಾಗಿದ್ದುದರಿಂದ ಅವನ್ನು ಜನ ಮೊದಲು ಮೆಚ್ಚಲಿಲ್ಲ. ಕೆಲವನ್ನು ಅಣಕವಾಡಿದುದೂ ಉಂಟು. ಮಿತ್ರರ ಕೋರಿಕೆಯ ಮೇರೆಗೆ ಅವುಗಳ ವಸ್ತು, ರೀತಿ, ಶೈಲಿ, ಭಾಷೆ, ಸುಧಾರಣೆಗಳ ಉದ್ದೇಶ—ಇವನ್ನು ವಿವರಿಸುವ ಮುನ್ನುಡಿಯೊಂದನ್ನು ೧೮೦೦ರಲ್ಲಿ ಅಚ್ಚಾದ ಲಿರಿಕಲ್ ಬ್ಯಾಲಡ್ಸ್ ಸಂಗಡ ವರ್ಡ್ಸ್‌ವರ್ತ್ ಅಚ್ಚುಹಾಕಿದನು. ಇಂಗ್ಲಿಷ್ ಕಾವ್ಯದ ಚರಿತ್ರೆಯಲ್ಲಿ ಈ ಮುನ್ನುಡಿಗೆ ಬಹಳ ಪ್ರಾಶಸ್ತ್ಯವುಂಟು; ಕಾವ್ಯದಲ್ಲಿ ಹೊಸ ಮತವನ್ನು ಸ್ಥಾಪಿಸಿದುದು ಈ ಪ್ರಾಶಸ್ತ್ಯಕ್ಕೆ ಒಂದು ಕಾರಣವಾದರೆ ಹಳೆಯ ಪದ್ಧತಿಯನ್ನು ತೊಡೆದು ಹಾಕಿದುದು ಇನ್ನೂ ಮುಖ್ಯವಾದ ಸಂಗತಿಯಾಯಿತು.

ಕವಿಯೆಂದರೆ ಯಾರು? ಆತನ ಕಲ್ಪನೆ ಹೇಗೆ ಕೆಲಸಮಾಡುವುದು? ತನ್ನ ಕೃತಿ ಹುಟ್ಟುವ ರೀತಿ, ಸಂದರ್ಭ ಎಂಥವು? ತಾನು ಯಾವ ಬಗೆಯ ಪರೀಕ್ಷಾ ಪ್ರಯತ್ನಮಾಡಲು ಈ ಗೀತೆಗಳಲ್ಲಿ ತೊಡಗಿದ್ದಾನೆ? ವಿಷಯ, ಭಾಷೆಗಳನ್ನು ಸಾಮಾನ್ಯ ಜೀವನದಿಂದ ಹಾಗೆ ಆರಿಸಿಕೊಂಡಿರಲು ಕಾರಣಗಳು ಯಾವುವು? ಸಹಜತೆಯೆನ್ನುತ್ತ ಸಾಮಾನ್ಯ ಜೀವನದಲ್ಲಿನ ನೇರವಾದ ನುಡಿಗಳನ್ನೇ ಉಪಯೋಗಿಸಬೇಕೆನ್ನುತ್ತ ಇದ್ದರೂ ಛಂದಸ್ಸನ್ನು ಏಕೆ ಉಪಯೋಗಿಸಿಕೊಂಡಿದ್ದಾನೆ? ಒಟ್ಟಿನಲ್ಲಿ ಅಲ್ಲಿನ ಕೃತಿಗಳನ್ನು ಯಾವ ದೃಷ್ಟಿಯಿಂದ ನೋಡಿ ಸ್ವೀಕರಿಸಿ ಆಸ್ವಾದಿಸಬೇಕು—ಎಂಬುದು ಮುನ್ನುಡಿಯ ವಿಷಯ.

ಕವಿಗೆ ಮುಖ್ಯವಾಗಿ ಬೇಕಾದ ಅಂಶಗಳನ್ನು ವಿವರಿಸುವುದರಲ್ಲಿ ತಾನು ಕಾವ್ಯ ನಿರ್ಮಾಣ ಮಾಡುವ ರೀತಿಯನ್ನು ವರ್ಡ್ಸ್‌ವರ್ತ್ ಹೇಳುವನು: ಮೊದಲು, ಒಂದು ಸನ್ನಿವೇಶದಲ್ಲಿ ಇಂದ್ರಿಯಗಳ ಅನುಭವದ ಮೂಲಕ ಭಾವಾವೇಶ ಉಂಟಾಗುವುದು. ಆ ಆವೇಶದಲ್ಲಿ ಅವನು ಪ್ರಕೃತಿಯನ್ನೂ ಇತರ ವಸ್ತುಗಳನ್ನೂ ಸಾವಧಾನವಾಗಿ ಅವಲೋಕಿಸುವನು. ಇದಾದಮೇಲೆ ಕೆಲವೊ ಹಲವೊ ವರ್ಷ ಕಳೆಯುವುವು. ವರ್ಷಗಳ ಸಂಗಡ ಮುಖ್ಯವಲ್ಲದ, ತಾತ್ಕಾಲಿಕವಾಗಿದ್ದ, ಕೀಳುಮಟ್ಟದ ಭಾವಗಳು ಹೋಗಿ ಸನ್ನಿವೇಶ ಅಥವಾ ಸಂಘಟನೆಗೆ ಸಂಬಂಧಿಸಿದ ಶುದ್ಧವೂ ನಿತ್ಯವೂ ಆದ ಭಾವಗಳೂ ದೃಶ್ಯಗಳೂ ಸಂಗತಿಗಳೂ ಮಾತ್ರ ಉಳಿಯುವುವು. ಸಮಾಧಾನದಲ್ಲಿ ಕುಳಿತು ಆ ಭಾವವನ್ನು ನೆನಪಿಗೆ ತಂದುಕೊಂಡು ಅದನ್ನು ಪುಷ್ಟಿಗೊಳಿಸುವುದು ಎರಡನೆಯ ಮೆಟ್ಟಲು. ಕಡೆಯದಾಗಿ, ಆ ಭಾವವು ಹೊರ ಇಂದ್ರಿಯಗಳ ಸಂಪರ್ಕವಿಲ್ಲದೆಯೇ ಮನಸ್ಸಿನಲ್ಲಿ ಭಾವಾವೇಶವನ್ನುಂಟುಮಾಡುವುದು. ಆವೇಶದಲ್ಲಿ ಕಂಡು

ಅನುಭವಿಸಿದುದು ಪ್ರತಿಭೆಯ ಅಂಕೆಗೆ ಒಳಪಟ್ಟು ಶುದ್ಧವಾಗುವುದು; ಸಂತೋಷ ಗೊಡುವಂತೆ ರೂಪುಗೊಳ್ಳುವುದು. ರೂಪುಗೊಂಡ ಈ ಅನುಭವದ ಪ್ರಕಾಶನವೇ, ಪ್ರವಾಹವೇ ಕವಿತೆ. ಪ್ರತಿಯೊಂದು ಕವನವೂ ಒಂದು ಉದ್ದೇಶದಿಂದ ಬರೆದುದು. ಒಳ್ಳೆಯ ಭಾವನೆಗಳನ್ನು ಪ್ರಚಾರಮಾಡುವುದು ಅದರ ಕೆಲಸ. ಕವಿಯು ಬೋಧಕ ಎಂಬುದು ವರ್ಡ್ಸ್‌ವರ್ತ್‌ನ ಮತ.

ಹಳ್ಳಿಯ ಸಾಮಾನ್ಯಜೀವನವನ್ನೇ ತಾನು ವಸ್ತುವಾಗಿ ಆರಿಸಿಕೊಂಡಿರುವುದಕ್ಕೆ ಕಾರಣಗಳನ್ನು ಕವಿ ಈ ರೀತಿ ಹೇಳುವನು: “ಹೃದಯಕ್ಕೆ ಸಂಬಂಧಿಸಿದ ಮುಖ್ಯವಾದ ತೀವ್ರರಾಗಗಳು ಪೂರ್ಣತೆಯನ್ನು ಹೊಂದುವುದಕ್ಕೆ ಉತ್ತಮವಾದ ಕ್ಷೇತ್ರ ಆ ಸ್ಥಿತಿಯಲ್ಲಿದೆ. ಅಲ್ಲಿ ನಿರ್ಬಂಧ ಅತಿ ಕಡಮೆ. ಭಾಷೆ ಹೆಚ್ಚು ನೇರ, ಹೆಚ್ಚು ಸ್ಪಷ್ಟ. ಜೀವನದ ಆ ಸ್ಥಿತಿಯಲ್ಲಿ ಮಾನವನ ಮೂಲಭಾವಗಳು ಹೆಚ್ಚು ಸರಳವಾಗಿರುವುವು. ಅವುಗಳನ್ನು ಹೆಚ್ಚು ಸೂಕ್ಷ್ಮವಾಗಿ ಧ್ಯಾನಿಸಬಹುದು. ಹೆಚ್ಚು ಶಕ್ತಿಯುತವಾಗಿ ಪ್ರಕಾಶಗೊಳಿಸಬಹುದು. ಹಳ್ಳಿಯ ಜೀವನದ ನಡೆ ನುಡಿಗಳು ಹುಟ್ಟುವುದು ಆ ಮೂಲಭಾವಗಳಿಂದಲೇ. ಆದ್ದರಿಂದ ಹಳ್ಳಿಗರ ಕೆಲಸ ಕಾರ್ಯಗಳ ತಾಳು ಬೇರುಗಳಲ್ಲಿರುವ ಸಹಜ ಭಾವಾವೇಶಕ್ಕೂ ಅಪ್ರಾಮಾಣಿಕವಲ್ಲದ ಇಂದ್ರಿಯಾನುಭವಕ್ಕೂ ಆವೇಶ ಶುದ್ಧಿಗೂ ಪುನಃಪ್ರಾಶಸ್ತ್ಯ ಬಂದಿತು. ಅದನ್ನು ತಂದು ಕೊಟ್ಟವನು ವರ್ಡ್ಸ್‌ವರ್ತ್. ಹೀಗೆ ಉತ್ತಮವಾದ ಹೊಸ ಬಗೆಯ ಕವನಗಳನ್ನು ಊಡಿದುದು ಮೊದಲ ಉಪಕಾರವಾದರೆ, ಆಳವಾದ ಹೊಸ ವಿವೇಚನೆಯಿಂದ ಕೂಡಿದ ಕಾವ್ಯಮೀಮಾಂಸೆಯನ್ನು ಕೊಟ್ಟ* ಆತನ ಈ ಮುನ್ನುಡಿಯ ಉಪಕಾರ ಅದನ್ನು ಮತ್ತಷ್ಟು ಹೆಚ್ಚಿಸುವಂಥುದಾಯಿತು.

‘ಲಿರಿಕಲ್ ಬ್ಯಾಲಡ್ಸ್’ನಲ್ಲಿ ಅತಿಮಾನುಷವನ್ನು ಸಹಜವಾಗಿಯೂ ಮಾನುಷಿಕವಾಗಿಯೂ ನಂಬಬಲ್ಲಂತೆ ತೋರಿಸುವ ಭಾಗ ಕೋಲ್‌ರಿಜ್‌ದೆಂದಿತಲ್ಲವೆ? ಅಂತಹ ಕವನ ಇಲ್ಲಿ ಇರುವುದು ‘ದಿ ರೈಮ್ ಆಫ್ ದಿ ಏನ್‌ಷೆಂಟ್ ಮ್ಯಾರಿನರ್’ ಒಂದೇ.— ಇಲ್ಲಿ ಅತಿಮಾನುಷ ವ್ಯಾಪಾರ ಬಹಳವಾಗಿದ್ದರೂ ಮಾನವ ಹೃದಯದ ಸ್ಥಿತಿಯನ್ನು ಬೇರೆ ಬೇರೆ ಸನ್ನಿವೇಶಗಳಲ್ಲಿ ವಿವರಿಸುವುದೇ ಕವಿಯ ಮುಖ್ಯ ಗುರಿ ಆಗಿದೆ. ‘ಏನ್‌ಷೆಂಟ್ ಮ್ಯಾರಿನರ್’ ಎಂದರೆ ಪುರಾತನ ನಾವಿಕನೆಂದರ್ಥ. ಸ್ಕಾಟ್ಲೆಂಡಿನ ಒಂದು ರೇವಿನಿಂದ ಅವನು ಸಮುದ್ರಯಾನ ಹೊರಟ. ಅವನಿಗೆ ಉಂಟಾದ ಅನುಭವ, ದಾರಿಯಲ್ಲಿನ ಘಟನೆಗಳು, ಅವುಗಳ ಪರಿಣಾಮವಾಗಿ ಆದ ಜೀವನ ಪರಿವರ್ತನ ಇವೇ ಕಾವ್ಯದಲ್ಲಿ ವರ್ಣಿತವಾಗಿರುವುದು.

ಹದಿನೆಂಟನೆಯ ಶತಮಾನದ ಕವಿಗಳು ಪ್ರಕೃತಿಯನ್ನು ಹಿನ್ನೆಲೆಯನ್ನಾಗಿಯೊ ಒಂದು ಬಗೆಯ ಅಲಂಕರಣವನ್ನಾಗಿಯೊ ವಿವರಿಸುತ್ತಿದ್ದರು. ಬಹು ವರ್ಷಗಳಾದ ಮೇಲೆ ಪ್ರಕೃತಿಯನ್ನು ಪುನಃ ಒಂದು ಹೊಸ ದೃಷ್ಟಿಯಿಂದ ನೋಡಿದವನು ವರ್ಡ್ಸ್‌ವರ್ತ್. ಅವನು ಕೀರ್ತಿವಂತನಾಗಿರುವುದು ಪ್ರಕೃತಿಯ ಕವಿಯೆಂದು.

---

* ಇಲ್ಲಿನ ತತ್ವವನ್ನೂ ಪ್ರಯೋಗವನ್ನೂ ಕುರಿತೇ ಕೋಲರಿಜ್ ಮುಂದಕ್ಕೆ ತನ್ನ ‘ಬಯೊಗ್ರಾಫಿಯಾ ಲಿಟರೇರಿಯಾದಲ್ಲಿ ಅತ್ಯುತ್ಕೃಷ್ಟವಾದ ಕಾವ್ಯ ವಿಮರ್ಶೆ ಬರೆದದ್ದು. ಆದ್ದರಿಂದ ಲಿರಿಕಲ್ ಬ್ಯಾಲಡ್ಸಿನ ದಾನ ಅಪಾರವಾಯಿತು.

ಆತನಿಗೆ ಪ್ರಕೃತಿ ಸಂಗಾತಿ, ಸ್ಫೂರ್ತಿಶಕ್ತಿ, ಶಾಂತಿದಾಯಿ, ಗುರು, ದೇವರ ಸಂಕೇತ, ದೇವಪ್ರತಿನಿಧಿ. ಈ ವಿಚಾರವಾಗಿ ಉದಾತ್ತಭಾವಗಳು ಅವನಿಗೆ ಒಂದೇ ಸಲಕ್ಕೆ ಬರಲಿಲ್ಲ. ಅವನಿಗೂ ಪ್ರಕೃತಿಗೂ ಇದ್ದ ಸಂಬಂಧವನ್ನು ಈ ಸಂಗ್ರಹದಲ್ಲಿ ಕೊನೆಯದಾದ 'ಟಿಂಟರ್ನ್ ಅ್ಯಬಿ' ಮುಂತಾದ ಕೆಲವು ಕವನಗಳಲ್ಲಿ ವಿವರಿಸಿರು ವನು. ಬಾಲ್ಯದಲ್ಲಿ ಆತನು ಪ್ರಕೃತಿಯ ಮಧ್ಯೆ ಇದ್ದುದು ನಿಜ. ಆಗ ಜಿಂಕೆ ಮೊಲ ಗಳಂತೆ ಮಾತ್ರವೇ ತಾನೂ ಇರುತ್ತಿದ್ದನು. ಆಗಿನ ಸಂತೋಷ ಕೇವಲ ಇಂದ್ರಿಯ ತೃಪ್ತಿ. ಪ್ರಕೃತಿ ರಹಸ್ಯಗಳ ಅಥವಾ ಪವಿತ್ರತೆಯ ಅರಿವು ಇರಲಿಲ್ಲ. ಯೌವನದಲ್ಲಿ ಪ್ರಕೃತಿ, ಎಲ್ಲ ಸಂತೋಷದ ಮೂಲವಾಯಿತು. ಸುಂದರವಾದ ವಸ್ತು ರೂಪುಗಳ ಮಧ್ಯೆ ನಿಂತಾಗ ಅವುಗಳ ಮೂಲಕ ಒಂದು ಆನಂದ ಅವನ ಹೃದಯ ವನ್ನು ಪ್ರವೇಶಿಸುವುದು ಗೋಚರವಾಯಿತಂತೆ. ಪ್ರಕೃತಿಯ ಸೌಂದರ್ಯವನ್ನು ಸವಿದು ಆ ಸುಂದರ ರೂಪುಗಳನ್ನು ತನ್ನ ನೆನಪಿನಲ್ಲಿ ಲೇಖರಿಸಿದನು. ಮನಸ್ಸನ್ನು ಪ್ರಕೃತಿಸೌಂದರ್ಯದ ಉಗ್ರಾಣವನ್ನಾಗಿ ಮಾಡಿದನು. ಆ ಆನಂದ ಲಾಭ, ಪ್ರಕೃತಿಯ ಎದುರು ಇರುವಾಗ ಮಾತ್ರವೇ ಅಲ್ಲ; ಮೂರ್ತ ಸೌಂದರ್ಯದ ಬೀಡಿನಿಂದ ದೂರ ಹೋಗಿ ಗಲಭೆ ದುಃಖಗಳಿಂದ ತುಂಬಿದ ನಗರದಲ್ಲಿರುವಾಗ ಕೂಡ ಕವಿ ಒಂದು ಕೋಣೆಯಲ್ಲಿ ಒಬ್ಬನೇ ಕುಳಿತು ಪ್ರಕೃತಿಯನ್ನು ಧ್ಯಾನಿಸುವಾಗ ಹಿಂದೆ ಕಣ್ಣುತುಂಬ ನೋಡಿ ಆನಂದಪಟ್ಟಿದ್ದ ದೃಶ್ಯಗಳೂ ರೂಪ ರೇಖೆಗಳೂ ಗಾನಗಳೂ ನೆನಪಿಗೆ ಬಂದು ಅವನನ್ನು ಪುನಃ ಪರವಶನನ್ನಾಗಿ ಮಾಡುವುವು. ಪ್ರಕೃತಿಸೌಂದರ್ಯವನ್ನು ಆರಾಧಿಸುತ್ತಿದ್ದುದು ಹೀಗೆ ತಾತ್ಕಾಲಿಕವಾದ ಆನಂದಕ್ಕೆ ಮಾತ್ರವೇ ಅಲ್ಲದೆ ಬರಲಿರುವ ದಿನಗಳ ಸಂತೋಷಕ್ಕಾಗಿ ಕೂಡ ಸಾಲು ವಂತಾಯಿತು. ಯೌವನದಲ್ಲಿ ಪ್ರಕೃತಿ ಕೊಡುತ್ತಿದ್ದ ಆನಂದ ಇಂದ್ರಿಯಗಳಿಗೆ ಮಾತ್ರವೇ ಸಂಬಂಧಿಸಿದ್ದು. ಫ್ರಾನ್ಸಿನ ರಾಜಕೀಯ ಕ್ರಾಂತಿಯ ತತ್ವಗಳಲ್ಲಿಯೂ ಅವು ಆದರ್ಶ ಸಮಾಜವನ್ನು ಸೃಷ್ಟಿಸಬಲ್ಲವು ಎನ್ನುವ ಭಾವನೆಯಲ್ಲಿಯೂ ಕವಿಗೆ ಇದ್ದ ಮೋಹ ನಷ್ಟವಾದಮೇಲೆ, ಪ್ರಕೃತಿಯಿಂದ ದೊರಕುತ್ತಿದ್ದ ಆನಂದ ಬಹು ಮಟ್ಟಿಗೆ ಮಾನಸಿಕವಾಯಿತು. ಮೊದಲಿನಂತೆ ಶುದ್ಧವಾದ ಇಂದ್ರಿಯ ಸುಖಾನಂದ ಬರುತ್ತಿರಲಿಲ್ಲ ನಿಜ. ಪ್ರಕೃತಿಯಲ್ಲಿನ ಸೌಂದರ್ಯ, ಪರಸ್ಪರ ಹೊಂದಾಣಿಕೆಗಳನ್ನು ನೋಡಿದಾಗ ಅವನಿಗೆ ಮಾನವ ಜೀವನದಲ್ಲಿರುವ ಅಸಮಾಧಾನ, ದುಃಖ, ಕಷ್ಟಗಳು ನೆನಪಿಗೆ ಬರುವುವು. ಪ್ರಕೃತಿಯ ರೀತಿ ನೀತಿ ನಿಯಮಗಳನ್ನು ಅನುಸರಿಸಿದರೆ ಮನುಷ್ಯನು ನಿರ್ದೋಷಿಯಾಗಿ ಪೂರ್ಣನಾಗಿ ಆನಂದಮಯವಾದ ಜೀವನವನ್ನು ನಡಸಬಲ್ಲನೆನ್ನುವ ಭಾವನೆ ಮೂಡುತ್ತಿದ್ದಿತು. ಅಪಾರವಾದ ದುಃಖಕ್ಕೀಡಾಗಿದ್ದಾಗ ಪ್ರಕೃತಿಯ ಮರೆಹೊಕ್ಕು ಅಲ್ಲಿ ಗಳಿಸಿದ ವಿವೇಕ ಆನಂದಗಳ ಮೂಲಕ ಕವಿ ಪುನರ್ಜನ್ಮವನ್ನೇ ಹೊಂದಿದನೆಂದು ಹೇಳ ಬಹುದು. ಅವನಿಗೆ ಪ್ರಕೃತಿ ಪರಮ ಗುರು. ಆರಾಧನೆಯ ದೇವತೆ. ಹೃದಯದ ಸಂಕಟಗಳನ್ನು ಹೋಗಲಾಡಿಸಿ ಗಾಯಗಳನ್ನು ಮಾಯಿಸಿ ಸರ್ವ ವಿಧವಾದ ಶಾರೀರ ಮತ್ತು ಆಧ್ಯಾತ್ಮಿಕ ಆರೋಗ್ಯವನ್ನು ಕೊಡುವ ಜೀವಂತ ಶಕ್ತಿ. ಜೀವನದ ಕಷ್ಟಕ್ಕೆ ಸಿಕ್ಕಿ ಹೃದಯ ತೊಳಲುವಾಗ ಏಕಾಂತದಲ್ಲಿ ಕುಳಿತು ಪ್ರಕೃತಿ ಸೌಂದರ್ಯವನ್ನು

ಧ್ಯಾನಿಸಿದರೆ ಸಂಕಟಗಳು ಮಾಯವಾಗಿ ಹೃದಯದಲ್ಲಿ ಆನಂದ ಪ್ರವಹಿಸುವುದು. ನಮ್ಮ ಅರಿವಿಲ್ಲದೆಯೇ ಈ ಆನಂದ ನಮ್ಮನ್ನು ಶೀಲವಂತರನ್ನಾಗಿ ಮಾಡಿ ನೆರೆಯವರಿಗೆ ಉಪಕಾರವಾಗತಕ್ಕ ಅನೇಕ ಸಣ್ಣ ಪುಟ್ಟ ಒಳ್ಳೆಯ ಕೆಲಸಗಳನ್ನು ಮಾಡಿಸುವುದು. ಇಷ್ಟೇ ಅಲ್ಲ. ಈ ಪ್ರಪಂಚದ ರಹಸ್ಯ ಗೂಢವಾದುದು; ಸಾಮಾನ್ಯವಾಗಿ ತಿಳಿಯತಕ್ಕದ್ದಲ್ಲ; ಆನಂದಪರವಶನಾಗಿರುವ ಕ್ಷಣಗಳಲ್ಲಿ ಕವಿಗೆ ಜ್ಞಾನಜ್ಯೋತಿಯ ಮೂಲಕ ಪ್ರಪಂಚದ ಗಹನ ವಿಚಾರಗಳು ವಿಶದವಾಗುವುವು. ಕಡೆಗೆ ಶರೀರದ ಇರವೇ ಮರೆತುಹೋಗಿ ಸುತ್ತಲ ಪ್ರಪಂಚದ ಅರಿವು ಅಳಿದು, ತನ್ನ ಆತ್ಮ, ದಿವ್ಯಜ್ಞಾನದ ಮೂಲಕ ವಸ್ತುಗಳ ಜೀವಾಳವನ್ನು ಅರಿಯುತ್ತಿದ್ದ ಅವಸ್ಥೆಯನ್ನು ಕವಿ ಆಗಾಗ ಅನುಭವಿಸುತ್ತಿದ್ದನು. ಸರ್ವಾಂತರ್ಯಾಮಿಯಾದ ದಿವ್ಯಶಕ್ತಿಯ ಇರವು ಅವನಿಗೆ ಗೋಚರವಾಗುವುದು ಆಗಲೆಯೆ. ಪ್ರಕೃತಿ, ಕವಿಗೆ ಪರಮ ಪವಿತ್ರವಾದ ಭಾವನೆಗಳ ಆಸರೆ. ಹೃದಯವನ್ನು ರಕ್ಷಿಸಿ ಅದಕ್ಕೆ ಮಾರ್ಗದಾಯಕವಾಗಿರುವ ಪೂಜ್ಯವ್ಯಕ್ತಿ: ಅವನ ಮಾನುಷ ಜೀವನದ ಆತ್ಮ. ತನ್ನನ್ನು ನಂಬಿದವರನ್ನು ಅದು ಯಾವಾಗಲೂ ಬಿಡುವುದಿಲ್ಲ. ಸಂತೋಷದಿಂದ ಸಂತೋಷಕ್ಕೆ ಒಯ್ಯುವಾಗಲೇ ಅವರನ್ನು ಸರ್ವವಿಧದಲ್ಲಿಯೂ ಉತ್ತಮಗೊಳಿಸುವುದು. ಒಂದು ಬಾರಿ ಪ್ರಕೃತಿಯ ಶಿಕ್ಷಣವನ್ನು ಪಡೆದವನು ಜೀವನದಲ್ಲುಂಟಾಗುವ ಯಾವ ಬಗೆಯ ಕ್ರೌರ್ಯ, ದುಷ್ಕಾರ್ಯ, ಅನ್ಯಾಯಗಳಿಗೆ ಸಿಕ್ಕಿದರೂ ಅವುಗಳ ಎದುರುನಿಂತು ಹೋರಾಡಿ ಜಯಿಸುವನೇ ಹೊರತು ಸೋತು ಶೀಲವನ್ನು ಕಳೆದುಕೊಳ್ಳುವುದಿಲ್ಲ.* ಈ ನಂಬಿಕೆ ಕವಿಯಲ್ಲಿ ಅಚ್ಚಳಿಯದೆ ನಿಂತುದರಿಂದ ಅವನು ಪ್ರಕೃತಿಯನ್ನು ಹೆಚ್ಚು ಹೆಚ್ಚಾಗಿ ಆರಾಧಿಸಿದನು. ಅವನ ಪ್ರಕೃತಿಪ್ರೇಮ ಆಳವಾಗಿಯೂ ಪವಿತ್ರವಾಗಿಯೂ ಆಯಿತು.

ಈ ಕವನಗ್ರಂಥ ಮೊದಲು ಅಚ್ಚಾದಾಗ ಇಂಥವರು ಬರೆದುದೆಂದು ಗೊತ್ತಾಗಲಿಲ್ಲ. ಕೋಲ್‌ರಿಜ್‌ನ ಏನ್‌ಷೆಂಟ್ ಮ್ಯಾರಿನರ್ ಎಂಬ ಹೊಸ ಛಂದೋವಿಲಾಸ ವಿಷಯ ರೀತಿಗಳ ಅತಿ ಸುಂದರ ಕವಿತೆ ಅದರಲ್ಲಿ ಮೊದಲನೆಯದು; ವರ್ಡ್ಸ್‌ವರ್ತ್‌ನ ಟಿಂಟರ್ನ್ ಆ್ಯಬಿ ಎಂಬ ಮಹಾಕೃತಿ ಕಡೆಯದು. ಒಟ್ಟು ೨೩ ಕವನಗಳಲ್ಲಿ ಕೋಲರಿಜ್‌ನವು ನಾಲ್ಕೇ, ಉಳಿದುವೆಲ್ಲ ವರ್ಡ್ಸ್‌ವರ್ತ್‌ನವು.† ಯಾವ ಯಾವ ಬಗೆಯ ವಿಷಯ, ರೀತಿ, ಛಂದಸ್ಸು, ದೃಷ್ಟಿ, ಉಕ್ತಿಸುಧಾರಣೆ ತಮಗೆ ಸೊಗಸು, ಮೆಚ್ಚು, ಆಗಬೇಕಾಗಿದೆ ಎಂದು ಈ ಕವಿಗಳು ತಿಳಿದಿದ್ದರೋ ಅವುಗಳ ಸ್ವರೂಪವನ್ನೂ ಸಿದ್ಧಿಯನ್ನೂ ಈ ಕವನಗಳಲ್ಲಿ ಕಾಣಬಹುದು. ಲಿರಿಕಲ್ ಬ್ಯಾಲಡ್ಸ್ ಯಾವ ನೇರವಾದ ದಂಗೆಯನ್ನೂ ಎಬ್ಬಿಸಲಿಲ್ಲ. ಅದರ ವರ್ಚಸ್ಸು ಕ್ರಮೇಣ ಹಬ್ಬಿ ಮಹಾಸತ್ವವಾಯಿತು. ೧೯ನೆಯ ಶತಮಾನದ ಮೊದಲಲ್ಲಿ ಯೂರೋಪಿನಲ್ಲಾದ ಮನಃಪರಿವರ್ತನದ ದೊಡ್ಡ ಕುರುಹಾಗಿಯೂ ಅದರ ವಾಣಿಯಾಗಿಯೂ ಆಯಿತು.

---

* ‘ನ ಮೇ ಭಕ್ತಃ ಪ್ರಣಶ್ಯತಿ’ ಎಂದು ಶ್ರೀಕೃಷ್ಣ ಬೇರೊಂದು ಪ್ರಸಂಗದಲ್ಲಿ ನುಡಿದು ಧೈರ್ಯ ಕೊಟ್ಟಂತೆ.

† ಈ ಕಾರಣದಿಂದಲೂ ಮತ್ತು ಮುಂದಿನ ಮುದ್ರಣಗಳಲ್ಲಿ ವರ್ಡ್ಸ್‌ವರ್ತ್‌ನವೇ ಇನ್ನೂ ಹೆಚ್ಚಾಗಿ ಸೇರಿ ಆತನ ಮುನ್ನುಡಿ ಹಿನ್ನುಡಿಗಳಿಂದ ಅದು ಮುದ್ರಿತವಾದ್ದರಿಂದಲೇ ಈ ಕವನಗ್ರಂಥ ವರ್ಡ್ಸ್‌ವರ್ತ್‌ನ ಹೆಸರಿಗೇ ವಿಶೇಷವಾಗಿ ಸಲ್ಲುತ್ತದೆ.

ವ್ಯಕ್ತಿವಾದಕ್ಕೆ ಪೋಷಣೆ ಕೊಟ್ಟಿತು. ಈ ಕವನ ಸಂಗ್ರಹದ ಮತ್ತು ಮುನ್ನುಡಿಯ ಪ್ರಕಟನೆಯ ಪ್ರಭಾವ ಸಾಹಿತ್ಯ ಪ್ರಪಂಚದಲ್ಲಿ ಕೂಡಲೇ ವ್ಯಕ್ತವಾಯಿತು. ರಾಜಕೀಯದಲ್ಲಿಯೂ ಸಮಾಜದಲ್ಲಿಯೂ ಯಾವರೀತಿ ಸ್ವಾತಂತ್ರ್ಯ ಉಂಟಾಯಿತೋ ಹಾಗೆಯೇ ಸಾಹಿತ್ಯ ರಚನೆಯಲ್ಲಿಯೂ ಸ್ವಾತಂತ್ರ್ಯ ಉಂಟಾಯಿತು. ಪ್ರತಿಯೊಬ್ಬ ಕವಿಯೂ ಇಷ್ಟವಾದ ಸಂಗತಿಯನ್ನಾರಿಸಿಕೊಂಡು ತನ್ನ ಆತ್ಮಕ್ಕೆ ತೃಪ್ತಿ ಸಂತೋಷ ಗಳು ಉಂಟಾಗುವಂತೆ ಬರೆಯುವುದು ಆರಂಭವಾಯಿತು. ಯಾವ ಒಳ್ಳೆಯ ಬರವಣಿಗೆಯಲ್ಲಿಯೂ ಮುಖ್ಯವಾಗಿರಬೇಕಾದ ಲಕ್ಷಣ, ಪ್ರಾಮಾಣಿಕತೆ. ತನ್ನ ಆತ್ಮ ನಿಜವೆಂದು ಒಪ್ಪುವುದನ್ನೇ ಕವಿ ಬರೆಯಬೇಕು. ಪ್ರತಿ ಮನುಷ್ಯನಿಗೂ ವ್ಯಕ್ತಿ ಸ್ವಾತಂತ್ರ್ಯ ದೊರೆತು ಅವನು ಇತರರಿಗೆ ಸಮಾನನೆನ್ನುವ ಭಾವನೆ ಅಭಿಮಾನವನ್ನು ಕೊಡಲು ಭಾವಗೀತೆಗಳು ಹೇರಳವಾಗಿ ಬಂದುವು. ಪ್ರತಿಕವಿಯೂ ತನ್ನ ಕಲ್ಪನಾ ವಿಲಾಸಗಳನ್ನೇ ಕಾವ್ಯವಸ್ತುವನ್ನಾಗಿ ಮಾಡಿಕೊಂಡನು. ಸನ್ನಿವೇಶ ಸಂಗತಿಗಳ ವಿವಿಧ ಸ್ವಭಾವಗಳಿಗೂ ಉದ್ರಿಕ್ತವಾಗುವ ವಿವಿಧ ರಾಗಭಾವಗಳಿಗೂ ಸರಿಯಾಗಿ ಹೊಂದುವ ಭಾವಗೀತೆಗಳನ್ನು ಬರೆಯುತ್ತ ಅವಕ್ಕೆ ತಕ್ಕ ಛಂದಸ್ಸನ್ನು ಆರಿಸಲೂ ನಿರ್ಮಾಣ ಮಾಡಲೂ ಆರಂಭಿಸಿದನು. ಛಂದಸ್ಸಿನ ವಿಚಾರದಲ್ಲಿ ಅನೇಕ ಪ್ರಯೋಗ ಗಳಾದುವು. ಇದರ ಜೊತೆಗೆ ಕವಿಗಳೂ ಮತ್ತು ಇತರ ಸಾಹಿತಿಗಳೂ ಸುಮಾರು ಮುನ್ನೂರು ನನ್ನೂರು ವರ್ಷಗಳ ಹಿಂದಿನ ಮಧ್ಯಯುಗದ ಯೂರೋಪ್ ಸಮಾಜದ ಮತ್ತು ಅದಕ್ಕೆ ಸಂಬಂಧಪಟ್ಟ ಸಾಹಸ ಸೌಂದರ್ಯಗಳ ಕಥೆಗಳನ್ನು ಆರಿಸಿ ಅವನ್ನುಕವನ ಕಾದಂಬರಿಗಳಲ್ಲಿ ಬರೆಯಲು ತೊಡಗಿದರು. ಪ್ರಕೃತಿಯಲ್ಲಿ ಮಾತ್ರವೇ ಅಲ್ಲ, ಜೀವನದಲ್ಲಿಯೂ ಪ್ರಪಂಚದ ಎಲ್ಲ ವಸ್ತುಗಳಲ್ಲಿಯೂ ಒಂದು ವಿಧವಾದ ಮರ್ಮವಿದೆ ಎಂದು ಭಾವಿಸಿ ಗೂಢ ಸಂಕೇತಗಳುಳ್ಳ ಮತ್ತು ವಿಚಿತ್ರ ಪ್ರಪಂಚ ಗಳಲ್ಲಿ ವಿಹಾರಮಾಡಿಸುವ ರಂಜಕ ಕಾವ್ಯವನ್ನು ಬರೆಯುವುದು ರೂಢಿಗೆ ಬಂದಿತು. ಇನ್ನುಕೆಲವರು ಪ್ರಾಚೀನ ಗ್ರೀಕ್ ಲ್ಯಾಟಿನ್ ಮತ್ತು ಮಧ್ಯಯುಗದ ಮತ ಸಾಹಿತ್ಯ ಗಳಿಂದ ಕೂಡ ವಿಷಯಗಳನ್ನಾರಿಸಿಕೊಂಡರು. ಅದ್ಭುತ ಆಶ್ಚರ್ಯ ಮತ್ತು ಸಾಹಸ ಕೃತ್ಯಗಳನ್ನು ತೋರಿಸುವ ಕಟ್ಟುಕಥೆಗಳೂ ಕಾದಂಬರಿಗಳೂ ಮೊದಲಿಟ್ಟವು. ಒಂದು ಮಾತಿನಲ್ಲಿ ಹೇಳುವುದಾದರೆ, ನವರಸಗಳ ಉದ್ರೇಕಕ್ಕೆ ಕಾರಣವಾಗುವ ವಸ್ತು ಯಾವ ದೇಶದ್ದಾಗಲಿ ಕಾಲದ್ದಾಗಲಿ ಮಟ್ಟದ್ದಾಗಲಿ ಸಾಹಿತ್ಯಕ್ಕೆ ಯೋಗ್ಯ ವಸ್ತುವಾಗಿ ಪರಿಣಮಿಸಿತು. ಈ ಸ್ವತಂತ್ರಪ್ರವೃತ್ತಿಗೆ 'ರೊಮ್ಯಾಂಟಿಕ್ ಮೂವ್ ಮೆಂಟ್' ಎಂದು ಹೆಸರು. ಹತ್ತೊಂಬತ್ತನೆಯ ಶತಮಾನದ ಆದಿಯಲ್ಲಿ ಲಿರಿಕಲ್ ಬ್ಯಾಲಡ್ಸ್‌ನ ಪ್ರಕಟನೆಯಿಂದ ಪ್ರಕಾಶವಾಗಿ ಲಭ್ಯವಾದ ಈ ಸ್ವಾತಂತ್ರ್ಯ ಈಗಲೂ ಸಾಹಿತ್ಯಪ್ರಪಂಚದಲ್ಲಿ ಪ್ರಭಾವಯುತವಾಗಿದೆ.

ಎಸ್. ಮಂಜನಾಥ್

# ಹೊಸ ಛಂದಸ್ಸಿನ ಲಯಗಳು

## ೧

ಈ ಹೊಸ ಯುಗದ ಕವಿಗಳು ಪತ್ರಿಕೆ ಪುಸ್ತಕಗಳಲ್ಲಿ ಪ್ರಕಾಶಗೊಳಿಸುತ್ತಿರುವ ಕವನಗಳಲ್ಲಿ ಪದ್ಯಜಾತಿ ಅನಂತವಾಗಿರುವಂತೆ ಮೇಲುನೋಟಕ್ಕೆ ತೋರಬಹುದು. ಹಿಂದಿನ ಛಂದಸ್ಸಿನಲ್ಲಿದ್ದಂತೆ ಪದ್ಯಕ್ಕೆ ಇಷ್ಟೇ ಚರಣ, ಚರಣಕ್ಕೆ ಇಷ್ಟೇ ಅಕ್ಷರ ಅಥವಾ ಮಾತ್ರೆ ಎಂಬ ಕಟ್ಟಳೆಯೇ ಕಾಣಿಸದೆ, ಹೊಸ ಛಂದಸ್ಸಿನಲ್ಲಿ ಅನಾಯಕತೆ ತಾಂಡವವಾಡುತ್ತಿರುವಂತೆ ಭಾಸವಾಗಬಹುದು. ಆದರೆ ಒಳಹೊಕ್ಕು ಪರಿಶೀಲಿಸಿದರೆ, ಇಲ್ಲಿರುವುದು ವೈವಿಧ್ಯವೇ ಹೊರತು ಸ್ವಚ್ಛಂದತೆಯಲ್ಲವೆಂಬುದು ಸ್ಪಷ್ಟವಾಗುತ್ತದೆ. ಪದ್ಯದಲ್ಲಿ ಎಷ್ಟೆಷ್ಟು ಚರಣಗಳಿರಬೇಕು, ಅವು ಎಷ್ಟೆಷ್ಟು ಉದ್ದವಾಗಿರಬೇಕು, ಒಂದಕ್ಕೊಂದನ್ನು ಹೇಗೆ ಜೋಡಿಸಿರಬೇಕು — ಈ ಮೊದಲಾದ ವಿವರಗಳಲ್ಲಿ ಕೂಡ ಕಿವಿಗೆ ಹಿತವಾಗುವ, ಹಿಡಿತಕ್ಕೆ ಸಿಕ್ಕುವ ನಿಯಮಗಳುಂಟೆಂದು ತೋರಿಸುವುದು ಕಷ್ಟವಲ್ಲ; ಆದರೆ ಅವುಗಳ ನಿರೂಪಣೆ ಸದ್ಯದಲ್ಲಿ ನಮ್ಮ ಉದ್ದೇಶಕ್ಕೆ ಮೀರಿದ್ದು. ಇನ್ನು, ಈ ವಿವಿಧ ವಿಸ್ತಾರಕ್ಕೆಲ್ಲಾ ಇಂಬುಗೊಟ್ಟು ಅದರ ಜೀವಾಳವಾಗಿ ಮಿಡಿಯುವ ನಡೆಗಳು ಗ್ರಹಿಕೆಗೆ ನಿಲುಕದಷ್ಟೇನೂ ಗಹನವಾಗಿಲ್ಲ; ಅವುಗಳನ್ನು ಎಣಿಕೆಮಾಡುವುದಕ್ಕಂತೂ ನಿಜವಾಗಿ ಎರಡು ಕೈಗಳ ಬೆರಳುಗಳು ಕೂಡ ಅನಾವಶ್ಯಕ. ಈ ಮೂಲಗತಿಗಳು ಯಾವುವು, ಅವುಗಳ ವಿನ್ಯಾಸ ಹೇಗೆ, ಅಲ್ಲಿಯ ಸಮಸ್ಯೆಗಳೇನು ಎಂಬುದನ್ನು ಕೆಲವು ಮಟ್ಟಿಗೆ ವಿಚಾರಮಾಡುವುದೇ ಇಲ್ಲಿಯ ಪ್ರಯತ್ನ.

ಹೊಸ ಕವಿತೆಯ ನಾಡಿನಲ್ಲಿ ಹೆದ್ದಾರಿಗಳನ್ನು ತೆರೆದ 'ಇಂಗ್ಲಿಷ್ ಗೀತಗಳು', 'ಅಶ್ವತ್ಥಾಮನ್'— ಈ ಎರಡು ಕೃತಿಗಳಿಂದ ಎತ್ತಿಕೊಟ್ಟಿರುವ ಕೆಳಗಿನ ಪದ್ಯಖಂಡಗಳನ್ನು ನೋಡಿ:

(೧) ಮೊದಲು ತಾಯ ಹಾಲ ಕುಡಿದು,
ಲಲ್ಲೆಯಿಂದ ತೊದಲಿ ನುಡಿದು,
ಕೆಳೆಯರೊಡನೆ ಬೆಳೆದು ಬಂದ
  ಮಾತದಾವುದು —
ನಲ್ಲೆಯೊಲವ ತೆರೆದು ತಂದ
  ಮಾತದಾವುದು —

(೨) ಲೋಕಂ ಪುಟ್ಟಲ್, ಲೋಕಂ ಸಾಯಲ್,
ದೇವತೆಗಳ ಗಣಮೆಲ್ಲಂ ಪಾಯಲ್,
ಒರ್ವನೆ ತಾಂಡವವಾಡುವ ರಾಜಾ,
ನಾಟ್ಯಂಗಲಿಸುವ ಓ ನಟರಾಜಾ,
ಕುಣಿವೆನ್, ಕಲಿಸೆನಗೀಗಳ್, ಬಾರಯ್,
  ಕುಣಿವೆನ್, ಬಾರಯ್!
  ಓ ಶಿವ, ಬಾರಯ್!

(೩) ಆಶೆಗಳು ; ಆಶೆಯನು ಕನಲಿಸುವ ವಿಘ್ನಗಳು ;
ಆಶೆಯೊಳಗಡಗಿಹೋಗುವ ಭಯಗಳು ;
ಬಹುಕಾಲ ಮನಸಿನಲೆ ಮರಸಿದ್ದು ಬೆಳಸಿದ್ದ,
ಬಹುಕಾಲ ಬೆಳಸಿದ್ದ ವಾಂಛಿತಗಳು.

(೪) ಚೆಲ್ವಿನ ನೆಲೆ, ಕಣ್ಗಳ ಬಲೆ, ಸುಖದೊಱತೆಯ ಬನವಾಸೀ,
ಬಳೆದಲೆದಾ ಕಾನ್‌ಮಲೆಗಳನ್ ಆನ್ ಮಱೆವೆನೆ, ಬನವಾಸೀ!
ಭಾರತದೀ ಸುಱಿಗಾಳಿಗೆ ಸಿಲ್ಕುತೆ ನಾನ್ ತಱಗಾದೆನ್ ;
ಪೆಱೆ ತುಂಬುತೆ, ಪೆಱೆ ತೇಯುತೆ, ಮನೆಗಾಣದೆ ಬಡವಾದೆನ್ ;
ನಿನ್ನನೆ ನೆನೆನೆನೆದೋ ತಾಯ್, ಪಂಬಲಿಸುವ ನೋವೊಂದೇ!
ಇನ್ನೆನಗೇನಾಸೆಗಳೋ, ಪಾರ್ವುದು ನಾನ್ ಸಾವೊಂದೇ!

(೫) ಒಲಿದುದಾಯಿತು, ನಲಿದುದಾಯಿತು,
ನೊಂದುದಾಯಿತು, ಬೆಂದುದಾಯಿತು.
ಇಲ್ಲೆ ನರಕವ ಕಂಡುದಾಯಿತು ;
ಎಲ್ಲ ಆಯಿತು ನಮಗೆ, ನಲ್ಲೆ.

(೬) ನೋಟಸಿಂಗರದ ತೋಟದೊತ್ತಿನಲಿ
ಮುಸುಕುಕೊಂಬೆಗಳ ನೆರಳಲಿ,
ಮೇಳದೊರಗಿರುವರೇಳು ಕನ್ನೆಯರು
ಮಿಸುನಿ ಜಿಂಕೆಗಳ ತೆರದಲಿ.....

ಈ ಪದ್ಯಗಳ ನಡೆಗೆ ಗಮನಕೊಟ್ಟು ಓದುತ್ತಿದ್ದರೆ ಅಥವಾ ಕೇಳುತ್ತಿದ್ದರೆ, ನಿಯತವಾದ ಜಾಗಗಳಲ್ಲಿ ತಾಳ ಹಾಕಬೇಕೆನ್ನಿಸುತ್ತದೆ; ಉತ್ಸಾಹಶಾಲಿಗಳು ಹಾಗೆ ಮಾಡಿಬಿಡುವುದೂ ಉಂಟು. ಆದರೆ ಅಂಗಚೇಷ್ಟೆಯಿಲ್ಲದೆ ಪದ್ಯದ ಅಕ್ಷರಗಳನ್ನು ಒತ್ತಿ ಉಚ್ಚರಿಸುವುದರಿಂದಲೇ ತಾಳದ ನೆಲೆಯನ್ನು ತೋರಿಸಬಹುದು. ಸಾಮಾನ್ಯವಾಗಿ ಪದ್ಯವಾಚನದಲ್ಲಿ ಮಾಡುವುದು ಹೀಗೆಯೇ. ಉದಾಹರಣೆಗೆ, ಮೇಲಿನ ಮೊದಲನೆಯ ಪದ್ಯದ ಮೊದಲನೆಯ ಚರಣವನ್ನು ತೆಗೆದುಕೊಳ್ಳೋಣ:

'ಮೊದಲು 'ತಾಯ 'ಹಾಲ 'ಕುಡಿದು

ಇಲ್ಲಿ, ' ಎಂಬ ಚಿಹ್ನೆಯನ್ನು ಮುಮ್ಮಗ್ಗುಲಲ್ಲಿ ಬರೆದು ಸೂಚಿಸಿರುವ ಅಕ್ಷರಗಳ ಮೇಲೆ ತಾಳಗಳು ಬೀಳುತ್ತವೆ. ಇವುಗಳ ವಿನ್ಯಾಸವನ್ನು ಅರಿತ ಹೊರತು ಪದ್ಯದ ನಡೆ ಮನಸ್ಸಿಗೆ ತಟ್ಟುವುದಿಲ್ಲ. ಈ ತಾಳಗಳು ಬೀಳುವಾಗ ಒಂದಕ್ಕೊಂದಕ್ಕೆ ನಡುವೆ ಒಂದೇಸಮನಾದ ಕಾಲದ ಅಂತರವಿರುತ್ತದೆಂಬುದು ಅನುಭವದ ವಿಷಯ. ಹೀಗೆ ನಿಯತವಾದ ಕಾಲದ ಅಂತರದಲ್ಲಿ ತಾಳಗಳು ಆವರ್ತನೆಯಾಗುವುದಕ್ಕೆ ಲಯ (Rhythm) ಎಂದು ಹೆಸರು. 'ಲಯ'ದ ಅರ್ಥವನ್ನು ಇನ್ನಷ್ಟು ಹಿಗ್ಗಲಿಸಿ, ಸದೃಶಕ್ರಿಯೆಗಳ ಪರಂಪರೆಯಲ್ಲಿ ನಿಯಮಬದ್ಧತೆ ಗೋಚರವಾದಾಗಲೆಲ್ಲ ಅದು ನಿಷ್ಪನ್ನವಾಗುವುದೆಂದು ಹೇಳಬಹುದು. ಈ ದೃಷ್ಟಿಯಿಂದ ನೋಡಿದರೆ, ಮಾನವನ ಒಟ್ಟು ಜೀವನಕ್ಕೇ ಲಯವು ಮೂಲಸೂತ್ರ. ಅವನು ನಡೆಯುವಾಗ ಇಡುವ ಹೆಜ್ಜೆಗಳಲ್ಲಿ ಒಂದಕ್ಕೊಂದಕ್ಕೆ ಒಂದೇ ಅಂತರವಿರುತ್ತದೆ; ಅವನ ನಾಡಿಗಳಲ್ಲಿ ಸುತ್ತುವ ರಕ್ತವು ಹೃದಯದಿಂದ ಅಳತೆ ಮಾಡಿದಹಾಗೆ ಬಿಟ್ಟು ಬಿಟ್ಟು ಉಕ್ಕುತ್ತದೆ;

ಅವನು ಬಿಡುವ ಉಸಿರು ನಿಮಿಷಕ್ಕೆ ಇಷ್ಟು ಸಲ ಎಂಬಂತೆ ನಿಯಮದಿಂದ ಆಡುತ್ತದೆ. ಮಾನವನನ್ನಷ್ಟೇ ಏಕೆ, ಸಮಸ್ತ ವಿಶ್ವವನ್ನೇ ಲಯ ನಡಸುತ್ತಿದೆ. "ಕುಣಿತಿಲ್ಲ ಜಗ ಇಲ್ಲಾ!" ಆದ್ದರಿಂದಲೇ,

ಹಗಲಿರಳ ತಾಳಕ್ಕ
ಮುಗಿಯದ ಕಾಳಕ್ಕ
ಜನುಮಗಳ ವ್ಯಾಳಕ್ಕ । ಕುಣಿಯೋಣು ಬಾ....

ಎಂದು ಕವಿ ಹಾಡಿರುವುದು. ಹೀಗಿರುವಲ್ಲಿ, ಮಾನವನಿಗೆ ಆನಂದಕೊಡುವ ಕಾವ್ಯ, ಗಾಯನ ಮೊದಲಾದ ಲಲಿತ ಕಲೆಗಳು ಲಯದ ಆಧಾರವನ್ನೇ ಹಿಡಿದು ನಿಂತಿರುವುದರಲ್ಲಿ ಏನಾಶ್ಚರ್ಯ?

ನರ್ತನದ ಲಯಕ್ಕೆ ಹೊಂದಿಕೊಂಡು ಪದ್ಯ ಮೊದಲು ಉದಿಸಿತೆಂದು ಸಂಶೋಧಕರ ಅಭಿಪ್ರಾಯ. ಪದ್ಯದ ಸ್ಪಷ್ಟವಾದ ಲಯವೇ ಅದನ್ನು ಗದ್ಯದಿಂದ ಬೇರ್ಪಡಿಸತಕ್ಕದ್ದು. ಇದರಲ್ಲಿ ತಾಳ ತಾಳಕ್ಕೂ ನಡುವೆ ನಿಯತವಾಗಿ ಬರುವ ಕಾಲದ ಅಂತರವನ್ನು ಅಕ್ಷರಗಳ ಉಚ್ಚಾರಣೆ ತುಂಬುತ್ತದೆ. ಹೀಗೆ ಎರಡು ತಾಳಗಳ ನಡುವೆ ಬರತಕ್ಕ ಅಕ್ಷರ ಸಮುದಾಯಕ್ಕೆ 'ಗಣ'ವೆಂದು ಹೆಸರು. (ಈ ಲಕ್ಷಣದಲ್ಲಿ, ಕೊನೆಯ ತಾಳದ ಮುಂದೆ ನಿಲ್ಲುವ ಅಕ್ಷರ ಸಮುದಾಯವೂ ಸೇರುತ್ತದೆ.) ನಾವು ಹಿಂದೆ ಪರಿಶೀಲಿಸಿದ ಚರಣದಲ್ಲಿ, 'ಮೊದಲು', 'ತಾಯ', 'ಹಾಲ', 'ಕುಡಿದು'— ಎಂಬ ನಾಲ್ಕು ಗಣಗಳಿವೆ. ಪದ್ಯದ ಒಂದು ಚರಣದಲ್ಲಿ ಲಯ ಪ್ರತೀತಿ ಉಂಟಾಗಬೇಕಾದರೆ, ಅದರಲ್ಲಿ ಕೂಡಿರುವ ಗಣಗಳ ಉಚ್ಚಾರಣೆಯ ಕಾಲ ಸರಿಸಮನಾಗಿರಬೇಕೆಂದು ಬೇರೆ ಹೇಳಬೇಕಾಗಿಲ್ಲ. ಈ ಗಣವೇ ನಮ್ಮ ಛಂದಸ್ಸಿನ ಮಾನದಂಡ.

ಅಕ್ಷರಗಳು ಕೂಡಿ ಗಣವಾಗುತ್ತದೆ. ಈ ಅಕ್ಷರಗಳೆಲ್ಲದರ ಉಚ್ಚಾರಕ್ಕೂ ಒಂದೇ ಅಳತೆಯ ಕಾಲ ಹಿಡಿಯುವುದಿಲ್ಲ. ಹ್ರಸ್ವಸ್ವರಕ್ಕೆ ಕಡಮೆ ಕಾಲ ಸಾಕು; ದೀರ್ಘಸ್ವರಕ್ಕೆ ಹೆಚ್ಚು ಕಾಲ ಬೇಕು. ಒಂದು ಸ್ವರದ ಮುಂದೆ ಒತ್ತಕ್ಷರ ಮೊದಲಾದುವು ಇದ್ದರೆ, ಆ ಸ್ವರವು ಹ್ರಸ್ವವಾಗಿದ್ದರೂ ಅದರ ಉಚ್ಚಾರಣೆಯ ಒಟ್ಟು ಕಾಲವು ದೀರ್ಘವಾಗುತ್ತದೆ. ಈ ಪರಿಸ್ಥಿತಿಯನ್ನು ಅನುಸರಿಸಿಯೇ ಅಕ್ಷರ ಗಳನ್ನು 'ಲಘು', 'ಗುರು' ಎಂದು ವಿಂಗಡಿಸಿ, ಲಘುವಿನ ಉಚ್ಚಾರಕ್ಕೆ ಒಂದು ಮಾತ್ರೆಯ ಕಾಲವೆಂದೂ, ಗುರುವಿನ ಉಚ್ಚಾರಕ್ಕೆ ಎರಡು ಮಾತ್ರೆಯ ಕಾಲವೆಂದೂ ನಿಷ್ಕರ್ಷಿಸಿದ್ದಾರೆ. ಎಲ್ಲ ಸಂದರ್ಭಗಳಲ್ಲೂ ಲಘು ಗುರುಗಳಿಗೆ ಇದೇ ಕಾಲಪರಿ ಮಾಣವಿರುತ್ತದೆಂದು ಹೇಳಲಾಗುವುದಿಲ್ಲ. ಸ್ವಲ್ಪ ಎಳೆದು ಉಚ್ಚರಿಸಿ ಲಘುವನ್ನು ಉದ್ದಮಾಡಬಹುದು; ತ್ವರಿತವಾಗಿ ಉಚ್ಚರಿಸಿ ಅಥವಾ ಮುಂದಿನ ಒತ್ತಕ್ಷರ ಮೊದಲಾದದ್ದನ್ನು ತೇಲಿಸಿ ಗುರುವನ್ನು ಮೊಟಕು ಮಾಡಬಹುದು. ಆದರೂ ಒಟ್ಟಿನಮೇಲೆ, ಛಂದಸ್ಸಿನಲ್ಲಿ ಅಕ್ಷರಗಳಿಗೆ ಕೊಟ್ಟಿರುವ ಮಾತ್ರೆಯ ಬೆಲೆ ನಮ್ಮ ಸಾಮಾನ್ಯಾನುಭವಕ್ಕೆ ಸರಿಹೊಂದುತ್ತದೆ. ಗಣಗಳ ಕಾಲನಿರ್ಣಯಕ್ಕಂತೂ ಇಂಥ ಒಂದು ನಿರ್ದಿಷ್ಟವಾದ, ಸುಲಭವಾಗಿ ಗೊತ್ತಾಗುವ ಅಳತೆಯ ಕಡ್ಡಿ ಆವಶ್ಯಕ.

ಇದರಮೇಲೆ, ವಿಶೇಷ ಸಂದರ್ಭಗಳಲ್ಲಿ ಈ ಬೆಲೆಗಳನ್ನು ಹೆಚ್ಚುಕಡಮೆ ಮಾಡಿಕೊಳ್ಳುವುದೂ ಅಸಾಧ್ಯವಲ್ಲ.*

ಇನ್ನು, ಆಗಲೇ ಉದಾಹರಿಸಿರುವ ಆರು ಪದ್ಯಖಂಡಗಳ ಕಡೆಗೆ ಮತ್ತೆ ತಿರುಗೋಣ. ಇವುಗಳ ಮೊದಲನೆಯ ಚರಣಗಳನ್ನು ತಾಳಕ್ಕೆ ಅನುಸಾರವಾಗಿ ಗಣಗಳಾಗಿ ವಿಂಗಡಿಸಿದರೆ ಈ ರೀತಿ ಆಗುತ್ತದೆ:

೧. ಮೊದಲು । ತಾಯ । ಹಾಲ । ಕುಡಿದು । (೩ + ೩ + ೩ + ೩)

೨. ಲೋಕಂ । ಪುಟ್ಟಿಲ್ । ಲೋಕಂ । ಸಾಯಲ್ । (೪ + ೪ + ೪ + ೪)

೩. ಆಸೆಗಳು । ಆಸೆಯನು । ಕನಲಿಸುವ । ವಿಘ್ನಗಳು । (೫ + ೫ + ೫ + ೫)

೪. ಚೆಲ್ವಿನ ನೆಲೆ । ಕಣ್ಗಳ ಬಲೆ । ಸುಖದೊಜಿತೆಯ । ಬನವಾಸೀ । (೬ + ೬ + ೬ + ೬)

೫. ಒಲಿದು । ದಾಯಿತು । ನಲಿದು । ದಾಯಿತು । (೩ + ೪ + ೩ + ೪)

೬. ನೋಟ । ಸಿಂಗರದ । ತೋಟ । ದೊತ್ತಿನಲಿ । (೩ + ೫ + ೩ + ೫)

ಈ ಚರಣಗಳಲ್ಲಿ ಪ್ರತಿಯೊಂದರ ನಡೆಯೂ ಬೇರೆ ಬೇರೆ. ಒಂದನೆಯದರಲ್ಲಿ ೩ ಮಾತ್ರೆಯ ಗಣಗಳು ಬಂದಿವೆ; ಅಲ್ಲಿಂದ ಮುಂದಿನ ಮೂರು ಉದಾಹರಣೆಗಳಲ್ಲಿ ಕ್ರಮವಾಗಿ ಗಣಕ್ಕೆ ಒಂದೊಂದು ಮಾತ್ರೆ ಹೆಚ್ಚುತ್ತಾ, ೪, ೫ ಮತ್ತು ೬ ಮಾತ್ರೆಯ ಗಣಗಳು ಬಂದಿವೆ. 'ಒಲಿದುದಾಯಿತು ನಲಿದುದಾಯಿತು' ಎಂಬ ಚರಣದಲ್ಲಾದರೆ, ಒಂದೇ ಬಗೆಯ ಗಣಗಳು ಸಾಲಾಗಿ ಬಾರದೆ ೩ ಮಾತ್ರೆಯದರ ಮುಂದೆ ೪ ಮಾತ್ರೆಯದು ಅನುವೃತ್ತವಾಗಿ ಬರುವಂತೆ ಕಾಣಿಸುತ್ತದೆ. ನಿಜವಾಗಿ ನೋಡಿದರೆ, ಈ ಚರಣದಲ್ಲಿ ಇರತಕ್ಕದ್ದು ೭ ಮಾತ್ರೆಯ ಗಣಗಳು ಎರಡು. ಈ ಗಣ ದೀರ್ಘವಾಗಿರುವುದರಿಂದ ಅಖಂಡವಾಗಿ ಹಿಡಿತಕ್ಕೆ ಸಿಕ್ಕುವುದಿಲ್ಲ; ಇದರಲ್ಲಿ ಒಳತಾಳ ಬಿದ್ದು ಒಂದೊಂದೂ ೩ + ೪ ಎಂಬಂತೆ ವಿಭಾಗವಾಗುತ್ತದೆ. ಇದರಂತೆಯೇ 'ನೋಟಸಿಂಗರದ ತೋಟದೊತ್ತಿನಲಿ' ಎಂಬ ಚರಣದಲ್ಲೂ ಇರುವುದು ಎರಡೇ ಗಣ — ೮ ಮಾತ್ರೆಯ ಎರಡು ಗಣ; ಇದರ ಒಳವಿಭಾಗ ೩ + ೫ ರಂತೆ ಆಗುತ್ತದೆ. ಹೀಗೆ, ಮೇಲಿನ ಉದಾಹರಣೆಗಳಲ್ಲಿ ಕ್ರಮವಾಗಿ ೩, ೪, ೫, ೬, ೭ ಮತ್ತು ೮ ಮಾತ್ರೆಯ ಗಣದ ಲಯಗಳು ಬಂದಿವೆ. ಹೊಸಗನ್ನಡದ ಮಾತ್ರಾ ಛಂದಸ್ಸಿಗೆ† ಇವೇ ತಳಹದಿ.

* "ಹ್ರಸ್ವಸ್ವರಗಳಿಗೆ ಲಘುವೆಂತಲೂ; ದೀರ್ಘಸ್ವರ, ಪ್ಲುತಸ್ವರ, ಅನುಸ್ವಾರ ವಿಸರ್ಗಗಳಿಂದ ಕೂಡಿದ ಅಕ್ಷರ, ಸಂಯುಕ್ತಾಕ್ಷರಕ್ಕೆ ಹಿಂದಿರುವ ಅಕ್ಷರ — ಇವುಗಳಿಗೆ ಗುರುವೆಂತಲೂ ಸಂಜ್ಞೆ." [ಕನ್ನಡ ಕೈಪಿಡಿ, ೧ನೆಯ ಸಂಪುಟ (ಎರಡನೆಯ ಮುದ್ರಣ), ಪು. ೮೩.] ಹೊಸ ಛಂದಸ್ಸಿನಲ್ಲಿ ಒಂದು ಅಕ್ಷರಕ್ಕೆ ಮೂರು ಮಾತ್ರೆಯ (ಇದು ಪ್ಲುತದ ನಿಜವಾದ ಕಾಲ) ಅಥವಾ ಅದಕ್ಕೂ ಹೆಚ್ಚಿನ ಬೆಲೆ ಒಮ್ಮೊಮ್ಮೆ ಬರುವುದುಂಟು; ಲಘುಸ್ವರಕ್ಕೆ, ಮುಖ್ಯವಾಗಿ ಚರಣದ ಕೊನೆಯಲ್ಲಿ, ಗುರುವಿನ ಬೆಲೆ ಬರುವುದುಂಟು; ಮೌನ ಅಥವಾ ವಿರಾಮ ಕೂಡ ಅಪೂರ್ವವಾಗಿ ಮಾತ್ರೆಯ ಎಣಿಕೆಗೆ ಸಿಕ್ಕುವುದುಂಟು. ಇದೆಲ್ಲ ಮಿತವಾಗಿ, ಸಂದರ್ಭೋಚಿತವಾಗಿ ಬಂದರೆ ಲಯದ ಸೊಗಸು ಹೆಚ್ಚುತ್ತದೆ.

† ಇಲ್ಲಿ '**ಮಾತ್ರಾ** ಛಂದಸ್ಸೆ'ಂಬ ಮಾತನ್ನು ಉದ್ದೇಶಪೂರ್ವಕವಾಗಿ ಉಪಯೋಗಿಸಿದೆ. ಮಾತ್ರಾ ಗಣದ ನಿಯಮಗಳಿಗೆ ಒಳಪಡದ ಹಿಂದಿನ ಅಕ್ಷರ ತ್ರಿಪದಿ ಸಾಂಗತ್ಯ ಮೊದಲಾದುವುಗಳ ಧಾಟಿಯಲ್ಲಿ ಕೆಲವು ಪದ್ಯಗಳನ್ನು ಈಗಿನ ಕವಿಗಳೂ ಕಟ್ಟಿದ್ದಾರೆ. (ಉದಾಹರಣೆಗೆ, 'ಇಂಗ್ಲಿಷ್ ಗೀತಗಳ'ಲ್ಲಿ ಸೇರಿರುವ 'ಬ್ಲೆಸ್‌ಹೀಮ್ ಕದನ' ಎಂಬುದು ಈ ಬಗೆಯದು.) ಇವಕ್ಕೆ ಆಧಾರವಾದ ಬ್ರಹ್ಮವಿಷ್ಣುರುದ್ರ ಗಣಗಳ ರಚನೆ

ಈ ಆರು ಲಯಗಳಲ್ಲಿ ಒಂದು ಹೊರತು ಮಿಕ್ಕ ಯಾವುವೂ ಕನ್ನಡಿಗರಿಗೆ ಅಪರಿಚಿತವಾದುವಲ್ಲ. ೩ ಮಾತ್ರೆಯ ಗಣವು ಉತ್ಸಾಹರಗಳೆ ಭೋಗಷಟ್ಪದಿಗಳಲ್ಲೂ, ೪ ಮಾತ್ರೆಯದು ಮಂದಾನಿಲರಗಳೆ ಶರಷಟ್ಪದಿ ಪರಿವರ್ಧಿನೀಷಟ್ಪದಿಗಳಲ್ಲೂ, ೫ ಮಾತ್ರೆಯದು ಲಲಿತರಗಳೆ ಕುಸುಮಷಟ್ಪದಿ ವಾರ್ಧಕಷಟ್ಪದಿಗಳಲ್ಲೂ, ೭ (= ೩ + ೪) ಮಾತ್ರೆಯದು ಭಾಮಿನೀಷಟ್ಪದಿ ಗೋವಿನ ಕಥೆಯ ಮಟ್ಟುಗಳಲ್ಲೂ ಹಿಂದಿನಿಂದ ನಮಗೆ ಬಳಕೆಯಾಗಿವೆ. ೮ (= ೩ + ೫) ಮಾತ್ರೆಯ ಗಣವನ್ನು* ಪಂಪನು ರಗಳೆಯೊಂದರಲ್ಲಿ (ಪಂಪ ಭಾರತ, iii. ೨೨) ಪ್ರಯೋಗಿಸಿದ್ದನು; ಹತ್ತು ಶತಮಾನಗಳೀಚೆಗೆ ಮತ್ತೆ ಅದು 'ಇಂಗ್ಲಿಷ್ ಗೀತಗಳ'ಲ್ಲಿ ತಲೆಯೆತ್ತಿತು. ೬ ಮಾತ್ರೆಯ ಗಣದ ಧಾಟಿ ಮಾತ್ರ, ಈ ಲೇಖಕನಿಗೆ ತಿಳಿದ ಮಟ್ಟಿಗೆ, ಕನ್ನಡಕ್ಕೆ ಹೊಚ್ಚ ಹೊಸದು; 'ಅಶ್ವತ್ಥಾಮನ್' ನಾಟಕದಲ್ಲೇ ಅದರ ಆವಿರ್ಭಾವವಾದದ್ದು. ಅಲ್ಲಿಂದೀಚೆಗೆ ಈ ಧಾಟಿ ಕವಿಜನಪ್ರಿಯವಾಗಿ, ಒಳ್ಳೊಳ್ಳೆಯ ಗೀತಗಳು ಅದರಲ್ಲಿ ಬಂದಿವೆ.

ಈಗಿನ ಕವಿಗಳು ಲಯಬದ್ಧವಾಗಿ ರಚಿಸುತ್ತಿರುವ ಪದ್ಯಗಳೆಲ್ಲವೂ ಈ ಆರು ಧಾಟಿಗಳಲ್ಲೇ ಅಡಕವಾಗುತ್ತವೆ. ಮಾತ್ರಾ ಛಂದಸ್ಸಿನಲ್ಲಿ ಸಾಧ್ಯವಾಗುವ ಲಯಗಳು ಇಷ್ಟು ಮಾತ್ರವೇ? ಬೇರೆ ಯಾವುದನ್ನಾದರೂ ಯೋಜಿಸುವುದು ಅಶಕ್ಯವೇ?— ಎಂಬ ಪ್ರಶ್ನೆ ಇಲ್ಲಿ ಏಳಬಹುದು. ಕೇವಲ ಗಣಿತದ ದೃಷ್ಟಿಯಿಂದ ಹೇಳುವುದಾದರೆ ಇನ್ನೆರಡು ಲಯಗಳಿಗೆ ಅವಕಾಶವುಂಟು. ಮೇಲೆ ಪರಿಗಣಿಸಿರುವ ಗಣಗಳಲ್ಲಿ ೩ ಮಾತ್ರೆಯದೇ ಎಲ್ಲಕ್ಕೂ ಕಿರಿಯದು. ಮಾತ್ರಾ ಸಂಖ್ಯೆಯನ್ನು ಇನ್ನೂ ಕಡಮೆಮಾಡಿ ೨ ಮಾತ್ರೆಯ ಗಣವನ್ನು ಕಟ್ಟಬಹುದು. ಆದರೆ ಅದು ಅತಿ ಹ್ರಸ್ವವಾಗುತ್ತದೆ; ತಾಳ ತಾಳಕ್ಕೆ ಅಂತರ ಬಲು ಕಿರಿದಾಗುತ್ತದೆ. ಅಲ್ಲದೆ, ೨ ಮಾತ್ರೆಯ ಎರಡು ಗಣಗಳಿಗೂ ೪ ಮಾತ್ರೆಯ ಒಂದು ಗಣಕ್ಕೂ ನಿಜವಾದ ಭೇದವೇನೂ ಇರುವುದಿಲ್ಲ. ಇನ್ನು ಉಳಿದದ್ದು ೯ ಮಾತ್ರೆಯ ಗಣದ ನಡೆ. (ಇದನ್ನು ೩ ಮಾತ್ರೆಯ ಗಣದಿಂದ ಬೇರ್ಪಡಿಸಬೇಕಾದರೆ ಉಪಗಣಗಳು ೪ + ೫ ರಂತೆ ಒಡೆಯಬೇಕೆಂಬುದು ಸ್ಪಷ್ಟ.) ಈ ಗಣವು ಗಮನಾರ್ಹವೆಂಬುದಕ್ಕೆ ಸಂಗೀತದ ತಾಳಗಳಲ್ಲಿ ೯ ಮಾತ್ರೆಯ ಬೆಲೆಯುಳ್ಳ ಸಂಕೀರ್ಣಜಾತಿಯೊಂದಿರುವುದು ಪೋಷಕವಾಗುತ್ತದೆ. ಈ ಗಣವನ್ನು ಉಪಯೋಗಿಸಿ 'ಪ್ರೌಢಷಟ್ಪದಿ'ಯೆಂಬ ಹೆಸರಿನಿಂದ ಕೆಲವು ಪದ್ಯಗಳನ್ನೂ ಒಬ್ಬ ಕವಿಗಳು ರಚಿಸಿದ್ದಾರೆ.‡ ಉದಾಹರಣೆಗೆ,

---

ಬೇರೊಂದು ರೀತಿಯಲ್ಲಿ ಆಗುತ್ತದೆ. ಈ 'ಅಂಶಗಣ'ಗಳ ಸ್ವರೂಪನಿರೂಪಣೆ ನಮ್ಮ ಪ್ರಕೃತೋದ್ದೇಶಕ್ಕೆ ಒಳಪಟ್ಟದ್ದೇ ಆದರೂ ಲೇಖನವು ಅತಿ ದೀರ್ಘವಾದೀತೆಂದು ಅದಕ್ಕೆ ಕೈಹಾಕಿಲ್ಲ. ಈ ಲೇಖನದಲ್ಲಿ ಹೇಳಿರತಕ್ಕ ಮಾತೆಲ್ಲ ಮಾತ್ರಾಗಣದ ಧಾಟಿಗಳಿಗೆ ಮಾತ್ರ ಅನ್ವಯಿಸುತ್ತದೆ. ಹೊಸಗನ್ನಡದ ಕಾವ್ಯರಾಶಿಯಲ್ಲಿ ಈ ಮಾತ್ರಾಗಣಗಳೇ ಅತ್ಯಂತ ಪ್ರಚುರವಾಗಿರತಕ್ಕುವು; ಅಂಶಗಣದ ಧಾಟಿ ಅಲ್ಲೊಂದು ಕಡೆ ಇಲ್ಲೊಂದು ಕಡೆ ಗೋಚರಿಸುತ್ತದೆ.

* ಈ ೮ ಮಾತ್ರೆಯ ಗಣ ೩ + ೫ ರಂತೆ ವಿಭಾಗವಾಗುತ್ತದೆ; ೪ + ೪ ರಂತೆ ವಿಭಾಗವಾಗುವುದಿಲ್ಲ. ಆದ್ದರಿಂದಲೇ ಇದರ ಲಯವು ೪ ಮಾತ್ರೆಯ ಗಣದ ಲಯಕ್ಕಿಂತ ಬೇರೆಯಾಗಿದೆ. ಹೀಗೆಯೇ, ೬ ಮಾತ್ರೆಯ ಗಣವು ಶುದ್ಧವಾಗಿರಬೇಕಾದರೆ ಅದು ೩ ಮಾತ್ರೆಯ ಗಣಗಳ ಯುಗ್ಮವಾಗಬಾರದು; ೨ + ೪ ಅಥವಾ ೪ + ೨ ರಂತೆ ಅದರ ರಚನೆಯಾಗಿರಬೇಕು. ಮೇಲಿನ ಉದಾಹರಣೆಗಳನ್ನು ಪರಿಶೀಲಿಸಿದರೆ ಈ ವಿಷಯ ಸ್ಪಷ್ಟವಾಗುತ್ತದೆ.

‡ ಶ್ರೀಮಾನ್ ಪಟ್ಟೇದ ಚನ್ನಪ್ಪನವರ ಬಸಪ್ಪ: 'ಕನ್ನಡ ಷಟ್ಪದಿಗಳು' (ಪರಿಷತ್ಪತ್ರಿಕೆ, xiv. ೪)

(೭) ಕಡುಕಂಗೊಳಿಪ ಕರ್ಣಾಟಕ ತಾಯುಮಂ
ಬೆಡಗಿನ ಸಾಹಿತ್ಯ ಸಮ್ಮೇಲನಮುಮಂ
ಪೊಡಮಡುವೆಂ ಬಿಡದಖಿಲ ಕಬ್ಬಿಗರುಮಂ ಪಂಡಿತ ಪಾಮರರುಮಂ ।
ಇಡುವೆಂ ನಿಮ್ಮೆದುರು ಬಡವ ಬಸವನಾಂ
ದಿಡ ಬಕುತಿಯು ಹಿಡಿದು ಕನ್ನಡ ಷಟ್ಪದಿಯ
ತೊಡಕಂ ಬಿಡಿಸಲೊಂದಂ ಗಡ ಬೇಡುವೆಂ ಕುಡುವುದಿದಕೆ ಸಲಹೆಯಂ ॥

ಇಲ್ಲಿ ನಿಜವಾಗಿ, ಲಯದ ನೆಲೆಯನ್ನು ಅರಿತುಕೊಳ್ಳುವುದು ಕಷ್ಟವಾಗುತ್ತದೆ.
(೪) (೫) (೪) (೫)
'ಕಡುಕಂ । ಗೊಳಿಪ ಕ ॥ ರ್ಣಾಟಕ । ತಾಯುಮಂ....' ಈ ರೀತಿ ಇಲ್ಲಿಯ ಗಣವಿಭಾಗವಾಗಬೇಕು, ಎಂದರೆ, ೯ ಮಾತ್ರೆಯ ಗಣದಲ್ಲಿ ಮೊದಲ ೪ ಮಾತ್ರೆಯಾದಮೇಲೆ ಒಳತಾಳ ಬೀಳಬೇಕು. ಹೀಗೆ ಉಪಗಣಗಳಿಂದ ಒಂದು ದೀರ್ಘ ಗಣವನ್ನು ಕಟ್ಟುವಾಗ ಗಮನಿಸಬೇಕಾದ ನಿಯಮವೊಂದಿರುವಂತೆ ತೋರುತ್ತದೆ: ಈ ಎರಡು ಉಪಗಣಗಳಿಗೂ ಅಳತೆಯಲ್ಲಿ ಸುಸ್ಪಷ್ಟವಾದ, ಸುಲಭಗ್ರಾಹ್ಯವಾದ ವ್ಯತ್ಯಾಸವಿರಬೇಕು. ೭ ಮತ್ತು ೮ ಮಾತ್ರೆಯ ಗಣಗಳಲ್ಲಿ ಈ ವ್ಯತ್ಯಾಸವುಂಟು. ೭=೩+೪; ಈ ಎರಡು ಉಪಗಣಗಳಿಗೂ ಅಳತೆಯಲ್ಲಿ ೩:೪=೧:$೧\frac{೧}{೩}$ರಷ್ಟು ಅಂತರವಿದೆ; ಇದನ್ನು ಮನಸ್ಸು ಸರಿಯಾಗಿ ಹಿಡಿಯುತ್ತದೆಂಬುದು ಅನುಭವಸಿದ್ಧವಾದದ್ದು. ೮ ಮಾತ್ರೆಯ ಗಣದಲ್ಲಂತೂ ಈ ಅಂತರ ಇನ್ನೂ ಸ್ಪಷ್ಟವಾಗಿದೆ— ೩:೫=೧:$೧\frac{೨}{೩}$. ೯ ಮಾತ್ರೆಯ ಗಣದಲ್ಲಾದರೆ ಈ ಅಂತರ ತುಂಬ ಕಡಮೆಯಾಗುತ್ತದೆ—೪:೫=೧:$೧\frac{೧}{೪}$; ಇಲ್ಲಿಯ ಉಪಗಣಗಳಿಗಿರುವ ಈ ಸೂಕ್ಷ್ಮ ವ್ಯತ್ಯಾಸವನ್ನು ಉದ್ದಕ್ಕೂ ಗ್ರಹಿಸಿಕೊಂಡು ಲಯವನ್ನು ಹಿಡಿಯುತ್ತಾ ಹೋಗುವುದು ಕಷ್ಟವಾಗುತ್ತದೆ. ಇದರ ಬದಲು, ೪ ಮಾತ್ರೆಯ ಗಣಕ್ಕೂ ೫ ಮಾತ್ರೆಯ ಗಣಕ್ಕೂ ಒಂದೇ ಬೆಲೆ ಕೊಟ್ಟು ಸಮೀಕರಣಮಾಡಿ ಓದೋಣವೆಂದರೆ, ಅವೆರಡಕ್ಕೂ ಇರುವ ೧ ಮಾತ್ರೆಯ ವ್ಯತ್ಯಾಸ ಅಡ್ಡಿಯಾಗಿ ನಿಲ್ಲುತ್ತದೆ. ಈ ವಿವರಣೆ ಒಪ್ಪಿಗೆಯಾಗಲಿ ಆಗದಿರಲಿ, ೯ ಮಾತ್ರೆಯ ಗಣ ಶ್ರಾವ್ಯವಾಗಿಲ್ಲವೆಂಬುದೇನೋ ಅನುಭವದ ವಿಷಯ. ಸಂಗೀತದಲ್ಲಿ ಕೂಡ ೯ ಮಾತ್ರೆಯ ಸಂಕೀರ್ಣಜಾತಿ ಅಪ್ರಚುರವೆಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬೇಕು.

೨

ಛಂದಸ್ಸಿನ ಜೀವಾಳ ಲಯ; ಲಯವನ್ನು ರೂಪಿಸತಕ್ಕವು ಗಣಗಳು. ಛಂದಸ್ಸಿನ ಗಣಿತದಲ್ಲಿ ಮಾತ್ರೆಯೇ ಕನಿಷ್ಠ ಮಾಪಕವಾದರೂ ಅದರ ಉಪಯೋಗವೆಲ್ಲಾ ಗಣವನ್ನು ಅಳೆಯುವುದರಲ್ಲಿ. ಮಾತ್ರಾಸಂಖ್ಯೆಯ ಮೇರೆಗೆ ಬೇರೆ ಬೇರೆ ಗಣಗಳು ಆಗುತ್ತವೆ; ಗಣವನ್ನು ಕಟ್ಟಿದಮೇಲೆ ಮಾತ್ರೆಗಳ ಕೆಲಸ ಮುಗಿಯಿತು. ಚರಣದ ರಚನೆಯಲ್ಲಿ ಗಮನಿಸಬೇಕಾದದ್ದು ಗಣವೇ ಹೊರತು ಮಾತ್ರೆಯಲ್ಲ. ಆದ್ದರಿಂದ, ಒಂದು ಚರಣವನ್ನು ಗಣಗಳಾಗಿ ವಿಂಗಡಿಸಲು ಆಗದಿದ್ದರೆ, ಅದರಲ್ಲಿ ಮಾತ್ರೆಗಳ ಲೆಕ್ಕ ಸರಿಯಾಗಿದ್ದರೂ ಲಯ ಪ್ರತೀತಿ ಹುಟ್ಟುವುದಿಲ್ಲ. ಈ ಕೆಳಗಿನ ಉದಾಹರಣೆಯನ್ನು ನೋಡಿ:

(೮) ಜಡಿಮಳೆಯು । ಹೋ ಎಂದು । ಸುರಿದಿತ್ತು; । ಬಿರುಗಾಳಿ । (೨೦ ಮಾತ್ರೆ)
ಬಲೆಗೊಳಗಾದ ಕೇಸರಿಯಂತೆ ಗರ್ಜಿಸಿತ್ತು. (೨೦ ಮಾತ್ರೆ)

ಎರಡು ಚರಣಗಳಲ್ಲೂ ಸಮನಾಗಿ ೨೦ ಮಾತ್ರೆಗಳಿವೆ. ಆದರೆ ಲಯದ ದೃಷ್ಟಿಯಿಂದ ಒಂದಕ್ಕೂ ಇನ್ನೊಂದಕ್ಕೂ ಎಷ್ಟು ವ್ಯತ್ಯಾಸ! ಮೊದಲನೆಯದರೊಳಗೆ ತಾಳ ಬೀಳುವ ಕಡೆ ಹೊಸ ಗಣವು ಹೊಸ ಅಕ್ಷರದಿಂದ ಮೊದಲಾಗುವುದರಿಂದ ಲಯ ಸುಲಭವಾಗಿ ಸಿಕ್ಕುತ್ತದೆ. ಎರಡನೆಯದರಲ್ಲಿ ಈ ರೀತಿಯ ಗಣ ವಿಭಜನೆ ಸಾಧ್ಯವಲ್ಲ. ಮೊದಲ ಹತ್ತು ಮಾತ್ರೆಗಳನ್ನೇ ನೋಡೋಣ: 'ಬಲೆಗೊಳಗಾದ ಕೇಸ' — ಇಲ್ಲಿ ತಾಳಕ್ಕೆ ಸರಿಯಾಗಿ ಗಣಗಳನ್ನು ವಿಂಗಡಿಸಬೇಕಾದರೆ 'ಗಾ' ಎಂಬ ಗುರುವನ್ನು ಕತ್ತರಿಸಿ ಒಂದು ಮಾತ್ರೆಯನ್ನು ಹಿಂದಿನ ಗಣಕ್ಕೂ ಇನ್ನೊಂದನ್ನು ಮುಂದಿನ ಗಣಕ್ಕೂ ಹಂಚಿಕೊಡಬೇಕು. ಹೀಗೆ ಒಂದು ಅಕ್ಷರವನ್ನು ಸೀಳುವುದು ಅಸಾಧ್ಯ. ಆದ್ದರಿಂದಲೇ ಇಲ್ಲಿ ಲಯ ಕೆಟ್ಟುಹೋಗಿದೆ.

ತಾಳ ಬೀಳುವ ಕಡೆ ಅಕ್ಷರವನ್ನು ಕತ್ತರಿಸದೆ ಗಣ ವಿಭಾಗ ಮಾಡುವಂತಿದ್ದರೆ ಸಾಕೆ? ಇಷ್ಟರಿಂದಲೇ ಚರಣದ ಧಾಟಿ ಕಿವಿಗೆ ಇಂಪಾಗುತ್ತದೆಯೆ?—ಈ ಸಾಲುಗಳನ್ನು ನೋಡೋಣ:

(೯) ಧ್ವನಿಸಿ ಬಯಲಾಗುತಿಹ ಸುರಗಾನದಂತೆ
ಕನಸಿನಲಿ ಗೈದಿರುವ । ಮೃತ ಪಾನ । ದಂತೆ

ಇಲ್ಲಿಯದು ೫ ಮಾತ್ರೆಯ ಗಣದ ನಡೆ. ಮೊದಲನೆಯ ಚರಣ ಸರಾಗವಾಗಿ ಓಡುತ್ತದೆ. ಎರಡನೆಯದರಲ್ಲಿ ತಾಳ 'ಮೃ' ಎಂಬ ಅಕ್ಷರದ ಮೇಲೆ ಬೀಳಬೇಕಷ್ಟೆ; ಅದಕ್ಕೆ ತಕ್ಕಂತೆ 'ಮೃ' ಎಂಬುದನ್ನು ಒತ್ತಿ ಉಚ್ಚರಿಸಿದರೆ, ಇಲ್ಲಿಯ ಪದಚ್ಛೇದವು 'ಗೈದಿರುವ + ಮೃತಪಾನ' ಎಂದಾಗಿ ಕವಿಯ ಆಶಯವೇ ಕೆಡುತ್ತದೆ. 'ಅಮೃತಪಾನ' ಎಂಬ ಪದಸ್ವರೂಪ ಹೊಳೆಯಬೇಕಾದರೆ, 'ವ' ಎಂಬ ಅಕ್ಷರವನ್ನು ಒತ್ತಬೇಕು; ಆಗ ಲಯ ಕೆಡುತ್ತದೆ.

(೧೦) ವಿಪ್ಲವ ಮೂರ್ತಿಯ ಸಖನಾಗಿಹನೈ
ಕವಿಗರ । ಸುಗಿರಸು । ಗಳ ಋಣವಿಲ್ಲ.

ಇಲ್ಲಿ ಮೊದಲನೆಯ ಚರಣದಲ್ಲಿ ೪ ಮಾತ್ರೆಗಳಿಗೊಂದು ಬಾರಿ ತಾಳ ಸರಿಯಾಗಿ ಬೀಳುತ್ತದೆ. ಮುಂದಿನ ಚರಣದಲ್ಲಿ ಎರಡನೆಯ ಗಣ 'ಸು' ಎಂಬ ಅಕ್ಷರದಿಂದ ಮೊದಲಾಗಬೇಕು; ಅದರಮೇಲೆ ತಾಳಬಿದ್ದರೆ 'ಸುಗಿರಸು' ಎಂಬ ಯಾವುದೋ ವಿಚಿತ್ರಪದದ ಪ್ರತೀತಿಯುಂಟಾಗುತ್ತದೆ.

ಇನ್ನೆರಡು ಉದಾಹರಣೆಗಳು:

(೧೧) ಅಂಧನೃಪ ನೀ ಮರುಳೆ । ಸಗಿ ನಮ್ಮ । ಬರಿಸಿದೈ
ಅಂದು ತೋರಿದೆ ವಾರಣಾವತವನು.

(೧೨) ಮೂಡಲು ಬಿಳುಪೇರಲು ಬೆಚ್ಚಿದರು
ಓಡಿದರಡವಿಯೆ । ದೆಯ ಸೀ । ರಿದರು.

— ಇವುಗಳಲ್ಲಿ ದೊಡ್ಡ ಲಿಪಿಯಲ್ಲಿ ಕೊಟ್ಟಿರುವ 'ಸ', 'ದೆ' ಎಂಬ ಅಕ್ಷರಗಳನ್ನು ತಾಳಕ್ಕೆ ಅನುಸಾರವಾಗಿ ಒತ್ತಿದರೆ ಶಬ್ದದ ಪ್ರತೀತಿಯೇ ಕೆಡುತ್ತದೆ.

ಈ ಸಂದರ್ಭದಲ್ಲಿ ನನ್ನ ಅನುಭವದಿಂದಲೇ ಒಂದು ಉದಾಹರಣೆಯನ್ನು ಕೊಟ್ಟರೆ ಅನುಚಿತವಾಗಲಾರದು. ಒಂದು ಕವನದಲ್ಲಿ,

(೧೩) ನನ್ನಳವು ತಿಳಿದರೂ,
ನಿನ್ನ ಮುನಿಸಿರಿದರೂ,
ಮೊಂಡಾಟವು ಬಿಡದಲ್ಲ!

ಎಂದು ಮೊದಲು ಬರೆದೆನು. ಮಾತ್ರೆಗಳ ಲೆಕ್ಕವೇನೋ ಸರಿಹೋಯಿತು; ಆದರೆ ಕೊನೆಯ ಚರಣವನ್ನು ಏನು ಮಾಡಿದರೂ ೫ ಮಾತ್ರೆಯ ಗಣದ ಲಯಕ್ಕೆ ಹೊಂದಿಸಲು ಆಗಲಿಲ್ಲ. 'ಮೊಂಡಾಟವು। ಬಿಡದಲ್ಲ' ಎಂದೋ 'ಮೊಂಡಾ। ಟವು ಬಿಡ। ದಲ್ಲ' ಎಂದೋ ಗಣಗಳು ಒಡೆಯುತ್ತಿದ್ದುವು. 'ಮೊಂಡಾಟವಣ ಗದಲ್ಲ!' ಎಂದು ಚರಣವನ್ನು ತಿದ್ದಿದಮೇಲೆ ಲಯವೂ ಅರ್ಥವೂ ಹೊಂದಿಕೆ ಯಾದುವು.

ಈ ಪರಿಸ್ಥಿತಿಗೆ ಕಾರಣವೇನು?— ಪದ್ಯದ ಲಯಕ್ಕೆ ಗಮನಕೊಟ್ಟು ಓದು ವಾಗ ನಾವು ಏನು ಮಾಡುತ್ತೇವೆಂಬುದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು. ಮೊದಲ ಒಂದೆರಡು ಚರಣಗಳನ್ನು ದಾಟುವಷ್ಟರಲ್ಲೇ ಪದ್ಯದ ನಡೆ ಯಾವುದೆಂಬು ದನ್ನು ಅರಿತುಕೊಳ್ಳುತ್ತೇವೆ. ಬಳಿಕ, ಮನಸ್ಸಿನಲ್ಲಿ ಅದನ್ನೇ ಮೀಟುತ್ತಾ, ತಾಳಕ್ಕೆ ಪ್ರತಿನಿಧಿಯಾಗಿ ಗಣದ ಮೊದಲ ಅಕ್ಷರವನ್ನು ಒತ್ತುತ್ತಾ ಮುಂದೆ ಸಾಗುತ್ತೇವೆ. ಇಷ್ಟನ್ನು ಮಾಡಿದ ಹೊರತು ನಮಗೆ ಗಣ ವಿಭಾಗ ಅರಿವಾಗುವುದಿಲ್ಲ; ಲಯದ ಅನುಭವ ಉಂಟಾಗುವುದಿಲ್ಲ.

ಈ ಬಗೆಯ ಒತ್ತನ್ನು ತಾಳಬೇಕಾದರೆ, ಪ್ರಾಮುಖ್ಯಕ್ಕೆ ಬರಬೇಕಾದರೆ, ಗಣದ ಮೊದಲಲ್ಲಿ ನಿಲ್ಲುವ ಅಕ್ಷರಕ್ಕೆ ತಕ್ಕಮಟ್ಟಿನ ಅರ್ಹತೆ ಇರಬೇಕು. ಈ ಅರ್ಹತೆ ಪದದ ಎಲ್ಲ ಅಕ್ಷರಗಳಿಗೂ ಒಂದೇಸಮನಾಗಿರುವುದಿಲ್ಲ; ಅವುಗಳಲ್ಲಿ ಕೆಲವಕ್ಕೆ ಉಚ್ಚಾರಣೆ ಸಬಲ, ಇನ್ನು ಕೆಲವಕ್ಕೆ ದುರ್ಬಲ. ಇಂಗ್ಲಿಷಿನಲ್ಲಿರುವ ಹಾಗೆ ಕನ್ನಡ ದಲ್ಲಿ ಸ್ವರಾಘಾತವು (accent) ಪ್ರಮುಖವಾಗಿಲ್ಲವೆಂಬುದು ನಿಜ; ಆದರೆ ಕನ್ನಡ ದಲ್ಲಿ ಅದು ಇಲ್ಲವೇ ಇಲ್ಲವೆಂದು ಹೇಳುವಂತಿಲ್ಲ. ನಮ್ಮಲ್ಲಿ ಸಾಮಾನ್ಯವಾಗಿ ಪದದ ಮೊದಲನೆಯ ಸ್ವರದಮೇಲೆ ಆಘಾತವಿರುತ್ತದೆಂದು ಸ್ಥೂಲವಾಗಿ ಹೇಳಬಹುದು. ಪ್ರತ್ಯಯಗಳು ಈ ದೃಷ್ಟಿಯಿಂದ ದುರ್ಬಲ. ಸ್ವರವು ಗುರುವಾಗಿದ್ದರೆ ಮಾತ್ರ, ಪದದಲ್ಲಿ ಯಾವ ಸ್ಥಾನದಲ್ಲಿದ್ದರೂ ಆಘಾತವನ್ನು ತಡೆಯಬಲ್ಲದು.*

ಛಂದಸ್ಸಿನ ಚೌಕಟ್ಟಿನೊಳಗೆ ಅರ್ಥಗರ್ಭಿತವಾದ ಮಾತುಗಳನ್ನು ಅಳವಡಿಸು ವುದೇ ಪದ್ಯಕಾರನ ಕೆಲಸ. ಒಂದು ಕಡೆ, ತಾಳಮಾನವನ್ನನುಸರಿಸಿ ಛಂದಸ್ಸಿನ ಧಾಟಿಯನ್ನು ಕಾಪಾಡಿಕೊಳ್ಳಬೇಕು; ಇನ್ನೊಂದು ಕಡೆ, ಆಡುವ ಮಾತಿನ ಜೀವ ಸ್ವರಗಳು ಕೆಡದಂತೆ ನೋಡಿಕೊಳ್ಳಬೇಕು. ಗಾಯಕನಿಗೆ ಹಾಡಿನ ಅಕ್ಷರಗಳನ್ನು ತನ್ನ ಅನುಕೂಲಕ್ಕೆ ತಕ್ಕಂತೆ ಎಳೆದು ತೇಲಿಸಿ ಒತ್ತಿ ಎತ್ತಿ ಹೇಳುವ ಸ್ವಾತಂತ್ರ್ಯ

* ಕನ್ನಡದಲ್ಲಿ ಸ್ವರಾಘಾತದ ಪರಿಶೋಧನೆ ಶಾಸ್ತ್ರೀಯವಾಗಿ ಇದುವರೆಗೆ ನಡೆದಿಲ್ಲ. ಆದಕಾರಣ, ಅದರ ನಿಯಮಗಳನ್ನು ನಿಷ್ಕೃಷ್ಟವಾಗಿ, ಸಮಗ್ರವಾಗಿ ಇಲ್ಲಿ ಹೇಳಲು ಸಾಧ್ಯವಾಗಿಲ್ಲ. ಈ ವಿಷಯವನ್ನು ಪರಿಶೀಲಿಸತಕ್ಕವರಿಗೆ ಕನ್ನಡ ಛಂದಸ್ಸಿನ ವಿಮರ್ಶೆ ಬಹುಮಟ್ಟಿಗೆ ಉಪಯುಕ್ತವಾಗಬಹುದು.

ವುಂಟು; ಅವನ ಬಾಯಲ್ಲಿ ಕೃತಿಯ ಮಾತುಗಳು ಸ್ವಲ್ಪ ನಲುಗಿದರೂ ಲಕ್ಷ್ಯಕ್ಕೆ ಬರಲಾರವು. ಪದ್ಯಕಾರನಿಗೆ ಈ ಸ್ವಾತಂತ್ರ್ಯವಿಲ್ಲ. ಪದ್ಯದ ಗಣಗಳು ತನ್ನನ್ನು ಆ ಕಡೆಗಷ್ಟು, ಈ ಕಡೆಗಷ್ಟು ಹರಿದು ಹಂಚಿಕೊಳ್ಳುತ್ತಿದ್ದರೆ, ಪದವು ಸುಮ್ಮನೆ ಸಹಿಸಿಕೊಂಡಿರುವುದಿಲ್ಲ. ಪದದ ಪ್ರಮುಖವಾದ ಅಕ್ಷರದಿಂದ ಗಣ ಮೊದಲಾದರೆ ಸರಿ; ಇಲ್ಲದೆಹೋದರೆ, ತಾಳವೊಂದು ಕಡೆ ಜಗ್ಗಿದರೆ ಸ್ವರದ ಒತ್ತು ಇನ್ನೊಂದು ಕಡೆ ಜಗ್ಗುತ್ತದೆ. ಲಯ ನೆಲೆದಪ್ಪಿ, ಪದ್ಯ ಗಂಟುಗಂಟಾಗುತ್ತದೆ.

ಮೇಲಿನ ಮಾತಿಗೆ, ಗಣಕ್ಕೊಂದು ಪದವನ್ನಿಡುತ್ತಾ ಹೋಗಬೇಕೆಂದು ಸರ್ವಥಾ ಅರ್ಥವಲ್ಲ. ಅಂಥ ಪದವಿನ್ಯಾಸಕ್ಕಿಂತ ಬೇಸರಪಡಿಸುವುದು ಬೇರೊಂದಿಲ್ಲ. ಜೀವನದಲ್ಲಿ ಹೇಗೋ ಛಂದಸ್ಸಿನಲ್ಲೂ ಹಾಗೆಯೇ ನಿಯಮವೂ ಬೇಕು, ವೈವಿಧ್ಯವೂ ಬೇಕು. ಇವೆರಡನ್ನೂ ಹೊಂದಿಸುವುದೇ ಕವಿಯ ಮುಂದಿರುವ ಸಮಸ್ಯೆ. ಇದರ ಮೇಲೆ, ಪದದಲ್ಲಿ ಆಘಾತವನ್ನು ಸಹಿಸತಕ್ಕದ್ದು ಅದರ ಮೊದಲ ಸ್ವರವೊಂದೇ ಅಲ್ಲ; ಮಿಕ್ಕ ಸ್ವರಗಳೂ ಸಮಯೋಚಿತವಾಗಿ ತಾಳದ ಏಟನ್ನು ತಡೆಯಬಲ್ಲವು. ಪದ್ಯದ ಶ್ರುತಿ ಎಲ್ಲಿ ಸಹ್ಯವಾಗುತ್ತದೆ, ಎಲ್ಲಿ ಅಸಹ್ಯವಾಗುತ್ತದೆ ಎಂಬುದನ್ನು ತೆರೆದ ಮನಸ್ಸಿನಿಂದ ಗಮನಿಸಿದರೆ, ಕೆಲವು ಕಟ್ಟಳೆಗಳು ಹೊರಡುವಂತೆ ತೋರುತ್ತದೆ. ಅವನ್ನು ಈ ಕೆಳಗೆ ಸೂಚಿಸಲಾಗಿದೆ:

ಪದದ ಆದಿಯಲ್ಲಿ ಒಂದಕ್ಕಿಂತ ಹೆಚ್ಚಾಗಿ ಲಘುಸ್ವರಗಳಿದ್ದರೆ, ಎರಡನೆಯ ಸ್ವರ ಅತಿ ದುರ್ಬಲವಾಗಿರುತ್ತದೆ; ತಾಳದ ಒತ್ತನ್ನು ಅದು ಎಷ್ಟು ಮಾತ್ರಕ್ಕೂ ತಡೆಯಲಾರದು. ಆದ್ದರಿಂದಲೇ, ಮೇಲಿನ ೯, ೧೧ ಮತ್ತು ೧೨ನೆಯ ಉದಾಹರಣೆಗಳಲ್ಲಿ ಯತಿಭಂಗ*ವಾಗಿರುವುದು.

ಪದದ ಕೊನೆಯಲ್ಲಿರುವ ಲಘುವಿನಿಂದಲೂ ಹೊಸ ಗಣ ಆರಂಭವಾಗಬಾರದು. ಮೇಲಿನ ೧೦ ಮತ್ತು ೧೩ನೆಯ ಉದಾಹರಣೆಗಳಲ್ಲಿ ಈ ದೋಷವಿದೆ.

ಗುರು ಪದದಲ್ಲಿ ಎಲ್ಲಿದ್ದರೂ ಸರಿಯೆ, ಒತ್ತನ್ನು ತಡೆದುಕೊಳ್ಳುತ್ತದೆ. ಆದಕಾರಣ, ಪದದ ಎರಡನೆಯ ಸ್ವರವೇ ಆಗಲಿ ಕೊನೆಯ ಸ್ವರವೇ ಆಗಲಿ ಗುರುವಾಗಿದ್ದರೆ, ಅದರಿಂದ ಗಣ ಮೊದಲಾದರೂ ಯತಿ ಕೆಡುವುದಿಲ್ಲ.

ಉದಾಹರಣೆ: ಪದದ ಎರಡನೆಯ ಸ್ವರಕ್ಕೆ—

(೧೪) ಚಟಪಟಗುಟ್ಟ ಚ । ಟಾಕಿಯು ಮುಂಗಡೆ ಠೀವಿಯ ತೋರುತ ಬರುತಿರಲು.

(೧೫) ಪುರುಷಬಲವ ಬೆಳಗಿರೆನುತ ಜಡರ ಪಳಿದು ಮೊಳಗುತುಂ<br>ಪರಿವಳೀ ಕ । ವೇರತನಯೆ ಧೀರಜನನಿಯೆನಿಸುತುಂ.

ಪದದ ಕೊನೆಯ ಸ್ವರಕ್ಕೆ—

(೧೬) ಸುಖದ ದುಃಖದ ವಿಪುಲವೇಣಿ, ಪನ್ನಗವೇಣಿ,<br>ಭಾಗ್ಯದೇವತೆಯ ಕೊರ । ಲಿಂ ಬಿದ್ದ ಕಟ್ಟಾಣಿ.

* ಗಣಕ್ಕೆ ಸರಿಯಾಗಿ ಪದವೂ ಮುಗಿಯುವುದಕ್ಕೆ ಅಥವಾ ವಿಭಾಗವಾಗುವುದಕ್ಕೆ 'ಯತಿ'ಯೆಂದು ಇಲ್ಲಿ ಹೆಸರು ಕೊಡಲಾಗಿದೆ. ಈ 'ಯತಿ'ಸ್ವರೂಪವು ಸಂಸ್ಕೃತ ಛಂದಸ್ಸಿನ ಯತಿಸ್ವರೂಪವನ್ನು ಅನೇಕ ಅಂಶಗಳಲ್ಲಿ ಹೋಲುತ್ತದೆ. ಕುತೂಹಲವುಳ್ಳವರು 'ವೃತ್ತ ರತ್ನಾಕರ'ಕ್ಕೆ (i. ೧೨) ನಾರಾಯಣಭಟ್ಟನು ಬರೆದಿರುವ ಟೀಕೆಯನ್ನು ನೋಡಬಹುದು.

'ಮುಡಿ'ಯನ್ನು ಕುರಿತು ಒಂದು ಮಾತು.* ಇದು ಸ್ವರೂಪದಲ್ಲಿ ಲಘು ವಾಗಿದ್ದಾಗ ಕೂಡ, ಇದಕ್ಕೆ ಉಚ್ಚಾರಣೆಯಲ್ಲಿ ಒಂದು ಗುರುವಿನ ಬೆಲೆಯಾದರೂ ಬಂದೇಬರುತ್ತದೆ. ಆದಕಾರಣ ಇದರಮೇಲೆ ತಾಳ ಬಿದ್ದಾಗ ಯತಿಭಂಗ ವಾಗುವುದಿಲ್ಲ.

ಅಂತೂ, ಒಂದು ಪದವನ್ನು ಎರಡು ಗಣಗಳಿಗೆ ಹಂಚುವುದಾದರೆ, ಅದರಲ್ಲಿ ಕನಿಷ್ಠಪಕ್ಷ ೨ ಮಾತ್ರೆಯಷ್ಟು ಅಕ್ಷರಗಳಾದರೂ (ಎಂದರೆ ಎರಡು ಲಘುಗಳು ಅಥವಾ ಒಂದು ಗುರು) ಒಂದೊಂದು ಗಣಕ್ಕೆ ಸೇರಬೇಕು. ('ಚಟಾಕಿ', 'ಕವೇರ ತನಯೆ'—ಇಂಥ ಕಡೆಗಳಲ್ಲಿರುವಂತೆ ಪದದ ಆದಿಯಲ್ಲಿ ಒಂದು ಲಘುವಾದ ಒಡನೆಯೇ ಗುರು ಬಂದರೆ ಈ ನಿಯಮ ಅನ್ವಯಿಸುವುದಿಲ್ಲ.) ಈ ಕೆಳಗಿನ ಚರಣ ಗಳನ್ನು ನೋಡಿ:

(೧೭) ನಿನ್ನಾ ಮೋಹದ ನಡುವನು ಬಳಸುವ
ಚಿನ್ನದ ಕಟ್ಟಾ । ಗಲು ಬಯ । ಕೆ.

(೧೮) ಮುದುವಣಿಗನೊಪ್ಪುತಿರಲವನ ಕೈ । ಗಳ ಬಿಗಿದು
ಪಡೆದು ಕೊಂಡೊಯ್ದೊರಗಿ । ಸಿದ ರುದ್ರಭೂಮಿಯಿದು.

ಮೇಲೆ ೧೩ನೆಯ ಉದಾಹರಣೆಯ 'ಮೊಂಡಾಟವು ಬಿಡದಲ್ಲ' ಎಂಬ ಚರಣದಲ್ಲಿ ಕೆಟ್ಟುಹೋದ ಯತಿ 'ಮೊಂಡಾಟವಣಗದಲ್ಲ' ಎಂಬುದರಲ್ಲಿ ಹೇಗೆ ಸರಿಹೋಯಿತು? ಈ ತಿದ್ದಿದ ಚರಣದಲ್ಲಿ ತಾಳ ಬೀಳುವ ಕಡೆ ಸಂಧಿಯಾಗಿ ಕ್ಲೇಶವನ್ನು ಪರಿಹರಿಸಿದೆ. ಒಂದು ಅಕ್ಷರದಲ್ಲಿ ಆಘಾತ ಬೀಳುವುದು ಅದರ ಸ್ವರದಮೇಲೆ. ಇಲ್ಲಿ 'ವಣಗದ-' ಎಂಬ ಗಣದ ಆದಿಸ್ವರವಾದ 'ಅ' ಎಂಬುದು 'ಅಣಗದು' ಎಂಬ ಪದದ ಮೊದಲನೆಯ ಸ್ವರವೂ ಆಗಿರುವುದರಿಂದ ತಾಳದ ಒತ್ತನ್ನು ಸರಿಯಾಗಿ ತಡೆಯುತ್ತದೆ. ಈ ಸ್ವರಕ್ಕೆ 'ಮೊಂಡಾಟವು' ಎಂಬ ಹಿಂದಿನ ಪದದ 'ವ್-' ಎಂಬ ವ್ಯಂಜನ ಅಂಟಿ ಕೊಂಡಿದ್ದರೂ ಏನೂ ತೊಂದರೆಯಾಗಿಲ್ಲ; ಸಂಧಿಯಲ್ಲಿ ತನ್ನ ಸ್ವರವನ್ನು ಕಳೆದು ಕೊಂಡ ಬಳಿಕ ಅದಕ್ಕೆ ಯಾವ ಮಹತ್ತ್ವವೂ ಉಳಿಯಲಿಲ್ಲ. ಹೀಗೆ ಸಂಧಿಸ್ಥಾನದಲ್ಲಿ ಗಣವನ್ನು ಮೊದಲು ಮಾಡುವುದು ಸರ್ವಸಾಮಾನ್ಯವಾದ ರೂಢಿ. ಇದಕ್ಕೆ ಮೇಲಿನ ಉದಾಹರಣೆಗಳಲ್ಲೇ ಎಷ್ಟೋ ನಿದರ್ಶನಗಳು ದೊರೆಯುತ್ತವೆ. ಇನ್ನೂ ಕೆಲವನ್ನು ಕೊಡಬಹುದು:

(೧೯) ಅತ್ತ । ರತ್ತ । ರತ್ತ । ರೆಂದು
ಹೊತ್ತು ಮೂರು ನುಡಿವೆ ನೀನ್.

(೨೦) ನೂರು ತೋಟಗಳಲಿ ನಿಂತು
ಚೆಲುವು ನಗುತ । ಲಿರುವು । ದೆಂತು!

(೨೧) ಚಿಮ್ಮುತ ಎಲೆಯಿಂ । ದೆಲೆಯೆಡೆಗೆ
ಚಿಮುಕಿಸಿ ಮೋಹವ । ನಡಿಗಡಿಗೆ.

* ಷಟ್ಪದಿಯ ೩ ಮತ್ತು ೬ನೆಯ ಚರಣಗಳ ಕೊನೆಯಲ್ಲಿ ನಿಲ್ಲುತ್ತಿದ್ದಂತೆ, ಚರಣದ ಕೊನೆಯಲ್ಲಿ ಬಿಡಿಯಾಗಿ ನಿಂತು ಅದಕ್ಕೆ ಮುಕ್ತಾಯ ಕೊಡುವ ಅಕ್ಷರಕ್ಕೆ 'ಮುಡಿ'ಯೆಂಬ ಹೆಸರನ್ನು ಇಲ್ಲಿ ಕೊಟ್ಟಿದೆ. ಮೇಲಿನ ೧೪ನೆಯ ಉದಾಹರಣೆಯಲ್ಲಿ '....। ತೋರುತ। ಬರುತಿರ। ಲು' ಎಂಬ ಕಡೆ 'ಲು' ಎಂಬ ಅಕ್ಷರ ಮುಡಿ. ಇದರ ಬೆಲೆ ಒಂದು ಗುರುವಿನಷ್ಟೆಂದು ಹೇಳುವುದು ವಾಡಿಕೆ; ನಿಜವಾಗಿ ಇದರ ಬೆಲೆ ಒಂದು ಗಣದ ಕಾಲ. ಮುಡಿಯನ್ನು ಉಚ್ಚರಿಸಿದ ಬಳಿಕ ಉಳಿಯುವ ಕಾಲವನ್ನು ಮೌನ ತುಂಬುತ್ತದೆ.

(೨೨) ನಕ್ಷತ್ರ । ದುಪ್ಪರಿಗೆ ತುತ್ತತುದಿಯಲಿ ನಿಂತು
ಅಕ್ಷಯದ ಆನಂದ । ಮಣಿವರಸಿಯಾಗೆ!

(೨೩) ಎಮ್ಮ ಮನೆ । ಯಂಗಳದಿ ಬೆಳೆದೊಂದು ಹೂವನ್ನು
ನಿಮ್ಮ ಮುಡಿ । ಲೊಳಗಿಡಲು ತಂದಿರುವೆವು.

ಆದಷ್ಟುಮಟ್ಟಿಗೂ ಪದಚ್ಛೇದವು ಸ್ವಾಭಾವಿಕವಾಗಿರುವಂತೆ ನೋಡಿಕೊಳ್ಳಬೇಕು. 'ನಡತೆಯಲಿ' ಎಂಬುವನ್ನು 'ನಡತೆ । ಯಲಿ' ಎಂದು ವಿಭಾಗಿಸಿದರೆ ಸರಿಹೋಗುತ್ತದೆ; ಏಕೆಂದರೆ ಇಲ್ಲಿ ಛೇದವು ಪ್ರಕೃತಿ ಪ್ರತ್ಯಯಗಳಿಗೆ ನಡುವೆ ಬರುತ್ತದೆ. ಆದರೆ 'ನಡ । ತೆಯಲಿ' ಎಂಬುದು ಸರಿಹೋಗುವುದಿಲ್ಲ. ಸಮಾಸದಲ್ಲೂ ಹೀಗೆಯೇ:

(೨೪) ಕಾರ್ ಮುಸುಕು ರಾತ್ರಿ ಬೆ । ಳ್ಗುದುರೆಗಳ ಸೂರ್ಯಂಗೆ ಬೆನ್ನಿತ್ತು ಸರಿಗುಂ.

ಇಲ್ಲಿ 'ಬೆಳ್ಗುದುರೆಗಳ (= ಬೆಳ್ । ಗುದುರೆಗಳ)' ಎಂಬ ಕಡೆ ಛೇದವು ಸಹಜವಾಗಿದೆ, ಹಿತವಾಗಿದೆ. ಇದನ್ನು 'ಬೆಳ್ಗು । ದುರೆಗಳ' ಎಂಬಂತೆ ಒಡೆಯಬೇಕಾಗಿಬಂದಿದ್ದರೆ ಅಸುಖವುಂಟಾಗುತ್ತಿತ್ತು. ಅಂತೂ ಗಣವಿನ್ಯಾಸದಲ್ಲಿ ಅರ್ಥಪ್ರತೀತಿಗೆ ಭಂಗವುಂಟಾಗದಂತೆ ಕವಿ ಮೈಯೆಲ್ಲಾ ಕಣ್ಣಾಗಿ ನೋಡಿಕೊಳ್ಳಬೇಕು.*

(೨೫) ........ಕರಯುಗದಿ
• ವಿಜಯ ಮಾಲೆಯನಾಂತು, ಗಜಪುರದ ಕಡೆಗೊರ್ಮೆ
ಮಣಿಪುರದ ಕಡೆಗೊರ್ಮೆ ಬಗೆಯನಿರ್ಕಡೆ ಮಾಡಿ
ಒಲವಿನುಯ್ಯಾಲೆಯಲಿ ನಲಿದಳ್ ವಿಜಯಲಕ್ಷ್ಮಿ!

ಇಲ್ಲಿ ಕೊನೆಯ ಚರಣದ ನಡೆ ಹೇಗೆ?—
ಒಲವಿನು । ಯ್ಯಾಲೆಯಲಿ । ನಲಿದಳ್ ವಿ । ಜಯಲಕ್ಷ್ಮಿ ।

ಎಂದು ಗಣಗಳನ್ನು ವಿಂಗಡಿಸಿದರೆ 'ವಿ। ಜಯ' ಎಂಬ ಕಡೆ ಯತಿಭಂಗವಾಗುತ್ತದೆ. ಈ ಚರಣವನ್ನು '......। ನಲಿದಳ್$_\Lambda$ । ವಿಜಯಲ। ಕ್ಷ್ಮಿ!' ಎಂದು ಓದಬೇಕೆಂದು ತೋರುತ್ತದೆ. ಆಗ, ಮೂರನೆಯ ಗಣದಲ್ಲಿ ಒಂದು ಮಾತ್ರೆಯ ಕಾಲದ ಮೌನ ಅಥವಾ ವಿರಾಮ ಬರುತ್ತದೆ (ಇದನ್ನು $\Lambda$ ಈ ಚಿಹ್ನೆಯಿಂದ ತೋರಿಸಿದೆ); ಕೊನೆಯಲ್ಲಿ 'ಮುಡಿ' ನಿಲ್ಲುತ್ತದೆ. ಇಂಥ ಪ್ರಯೋಗಗಳು ಸರಳರಗಳೆಯಲ್ಲಿ ದೊರೆಯುವುದುಂಟು. ಇಲ್ಲಿ ಗಮನಿಸಬೇಕಾದ ಅಂಶವೇನೆಂದರೆ, ವಿರಾಮ ಬರುವ ಕಡೆ ಪದದಲ್ಲೂ ವಿರಾಮಕ್ಕೆ ಅವಕಾಶವಿರಬೇಕು; ಮುಡಿಯೊಂದಿಗೆ ಭಾವದಲ್ಲೂ ಮುಕ್ತಾಯವಿರಬೇಕು.

(೨೬) ಕಾಡಿಸುವ ಕಾಡುದೇವರಿಗೆ ಹೊಗಳಿಕೆ ಬೇಕು.
ಪ್ರೇಮನಿಧಿಯಾಗಿರುವ । ದೇವರಿ$_\Lambda$ । ಗೊಲುಮೆ ಸಾ । ಕು.

ಇಲ್ಲಿ, 'ದೇವರಿ-$_\Lambda$' ಎಂಬ ಕಡೆ ಪದವೂ ಮುಗಿದಿದ್ದರೆ ಚೆನ್ನಾಗಿರುತ್ತಿತ್ತು.

---

* ಇಂದಿನ ಛಂದಸ್ಸಿಗೆ ತಳಹದಿಯಾಗಿರುವ ಮಾತ್ರಾಗಣಗಳು ರಗಳೆ ಷಟ್ಪದಿಗಳಲ್ಲಿ ಪ್ರಚುರವಾಗಿದ್ದುವು ತಾನೆ. ಇಲ್ಲಿಗೆ ಅನ್ವಯಿಸುತ್ತವೆಂದು ಮೇಲೆ ಗುರುತುಕಾಣಿಸಿರುವ ಯತಿನಿಯಮಗಳ ವ್ಯಾಪ್ತಿಯನ್ನು ಅಲ್ಲಿಯೂ ನೋಡಬಹುದು. ಹಿಂದಿನ ಕವಿಗಳು ಇವನ್ನು ಉಲ್ಲಂಘಿಸಿರುವ ಕಡೆಗಳಲ್ಲಿ ಪದ್ಯದ ಓಟ ಕೆಟ್ಟಿರುವುದೂ ಗೋಚರವಾಗುತ್ತದೆ. ಇದಕ್ಕೆ ಉದಾಹರಣೆಗಳನ್ನೂ, ಈ ವಿಷಯವನ್ನು "ಅಂಶ"ದ ದೃಷ್ಟಿಯಿಂದ ವಿಮರ್ಶಿಸಿ ನಡೆಸಿರುವ ಪರಿಶೀಲನೆಯನ್ನೂ 'ಕನ್ನಡ ಕೈಪಿಡಿ'–ಸಂಪುಟ ೧ (ಎರಡನೆಯ ಮುದ್ರಣ), ಪುಟ 176–9ರಲ್ಲಿ ನೋಡಬಹುದು.

ಅಥವಾ, 'ದೇ' ಎಂಬುದನ್ನು ಪ್ಲುತವಾಗಿ ಉಚ್ಚರಿಸಿ ಅದಕ್ಕೆ ೩ ಮಾತ್ರೆಯ ಕಾಲವನ್ನು ಕೊಡಬೇಕೋ ಏನೋ.

ಯತಿಯನ್ನು ಪಾಲಿಸುವುದರಲ್ಲಿ ವೈವಿಧ್ಯವನ್ನು ಎಷ್ಟು ಮಟ್ಟಿಗೆ ಉಳಿಸಿಕೊಳ್ಳಬಹುದೆಂಬುದಕ್ಕೆ ಈ ಕೆಳಗಿನ ಒಂದು ನಿದರ್ಶನ ಸಾಕು:

(೨೭) ಕಲೆಯು । ಬಲ್ಲ ಕು । ಲಾಲ । ಮೂಡಿಪ ।
ಮಾಟ । ದೊಲು ಮೃ । ತ್ತಿಕೆಯೊ । ಳು—
ತಿರುಗಿ । ಜಗವೆಂ । ತಾಗು । ತಿರುವುದು ।
ಪೆರೆಯು । ಕಲೆಯಿಂ । ತಮದೊ । ಳು !

ಚರಣ ಮಧ್ಯದಲ್ಲಿಯೇ ಯತಿನಿಯಮಗಳು ಇಷ್ಟು ಸೂಕ್ಷ್ಮವಾಗಿರುವಾಗ ಚರಣಾಂತ್ಯದಲ್ಲಿ ಕವಿ ಇನ್ನಷ್ಟು ಎಚ್ಚರಿಕೆವಹಿಸಬೇಕೆಂದು ಬೇರೆ ಹೇಳುವುದು ಅನಾವಶ್ಯಕ. ಹೊಸಗನ್ನಡದ ಕವಿತೆಯಲ್ಲಿ ಚರಣದೊಂದಿಗೆ ಪದವನ್ನೂ ಮುಗಿಸುವುದೇ ಪದ್ಧತಿ; ಒಮ್ಮೊಮ್ಮೆ ಲೋಪ ಸಂಧಿಯ ಸಹಾಯದಿಂದ ಕೊನೆಯ ಪದದ ಅಂತ್ಯವ್ಯಂಜನವನ್ನು ಮುಂದಿನ ಚರಣದ ಮೊದಲಿಗೆ ಜೋಡಿಸುವುದುಂಟು. ಇಂದಿನ ರೂಢಿ ಹೀಗಿರುವುದರಿಂದ, ಹಿಂದಿನ ಚರಣಕ್ಕಷ್ಟು ಮುಂದಿನ ಚರಣಕ್ಕಷ್ಟು ಸೇರುವಂತೆ ಒಂದು ಪದವನ್ನು ಛೇದಿಸಿದರೆ, ಅದರಲ್ಲೂ ಯತಿನಿಯಮವನ್ನು ಮೀರಿದರೆ, ಶ್ರುತಿಸಹ್ಯವಾಗದೆ ಹೋಗುವುದು ಖಂಡಿತ:

(೨೮) ಕಾಲಚಕ್ರದಲಿ ಚಿತ್ರಿಸಿದ ಚಕ್ರಾಧಿಪ-
ತ್ಯಗಳ ಗಣನೆಯುಂ ಮಾಡಬಲ್ಲವರುಂಟೆ ಕಾ-
ಲಕಾಲಕೆ ತೋರಿ ಸಂಕಲ್ಪಕಾರ್ಯವ ಮಾಡಿ
ಮುಳುಗುವುವು ;. . . .

(೨೯) ನುಡಿಸುತಿರು ಏಕನಾದವ ಗುರುವೆ! ಜೀವಲಪ-
ರಿಯ ಭೇದ ಒಡೆದು ಕಾಣಲಿ, ಅಭೇದದ ಕಟ್ಟ-
ಡವು ಇಟ್ಟಳಿಸಿ ಬರಲಿ, . . . .

೨೮ನೆಯ ಉದಾಹರಣೆಯಲ್ಲಿ ಗಮನಿಸತಕ್ಕ ಇನ್ನೊಂದು ಅಂಶವುಂಟು. 'ಕಾಲಕಾಲಕೆ' ಎಂಬ ಪದವು ಚರಣಾಂತ್ಯದಲ್ಲಿ ಛೇದಹೊಂದಿ, 'ಲಕಾಲಕೆ' ಎಂಬ ಅದರ ಭಾಗವು ಒಂದು ಗಣವಾಗಿ ನಿಂತಿದೆ. ಇಲ್ಲಿ 'ಲ' ಎಂಬ ಲಘುವಿನಮೇಲೆ ಒತ್ತು ಬೀಳಬೇಕು; ಆದರೆ ಅದರ ಮುಂದೆಯೇ 'ಕಾ' ಎಂಬ ಗುರು ನಿಂತು ಆಘಾತವನ್ನು ತನ್ನ ಕಡೆಗೆ ಸೆಳೆಯುತ್ತದೆ. ಹೀಗಾಗಿ ಗಣದ ರಚನೆ ಶ್ರಾವ್ಯವಾಗಿಲ್ಲ. ಗಣದ ಮೊದಲಲ್ಲಿ ಒಂದು ಲಘುವನ್ನಿಟ್ಟು ಕೂಡಲೇ ಗುರುವನ್ನು ತರುವ ಪದ್ಧತಿ ಕನ್ನಡ ಛಂದಸ್ಸಿನ ಸಂಪ್ರದಾಯಕ್ಕೆ ಅನನುಗುಣವಾದದ್ದು. ಹಿಂದಿನಿಂದಲೂ ಅಷ್ಟೇ; ಕವಿಗಳು ಇಂಥ ಗಣಗಳನ್ನು ಸಾಮಾನ್ಯವಾಗಿ ಉಪಯೋಗಿಸಿಲ್ಲ, ಶಾಸ್ತ್ರಕಾರರು ಒಪ್ಪಿಲ್ಲ. ಷಟ್ಪದಿಗಳಲ್ಲಿ ∪– (೩ ಮಾತ್ರೆ), ∪–∪ (೪ ಮಾತ್ರೆ), ∪– – ಅಥವಾ ∪–∪∪ (೫ ಮಾತ್ರೆ): ಈ ಗಣಗಳು ಬರಕೂಡದೆಂದು ನಿಷೇಧಿಸಿರುವ ವಿಷಯ ಎಲ್ಲರಿಗೂ ತಿಳಿದಿದೆ. (ಈ ಗಣಗಳನ್ನು 'ವಿಷಮಗಣ'ಗಳೆಂದು ಕರೆಯಬಹುದು.) ಹೀಗೆ ನಿಷೇಧಿಸುವುದಕ್ಕೆ ಸ್ವರಾಘಾತದ ನಿಯಮದಮೇರೆಗೆ ಔಚಿತ್ಯವೂ ಉಂಟೆಂದು ಮೇಲೆ ನೋಡಿದ್ದಾಗಿದೆ.

ಆದರೂ, ಈಗಿನ ಕವಿಗಳು ವಿಶೇಷ ಪ್ರಯೋಜನದ ದೃಷ್ಟಿಯಿಂದ ವಿಷಮ ಗಣಗಳನ್ನು ಕೆಲವುವೇಳೆ ಪ್ರಯೋಗಿಸುವುದುಂಟು:

(೩೦) ಬೊಬ್ಬೆಯ ಹಬ್ಬಿಸಿ ಬಂದೇ ಬಾರಿಗೆ
ಉಬ್ಬರ ಎಬ್ಬಿಸಿ ಕಡಲಿನ ನೀರಿಗೆ,
ಬೊಬ್ಬುಳಿ ತೆರೆಯನು। **ದಡಕ್ಕೆ**। ಹೊಮ್ಮಿಸಿ,
ಅಬ್ಬರದಲಿ ಭೋರ್ ಭೋರೆನೆ ಗುಮ್ಮಿಸಿ,....

ಇದು 'ತೆಂಕಣಗಾಳಿಯಾಟ'ದ ಒಂದು ವಿಲಾಸದ ವರ್ಣನೆ. ಇಲ್ಲಿ ದೊಡ್ಡ ಲಿಪಿಯಲ್ಲಿ ತೋರಿಸಿರುವ ಕಡೆ ವಿಷಮಗಣ ಬಂದು, ತೆರೆ ದಡಕ್ಕೆ ಅಪ್ಪಳಿಸಿದ ಭಾವಕ್ಕೆ ಪುಷ್ಟಿಕೊಡುತ್ತದೆ.

ಮೂರು ಮಾತ್ರೆಯ ಗಣದಲ್ಲಿ ಹೆಚ್ಚು ವೈವಿಧ್ಯಕ್ಕೆ ಅವಕಾಶವಿಲ್ಲ. ⏑— ಎಂಬ ವಿಷಮಗಣವನ್ನು ಕೈಬಿಟ್ಟರೆ, —⏑, ⏑⏑⏑ ಈ ಎರಡು ಬಗೆಯಲ್ಲೇ ಅದರ ಪ್ರಸ್ತಾರ ಮುಗಿಯುತ್ತದೆ. ಆದಕಾರಣ ಕವಿಗಳು ೩ ಮಾತ್ರೆಯ ಗಣದಲ್ಲಿ ⏑— ಗಣವನ್ನೂ ಆಗಾಗ ಉಪಯೋಗಿಸುತ್ತಾರೆ. ಇದು ಹದ ಮೀರದಂತೆ, ಅದರಲ್ಲೂ ಚರಣದ ಕೊನೆಯಲ್ಲಿ, ಬಂದರೆ ಇಂಪಾಗಿಯೂ ಇರಬಲ್ಲದು. ಮುಂದಿನ ಪದ್ಯದಲ್ಲಿ ಹೀಗೆ ವಿಷಮಗಣಗಳು ಸಾಲುಗಟ್ಟಿಕೊಂಡು, ಚರಣದ ನಡುವೆ ಕೂಡ ಬಂದಿವೆ:

(೩೧) ಬಂಡನುಂಡು ದುಂಬಿವಿಂಡು ಹಾಡುತಿಹುವು ಹಾರುತ;
ಮತ್ತ । ಮಧು । ಮಾಸ । ವಿದು । ಬನ್ನಿರೆಂದು ಸಾರುತ.
ಜಾರುತಿಹುದು ಮಾಗಿ । ಚಳಿ, ।
ಕುಸುಮಿಸಿರುವ ಲತೆಗೆ । ಅಲಿ ।
ಮೊರೆಯುತಿಹುವು ಸೊಕ್ಕಿ । ದಳಿ ।
ಮುಕ್ತಜೀವರಂದದಿ!
ಉಲಿಯೆ । ಪಿಕ, । ಗಳಪೆ । ಶುಕ, । ಸುಗ್ಗಿ ಬಂದಿತಂದದಿ!

ಇಲ್ಲಿಯ ವಿಷಮಗಣಗಳಲ್ಲಿ ಲಘುಸ್ವರಕ್ಕೆ ಗುರುವಿನ ಬೆಲೆಯೂ, ಅಂತ್ಯ ಪ್ರಾಸದ ಬಿಗಿಯೂ ಸಮುಚಿತವಾಗಿ ಬಂದು ಪದ್ಯ ಮನೋಹರವಾಗಿದೆ.

'ರಗಳೆಯ ಕವಿ' ಹರಿಹರನು ⏑— ಗಣವನ್ನು ಹಿಂದೆಯೇ 'ಮಹಾದೇವಿಯಕ್ಕನ ರಗಳೆ'ಯಲ್ಲಿ ರಮ್ಯವಾಗಿ ಉಪಯೋಗಿಸಿದ್ದನು:

(೩೨) ಬರುತಮಿರ್ದಳಿಂದುಧರನ ಪೂಜೆಗೆಮ್ಮ । ಮಹಾ । ದೇವಿ
ಪರಮಭಕ್ತೆ ಶಾಂತಿಯುಕ್ತೆಯತಿವಿರಕ್ತೆ । ಮಹಾ । ದೇವಿ.

ಚರಣದ ಮೊದಲಲ್ಲೇ ತಾಳವೂ ಮೊದಲಾಗಿ ಮುಂದುವರಿಯುವುದೇ ಪದ್ಯದ ರೂಢಿ. ಆದರೆ, ಈ ಉದಾಹರಣೆಯನ್ನು ನೋಡಿ:

(೩೩) ಅ]ನಾಥೆ ಇವ । ಳಿನ್ನೊಬ್ಬ-।
ಳೀ ಜನ್ಮ ರೋಸಿ,
ವೇಥೆಯನು ತಾಳದೆಯೆ
ಮುಳುಗಿದಳು ಹೊಳೆಗೆ.

ಮೊದಲನೆಯ ಚರಣದಲ್ಲಿ 'ಅ' ಎಂಬ ಲಘು ಬಿಡಿಯಾಗಿ ನಿಂತು, ಅಲ್ಲಿಂದ ಮುಂದೆ ೫ ಮಾತ್ರೆಯ ಎರಡು ಗಣಗಳು ಬಂದಿವೆ. ಹೀಗೆ ತಾಳಕ್ಕೆ ಮೊದಲೇ ಅಕ್ಷರ ಬಂದಿರುವುದು ಹಾರುವ ಅಥವಾ ಓಡುವ ಪಂದ್ಯಗಳಲ್ಲಿ ನೇಮಿಸಿದ ಗೆರೆಗಿಂತ ಕೆಲವು ಹೆಜ್ಜೆ ಹಿಂದಿನಿಂದ ಸ್ಪರ್ಧಾಳು ಓಡಿಬಂದು ವೇಗವನ್ನು ಬೆಳಸಿಕೊಳ್ಳುವಂತೆ. ಚರಣಕ್ಕೆ ಇದರಿಂದ ಹೊಸ ಬಲ ಬರುತ್ತದೆ. ಮೇಲಿನ ಉದಾಹರಣೆಯಲ್ಲಿ ಹೀಗೆ ತಾಳವನ್ನು ಎತ್ತಿಕೊಡುವ ಅಕ್ಷರ ಲಘು ; ತ್ವರಿತವಾಗಿ ಅದನ್ನು ಉಚ್ಚರಿಸಬಹುದು. ಅದರ ಮುಂದಿನ ಅಕ್ಷರ ಗುರು; ಆದ್ದರಿಂದ ಸ್ವರಾಘಾತವೂ ತಾಳವೂ ಅಲ್ಲಿ ಒಡಬೆರೆಯುತ್ತವೆ. ಈ ಬಗೆಯ ವಿನ್ಯಾಸವನ್ನು ಮಿಕ್ಕ ಜಾತಿಯ ಗಣಗಳಲ್ಲೂ ತರಬಹುದು :

(೩೪) ಚ]ಳುಕ್ಯರಾಷ್ಟ್ರ ಕೂಟರೆಲ್ಲಿ,
ಗಂಗರಾ ಕದಂಬರೆಲ್ಲಿ,.... (೩ ಮಾತ್ರೆಯ ಗಣ)

(೩೫) ಕು]ಮಾರವ್ಯಾಸನು ಹಾಡಿದನೆಂದರೆ
ಕಲಿಯುಗ ದ್ವಾಪರವಾಗುವುದು. (೪ ಮಾತ್ರೆಯ ಗಣ)

೩೫ನೆಯ ಉದಾಹರಣೆಯಲ್ಲಿ, ಕೆಲವರು ಮೊದಲಲ್ಲಿ ವಿಷಮಗಣವನ್ನು ತಂದು, 'ವ್ಯಾ' ಎಂಬ ಒತ್ತಕ್ಷರವನ್ನು ಶಿಥಿಲಮಾಡಿ,

ಕುಮಾರ । ವ್ಯಾಸನು ಹಾಡಿದನೆಂದರೆ

ಎಂಬಂತೆ ಓದುತ್ತಾರೆ. ಆದರೆ ಗತ್ತು ಗಾಂಭೀರ್ಯಗಳನ್ನು ಉಳಿಸಿಕೊಳ್ಳಲು ಮೊದಲನೆಯ ಮಾರ್ಗವೇ ಉತ್ತಮವೆಂದು ತೋರುತ್ತದೆ.

೪ ಮಾತ್ರೆಯ ಗಣದ ಧಾಟಿಯಲ್ಲಿ ಮೊದಲ ತಾಳಕ್ಕೆ ಹಿಂದೆ ಎರಡು ಲಘುಗಳನ್ನು ನಿಲ್ಲಿಸಿಯೂ ಸೊಗಸನ್ನು ತಂದಿರುವುದುಂಟು :

(೩೬) ಹಗ] ಲೆಲ್ಲಾ । ಕಳೆಯಿತು । ಸೂರ್ಯನು । ಮುಳುಗೆ ।
ಖಗ] ಹಾರಿತು ಗೂಡಿನ ಒಳಗೆ
ಜಗ]ವೆಲ್ಲಾ ಬೆಳಗಿತು ದೀಪವು ಬೆಳಗೆ
ಗಗ]ನಾಂಗಣದಲಿ ಉಡು ತೊಳಗೆ....

ಈ ಚರಣಗಳನ್ನು, 'ಹಗಲೆ । ಲ್ಲಾ ಕಳೆ । ಯಿತು ಸೂ । ರ್ಯನು ಮುಳು । ಗೆ'.... ಎಂಬಂತೆ ವಿಭಾಗಿಸುವುದೂ ಅಸಾಧ್ಯವಲ್ಲ. ಆದರೆ ಮೊದಲನೆಯ ರೀತಿಯಲ್ಲೇ ಇಂಪು ಹೆಚ್ಚು.

ಮೇಲಿನ ಉದಾಹರಣೆಗಳಲ್ಲೆಲ್ಲಾ, ತಾಳ ಮೊದಲಾಗುವ ಕಡೆ ಗುರು ನಿಯತವಾಗಿ ಬಂದಿರುವುದನ್ನು ಗಮನಿಸಬೇಕು. ಹೀಗಿಲ್ಲದಿದ್ದರೆ ಲಯ ಕೆಡುತ್ತದೆ:

(೩೭) ನೆ]ನೆಯಲಾರೆ! । ಕಿರಿಯ ದೋ । ಣಿಯು ತೆರೆಗ । ಳಗ್ರದಲಿ ।....

ಇಲ್ಲಿ ಚರಣದ ಎರಡನೆಯ ಅಕ್ಷರ ಲಘುವಾಗಿರುವುದರಿಂದ, ಅದರಲ್ಲೂ ಪದದ ಎರಡನೆಯ ಲಘುವಾಗಿರುವುದರಿಂದ, ಏನು ಮಾಡಿದರೂ ತಾಳ ಅಲ್ಲಿ ಬೀಳುವುದಿಲ್ಲ. ಈ ಚರಣವನ್ನು ಸರಿಹೊಂದಿಸಬೇಕಾದರೆ,

‘ನೆನೆಯುಲಾ। ರೆ! ಕಿರಿಯು। ದೋ]ಣಿಯುಂ ತೆರೆಗ। ಳಗ್ರದಲಿ।’ ಎಂದೋ,

‘ನೆನೆಯುಲಾ। ರೆ!] ಕಿರಿಯ ದೋ। ಣಿಯುಂ ತೆರೆಗ। ಳಗ್ರದಲಿ।’ ಎಂದೋ,

ಓದಬೇಕು. ಆಗ ಚರಣಮಧ್ಯದಲ್ಲಿ ಒಂದು ಗುರು ಅಧಿಕವಾಗಿ ನಿಲ್ಲುತ್ತದೆ.

೩

ಗಣವಿನ್ಯಾಸದಲ್ಲಿ ಕಾಣಬರುವ ವಿಶೇಷಾಂಶವೊಂದನ್ನು ಈಗ ಕೆಲವು ಮಟ್ಟಿಗೆ ಪರಿಶೀಲಿಸಬೇಕಾಗಿದೆ. ಕೆಳಗಿನ ಚರಣಗಳನ್ನು ನೋಡಿ:

(೩೮) ಒಳ್ಳೆಯ ಮಗಳು ಒಳ್ಳೆಯ ಗೆಳತಿ
ಒಳ್ಳೆಯ ಸೊಸೆ ಬಹು ಒಳ್ಳೆಯ ಹೆಂಡತಿ
ಚೆಲುವು ಹೆಚ್ಚೊ ಗುಣ ಹೆಚ್ಚೋ ಎಂಬುದು
ತಿಳಿಯದೊ ಅವಳನು ನೋಡಿದ ಜನಕೆ.
ಮಲ್ಲಮ್ಮಾ ಮಲ್ಲಮ್ಮಾ
ಇಲ್ಲವಾದೆಯಾ ಮಲ್ಲಮ್ಮಾ.

ಇಲ್ಲಿಯ ಲಯ ೪ ಮಾತ್ರೆಯ ಗಣಗಳಿಂದ ಆಗಿದೆಯೆಂಬುದು ಸ್ಪಷ್ಟ. ಆದರೆ ಮೂರನೆಯ ಚರಣವನ್ನು ಗಣಗಳಾಗಿ ವಿಂಗಡಿಸಿ ನೋಡಿ:

ಚೆಲುವು ಹೆಚ್ಚೊ ಗುಣ। ಹೆಚ್ಚೋ। ಎಂಬುದು।

ಚರಣದ ಪೂರ್ವಾರ್ಧದಲ್ಲಿ ‘ಹೆ-’ ಎಂಬ ಗುರುವನ್ನು ಮಧ್ಯಕ್ಕೆ ಕತ್ತರಿಸಿದ ಹೊರತು ೪ ಮಾತ್ರೆಯ ಗಣಗಳೇ ಸಿಕ್ಕುವಂತಿಲ್ಲ. ಇದೇನು, ಗಣವಿನ್ಯಾಸದ ಮೂಲತತ್ತ್ವಕ್ಕೇ ಕುಠಾರ ಬಿದ್ದಿತಲ್ಲ ಎನ್ನಿಸಬಹುದು. ಆದರೆ ಚರಣದ ಶ್ರಾವ್ಯತೆ ಏನೂ ಕಡಮೆಯಾಗಿಲ್ಲ; ನಿಜವಾಗಿ ಈ ಭಾಗದಲ್ಲಿ ಅದಕ್ಕೊಂದು ಹೊಸ ಸೊಗಸು ಬಂದಿದೆ. ಬಾಣ ಬಿಟ್ಟಂತೆ ನೇರವಾಗಿ ಸಾಗುವ ಬದಲು, ನಟಿಯಂತೆ ಇಲ್ಲಿ ಬಳುಕಿ ಮುಂದುವರಿಯುತ್ತದೆ. ಇದಕ್ಕೆ ಕಾರಣವೇನು?

ಇಂಥ ಕಡೆಗಳಲ್ಲಿ ಲಯದ ಮಾನದಂಡ ೪ ಮಾತ್ರೆಯ ಒಂಟಿ ಗಣವಲ್ಲ; ಅದು ೮ ಮಾತ್ರೆಯ ಕಾಲದ ದ್ವಿಗಣ (೪+೪). ಈ ದೀರ್ಘಗಣದಲ್ಲಿ ಒಳತಾಳ ಸಹಜವಾಗಿ ಬರಲೇಬೇಕು; ಅದು ಸಾಮಾನ್ಯವಾಗಿ ೪+೪ ರಂತೆ ಒಡೆಯುತ್ತದೆ. ಆದರೆ ಒಂದೊಂದು ಸಲ ಈ ೪+೪ಕ್ಕೆ ಬದಲಾಗಿ ೩+೫ ರಂತೆ ಗಣವಿನ್ಯಾಸಮಾಡಿದರೆ ಮುಖ್ಯಲಯ ಕೆಡುವುದಿಲ್ಲ; ಅದರ ರಚನೆಯಲ್ಲಿ ವೈವಿಧ್ಯವೊದಗುತ್ತದೆ. ಇದೇ ಮೇಲಿನ ಚರಣದ ಸೊಗಸಿನ ಗುಟ್ಟು. ಅದರ ಗಣವಿಭಾಗವನ್ನು

‘ಚೆಲುವು ⁝ ಹೆಚ್ಚೊ ಗುಣ। ಹೆಚ್ಚೋ ಎಂಬುದು’

— ಹೀಗೆ ತೋರಿಸಬಹುದು. ಇದರಂತೆಯೇ, ಮೇಲಿನ ಉದಾಹರಣೆಯಲ್ಲಿ ಆರನೆಯ ಚರಣದ ರಚನೆ ಈ ರೀತಿಯದು:

ಇಲ್ಲ ⁝ ವಾದೆಯಾ। ಮಲ್ಲಮ್ಮಾ.

ಈ ಬಗೆಯ ಗಣವಿನ್ಯಾಸಕ್ಕೆ ಇನ್ನು ಕೆಲವು ಉದಾಹರಣೆಗಳು:

(೩೯) ಹೊಂಬಿಸಿಲೆಚ್ಚರಗೊಳಿಸದ ಮೌನ
ರಾಗ ⁝ ಮೋದಗಳು। ಕಲಕದ ಮೌನ.

(೪೦) “ಏಳ್ಳೆ ಕನ್ನಡ ಭಾಗ್ಯವಿಧಾತನೆ”
ಎನುತೆ ⁝ ಹಾಡುತಿಹ। ವೈತಾಳಿ.

(೪೧) ಗಳಗಳರವದಿಂ ತೊರೆಯಾಗೋಡಿ
ಬಳುಕಿ ⁝ ನಲಿದು ಸುರ । ಗಾನವ ಪಾಡಿ.

(೪೨) ಆಸೆ ⁝ ಯೆಸಳು ತಲೆ । ಯೆತ್ತುವ ಮೊದಲೆ
ಸೌಸವವನು ಬಗೆ ಬೀರುವ ಮೊದಲೆ.

ಕೊನೆಯ ಎರಡು ಕಡೆಗಳಲ್ಲಿ 'ಬಳುಕಿ ನ। ಲಿದು ಸುರ–', 'ಆಸೆಯೆ । ಸಳು ತಲೆ–' ಎಂದು ೪+೪ ರಂತೆ ಭೇದ ಮಾಡುವುದು ಸಾಧ್ಯ; ಆದರೆ ಹಾಗೆ ಮಾಡಿದರೆ ಯತಿ ನಿಜವಾಗಿ ಕೆಡುತ್ತದೆ. ೩+೫ ರಂತೆ ವಿಂಗಡಿಸಿ ಓದುವುದೇ ಸಹಜ; ಅದರಲ್ಲೇ ಸೊಗಸು.

೪+೪ ರ ಸ್ಥಾನದಲ್ಲಿ ೩+೫ ಬಂದಾಗ, ಈ ೫ ಮಾತ್ರೆಯ ಭಾಗವನ್ನು ೩+೨ರಂತೆ ಒಡೆಯಲು ಸಾಧ್ಯವಾದರೆ ಶ್ರಾವ್ಯತೆ ಹೆಚ್ಚೆಂದು ತೋರುತ್ತದೆ. ಮೇಲಿನ ಉದಾಹರಣೆಗಳಲ್ಲೆಲ್ಲಾ ಇದು ಸಾಧ್ಯವಾಗುತ್ತದೆ.

(೪೩) ಜಗ ಬೆಳಗಲು ದೆಸೆ ಹೊಳಲಿಡೆ ನಕ್ಕು
ಮುಗಿಲ ⁝ ಚೆನ್ನೇರಿ । ಮೋದದಿ ಮಿಕ್ಕು.

ಇಲ್ಲಿ 'ಮುಗಿಲ ⁝ ಚೆನ್ನೇರಿ' ಎಂಬುದನ್ನು ೩+೩+೨ ರಂತೆ ವಿಭಾಗಿಸಲಾಗುವುದಿಲ್ಲ. ಇದರ ಬದಲು 'ಮುಗಿಲ. ಚೆನ್ನಿ.ನಲಿ' (೩+೩+೨) ಎಂದು ಇದ್ದಿದ್ದರೆ ಚರಣದ ಇಂಪು ಹೆಚ್ಚುತ್ತಿರಲಿಲ್ಲವೆ?

ಹೀಗೆ ೪+೪ ರ ಧಾಟಿಯಲ್ಲಿ ಪದ್ಯ ನಡೆಯುತ್ತಿರುವಾಗ ಒಂದೊಂದು ಕಡೆ ೩+೫ನ್ನು ಉಪಯೋಗಿಸುವ ಪದ್ಧತಿ ಆಧುನಿಕ ಯುಗದಲ್ಲಿ ಮೊದಲಾದದ್ದೇನೂ ಅಲ್ಲ; ಇದರ ಸುಖವನ್ನು ಜನ್ನ ರಾಘವಾಂಕರು ಅರಿತಿದ್ದರು:

(೪೪) ಮೊಜಗುವುವಘಮೃಗವಿರದೋಡುವಿನಂ
ಮೊಟಗು ⁝ ಗೆತ್ತು ಕೇ । ಕಿಗಳಾಡುವಿನಂ....
ಸಕಲ ⁝ ದೇಶ ಭಾ । ಷಾಪ್ರತಿಭಾನಂ
ಪ್ರಕಟಂ ನೆಗೆದುದು ದಿವ್ಯಧ್ವಾನಂ. (ಅನಂತನಾಥ ಪುರಾಣ)

(೪೫) ಏವೆ ⁝ ನೇವೆನೆಲೆ । ಮಗನೇ ಮಗನೇ
ಸಾವೇಕಾಯಿತ್ತೆಲೆ ಚೆನ್ನಿಗನೇ (ಹರಿಶ್ಚಂದ್ರಕಾವ್ಯ)

ಈ ರಚನೆ ಕನ್ನಡದಲ್ಲಿ ಮಾತ್ರವಲ್ಲ; ಸಂಸ್ಕೃತದಲ್ಲಿ 'ಗೀತ ಗೋವಿಂದ'ದಲ್ಲಿಯೇ ಕಾಣಿಸಿಕೊಂಡಿದೆ. ನಾದನಿಧಿಯಾದ ಜಯದೇವ ಕವಿಗೇ ಇದು ಒಪ್ಪಿಗೆಯಾದಮೇಲೆ ಇದರ ಇಂಪಿಗೆ ಬೇರೆ ಪ್ರಮಾಣ ಬೇಕಿಲ್ಲ. ಒಂದು ಉದಾಹರಣೆ ಇಲ್ಲಿಗೆ ಸಾಕು:

(೪೬) ಮದನಮಹೀಪತಿ । ಕನಕ ⁝ ದಂಡರುಚಿ । ಕೇಶರ ಕುಸುಮ ವಿಕಾಸೇ
ಮಿಲಿತ ಶಿಲೀಮುಖ ಪಾಟಲಪಟಲಕೃತಸ್ಮರತೂಣವಿಲಾಸೇ.

ಹೀಗೆ ಲಯದಲ್ಲಿ ಒಂದು ಹೊಸ ಬಳುಕನ್ನು ತರುವುದಕ್ಕಾಗಿ ಒಂದು ಜಾತಿಯ ಗಣಗಳ ಸ್ಥಾನದಲ್ಲಿ ಅದೇ ಮಾತ್ರಾಪರಿಮಿತಿಯ ಇನ್ನೊಂದು ಜಾತಿಯ ಗಣಗಳನ್ನು ಇರಿಸುವುದಕ್ಕೆ 'ಗಣಪರಿವೃತ್ತಿ'ಯೆಂಬ ಹೆಸರನ್ನು ಇಲ್ಲಿ ಕೊಟ್ಟಿದೆ.

೩ ಮಾತ್ರೆಯ ಗಣದ ಧಾಟಿ ಶುದ್ಧವಾಗಿ ನಡೆದರೆ ಅದರಲ್ಲಿ ಏಕನಾದಕ್ಕೆ ಅವಕಾಶ ಹೆಚ್ಚು. ೩+೩ರ ಸ್ಥಾನದಲ್ಲಿ (೨+೪ ಅಥವಾ ೪+೨ರ ರಚನೆಯುಳ್ಳ) ೬ ಮಾತ್ರೆಯ ಗಣವನ್ನು ಪ್ರಯೋಗಿಸುವುದು ಈಗ ರೂಢಿಯಾಗುತ್ತಿದೆ. ಈ ಬಗೆಯ ಪರಿವರ್ತನೆಯನ್ನು ಔಚಿತ್ಯವರಿತು ನಡಸಿದರೆ ಪದ್ಯ ಎಷ್ಟು ರಮ್ಯವಾಗುವುದೆಂಬುದಕ್ಕೆ ಈ ಕೆಳಗಿನ ನಿದರ್ಶನಗಳು ಸಾಕು:

(೪೭) ಗಂಗೆ ಯಮುನೆ ಕೂಡಿ ಹರಿದು
ಸಂಗಮ.ಜಲ । ಬಿಳಿದು ಕರಿದು
ತಿಂಗಳ.ನಗೆ । ಮೋರೆವರಿದು
ಬೇರೆ ಮಿರುಗು ನೀರಿಗು.

(೪೮) "ಭೃಂಗದ.ಬೆ । ನ್ನೇರಿ ಬಂತು ಕಲ್ಪನಾವಿಲಾಸಾ"....
ಏನು ಏನು? ಜೇನು ಜೇನು? । ಎನೆ.ಗುಂಗುಂ । ಗಾನಾ
ಓಂ.ಕಾರದ । ಶಂಖನಾದಕಿಂತ ಕಿಂಚಿದೂನಾ
ಕವಿಯ ಏಕತಾನ ಕವನದಂತೆ ನಾದಲೀನಾ....
ಮಾತು ಮಾತು ಮಥಿಸಿ ಬಂದ । ನಾದದ.ನವ । ನೀತಾ....

೫+೫ರ ಸ್ಥಾನದಲ್ಲಿ ೩+೪+೩ರ ಛಾಯೆಯನ್ನು ತರುವುದಂತೂ ಅತಿ ಸಾಮಾನ್ಯ; ಕಿವಿಗೊಟ್ಟು ಆಲಿಸಿದ ಹೊರತು ಗಮನಕ್ಕೇ ಬಾರದಷ್ಟು ಸಾಮಾನ್ಯ. ಕೆಳಗಿನ ಚರಣಗಳಲ್ಲಿ ಈ ಪರಿವೃತ್ತಿ ಹಿತವಾಗಿ ಬಂದಿದೆ:

(೪೯) ಮೊದಲ ⁝ ಬೇ'ಟದ ⁝ ಮೊಳಕೆ । ಪಣ್ಗೊಂಡ ಕಾನನಂ
ಮೊದಲ ⁝ ಮೋ'ಹದ ⁝ ಬಲೆಯ । ನೆಯ್ದೆಡೆಯ ತಿಳಿಗೊಳಂ
ಮೊದಲ ⁝ ಮಿಲ'ನದ ⁝ ಮತ್ತೆ । ವಿರಹದ ಶಿವಾಲಯಂ.

(೫೦) ಎನ್ನ ⁝ ದೇ'ವರ ⁝ ಗುಡಿಗೆ । ನಂದಿದಾಸೆಯ ದೀಪ
ನಿಟ್ಟುಸಿರ ಮಂತ್ರ; ಉಮ್ಮಳದ ತಂತ್ರ.

ಇಲ್ಲೆಲ್ಲಾ ೫+೫ ರಂತೆ ಗಣಗಳನ್ನು ಬಿಡಿಸುವುದು ಸಾಧ್ಯ; ಆದರೆ ೩+೪+೩ ರಂತೆ ಇವು ಹೆಚ್ಚು ಸಹಜವಾಗಿ ಒಡೆದು ವೈವಿಧ್ಯವನ್ನು ಉಂಟುಮಾಡುತ್ತವೆ.

(೫೧) ಕ್ರಾಂತಿ ⁝ ಕಾ'ಳಿ ಕ ⁝ ಠಾರಿ । ಯಂ ನನ್ನೆದೆಗೆ ಕುರಿತು
ಝಳಪಿಸುತೆ ಬದ್ಧಭ್ರುಕುಟಿ ಕೋಪದಲಿ ನಿಂತು
ದಂಷ್ಟ್ರಘರ್ಷಣರವಂ ಪೊಣ್ಮೆ ಗಜರಿದಳಿಂತು.

ಇಲ್ಲಿ ಮೊದಲನೆಯ ಚರಣದ ಆದಿಯಲ್ಲಿ ೩ + ೪ + ೩ರ ಓಟ ಬಂದು ಯತಿಯನ್ನು ಉಳಿಸಿಕೊಡುತ್ತದೆ. ೫+೫ ರಂತೆಯೇ ವಿಭಾಗಿಸಬೇಕಾಗಿದ್ದಲ್ಲಿ, 'ಕ್ರಾಂತಿ ಕಾ । ಳಿ ಕಠಾರಿ' ಎಂದು ಒಡೆದು, 'ಳಿ' ಎಂಬ ಪದಾಂತ್ಯದ ಲಘುವಿನಮೇಲೆ ತಾಳ ಬಿದ್ದು ಯತಿ ಕೆಡುತ್ತಿತ್ತು. ('ಯಂ ನನ್ನೆ । ದೆಗೆ ಕುರಿತು' ಎಂಬಲ್ಲಿ ಯತಿ ಭಂಗವಾಗಿದೆ.)

೫ ಮಾತ್ರೆಯ ಗಣದ ಧಾಟಿಯಲ್ಲಿ ಚರಣದ ಮಧ್ಯ ಭಾಗದಲ್ಲಿ ಈ ಪರಿವೃತ್ತಿಯ ಛಾಯೆ ಬಂದರೆ ಅತಿಶಯವಾದ ಬಳುಕು ಅಲ್ಲಿ ಗೋಚರವಾಗುತ್ತವೆ. ಈ ನಿದರ್ಶನಗಳನ್ನು ನೋಡಿ:

(೫೨) ಕೆನ್ನೆಯುಲಿ । ಕೆಂಪು ⁝ ಬಿಳು'ಪನು ⁝ ಸುಳಿಸಿ । ಕೇಳಿದಳು
  ಕಣ್ಣ ನಾಚಿಕೆಪಟ್ಟು ನೆಲದಲಿಟ್ಟು.

(೫೩) ಗಡಗಡನೆ । ಭೂಮಿ ⁝ ನಡು'ಗಿತು ⁝ ದುಃಖ । ವಾರ್ತೆಯಿಂ
  ಜಗಕೆಲ್ಲ ಕೇಳಿಸುವ ಮರಣದುಂದುಭಿಯಂತೆ.

(೫೪) ಸರಿಯಾಗಿ ನಡೆವುದಕೆ ಬಾರದಿರುವೆಳೆಗೂಸ
  ಪಿಡಿದೆತ್ತಿ । ಕೊಂಡು ⁝ ಮೇ'ಗಡೆ ⁝ ಗೊಯ್ವ । ನು.

(೫೫) ವೀರಕ್ಕೆ । ವಿನಯ ⁝ ಮೆಂ'ಬುದು ⁝ ಮುಡಿಯ । ಮಾಣಿಕಂ.

ಈಗ ಕೆಳಗಿನ ಚರಣಗಳನ್ನು ಪರಿಶೀಲಿಸಿ:

(೫೬) ನಿಮ್ಮ ನೆನೆ । ದೊಡಮೆನ್ನ । **ಗಾನದ ಹಕ್ಕಿ ರೆಕ್ಕೆ** ।
  ಮುದುರಿ ರೆ । ಪ್ಪೆಯ ಮುಚ್ಚಿ । ಕಾವು ಕೂ । ರುವುದಳಲ ।
  **ಮೊಟ್ಟೆಯ ಮೇಲೆ ಸುಯ್ದು** । ಸುಯ್ವುದೆ‸ । ಚರಮಗೀ । ತೆ!

ಇಲ್ಲಿ ದೊಡ್ಡ ಲಿಪಿಯಲ್ಲಿ ಅಚ್ಚುಮಾಡಿರುವ ಕಡೆಗಳಲ್ಲಿ ೫+೫ ರಂತೆ ವಿಭಾಗ ಮಾಡುವುದು ಅಶಕ್ಯ. ಇವನ್ನು ೪+೩+೩ ರಂತೆ ಭಾವಿಸಬೇಕೇನೋ. ಹಾಗಾದರೆ ಲಯ ಕೆಡುವುದಿಲ್ಲವೇ ಎಂಬುದು ವಿಚಾರಮಾಡಬೇಕಾದ ವಿಷಯ. ಅಥವಾ 'ಗಾನದ‸ । ಹಕ್ಕಿ ರೆ । ಕ್ಕೆ' 'ಮೊಟ್ಟೆಯ‸ । ಮೇಲೆ ಸು । ಯ್ದು' ಎಂಬಂತೆ ವಿರಾಮವನ್ನು ತಂದು, ಬಿಡಿಯಕ್ಷರವನ್ನು ನಿಲ್ಲಿಸಿ, ಹಿಂದೆ ೫೪ನೆಯ ಉದಾಹರಣೆಯಲ್ಲಿ ಮಾಡಿದಂತೆ ಅನ್ವಯಿಸಿಕೊಳ್ಳಬೇಕೇನೋ. ಆ ಪಕ್ಷದಲ್ಲಿ ಪದ್ಯದ ಕಟ್ಟು ತುಂಬ ಶಿಥಿಲವಾಗುವುದಿಲ್ಲವೆ?

ನಮ್ಮ ಕಾವ್ಯಪ್ರಪಂಚದಲ್ಲಿ ಇದು ಹೊಸ ಪ್ರಯೋಗಗಳ ಕಾಲ; ಹಳಬರು ನಡೆದಾಡಿ ಸವೆದು ಕೊರಕಲುಬಿದ್ದ ಹಳೆಯ ಜಾಡಿನಲ್ಲೇ ಕಣ್ಣುಮುಚ್ಚಿಕೊಂಡು ಸಾಗದೆ, ಹೊಸ ಹೊಸ ದಾರಿಗಳನ್ನು ಹುಡುಕುತ್ತಾ ಅತ್ತ ಇತ್ತ ಸುಳಿದಾಡುತ್ತಿರುವ ಕಾಲ; ಕವಿಗಳು ಹೊಸ ಹೊಸ ಸೊಗಸುಗಳನ್ನು ತಮ್ಮ ಪ್ರತಿಭಾಬಲದಿಂದ ನಿರ್ಮಿಸುತ್ತಿರುವ ಕಾಲ; ಜನತೆ ತನ್ನ ಕಿವಿಯನ್ನು ಈ ಹೊಸ ನಾದಗಳಿಗೆ ಪಳಗಿಸಿಕೊಳ್ಳುತ್ತಿರುವ ಕಾಲ. ಈ ಸಂಧಿಕಾಲದಲ್ಲಿ ಛಂದಸ್ಸಿನ ಪ್ರಯೋಗಗಳನ್ನು ಕುರಿತು ಇದೇ ಕೊನೆಯ ಮಾತೆಂದು ವಿಮರ್ಶಕನು ಏನನ್ನೂ ಖಚಿತವಾಗಿ ಸಿದ್ಧಾಂತಿಸಲಾರನು; ಹಾಗೆ ಸಿದ್ಧಾಂತಿಸಲೂ ಬಾರದು. ಮೇಲೆ ಮಾಡಿರುವ ಎಲ್ಲ ವಿಚಾರವೂ ನಿರ್ದುಷ್ಟವೆಂಬ ಹಠ ಈ ಲೇಖಕನಿಗಂತೂ ಖಂಡಿತ ಇಲ್ಲ.

ಈ ಕಾಲು ಶತಮಾನದ ಪ್ರಯೋಗ ಪರೀಕ್ಷೆಯಲ್ಲಿ ಒಂದು ಅಂಶವೇನೋ ದೃಢಪಟ್ಟಿದೆ. ನಿಯಮಗಳನ್ನು ಅತಿ ಶ್ರದ್ಧೆಯಿಂದ ಅನುಸರಿಸಿದರೆ ಏಕನಾದವುಂಟಾಗಿ ಬೇಸರಪಡಿಸುತ್ತದೆ; ಅತಿಕ್ರಮಗಳೂ ಅಪವಾದಗಳೂ ಹೆಚ್ಚಾದರೆ ಲಯದ ನೆಲೆಯೇ ತಪ್ಪಿಹೋಗುತ್ತದೆ. ಒಂದು ಕಿವಿಯನ್ನು ತಾಳಕ್ಕೂ ಒಂದು ಕಿವಿಯನ್ನು ಭಾಷಾಗತಿಗೂ ಪದ್ಯಕಾರನು ತೆರೆದಿಟ್ಟು, ಎರಡಕ್ಕೂ ವಿರೋಧ ಬಾರದಂತೆ ತನ್ನ ಹಾಡನ್ನು ಕಟ್ಟಬೇಕು. ನಿಯಮ ವೈವಿಧ್ಯಗಳ ಸಮನ್ವಯವೇ ಛಂದಸ್ಸಿನ ತಿರುಳು.

ತೀ. ನಂ. ಶ್ರೀಕಂಠಯ್ಯ

# ನಮ್ಮ ನಾಡಿನ ನೃತ್ಯಗಳು

ನೃತ್ಯ, ಸಂಗೀತಗಳೆರಡು ಗಣಿಕೆಯರ ಸೊತ್ತುಗಳೆನಿಸಿ ಬಹುಕಾಲ ನಡೆದು ಬಂದಿತ್ತು. ಈಗ ಸುದೈವದಿಂದ ಸಂಗೀತದ ಮೇಲೆ ಇದ್ದ ಆ ಕೀಳ್ನೋಟವು ಮಾಯವಾಗಿ, ಗರತಿಯರು ಹಾಡುವುದಕ್ಕೂ, ವೀಣೆ ಪಿಟೀಲುಗಳನ್ನು ನುಡಿಸುವುದಕ್ಕೂ ತೊಡಕಿಲ್ಲದಾಗಿದೆ. ಆದರೆ ನೃತ್ಯದ ಮಟ್ಟಿಗೆ ಆ ದೃಷ್ಟಿ ತೀರ ಬಂದಿದೆ ಎನ್ನುವ ಹಾಗಿಲ್ಲ. ಮೇಲುತರಗತಿಯವರೆನಿಸುವವರಲ್ಲಿ, ನೃತ್ಯ ನೋಡುವಿಕೆಗೆ ಅನಾದರಣೆ ಇಲ್ಲವಾದರೂ, ನರ್ತಿಸುವ ವಿಚಾರವಾಗಿ ಕುದೃಷ್ಟಿ ಇದ್ದೇ ಇದೆ. ಉದಯಶಂಕರನಂಥ ನೃತ್ಯಪಟುಗಳು ಪ್ರಚಾರತೊಡಗಿದ ಬಳಿಕ ಕುಣಿತದ ಮೇಲಿನ ತಿರಸ್ಕಾರವು ಕಡಮೆಯಾಗುತ್ತ ಬಂದಿದೆ. ಇತ್ತೀಚೆಗೆ ಶಿಕ್ಷಿತರು ಅದನ್ನು ಅಭ್ಯಾಸಿಸುತ್ತಿದ್ದಾರೆ. ಅದರ ಹೊಸತನ ಹಲವರನ್ನು ಆಕರ್ಷಿಸಿದೆ. ಆದರೆ ಇಂಥ 'ನವ್ಯತೆ'ಯ ದೃಷ್ಟಿಯಿಂದಲೇ ನೃತ್ಯವು ಮುಂದೆ ಸಮಾಜದಲ್ಲಿ ಬಾಳಿ ಬದುಕೀತೆನ್ನಲು ಬರುವುದಿಲ್ಲ. ಯಾವ ಕಲೆಯೇ ಇರಲಿ — ಸಾಹಿತ್ಯದಂತೆ, ಅದು ಸಮಾಜದಲ್ಲಿ ಬದುಕಿ ಸಫಲವಾಗಬೇಕಾದರೆ, ನಮ್ಮ ಜನಜೀವನದ ಸಂಸ್ಕಾರದಲ್ಲಿ ಅದು ಬೆರೆತುಹೋಗಬೇಕು. ಅದು ಹೆಚ್ಚು ಹೆಚ್ಚಾಗಿ ಪ್ರಚಾರವಾದಂತೆ ಅದರ 'ಹೊಸತನ'ದ ಮಾಯೆ ಬೆಡಗುಗಳು ಕಳಚಲೂಬಹುದು. ಆದರೆ 'ಹೊಸತನ'ವೇ ಆಕರ್ಷಣೆಯ ರೀತಿಯಾಗಿರುವಷ್ಟು ದಿನ ಸಮನಾದ ನೃತ್ಯದೃಷ್ಟಿ, ಅದರ ತುಲನೆ, ವಿಮರ್ಶೆ — ಇವುಗಳಿಗೆ ಸಾಕಷ್ಟು ಎಡೆ ಸಿಗುವುದಿಲ್ಲ. ನಮ್ಮ ನಾಡಿನ ಈಗಿನ ಸ್ಥಿತಿ ಅಂತಹದು. ಯಾವುದು ನೃತ್ಯ, ಯಾವುದು ನೃತ್ಯವಲ್ಲ — ಎಂದು ತೂಗುವುದಕ್ಕೆ ಸಮನಾದ ಪಾಯ ದೊರೆತಿಲ್ಲ. ಇಂದು ಸಾಮಾನ್ಯವಾಗಿ ನೃತ್ಯ ವಿಮರ್ಶೆ ಮಾಡುತ್ತಿರುವ ಜನರು ನೆಲಕ್ಕೆ ಮಾನಿನಷ್ಟು ಹೊಸಬರು. ಈ ಸಾಧನದ ಪರಿಮಿತಿಯನ್ನು ತಿಳಿಯಲು ಬೇಕಾಗಿರುವ ಅನುಭವ ಹೆಚ್ಚಿನವರಿಗಿಲ್ಲ. ಇತ್ತ ಅದು ನರ್ತಕರಿಗೇನೆ ಇದೆಯೋ ಎಂಬ ಪ್ರಶ್ನೆಗೂ ಸಾಕಷ್ಟು ಅವಕಾಶವಿದೆ. ಅಲ್ಲದೆ ನರ್ತನದ ನವ್ಯತೆ, ಅತ್ತ ನರ್ತಕ ನರ್ತಕಿಯರ ಶರೀರ ಮೋಹಕತೆ— ಇವೆರಡು ಸೇರಿ ಪ್ರಚಾರದ ಮುಖ್ಯ ಸಾಧನವಾಗಿರುವಾಗ, ಯಾವ ವಿಮರ್ಶೆಯ ಅಳತೆಯೂ ಬಲವಾಗದು.

ನೃತ್ಯದ ವಿಷಯ ಆಸಕ್ತಿಯಿರುವವರು — ಅದನ್ನು ಹೊಸಬರಲ್ಲಿ ಕಂಡು ತೂಗುವ ಮೊದಲು, — ಅದು ಬಾಳಿಬದುಕಿರುವಲ್ಲಿ ಕಂಡು, ತಿಳಿದು, ಮೆಚ್ಚಲು ಕಲಿಯಬೇಕು. ತೂಗಿ ತೆಗಳುವುದಕ್ಕೂ ಹೊಗಳುವುದಕ್ಕೂ ಅಲ್ಲಿಂದಲೇ ಕಲಿಯಬೇಕು. ಈ ದೃಷ್ಟಿಯಿಂದ ಹುಡುಕುವವರು ನಮ್ಮ ನಾಡಿನ ಮೇಲುವರ್ಗದ ಜನರನ್ನು ನಿರೀಕ್ಷಿಸಿ ಉಪಯೋಗವಿಲ್ಲ. ಅವರಲ್ಲಿ ಜಾನಪದ ನೃತ್ಯಗಳಿಲ್ಲ. ಅದಕ್ಕೆ ಕೆಳಮಟ್ಟದವರೆನಿಸಿದವರೇ ಆಶ್ರಯದಾತರು. ಓದು, ಸಂಪತ್ತು ಎರಡೂ ಇಲ್ಲದ ಹಲವು ಜಾತಿ, ಪಂಗಡದವರಲ್ಲಿ ನರ್ತನವು ಬಾಳ್ವೆಯ ಮುಖ್ಯವಾದೊಂದು ಬದುಕಾಗಿ ಉಳಿದಿದೆ. ಹೊಲೆಯರು, ಕುಡಿಯರು, ರಾಣೆಯರು, ಹರಣಶಿಕಾರಿಗಳು —



'ರಕ್ತೇಶ್ವರಿ' ದೇವ್ವೆಯಾಗಿ ನರ್ತಿಸುವ ಒಬ್ಬ 'ನಲಿಕೆ'ಯವ

ಛಾಯಾ ಚಿತ್ರಕರು : ಶಿವರಾಮ ಕಾರಂತರು





ಇಂತಹರಲ್ಲಿ ಅವನ್ನು ನಾವು ಕಾಣಬೇಕು. ಇದಕ್ಕೆ ಆಕ್ಷೇಪವೆಂದರೆ ಕೊಡವರು. ಅವರಲ್ಲಿನ ಶಿಕ್ಷಿತರೆನಿಸುವವರ ಮೇಲೂ ನರ್ತನದ ವರ್ಚಸ್ಸು ಉಳಿದಿದೆ. ಹುತ್ತರಿ ಕಾಲದಲ್ಲಿ ಅವರೆಲ್ಲರೂ ಸಾಮುದಾಯಿಕ ನರ್ತನಗಳಲ್ಲಿ ಭಾಗವಹಿಸುವರು.

ಇನ್ನೊಂದು ಬಗೆಯಿಂದ ಕಾಣಹೋದರೆ— ಮೇಲುಮಟ್ಟದವರೆನಿಸುವವರಲ್ಲೂ ನರ್ತನಗಳು ಕಾಣುತ್ತಿವೆ. ನಮ್ಮಲ್ಲಿನ ಬಯಲಾಟಗಳಲ್ಲಿ ಬ್ರಾಹ್ಮಣರೂ ಭಾಗವಹಿಸುತ್ತಾರೆ. ಆದರೆ ಹಿಂದೆ ಹೇಳಿದ ನರ್ತನ ರೀತಿಗೂ, ಇಲ್ಲಿಗೂ ತುಂಬ ತಾರತಮ್ಯವಿದೆ. ಇದು ಕಲೆಯಾಗಿ ಬೆಳೆಯಿಸಿಕೊಂಡು ಬಂದ ನರ್ತನ; ಹಿಂದೆ ಹೇಳಿದುದು ಸಮಾಜದ ಸಂಸ್ಕಾರವಾಗಿ ಬಂದ ಕುಣಿತ.

ಇದೇ ವಿಚಾರವನ್ನು ಇನ್ನಷ್ಟು ಸ್ಪಷ್ಟಗೊಳಿಸಲು ಇಲ್ಲಿ ಯತ್ನಿಸುತ್ತೇನೆ. ದಕ್ಷಿಣ ಕನ್ನಡದ ಹೊಲೆಯರಲ್ಲಿ ನರ್ತನ ಬಹಳವಾಗಿದೆ. ಅವರಲ್ಲಿನ ಒಳಪಂಗಡಗಳು— ಕೊರಗ, ಕೂಸ, ಮುಂಡಾಳ ಮೊದಲಾಗಿ ಹಲವು ಇದ್ದರೂ ಎಲ್ಲರೂ ನೃತ್ಯಪ್ರಿಯರು. ನೃತ್ಯ ಅವರ ಜೀವನದ ಎಲ್ಲಕ್ಕೂ ಬೇಕು. ಹೊಲಗೆಲಸ ಮುಗಿದರೆ ಕುಣಿತ; ಮೈಬೆವರಿಳಿಸಿ ಸಂಜೆ ಮನೆಗೆ ಬಂದರೆ ಕುಣಿತ; ಊಟಕ್ಕಿರುವ ದಿನ ತುಂಬ ಕುಣಿತ; ಏನೂ ಇಲ್ಲದೆ ಬರಿಯ ಒಲೆ ಎದುರಿಗಿದ್ದರೂ ಕುಣಿತ. ಸಂಜೆ ಕಳೆಯಿತೆಂದರೆ ಯಾವನಾದರೊಬ್ಬನು ದುಡಿಯನ್ನು (ಡಮರು) ಹಿಡಿದು ಬಾರಿಸುವನು. ಉಳಿದವರು— ಹಿರಿಯರು, ಕಿರಿಯರು, ಗಂಡಸರು, ಹೆಂಗಸರು — ಎಲ್ಲರೂ ಸೇರಿ ಕುಣಿಯುವರು. ಈ ಕುಣಿತದಿಂದಲೇ ಜೀವನದ ಹಲವು ತೆರನ ಬೇಗೆಗಳನ್ನು ಕಳೆಯುವರು, ಮರೆಯುವರು. ಮದುವೆಯಿರಲಿ, ಹಬ್ಬವಿರಲಿ, ಹತ್ತು ಮಂದಿ ಇರುವ ಯಾವ ಕೂಟವೇ ಇರಲಿ—ಅದು ನೃತ್ಯಮಯವಾಗಿ ಬಿಡುವುದು. ಅದು ಕುಣಿತದ ಬರಿಯ ಪ್ರಾಥಮಿಕ ಸ್ಥಿತಿ. ಹೆಜ್ಜೆಯಲ್ಲಿ, ರಂಗಸರಿ ಭ್ರಮಣದಲ್ಲಿ, ಶರೀರ ವಿನ್ಯಾಸದಲ್ಲಿ ಬರಿಯ ನಾಲ್ಕಾರು ಬಗೆಗಳಿವೆ; ಹೆಚ್ಚಿನ ವೈವಿಧ್ಯವಿಲ್ಲ. ದುಡಿಯ ಬಡಿತದಲ್ಲಿ 'ಬೋಲು'ಗಳ ಚಮತ್ಕಾರವಿಲ್ಲ. ಬಹು ಮಟ್ಟಿಗೆ ಏಕತಾನದ ಬಡಿತ, ಏಕತಾನದ ಕುಣಿತ. ಆದರೆ ಕುಣಿವವರಲ್ಲಿ ತನ್ಮಯತೆ ತುಂಬ.

ಅವರದು ತೀರ ಅಶಿಕ್ಷಿತ ಪ್ರಪಂಚ; 'ಅರಿವಿ'ನ ಹೊಳವು ಮಾತ್ರ ಉಳ್ಳ ಜನರವರು. ಅವರ ಬಾಳಿನಲ್ಲಿ ಕನಸಿನ ವಿಲಾಸಕ್ಕಿಂತ, ಭಾವದ ಬರಿಯ ಉದ್ವೇಗ ಮುಖ್ಯ. ತಾಲದ ಗತಿ ತೀವ್ರವಾದಂತೆ, ಕುಣಿತ ಏರುತ್ತ ಬಂದು, ರಕ್ತಸಂಚಾರ ಮಿದುಳನ್ನು ತುಂಬಿ, ಮೈಮರೆತವನ್ನು ಹುಟ್ಟಿಸುವುದು. ಅಂಥ ಕುಣಿತಗಳ ಸ್ವಾರಸ್ಯವಿರುವುದು ಭಾವಪರವಶತೆಯಲ್ಲಿ. ಕುಣಿವವರು ಯಾವ ಒಂದು ಭಾವನೆಯಿಂದ ಕುಣಿತಕ್ಕೆ ತೊಡಗುವರೋ ಕೇವಲ ಅದೇ ಭಾವನೆಯಲ್ಲಿ ಉದ್ರಿಕ್ತರಾಗಿ ಮೈ ಮರೆಯುವರು. ಸಾಮಾನ್ಯವಾಗಿ ಪ್ರಪಂಚದ ಅನಾಗರಿಕ ಇಲ್ಲವೆ ಮೂಲ ನಿವಾಸಿಗಳಲ್ಲಿ ನಾವು ತಪ್ಪದೆ ಕಾಣುವ ಕುಣಿತಗಳು ಇಂಥವು. ಮತಿವಿಕಾಸ ಅಷ್ಟೊಂದು ಆಗದವರ ಜೀವನದಲ್ಲಿ ಕುಣಿತದಂಥ ಸುಖಸಾಧನ ಬೇರೊಂದಿಲ್ಲ. ಅದರಿಂದಲೇ ಅವರು ಅದನ್ನು ಬಿಡಲಾರರು.

ಕುಣಿತಕ್ಕಿರುವ ಮೈಮರಸುವ ಮತ್ತು ಉದ್ರೇಕಗೊಳಿಸುವ ಶಕ್ತಿಯನ್ನೇ ಮೂಲನಿವಾಸಿಗಳು 'ರಣ'ಕ್ಕೂ ಉಪಯೋಗಿಸುವರು. ನಿಗ್ರೋ ಜನರು, ಡಯಾಕರು

—ಇವರೆಲ್ಲ ಎದುರಿನ ಕುಲದವರ ಮೇಲೆ ಕಾಳಗ ಮಾಡಬೇಕಾದರೆ ಕುಣಿತಕ್ಕೆ ಶರಣುಹೊಗುವರು. ಆಗ ಅವರು ತಮ್ಮ ರೂಪದ ನೆಲೆ ತಮಗೇ ಸಿಗದ ರೀತಿಯಲ್ಲಿ ಮೈಯನ್ನು ಚಿತ್ರವಿಚಿತ್ರವಾಗಿ ಬಣ್ಣ ರೇಖೆಗಳಿಂದ ಬಳಿದುಕೊಂಡು, ಡೋಲುಗಳ ಬಡಿತಕ್ಕೆ ತಾಲಕೊಡುವರು. ತಾಲದ ಗತಿಗೆ ಬಲಿಯಾದ ಅವರ ವೈರಬುದ್ಧಿಯು, ತಾಲದ ಗತಿ ತೀವ್ರವಾದಂತೆ, ಇನ್ನಷ್ಟು ಉದ್ರೇಕಗೊಳ್ಳುವುದು. ಅದೇ ಆವೇಶ ದಿಂದಲೇ ಅವರು ವೈರಿಯಮೇಲೆ ಧಾಳಿ ನಡೆಯಿಸುವರು. ಈ ಬಗೆಯ ಕುಣಿತ ವನ್ನು ಮಲೆಕುಡಿಯರಲ್ಲಿ ಕಾಣಬಹುದು. ಕೊಡಗರ ಒಂದು ಕುಣಿತದ ವಿಧಾನದಲ್ಲಿ ಈ ಛಾಯೆ ಕಾಣಿಸುತ್ತದೆ. ಹುತ್ತರಿ ಕುಣಿತದ ಹೆಜ್ಜೆಗಳಿಂದ ಅವರು ಕೈಯಲ್ಲಿ ಖಡ್ಗ ಹಿಡಿದಲ್ಲಿ, ತಮ್ಮ ರೂಢಿಯ ಕುಣಿತವನ್ನು ಕುಣಿದರೂ ಅದರ ಮೂಲ ಜನ್ಮವು ಇಂಥ ರಣ ಕುಣಿತವಾಗಿದೆ ಎಂದು ಊಹಿಸಬಹುದು.

ಜನಜೀವನದ ಹಬ್ಬ, ಹುಣಿಮೆ, ರಣ— ಇವುಗಳ ವಿಚಾರ ಹೇಳಿದ್ದಾಯಿತು. ಅದೇ ಜೀವನದ ಇನ್ನೊಂದು ಮುಖ್ಯ ಅಂಗ ಧರ್ಮ, ಮತ. ಮೂಲನಿವಾಸಿಗಳ, ಇಲ್ಲವೆ ನಮ್ಮ ಹೊಲೆಯರ, ಕುಡಿಯರ ಮತ, ಧರ್ಮ, ದೈವಗಳ ಕಲ್ಪನೆಗಳು— ಎಷ್ಟು ಮೂಢ, ಒರಟು, ಇಲ್ಲವೆ ವಿಚಿತ್ರವಾಗಿರಲಿ ಅದು ಅವರ ಭಯ, ನಯಗಳ ಸರ್ವಸ್ವವಾಗಿದೆ. ಸಿಡಿಲು, ಗುಡುಗು, ಸಾವು, ರೋಗ— ಇವುಗಳ ಅಂಜಿಕೆಗೆ, ಬೆರಗಿಗೆ ಸಿಲುಕಿದ ಜನರು ತಮ್ಮ ಎಟುಕಿಗೆ ಮೀರಿದ ಈ ಶಕ್ತಿಗಳ ವಿಷಯವಾಗಿ ತಮ್ಮ ಬುದ್ಧಿಯನ್ನು ಹರಿಯಗೊಟ್ಟು ಅನೇಕವಾದ "ದೈವ"ಗಳನ್ನೂ ಅವುಗಳ ಪುರಾಣಗಳನ್ನೂ ನಿರ್ಮಿಸಿದ್ದಾರೆ. ಅದು ಅವರವರ ಕಾಲದ ಸತ್ಯ, ಧರ್ಮಗಳು. ನಮ್ಮ ರಾಮ ಕೃಷ್ಣರು ನಮಗೆಷ್ಟು ನಿಜವೋ, ಕಾಳಿ ದುರ್ಗಿಯರು ನಮಗೆ ಎಷ್ಟು ಹಿತವೋ ಅವರ ದೈವಗಳು— ಪಂಜುರ್ಲಿ, ರಕ್ತೇಶ್ವರಿ, ಮಲರಾಯರುಗಳು— ಅವರಿಗೆ ಅಷ್ಟು ನಿಜ; ಅಷ್ಟು ಹಿತ. ಊರಲ್ಲಿ ಕ್ಷಾಮ ಬಂದರೆ "ದೈವ" ಬೇಕು; ರೋಗ ಬಂದರೆ "ದೈವಕ್ಕೆ" ಶರಣು; ವೈರಿನಾಶಕ್ಕೆ "ದೈವ"ದ ಅನುಗ್ರಹ ಬೇಕು. ಇಂಥ ಪ್ರಸಂಗಗಳಲ್ಲಿ ಅವರು ದೈವತನದ ಆವರಣವನ್ನು ಹೇಗೆ ಕಟ್ಟುತ್ತಾರೆಂಬುದನ್ನು ಪರಿಶೀಲಿಸುವ. ತಾವು ಆವಾಹನೆ ಮಾಡುವ ದೈವಗಳನ್ನು ಕಲ್ಪಿಸಿ, ಅದಕ್ಕೊಂದು ರೂಪ ಕೊಡುತ್ತಾರೆ. ಅದನ್ನೇ ಜನರ ಮುಂದಿರಿಸಿ, ಜನರ ಭಾವ, ಬೆರಗು, ಆವೇಶಗಳನ್ನೇ ನೂರ್ಮಡಿಮಾಡುವಂತೆ ನೃತ್ಯವನ್ನೇ ಬಳಸುತ್ತಾರೆ. ಈ ಸಾಮಾಜಿಕ ಕೆಲಸಕ್ಕೆ ಎಲ್ಲರೂ ತಕ್ಕವರಲ್ಲ. ನಮ್ಮ ದೈವಾರಾಧನೆಗೆ ಸ್ವಾಮಿಯರು, ತಾಂತ್ರಿಕರು, ಪೌರೋಹಿತರು— ನೆರವಾದಂತೆ, ಅವರಲ್ಲಿ "ಪುರೋಹಿತ"ನು ಇದೆಲ್ಲಕ್ಕೆ ಸೂತ್ರಧಾರನು. ಅವನ ವಯಸ್ಸು, ಅನುಭವ, ಅತಿಶಯ ಸೂಕ್ಷ್ಮಶಕ್ತಿ ಜನತೆಗೆ ಮತ್ತು ದೈವಕ್ಕೆ ಸಂಬಂಧಕಲ್ಪಿಸಲು ಶಕ್ತ ವಾದುದು. ಆಫ್ರಿಕ, ಆಸ್ಟ್ರೇಲಿಯ, ಸಮೋವಾ, ಪ್ರಾಚೀನ 'ಮಾಯಾ'— ಎಲ್ಲ ನಾಗರಿಕತೆಗಳು ಇದನ್ನೆ ಹೇಳುತ್ತವೆ. ನಮ್ಮ ಹೊಲೆಯರ, ಕುಡಿಯರ ಈಗಿನ ಬಾಳ್ವೆ ಇಂಥದೇ.

ಕನ್ನಡ ಜಿಲ್ಲೆಯ ತುಳುನಾಡಿನ ಸೆರಗು ದೈವಗಳ ಪ್ರಪಂಚ. ಅಲ್ಲಿನ ಜನರು ನೆಚ್ಚಿ ಬಂದಿರುವ ಪಂಜುರ್ಲಿ, ಬೊಬ್ಬರ್ಯ, ಮಲರಾಯ, ಪಿಲಿಭೂತ,

ಮೊದಲಾದ ನೂರಾರು ದೆವ್ವಗಳನ್ನು ಮೇಲು ಜಾತಿಯವರೂ ನಂಬುತ್ತಾರೆ. ಇಲ್ಲಿಗೆ ಬ್ರಾಹ್ಮಣರು ಬಂದು ಸೇರುವ ಮೊದಲೇನೆ ಆ ದೆವ್ವಗಳು ಊರಿನ ಪಾರುಪತ್ಯ ನಡಸಿ ಬಂದಿದ್ದವು; ಊರಿನ ನಾಡವರು, ಮೊಗೇರರು, ಹೊಲೆಯರು ಅವುಗಳನ್ನು ನಂಬಿದ್ದರು. ಹೀಗಿರಲು ಆಗಂತುಕರೂ ಅವಕ್ಕೆ ತಲೆತಗ್ಗಿಸದೆ ಉಂಟೆ? ಈ ದೆವ್ವಗಳ ಪೂಜಾರಿಗಳು ಮೂಲದ ಜನರೇ. ದೆವ್ವದ ಈ ಪುರೋಹಿತರಿಗೆ ಪಂಬಂದ, ನಲ್ಕೆ, ಪಾಣಾರು, ಬೈದ್ಯ— ಹೀಗೆಲ್ಲ ಹೆಸರುಗಳಿವೆ. ಅವರ ಮೂಲಕವಾಗಿ ಆಯಾಯ ದೆವ್ವಗಳಿಗೆ ಕೋಲಕ್ಕೆ, ಪರ್ವಕ್ಕೆ ತಕ್ಕ ಮನ್ನಣೆ ಸಲ್ಲಬೇಕು. ವಿಪತ್ತು ಬಂದಾಗ ಅವುಗಳೇ ಸಮಾಜಕ್ಕೆ ಪರಿಹಾರ ಹೇಳಬೇಕು.

ಪೂಜಾರಿಯು ದೆವ್ವಗಳ ಈ ಕೋಲ (ಉತ್ಸವ)ಗಳಲ್ಲಿ ಆರಾಧಿಸುವ ದೆವ್ವದ ಸೋಗನ್ನು ಧರಿಸುವನು. ದೆವ್ವದ ಭೀಕರತೆಗೆ ಸಮನಾದ ಮುಖವಾಡ, ಮುಖಚಿತ್ರ, ಅಣಿ (ಕಿರೀಟದ ಬಗೆ) ಇವುಗಳನ್ನು ಮಾಡಿಕೊಂಡು, ಕಾಲಿಗೆ ಗಗ್ಗರ ಕಟ್ಟಿಕೊಂಡು, ಕೈಯಲ್ಲಿ ಪ್ರಾಚೀನವಾದ ಒಂದು ಖಡ್ಗವನ್ನು ಹಿಡಿಯುವನು. ಉಡುಗೆಯ ಸಜ್ಜಾಯಿತೆಂದರೆ ಅವನ ಮಡದಿಯು ಬಡಿಯುವ ಕಿರಿದೋಲಿನ ತಾಲಕ್ಕೆ ಸಮನಾಗಿ ಅವನು ದೆವ್ವನ 'ಪಾಡ್ದನ' (ಚರಿತ್ರೆ) ಹಾಡುವನು. ಈ ಪಾಡ್ದನವೆಂದರೆ ಆವೇಶಗೊಳ್ಳಲಿರುವ ದೆವ್ವದ ಆಟೋಪ, ಉಕ್ಕುಗಳ ಇತಿಹಾಸ. ಈ ಹಾಡಿನ ಹಿನ್ನೆಲೆಯನ್ನು ಪಡೆದ ನರ್ತನಕಾರನು, ಮುಂದೆ ವಾದ್ಯಗಳ ಮೇಳಕ್ಕೆ ಕುಣಿಯುವನು. ಅವನ ಮೈನಡುಕು ಕುಣಿತದಲ್ಲಿ ಪರಿಣಮಿಸುವುದು. ಈ ಕುಣಿತದಲ್ಲಿ ಕಾಣುವ ರೌದ್ರ, ವೀರ, ಧಾರ್ಷ್ಟ್ಯತೆಗಳು ನೋಡಿಯೇ ತಿಳಿಯಬೇಕಾದುವು. ಆವೇಶಗೊಂಡ ಭೂತಕ್ಕೆ ಅವು ತಕ್ಕುವು. ಆಗಿನ ಕುಣಿತ, ಹಾರಾಟ, ಅಬ್ಬರಗಳು ಭಯಾನಕರಸವನ್ನು ಕೆರಳಿಸಿ ನೋಟಕರಲ್ಲಿ ಭಯ, ವಿನಯಗಳನ್ನು ಮೂಡಿಸುವುವು. ಅತ್ಯಂತ ಸುಂದರ ಆವರಣವಿದು. ಇಂಥ ಸಮಯದಲ್ಲಿ ಜನರು ತಮ್ಮ 'ಹಾಲಾಹವಾಲೆ'ಗಳನ್ನು ಹೇಳಿಕೊಳ್ಳುವರು. ಭೂತವು ತನ್ನ ನುಡಿಕಟ್ಟುಗಳನ್ನು ಸಾರುವುದು. ಈ ಸಮಯದಲ್ಲಿ ಈ ಪುರೋಹಿತನು ಆಡುವ ಮಾತುಗಳು ಮುಂದೆ ನಡೆಯಲಿ, ನಡೆಯದಿರಲಿ,— ನಡೆದಾವೆಂಬ ವಿಶ್ವಾಸ ನೆರೆದವರಲ್ಲಿ ಇರುತ್ತದೆ. ಪೂಜಾರಿಯ ಪೂರ್ವ ಸ್ಮೃತಿಗೆ ಊರಿನ ಗುಟ್ಟು, ಬಗೆಗಳು ತಿಳಿದೇ ಇರುತ್ತವೆ. ಇದರಮೇಲೆ ಅವನು ಭೂತದ ಕನಸನ್ನು ಕೆರಳಿಸಿಕೊಂಡಿದ್ದಾನೆ. ಮೇಲೆ ಕುಣಿತದಿಂದ ಅವನ ಭಾವವು ಉದ್ವೇಗಗೊಂಡಿರುತ್ತದೆ. ಇವುಗಳ ಸೇರಿಕೆಯಿಂದ —ನಿತ್ಯವಲ್ಲದ— ಒಂದು ವಿಚಿತ್ರ ಸೃಷ್ಟಿ ಆಗುತ್ತದೆ. ಅದು ಪೂಜಾರಿಯ ವಂಚನೆಯಾಗಿರಬೇಕಿಲ್ಲ. ಕಾರಣ ಆ ಕಾಲದಲ್ಲಿ ಪೂಜಾರಿಯು ದೆವ್ವವೇ ಆಗಿರಲಾರನಾದರೂ, 'ತಾನೂ' ಆಗಿರುವುದಿಲ್ಲ. ಅದೊಂದು ಕಲಾಸೃಷ್ಟಿ. ಸಾಮಾಜಿಕರ ಲಾಭಹಾನಿಗಳ ದೃಷ್ಟಿಯಿಂದ— ಅಂದರೆ ರೋಗನಿವಾರಣೆ, ವೈರಿನಾಶ, ಸಂಪತ್ತು, ಲಾಭ, ಇಂಥವು ಆಗದೆಹೋದರೂ, ಒಂದು ನವೀನ ಸೃಷ್ಟಿ ಮಾತ್ರ ಉಂಟಾಗಿದೆ. ಮಾನವನಲ್ಲದ "ದೆವ್ವ" ಅಲ್ಲಿ ಮೂಡಿದೆ. ಈ ಬಗೆಯ ಕುಣಿತಗಳಲ್ಲಿ ಇನ್ನೂ ಒಂದು ಹೆಜ್ಜೆ ಕಲೆಯು ಮುಂದುವರಿದುದು ಕಾಣುವುದು. ಅರಿವೇ ಬಲವಂತವಾಗದ, ಭಾವವೇ ಅರಿವನ್ನು ಕವಿಯದ ಮಧ್ಯವರ್ಗದ ಈ ಕುಣಿತವು ಕಲೆಗೆ ತುಂಬ ಆದರ್ಶವಾದುದು.

ಇನ್ನೊಂದು ಬಗೆಯ ಕುಣಿತದ ವಿಚಾರವನ್ನು ತಮ್ಮ ಮುಂದಿರಿಸುತ್ತೇನೆ. ಇದು ನಾನು ಕಂಡ 'ರಾಣೆ'ಯರ ಕೋಲಾಟದ ಕುಣಿತ. ಈ ಸಂಗಡದವರಿಗೆ ಭೈರರು ಎನ್ನುತ್ತಾರೆ. ಪ್ರಾಯಶಃ 'ಭೈರವ'ರು ಎಂದಿರಬಹುದು. ಕಾರಣ ಇತರ ಹೊಲೆಯರಂತೆ ಇವರು ದೆವ್ವದ ಭಕ್ತರಲ್ಲ. ಶಿವನ ಭಕ್ತರು. ಅವರು ಹಾಡುವ ಕನ್ನಡ ಹಾಡುಗಳು "ಗಣ" ಲೋಕದ ಹಾಡುಗಳು. ಅವರ ಕೋಲಾಟದ ಕುಣಿತಕ್ಕೂ, ಇತರ ಹಲವು ಬಗೆಯ ಕೋಲಾಟಗಳಿಗೂ ತುಂಬ ವ್ಯತ್ಯಾಸವಿದೆ. ಅದನ್ನೇ ಮುಂದೆ ವಿವರಿಸುತ್ತೇನೆ.

ಈಗ ಭೈರರ ಕೋಲಾಟದ ವಿಚಾರ. ಇವರಲ್ಲಿ ಹಾಡುವವರು ಗಂಡಸರು. ಅವರು ತಾಲ ಹಾಕಲು ಎರಡೆರಡು ಕೋಲುಗಳನ್ನು ಹಿಡಿದು ಮಂಡಲಾಕಾರ ವಾಗಿ ನಿಲ್ಲುವರು. ಕೆಲವು ಬಾರಿ, ಮಂಡಲದೊಳಗೆ ಮಂಡಲವಾಗಿ ನಿಲ್ಲುವರು. ಅವರ ಕುಣಿತಕ್ಕೆ ಬೇರೆಯಾದ ಚರ್ಮವಾದ್ಯವಿಲ್ಲ. ಕೋಲಿನ ಬಡಿತವೇ ತಾಲದ ಸಾಧನ. ಆದರೆ ಅದರ ಜತೆಗೆ ಹಾಡಬೇಕು. ಬಾಯಿಂದ ಕೆಲವರು ಒಂದು ಹಾಡಿನ ಪಲ್ಲವಿಯನ್ನೂ, ಉಳಿದವರು ಅದರ ಚರಣಗಳನ್ನೂ ಆವೃತ್ತಿಯಿಂದ ಹೇಳುತ್ತಾರೆ. ಹಾಡುವ ಹಾಡುಗಳು ತಾಲಪ್ರಧಾನವಾಗಿದ್ದು, ಗಣನಾಯಕನಾದ ವಿಘ್ನೇಶನಿಗೆ ಸಂಬಂಧಿಸಿದುವು. ಅದರಲ್ಲಿ ಒಂದು ಹಾಡು ಹೀಗಿದೆ:

ಬುದ್ಧಿಕೊಡೆಮಗೇ । ಗಣನಾಯ್ಕ ।
ವಿದ್ಯೆಯ ಪಾಲಿಸು । ಗಣನಾಯ್ಕ ।
ಬಿದ್ದು ನಮಿಸುವೆವಯ್ಯ । ಗಣನಾಯ್ಕ ।

ಈ ಹಾಡು ಗೀತ, ತಾಲಗಳ ದೃಷ್ಟಿಯಿಂದ ನೋಡುವಾಗ 'ಗಣನಾಯ್ಕ' ಎಂಬ ಸೊಲ್ಲಿನ ಮೇಲೆ ಕಟ್ಟಲ್ಪಟ್ಟಿದೆ. ಕುಣಿವವರು ಈ ಹಾಡನ್ನು ಹಾಡುತ್ತ, ಅಡಿಗಡಿಗೆ "ಗಣನಾಯ್ಕ" ಎಂದು ಇದಿರುಬದಿರಾಗಿ ಸುತ್ತುವರಿದು, ಕುಣಿದು ತಾಲಹಾಕು ವಾಗ ತಾವೇ "ಗಣರು" ಎಂಬ ಭ್ರಮೆಯನ್ನು ಹುಟ್ಟಿಸುತ್ತಾರೆ. ಇವರ ನಡುವೆ ಒಬ್ಬಿಬ್ಬರು ತಾವು ಗಣೇಶ, ಸ್ಕಂಧರಂತೆ— ಮಂಡಲ ತಪ್ಪಿ, ಎಲ್ಲರೊಡನೆ ನಲಿದು, ತಾಲಹಾಕಿ, ಸರಸವಾಡಿ, ಹಕ್ಕಿಯಂತೆ ಲಘುವಾಗಿ ಚಿಗಿದು, ನೆಗೆದು, ಲಲಿತವಾಗಿ ಬೇರೆಯವರ ಕೋಲಿಗೆ, ತಮ್ಮ ಕೋಲನ್ನು ಬಡಿದು—ಭಾವದಲ್ಲಿ ತೇಲಿ ಕುಣಿಯುವ ರೀತಿ ಅತಿ ಸೋಜಿಗವಾಗಿದೆ. ಅವರ ಈ ಕೋಲಾಟದ ಕುಣಿತಗಳಲ್ಲಿ, ಕುಣಿತದ ಗತ್ತು, ಕೋಲಿನ ಚಳಕ— ಇವು ಮುಖ್ಯವಾಗಿಲ್ಲ. ಅದರ ಲಾಲಿತ್ಯ, ಕುಣಿಯುವವರ ತನ್ಮಯತೆ, ಹಾಡಿನ ಸ್ವಾರಸ್ಯವನ್ನು ಕುಣಿತದಲ್ಲಿ ಬೆಸೆದು, ಹೊಸೆದು, ನೆಗೆಯುತ್ತಿದ್ದ ಅವರ ಲೀಲೆ ಅಮೋಘವಾಗಿತ್ತು. ಕೀಳೆನಿಸಿಕೊಂಡ ಈ ಜನರು ಗಣಪನ ನಾಯಕತ್ವದ ಏರಿಕೆ, ಹಿರಿಮೆಗಳನ್ನು ಎಷ್ಟೊಂದು ಸುಂದರ ವಾಗಿ ನರ್ತನದಲ್ಲಿ ಚಿತ್ರಿಸಬಲ್ಲರು ! ಅವರ ಅರಿವು ಬೆಳೆದ ರೀತಿಗೆ ಸಮವಾಗಿಯೇ ಭಾವತಲ್ಲೀನತೆಯೂ ಬೆಳೆದುಬಂದಿದೆ.

ನೃತ್ಯಪಂಡಿತರಿಗೂ ಇವರಿಗೂ ಇರುವ ವ್ಯತ್ಯಾಸ ಅದು. ನೃತ್ಯ ಪಂಡಿತರು "ತಾವು ಕುಣಿತಗಾರರು" ಎಂಬ ಅರಿವನ್ನು ಬಿಡಲಾರರು. ಕುಣಿತವನ್ನೆ ಅವರು ಕಸಬಾಗಿ ತಿಳಿದು ಅವನ್ನು ತಿಕ್ಕಿ, ತೇದುವರು. ಚಲನೆಯ ರೀತಿ, ವೈವಿಧ್ಯ, ಮೃದಂಗದ

ಧೋಂದರಿಕಿಟಗಳು ಅವರ ಕರವಾಡದಲ್ಲಿ ಬೆಳೆಯಬಹುದು. ಮಲಬಾರಿನ ಹೆಚ್ಚಿನ ಕೋಲಾಟಗಳು ಈ ತೆರನವು. ಅಲ್ಲಿ ಚಾತುರ್ಯಕ್ಕೆ ಪ್ರಾಧಾನ್ಯವಿದೆ. ಕಸರತ್ತು ಹೆಚ್ಚಿನದು; ಭಾವದ ಹೊಮ್ಮುವಿಕೆಯಿಲ್ಲ.

ಇಷ್ಟೊಂದು ಹಿಂದೆ ಹೇಳಿದ ಕೆಳಮಟ್ಟದವರು ಎನಿಸುವವರ ಮೇಲುತರದ ನೃತ್ಯಗಳು. ಈಗ ಮೇಲುಮಟ್ಟದವರ ನೃತ್ಯವಿಚಾರ. ಅಂಥದರಲ್ಲಿ ನಮ್ಮ ನಾಡಿನ ಯಕ್ಷಗಾನವೇ ಪ್ರಧಾನ. ಇಲ್ಲಿ ಜನರ ಅರಿವು ತುಂಬ ಬೆಳೆದಿದೆ. ಅವರು ಒಂದು ಕಥೆ, ಪಾತ್ರರಚನೆ— ಇವನ್ನೆಲ್ಲ ನೃತ್ಯಕ್ಕೆ ಸೇರಿಸಿದ್ದಾರೆ. ಅವರ ಹಿಮ್ಮೇಳದವರ ಮೃದಂಗ ವಾದನವು ಚತುರವಾಗಿ ಬೆಳೆದಿದೆ. ಅದು ಮಡಿಯ, ಇಲ್ಲವೆ ದೋಲಿನ ಸಾದಾ ಪೆಟ್ಟುಗಳಂತಲ್ಲ. ಇದರಿಂದಾಗಿ ಕುಣಿತದ ಹೆಜ್ಜೆ ಸಂಪ್ರದಾಯವು ವಿವಿಧ ರೀತಿಯಾಗುವುದು ಸಹಜ. ಆದರೆ ಈ ಜನರು ತಾವು ತೊಟ್ಟಿರುವ ಕೆಲಸಕ್ಕೆ ಬೇಕಾದ ಕಸಬಿನ ಕೌಶಲ್ಯ ಪಡೆದರೂ, ಸಂಸ್ಕೃತಿ ಅದಕ್ಕೆ ತಕ್ಕಂತಿಲ್ಲದವರು. ಮಹಾಭಾರತ, ರಾಮಾಯಣಗಳ ಕಥೆಯಲ್ಲಿ ಬರುವ ರಾಮ, ಕೃಷ್ಣ ದುರ್ಯೋಧನ, ಅರ್ಜುನರಂಥ ವ್ಯಕ್ತಿಗಳ ನಿಲುವನ್ನು ಅಳೆಯುವ ಸಾಹಸ ಒಬ್ಬ ಗ್ರಾಮಸಾಮಾನ್ಯರಿಂದಾದೀತೆ? ಅವರಿಗೆ ಕಥೆ ತಿಳಿದಿರಬಹುದು. ಕುಂಬಾರನು ಕುಂದಣದ ಕೆಲಸಕ್ಕೆ ಕೈಯಿಕ್ಕಿದಂತಾಗಿದೆ ಅವರ ಪಾಡು. ಆದರೂ ಮಾತುಗಾರಿಕೆ, ಹಾಡು— ಇವುಗಳನ್ನೆಲ್ಲ ನೃತ್ಯದ ಜತೆಗೆ ಸೇರಿಸಿಕೊಂಡು ಅವರು ರಾಮಾಯಣ, ಮಹಾಭಾರತದ ಪ್ರಸಂಗಗಳನ್ನೆ ಆಡುತ್ತಾರೆ. ಕುಣಿತದಿಂದ ಈ ಕೆಲಸ ಅವರು ಸಾಧಿಸಿದ್ದಾರೆ ಎನ್ನುವ ಧೈರ್ಯ ನನಗೆ ಬಾರದು. ವರ್ಣಿಕೆಯಿಂದ ಅವರು ಕಟ್ಟುವ ಅತಿಮಾನುಷ, ಅಮಾನುಷ ವ್ಯಕ್ತಿಗಳು ಉತ್ಕೃಷ್ಟವಾಗಿವೆ. ಕಾರಣ— ವರ್ಣಿಕೆಯನ್ನು ಅಂದರೆ ಹಾಕುವ ವೇಷ, ತೊಡವುಗಳನ್ನು, ರೂಪಿಸುವ ಕೆಲಸವನ್ನು ಒಬ್ಬ ಕನಸುಗಾರನಿಂದ ಉಳಿದವರು ಅನುಕರಿಸಬಹುದು. ಆದರೆ ನೃತ್ಯ ತಾನಾಗಿ ಹುಟ್ಟಿ ಬರಬೇಕಾದ ಕಲೆ. ಯಕ್ಷಗಾನವಲ್ಲಿ ಸಂಪ್ರದಾಯವಾಗಿ ಯಶಸ್ವಿಯಾಗಿ ಬಂದ ಕುಣಿತಗಳು ರೌದ್ರ, ವೀರರಸಗಳಿಗೆ ಪೋಷಕವಾಗಿವೆ. 'ಕಾಳಗ'ವನ್ನು ಅವರು ಚೆನ್ನಾಗಿ ತೋರಿಸುವರು. ಅಲ್ಲಿ ನರ್ತನದ ಶಕ್ತಿ ಉಕ್ಕುವುದು ಸ್ವಾಭಾವಿಕ. ಆದರೆ ಶೃಂಗಾರ, ಕರುಣ, ಶಾಂತ, ಹಾಸ್ಯ ರಸಗಳಾಗಲಿ ಆಯಾ ಪಾತ್ರಗಳ ಸ್ವರೂಪ ನಿರ್ಣಯವಾಗಲಿ ಅವರ ಕುಣಿತಗಳಿಂದ ಹೊರಡುವುದಿಲ್ಲ. ಅದನ್ನು ಪೂರೈಸಲು ಹಿಮ್ಮೇಳದ ಭಾಗವತನ ಹಾಡುಗಳೇ ನಮಗೆ ನೆರವಾಗಬೇಕು. ಅಷ್ಟರ ಮಟ್ಟಿಗೆ ಯಕ್ಷಗಾನವು ಭರತನಾಟ್ಯದಂತೆ 'ಮಿಶ್ರಕಲೆ'ಯಾಗುತ್ತದೆ. ನೃತ್ಯದೃಷ್ಟಿಯಿಂದಲೇ ಕಾಣುವಾಗ ಅವರ ವಿವಿಧ ತಾಳದ ಹೆಜ್ಜೆ ಕುಣಿತಗಳು ಸಹ ಶೃಂಗಾರ, ವೀರ, ರೌದ್ರಗಳಿಗೆಲ್ಲ ಏಕರೂಪವಾಗಿಯೇ ಇವೆ.

ಈ ಉದಾಹರಣೆಗಳನ್ನೆಲ್ಲ ನಮ್ಮ ಮುಂದೆ ಇರಿಸಿಕೊಂಡು ನಾವು ವಿಚಾರಿಸ ಬಲ್ಲೆವಾದರೆ ನೃತ್ಯವು ಜನಜೀವನದ ಅಂಗವಾಗಿ ಉಳಿದಷ್ಟು ಅಂಶ ಚೆನ್ನಾಗಿ ಸಫಲವಾಗಿದೆ. ಆ ಜನಜೀವನದ ಆದರ್ಶ ನಮಗೆ ಒಪ್ಪದಿರಬಹುದು. ಅದು ಬೇರೆ ವಿಷಯ. ಕಾರಣ: ವಿಮರ್ಶಕಾರನು ಕಲಾವಿದನ ಆದರ್ಶಕ್ಕೂ ಕೃತಿಗೂ ಇರುವ ತುಲನೆಗೆ ತಕ್ಕವನೇ ಹೊರತು, ಆದರ್ಶವನ್ನು ಪ್ರಶ್ನಿಸಿ, ತನ್ನ

ಆದರ್ಶವನ್ನು ಹೇರಿಸಿ ತೂಗಲು ತಕ್ಕವನಲ್ಲ. ಇಷ್ಟನ್ನೇ ಒಪ್ಪಿದಲ್ಲಿ ನಮ್ಮ ನಾಡಿನ ಜನಜೀವನದಲ್ಲಿ ನೃತ್ಯ ತುಂಬ ಸುಖಸಾಧನವಾಗಿ ಇನ್ನೂ ಉಳಿದಿದೆ ಎನ್ನಬೇಕು.

ಆದರೆ ಈಗಿನ ನಮ್ಮ ಜೀವನ ಬೆಳೆಯುತ್ತಿದೆ, ಬದಲಾಗುತ್ತಿದೆ. ಮೂಲನಿವಾಸಿಗಳ ಮಟ್ಟದಲ್ಲಾಗಲಿ ಮಿತಿಯಲ್ಲಾಗಲಿ ಅದು ಉಳಿದುಕೊಂಡಿಲ್ಲ. ನಮ್ಮ ಕನಸು, ಆಸೆಗಳೆಲ್ಲ ಹಿಂದಿನವುಗಳಿಗಿಂತ ಭಿನ್ನವಾಗಿವೆ, ಬದಲಾಗಿವೆ. ಅವು ಹೊಸತಾಗಿ ರೂಪುಗೊಳ್ಳುತ್ತಲಿವೆ. ಹೀಗೆ ರೂಪಿತವಾಗುತ್ತಿರುವ ಜೀವನಕ್ಕೆ ಸಮನಾಗಿ ನೃತ್ಯವನ್ನು ಬೆಳೆಸಿಕೊಂಡು ಬಂದರೆ ನಮಗೂ ತುಂಬ ಆನಂದ ಉಲ್ಲಾಸ ಗಳು ಅದರಿಂದ ದೊರೆಯಬಹುದು. ನರ್ತನವನ್ನು ಮೆಚ್ಚಬೇಕಾದರೂ ಈ ತಿಳಿವು ನಮಗೆ ಚೆನ್ನಾಗಿರಬೇಕು. ಅದರ 'ನವ್ಯತೆ'ಯು ಈ ಮುಖ್ಯ ವಿಷಯವನ್ನು ಮರೆಯಿಸಬಾರದು.

ಇದಕ್ಕೇನಾಗಬೇಕು? ಎಂದರೆ — ಯಕ್ಷಗಾನದವರಂತೆ ತಮ್ಮ ಸಂಸ್ಕಾರ, ಮಿತಿಗಳನ್ನು ಮೀರಿದ ವ್ಯಕ್ತಿಗಳನ್ನು ನಾವು ಚಿತ್ರಿಸ ಹೋಗಕೂಡದು. ಹಾಗೆ ಮಾಡಿದೊಡನೆ 'ರನ್ನ'ನ ದುರ್ಯೋಧನನನ್ನು ಚೆನ್ನಗೌಡನು ಬರೆದಂತೆ ಆದೀತು. ಯಾವ ಕಲಾವಿದನೇ ಆಗಲಿ ತಾನು ಅನುಭವಿಸದ್ದನ್ನು ಚೆನ್ನಾಗಿ ಚಿತ್ರಿಸಲಾರ. ವಾಲ್ಮೀಕಿ ರಾಮಾಯಣವನ್ನು, ಅವನ ಶ್ಲೋಕ ಪಾಠ ಮಾಡಿ ನಾನು ಅಂದರೆ, ಅದು ನನ್ನ ರಾಮಾಯಣವಾದೀತೆ? ಅಥವಾ ವಾಲ್ಮೀಕಿಕವಿಯೆನಿಸುವ ಬದಲು, ಪಾಠಮಾಡಿದವನು ಕವಿಯಾದಾನೆಯೇ? ಈ ಮಾತು ಭರತನಾಟ್ಯದ ಅನುಯಾಯಿಗಳು ತೀರ ವಿಚಾರಿಸಬೇಕಾದ ವಿಷಯ.

ನೃತ್ಯದಲ್ಲಿನ ಇನ್ನೊಂದು ಎಡರೆಂದರೆ ಕಲೆ, ಕಸಬುಗಳನ್ನೇ ಒಂದಕ್ಕೊಂದಾಗಿ ತಿಳಿಯುವುದು. 'ಸೃಷ್ಟಿ'ಯ ಅಳತೆ ಸಿಗಲಾರದವರು ಕಸಬಿಗೆ ಮನಸೋಲು ವುದು ಸುಲಭ. ಗವಯಿಗಳ ಕುಲಕ್ಕೆ ರಾಗಪ್ರಸ್ತಾರವೇ ಸಂಗೀತವಾಗಿ ತೋರಬಹು ದಾದಂತೆ, ನರ್ತಕರಿಗೆ 'ನಾಟ್ಯಶಾಸ್ತ್ರ'ವು ಕಲೆಯಾಗಿಯೂ ಬಿಡಬಹುದು.

ಕಲಾವಿದನ ಮುಂದಿರಬೇಕಾದುದು ಎರಡು ಹಾದಿಗಳು: ಕನಸು; ಅವನ ಸಾಧನವು ಅವಶ್ಯವಾಗಿ ಬೆಳೆಯಬೇಕು. ಆದರೆ ಅದು ಕನಸಿಗೆ ಸಾಧನ. ಆಳಾಗಿ, ಹೊಂದಿಕೆಯಾಗಿ ಬೆಳೆಯಬೇಕು. ಅವನ ಜೀವನಕ್ಕೆ ಬಾರದ ಕನಸು, ಕನಸಿಗೆ ಬಾಗದ ಕಸಬು — ಇವೆರಡೂ ಕಲಾಜೀವನಕ್ಕೆ ವಿರುದ್ಧವಾದುವು. ನೃತ್ಯ ಈ ನಿಯಮಕ್ಕೆ ಹೊರಗಲ್ಲ. ಕನಸು ಬೆಳೆಯಲು ಭಾವ, ಸಂಸ್ಕಾರ, ಅನುಭವ, ಪ್ರತಿಭೆಗಳು ಅತಿ ಅವಶ್ಯ. ಕಸಬು ಬೆಳೆಯಲು ಅರಿವು, ಚಳಕಗಳು ಮುಖ್ಯ. ಅರಿವು, ಕನಸುಗಳ ಸಮ್ಮೇಳವು, ಅಂದರೆ ಹಿತವಾದ ಮೇಳವು ನೃತ್ಯಕ್ಕೆ ಮುಖ್ಯ. ಈ ದೃಷ್ಟಿಯಿಂದ ನಮ್ಮ ಹಲವು ಜನಪದ ನೃತ್ಯಗಳು, ಅವುಗಳು ಬೆಳೆದು ಬದುಕಿರುವ ನೆಲೆಗಳು — ಇವುಗಳನ್ನು ಪರಿಶೀಲಿಸಿ, ಇಂದಿನ ಕನಸಿಗೂ, ಇಂದಿನ ಬಾಳಿಗೂ ಹೊಂದಿರುವ ರೀತಿಯಲ್ಲಿ ನಾವು ಅದನ್ನು ಬೆಳೆಯಿಸಿಕೊಂಡು ಹೋಗಬೇಕಾಗಿದೆ.

ಹೀಗೆಂದೊಡನೆ, ರಾಮ, ಕೃಷ್ಣರುಗಳನ್ನು ನೃತ್ಯದಲ್ಲಿ ಇಂದು ಚಿತ್ರಿಸಬಾರದೇ ಎಂದು ಕೇಳಿದರೆ, ಕೂಡದೆಂದು ಥಕ್ಕನೆ ತರ್ಕಿಸಬಾರದು. ನರ್ತನಕಾರನಿಗೆ

ರಾಮ, ಕೃಷ್ಣರ ಕನಸು ಸಮನಾಗಿ ಹುಟ್ಟುವುದಾದರೆ ಅವಶ್ಯವಾಗಿ ಆಗಲಿ. ಆಗ ಅವನು ಆತನನ್ನೆ ನೃತ್ಯದಲ್ಲಿ ಚಿತ್ರಿಸುವಾಗ, ಚಿತ್ರಿಸುವ ಶಾಸ್ತ್ರ, ಇಂದಿನ ಜನತೆಗೆ ಅರ್ಥವಾಗುವ ಹಾವ, ಭಾವ, ನ್ಯಾಸ, ಮುದ್ರೆಗಳಿಂದ ತೋರಿಸಲಿ. ಭರತನಾಟ್ಯದಂಥ ಶಾಸ್ತ್ರವನ್ನೇ ನಾವು ಅಖಂಡವಾಗಿ ಬಳಸುವಾಗ ಈ ಮಾತೂ ನೆನಪಿನಲ್ಲಿರಬೇಕು. ಅದೊಂದು ಭಾಷೆಯಾಗಿಬಿಟ್ಟಿದೆ. ಸಂಸ್ಕೃತವನ್ನು ಸಾರ್ವಜನಿಕ ರೊಡನೆ ಬಳಸಬಂದೀತೆ? ಅಷ್ಟೇ ಮಿತಿಯಿಂದ ಮಿತಿ ಇದಕ್ಕಿದೆ. ಅಂದರೆ ಸಂಸ್ಕೃತದ 'ಮಿತಿ'ಯನ್ನು ಸೂಚಿಸಿದಂತೆಯೇ ಹೊರತು ಬಹಿಷ್ಕಾರ ಹಾಕಿದಂತಲ್ಲ. ಸಂಸ್ಕೃತ ಭಾಷೆ ಬಾರದವರಿಗೂ ಅದರ ಹಲವು ಪದಗಳ ಪರಿಚಯವಾದೀತು. ಅಷ್ಟರ ಮಟ್ಟಿಗೆ ಅದು ಗತಭಾಷೆಯಾಗದೆ ನಿತ್ಯಭಾಷೆ. ನಾಟ್ಯಶಾಸ್ತ್ರಕ್ಕೂ ಈ ನಿಯಮವಿದ್ದೇ ಇದೆ.

ಈ ಎಲ್ಲ ಕಾರಣಗಳಿಂದ ನಾವು ನೃತ್ಯಕ್ಕೆ ಹೊಸ ಜೀವ ಕೊಡಲು ಬಯಸುವೆ ವಾದರೆ, ಬಲು ಎಚ್ಚರವೂ ವಿಮರ್ಶೆಯೂ ಅವಶ್ಯ. ಆದರೆ ಅಷ್ಟಕ್ಕೆ ನಾವು ಸಾಹಸ ಪಟ್ಟಲ್ಲಿ ನಮ್ಮ ಸುಖದ ಸಾಧನಗಳಲ್ಲಿ ನೃತ್ಯ ತಿರುಗಿ ಮೇಲುವರ್ಗದವರನ್ನು ಸೇರುವುದು. ನಮ್ಮ ಜನಗಳ ಆರೋಗ್ಯ, ನಡೆ, ಗಾಂಭೀರ್ಯಕ್ಕೆ ನೃತ್ಯದಿಂದ ಒಂದು ಮಿರುಗೂ ಸಿಗುವುದು. ಇತ್ತ ಸಾಹಿತ್ಯದಲ್ಲಿರುವಂತೆ ಶಿಶುಗೀತೆಯಿಂದ ಪ್ರೌಢಕಾವ್ಯದ ತನಕ ಎಲ್ಲ ವಯಸ್ಸುಗಳಿಗೆ ಸಮನಾದ ಅಂತಹ ತೋರಿಸುವ ವ್ಯಾಪ್ತಿ ನೃತ್ಯರೀತಿಗೂ ಇದೆ. ಇದು ಕನಸು, ಸಾಧನಗಳೆರಡರ ಬಗೆಯಲ್ಲೂ ನಿಜ ವಾದುದು. ಡಾಲಕ್ರೋಜ್‌ನಂಥವರು ಕಂಡುಹಿಡಿದ ರಿತ್ಮಿಕ್ಸ್, ಯುರಿತ್ಮಿಕ್ಸ್ ವ್ಯಾಯಾಮಗಳು ಚಿಕ್ಕವರ ನೃತ್ಯಸಾಧನಗಳು.

ಯಾವುದಕ್ಕೂ ಹೊಮ್ಮುವ, ಪುಟಿಯುವ, ಉಲ್ಲಾಸ, ಉಕ್ಕುಗಳು ನಮ್ಮ ಜಡಬಾಳ್ವೆಯನ್ನು ಮುರಿಯಬೇಕು; ಅನಂತರ ಕಲೆಯ ಪ್ರಯೋಜನ.

**ಶಿವರಾಮ ಕಾರಂತ**



# ವಿಗ್ರಹಾರಾಧನೆಯೂ – ವಿಗ್ರಹಗಳೂ

ವಿಗ್ರಹಗಳು ಮೊಟ್ಟಮೊದಲು ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನೆಂದ ಕಂಡುಬಂದ ಭಗವಂತನನ್ನು ಆರಾಧಿಸುವ ಉದ್ದೇಶದಿಂದ ಮಾಡಲ್ಪಟ್ಟವು. ಅನಂತರ ಜಗತ್ಪರಿಪಾಲಕನಾದ ರಾಜನೂ ಜಗತ್ ಕಲ್ಯಾಣಕಾರಕರಾದ ಮುನಿಗಳೂ ದೇವಾಂಶಸಂಭೂತರೆಂಬ ಭಾವನೆಯಿಂದ ಅಂಥ ಮಹಾಪುರುಷರ ವಿಗ್ರಹಗಳೂ ಹುಟ್ಟಿಕೊಂಡವು. ಬರುಬರುತ್ತಾ ಪ್ರಪಂಚದಲ್ಲಿ ಕಣ್ಣುಮುಂದೆ ಸುಳಿದಾಡುವ ಪುರುಷ, ಪಶು, ಪಕ್ಷಿ, ಮುಂತಾದ ಪ್ರಾಣಿಗಳ ರೂಪಗಳೂ ಮೂರ್ತಿಗೊಂಡವು.

ಭರತಖಂಡದಲ್ಲಿ ವಿಗ್ರಹಗಳ ನಿರ್ಮಾಣವು ಯಾವ ಕಾಲದಿಂದ ಪ್ರಾರಂಭ ವಾಯಿತೆಂದು ನಿಷ್ಕೃಷ್ಟವಾಗಿ ಹೇಳಲು ಸಾಧ್ಯವಿಲ್ಲವಾದರೂ ವಿಗ್ರಹಾರಾಧನೆಯು ಅನಾದಿಕಾಲದಿಂದಲೂ ಇದ್ದಿರಬೇಕೆಂದು ಊಹಿಸಲಾಗಿದೆ. ವಿಗ್ರಹಾರಾಧನೆಯು ವೇದಗಳಿಗಿಂತ ಬಹಳ ಈಚಿನದೆಂದೂ ಗೌತಮ ಬುದ್ಧನ ಕಾಲದಲ್ಲಿ ಇರಲಿಲ್ಲನೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಆದರೆ ಈಚೆಗೆ ಸಿಂಧೂ ನದಿಯ ಪ್ರಾಂತ ದಲ್ಲಿರುವ ಮೊಹನಜೊದಾರೊ ಮತ್ತು ಹರಪ್ಪ ಎಂಬ ಸ್ಥಳಗಳಲ್ಲಿ ನಡಸಿರುವ ಸಂಶೋಧನೆಗಳಿಂದ ಈಗಿನ ದ್ರಾವಿಡ ಸಂಸ್ಕೃತಿ ಎಂದು ನಾವು ಕರೆಯುತ್ತಿರುವುದಕ್ಕೆ ಮೂಲವೆಂದು ಹೇಳಬಹುದಾದ ನಾಗರಿಕತೆಯು ಆರ್ಯರು ಭರತಖಂಡಕ್ಕೆ ಬರು ವುದಕ್ಕೆ ಎಷ್ಟೋ ವರ್ಷಗಳ ಹಿಂದೆ ಇಲ್ಲಿ ನೆಲಸಿತ್ತೆಂದು ಹೇಳಲು ಸಾಕಾದಷ್ಟು ಅವಶೇಷಗಳು ದೊರೆತಿವೆ. ಅವುಗಳಲ್ಲಿ ಬಹು ಅಂದವಾಗಿ ಕೆತ್ತಿರುವ ಸಣ್ಣ ದೊಡ್ಡ ವಿಗ್ರಹಗಳೂ ಸಿಕ್ಕಿರುತ್ತವೆ. ಆರ್ಯರು ಇಲ್ಲಿಗೆ ಬಂದು ನೆಲಸಿದಮೇಲೆ ಈ ಎರಡು ಜನಾಂಗಗಳಿಗೂ ಸಂಬಂಧ ಬೆಳೆದು ಕಾಲಾನುಕಾಲದಲ್ಲಿ ಎರಡು ಸಂಸ್ಕೃತಿಗಳೂ ಕೂಡಿಕೊಂಡವು. ಈಗಲೂ ಅಚ್ಚದ್ರಾವಿಡವೆಂದು ಕರೆಯಲು ಸಾಧ್ಯವಾಗುವ ಅವಶೇಷಗಳು ಆಗಾಗ್ಗೆ ದೊರೆತರೂ ಅಚ್ಚ ಆರ್ಯಸಂಸ್ಕೃತಿಗೇ ಸೇರಿದುವೆಂದು ಹೇಳ ಬಹುದಾದವುಗಳು ಸಿಕ್ಕಿರುವುದಿಲ್ಲ. ಆದ್ದರಿಂದ ಆರ್ಯರಿಗೆ ಸಂಬಂಧಿಸಿದ ವಿಷಯು ಗಳನ್ನು ಅವರಿಂದ ನಮಗೆ ಬಂದಿರುವ ಗ್ರಂಥಗಳಿಂದಲೇ ತಿಳಿದುಕೊಳ್ಳಬೇಕಾಗಿದೆ.

ಆರ್ಯರಲ್ಲಿ ವಿಗ್ರಹಾರಾಧನೆ ಇತ್ತೆ? ಎಂಬ ವಿಷಯದಲ್ಲಿ ಶಾಸ್ತ್ರಜ್ಞರು ಭಿನ್ನಾಭಿ ಪ್ರಾಯವುಳ್ಳವರಾಗಿದ್ದಾರೆ. ವೈದಿಕ ಕಾಲದ ಮೂರ್ತಿಗಳು ಇನ್ನೂ ನಮಗೆ ಸಿಕ್ಕಿಲ್ಲ ದಿದ್ದರೂ ಆ ಕಾಲದ ಗ್ರಂಥಗಳಲ್ಲಿ ಮೂರ್ತಿಪೂಜೆಯ ವಿಷಯವಾಗಿ ಹೇರಳವಾಗಿ ಉದಾಹರಣೆಗಳು ದೊರೆಯುತ್ತವೆ. ವೇದದಲ್ಲಿ ಅಗ್ನಿಪುರುಷನನ್ನು ವರ್ಣಿಸಿದ್ದಾರೆ. ಇದರಂತೆ ಇಂದ್ರ, ವಾಯು, ಇತ್ಯಾದಿ ದೇವತೆಗಳ ವರ್ಣನೆಯೂ ಇದೆ. ಶತಪಥ ಬ್ರಾಹ್ಮಣದಲ್ಲಿಯೂ ಐತರೇಯ ಆರಣ್ಯಕದಲ್ಲಿಯೂ ಮೂರ್ತಿಪೂಜೆಯ ವಿಷಯುಕ ವಾದ ವಾಕ್ಯಗಳು ದೊರೆಯುತ್ತವೆ. ಗೌತಮ ಧರ್ಮಸೂತ್ರದಲ್ಲಿ ದೇವಾಲಯ ಗಳ ಮತ್ತು ದೇವತಾ ಪೂಜೆಗಳ ವಿಷಯಗಳು ಬರುತ್ತವೆ. ಬೋಧಾಯನ ಗೃಹ್ಯ ಸೂತ್ರದಲ್ಲಿ ಮೂರ್ತಿಪೂಜೆಯ ವಿಷಯ ಹೆಚ್ಚು ಮಹತ್ವದ್ದಾಗಿ ವಿವರಿಸಿದೆ. ಮಹಾಭಾರತದಲ್ಲಿ ಅನೇಕ ದೇವತೆಗಳ ವರ್ಣನೆ ಬಂದಿದೆ. ರಾಮಾಯಣದಿಂದ

ಲಂಕೆಯಲ್ಲಿ ದೇವಾಲಯುಗಳಿದ್ದುವೆಂದು ಗೊತ್ತಾಗಿದೆ. ಪಾಣಿನಿಯ ಕಾಲದಲ್ಲಿ ಮೂರ್ತಿಪೂಜೆ ಇದ್ದಿರಬೇಕೆಂದು ಆತನ ಗ್ರಂಥದ ಆಧಾರದಿಂದ ಊಹಿಸಲಾಗಿದೆ. ಕೌಟಿಲ್ಯನ 'ಅರ್ಥಶಾಸ್ತ್ರ'ದಲ್ಲಿ ನಗರ ನಿರ್ಮಾಣ ವಿಷಯವನ್ನು ಕುರಿತು ವಿವರಿಸುವಾಗ ದೇವಾಲಯುಗಳನ್ನು ಕಟ್ಟುವ ವಿಧಾನವನ್ನು ಹೇಳಿದೆ. ಮನುಸ್ಮೃತಿಯಲ್ಲಿಯೂ ಇದೇ ರೀತಿ ದೇವತಾರ್ಚನೆ, ಪ್ರದಕ್ಷಿಣೆ, ದೇವಾಲಯುಗಳು, ಇವುಗಳನ್ನು ಕುರಿತು ಪ್ರಸ್ತಾಪಿಸಿದೆ. ಮೌರ್ಯರ ಕಾಲಕ್ಕೆ ಸೇರಿದ ಜಿನಮೂರ್ತಿಯೊಂದು ಉತ್ತರ ಹಿಂದೂಸ್ಥಾನದಲ್ಲಿ ಸಿಕ್ಕಿದೆ. ಕ್ರಿ.ಪೂ. ಎರಡನೆಯ ಶತಮಾನಕ್ಕೆ ಸಂಬಂಧಪಟ್ಟ ಖರವೇಲದ ಹತಿಗುಂಫಾ ಶಾಸನದಲ್ಲಿ ನಂದರು ತೆಗೆದುಕೊಂಡು ಹೋಗಿದ್ದ ಜಿನ ವಿಗ್ರಹವೊಂದನ್ನು ಪುನಃ ಪ್ರತಿಷ್ಠೆ ಮಾಡಲಾಯಿತೆಂದು ಹೇಳಿದೆ. ದಕ್ಷಿಣ ಹಿಂದೂಸ್ಥಾನದಲ್ಲಿ ಗುಡಿಮಲ್ಲಂನಲ್ಲಿರುವ ಲಿಂಗವು ಕ್ರಿ.ಪೂ. ಎರಡನೆಯ ಶತಮಾನಕ್ಕೆ ಸೇರಿದ್ದೆಂದು ನಿರ್ಧರಿಸಲಾಗಿದೆ. ಹೀಗೆ ಹಿಂದೂಸ್ಥಾನದಲ್ಲಿ ಪ್ರಾಚೀನ ಆರ್ಯರಲ್ಲಿ ಮೂರ್ತಿ ಪೂಜೆ ಇತ್ತೆಂದು ಸ್ಪಷ್ಟವಾಗುತ್ತದೆ. ಕ್ರಿಸ್ತಶಕದ ಪ್ರಾರಂಭದಲ್ಲಂತೂ ಹಿಂದೂಸ್ಥಾನದ ಎಲ್ಲ ಕಡೆಗಳಲ್ಲಿಯೂ ಮೂರ್ತಿಪೂಜೆ ಆಚರಣೆಗೆ ಬಂದಿತ್ತೆಂದು ಹೇಳಲು ಅಡ್ಡಿ ಇಲ್ಲ. ಅಲ್ಲಿಂದೀಚೆಗೆ ಸನಾತನ ಧರ್ಮವು ದಿನೇದಿನೇ ವೃದ್ಧಿ ಹೊಂದುತ್ತಾ ಬಂದು, ಪುರಾಣಗಳ ಮತ್ತು ಆಗಮ ತಂತ್ರಗಳ ಪ್ರಾಬಲ್ಯದಿಂದ ವಿಗ್ರಹಾರಾಧನೆ ಇನ್ನೂ ಹೆಚ್ಚು ಪ್ರಾಧಾನ್ಯಕ್ಕೆ ಬಂತೆಂದು ಹೇಳಬಹುದು.

ವಿಗ್ರಹಾರಾಧನೆಯ ಆವಶ್ಯಕತೆಯ ವಿಷಯವಾಗಿ ಇಲ್ಲಿ ಬರೆಯಬೇಕಾಗಿಲ್ಲ. ಜಗತ್ತಿನ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನಾದ ಪರಮಾತ್ಮನೊಬ್ಬನಿರುವನೆಂದೂ ಆತನನ್ನು ಪ್ರತಿಯೊಬ್ಬ ಮನುಷ್ಯನೂ ಪೂಜಿಸಬೇಕೆಂದೂ ಶಾಸ್ತ್ರಗಳು ಸಾರಿದವು. ನಿರಾಕಾರನೂ ಇಂದ್ರಿಯಾತೀತನೂ ಆದ ಅಂಥ ಭಗವಂತನನ್ನು ಆರಾಧಿಸುವುದು ಜನಸಾಮಾನ್ಯರಿಗೆ ಸಾಧ್ಯವಿಲ್ಲವೆಂದು ತಿಳಿದು ಭಗವಂತನ ಅನಂತ ಗುಣಗಳೂ ಅವರವರ ಭಾವನೆಗೆ ತಕ್ಕಂತೆ ಜನರ ಮನಸ್ಸಿಗೆ ಹಿಡಿಯುವಂತೆ ಆಕಾರವನ್ನು ಕಲ್ಪಿಸಿ ಧ್ಯಾನಶ್ಲೋಕಗಳನ್ನು ರಚಿಸಿ ಈ ಧ್ಯಾನ ಶ್ಲೋಕಗಳ ಅನುಸಾರವಾಗಿ ವಿಗ್ರಹಗಳನ್ನು ಮಾಡಿಕೊಂಡು ಜನಗಳು ಪೂಜಿಸಬಹುದೆಂದು ಜ್ಞಾನಿಗಳು ಉಪದೇಶ ಮಾಡಿದರು. ಅದರಂತೆಯೇ "ಅಜ್ಞಾನಾಂ ಭಾವನಾರ್ಥಾಯ ಪ್ರತಿಮಾಃ ಪರಿಕಲ್ಪಿತಾಃ" ಎಂದು ಉಪನಿಷತ್ತಿನಲ್ಲಿ ಹೇಳಿದೆ.

ಮರಳು, ಮಣ್ಣು, ಮರ, ಕಲ್ಲು, ಲೋಹ, ಇವುಗಳಲ್ಲಿ ಯಾವುದರಿಂದಲಾದರೂ ವಿಗ್ರಹಗಳನ್ನು ಮಾಡಬಹುದು. ಮರಳು, ಮಣ್ಣುಗಳಿಂದ ಮಾಡಿದುವು ತಾತ್ಕಾಲಿಕ ಉಪಯೋಗಕ್ಕಾಗಿದ್ದು ಪೂಜೆಯಾದ ನಂತರ ವಿಸರ್ಜಿಸತಕ್ಕುವು. ಮರದಿಂದ ಮಾಡಿದವುಗಳನ್ನು ಮನೆಗಳಲ್ಲಿಟ್ಟು ಸದಾ ಪೂಜಿಸಬಹುದು. ಕಲ್ಲಿನಿಂದ ಮಾಡಿದ ವಿಗ್ರಹಗಳು ದೇವಾಲಯುಗಳಲ್ಲಿ ಪ್ರತಿಷ್ಠಿಸಲ್ಪಡತಕ್ಕವು. ಲೋಹಗಳಿಂದ ಮಾಡಿದುವು ಉತ್ಸವಾದಿಗಳಲ್ಲಿ ಉಪಯೋಗಿಸತಕ್ಕುವು. ವಿಗ್ರಹ ನಿರ್ಮಾಣಕ್ಕೆ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಲೋಹಗಳು ವಿಧಿಸಲ್ಪಟ್ಟಿವೆ. ಸತ್ಯಯುಗದಲ್ಲಿ ಚಿನ್ನದಿಂದಲೂ ತ್ರೇತಾ ಯುಗದಲ್ಲಿ ಬೆಳ್ಳಿಯಿಂದಲೂ, ದ್ವಾಪರದಲ್ಲಿ ತಾಮ್ರದಿಂದಲೂ, ಕಲಿ ಯುಗದಲ್ಲಿ ಪಂಚಲೋಹದಿಂದಲೂ ವಿಗ್ರಹಗಳನ್ನು ಮಾಡ

ಬೇಕೆಂದು ಹೇಳಿದೆ. ಒಂದೊಂದು ತರದ ವಿಗ್ರಹಾರಾಧನೆಗೂ ಒಂದೊಂದು ಫಲವನ್ನು ಹೇಳಿದೆ. ಮರದಿಂದ ಮಾಡಿದ ಪ್ರತಿಮೆಯು ಬಲವನ್ನೂ ಜಯವನ್ನೂ ಆಯುಸ್ಸನ್ನೂ ಕೊಡುವುದು. ತಾಮ್ರದ ಪ್ರತಿಮೆಯು ಪುತ್ರ ಪೌತ್ರರನ್ನು ದಯಪಾಲಿಸುವುದು. ಬೆಳ್ಳಿಯ ವಿಗ್ರಹವು ಕೀರ್ತಿಯನ್ನು ಗಳಿಸಿಕೊಡುವುದು. ಚಿನ್ನದ ವಿಗ್ರಹವು ಪುಷ್ಟಿಯನ್ನೀಯುವುದು. ರತ್ನಗಳಿಂದ ಮಾಡಿದ ವಿಗ್ರಹವು ಮಂಗಳವನ್ನು ಬೀರುವುದು.

ವಿಗ್ರಹಗಳನ್ನುಮಾಡಲು ಉದ್ಯುಕ್ತನಾದ ಶಿಲ್ಪಿಯು ಕಲೆಯಲ್ಲಿ ಕೌಶಲ್ಯವನ್ನು ಹೊಂದಿದವನಾಗಿರಬೇಕು ಮತ್ತು ಶಾಸ್ತ್ರದಲ್ಲಿ ನಿಪುಣನಾಗಿರಬೇಕು. ಕೆಲಸಕ್ಕೆ ಪ್ರಾರಂಭಿಸುವುದಕ್ಕೆ ಮುಂಚೆ ಸ್ನಾನ ಆಹ್ನಿಕಗಳನ್ನು ಮಾಡಿ ಶುಚಿರ್ಭೂತನಾಗಿ ಕುಳಿತು ಧ್ಯಾನಮಂತ್ರವನ್ನು ಪಠಿಸಿ ತಾನು ರಚಿಸಬೇಕೆಂದಿರುವ ಮೂರ್ತಿಯ ಸ್ವರೂಪವನ್ನು ಮನಸ್ಸಿನಲ್ಲಿ ತಂದುಕೊಂಡು ಮಂತ್ರ ಪುಷ್ಪಗಳಿಂದ ಪೂಜಿಸಿ ಅದರಲ್ಲೇ ಲೀನನಾಗಿ ಅನಂತರ ಕೆಲಸಕ್ಕೆ ತೊಡಗಬೇಕು. ಹೀಗೆಯೇ ಕೆಲಸವು ಮುಗಿಯುವವರೆಗೂ ಪ್ರತಿನಿತ್ಯವೂ ಮಾಡಬೇಕು.

ವಿಗ್ರಹಗಳು ಚಲ, ಅಚಲ ಎಂದು ಎರಡು ವಿಧವಾಗಿರುವುವು. ಲೋಹದಿಂದ ಮಾಡಲ್ಪಟ್ಟು ಸ್ಥಳದಿಂದ ಸ್ಥಳಕ್ಕೆ ತೆಗೆದುಕೊಂಡುಹೋಗಲು ಸಾಧ್ಯವಾದುವು ಚಲ ವಿಗ್ರಹಗಳು. ಕಲ್ಲಿನಿಂದ ಕೊರೆದು ಒಂದೇ ಸ್ಥಳದಲ್ಲಿ ಪ್ರತಿಷ್ಠಿಸಲ್ಪಟ್ಟುವು ಅಚಲಗಳು. ಇವಕ್ಕೆ ಮೂಲ ವಿಗ್ರಹವೆಂದೂ ಧ್ರುವಬೇರ ಎಂದೂ ಹೆಸರುಂಟು. ಇವುಗಳನ್ನು ಗ್ರಾಮರಕ್ಷಣಾರ್ಥವಾಗಿ ಪ್ರತಿಷ್ಠಿಸಬೇಕು. ಇವುಗಳಲ್ಲಿ ನಿಂತಿರುವುವು ಸ್ಥಾನಕವೆಂದೂ, ಕುಳಿತಿರುವುವು ಆಸನ್ನವೆಂದೂ, ಮಲಗಿರುವುವು ಶಯನವೆಂದೂ ಮೂರು ತರ. ಪ್ರತಿಯೊಂದರಲ್ಲಿಯೂ ಯೋಗ, ಭೋಗ, ವೀರ, ಅಭಿಚಾರಿಕ ಎಂದು ನಾಲ್ಕು ಭೇದಗಳು. ಯೋಗಾಸನ ಮೂರ್ತಿಯನ್ನು ಊರಾಚೆ ನದಿಯ ದಡದ ಮೇಲಾಗಲಿ, ಸಂಗಮಸ್ಥಳದಲ್ಲಿಯಾಗಲಿ, ಬೆಟ್ಟದ ತುದಿಯಲ್ಲಾಗಲಿ, ಅರಣ್ಯಮಧ್ಯದಲ್ಲಾಗಲಿ ಸ್ಥಾಪಿಸಬೇಕು. ಭೋಗಾಸನ ಮೂರ್ತಿಯನ್ನು ಪಟ್ಟಣದ ಮಧ್ಯದಲ್ಲಿರಿಸಬೇಕು. ವೀರಾಸನಮೂರ್ತಿಯನ್ನು ಪಟ್ಟಣದ ಹೊರಗಾಗಲಿ ಒಳಗಾಗಲಿ ಪ್ರತಿಷ್ಠೆಮಾಡಬಹುದು. ಅಭಿಚಾರಿಕ ಮೂರ್ತಿಯನ್ನು ಮಾತ್ರ 'ವನಗಿರಿಜಲದುರ್ಗೇ ರಾಷ್ಟ್ರಾಂತೇ ಶತ್ರುದಿಙ್ಮುಖೇ' ಪ್ರತಿಷ್ಠೆಮಾಡಬೇಕು.

ಯೋಗ ಭೋಗಾಸನ ಮೂರ್ತಿಗಳನ್ನು ಸಾತ್ವಿಕ ಮೂರ್ತಿಗಳೆಂದೂ ವೀರಾಸನ ಮೂರ್ತಿಯನ್ನು ರಾಜಸ ಮೂರ್ತಿಯೆಂದೂ ಕೊನೆಯದನ್ನು ತಾಮಸ ಮೂರ್ತಿ ಎಂದೂ ಕರೆಯುವ ವಾಡಿಕೆ.

ವಿಗ್ರಹಗಳು ಕೆತ್ತನೆಯಲ್ಲಿ ಮುಂದೆ, ಹಿಂದೆ, ಎಲ್ಲ ಕಡೆಯಲ್ಲೂ ಕೆತ್ತಲ್ಪಟ್ಟಿದ್ದರೆ ಚಿತ್ರವೆಂದೂ, ಮುಂಭಾಗ ಮಾತ್ರ ಕೆತ್ತಲ್ಪಟ್ಟಿದ್ದರೆ ಚಿತ್ರಾರ್ಧವೆಂದೂ ಕರೆಯಲ್ಪಡುವುವು. ಇವುಗಳಲ್ಲಿ ತಲೆಯಿಂದ ಕಾಲಿನವರೆಗೂ ಪೂರ್ತಿಯಾಗಿ ಕೆತ್ತಿರುವುದನ್ನು ವ್ಯಕ್ತವಿಗ್ರಹವೆಂದೂ ಸೊಂಟದವರೆಗೆ ಮಾತ್ರ ಕೆತ್ತಿರುವುದನ್ನು ಅವ್ಯಕ್ತವಿಗ್ರಹವೆಂದೂ ಕರೆಯುವರು.

ವಿಗ್ರಹಗಳಲ್ಲಿ ಕೆಲವು ಉಗ್ರಮೂರ್ತಿಗಳು, ಕೆಲವು ಸೌಮ್ಯಮೂರ್ತಿಗಳು. ಉಗ್ರಮೂರ್ತಿಗಳು ಸಾಮಾನ್ಯವಾಗಿ ಆಕಾರದಲ್ಲಿ ದೊಡ್ಡವಾಗಿ, ಅನೇಕ ಬಾಹುಗಳನ್ನು ಹೊಂದಿರುವುವಾಗಿ, ಕ್ರೂರದೃಷ್ಟಿಯುಳ್ಳವುಗಳಾಗಿ, ಕೋರೆದಾಡೆಗಳಿಂದ ಕೂಡಿದುವಾಗಿ ಇರುತ್ತವೆ. ಕತ್ತಿನಲ್ಲಿ ರುಂಡಮಾಲೆಯೂ, ಕೈಗಳಲ್ಲಿ ಬಗೆಬಗೆಯ ಆಯುಧಗಳೂ ಇರುತ್ತವೆ. ಇಂಥ ಮೂರ್ತಿಗಳನ್ನು ಕ್ರೂರಸ್ವಭಾವದವರು ಹಿಂಸಾತ್ಮಕ ಕಾರ್ಯದಲ್ಲಿ ತಮ್ಮ ಇಷ್ಟಾರ್ಥವನ್ನು ಪಡೆಯುವುದಕ್ಕಾಗಿ ಪೂಜಿಸುವರು. ಸೌಮ್ಯ ಮೂರ್ತಿಗಳು ಸುಂದರಾಕಾರವನ್ನು ಹೊಂದಿ ನೋಡುವವರ ಮನಸ್ಸಿಗೆ ಸಂತೋಷ ವನ್ನುಂಟುಮಾಡಿ ಅವರ ಮನಸ್ಸನ್ನು ಆಕರ್ಷಿಸಿ ಧ್ಯಾನಾಸಕ್ತರನ್ನಾಗಿ ಮಾಡಲು ಸಹಾಯಮಾಡುತ್ತವೆ.

ಮೊದಮೊದಲು ವಿಗ್ರಹಗಳು ಪ್ರಕೃತಿಯನ್ನನುಕರಿಸಿ ನಮ್ಮ ಕಣ್ಣಮುಂದೆ ಕಾಣಬರುವ ರೂಪಗಳ ಪ್ರತಿಕೃತಿಗಳಾಗಿದ್ದವು. ನಮಗಿರುವಂತೆಯೇ ಒಂದು ತಲೆ, ಎರಡು ಕೈ, ಎರಡು ಕಾಲು, ಇತ್ಯಾದಿ ಅವಯವಗಳನ್ನುಳ್ಳವಾಗಿದ್ದವು. ಇವುಗಳಿಗೆ ಪ್ರತಿಮೆಗಳೆಂದು ಹೆಸರು. ಮನುಷ್ಯರ ಮನಸ್ಸಿನಲ್ಲಿ ಭಾವನಾತರಂಗ ಗಳು ಹೆಚ್ಚಿ ಆಗಮಗಳು ಹುಟ್ಟಿಕೊಂಡ ನಂತರ ಅನೇಕ ತಲೆಗಳು, ಅನೇಕ ಕೈಕಾಲುಗಳು, ಅಮಾನುಷ ಆಕಾರ, ದೃಷ್ಟಿ, ಇವೆಲ್ಲವೂ ವಿಗ್ರಹಗಳಲ್ಲಿ ಕಾಣಬಂದವು. ಇಂಥವುಗಳಿಗೆ ಪ್ರತೀಕಗಳೆಂದು ಹೆಸರು. ಪ್ರಾರಂಭದಲ್ಲಿ ದೇವರನ್ನು ಕುರಿತು ಇದ್ದ ಭಾವನೆಯು ಪ್ರತೀಕಗಳ ಆರಾಧನೆಯಿಂದ ಜನರ ಮನಸ್ಸಿನಲ್ಲಿ ಮತ್ತಷ್ಟು ವಿಕಾಸಹೊಂದಿ ಪರಮಾತ್ಮನ ವಿರಾಟ್ಸ್ವರೂಪ ಭಾವನೆಗೆ ಅನುಕೂಲವಾಗುವು ದೆಂದೂ ಆದ್ದರಿಂದ ಪ್ರತಿಮಾರಾಧನೆಗಿಂತ ಪ್ರತೀಕಾರಾಧನೆಯೇ ಅಜ್ಞರಿಗೆ ಶ್ರೇಷ್ಠ ತರವೆಂದೂ ಪರಿಗಣಿಸಲ್ಪಟ್ಟಿದೆ.

ಭಗವಂತನು ಅನಂತಗುಣಪರಿಪೂರ್ಣನೆಂದೂ ಸೃಷ್ಟಿ ಸ್ಥಿತಿ ಲಯಗಳಿಗೆ ಕಾರಣನೆಂದೂ ಹೇಳಿದೆಯಷ್ಟೆ. ಈ ಭಾವಗಳನ್ನು ಮೂರ್ತಿಗಳ ಗಾತ್ರ, ದೃಷ್ಟಿ, ಕೈಕಾಲುಗಳ ವಿನ್ಯಾಸ, ಕೈಗಳಲ್ಲಿರುವ ಪದಾರ್ಥಗಳು, ಇವೆಲ್ಲವೂ ವ್ಯಕ್ತಪಡಿಸುತ್ತವೆ. ಮನಸ್ಸಿಗೆ ಶಾಂತಿಯನ್ನು ಕೊಟ್ಟು ಭಕ್ತನನ್ನು ಕಷ್ಟಗಳಿಂದ ದೂರ ಮಾಡತಕ್ಕ ಮೂರ್ತಿ ಸೌಮ್ಯವಾಗಿಯೂ ಸುಂದರವಾಗಿಯೂ ಭರವಸೆಯನ್ನು ಕೊಡತಕ್ಕ ಹಸ್ತವಿನ್ಯಾಸಗಳನ್ನುಳ್ಳದ್ದಾಗಿಯೂ ಇರುತ್ತದೆ. ಸಂಹಾರಕಶಕ್ತಿಯುಳ್ಳ ಮೂರ್ತಿಯು ರೌದ್ರಾಕಾರವಾಗಿಯೂ, ಕ್ರೂರದೃಷ್ಟಿಯುಳ್ಳದ್ದಾಗಿಯೂ, ಅನೇಕ ಕೈಗಳನ್ನು ಹೊಂದಿ ಪ್ರತಿಯೊಂದರಲ್ಲಿಯೂ ಒಂದೊಂದು ಆಯುಧವನ್ನು ಹೊಂದಿದುದಾಗಿಯೂ ಇರುತ್ತದೆ. ಹೀಗೆಯೇ ಇನ್ನೂ ಇತರ ಭಾವನೆಗಳೆಲ್ಲವನ್ನೂ ಸೂಚಿಸಲು ತಕ್ಕಂತೆ ರೂಪಗಳನ್ನು ಹೊಂದಿರುತ್ತವೆ.

ವಿಗ್ರಹಗಳ ಹಸ್ತವಿನ್ಯಾಸಗಳಲ್ಲಿ ಮುಖ್ಯವಾದುವು: ಅಭಯ ಹಸ್ತ; ವರದ ಹಸ್ತ; ಅಂಜಲಿ ಹಸ್ತ; ವಿಸ್ಮಯ ಹಸ್ತ; ಕಟಕ ಹಸ್ತ; ಸೂಚಿ ಹಸ್ತ; ಗಜ ಹಸ್ತ; ಲೋಲಹಸ್ತ; ಕಟ್ಯವಲಂಬಿತಹಸ್ತ.

ಇನ್ನು ಕೆಲವು ವಿನ್ಯಾಸಗಳಿಗೆ ಮುದ್ರೆಗಳೆಂದು ಹೆಸರು: ಚಿನ್ಮುದ್ರೆ, ಜ್ಞಾನ

ಮುದ್ರೆ, ಯೋಗಮುದ್ರೆ, ಭೂಸ್ಪರ್ಶಮುದ್ರೆ. ಇವುಗಳನ್ನು ಮುಂದೆ ಚಿತ್ರದಲ್ಲಿ ಕೊಟ್ಟಿದೆ.

ವಿಗ್ರಹಗಳ ಕೈಯಲ್ಲಿ ಕೊಟ್ಟಿರುವ ಆಯುಧಗಳಲ್ಲಿ ಮುಖ್ಯವಾದುವು ಯಾವು ವೆಂದರೆ: ಶಂಖ, ಚಕ್ರ, ಬಾಣ, ಅಂಕುಶ, ಪಾಶ, ಗದಾ, ಖಡ್ಗ, ಪರಶು, ಶೂಲ, ವಜ್ರ, ಅಗ್ನಿ. ಇವುಗಳಲ್ಲಿ ಶಂಖ, ಚಕ್ರ, ಗದಾ ವಿಷ್ಣುವಿಗೂ ಪರಶು, ಶೂಲ, ಅಗ್ನಿ ಶಿವನಿಗೂ ಆಯುಧಗಳು. ಅಂಕುಶ ಪಾಶಗಳನ್ನು ಗಣೇಶನೂ ಸರಸ್ವತಿಯೂ ಹಿಡಿದಿರುತ್ತಾರೆ. ಈ ಆಯುಧಗಳು ಕೆಳಗೆ ಕಾಣಿಸಿದ ಶಕ್ತಿ ಗುಣಗಳನ್ನು ಸೂಚಿಸುತ್ತವೆ:

| | | |
|---|---|---|
| ಶಂಖ | .. | ಅಜ್ಞಾನನಾಶಕಶಕ್ತಿ |
| ಚಕ್ರ | .. | ಕಾಲಚಕ್ರ |
| ಬಾಣಗಳು | .. | ಕರ್ಮೇಂದ್ರಿಯ ಜ್ಞಾನೇಂದ್ರಿಯಗಳು |
| ಅಂಕುಶ | .. | ಆತ್ಮನಿಗೆ ಬೇಕಾದುದನ್ನು ಆರಿಸಿಕೊಳ್ಳುವ ಶಕ್ತಿ |
| ಪಾಶ | .. | ತ್ರಿಗುಣಾತ್ಮಕವಾದ ಬಂಧನ |
| ಗದಾ | .. | ಅಧರ್ಮನಾಶಕ ಶಕ್ತಿ |
| ಖಡ್ಗ | .. | ಶೌರ್ಯ |
| ಪರಶು | .. | ದೈವೀಶಕ್ತಿ |
| ಶೂಲ (ತ್ರಿಶೂಲ) | .. | ಸತ್ವ ರಜಸ್ ತಮೋ ಗುಣಗಳು |
| ವಜ್ರ | .. | ಬುದ್ಧಿ |
| ಅಗ್ನಿ | .. | ಸಂಹಾರ ಶಕ್ತಿ |

ಇವುಗಳಲ್ಲದೆ ಇನ್ನೂ ಇತರ ಆಯುಧಗಳೂ ಕಂಡುಬರುತ್ತವೆ.

ಯೋಗಶಾಸ್ತ್ರದಲ್ಲಿ ವಿವರಿಸಿರುವ ಆಸನಗಳಲ್ಲಿ ಆರು ಆಸನಗಳು ಮಾತ್ರ ವಿಗ್ರಹಗಳಲ್ಲಿ ಕಂಡುಬರುತ್ತವೆ: ಅನಂತಾಸನ, ಸಿಂಹಾಸನ, ಯೋಗಾಸನ, ಪದ್ಮಾಸನ, ವಿಮಲಾಸನ ಮತ್ತು ಭದ್ರಾಸನ.

| | | |
|---|---|---|
| ಅನಂತಾಸನ | .. | ತ್ರಿಕೋಣಾಕಾರ |
| ಸಿಂಹಾಸನ<br>ಭದ್ರಾಸನ } | .. | ಚತುಃಕೋಣಾಕಾರ |
| ವಿಮಲಾಸನ | .. | ಷಟ್‌ಕೋಣಾಕಾರ |
| ಯೋಗಾಸನ | .. | ಅಷ್ಟಕೋಣಾಕಾರ |
| ಪದ್ಮಾಸನ | .. | ಚಕ್ರಾಕಾರ |

ಜೈನವಿಗ್ರಹಗಳಲ್ಲದೆ ಇತರ ವಿಗ್ರಹಗಳು ನಗ್ನವಾಗಿರಕೂಡದು, ಉಡಿಗೆ ತೊಡಿಗೆಗಳಿಂದ ಅಲಂಕೃತವಾಗಿರಬೇಕು. ತಲೆಯಲ್ಲಿ ಕಿರೀಟ ಅಥವಾ ಕೇಶಬಂಧ, ಕಿವಿಯಲ್ಲಿ ಕುಂಡಲ, ಕತ್ತಿನಲ್ಲಿ ಹಾರ, ತೋಳಿನಲ್ಲಿ ಕೇಯೂರ, ಕೈಯಲ್ಲಿ ಕಂಕಣ, ಹೊಟ್ಟೆಯ ಸುತ್ತ ಉದರಬಂಧ, ಸೊಂಟದಲ್ಲಿ ಕಟಿಬಂಧ, ಯಜ್ಞೋಪವೀತ, ಕಾಲಿನಲ್ಲಿ ನೂಪುರ, ಹೆಣ್ಣು ವಿಗ್ರಹಗಳಿಗೆ ಕುಚಬಂಧ, ಶಿವನಿಗೆ ಭುಜಂಗವಲಯ, ವಿಷ್ಣುವಿಗೆ ವೈಜಯಂತಿ — ಇವೇ ಆಭರಣಗಳು. ಕುಂಡಲಗಳಲ್ಲಿ ಪತ್ರಕುಂಡಲ,

# ಹಸ್ತಗಳು, ಮುದ್ರೆಗಳು








































೧. ಅಭಯ ಹಸ್ತ, ೨. ವರದ ಹಸ್ತ, ೩. ಅಂಜಲಿ ಹಸ್ತ, ೪. ವಿಸ್ಮಯ ಹಸ್ತ, ೫. ಕಟಕ ಹಸ್ತ, ೬. ಸೂಚಿ ಹಸ್ತ, ೭. ಗಜ ಹಸ್ತ, ೮. ಲೋಲ ಹಸ್ತ, ೯. ಕಟ್ಯವಲಂಬಿತ ಹಸ್ತ, ೧೦. ಚಿನ್ಮುದ್ರೆ, ೧೧. ಜ್ಞಾನಮುದ್ರೆ, ೧೨. ಭೂಸ್ಪರ್ಶ ಮುದ್ರೆ, ೧೩. ಯೋಗಮುದ್ರೆ.

(ಗೋಪೀನಾಥರಾಯರ ಮತ್ತು ಪೂರ್ಲ್ಕ್ ರಾಜ್ ಆನಂದರ ಗ್ರಂಥಗಳಿಂದ)

ಬರೆದವರು : ಶ್ರೀ॥ ಎಂ. ಎಸ್. ಪುರುಷೋತ್ತಮರಾಯರು.

ಮಕರಕುಂಡಲ, ರತ್ನಕುಂಡಲ ಎಂದು ಮೂರು ವಿಧಗಳು. 'ದೇವಾನಾಂ ಭೂಪತೀನಾಂ ಚ ಮೌಳಿಲಕ್ಷಣಮುಚ್ಯತೇ' ಎಂಬಂತೆ ಎಲ್ಲ ವಿಗ್ರಹಗಳಿಗೂ ತಲೆಯ ಮೇಲೆ ಕಿರೀಟವಿರಬೇಕು. ಇದಕ್ಕೆ ಮಕುಟವೆಂದೂ ಹೆಸರು. ಸಾಮಾನ್ಯ ವಾಗಿ ಕಿರೀಟ ಮಕುಟ, ಜಟಾ ಮಕುಟ, ಕರಂಡ ಮಕುಟ— ಇವೇ ಮುಖ್ಯ. ಇದಲ್ಲದೆ ಜಟೆಯನ್ನು ಕಟ್ಟಿಕೊಳ್ಳುವ ಅನೇಕ ವಿಧಗಳಿವೆ. ಇವಕ್ಕೆ ಕೇಶಬಂಧ ಗಳೆಂದು ಹೆಸರು. ಇವುಗಳಲ್ಲಿ ಮುಖ್ಯವಾದುವು ಕುಂತಲ, ಶಿರಸ್ತ್ರಕ, ಧಮ್ಮಿಲ್ಲ.

ವಿಗ್ರಹಾರಾಧನೆಗೂ ವಿಗ್ರಹಗಳ ಲಕ್ಷಣಗಳಿಗೂ ಪುರಾಣಗಳೂ, ಆಗಮಗಳೂ, ಅವುಗಳಿಗಿಂತ ಪೂರ್ವದಲ್ಲಿಯೇ ಅನೇಕ ಋಷಿಗಳಿಂದ ರಚಿತವಾದ ಶಿಲ್ಪಶಾಸ್ತ್ರಗಳೂ ಆಧಾರವಾಗಿವೆ. ಪುರಾಣಗಳ ಕಾಲ ಕ್ರಿ.ಶ. ನಾಲ್ಕರಿಂದ ಆರನೆಯ ಶತಮಾನದ ವರೆಗೆಂದೂ ಆಗಮಗಳ ಕಾಲ ಕ್ರಿ.ಶ. ೯ ರಿಂದ ೧೨ನೆಯ ಶತಮಾನಗಳೆಂದೂ ನಿರ್ಧರಿಸಲಾಗಿದೆ. ಆಗಮಗಳು ಈಚಿನವಾದರೂ ಅವುಗಳಲ್ಲಿ ಪ್ರತಿಪಾದಿಸಿರುವ ವಿಷಯ ಮಾತ್ರ ಪುರಾತನವಾದದ್ದು. ವಿಗ್ರಹಗಳ ಲಕ್ಷಣಗಳೇನು? ಯಾವ ಯಾವ ವಿಗ್ರಹಗಳು ಎಷ್ಟು ಪ್ರಮಾಣಗಳುಳ್ಳವಾಗಿರಬೇಕು? ಅವಯವಗಳೇನು? ಆಯುಧ ಗಳೆಷ್ಟು? ವಾಹನಗಳು ಯಾವವು? ಇವೇ ಮುಂತಾದ ವಿವರಗಳನ್ನು ಈ ಗ್ರಂಥಗಳಿಂದ ತಿಳಿದುಕೊಳ್ಳಬಹುದು. ಈ ಗ್ರಂಥಗಳಲ್ಲಿ ವಿವರಿಸಿರುವ ಪ್ರತಿಯೊಂದು ವಿಗ್ರಹಕ್ಕೂ ಅದರ ಎತ್ತರ, ಗಾತ್ರ; ಅಂಗಗಳು, ಅವುಗಳ ಉದ್ದ, ಗಾತ್ರ; ಆಯುಧಗಳು, ಅವುಗಳ ಆಕಾರ, ಅಳತೆ; ಪೀಠದ ಆಕಾರ, ಎತ್ತರ; ಈ ರೀತಿ ಪ್ರತಿಯೊಂದು ಸಣ್ಣ ಸಣ್ಣ ಭಾಗದ ಪ್ರಮಾಣಗಳನ್ನೂ ಕೊಟ್ಟಿರುತ್ತದೆ. ಹೀಗೆ ಎಲ್ಲ ಪ್ರಮಾಣಕ್ಕೂ ಚಾಚೂ ತಪ್ಪದೆ ಮಾಡಿದ ವಿಗ್ರಹವೇ ಶಾಸ್ತ್ರೋಕ್ತವಾದದ್ದೆಂದೂ, ಪೂಜೆಗೆ ಅರ್ಹ ವಾದದ್ದೆಂದೂ, ಈ ನಿಯಮಗಳಿಗೆ ವ್ಯತಿರಿಕ್ತವಾಗಿ ವಿಗ್ರಹಗಳನ್ನು ಕೆತ್ತಬಾರದೆಂದೂ ಹೇಳಿದೆ. ಇಂತಹ ಸಂದರ್ಭಗಳಲ್ಲಿ ವಿಗ್ರಹಗಳನ್ನು ಮಾಡುವ ಶಿಲ್ಪಿಯ ಸ್ವಾತಂತ್ರ್ಯಕ್ಕೆ ಚ್ಯುತಿ ಬಂದು ತನ್ನ ಸ್ವಂತ ಬುದ್ಧಿಯನ್ನು ಉಪಯೋಗಿಸಲು ಆಸ್ಪದವಿಲ್ಲದೆ ಕಲಾಭಿವೃದ್ಧಿಗೆ ಅತ್ಯಾವಶ್ಯಕವಾದ ವೈವಿಧ್ಯವೇ ಇಲ್ಲದಂತಾಗಿ ಕಲೆಯಲ್ಲಿ ಕಳೆಯೇ ಇರುವುದಿಲ್ಲವೆಂದು ಕೆಲವರು ವಾದಿಸುವರು. ಆದರೆ ನೂರಾರು ವರ್ಷಗಳಿಂದಲೂ ಶಿಲ್ಪಿಗಳು ರಚಿಸಿ ನಮಗೆ ಬಿಟ್ಟಿರುವ ವಿಗ್ರಹಗಳನ್ನು ನೋಡಿದರೆ ಇಂಥ ಆಕ್ಷೇಪಣೆಗೆ ಎಡೆ ಇಲ್ಲವೆಂದು ಹೇಳಬಹುದಾಗಿದೆ. ಬೇರೆ ಬೇರೆ ಶಿಲ್ಪಿಗಳು ಮಾಡಿರುವ ಒಂದೇ ದೇವತಾ ವಿಗ್ರಹಗಳನ್ನು ಹೋಲಿಸಿ ನೋಡಿದರೆ ಅವು ಎಲ್ಲವೂ ಒಟ್ಟಿನ ಮೇಲೆ ಒಂದೇ ತೆರನಾಗಿ ಕಂಡುಬಂದರೂ ಪ್ರತಿಯೊಂದರಲ್ಲಿಯೂ ಸ್ವಲ್ಪ ಸ್ವಲ್ಪವಾದರೂ ವ್ಯತ್ಯಾಸಗಳು ಕಂಡುಬರುವವಲ್ಲದೆ ಪ್ರತಿಯೊಂದೂ ಆಯಾ ಶಿಲ್ಪಿಯ ಪ್ರತಿಭೆಯನ್ನೂ ಕೌಶಲ್ಯವನ್ನೂ ವ್ಯಕ್ತಪಡಿಸುತ್ತದೆ ಎನ್ನುವದರಲ್ಲಿ ಸಂಶಯ ವಿಲ್ಲ. ಸಾಹಿತ್ಯ ಪ್ರಪಂಚದಲ್ಲಿ ಪ್ರತಿಯೊಬ್ಬ ಸಾಹಿತಿಯೂ ಛಂದಸ್ಸು, ಅಲಂಕಾರ, ವ್ಯಾಕರಣ ಸೂತ್ರಗಳಿಂದ ಕಟ್ಟುಬಿದ್ದಿದ್ದರೂ ತನ್ನದೇ ಆದ ಒಂದು ಶೈಲಿಯನ್ನು ರೂಪುಗೊಳಿಸಲು ಹೇಗೆ ಶಕ್ತನಾಗುತ್ತಾನೆಯೊ ಹಾಗೆಯೇ ಈ ಪ್ರಮಾಣಗಳು ವಿಗ್ರಹ ರಚನಾಕಾರ್ಯದಲ್ಲಿ ಶಿಲ್ಪಿಯನ್ನು ತಪ್ಪುದಾರಿಗೆ ಹೋಗದಂತೆ ಮಾತ್ರ ತಡೆದು ಅವನಿಗೆ ಸಹಾಯಮಾಡುವವೇ ಹೊರತು ಆತನ ಕಲಾ ಕೌಶಲ್ಯಕ್ಕೂ ಪ್ರತಿಭೆಯ ವಿಕಾಸಕ್ಕೂ ಎಂದಿಗೂ ಅಡ್ಡಿಯಾಗಲಾರವು.

# ಆಯುಧಗಳು
























೧. ಶಂಖ, ೨. ಚಕ್ರ, ೩. ಬಾಣ, ೪. ಗದಾ, ೫. ಖಡ್ಗ, ೬. ಪರಶು, ೭. ಅಗ್ನಿ, ೮. ಶೂಲ, ೯. ಅಂಕುಶ, ೧೦. ಪಾಶ, ೧೧. ವಜ್ರ.

(ಗೋಪೀನಾಥರಾಯರ ಗ್ರಂಥದಿಂದ) ; ಬರೆದವರು : ಶ್ರೀ॥ ಎಂ. ಎಸ್. ಪುರುಷೋತ್ತಮರಾಯರು.

ವಿಗ್ರಹಗಳನ್ನು ಮಾಡುವುದಕ್ಕೆ ಬೇರೆಬೇರೆ ಪ್ರಮಾಣಗಳು ಬೇರೆ ಬೇರೆ ಗ್ರಂಥಗಳಲ್ಲಿ ಕೊಟ್ಟಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ಹೇಳಬಹುದು:

(೧)

ಶಿಲ್ಪಿಯ ಮಧ್ಯ ಬೆರಳಿನ ಮಧ್ಯ ಗೆಣ್ಣಿನ ಉದ್ದವನ್ನು ಕರಾಂಗುಲವೆಂದು ಎಣಿಸಬೇಕು.

| | |
|---|---|
| ೨೪ ಅಂಗುಲಗಳು | ೧ ಕಿಷ್ಕು |
| ೨೫ ,, | ೧ ಪ್ರಾಜಾಪತ್ಯ |
| ೨೬ ,, | ೧ ಧನುರ್ಗ್ರಹ |
| ೨೭ ,, | ೧ ಧನುರ್ಮುಷ್ಟಿ |
| ೪ ಧನುರ್ಮುಷ್ಟಿಗಳು | ೧ ದಂಡ. |

(೨)

ವಿಗ್ರಹದ ಉದ್ದವನ್ನು ೧೨೪, ೧೨೦, ಅಥವಾ ೧೧೬ ಸಮಭಾಗಗಳಾಗಿ ವಿಂಗಡಿಸಿ ಬರುವ ಭಾಗವನ್ನು ಒಂದು ಅಂಗುಲವಾಗಿಟ್ಟುಕೊಳ್ಳಬಹುದು. ಇದಕ್ಕೆ ದೇಹಾಂಗುಲವೆಂದು ಹೆಸರು.

(೩)

| | | | | | | |
|---|---|---|---|---|---|---|
| ಕೈ ಹೆಬ್ಬೆಟ್ಟನ್ನೂ | ತರ್ಜನಿಯನ್ನೂ | ಚಾಚಿ | ತುದಿಯಿಂದ | ತುದಿಗೆ | ಅಳೆದ ಉದ್ದ | ಪ್ರಾದೇಶ |
| ,, | ಮಧ್ಯದ ಬೆಟ್ಟನ್ನೂ | ,, | ,, | ,, | ,, | ,, ತಾಲ |
| ,, | ಅನಾಮಿಕೆಯನ್ನೂ | ,, | ,, | ,, | ,, | ,, ವಿತಸ್ತಿ |
| ,, | ಕನಿಷ್ಠ ಬೆರಳನ್ನೂ | ,, | ,, | ,, | ,, | ,, ಗೋಕರ್ಣ |

(೪)

ವಿಗ್ರಹದ ಹಣೆಯ ತುದಿಯಿಂದ ಗದ್ದದವರೆಗೂ ಅಳೆದರೆ ಬರುವ ಉದ್ದವೇ ತಾಲವೆಂದು ಪರಿಗಣಿಸತಕ್ಕದ್ದು. ತಾಲವನ್ನು ಈ ರೀತಿಯಾಗಿ ಭಾಗಿಸತಕ್ಕದ್ದು:

| | | |
|---|---|---|
| ೮ ಅಣುಗಳು | = | ೧ ರೇಣು |
| ೮ ರೇಣುಗಳು | = | ೧ ರೋಮಾಗ್ರ |
| ೮ ರೋಮಾಗ್ರಗಳು | = | ೧ ಲಿಖ್ಯ |
| ೮ ಲಿಖ್ಯಗಳು | = | ೧ ಯೂಕ |
| ೮ ಯೂಕಗಳು | = | ೧ ಯವ |
| ೮ ಯವಗಳು | = | ೧ ಅಂಗುಲ |
| ೧೦ ಅಂಗುಲಗಳು | = | ೧ ತಾಲ |

(೫)

ಶಿಲ್ಪಿಯ ಮುಷ್ಟಿಯ ನಾಲ್ಕರಲ್ಲಿ ಒಂದು ಭಾಗಕ್ಕೆ ಅಂಗುಲವೆಂದೂ, ೧೨ ಇಂಥ ಅಂಗುಲಗಳಿಗೆ ೧ ತಾಲವೆಂದೂ, ಈ ಪ್ರಮಾಣದಿಂದ:

| | | |
|---|---|---|
| ನರ ಮೂರ್ತಿಗಳು | = | ೧೦ ತಾಲಗಳು |
| ಕ್ರೂರ ,, | = | ೧೨ ,, |

ಅಸುರಮೂರ್ತಿಗಳು = ೧೬ ತಾಲಗಳು
ಕುಮಾರ ,, = ೬ ,,
ಬಾಲ ,, = ೫ ,,

ಇರಬೇಕೆಂದೂ ಹೇಳಿದೆ.

ದೇವತೆಗಳನ್ನೆಲ್ಲಾ ಅನೇಕ ಪಂಗಡಗಳಾಗಿ ವಿಂಗಡಿಸಿ ತಾಲಪ್ರಮಾಣದಲ್ಲಿ ಒಂದೊಂದು ಪಂಗಡಕ್ಕೂ ಒಂದೊಂದು ಅಳತೆಯನ್ನು ವಿಧಿಸಿರುತ್ತಾರೆ.

(೧) ಉತ್ತಮ ದಶತಾಲ (ಅಥವಾ ೧೨೪ ದೇಹಾಂಗುಲಗಳು): ಮುಖ್ಯದೇವತೆಗಳು — ಎಂದರೆ, ಬ್ರಹ್ಮ, ವಿಷ್ಣು, ಮಹೇಶ್ವರ ಮುಂತಾದುವು.

(೨) ಮಧ್ಯಮ ದಶತಾಲ (ಅಥವಾ ೧೨೦ ದೇಹಾಂಗುಲಗಳು): ಶ್ರೀದೇವಿ, ಭೂದೇವಿ, ಉಮಾ, ಸರಸ್ವತಿ, ದುರ್ಗಾ, ಸಪ್ತಮಾತೃಕೆಗಳು, ಉಷಾ.

(೩) ಅಧಮ ದಶತಾಲ (ಅಥವಾ ೧೧೬ ದೇಹಾಂಗುಲಗಳು): ಇಂದ್ರ, ಮತ್ತು ಇತರ ಲೋಕಪಾಲಕರು, ಆದಿತ್ಯರು, ಚಂದ್ರ ಸೂರ್ಯರು, ರುದ್ರರು, ವಸುಗಳು, ಇತ್ಯಾದಿ.

(೪) ನವಾರ್ಧತಾಲ = ಕುಬೇರ, ನವಗ್ರಹಗಳು.
(೫) ಉತ್ತಮ ನವತಾಲ = ದೈತ್ಯೇಶರು, ಗಂಧರ್ವರು.
(೬) ನವತಾಲ = ಯಕ್ಷರು, ಅಪ್ಸರರು, ಮತ್ತು ಇತರ ದೇವಾಂಶ ಸಂಭೂತರು.
(೭) ಅಷ್ಟತಾಲ = ಮನುಷ್ಯರು.
(೮) ಸಪ್ತತಾಲ }
(೯) ಷಟ್‌ತಾಲ } = ಬೇತಾಳ, ಪ್ರೇತಗಳು.
(೧೦) ಪಂಚತಾಲ = ಕುಬ್ಜರು, ವಿಘ್ನೇಶ್ವರ.
(೧೧) ಚತುಸ್‌ತಾಲ = ಮಕ್ಕಳು.
(೧೨) ತ್ರಿತಾಲ = ಭೂತ ಕಿನ್ನರರು.

ವಿಗ್ರಹಗಳಿಗೆ ಮನುಷ್ಯನ ಅವಯವಗಳ ಹೋಲಿಕೆಯನ್ನು ಕೊಡದೆ ಪಶು ಪ್ರಾಣಿಗಳ, ಗಿಡಬಳ್ಳಿಗಳ, ನಿರ್ಜೀವ ವಸ್ತುಗಳ ಹೋಲಿಕೆಯನ್ನೇ ಕೊಟ್ಟು ಅವುಗಳಂತೆ ರಚಿಸಬೇಕೆಂದು ಹೇಳಿದೆ. ಮನುಷ್ಯರೆಲ್ಲರೂ ಒಂದೇ ರೀತಿಯಲ್ಲಿರದೆ ಒಬ್ಬೊಬ್ಬರಿಗೂ ಅವಯವಗಳ ರೂಪು, ಗಾತ್ರ, ಆಕಾರಗಳಲ್ಲಿ ವ್ಯತ್ಯಾಸ ಕಂಡು ಬರುವುದೂ ಸರ್ವಲಕ್ಷಣಸಂಪನ್ನನಾದ ಮನುಷ್ಯನು ಸಿಕ್ಕುವುದು ದುರ್ಲಭ ವೆಂಬುದೂ ಇದಕ್ಕೆ ಕಾರಣವೆಂದು ತೋರುತ್ತದೆ.

ವಿಗ್ರಹದ ಮುಖವು ದುಂಡಗೆ ಮೊಟ್ಟೆಯಾಕಾರದಲ್ಲಿ, ಹುಬ್ಬುಗಳು ಬೇವಿನ ಎಲೆಯ ಆಕಾರದಲ್ಲಿ ಇರಬೇಕು. ಕಣ್ಣುಗಳು ಮೀನಿನಾಕಾರದಲ್ಲಿಯಾಗಲಿ ಹರಿಣಿಯ ಕಣ್ಣಿನಂತಾಗಲಿ ಇರಬೇಕು. ಮೂಗು ಸಂಪಗೆಯ ಮೊಗ್ಗಿನಂತೆ ಇರಬೇಕು.

ತುಟಿ ಬಿಂಬಫಲದಂತಿರಬೇಕು. ಕತ್ತು ಶಂಖದೋಪಾದಿಯಲ್ಲಿರಬೇಕು. ಭುಜಗಳು ಗಜ ಕುಂಭದಂತೆಯೂ, ಬಾಹುಗಳೂ ತೊಡೆಗಳೂ ಬಾಳೆಯ ಕಂಬದಂತೆಯೂ, ಕೈಕಾಲುಗಳು ಕಮಲಪುಷ್ಪದಂತೆಯೂ ಇರಬೇಕು.

ವಿಗ್ರಹಗಳನ್ನು ಕೆಳಗೆ ಕೊಟ್ಟಿರುವ ಭಂಗಿಗಳಲ್ಲಿ ಕೆತ್ತಬಹುದು :—

(೧) ಸಮಭಂಗಿ: ವಿಗ್ರಹದ ಎರಡು ಭುಜಗಳೂ ಒಂದೇಸಮನಾಗಿದ್ದು ಮಧ್ಯಸೂತ್ರವನ್ನು ಕಿರೀಟದಿಂದ ಹಿಡಿದರೆ ಅದು ಕೆಳಕ್ಕೆ ಹುಬ್ಬಿನ ಮಧ್ಯದಲ್ಲಿ ಹಾದು ಹೊಕ್ಕುಳು ಮೇಲಿನಿಂದ ಪಾದಗಳ ಮಧ್ಯಕ್ಕೆ ಬರುವಂತಿರಬೇಕು. ಸೂರ್ಯ, ವಿಷ್ಣು, ಬುದ್ಧ, ಈ ವಿಗ್ರಹಗಳು ಪ್ರಾಯಶಃ ಈ ಭಂಗಿಯಲ್ಲಿರುವುವು.

(೨) ಅಭಂಗಿ: ವಿಗ್ರಹದ ಎರಡು ಭುಜಗಳು ಒಂದೇಸಮನಾಗಿರದೆ ಯಾವದಾದರೂ ಒಂದು ಭುಜ ಕೊಂಚ ಕೆಳಕ್ಕೆ ಇಳಿದಿರುವುದು. ಮಧ್ಯಸೂತ್ರವನ್ನು ಕಿರೀಟದಿಂದ ಕಾಲಿನ ಮಧ್ಯಕ್ಕೆ ಹಿಡಿದರೆ ಅದು ನಾಭಿಯ ಎಡಕ್ಕಾಗಲಿ ಬಲಕ್ಕಾಗಲಿ ಬರುವುದು. ಬೋಧಿಸತ್ವನ ವಿಗ್ರಹಗಳು ಈ ಭಂಗಿಯಲ್ಲಿರುತ್ತವೆ.

(೩) ತ್ರಿಭಂಗಿ: ವಿಗ್ರಹವು ತಾವರೆಯ ದಂಟನಂತೆ ಮೂರು ಡೊಂಕಿನಲ್ಲಿ ನಿಂತಿರುತ್ತದೆ. ಮಧ್ಯಸೂತ್ರವು ಕಣ್ಣುಗುಡ್ಡೆಯ ಮಧ್ಯಭಾಗದಿಂದ ಹೊರಟು ವಕ್ಷಸ್ಥಲದ ಮೇಲಿನಿಂದ ನಾಭಿಯ ಒಂದು ಪಾರ್ಶ್ವದಲ್ಲಿ ಹಾದುಹೋಗುತ್ತದೆ. ಹೆಣ್ಣು ವಿಗ್ರಹಗಳು ಈ ಭಂಗಿಯಲ್ಲಿರುತ್ತವೆ.

(೪) ಅತಿಭಂಗಿ: ಇದೂ ತ್ರಿಭಂಗಿಯಂತೆಯೇ, ಆದರೆ ಹೆಚ್ಚಾಗಿ ಪಕ್ಕಕ್ಕೆ ಬಗ್ಗಿರುತ್ತದೆ. ಶಿವನ ನೃತ್ಯಮೂರ್ತಿಗಳು ಈ ಭಂಗಿಯಲ್ಲಿರುತ್ತವೆ.

ಈ ಮೇಲೆ ವಿವರಿಸಿದ ನಿಯಮಗಳಿಗನುಸಾರವಾಗಿ ನಿರ್ಮಿಸಿದ ವಿಗ್ರಹಗಳು ಸರ್ವೋತ್ಕೃಷ್ಟವಾಗಿಯೂ ಆನಂದದಾಯಕವಾಗಿಯೂ ಇರುವುವೆನ್ನುವುದಕ್ಕೆ ಈಗ ದೇಶದಲ್ಲಿ ಎಲ್ಲೆಲ್ಲಿಯೂ ಕಂಡುಬರುವ ಸುಂದರವಾದ ಪುರಾತನ ಮೂರ್ತಿಗಳೇ ನಿದರ್ಶನಗಳು. ದಕ್ಷಿಣದೇಶದ ದೇವಾಲಯಗಳು, ಅದರಲ್ಲಿಯೂ ಮುಖ್ಯವಾಗಿ ಕರ್ನಾಟಕವಾಸ್ತುಶಿಲ್ಪರೀತಿ ಎಂದು ಕರೆಯಲ್ಪಡುವ ಹೊಯಿಸಳರ ಕಾಲದ ಕಟ್ಟಡಗಳು ಮೂರ್ತಿಕಲೆಯ ಭಾಂಡಾಗಾರಗಳಂತಿದ್ದು ಮೂರ್ತಿ ವಿದ್ಯೆಯನ್ನು ಕಲಿಯುವವರಿಗೆ ಅಮೂಲ್ಯವಾದ ಉದಾಹರಣೆಗಳನ್ನು ಒದಗಿಸಿಕೊಡುತ್ತವೆ. ಬೇಲೂರು ದೇವಸ್ಥಾನದಲ್ಲಿರುವ ಮದನಕೈ ವಿಗ್ರಹಗಳಂತೂ ಪ್ರಪಂಚವನ್ನೇ ಬೆರಗುಗೊಳಿಸಿವೆ ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ವಿಗ್ರಹಗಳನ್ನು ಮಾಡಿದ ಶಿಲ್ಪಿಗಳೆಲ್ಲರೂ ಶಿಲ್ಪಶಾಸ್ತ್ರನಿಪುಣರಾಗಿದ್ದರೆಂಬುದು ಸ್ಪಷ್ಟ.

ಇಷ್ಟು ಹೆಚ್ಚಾದ ಸಮೂಹದಲ್ಲಿ ಮತ್ತು ಇಷ್ಟು ಮನಮೋಹಕ ಕೌಶಲ್ಯದಲ್ಲಿ ಮೂರ್ತಿಕಲೆಯ ಪ್ರದರ್ಶನ ಮಾಡಿರುವುದು ಕರ್ನಾಟಕದಲ್ಲಲ್ಲದೆ ಭರತಖಂಡದ ಇನ್ನಾವ ಭಾಗದಲ್ಲಿಯೂ ಇಲ್ಲವೆಂದು ನಿಸ್ಸಂಶಯವಾಗಿ ಹೇಳಬಹುದು. ಈ ಶಿಲ್ಪ ಕಲೆಯು ಕ್ರಿ.ಶ. ೮–೯ನೆಯ ಶತಮಾನದಿಂದ ೧೭ನೆಯ ಶತಮಾನದವರೆಗೂ ಊರ್ಜಿತಸ್ಥಿತಿಯಲ್ಲಿತ್ತು. ಅನಂತರ ದಿನೇದಿನೇ ಕ್ಷೀಣದಶೆಗೆ ಬಂದು ಈಗ ಪೂರ್ತಿಯಾಗಿ ಅಳಿದು ಹೋಗಿದೆ. ಈ ಕಲೆಯಲ್ಲಿ ನಿಪುಣರಾದವರು ಒಬ್ಬಿಬ್ಬರು ಈಗಲೂ ದೇಶದಲ್ಲಿ ಸಿಕ್ಕಬಹುದು. ಆದರೆ ಅವರಿಗೆ ಉತ್ತೇಜನವಿಲ್ಲದೆ ಅವರ ಪಾಂಡಿತ್ಯವು ಬೆಳಕಿಗೆ ಬರಲು ಅವಕಾಶವಿಲ್ಲವಾಗಿದೆ.

ಇಂತಹ ಕುಶಲ ಕಲೆಗಳು ಅಭಿವೃದ್ಧಿಯಾಗಬೇಕಾದರೆ ದೇಶದಲ್ಲಿ ಶಾಂತಿ ನೆಲೆಗೊಂಡಿರಬೇಕು ಮತ್ತು ಉದಾರಾಶ್ರಯ ದೊರಕಬೇಕು. ಇವೆರಡರಲ್ಲಿ ಯಾವುದು ಕಡಮೆಯಾದರೂ ಕಲಾಭಿವೃದ್ಧಿಗೆ ಆತಂಕವೇ ಸರಿ. ಭರತಖಂಡದಲ್ಲಿ ಮೊನ್ನೆ ಮೊನ್ನೆಯವರೆಗೂ ಒಂದಲ್ಲ ಒಂದು ರೀತಿಯಿಂದ ಅಶಾಂತಿಯೂ ಕ್ಷೋಭೆಯೂ ನೆಲೆಗೊಂಡು ಕಲಾಭಿವೃದ್ಧಿಯಾಗಲು ಅವಕಾಶವಾಗಲಿಲ್ಲ. ಅಲ್ಲಿಂದೀಚೆಗಾದರೂ ಸಮಾಜದ ಕಟ್ಟುಗಳು ಸಡಿಲವಾಗಿ ಸ್ವಧರ್ಮದಲ್ಲಿ ಆಸಕ್ತಿ ಕಡಮೆಯಾಗುತ್ತ ಬಂದುದಲ್ಲದೆ, ಪರಕೀಯ ಸಂಸ್ಕೃತಿಯ ಅಂಧಾನುಕರಣವೂ ಹೆಚ್ಚುತ್ತ ಬಂದು ಪುರಾತನ ಕಲೆಗಳು ಒಂದೊಂದಾಗಿ ನಾಶವಾದವು. ಇವೇ ನಮ್ಮ ಈಗಿನ ಶೋಚನೀಯ ಸ್ಥಿತಿಗೆ ಮೂಲ ಕಾರಣಗಳು.

ಆದರೆ ಈಗಿನ ಕೆಲವು ಮಹಾಪುರುಷರ ಉಪದೇಶದಿಂದಲೂ ಹೊರಗಣ ಮತ್ತು ಭರತಖಂಡದ ಅನೇಕ ವಿದ್ವಾಂಸರ ಬರಹಗಳಿಂದಲೂ ಜನರು ಎಚ್ಚತ್ತು ತಮ್ಮ ಆರ್ಯ ಸಂಸ್ಕೃತಿಯ ಮಹತ್ವವನ್ನು ಕಂಡುಕೊಳ್ಳುತ್ತಿರುವುದನ್ನು ನೋಡಿದರೆ ಕ್ಷಿಪ್ರದಲ್ಲಿಯೇ ನಮ್ಮ ದೇಶದ ಕಲೆಗಳೆಲ್ಲವೂ ತಲೆಯೆತ್ತಿ ಮೊದಲಿನಂತೆ ಉತ್ಕರ್ಷವನ್ನು ಪಡೆಯುವುವೆಂದು ಧೈರ್ಯ ತಂದುಕೊಳ್ಳಬಹುದಾಗಿದೆ.

ಬಿ. ವೆಂಕೋಬರಾವ್

**ಆಧಾರ ಗ್ರಂಥಗಳು :**

೧. *Elements of Hindu Iconography*, by T. A. Gopinatha Rao, Law Printing House, Madras.

೨. "Indian Iconography," by Abanindranath Tagore, C.I.E., *Modern Review*, March 1914.

೩. *The Hindu View of Art*, by Mulk Raj Anand, George Allen & Unwin, Ltd., London.

೪. मूर्तिविज्ञान, by Ganesh Hari Khare, Bharat Itihasa Samsodhaka Mandala, Poona.

# ಕಲೆಯ ಪ್ರಪಂಚ

ಸಂಗೀತ, ಸಾಹಿತ್ಯ, ಚಿತ್ರ, ಶಿಲ್ಪ, ನಾಟ್ಯ ಇವನ್ನು ನಯಕಲೆಗಳೆನ್ನುವುದು ವಾಡಿಕೆ. ಇವೆಲ್ಲಕ್ಕೂ ಸಾಮಾನ್ಯವಾದ ಒಂದು ಧರ್ಮವಿದೆ; ಒಂದೊಂದಕ್ಕೂ ವಿಶೇಷ ಲಕ್ಷಣಗಳಿವೆ. ಸಾಮಾನ್ಯ ಧರ್ಮವೇ ಕಲೆಯ ಮೂಲಸ್ವರೂಪಕ್ಕೆ ಸಂಬಂಧಿಸಿದ್ದು. ಕಲೆಯ ಉತ್ಪತ್ತಿ ಹೇಗೆ? ಗುರಿಯೇನು? — ಎಂಬುದು ಒಟ್ಟನಲ್ಲಿ ಈ ಸಣ್ಣ ಲೇಖನದ ವಿಷಯ.

ಚೆನ್ನಾಗಿ ಮಾಡಿದ ಯಾವ ಪದಾರ್ಥವನ್ನು ಕಂಡರೂ ಅಲ್ಲಿ ಕಲೆಗಾರಿಕೆ ಕಾಣುತ್ತೇವೆ. ಪ್ರಯೋಜನದ ಎಣಿಕೆಯ ಜೊತೆಗೆ ಒಂದಕ್ಕಿಂತ ಇನ್ನೊಂದು ಮನೋಹರವಾಗಿದೆ ಎನ್ನುತ್ತೇವೆ. ಗುಣಗಾನ ಮಾಡಿ ಪಕ್ಷಪಾತ ತೋರಿಸುತ್ತೇವೆ. ಇದು ಏಕೆ ಎಂಬುದು ನಮ್ಮ ವಿಷಯಕ್ಕೆ ಒಳಪಡುವ ಸಂಗತಿ. ಆದರೂ ಅಲ್ಲಿ ವಿಮರ್ಶೆಯ ಭಾಗ ಹೆಚ್ಚಾಗಿರುವುದರಿಂದ ಈ ಪ್ರಸಂಗದಲ್ಲಿ ಅದಕ್ಕೆ ಎರಡನೆಯ ಸ್ಥಾನ. ಕಲೆಯಲ್ಲಿ ಚೆನ್ನವೆಂದರೇನು? ಅದರ ಜೀವ ಎಲ್ಲಿದೆ ಎಂಬುದೇ ಇಲ್ಲಿ ಪರ್ಯಾಲೋಚ್ಯ.

ಪ್ರತಿ ಕಲೆಗೂ ಸಾಧನಗಳು ಬೇರೆ ಬೇರೆ: ಚಿತ್ರದಲ್ಲಿ ಬಣ್ಣ, ಕುಂಚಿ, ಹಲಗೆ, ಕಾಗದ, ಬಟ್ಟೆ ಸಾಧನಗಳು; ಸಂಗೀತದಲ್ಲಿ ಕಂಠಗುಣ, ವಾದ್ಯಗಳು ಹಾಗೆ; ನಾಟ್ಯಕ್ಕೆ ತಾಳಗತಿ, ಅಂಗಭಂಗಿ, ಚಲನೆ ಸಾಧನಗಳು; ಶಿಲ್ಪಕ್ಕೆ ಮಣ್ಣು, ಕಲ್ಲು, ಗಾರೆ, ಮರ, ಲೋಹ, ಬಟ್ಟೆ, ಅರಗು, ಬೆಂಡು ಮುಂತಾದ ವಸ್ತುಗಳ ಜೊತೆಗೆ ಕಡಗೋಲು, ಗಜಗಡ್ಡಿ, ಉಳಿ, ಸುತ್ತಿಗೆ ಸಾಧನಗಳು; ಸಾಹಿತ್ಯಕ್ಕೆ ಮಾತುಗಳ ಶಬ್ದಾರ್ಥ ಧ್ವನಿ ಅವು. ಕಲೆಗಳಲ್ಲಿ ಉಪಜಾತಿಗಳುಂಟು. ಚಿತ್ರದಲ್ಲಿ ರೇಖಾ-ಚಿತ್ರವೂ ವರ್ಣಚಿತ್ರವೂ ಬೇರೆ ಬೇರೆ ರೀತಿ ಕೆಲಸಮಾಡುತ್ತವೆ; ನಾಟ್ಯದಲ್ಲಿ ಅಭಿನಯ ಭಾಗ, ನರ್ತನ ಭಾಗ ಬೇರೆ ಬೇರೆ; ಶಿಲ್ಪದಲ್ಲಿ ಮಂದಿರಶಿಲ್ಪ ಮೂರ್ತಿಶಿಲ್ಪ ಬೇರೆ ಬೇರೆ.* ಒಂದಕ್ಕೆ ಇನ್ನೊಂದು ಸಹಾಯ ಕೊಡಬಹುದು; ಕಳೆತುಂಬಿ ಹೆಚ್ಚಿಸ ಬಹುದು. ಸಂತೋಷ ಪ್ರಯೋಜನಗಳು ಕೂಡಿ ಎರಡು ಅಥವಾ ಹಲವು ಕಲೆಗಳ ಮೇಳದಿಂದ† ಕಾಂತಿಪ್ರಭಾವಗಳ ಅತಿಶಯತೆಯೂ ರಂಜನಾ ಶಕ್ತಿಯೂ ಹೆಚ್ಚ ಬಹುದು. ಒಂದು ಕಲೆ ಕಣ್ಣಿಗೊ ಕಿವಿಗೊ ಯಾವ ಒಂದು ಅನುಭವಾಂಗಕ್ಕೊ ಹೆಚ್ಚು ತೃಪ್ತಿ ಕೊಡಬಹುದು. ಚಿತ್ರ, ಶಿಲ್ಪ, ನಾಟ್ಯ, ಅಭಿನಯ — ಇವು ಮೊದಲು ಕಣ್ಣಿಗೆ ಗೋಚರ. ಸಂಗೀತ,‡ ಮೊದಲು ಕಿವಿಗೆ; ಶಿಲ್ಪ, ಸ್ಪರ್ಶಕ್ಕೆ ಕಣ್ಣಿಗೆ. ಕೆಲವು ಗಳ ಅನುಭವ ಏಕಾಂತದಲ್ಲಿ ಸುಖ; ಕೆಲವಕ್ಕೆ ಜನಸಂಗತಿ ಕಳೆ ಕೊಡುವುದು.

* ಮೂರ್ತಿಶಿಲ್ಪದ ಭಂಗಿಯಲ್ಲಿ ನೃತ್ಯ ಘನಿಸಿ (Frozen Dance) ಕಾಣುವುದೆನ್ನುವರು. ನೃತ್ಯವನ್ನು ದ್ರವಶಿಲ್ಪವೆನ್ನಬಹುದು (Liquid Sculpture). ವಾಸ್ತು ಘನಿಸಿದ ಸಂಗೀತವಂತೆ; ಸಂಗೀತ ದ್ರವ ವಾಸ್ತುವಂತೆ.

† ಉದಾ. ಗಮಕದಲ್ಲಿ ಕಾವ್ಯ, ಸಂಗೀತ; ವಾಸ್ತುರಚನೆಯಲ್ಲಿ ಆಕೃತಿಶಿಲ್ಪ, ಚಿತ್ರ; ನಾಟಕ ಪ್ರದರ್ಶನದಲ್ಲಿ ಸಂಗೀತ, ವೇಷಭೂಷ, ಸಾಹಿತ್ಯ, ನೃತ್ಯ, ಚಿತ್ರ ಇತ್ಯಾದಿಗಳ — ಮೇಳದಂತೆ.

‡ ಬರೆದಿಟ್ಟ ಸಂಗೀತವೂ ಅಚ್ಚಾದ ಕವಿತೆಯೂ ಕಣ್ಣಿಗೆ ಮೊದಲು ಗೋಚರವಾದರೂ ಒಂದ ನಾದಮೇಳವಾದ ಹೊರತು ಅಪೂರ್ಣ; ಇನ್ನೊಂದು ಶಬ್ದಾರ್ಥಗತಿಯಾಗಿಯೇ ಪೂರ್ಣಗೊಳ್ಳಬೇಕು.

ಚಿತ್ರಗಾನಗಳಲ್ಲಿ ನೇರವಾದ ಹೊರಪ್ರಯೋಜನ ಇದ್ದರೆ ಇರಬಹುದು, ಇಲ್ಲವಾದರೆ ಬೇಡ. ಮಂದಿರಶಿಲ್ಪ ಹಾಗಲ್ಲ;— ಜನದ ವಾಸಕ್ಕೊ ನೆರೆತಕ್ಕೊ ಪೂಜಾ ಅಥವಾ ಸಭಾಕಾರ್ಯಕ್ಕೊ ಆದುದು ಅದು. ಕೆಲವು ಅರ್ಥಶಕ್ತಿಯಿಂದಲೇ ಪೂರ್ಣವಾಗ ಬೇಕು, ಸಾಹಿತ್ಯದಂತೆ; ಕೆಲವಕ್ಕೆ ಸಂಪೂರ್ಣ ಅರ್ಥಸ್ಪಷ್ಟತೆ ಇಲ್ಲ, ಸಂಗೀತ ನರ್ತನಗಳಂತೆ. ಹಾಗೆ ಇಲ್ಲದಿರುವುದೇ ಅವುಗಳ ಹಿರಿಮೆ.* ಪ್ರಯೋಜನವೂ ಅಭಿಪ್ರಾಯಪ್ರಕಾಶನವೂ ಕಾರ್ಯಪ್ರಚೋದನೆಯೂ ಎಲ್ಲಿ ಮುಖ್ಯವೋ ಅಲ್ಲಿ ಸಮಾಜ ಸಂಬಂಧವೂ ವ್ಯವಹಾರದ ಬೆಲೆಗಳೂ ಮುಂದಾಗುವುವು.

ಈ ಸಾಧನಗಳನ್ನು ಹೇಗೆ ಸಂಗ್ರಹಿಸಬೇಕು? ಅವುಗಳ ಗುಣವೇನು, ಬಲವೇನು? ಅವುಗಳ ಸಮ್ಮೇಳನ ಯಾವ ರೀತಿ ಆದರೆ ಕೆಲಸ ಚೆನ್ನಾಗುವುದು ಎಂಬುದು ಕೃತಿಕಾರನ ಅವಧಾನದಲ್ಲಿರತಕ್ಕದ್ದು. ಅವನ್ನು ಉಪಯೋಗಿಸುವ ಆತನ ವಸ್ತುಪರಿಜ್ಞಾನ, ಲೋಕಾನುಭವ, ಸಂಪ್ರದಾಯದ ತಿಳಿವಳಿಕೆ, ಕಾರ್ಯಾಭ್ಯಾಸ ಮುಂತಾದವೂ ಅಗತ್ಯವೂ ಹಾಗೆಯೇ. ಕವಿಯ ಕೃತಿ ಕಾವ್ಯ ಎನ್ನುವುದು ಕವಿಯ ಕವಿತನದ ಅಗತ್ಯವನ್ನು ಹೇಗೆ ಒತ್ತಿ ಹೇಳುವುದೋ ಹಾಗೆಯೆ ಎಲ್ಲ ಕಲೆಯಲ್ಲಿಯೂ ಕೃತಿಕಾರನು ಕಲೆಗಾರನಾಗಿರುವುದು ಮೊದಲ ಅಗತ್ಯ. ತನ್ನ ಮನಸ್ಸಿನಂತೆ ಉಪಕರಣಗಳನ್ನು ಹೊಂದಿಸಿಕೊಳ್ಳಬೇಕಾದ ನಯದ ಅಥವಾ ವ್ಯಂಜನೆಯ ಕೆಲಸ ಆತನಿಗೆ ಸೇರಿದ್ದು. ಈ ಸಂಬಂಧವಲ್ಲಿ ಕಾರ್ಯದ ಕುಶಲತೆ, ನಾಜೂಕು, ನುಣುಪು, ಸಮ್ಮಿಶ್ರಣ ಅಥವಾ ವಿನ್ಯಾಸ ಚಾತುರ್ಯ, ಕಲಾವಸ್ತು ವನ್ನು ಸ್ಥಿರವಾಗಿ ಉಳಿಸಲು ಕೈಕೊಳ್ಳಬೇಕಾದ ಹದಗಳು ಮುಖ್ಯವಾಗುತ್ತವೆ. ಇದೆಲ್ಲ ಕಸಬುದಾರಿಕೆಗೆ ಸಂಬಂಧಿಸಿದ್ದು;— ಒಂದು ಕಾರ್ಯಾಗಮ, ತಂತ್ರ ಲೋಕ, ವಿಧಾನ ಪ್ರಪಂಚ. ಯಾವ ಕಲೆಗಾರನಿಗೆ ವಸ್ತುಪರಿಜ್ಞಾನವೂ ಸಾಧನದ ಪರಿಚಯವೂ ನಿಪುಣತೆ ಕೈಚಳಕಗಳೂ ಮೇಲೊ ಅಂಥವನ ಕೃತಿ ಮೇಲಾಗಬಲ್ಲದೆಂಬುದನ್ನು ಹೇಳುವ ಸಂಗತಿ. ಇವುಗಳದು ಉಪಕರಣಯೋಗ; — ಕಲೆಯ ಸತ್ವಕ್ಕೆ ಮುಖ್ಯವಾಗಿ ಸಂಬಂಧಿಸಿದ್ದಲ್ಲ. ಸಂಪ್ರದಾಯವಾಗಿ ಬಂದ ಸಮಯಗಳೂ ಸಂಕೇತಗಳೂ ರೀತಿನಿಯಮಗಳೂ ಹಾಗೆಯೇ. ಅವನ್ನು ಕಲಿತಿದ್ದು ಎಂದಿನಂತೆ ಎಲ್ಲರಂತೆ ಚೆನ್ನಾಗಿಯೊ ಮೇಲಾಗಿಯೊ ಬೀಳಾಗಿಯೊ ಕೆಲಸತೂಗಿಸುವ ಶಕ್ತಿ ಕೂಡ ಅಂತೆಯೇ. ಇಲ್ಲಿ ಕೇವಲ ನೆನಪು, ಅಭ್ಯಾಸ, ಕೈಪಳಕೆ ಮುಂದಾಗು ವುವು. ಕಲೆಗಾರನಿಗೆ ಇವೆಲ್ಲ ಹೊರಗಿನ ನೆರವು. ಇದು ಕುಶಲಕರ್ಮ ಪ್ರಪಂಚ. ಹಲವೇಳೆ ಬರಿಯ ಕಲಿತ ಪಾಠ ಒಪ್ಪಿಸುವ, ಅನುಕರಣದ ಅಥವಾ ಅನುವಾದದ ಕೆಲಸ. ಜೊತೆಗೆ ಕಲೆಗಾರನು ಪಡೆದುಕೊಂಡಿರುವ ವಿದ್ಯೆ, ವಿವೇಚನೆ, ಸಂಸ್ಕಾರ, ಲೋಕಾನುಭವಗಳು ಮನಸ್ಸಿನಲ್ಲಿ ಇದ್ದುಕೊಂಡು ಕೈ ನೆರವಾಗಬಲ್ಲ ಸಾಮಗ್ರಿ ಮಾತ್ರ ಆಗುವುವು. ಎಲ್ಲಿ ಅನುಭವ ಮತ್ತು ದರ್ಶನಭಾಗಕ್ಕಿಂತ ಕರ್ಮಕುಶಲತೆ ಹೆಚ್ಚೊ ಅಲ್ಲಿ ಕಲೆಯ ದರ್ಜೆ ಎರಡನೆಯದು. ಇಲ್ಲಿ ಕಲೆಯನ್ನು ಭಾವಾವೇಶದಿಂದ

* ಎಲ್ಲ ಕಲೆಗಳೂ ಶುದ್ಧಸಂಗೀತದ (ಉದಾ. ರಾಗಾಲಾಪನೆಯ) ಮಟ್ಟಕ್ಕೆ ಏರಿ ಸಿದ್ಧಿಪಡೆಯಲು ಬಯಸುತ್ತವೆ ಎನ್ನುವುದುಂಟು.

ಕೂಡಿದ ಅನುಭವದ ಅಥವಾ ದರ್ಶನದ ಮೋಹಕರೂಪಣ, ಅಭಿವ್ಯಂಜನೆ ಎಂದು ಎಣಿಸಲಾಗಿದೆ.*

ಕಲೆಯ ಸ್ವರೂಪವೇನು? ಗುರಿಯೇನು? ಎಂಬವು ಎರಡು ಪ್ರಶ್ನೆಗಳಂತೆ ಕಂಡರೂ ಮೂಲತಃ ಒಂದನ್ನರಿತರೆ ಇನ್ನೊಂದನ್ನು ಅರಿತಂತೆಯೇ. ಆದರೂ ಜನ ಒಂದನ್ನು ಲೆಕ್ಕಿಸದೆ ಇನ್ನೊಂದಕ್ಕೆ ಹಟಹಿಡಿಯುವುದುಂಟು. ಕಲೆಯ ಗುರಿ ಇದು ಎಂದು ಒಬ್ಬರೆಂದರೆ ಇನ್ನೊಬ್ಬರು ಕಲೆ ಅದನ್ನು ಮಾಡಬೇಕು ಮತ್ತೊಂದನ್ನು ಬಿಡಬೇಕು ಎಂದು ವಿಧಿಸ ಬರುವರು. ಆ ವಿಧಿಗಳೋ — ನಾನಾ ಬಗೆಯವು. ಕಲಾ ಸ್ವರೂಪವನ್ನು ಕುರಿತ ಮಾತುಗಳಲ್ಲಿಯೂ ಎಷ್ಟೋ ಮತ, ವಾದ, ವಿಧಿ, ಶಾಸನಗಳು.

ಕಲೆ ಸುಂದರವಾಗಿರಬೇಕು; ಜೀವನದ ಪ್ರಮಾಣಗಳನ್ನು ಉಳ್ಳಂತೆ, ಸತ್ಯವಾದ ಅಂಗರಚನೆಯನ್ನೇ ಕಾಣಿಸಬೇಕು; ಬದುಕಿನ ಪ್ರತಿಬಿಂಬವಂತಿರಬೇಕು; ಸಂತೋಷವನ್ನೂ ವಿನೋದವನ್ನೂ ಉಂಟುಮಾಡಬೇಕು; ದಿನಚರಿಯಿಂದ ಮನಸ್ಸನ್ನು ತಿರುಗಿಸಿ ಮರಸಬೇಕು, ಹಗುರಗೊಳಿಸಬೇಕು; ತಿಳಿವನ್ನೂ ಧರ್ಮಬುದ್ಧಿಯನ್ನೂ ಹುಟ್ಟಿಸಿ ಬಲಿಸಬೇಕು; ಬದುಕಿನ ವಿಮರ್ಶೆಯಾಗಬೇಕು; ದೇಶಭಕ್ತಿ ಹುಟ್ಟಿಸಬೇಕು; ಜನರಿಂದ ಕೆಲಸ ಮಾಡಿಸುವಂಥುದಾಗಬೇಕು; ಮನಸ್ಸಿನ ಗಾಯಗಳನ್ನು ಮಾಯಿಸಿ ಸಂತಯಿಸಬೇಕು, ಅಶಾಂತಿಗೆಳೆಯಬಾರದು; ಹಿಂದಿನ, ದೂರದ, ಕನಸಿನ ಪ್ರಪಂಚಗಳನ್ನು ಬಿಟ್ಟು ಇಂದಿನ ವಸ್ತು ಜೀವನಕ್ಕೆ ನೇರವಾಗಿ ಹೊಂದಬೇಕು; ಮಾನುಷವನ್ನು ಅತಿಮಾನುಷವಾಗಿಯೂ ಅತಿಮಾನುಷವನ್ನು ಮಾನುಷದಂತೆಯೂ ಕಾಣಿಸಬೇಕು; ಪರಮಾರ್ಥ ಸಾಧನೆಗೆ ನೆರವಾಗಬೇಕು; ರಾಜಕೀಯ, ಸಾಮಾಜಿಕ, ಆರ್ಥಿಕ ಸಮತಾವಾದಗಳ ವಾಹಕವಾಗಬೇಕು, — ಹೀಗೆ ನೂರಾರು ಬಯಕೆ ಜನಕ್ಕೆ. 'ಕಲೆ' ಈವರೆಗೆ ಈ ಎಲ್ಲ ಬಗೆಯ ಕೆಲಸಕ್ಕೂ ನೆರವಾಗಿದೆ. ಸಮಾಜದ ನಡುವೆ ಬದುಕಬೇಕಾಗಿರುವ ಕಲೆಗಾರನಿಗೆ ಇದು ಅನಿವಾರ್ಯ; ಸಹಜ. ಅವನ ಸ್ಫೂರ್ತಿ ಉದ್ದೇಶಗಳಲ್ಲಿ ಆ ಈ ದೃಷ್ಟಿರೀತಿ ಸೇರಿಕೊಳ್ಳುವುವು; ಏಕೆಂದರೆ ಅವು ಆತನ ಮನುಷ್ಯತ್ವಕ್ಕೇ ಅಂಟಿಕೊಂಡವು. ಕಲೆಗಾರನ ರೀತಿಯನ್ನು ಹೇಳುವಾಗಲೂ ನಾಲ್ಕಾರು ಬಗೆಗಳುಂಟು. ಮೃದುಮಾರ್ಗ, ಕಟುಮಾರ್ಗ, 'ನವೋನವ' ಕಲ್ಪನಾ ಮಾರ್ಗ, ಧ್ಯೇಯಮಾರ್ಗ, ಸಂಕೇತಮಾರ್ಗ, ವ್ಯಂಗ್ಯ ಅಥವಾ ವಿಡಂಬನ ಮಾರ್ಗ, ಕ್ರಾಂತಿ ಮಾರ್ಗ ಮುಂತಾದ ಮಾತುಗಳನ್ನು ಉಪಯೋಗಿಸುವುದುಂಟು. ಇದರ ಜೊತೆಗೆ, ಇಂಥ ವಿಷಯ ಮಾತ್ರ ಕಲೆಗೆ ಒಪ್ಪು; ಇನ್ನು ಕೆಲವನ್ನು — ಚೆಲುವಲ್ಲದ್ದನ್ನು, ಸೊಬಗಲ್ಲದ್ದನ್ನು — ಮುಟ್ಟಲೇ ಕೂಡದು; ಇಂತಹವು ಹೊಂದುವುದೇ ಇಲ್ಲ, ಇಂಥ ಮಾತು, ರಾಗ, ಬಣ್ಣ ಈ ಕೆಲಸಕ್ಕೆ ಮಾತ್ರ ಸರಿ, ಮತ್ತೊಂದಕ್ಕೆ ಸಲ್ಲದು, ಎಂಬ ಮಾತು ಬೇರೆ. ಅಳತೆ, ಪ್ರಮಾಣ ಹೀಗಿದ್ದರೆಯೇ ಗುಣ, ಚೆಲುವು; ಇದೂ

* ಒಂದು ಕಡೆ ಕಲೆಗೂ ಇನ್ನೊಂದುಕಡೆ ಜಗತ್ತಿನ ಕ್ಷೇಮಕ್ಕೂ ಸಮಾಜಕ್ಕೂ ಧರ್ಮಕ್ಕೂ ಯಾವ ಬಗೆಯ ಸಂಬಂಧವಿರಬೇಕು? ಕಲೆಯ ಕಾರ್ಯ ಹೇಗಿದ್ದರೆ ಮಾತ್ರ ಅದು ಆದೇಯ? ಮುಂತಾದ್ದನ್ನು ಮುಂದುಮಾಡುತ್ತಿಲ್ಲ. ಆ ಎಣಿಕೆ ಬೇರೆ. ಅವಕ್ಕೆ ಸಂಬಂಧಿಸಿದಂತೆ ವಿರಸಗಳುಂಟಾದಾಗ ಕೇವಲ ಕಲಾ ದೃಷ್ಟಿಯಿಂದಲ್ಲ ಅದನ್ನು ವಿಮರ್ಶೆ ಮಾಡಬೇಕಾದುದು.

ಶುದ್ಧವಲ್ಲ, ಮಿಶ್ರ, ಸಂಕೀರ್ಣ ಆದುದರಿಂದ ಚೆನ್ನವಲ್ಲ, ಮೇಲಲ್ಲ; ಇದು ಸಂಪ್ರದಾಯವಲ್ಲ, ವಿದೇಶೀಯ, ಅತಿನವೀನ—ಆದುದರಿಂದ ಪ್ರಯೋಜನವಿಲ್ಲ ಎಂಬ ತರ್ಕ ಬೇರೆ. ಮೇಲಿನವು ಹೊರಗಿನವರ ವಾದಗಳಾದರೆ ಕಲೆಗಾರರೇ ನುಡಿಯುವರು: ಕಲೆ 'ನಿಯತಿ ಕೃತ ನಿಯಮ ರಹಿತ'ವಾದ್ದು; 'ಅನನ್ಯ ಪರತಂತ್ರ'ವಾದ್ದು; ಕಲೆಗೆ ಬೇರೆ ಸಿದ್ಧಿ ಬೇಕಾಗಿಲ್ಲ; ಕಲೆಯ ಉತ್ಪತ್ತಿ, ರೀತಿ ಕಲೆಗಾಗಿಯೇ; ಅದಕ್ಕೆ ಅದೇ ಪ್ರಮಾಣ; ಹೊರಗಿನ ಯಾವುದಕ್ಕೂ ಅದು ಜೀತ ಮಾಡಬೇಕಾಗಿಲ್ಲ; ಪರಿಸ್ಥಿತಿಗೆ ಕೂಡ ಕಲೆ ಶರಣಲ್ಲ; ಪ್ರತ್ಯಕ್ಷ ಪ್ರಯೋಜನವನ್ನೂ ಅದು ಎಣಿಸಬೇಕಾದ್ದಿಲ್ಲ. ಶುದ್ಧ ವಿಜ್ಞಾನವಿರಬಹುದಂತೆ, ಶುದ್ಧಕಲೆ ಏಕೆ ಕೂಡದು? ಹೀಗೆ ಈ ಕಡೆಯ ವಾದ. ಈ ಎಲ್ಲ ವಾದಗಳಲ್ಲಿಯೂ ಸತ್ಯಾಂಶವಿದೆ. ಅತಿ ಮಾಡಿದರೆ ಮಾತ್ರ ಎಲ್ಲ ಕಡೆಯೂ ಹದ ಕೆಡುವುದು. ಆ ಒಂದೊಂದೂ ಕಲೆಯ ಲಕ್ಷಣವನ್ನೂ ಮುಖವನ್ನೂ ಮಾತ್ರ ಕಾಣಿಸುವುದು; ಯಾವುದೂ ಏಕೈಕವಾದ ಜೀವಸೂತ್ರವಲ್ಲ ಕಲೆಗೆ. ಎಲ್ಲವೂ (ಇನ್ನುಮುಂದೆ ಹುಟ್ಟಲಿರುವುವೂ ಸೇರಿ) ಕಲೆಯ ವ್ಯಾಪ್ತಿಯನ್ನೂ ಕಾರ್ಯರಂಗವನ್ನೂ ಸೂಚಿಸಬಲ್ಲವಾಗಿರುವಾಗ ಯಾವ ಒಂದಕ್ಕೇ ಆಗಲಿ ಸರ್ವಪ್ರಾಧಾನ್ಯ ಕೊಟ್ಟು ಇಲ್ಲಿಗೆ ಕಲೆ ಮುಗಿಯಿತೆನ್ನುವುದು ಸರಿಯಾಗದು. ಸರಸ್ವತಿಯ ಕಳೆ ಕಾಂತಿಗೆ ಮಿತಿಯೆಲ್ಲಿ?

ಕಲಾಕೃತಿ ಹುಟ್ಟುವ ಸಂದರ್ಭವನ್ನು ತಿಳಿದರೆ ಈ ವಾದಗಳಲ್ಲಿ ಬಹುಶಃ ಯಾವುದರ ಹದರ ಎಷ್ಟು ಎಂಬುದು ತಿಳಿದೀತು.* ಆವೇಶ ಸಾಮಗ್ರಿ; ಕಲೆಗಾರ, ಆತನ ಮನಸ್ಸು, ಸಾಧನಗಳು; ಕಲಾಕೃತಿ, ಅದರ ಸ್ವರೂಪ, ಪ್ರಯೋಜನ, ಪರಿಣಾಮಗಳು; ಕಲಾವಿಮರ್ಶೆ–ಎಂದಾದರೂ ವಿಷಯ ನೆಲಸಿದೆ. ಹೀಗೆ, ಒಂದು ಭಾಗ ಸೃಷ್ಟಿ ಮಾಡುವ ಕಲೆಗಾರನದು; ಇನ್ನೊಂದು ನಿರ್ಮಾಣವಾಗಿ ಪ್ರಪಂಚದಲ್ಲಿ ನಿಲ್ಲುವ ಕೃತಿಯದು; ಮೂರನೆಯದು ಅದರ ಸ್ವೀಕಾರ, ವಿಮರ್ಶೆ. ಜೊತೆಗೆ ಇನ್ನೊಂದು ಸಂಗತಿ: ಹುಟ್ಟಿಬರುವ ಕಲಾಕೃತಿ ಹೊಮ್ಮುವ ಲಕ್ಷಣಗಳು ಮಾತ್ರ ಅದರ ಸ್ವರೂಪವನ್ನು ತಿಳಿಸುವುವು. ಉಳಿದ ವಿಮರ್ಶೆ ಅವರ ಇವರ ಅಭಿಪ್ರಾಯ ಪ್ರಪಂಚ; ಅವರು ಇವರು ಮಾಡುವ ಚರ್ಚೆ, ಸಿದ್ಧಾಂತ; ಈ ದೃಷ್ಟಿಯಿಂದ ಆ ದೃಷ್ಟಿಯಿಂದ ನಿರೀಕ್ಷಿಸುವ, ಪಡೆಯುವ, ಪಡೆಯದ ಫಲಪರಿಣಾಮಗಳು; ಇಲ್ಲವೇ ಕೃತಿಗಳ ಹೃದಯದಲ್ಲಿ ಅಡಗಿಯೂ ಅದನ್ನು ನಡಸಿಯೂ ಕಾರ್ಯ ಮಾಡುವ ರೂಪಣ ಶಕ್ತಿಯನ್ನು ಕುರಿತು ಸಾಮಾನ್ಯ ತತ್ವವನ್ನು ಅನುಮಾನಿಸುವ ಗ್ರಹಿಸಿ ಕೂಡಿಸುವ ಪ್ರಯತ್ನಗಳು. ಕಲೆಯೆಂಬ ಪ್ರತ್ಯೇಕವಾದ ಯಾವುದೂ ವಸ್ತುವಿಲ್ಲ— ವಿವರಿಸುವುದಕ್ಕೆ, ವಿಭಜನೆ ಮಾಡುವುದಕ್ಕೆ, ಪರೀಕ್ಷಿಸುವುದಕ್ಕೆ. ಈ ವರೆಗೆ ಕಲೆಗಾರರು ನಿರ್ಮಾಣಮಾಡಿರುವ, ಈಗ ಮಾಡುತ್ತಿರುವ ಕೃತಿಗಳು; ಅವುಗಳಲ್ಲಿ ಅಡಗಿ ರೂಪುಗೊಂಡು ಇರುವ ಭಾವಭೂಮಿಕೆ; ಅಲ್ಲಿನ ಜೀವಶಕ್ತಿಯ ವಿಲಾಸ. ಕಲಾಶಾಸ್ತ್ರವೆಂದೊ ಕಲೆಯ ತತ್ವವೆಂದೊ ಮಾತನಾಡುವಾಗ ಕಲೆಗಾರರೂ ಇತರರೂ ಆಕೃತಿಯ ಮತ್ತು ರೂಪಣದ (Form and Representation)

* ಇಲ್ಲಿ ಈ ದೃಷ್ಟಿಯಿಂದಲೇ ವಿಷಯವನ್ನು ಪರಿಶೀಲಿಸುತ್ತಿರುವುದು.

ಸಂಬಂಧದಲ್ಲಿ ಸಾಮಾನ್ಯವಾಗಿ ಆಡುವ ಮಾತು, ಮಾಡುವ ಸಿದ್ಧಾಂತ, ನಟ್ಟು ಬೆಳಸುವ ಶಾಸ್ತ್ರ.

ಕಲೆಗೂ ಸಾಧನ ಸಾಮಗ್ರಿಗೂ ಇರುವುದು ಹೊರ ಸಂಬಂಧ ಮಾತ್ರ, ಆಗಮ ಭಾಗಕ್ಕೆ ಹೆಚ್ಚು ಬೆಲೆಯೂ ಗೌರವವೂ ಕಾರ್ಯವೂ ಇಲ್ಲ ಎಂದು ಎಣಿಸಲಾಗದು. ಮನಸ್ಸಿನಲ್ಲಿ ತೋರಿದುದನ್ನು ಅಂತೆಯೇ ರೂಪಿಸುವ ಕೈಕೆಲಸ, ಕುಶಲತೆ, ಶಕ್ತಿ ಇಲ್ಲವಾದರೆ ಕಲೆಯ ಕಾಂತಿ ಕುಂದುವುದು. ಕಂಡೀತು ತಾನೇ ಏನು? ಕೌಶಲ್ಯ ಮೇಲಾದಂತೆಲ್ಲ ರೂಪಣ ಶಕ್ತಿ ಮೇಲಾಗುವುದು. ತಕ್ಕ ವ್ಯಂಜಕ ಶಕ್ತಿಯೂ ಕೈಪಪವೂ ಇಲ್ಲದಿದ್ದರೆ ದರ್ಶನ ಸಂಪತ್ತೂ ರೂಪ್ಯದ ಒತ್ತಡವೂ (the Vision and the Impulse to Form) ಎಂಥವೇ ಇದ್ದರೂ ರೂಪಣ ಊನವಾಗುವುದು. ಕಾರ್ಯಕುಶಲತೆ ಅತ್ಯುತ್ತಮವಾದರೆ ಕೂಡ ಕೃತಿ ಸಂಪೂರ್ಣ ಕಲಾ ಪದವಿಗೆ ಏರದೆ ಇರಬಹುದು.* ಕೇವಲ ಕುಶಲ ಕರ್ಮಕ್ಕೆ ಮೀರಿ, ಕೈಗೆ ಸಿಕ್ಕದ, ಅನಂತವಾದ ಸಂಕೇತ–ಮಿಡಿತ–ಇರುವ ಯಾವುದೋ ಜೀವಶಕ್ತಿ ಇಲ್ಲವಾದರೆ ಕೇವಲ ನಿಪುಣತೆಯಲ್ಲಿ, ಮಾಟದ ಚಿನ್ನದಲ್ಲಿ ಕೃತಿ ಕೊನೆಗೊಳ್ಳಬೇಕಾದೀತು. ಆದರೂ ಕರ್ಮಕೌಶಲ ಎಲ್ಲಿಗೆ ಮುಗಿಯಿತು ಕಲೆಯ ಜೀವಾಳ ಎಲ್ಲಿ ಮೊದಲಾಯಿತು ಎಂದು ಹೇಳುವುದು ಸುಲಭವಲ್ಲ. ಸಾಮಗ್ರಿಗೂ ಕಲೆಗೂ ಇರುವ ಸಂಬಂಧ, ಮೈ–ಉಸಿರುಗಳ ಸಂಬಂಧ; ವಸ್ತು–ರೂಪ, ಶಬ್ದ–ಅರ್ಥ, ಹೂ–ಪರಿಮಳಗಳ ಸಂಬಂಧ. ಅವನ್ನು ಬೇರೆ ಮಾಡಲು ಶಕ್ಯವಿಲ್ಲ. ಕಂಡಾಗ ಮತ್ತು ಸತ್ವದರ್ಶನವಾದಾಗ ಇದರಲ್ಲಿ ಈ ಈ ಭಾಗ ಇದು ಎಂದು ವಿವೇಚಿಸಿ ತೋರಿಸಬಹುದು. ಲಕ್ಷಣಾಂಶಗಳನ್ನು ಸುಮ್ಮನೆ ಒಟ್ಟುಕೂಡಿಸಿಬಿಟ್ಟರೂ ಕಲೆ ಆಗದು. ಕಲಾಕೃತಿ ಒಂದು ಜೀವಂತ ಅವಯವಿ. ಆ ಜೀವಗುಣ ಅಂಗಗಳಲ್ಲೆಲ್ಲ ಹರಿದು ಸಂಚರಿಸುತ್ತ ಒಂದು ಹದಕ್ಕೆ ಎಲ್ಲವನ್ನೂ ನಿಯಮಿಸುತ್ತ, ಭಾವಾವೇಗದಿಂದ ಕಲ್ಪನೆಯ ವಿಷಯವನ್ನು ನಡಸುತ್ತ, ಪದಾರ್ಥವನ್ನೂ ಧ್ವನಿಯನ್ನೂ ನಡಿಗೆಯನ್ನೂ ಕಟ್ಟುತ್ತ, ದೀಪ್ತರಸವುಳ್ಳದ್ದನ್ನಾಗಿ ಮಾಡುತ್ತದೆ. ಈ ಕಾಂತಿಯಿಲ್ಲದ ಅಂಗರಚನೆ ಜಡ. ಒಂದು ವಿಶೇಷ ಬಗೆಯ ರಾಗಸಂಸ್ಕಾರ, ಕಲ್ಪನಾಶಕ್ತಿ ಇರುವ; ಸಂತತವಾಗಿ ಜಾಗ್ರತವಾದ; ಯಾವುದೋ ಒಂದು ಸಂದರ್ಭದಲ್ಲಿ ಕೆರಳಿದ ಬಗೆಯಲ್ಲಿ ಆವೇಗವಾಗಿ ಹುಟ್ಟಿ, ಒಂದು ವಿಶೇಷ ರೂಪಣವಾಗಿ ಒರದಿಯಾಗಿ ಹೊಮ್ಮಿ, ಅನುಭವದಲ್ಲಿರುವುದರಲ್ಲಿ ತನಗೆ ಬೇಕಾದ್ದನ್ನು ಆರಿಸಿಕೊಳ್ಳುತ್ತ ಬೇಡದ್ದನ್ನು ಬಿಡುತ್ತ ಒಂದು ಧಾತುವಿಗೆ ಎಲ್ಲವನ್ನೂ ಹೊಂದಿಸಿ ತೋರಿಸುತ್ತ ಇನ್ನೊಬ್ಬರ ಮನಸ್ಸಿನ ಮೇಲೆ ಅಖಂಡವಾಗಿ ಬಂದು ಕವಿದು ಆಧಿಪತ್ಯ ಮಾಡಬಲ್ಲ ಪರಿಣಾಮಕರ ಶಕ್ತಿ ಅದಕ್ಕೆ ಇರುತ್ತದೆ. ರೂಪಣಕ್ಕಿಂತ ಭಾವಾವೇಗ ಹೆಚ್ಚಾದರೆ ಕೃತಿಯ ಏಕತೆ ಕೆಡುವುದು; ರೂಪಣ ಭಾಗ ಮೀರಿದರೆ ರಸದ ಮಿಡಿತ ಕಡಮೆಯಾಗುವುದು.

---

* ಲಕ್ಷಣಸೂತ್ರಗಳನ್ನು ಮುಂದಿಟ್ಟುಕೊಂಡು ಕಾವ್ಯ ಬರೆದಾಗ ಕೃತಿ ಎಷ್ಟು ಬರಡಾಗುವುದೆಂಬುದನ್ನು ಯಾರರಿಯರು? ಮಾತ್ರೆ ಗಣ ಸರಿಯಾಗಿಟ್ಟು ಪಂಕ್ತಿ ಪದ ಕಟ್ಟಿದ ಮಾತ್ರಕ್ಕೆ ವೃತ್ತಗಳಿಗೆ ಜೀವ ಬಂದೀತೆ? ರಸಪುಷ್ಟಿ ದೊರೆತೀತೆ? ಹಾಗೆಯೇ ಪರಿಶುದ್ಧ ಆವೇಶವುಳ್ಳ ಭಾವಕಲ್ಪನೆಯೊಂದು ರೂಪಣ ಬಂಧ ಸರಿಯಿಲ್ಲವಾದರೆ ಕೃತಿ ಅತಂತ್ರವೂ ಅಪೂರ್ಣವೂ ಆಗುವುದು.

ಒಂದು ವಿಶೇಷ ಆಕಾರ, ರೀತಿ, ಗತಿಗಳ ವ್ಯಂಜನೆ ಎಂದಿತು. ಶಾಸ್ತ್ರದಲ್ಲಿಯೂ ವಿಜ್ಞಾನದಲ್ಲಿಯೂ ಹಾಗಲ್ಲ. ಅಲ್ಲಿ ವಿಷಯ ಮುಖ್ಯ. ಅದರ ಪ್ರತಿಪಾದನ, ಪರಿಷ್ಕರಣ, ಅಳತೆ, ಅನ್ವೇಷಣ, ದರ್ಶನ ಎಲ್ಲ ಬುದ್ಧಿಗೆ ಒಳಪಟ್ಟವು; ತರ್ಕಬದ್ಧವಾದವು; ತಿಳಿವಳಿಕೆಯನ್ನು ತಿದ್ದಿ ವಿಶದಪಡಿಸಿ ಎಲ್ಲರಿಗೂ ಎಲ್ಲೆಲ್ಲಿಯೂ ಎಲ್ಲ ಕಾಲಕ್ಕೂ ಅಸಂದಿಗ್ಧವಾದ ಒಂದೇ ಸ್ಪಷ್ಟಾರ್ಥವನ್ನು ಕೊಡಬೇಕು ಶಾಸ್ತ್ರ. ಹೀಗೆ ಸ್ಪಷ್ಟತೆ, ಖಚಿತತೆ, ನಿಷ್ಕರ್ಷೆ, ಸುಸ್ಥಾಪನೆ, ಸರ್ವಸಾಮಾನ್ಯತೆ, ಇವು ಶಾಸ್ತ್ರತತ್ವದ ಲಕ್ಷಣಗಳು. ಕಲೆಯಲ್ಲಿ ಹಾಗಲ್ಲ. ಇಲ್ಲಿ ವಿಷಯವನ್ನು ಕಾಣುವ ರೀತಿಯೇ ಬೇರೆ; ಇಚ್ಛಾ, ಯುಕ್ತಿ, ಕ್ರಿಯಾ ಪ್ರಪಂಚಗಳಿಗೆ ಸಂಬಂಧಿಸಿದಂತೆ ಮನಸ್ಸು ಹೇಗೆ ಬೇರೆಬೇರೆಯಾಗಿ ಕೆಲಸಮಾಡುವುದೊ ಇಲ್ಲಿಯೂ ಹಾಗೆಯೆ,—ಬೇರೊಂದು ಸ್ವತಂತ್ರ ರೀತಿಯಲ್ಲಿ ಕೆಲಸಮಾಡುವುದು. ಒಬ್ಬೊಬ್ಬ ಕಲೆಗಾರನಿಗೂ, ಒಂದೊಂದು ಸಮಯದಲ್ಲಿಯೂ ಬೇರೆ ಬೇರೆ. ನೋಡುವ ನೋಟ ಬೇರೆ; ರುಚಿ ಬೇರೆ. ಅವನವನ ಜೀವನದರ್ಶನದಂತೆ, ರಾಗ ಸಂಸ್ಕಾರದಂತೆ, ಕಲ್ಪನಾ ವಿಲಾಸದಂತೆ, ಕೃತಿ ನಿರ್ಮಾಣ ಸಮಯದಲ್ಲಿ ಅವನ ಮನಸ್ಸು ಸತ್ಯವನ್ನು ಹಿಡಿದಂತೆ ರೂಪಣ ನಡೆಯುತ್ತದೆ. ಒಂದು ವ್ಯಕ್ತಿಯ ಸ್ವಂತ ಅಂತಃಕರಣಪ್ರಪಂಚ ಹೇಗೆ ಕಾಣುವುದು ಎಂಬುದನ್ನು ಜನಕ್ಕೆ ತೋರಿಸಿಕೊಡುವ ರೀತಿ ಇಲ್ಲಿನದು. ಆತನ ಮನೋಧರ್ಮ ಅಲ್ಲಿ ಮುದ್ರೆ ಒತ್ತಿ ಇದು ಕೇವಲ ಅವನ ದರ್ಶನ, ಆದರೆ ಮನುಷ್ಯರಾದವರೆಲ್ಲ ಒಪ್ಪಬಲ್ಲ ಸಂಪನ್ನವಾದ ಹೊಸ ನೋಟವೊಂದು ಅದರಲ್ಲಿದೆ ಎಂಬುದನ್ನು ತೋರಿಸುತ್ತದೆ. ಆದ್ದರಿಂದ ಇಲ್ಲಿ ಒಂದು ದಾರಿಯಲ್ಲ; ಕೋಟಿ ದಾರಿ ಶಕ್ಯ, ಸಹಜ, ನ್ಯಾಯ. ಪ್ರತಿಯೊಂದನ್ನೂ ಅದರದರ ಪ್ರಕರಣದಲ್ಲಿ, ಪ್ರಮಾಣದಲ್ಲಿ ಮಾತ್ರ ನೋಡಿ ಅಳೆಯಬೇಕು, ಸವಿಯಬೇಕು. ಇದು ಬುದ್ಧಿಯ–ಜ್ಞಾನದ–ಮಾರ್ಗವಲ್ಲ. ಜನದ ರುಚಿಗೆ, ಭೋಗಕ್ಕೆ ಸಿಕ್ಕುವ, ಹುಟ್ಟುವ ಸೃಷ್ಟಿ. ವಸ್ತು ದೃಷ್ಟಿಯಲ್ಲ, ಕಲ್ಪನೆಯ ದೃಷ್ಟಿ; ಸಮಸ್ತರ ದೃಷ್ಟಿಯಲ್ಲ, ವ್ಯಕ್ತಿಯದು. ಒಂದೊಂದು ಮನಸ್ಸಿಗೂ ಒಂದೊಂದು ನಯ, ಯೋಗ್ಯತೆ, ಕಲ್ಯಾಣ ಬುದ್ಧಿ ಇರುವುದರಿಂದ ಅನುಭವ ರುಚಿ ಭೇದಗಳು ಬಂದೇ ಬರುವುವು. ಆದ್ದರಿಂದ, ಇಲ್ಲಿ, ಶಾಸ್ತ್ರತತ್ವಗಳಲ್ಲಿನಂತೆ ನಿಯತವಾದ ಒಂದು ಪ್ರಪಂಚವಲ್ಲ ಸತ್ಯ,—ಲೆಕ್ಕವಿಲ್ಲದಷ್ಟು ಪ್ರಪಂಚಗಳು. ಅಲ್ಲದೆ, ಕಲೆಯನ್ನು ಮೆಚ್ಚಿದರೆ ಉಂಟು; ಇಲ್ಲವಾದರೆ ಇಲ್ಲ.* ಅಳತೆ, ತೂಕ, ಬಣ್ಣ, ಎಣಿಕೆ, ನುಡಿ ಹಿಡಿಗಳ ನಿಶ್ಚಯ, ಸಮಂಜಸತೆ ಇರುವ ಶಾಸ್ತ್ರ ಪ್ರಪಂಚದಲ್ಲಿ ಪ್ರಮಾಣಗಳನ್ನೂ ಯುಕ್ತಿಯನ್ನೂ ಒಪ್ಪಿದವರು ತೀರ್ಮಾನವನ್ನು ಒಪ್ಪಲೇಬೇಕಾದ ಕಡ್ಡಾಯವಿದೆ. ಇಲ್ಲಿ ಯಾವ ಕಡ್ಡಾಯವೂ ಸಲ್ಲದು. ಈ ಸಂಗತಿ ಕಲೆಯ ಬಲವೂ ಹೌದು, ದೌರ್ಬಲ್ಯವೂ ಹೌದು. ಇಲ್ಲಿನ ಬೆಸುಗೆ ಭಾವದ ಬೆಸುಗೆ. ಮಿಡಿಯುತ್ತಿರುವ ಯಾವುದೋ ಜೀವ, ಒಂದು ಸ್ಥಿತಿಯ ಕಿರಿದಾದ ಅಥವಾ ವಿಸ್ತಾರವಾದ ದರ್ಶನ–ರಚನೆ–ತನ್ನ ಸಂಸ್ಕಾರಕ್ಕೆ ತಕ್ಕಂತೆ ಜಗತ್ತನ್ನು ನೋಡುತ್ತ, ಸೂಕ್ಷ್ಮವೇದನೆ ಮತ್ತು ಸ್ಫೂರ್ತಿಯ ಕೆರಳಿಕೆಗಳುಳ್ಳ

* ಕಲೆಯೇ ಸೇರದೆ ಕಲೆಬಗೆ ಮುಚ್ಚಿಹೋದ ಮಹನೀಯರುಂಟು. ಬೇರೆ ಸಕಲಾಂಶಗಳಲ್ಲಿಯೂ ಉತ್ತಮರಾದರೂ ಚಿತ್ರ ಸಂಗೀತಾದಿಗಳು ಅವರಿಗೆ ವಿಷ; ಹಿಡಿಸವು.

ತನ್ನ ಭಾವಾವೇಶವನ್ನು ತೆರೆದು ತೋರಿಸುತ್ತ, ಸತ್ಯವೆಂಬ ಪ್ರಪಂಚದ ಆಳದಲ್ಲಿ ಅಡಗಿರುವುದನ್ನೆಲ್ಲ ಚಿತ್ರವಿಚಿತ್ರವಾಗಿ ರೂಪಿಸುತ್ತ ವಿಮರ್ಶಿಸುತ್ತಿರುವ, ಅವುಗಳೊಡನಾಡುತ್ತಿರುವ, ಅವುಗಳ ಕಡೆಗೆ ಜನದ ಮನಸ್ಸನ್ನು ಸೆಳೆಯುತ್ತಿರುವ, ಆತ್ಮನಿವೇದನಕ್ಕಾಗಿ ಹಾತೊರೆಯುತ್ತಿರುವ ಒಂದು ಭಾವನಾ ಶಕ್ತಿ ಅದು. ಅದರ ಕಾರ್ಯ ಬುದ್ಧಿಯ ಮೇಲಲ್ಲ; ತರ್ಕ್ಕಣ ಕರ್ಮದ ಮೇಲಲ್ಲ;— ಅಂತಃಕರಣದ ಮೇಲೆ. ಅದರ ಸ್ಥಿತಿ ರಾಗರಂಜನೆ ಉಳ್ಳ ಒಂದು ಆವೇಶದ್ದು, ಆವೇಗದ್ದು. ಕಾವಿನದು, ಪಕ್ಷಪಾತದ್ದು. ಈ ಆವೇಗ ಆವೇಶಗಳೇ ವಿಷಯದ ಸುತ್ತಲೂ ಆಡುವುದು, ನೋಡುವುದು; ಅನುಭವದ ರೂಪಣವನ್ನು ನಡಸುವುದು. ಶಾಸ್ತ್ರಾದಿ ಗಳಲ್ಲಿ ಇವಕ್ಕೆ ಎಡೆಯಿಲ್ಲ.

ಉತ್ತಮ ಕಲೆಯ ಎದುರು ನಾವು ಮೊದಲು ನಿಲ್ಲುವುದು ಚಕಿತರಾಗಿ; ಅಲ್ಲಿನ ಏನನ್ನೋ ಕಂಡು ಅದಕ್ಕೆ ಸೋತು; ಅದಕ್ಕಾಗಿ ಬೇರೆಯದನ್ನು ಬಿಟ್ಟು, ಮರೆತು; ಅದರ ಅರ್ಥ ಸಂಕೇತಗಳನ್ನು ಧ್ಯಾನಿಸುತ್ತ; ಅವು ಗ್ರಾಹ್ಯವಾದಂತೆಲ್ಲ ಬಗೆಬಿಚ್ಚಿ, ಕಣ್ಣರಳಿ, ಕಿವಿತೆರೆದು, ಬಾಯಿಬಿಟ್ಟು, ಸ್ತಬ್ಧರಾಗಿ ನಿಂತು; ಮೆಚ್ಚುತ್ತ, ಕಂಪಿಸುತ್ತ; ಕಾದು, ಕರಗಿ; ಕಣ್ಣೀರು ಸುರಿಸುತ್ತ, ನಡುಗುತ್ತ; ಯಾವುದೋ ರೋಮಾಂಚ, ಬೇಗೆ ಜೀವಕ್ಕೆ ಬಂದು; ಬಣ್ಣಕ್ಕೊ ಆಕೃತಿಗೊ ನಾದಕ್ಕೊ ತಾಳಗತಿಗೊ ಭಾವಭಂಗಿಗೊ ಶಬ್ದಾರ್ಥ ಸಂಗತಿಗೊ ನಮ್ಮನ್ನು ಮಾರಿಕೊಂಡು; ಹಸಿವು, ನಿದ್ದೆ, ದಿನಚರಿಯ ಹೊಣೆಗಾರಿಕೆ ಇವುಗಳನ್ನು ಲೆಕ್ಕಿಸದೆ;— ಇದು ಕಲಾನುಭವದ ಹೊರ ನೋಟ. ಬಹುತರ ಇದೇ ಬಗೆಯ ಭಾವ ಪರಿಸ್ಥಿತಿ ಯಲ್ಲಿಯೇ ಕಲೆ ಹುಟ್ಟಿದುದು.

ಕಲೆಗಾರನ ಮನಸ್ಸು ಎಂದಿತು; ಅದು ಕಾಣುವ ದರ್ಶನ ಎಂದಿತು; ತಾನನುಭವಿಸಿದ ರಾಗ ಭಾವಗಳನ್ನು ಮತ್ತೊಬ್ಬರಲ್ಲಿಯೂ ಉಂಟುಮಾಡುವ ಶಕ್ತಿಯುಳ್ಳದ್ದು ಎಂದಿತು. ಆದ್ದರಿಂದ ಅನುಭವ ಅಭಿವ್ಯಂಜನೆಗಳು ಎಷ್ಟು ಸೂಕ್ಷ್ಮ ವಾಗಿ, ನಯವಾಗಿ, ಉದಾರವಾಗಿ, ಮನೋಹರವಾಗಿ, ಸಂಪುಷ್ಟವಾಗಿ ಆದರೆ ಕೃತಿ ಅಷ್ಟು ಉತ್ತಮವಾಗುವುದು. ಹೀಗೆ ಕಲೆ ಹಿರಿದಾಗುವುದು ಕಲೆಗಾರನ ಗುಣದ ಮೇಲೆ ನಿಂತುದು. ಅವೂ ಕೃತಿ ನಿರ್ಮಾಣ ಸಮಯವೂ ಸಾಮಾನ್ಯವಾದರೆ ಕೃತಿ ಸಾಮಾನ್ಯ; ಉದಾತ್ತವಾದರೆ ಉದಾತ್ತ; ಕರ್ಕಶವಾದರೆ ಕರ್ಕಶ. ಆದ್ದರಿಂದಲೇ ಒಬ್ಬನ ಕೃತಿಗಳೇ ಬೇರೆ ಬೇರೆ ಮಟ್ಟವನ್ನೂ ನಿಟ್ಟನ್ನೂ ಮನಸ್ಸನ್ನೂ ತೋರಿಸು ವುದು. ಹಲವುವೇಳೆ ಒಂದು ರೀತಿ ಮೊದಲಾದ್ದು ಬರಬರುತ್ತಾ ಆವೇಶವೇರಿ, ಊರಿ ಅಥವಾ ಬರಡಾಗಿ ನೀರಸವಾಗಿ ಬೇರೆಗೂ ತಿರುಗುವುದು; ಎಣಿಸದಿದ್ದ ಶಕ್ತಿ ಉಕ್ತಿ ರಂಜನೆ ಕಾಂತಿಗಳಿಂದ ತುಂಬುವುದು; ವಿರಸತೆ ಮರಹು ಆಲಸ್ಯಗಳಿಂದ ಹದಕೆಡುವುದು; ಮೈತುಂಬಿ ಕಲೆಗಾರನು ಕೈಕೆಲಸದಲ್ಲಿಯೊ ಕಂಠದಲ್ಲಿಯೊ ಬಣ್ಣ ಕುಂಚಿಗಳಲ್ಲಿಯೊ ರೇಖೆ ಆಕೃತಿಗಳಲ್ಲಿಯೊ ತೊನೆತ ಕುಣಿತಗಳಲ್ಲಿಯೊ ಸುತ್ತಿಗೆಯ ಪೆಟ್ಟಿನಲ್ಲಿ ಆಡುವ ಉಳಿಯ ತರಿಕೆಗಳಲ್ಲಿಯೊ ತನ್ನ ಮನಸ್ಸನ್ನು ನಡಸುತ್ತಿರುವಾಗ ತನಗೇ ಮೊದಲು ಹೊಳೆಯದಿದ್ದ ಅಂಶದರ್ಶನ ಹುಟ್ಟಿಕೊಳ್ಳು ವುದು; ಏನಾಗುತ್ತಿದೆಯೆಂಬ ಅರಿವಿಲ್ಲದಂತೆ ತನ್ನ ಬಗೆಯನ್ನು ಸುರಿಯುತ್ತಿರುವಾಗ

ತನಗೂ ನೋಡುವವರಿಗೂ ಕೇಳುವವರಿಗೂ ಅವನು ಒಂದು ಭಾವಸಮಾಧಿಯನ್ನು ಉಂಟುಮಾಡಲು ಸಾಧ್ಯವಾಗುವುದು. ಆದ್ದರಿಂದಲೇ ಉತ್ತಮ ಕೃತಿ ಆವೇಶ ಜನ್ಯ ಎನ್ನುವುದು. ಯಾವ ಕಲೆಯಲ್ಲಿ ಆವೇಶ ಶುದ್ಧಿ, ನುಡಿತದ ಸಂಪತ್ತಿ, ಎರಡೂ ಜೊತೆಯೊಪ್ಪಿ ಸರಿಸದಲ್ಲಿರುವುದೋ ಅದು ಮೇಲ್ತರದ ಕಲೆ. ಉತ್ತಮ ಕಲೆಯಲ್ಲಿ ವಿಷಯ, ರೀತಿ, ಭಾವ, ಭಣಿತಿ ಸಮುಧಾತುವಾಗಿ ಸೇರಿರುತ್ತವೆ. ಅವುಗಳಲ್ಲಿ ಯಾವುದು ಹೆಚ್ಚು ಕಡಮೆಯಾದರೂ ಹದ ಕೆಟ್ಟಿತು. ಮತ್ತು ಕಲೆ ಸಫಲ ವಾದಾಗ ಕಂಠಿಕೆ ಕಾಂಚನಮಾಲೆಯೊ ಕಾಳಾಯಸದಿಂದಾದುದೊ ಎಂಬ ಎಣಿಕೆ ಬರುವುದಿಲ್ಲ. ಬೇರೆ ಯಾವುದರ ಕಡೆಗೂ ಗಮನ ಹೋಗದು. ಅದರ ಪ್ರಾಬಲ್ಯವೇ ಆಗ ಸತ್ಯ: ಕಲೆಗಾರ, ಕೃತಿ, ನೋಡುವವರು, ಆ ಸಮಯದಲ್ಲಿ ಪ್ರತ್ಯೇಕ ವಸ್ತುಗಳಲ್ಲ. ಕಲಾನುಭವವೊಂದೇ ನಿಜ. ಈ ಹಿಡಿತ ಸಡಲಿ ಮನಸ್ಸು ಇಬ್ಬಗೆ ಯಾದಾಗ ಕಲೆ ಮೇಲ್‌ಮಟ್ಟವನ್ನು ಮುಟ್ಟಲ್ಲವೆನ್ನಬಹುದು; ಅಥವಾ, ಅನುಭವಿ ಸುವವನಲ್ಲಿ ಅದು ಗ್ರಹಿಕೆಯಾಗಿಲ್ಲ ಎನ್ನಬೇಕು.

ಕುಂಚ ಉಳಿ ಹಿಡಿದವರೆಲ್ಲ, ಪದ್ಯ ಕಟ್ಟುವವರೆಲ್ಲ ಚಿತ್ರಶಿಲ್ಪ ನಿರ್ಮಾಣಕರಲ್ಲ, ಕವಿಗಳಲ್ಲ; ಎಗರಿ ಹಾರಾಡುವವರೆಲ್ಲ ನರ್ತಕರಲ್ಲ. ಎಲ್ಲ ಮನೆಕಟ್ಟುವವರೂ ವಾಸ್ತುಶಿಲ್ಪಿಗಳಲ್ಲ. ಯಾರ ಆವೇಶಶುದ್ಧಿ ಮತ್ತು ರೂಪಣನಾವೀನ್ಯ ತಮ್ಮ ಕಲ್ಪನೆಯ ಅಥವಾ ರಚನೆಯ ಅತಿಶಯತೆಯಿಂದ ಜನಗಳನ್ನು ಅಚ್ಚರಿಗೊಳಿಸ ಬಲ್ಲದೊ ಅವರು ಮಾತ್ರ. ಇತರ ಕಡೆ ಇಲ್ಲದ ಸೌಭಾಗ್ಯದ ಅನುಭವ ಅವರ ಕೃತಿಯಲ್ಲಿರುವುದರಿಂದ. ಉದ್ದೇಶ ಪೂರ್ವಕವಾಗಿ ಅವರು ಕೃತಿ ನಿರ್ಮಾಣಕ್ಕೆ ಕುಳಿತುಕೊಳ್ಳದಿರಬಹುದು. ಕುಳಿತಾಗಲೆಲ್ಲ ಕೈ, ಬಗೆ ನಡೆಯದೆಯೂ ಹೋಗ ಬಹುದು. ಕೃತಿಯನ್ನು ಹೇಗೆ ಉಂಟುಮಾಡುವರೋ ಅದು ಅವರಿಗೇ ತಿಳಿಯದ ಅಥವಾ ಮೊದಲೇ ಪೂರ್ತಿಯಾಗಿ ತಿಳಿಯದ ಸಂಗತಿಯಾಗಿರಬಲ್ಲದು. ಬಹುಕಾಲ ಹಿಡಿಯುವ ಶಿಲ್ಪ ಕೃತಿಯನ್ನೂ ಹತ್ತಾರು ಬಗೆಯ ವಾದ್ಯಗಳಿಗೆ ಹಂಚಿಕಟ್ಟುವ ಸ್ವರ ಮೇಳದ ಉತ್ಕೃತಿಗಳನ್ನೂ ವಿಸ್ತಾರವಾದ ಮಹಾಕಾವ್ಯಗಳನ್ನೂ ಮಹಾಮಂದಿರ ಗಳನ್ನೂ ನಿರ್ಮಿಸಬೇಕಾಗಿರುವಾಗ ಪ್ರತಿಭಾವಂತನಾದ ಕಲೆಗಾರನಿಗೆ ಅವುಗಳ ಧ್ಯಾನಚಿತ್ರ ಒಂದು ಒಟ್ಟಂದದಲ್ಲಿ ಮೊದಲು ಒಳಗೆ ಆಕೃತಿಗೊಳ್ಳುವುದು. ಆಮೇಲೆ ಬರೆಯುವುದೊ, ಮಣ್ಣು ಕಲ್ಲು ಸ್ವರಗಳಲ್ಲಿ ರೂಪಿಸುವುದೊ ಆಗುವುದು. ರೂಪಣೆ ಮತ್ತು ರಚನೆ ಮಾಡುವಾಗ ಮಾಡುತ್ತ ಮಾಡುತ್ತ ಧ್ಯಾನ ಅಥವಾ ಮೂಲಾವೇಶ ದಲ್ಲಿ ಅಲ್ಲಿಷ್ಟು ಇಲ್ಲಿಷ್ಟು ಮಾರ್ಪಾಟು ಆಗಬಹುದು. ಧ್ಯಾನ ದರ್ಶನದಲ್ಲಿ ರೂಪುಗೊಂಡು ಅಥವಾ ಕೇಳಿಸಿ ಹುಟ್ಟಿದುದನ್ನು ಖರದಿ ಮಾಡುವ ಶಕ್ತಿ ಕೃತಿಕಾರನಿಗೆ ಎಷ್ಟು ಇರುವುದೊ, ದರ್ಶನಕ್ಕೂ ಕಲಾ ವಿಧಾನಗಳಲ್ಲಿ ಮೂರ್ತಿಗೊಳಿಸುವುದಕ್ಕೂ ಎಷ್ಟು ಮಟ್ಟಿನ ಈಡು ಜೋಡಿ ಇದೆಯೊ, ಸಮಗ್ರ ವಾಗಿ ಕೃತಿ ಮುಗಿಯುವವರೆಗೂ ಪ್ರತಿಭಾಸಂಪತ್ತಿಯೂ ಸಂವಿಧಾನ ಚಾತುರ್ಯವೂ ಒದಗಿ ನಿಲ್ಲುವುದೊ ಇಲ್ಲವೊ ಎಂಬುದೂ ಕೃತಿಯ ಸಂಪೂರ್ಣತೆಗೆ ಕಾರಣ ವಾಗುವುದು.

ಎಲ್ಲಿನಂತೆಯೇ ಕಲೆಯಲ್ಲಿಯೂ: 'ಹಲವರಿಗೆ ಅದರ ಕರೆ ಕೇಳುತ್ತದೆ.

ಕಲೆ ಆಯ್ದುಕೊಳ್ಳುವುದು' ಒಬ್ಬಿಬ್ಬರನ್ನು. ಉಳಿದವರು ಕಲೆಯ ಹಂಬಲಿದವರು, ಪ್ರಾರ್ಥಿಗಳು, ಪುರಿಯೊಳಗಿನ ಉತ್ಸಾಹಿಗಳು. ದೇವಾಲಯದ ಹೊರವಲಯ ಮುಖಮಂಟಪಗಳಲ್ಲಿ ನಿಲ್ಲುವ ಮಂದಿ ಎಂದಿಗೂ ಬಹು ಜನವೇ. ಮೂಲ ವಿಗ್ರಹದ ಶಿಲ್ಪರಚನೆ ಎಲ್ಲರ ಭಾಗ್ಯಕ್ಕೂ ಬರುವುದಲ್ಲ. ಕಲೆಗಾರರೆನ್ನಿಸಿಕೊಳ್ಳುವವರಲ್ಲಿ ಬಹು ಮಂದಿ ಕೀಳಾಗಿಯೊ ಮೇಲಾಗಿಯೊ ದೇವಾಲಯದ ಸುತ್ತಿನ ಹೊರ ಶೃಂಗಾರ ಗಳನ್ನು ಕೆತ್ತಬಲ್ಲವರು; ಕಿರಿಬೆರಗುಗಳನ್ನು ಉಂಟುಮಾಡಬಲ್ಲವರು. ಭವ್ಯಸೌಂದ ರ್ಯದ ಪ್ರಕಾಶನಕ್ಕೆ ತಲೆಯಾಳುಗಳೇ ಬೇಕು. ಸಾಮಗ್ರಿಯೇನೊ ಎಲ್ಲರ ಎದುರಿಗೂ ಚೆಲ್ಲಿ ಹರಡಿರುತ್ತದೆ. ಎಲ್ಲರಿಗೂ ಪ್ರಪಂಚ ಅದನ್ನು ಸೂರೆಕೊಡುತ್ತದೆ. ಸರ್ವತ್ರ ಸಂಚರಿಸಿ, ಹಣ, ಕಾಲ, ಪ್ರಯತ್ನ ಹೂಡಿ ಶಾಸ್ತ್ರಜ್ಞಾನವನ್ನೂ ನಿಪುಣತೆಯನ್ನೂ ಬೇಕಾದವರು ವಶಪಡಿಸಿಕೊಳ್ಳಬಹುದು. ಆದರೆ ಬೆಳಕು ಗಾಳಿಗಳಲ್ಲಿ ತೇಲಿ ವಿಶ್ವಸೌಭಾಗ್ಯದ ಆಳಕ್ಕೆ ಮುಳುಗಿ ಮಲೆಯ ಕೋಡುಗಳನ್ನೇರಿ ನಿಂತು ಅವುಗಳ ಎದೆಯಲ್ಲಿ ಅಡಗಿರುವ ರಹಸ್ಯಗಳನ್ನು ಅನುಭವಿಸಿ, ಹಿಂದೆ ನೆಲ ನೀರು ಬಾನುಗಳಲ್ಲಿಲ್ಲದಿದ್ದ ಮುತ್ತು ರತ್ನಗಳಂಥ ಸೌಭಾಗ್ಯವನ್ನು ಭೂರಿ ಕೊಡಬಲ್ಲ ಪುಣ್ಯ ಏಕೋ ಏನೋ ಎಲ್ಲರ ಪಾಲಿಗೂ ಬರುವುದಿಲ್ಲ.

ವಿಷಯವನ್ನು ಹೀಗೆ ಬೆಳಸಿರುವುದರಿಂದ ಇನ್ನೊಂದು ಸಂಗತಿ ವೇದ್ಯವಾಗಿರ ಬೇಕು: ಕಲೆಗಾರನಿಗೆ ಸ್ವಾತಂತ್ರ್ಯ, ಕಲೆಯಲ್ಲಿ ಧರ್ಮದೃಷ್ಟಿ, ಪ್ರಯೋಜನ ದೃಷ್ಟಿ, ಅಥವಾ ಕಾಲದ ದೃಷ್ಟಿ ಯಾವ ರೀತಿ ಇರುತ್ತವೆಂಬುದು ಪರ್ಯಾಯ ವಾಗಿ ಗೋಚರವಾಗಿರಬೇಕು. ಇವೆಲ್ಲ ಮೊದಲೇ ಅವನ ಅನುಭವದಲ್ಲಿ ಸೇರಿಕೊಂಡಿರುವ ಅಂಶಗಳು; ಇಲ್ಲವೇ ಹೊರ ಸಂಗತಿಗಳು. ಯಾವೊಂದು ಸಮಯದಲ್ಲಾಗಲಿ ಅವನ ಆವೇಶದಲ್ಲಿಯೂ ರೂಪಣದಲ್ಲಿಯೂ ಇಷ್ಟೇ ಹೀಗೇ ಸೇರಿ ಪುಷ್ಟಿಕೊಡುವುವು ಎಂದು ಮೊದಲು ಹೇಳುವುದಕ್ಕಾಗುವುದಿಲ್ಲ. ಕೃತಿ ಹುಟ್ಟಿ ಬಂದಮೇಲೆ ಬಹುಶಃ ಅರಿಯಬಹುದೇನೊ! ಏಕೆಂದರೆ ನಿಜವಾದ ಕಲೆಗಾರನಿಗೆ ಆವೇಶದ ಒತ್ತಡದಲ್ಲಿ ಹಲವೇಳೆ ಹೊರಗಿನ ತಡೆಯಿರುವುದಿಲ್ಲ. ಬೇರೆ ತಪಸ್ಸು ಧ್ಯಾನಗಳಲ್ಲಿ ಪ್ರಜ್ಞೆಬಿಗಿದಿರುತ್ತದೆ. ಮನಸ್ಸಿನಲ್ಲಿ ಕೋಟಿ ಬಣ್ಣಗಳೂ ಬೆಳಕುಗಳೂ ತಾನಗತಿಗಳೂ ಆಕೃತಿಗಳೂ ಪಿಶಾಚಿಗಳಂತೆ ಆಡುತ್ತಿರುತ್ತವೆ; ಅಬ್ಬರಿಸುತ್ತಿರು ತ್ತವೆ. ಹಿಂದಿನ ಸಂಸ್ಕಾರ ಅನುಭವ ಅಭ್ಯಾಸಗಳೆಲ್ಲ ಒಳಗೆ ಕುದಿದು ಸಿದ್ಧವಾಗಿರು ತ್ತವೆ. ಆವೇಶ ಸಾಮಗ್ರಿಯಿಂದ ಕಲ್ಪನೆ ಕೆರಳಿದಾಗ ನರ್ತಕನಾದರೆ ಹೆಜ್ಜೆ ತಾಳ ಬಡಿಯುವುದು, ಅಂಗಭಂಗಿ ವ್ಯತಾಸವಾಗುವುದು; ನಡಿಗೆ ನಾಲ್ಕು ಮೂಲೆಗೆ ಆಡುವುದು; ಕವಿಯಾದರೆ ಪದ್ಯದ ಪಂಗ್ತಿಗಳೊ ದಾಟಗಳೊ ಚಿತ್ರಾರ್ಥಗತಿಗಳೊ ಹುಟ್ಟಿ ನುಡಿಯುವುವು; ಚಿತ್ರಕಾರನಾದರೆ ಆಕಾರಗಳು ಕುಂಚಿಕೆಯಿಂದ ರೇಖೆನಿ ಯಿಂದ ಹರಿದು ಸ್ಥಿತಿಯನ್ನೊ ಕಥೆಯನ್ನೊ ನೋಟವನ್ನೊ ರಚಿಸಿ ಕಾಣಿಸುವುವು. ಒಂದು ರಾಗದ ಕೂಗು ಪ್ರಪಂಚವನ್ನು ಮುಳುಗಿಸುವುದು. ಒಂದು ಮಂದಿರದ ಅಖಂಡ ರೂಪ ಕಣ್ತುಂಬಿ ನಿಂತು, ತನ್ನ ಆಕೃತಿವಿಲಾಸ ಅಜ್ಞೊತ್ತಿ ಆದ ಹೊರತು ಹಿಂಗದಾಗುವುದು. ಇಲ್ಲವಾದರೆ ಬಿಡುಗಡೆ ದೊರಕದೆ ನರಕಂಪನ ನಿಲ್ಲದೆ ಇರುವುದು. ಇಳಿಯುವವರೆಗೂ ಈ ಭೂತ ತಣಿ ಕೇಳುತ್ತ ಒತ್ತುತ್ತ ಹೋಗುವುದು.

ಅದನ್ನು ಹೊರಗೆ ಹಾಕಿದ ಹೊರತು ಮನೆ ಮಠ, ಹೆಂಡಿರು ಮಕ್ಕಳು, ಸಾಲ ಸೂಲ, ಅಧಿಕಾರ ಹೊಣೆ, ಊಟ ಉಪಚಾರ ನಿದ್ರೆ, ಲಲ್ಲೆ ಯಾವುವೂ ಬೇಕಾಗವು. ಅಷ್ಟೇ ಏಕೆ, ದುರ್ಭರ ಆತಂಕಗಳಾವುವು.* ಕಲಾಸ್ಫೂರ್ತಿ, ಮಾರ್ಗ ಹೀಗಿರುವಾಗ ಸ್ವಾತಂತ್ರ್ಯ ಕೇಳುವವರು ಯಾರು? ಕೊಡುವವರು ಯಾರು? ಧರ್ಮದೃಷ್ಟಿ ಬೇಕೆ, ಬೇಡವೆ ಎಂಬ ವಿಚಾರ ಎಲ್ಲಿನದು? ಚೆಲುವು ಅಲಂಕಾರವೆ, ನಿರಾಭರಣತೆಯೆ? ಸಂಪ್ರದಾಯ ಮಾರ್ಗ ಮೇಲೆ, ಸ್ವಚ್ಛಂದತೆ ಮೇಲೆ? ಅದು ಬೇಕೆ, ಇದು ಸಾಕೆ? ಎಂಬವೆಲ್ಲ ಬದಿಗೆ ಬೀಳುವುವು, ಗೌಣವಾಗುವುವು.

ಕಲ್ಲ ಮೇಲೆ ಪಾಚಿ ಬೆಳೆದಿದೆ:— ಪ್ರಪಂಚದಲ್ಲಿರುವ ಪಾಷಾಣತೆಯ ಜೊತೆಗೆ ಮೃದುತೆ ಕೋಮಲತೆಗಳ ಸಹವಾಸದರ್ಶನ ಚಿತ್ರಕಾರನಿಗೆ ಕಾಣುವುದು. ಶಿಶಿರದಲ್ಲಿ ಕೊರೆಗಾಳಿ ಬೀಸಿತು, ಕೋಗಿಲೆ ಕೂಗಿತು:— ವಸಂತ ಇನ್ನೆಷ್ಟು ಕಾಲ ತಡೆದೀತು ಎಂಬ ಕೂಗಿನ ಸಂಕೇತವಾಗುವುದು. ಬಾಗಿಲನ್ನು ಯಾರೋ ಕಠಿನವಾಗಿ ತಟ್ಟಿದರು, ಸುತ್ತಿಗೆಯ ಪೆಟ್ಟು ನಿಷ್ಕರುಣವಾಗಿ ಬೀಳುತ್ತಿದೆ:— ಎಷ್ಟು ಎದುರು ಯತ್ನಮಾಡಿದರೂ ಮನುಷ್ಯನ ಬಯಕೆ ಪ್ರಯತ್ನಗಳನ್ನು ಬಡಿದು ವಿಧಿ ಹೇಗೆ ಕುಟ್ಟಿ ಪುಡಿಮಾಡುವುದು ಎಂಬ ಹೃದಯದ ವಾದ್ಯಮೇಳ— ಒಂದು ಸಲ ಪಿಟೀಲುಗಳಲ್ಲಿ, ಒಂದುಸಲ ಮದ್ದಳೆಗಳಲ್ಲಿ, ಒಂದು ರೀತಿ ಕೊಳಲುಗಳಲ್ಲಿ ಒಂದು ಬಗೆ ಲೋಹವಾದ್ಯಗಳಲ್ಲಿ, ತೀವ್ರವಾಗಿ ಮೃದುವಾಗಿ ದೀನವಾಗಿ ಭಯಂಕರವಾಗಿ ಹುಟ್ಟಿ ಕೇಳುವುದು. ಕಾಡಿನ ರಸ್ತೆಯಲ್ಲಿ ಹೋಗುವ ಗಾಡಿ ಕುದುರೆಗಳ ತುಳಿತ, ಗಂಟೆ ಕೊಂಬುಗಳ ಮೊಳಗು, ಹಕ್ಕಿ ಹುಳುಗಳ ಉಲಿತ ಕೆಲೆತ, ನದಿಯ ತಿರುವು, ಜಿಲಜಿಲನಾದ, ಪ್ರಿಯರ ಪ್ರೇಮದ ಬಗೆ ಸೇರಿಕೊಂಡು ಗಾನಮಂಡಲವಾಗುವುದು. ಅನಂತ ಶ್ರೇಣಿಯಾಗಿ ಉನ್ನತ ಶಿಖರಗಳ ಮುಡಿಯಾಗಿ ನಿಂತ ಹಿಮಾಲಯದ ಕಲ್ಕೋಡು ತಪಸ್ವಿ ಶಿವನಂತೆ ಕಾಣುವುದು. ಉದ್ದಕ್ಕೆ ಹರಡಿ ಬಿದ್ದ ಕಗ್ಗಲ್ಲ ಬಂಡೆ ದಡಿಗ ದಾನವನ ವಿಶ್ರಾಂತಿಯ ಹಾಗೆ ಶಿಲ್ಪಕೃತಿಯಾಗುವುದು. ಶ್ರವಣಬೆಳುಗೊಳದ ಬೆಟ್ಟ ಗೊಮ್ಮಟನನ್ನು ಹುಗಿದು ಸೆರೆಯಿಟ್ಟ ಪಾಷಾಣದ ಪರುಷನಿರ್ಬಂಧದಂತೆ ನಿಲ್ಲುವುದು. ದಾರಿಯ ಮಣ್ಣು ಮುಳ್ಳುಗಳ ನಡುವೆ ಬೆಳೆವ ಕಿರಿ ಹೂ ಸೃಷ್ಟಿಯಲ್ಲಿ ನಾನೂ ಒಬ್ಬನಿದ್ದೇನೆ, ನನ್ನನ್ನೂ ನೋಡಿ ಹೋಗಿ ಎಂಬ ಕರೆಯಾಗುವುದು; ಎಡರು ಕೀಳ್ಮೆಗಳ ನಡುವೆ ಬೆಳೆಯಬೇಕಾದ ಮೃದು ಸೌಂದರ್ಯದ ಪಾಡನ್ನು ಕಾಣಿಸುವುದು. ಕುಟುಂಬದ ಬೇಗೆಗೆ ಸಿಕ್ಕಿದ ಒಬ್ಬ ಹೆಣ್ಣ ಅಳಲು 'ಕಡುಪಾತಕಂ ಗೈದು ಹೆಣ್ಣಾಗಿ ಹುಟ್ಟಿದುದು ಎನ್ನೊಳಪರಾಧವುಂಟು' ಎನ್ನಿಸುವ ಮಾನವನ ಅಮಾನವತೆಯ ಸೂಚಿಕೆಯಾಗುವುದು. ಹಾರಿವ ಮಿಂಚುಳ್ಳಿ ಹಾರುವಾಗ ತೋರುವ ಬೆಡಗು ಗರುಡ ಗಿಡುಗಗಳ ಗಗನಯಾನದಲ್ಲಿ ಅಥವಾ ಗಗನದಿಂದೆಂಬಂತೆ ದುಮ್ಮಿಕ್ಕುತ್ತಿರುವ ಜಲಪಾತದಲ್ಲಿ ಅದ್ಭುತ ಶಕ್ತಿ ವಿಲಾಸವಾಗಿ— ಬಲದ ಸಂಕೇತವಾಗಿ ಕಾಣುವುದು. ಕೊಳವನ್ನು ಅರಳಿಸಿ ಅದರ

* ಕಲೆಗಾರರ ಅನೇಕ ವಕ್ರತೆಗಳಿಗೆ ಬಹುಶಃ ಇದೇ ಕಾರಣವಿರಬೇಕು. ಅವರ ಜೊತೆಬದುಕು ಸಾಧಾರಣರಿಗೆ ಕಷ್ಟ, ಅರ್ಥವಾಗದು. ನಿಜವಾದ ಕಲಾವೇಶವಿಲ್ಲದವರು ಈ ವೇಷ ಹಾಕುವುದೂ ವಿಚಿತ್ರ ವರ್ತನೆಗಳಿಗೆ ಎಡೆಕೊಡುವುದೂ ಇದರ ಆಭಾಸ ರೂಪಗಳೇ ಇರಬೇಕು.

ಕಣ್ಣಾಗಿ ನಗಿಸುತ್ತಿದ್ದ ಹೂವನ್ನು ಕಿತ್ತು ತಂದು ಅದನ್ನು ಬಾಡಿಸಿ ಹೊಸಕಿ ಬಿಸುಡುವ ವ್ಯಾಪಾರ, ಸೌಂದರ್ಯವನ್ನು ಆಕ್ರಮಿಸಿ ಕೆಡಿಸುವ ರಾಕ್ಷಸತೆಯ ನಿದರ್ಶನವಾಗಿ ನಾಟ್ಯವಾಗುವುದು. ಒಣಗಿ ಬಟ್ಟಬಯಲಾಗಿದ್ದ ಭೂಮಿ ಒಂದು ಮಳೆ ಕರೆದ ಕೂಡಲೆ ಎಲ್ಲೆಲ್ಲಿಯೂ ಹಸುರಿಡುವ ಸಂಭ್ರಮದ ದೃಶ್ಯ ಚಿಗುರಿ ಮೇಲಕ್ಕೆ ಬರಲು ತವಕಪಡುತ್ತಿರುವ ಜೀವದ ಹಸಿರುಬಯಕೆಯನ್ನು ಸಾರುವುದು. ವಸ್ತು ಅದಾಗಿರಲಿ ಇಲ್ಲದಿರಲಿ ಲೋಕವನ್ನು ನೋಡಿ ಒಂದು ಮನಸ್ಸಿಗೆ ಭಾವಪ್ರೇರಣೆ ಉಂಟಾಗುವುದು ಹಾಗೆ. ಆ ದರ್ಶನವಿಶೇಷವೇ ಅಲ್ಲಿ ಜೀವ.

ಕಲೆಗಾರನಿಗೆ ಒಡಿತ ನಿಯಮಗಳೇ ಇಲ್ಲವೆ? ಎಂದರೆ ಇವೆ. ಅವನು ಮೇಲ್ತರದವನಾಗಿದ್ದರೆ ಆತನು ಕಂಡು ತೋರಿಸುವುದು ಕೆಟ್ಟದ್ದಲ್ಲ, ಅಹಿತವಲ್ಲ. ಇತರ ಸೂಕ್ಷ್ಮಬುದ್ಧಿಯವರು ಬೆಳೆಯುತ್ತಿರುವಂತೆ ಆತನ ಮನಸ್ಸೂ ದಿನದಿನಕ್ಕೆ ಬೆಳೆಯುತ್ತಿರುತ್ತದೆ. ಆತನ ಜೀವನ ವಿಮರ್ಶೆ, ವ್ಯಾಖ್ಯಾನ, ದೃಷ್ಟಿ ಬದುಕಿಗೆ ಸಹಾಯಕ. ಬದುಕಿನ ಪೋಷಣೆಗೂ ಅದರ ಶುಚಿ ಉತ್ಥಾನತೆಗೂ ಧ್ಯಾನಕ್ಕೂ ಕಾರ್ಯ ಪ್ರವೃತ್ತಿಗಳಿಗೂ ನೆರೆಯುತ್ತದೆ. ಕರ್ಮನಿರ್ಬಂಧವಿಲ್ಲವೆಂದು ವರ್ಣಿಸುವ ಜೀವನ್ಮುಕ್ತನ ಉಸಿರು ಮಾತು ನಡೆಗಳನ್ನು ಉಪನಿಷತ್ತು ಹೇಗೆ ವರ್ಣಿಸುವುದೊ ಅದನ್ನು ಇಲ್ಲಿ ಹೋಲಿಸಬಹುದು. ಶರಣರು 'ನುಡಿದುದೇ ಶಿವತತ್ವದಾಗಮ, ನಡೆದುದೇ ಶಿವಮಾರ್ಗ' ಎಂದು ಅಲ್ಲಮನು ಸಿದ್ಧರಾಮನಿಗೆ ಮಾಡಿದ ಉಪದೇಶದ ಸಾಮ್ಯವನ್ನು ಅಥವಾ ಮದನಿಕೆ ಚಾರುದತ್ತನ ವಿಷಯದಲ್ಲಿ ಆಡಿದ 'ನ ಚಂದ್ರಾ ದಾತಪೋ ಭವತಿ' ಎಂಬುದನ್ನೂ ಹೇಳಬಹುದು.

ಕಲಿ ಕಲೆಯಾಗದೆ ಬೇರೆ ಕೆಲಸವನ್ನು ಕಲೆಯಿಂದ ಮಾಡಿಸಬೇಕೆಂದು ಹೊರಟಾಗ ವಿರಸತೆ ಉಂಟಾಗುವುದು ಸಹಜ. ಆಗ ವಿಚಿತ್ರ ಪ್ರಶ್ನೆಗಳೂ ಸಮಸ್ಯೆ ಗಳೂ ವಿವಾದಗಳೂ ಏಳುವುವು. ಕಲೆಯ ನೇಮ ರೀತಿಗಳಿಗೆ ಒಳಪಟ್ಟು ಜೀವನ ದರ್ಶನವನ್ನು ತೋರಿಸುವ ಬದಲಾಗಿ ಕಲೆಗಾರನು ಅದರಲ್ಲಿ ಕೊಳೆ, ವಿಷ ತುಂಬು ವಾಗ, ಅಥವಾ ತನ್ನ ಚಪಲತೆಗಳನ್ನು ಪ್ರಪಂಚದಮೇಲೆ ಪರೀಕ್ಷಣೆಗಾಗಿ ಈ ರೀತಿ ಕಳಿಸುವೆನೆಂದರೆ, ಕಲೆಗೆ ಸಲ್ಲದ ಮಾರ್ಗಗಳನ್ನೂ ರಾಕ್ಷಸ ನಿಪುಣತೆಗಳನ್ನೂ ಮೆಚ್ಚಿರೆಂದು ಒತ್ತಾಯಪಡಿಸುವಾಗ, ಅದು ಬರಿಯ ಕಲೆಯಾಗದು. ಅದು ಕಲೆಯ ಹೆಸರಲ್ಲಿ ಮಾಡುವ ಬೇರೆ ಕೆಲಸ, ತೋರಿಸುವ ಅಸಭ್ಯತೆ, ಅಸಮಾಜಿಕ ಅಹಂಕಾರ, ಅಥವಾ ಬೇರೊಂದು ಮುಖ್ಯಕೆಲಸಕ್ಕೊ ಪ್ರಚಾರಕಾರ್ಯಕ್ಕೊ ಕಲೆಯನ್ನು ಉಪ ಯೋಗಿಸುವ ವೃತ್ತಿ. ಇದಕ್ಕೆ ಬೇಕಾದಷ್ಟು ಅವಕಾಶವುಂಟು. ಕಲೆಯೊಂದಕ್ಕೇ ಅಲ್ಲ ಈ ಗತಿ – ಶಾಸ್ತ್ರ ವಿಜ್ಞಾನ ಮತ ಕಾರ್ಯಶಕ್ತಿಗಳೆಲ್ಲಕ್ಕೂ ಈ ದೌರ್ಭಾಗ್ಯ ಕಾದಿದೆ. ಅಂಥ ಸಮಯದಲ್ಲಿ ಕಲೆಗೆ ಕಲೆಯಾಗಿ ಸಫಲತೆಯಿಲ್ಲವಾದ್ದರಿಂದ ವಿಮರ್ಶೆಯೂ ಸ್ವೀಕಾರವೂ ಬೇರೆ ಬಗೆಯಾಗುವುವು, ಮಿಶ್ರವಾಗುವುವು.

ವೇದಾಂತ, ಮತ, ಶಾಸ್ತ್ರ, ವಿಜ್ಞಾನ, ಇವು ಹೇಗೆ ಆತ್ಮಸಾಧನೆಗೆ ಸ್ವತಂತ್ರ ಮಾರ್ಗಗಳೆಂದು ಹೇಳುವರೊ ಕಲೆಯದೂ ಅಂಥವೇ ಸ್ವತಂತ್ರಮಾರ್ಗ. ಅವುಗಳಿಗೆ ಒದಗುವ ಮನಸ್ಸಿನ ಶಕ್ತಿ ಹೇಗೆ ವಿಶೇಷವೊ, ಕಲೆಯ ಜೀವವಾದ ಭಾವಾವೇಶ ಕಲ್ಪನಾಶಕ್ತಿಗಳೂ ಹಾಗೆಯೇ ಸ್ವಾಯತ್ತಸಿದ್ಧಿಯುಳ್ಳವು. ಕಲ್ಲನ್ನು ಕರಗಿಸಿ

ನಿಷ್ಠುರವನ್ನು ಮೃದುಮಾಡುವ ಶಕ್ತಿಯಲ್ಲಿ, ಪರಮಶಿವದ ಕಡೆಗೆ ನೇರವಾಗಿ ಬದುಕನ್ನು ಒಯ್ಯುವುದರಲ್ಲಿ ಇತರ ಯಾವ ಮಾರ್ಗಕ್ಕೂ ಅದು ಕಡಮೆಯಲ್ಲ. ಒಂದು ಬಗೆಯಲ್ಲಿ ಮೇಲೇ ಎನ್ನಬೇಕು. ಅದರ ಮಾರ್ಗ ಮನಸ್ಸನ್ನು ಮೋಹಿಸಿ ಒಲಿಸಿಕೊಳ್ಳುವ ಮಾರ್ಗ. ಮಾನವನ ಲೋಪದೋಷ ಕಷ್ಟ ದೌರ್ಬಲ್ಯಗಳಿಗೆ ಕರುಣೆಯನ್ನೂ ಕೆಳೆಯ ಸೌಹಾರ್ದವನ್ನೂ ಹಾಯಿಸಿ ಕಾಪಾಡುವ ಒಂದೇ ಮಾರ್ಗ. ಸೋತುಬಿದ್ದವರಿಗೆ ಧೈರ್ಯ ಊಡುವ ಮಾರ್ಗ. ಶಾಸ್ತ್ರ ವಿಜ್ಞಾನ ವೇದಾಂತ ಗಳಲ್ಲಿ ಅನುಕಂಪೆ ಕರುಣೆಗಳನ್ನು ಎಲ್ಲಿಂದ ತರಬೇಕು. ಅಲ್ಲಿ ಅವನ್ನು ಕೇಳ ಬೇಕು ಯಾರು? ಮಾನವತೆ ಅಲ್ಲಿ ಬಹುಭಾಗ ತಬ್ಬಲಿ; ಅಯುಕ್ತ.

ಇದರಿಂದ ತಿಳಿದೀತು, ಕಲೆ ಅನಗತ್ಯವಲ್ಲವೆಂದು ನಿಷ್ಪ್ರಯೋಜನವಲ್ಲವೆಂದು. ಹಾಗೆ ನೋಡಿದರೆ ಯಾವುದು ತಾನೇ ದಿನಚರಿಯ ಜೀವನಕ್ಕೆ ಆವಶ್ಯಕ? ಕೈಯೆ? ಕಾಲೆ? ಕಿವಿಯೆ? ವಿದ್ಯೆಯೆ? ಬುದ್ಧಿಯೆ? ನಯವೆ? ಧರ್ಮವೆ? ಪೌರುಷವೆ? ಪ್ರೇಮವೆ? ನ್ಯಾಯಗಾಂಭೀರ್ಯಗಳೆ? ಆತ್ಮ ಅನಾತ್ಮ ವಿವೇಕವೆ? ಇವು ಯಾವು ವಿಲ್ಲದಿದ್ದರೂ ಜಗತ್ತಿನ ಬದುಕು ನಿಶ್ಚಿಂತವಾಗಿ ವಿಜೃಂಭಣೆಯಿಂದ ಸಾಗುತ್ತಿಲ್ಲವೆ? ಇವೆಲ್ಲ ಅನಾವಶ್ಯಕವಾದರೆ ಕಲೆಯೂ ಅನಗತ್ಯ. ಮನುಷ್ಯರ ಏಳಿಗೆಯ ಕುರು ಹಾಗಿ ಸಂಸ್ಕೃತಿಯ ಒರೆಯಾಗಿ ಅಗ್ರಾಮ್ಯತೆಯ ಸಿದ್ಧಿಯಾಗಿ ಜೀವನದ ಸಫಲತೆ ಯಾಗಿ ಕಾಣಿಸುವ ಕರ್ಮಗಳಲ್ಲಿ ಬೆಲೆಗಳಲ್ಲಿ ಕಲೆ ಒಂದು. ಅದರಿಂದ ಮಾನವನ ಸತ್ವಸಾಹಸವೂ ಸರ್ವಕೀರ್ತಿಗಳೂ ಬದುಕಿ ಉಳಿದಿವೆ. ರಾಜ್ಯ ಸಾಮ್ರಾಜ್ಯಗಳು ಉರುಳುವುವು. ರಾಜರು, ವೀರರು, ಸಾಹುಕಾರರು, ದರ್ಪದಿಂದ ಪ್ರಪಂಚವನ್ನು ತುಳಿದು ಆಳುವವರು, ಅಧಿಕಾರದ ಮದದಲ್ಲಿ ಜನರ ಅದೃಷ್ಟಗಳನ್ನು ಅಂಗೈ ಹಿಡಿಯಲ್ಲಿ ಮುರಿದು ಬೆಳೆಬಾಳನ್ನು ನಾಶಮಾಡಿ ಮೆರೆಯುವ ಧೂರ್ತರು ಹೆಸರಿಲ್ಲದೆ ಅಳಿಯುವರು. ಅವರ ಬದುಕು ಒಂದು ಗಳಿಗೆಯ ಉಸಿರು; ನೀರ್ಗುಳ್ಳೆ. ಉಳಿವುದು ಕಲೆ. ಕಲೆ ಉಳಿಸಿದರೆ ನೆನಪು ಅಮೃತವಾಯಿತು. ಎಲ್ಲ ಕಾಲಗಳ ಸೌಭಾಗ್ಯ ವಾಗಿ ಸಂತಸವಾಗಿ ನಿಂತಿತು. ಇಲ್ಲವಾದರೆ ಉಳಿಸಬಲ್ಲವರು ಯಾರು? ಮುನಿದುಂಬ ಜವಂಗಂಮಾಯ್ ಎನಲ್ ಅಣ್ಮುವರಿಲ್ಲ. ಶಾಸ್ತ್ರ ಅಥವಾ ವೇದಾಂತದ ವಿಷಯವನ್ನು ಬಲ್ಲವರು ನಾಲ್ಕುಮಾತಿನಲ್ಲಿ ತಿಳಿಸಿ ಅದರ ಸಾರವನ್ನು ನಾವು ಗ್ರಹಿಸುವಂತೆ ಮಾಡಿಕೊಡಬಹುದು. ಬಾದಾಮಿಗುಹೆಯ ಅಥವಾ ನಂದಲಾಲವಸುಗಳ ಮಹಿಷಾಸುರಮರ್ದಿನಿಯನ್ನೂ ಬ್ಲೇಕಿನ ಪತಿತ ದೇವತೆಗಳನ್ನೂ ಮೇಘಸಂದೇಶದ ಮಂದಾಕ್ರಾಂತಗಳ ವೈಭವವನ್ನೂ ಬೇಠೊವನ್ ಬಾಖ್ ತ್ಯಾಗರಾಜ ಜಯದೇವ ಇವರ ನಾದಮೇಳಗಳನ್ನೂ ಉದಯಶಂಕರರ ನರ್ತನವನ್ನೂ ಜಕ್ಕಣಶಿಲ್ಪವನ್ನೂ ಎದುರಿಗೆ ನಿಂತೇ ಅನುಭವಿಸಬೇಕು. ಆ ವಿಷಯ ತಿಳಿದರೆ, ವರ್ಣನೆ ಕೇಳಿದರೆ ಸಾಲದು. ಇನ್ನೊಬ್ಬರ ಪ್ರಶಂಸನೆ ಪ್ರತ್ಯಾಮ್ನಾಯವಾಗದು. ಸಾಗರವನ್ನೇ ಕಂಡಹೊರತು, ಪರ್ವತ ಶೃಂಗಗಳ ಮಹಾಪಂಗ್ತಿಗಳನ್ನೇ ಕಣ್ಣಾರೆ ನೋಡಿದ ಹೊರತು ಅವುಗಳ ಸ್ವರೂಪ ಹೇಗೆ ಗೊತ್ತಾಗದೋ, ಅನುಭವ ಮನಸ್ಸಿಗೆ ಇಳಿಯದೋ ಹಾಗೆ ಉತ್ತಮ ಕಲೆಯ ಸ್ವರೂಪ. ಮತ್ತು, ಅದರ ಎದುರಿಗೆ ನಿಂತಾಗ ಹೊರಗಿನ ಪ್ರಪಂಚ ಮೂಲೆಗೊತ್ತಿತು. ಅದರ ಮುಂದೆ ವಸ್ತು ಜಗತ್ತು

ಅಸತ್ಯ. ಅದು ಮಾತ್ರ ನಮ್ಮದು. ಅಥವಾ, ನಾವು ಅದಕ್ಕೆ ಸೇರಿ. ಅಲ್ಲಿ ತೋರುವ ಸನ್ನಿವೇಶ, ರೂಪ ರೇಖೆ, ನಾದ ನಯ, ಕಥೆ ಧ್ವನಿ, ಕಾವ್ಯ ಸೊಂಪು, ಭಾವ ಭಂಗಿ, ಧಿಮ್ಮಿತ—ಇವು ನಮ್ಮಮೇಲೆ ಏಕಾಧಿಪತ್ಯ ಮಾಡುತ್ತವೆ. ಅಲ್ಲಿನ ದರ್ಶನವೇ ದರ್ಶನ. ಉಳಿದುವೆಲ್ಲ ಸಲ್ಲ. ಉತ್ತಮವಾದ ಕಲೆಯೆದುರು ಎಲ್ಲ ಒರಟುತನಗಳೂ ಬಿಗುಮಾನಗಳೂ ಸಂಯಮಗಳೂ ಮುರಿದುಬೀಳುವುವು. ಅದಕ್ಕೆ ಗಮನ ಕೊಡದೆ ಇರವಿಲ್ಲ, ಗತಿಯಿಲ್ಲ. ಅದಕ್ಕೆ ಸೋತು ಕರಗಬಲ್ಲೆವಾದರೆಯೇ ಸಂಸ್ಕೃತಿ. ಅಲ್ಲಿ ಕಲೆಗಾರ, ಕಲೆ, ನಾವು ಒಂದೇ ಉಸಿರಿನ ವ್ಯಕ್ತಿಗಳು.

ಇನ್ನು ಕಲೆಯ ಗುರಿ ಯಾವುದೆಂಬ ಪ್ರಶ್ನೆಗೆ ಬೇರೆ ಉತ್ತರವಾವುದು? ಎಲೆಯ ಗುರಿ ಉತ್ತಮವಾದ ಎಲೆಯಾಗುವುದು; ಹಣ್ಣಿನದು ಸವಿಯಾದ ತಿರುಳುಳ್ಳ ಉತ್ತಮ ಹಣ್ಣಾಗುವುದು; ಹೂಪಕ್ಷಿ ಹೂ ಪಕ್ಷಿಗಳಾಗಿ ಉಳಿದು ಭಗವಂತನ ಶ್ರೇಷ್ಠ ಕೃತಿಗಳಲ್ಲಿ ತಮ್ಮ ವ್ಯಕ್ತಿತ್ವವನ್ನು ತೋರಿಸುತ್ತ ಬೆಳಗುವುದು; ವಿಜ್ಞಾನಿಯ ಗುರಿ, ಕಮ್ಮಾರನ ಗುರಿ ಉತ್ತಮ ವಿಜ್ಞಾನಿಯೂ ಕಮ್ಮಾರನೂ ಆಗುವುದು. ಹಾಗೆಯೇ ಕಲೆಯೂ. ಅದರದರ ಧರ್ಮವನ್ನು ಅದು ಕಾಪಾಡಿಕೊಂಡು ಬದುಕಬೇಕು. ತನ್ನ ವಿಶೇಷತೆಯನ್ನು ಉಳಿಸಿಕೊಂಡು ಸೃಷ್ಟಿಯ ವಿವಿಧ ಸಂಪತ್ತಿಯ ಪ್ರಮಾಣವಾಗಿ ಸಫಲವಾಗಬೇಕು. ಕಲೆ ಉತ್ತಮವಾದ ಕಲೆಯಾಗಿರುವವರೆಗೂ ಚಿಂತೆಯಿಲ್ಲ; ಪ್ರಾಮಾಣಿಕವಾಗಿರುವಾಗ ಅದು ಜೀವನದ ಚಿತ್ರವೂ ಆಗುವುದು; ಆತ್ಮದ ನಿವೇದನವೂ ಆಗುವುದು. ಅದರ ಸಂಪರ್ಕ ಉಂಟಾದವರ ಮನಸ್ಸು ತೆರೆಯುವುದು, ಒಮ್ಮೆಗೇ ಬಿಡುಗಡೆಗೊಳ್ಳುವುದು. ಹೊಸ ತಿಳಿವೊಂದು ಬರುವುದು. ಅದರ ಪ್ರಭಾವಕ್ಕೆ ಒಳಪಡಬಲ್ಲ ಚೇತನಗಳಿಗೆ ಮೃದುತೆ ಔದಾರ್ಯ ಶಕ್ತಿ ಸೌಭಾಗ್ಯಗಳ ಹದ ಉಂಟಾಗಿ ಅದು ಜಗತ್ಕಲ್ಯಾಣಸಾಧನವಾಗುವುದು.

**ವಿ. ಸೀತಾರಾಮಯ್ಯ**

# ಭಾಷಾಂತರ ಕಲೆ

ಚೆಲುವನ್ನು ತಾನು ಕಂಡು ಪೆರವರಿಗೆ ತೋರಿಸಿ ಸಂತೋಷ ಹೊಂದುವ ಸಂಭ್ರಮವು ಎಂದಿನಿಂದಲೂ ಮನುಷ್ಯನ ಸ್ವಭಾವವಾಗಿದೆ. ಸೌಂದರ್ಯದರ್ಶನವು ಯಾವಾಗಲೂ ಸ್ವಾನುಭವ, ಅನ್ಯನಿವೇದನ—ಇವುಗಳಿಂದ ಉಂಟಾಗುವ ರಸಾನಂದ ದಲ್ಲಿಯೇ ತನ್ನ ನನೆಕೊನೆಯನ್ನು ಕಾಣುತ್ತದೆ. ಎಲ್ಲ ಬಗೆಯ ಕಲೆಗಳಿಗೂ ಇದು ಅನ್ವಯಿಸುವ ಮಾತು. ವಾಙ್ಮಯದ ಒಂದು ವಿಭಾಗವಾದ ಭಾಷಾಂತರ ಕಲೆಗೆ ಇದು ಹೆಚ್ಚಾಗಿ ಅನ್ವಯಿಸುತ್ತದೆ. ಒಂದು ಭಾಷೆಯ ವಿಚಾರ ಸಂಪತ್ತಿಯನ್ನೂ ರಸಾನುಭವವನ್ನೂ ಇನ್ನೊಂದು ಭಾಷೆಯಲ್ಲಿ ನಿವೇದಿಸಬೇಕೆಂಬ ಸಹಜಸ್ಫುರಣವೇ ಭಾಷಾಂತರ ಕಲೆಯ ಪ್ರೇರಕ ಶಕ್ತಿ. ‘ಒಬ್ಬನಾಗಿ ಉಂಡ ಊಟ ಹಬ್ಬವಲ್ಲ; ಒಬ್ಬನೇ ಸವಿದ ರಸ ರುಚಿಯಲ್ಲ’ ಎಂಬ ಹೇಳಿಕೆಯಲ್ಲಿ ಭಾಷಾಂತರಕಾರನ ಮೂಲ ಪ್ರೇರಣೆಯನ್ನು ಸೂಚಿಸುವ ಸಾದೃಶ್ಯವಿದೆ.

ಭಾಷಾಂತರಕಾರನಿಗೆ ಬೇರೆ ಪ್ರೇರಣೆಗಳೂ ಉಂಟು. ಅವನ್ನು ವೈಯಕ್ತಿಕ ಹಾಗೂ ಸಾಮಾಜಿಕ ಎಂದು ಎರಡು ಪ್ರಕಾರವಾಗಿ ತಿಳಿಯಬಹುದು. ವೈಯಕ್ತಿಕ ವಾಗಿ ಹೊಸ ಬರಹಗಾರನು ತನ್ನ ಸಾಹಿತ್ಯ ಶಕ್ತಿಗಳನ್ನು ಪರೀಕ್ಷಿಸಿಕೊಂಡು ಶೈಲಿ ಯನ್ನು ಹದಗೊಳಿಸುವುದಕ್ಕಾಗಿ ಮೊದಮೊದಲು ಭಾಷಾಂತರಕಾರನಾಗುತ್ತಾನೆ. ಇದರಿಂದ ಭಾಷಾಂತರವು ಅಭ್ಯಾಸಕವಿತೆಯಂತೆ ಆತ್ಮಪ್ರತ್ಯಯದ ಒಂದು ಉತ್ತಮ ಸಾಧನವಾಗುತ್ತದೆ. ಮುಂದೆ ಸಹ ಭಾಷಾಂತರಗಳಲ್ಲಿ ಅವನು ತನ್ನ ಕಲಾಶಕ್ತಿ ಯನ್ನು ಸಾಣೆಹಿಡಿದು ನುಣುಪು ನಯಗಳನ್ನು ತನ್ನ ಬರಹದಲ್ಲಿ ತಂದುಕೊಳ್ಳ ಬಹುದು. ಇನ್ನು ಸ್ವತಂತ್ರ ಲೇಖಕನಾಗುವುದು ತನಗೆ ಸಾಧ್ಯವಿಲ್ಲವೆಂದು ಅರಿತು ಕೊಂಡ ಕಲಾಪ್ರಿಯನು ಸಾಹಿತ್ಯಲೋಕಕ್ಕೆ ತನ್ನ ಕಾಣಿಕೆಗಳನ್ನು ನೀಡಬೇಕೆಂಬ ಅತ್ಯಾಸೆಯಿಂದ ಭಾಷಾಂತರಕ್ಕೆ ಕೈಯಿಕ್ಕುತ್ತಾನೆ. ಇವನನ್ನು ಕೇವಲ ಭಾಷಾಂತರ ಕಾರನೆಂದು ಕರೆಯಬಹುದು. ಸಾಮಾಜಿಕವಾಗಿ ನೋಡಿದರೆ ಒಂದೊಂದು ಕಾಲ ದೇಶದ ವಾಙ್ಮಯ ಪರಿಸ್ಥಿತಿಯು ಭಾಷಾಂತರಗಳ ಹಿರಿಯಾಸೆಯನ್ನು ಹುಟ್ಟಿಸುತ್ತದೆ. ಯಾವೊಂದು ದೇಶದ ವಾಙ್ಮಯವು ತೀರ ಅವನತಿಯ ಇಲ್ಲವೆ ತೀರ ಉನ್ನತಿಯ ಸ್ಥಿತಿಯನ್ನು ಮುಟ್ಟಿದ ಕಾಲಕ್ಕೆ ಭಾಷಾಂತರ ಕೃತಿಗಳ ಹಸಿವು ಹೆಚ್ಚುತ್ತದೆ. ಅದರ ಅವನತಿಯ ಕಾಲದಲ್ಲಿ ಮುಂದುವರಿದ ವಾಙ್ಮಯದಿಂದ ಅದು ಸ್ಫೂರ್ತಿಪಡೆಯು ವುದಲ್ಲದೆ, ಅನೇಕ ಭಾಷಾಂತರಗಳಿಂದ ತನ್ನ ಭಂಡಾರವನ್ನು ತುಂಬಿಕೊಳ್ಳುತ್ತದೆ. ಪ್ರತಿಯೊಂದು ವಾಙ್ಮಯದ ಆರಂಭಾವಸ್ಥೆಯಲ್ಲಿಯೂ ಈ ಪ್ರವೃತ್ತಿಯನ್ನು ಕಾಣು ತ್ತೇವೆ. ಹಿಂದುಸ್ಥಾನದ ಎಲ್ಲ ದೇಶೀಯ ಭಾಷೆಗಳು ತಮಗಿಂತ ಮೊದಲು ಹುಟ್ಟಿ ಬೆಳೆದು ಪುಷ್ಟವಾದ ಸಂಸ್ಕೃತ ಸಾಹಿತ್ಯದಿಂದ ಪರಿವರ್ತನೆಗಳನ್ನು ಮಾಡಿ ತಮ್ಮ ಸಾಹಿತ್ಯಗಳನ್ನು ಬೆಳೆಸಿಕೊಂಡಿವೆ. ಇಂದಿನ ಪುನರುಜ್ಜೀವನ ಕಾಲದಲ್ಲಿ ಇಂಗ್ಲಿಷ್ ಭಾಷೆಯು ಸಂಸ್ಕೃತದ ಸ್ಥಾನವನ್ನು ಬಹುಮಟ್ಟಿಗೆ ಆಕ್ರಮಿಸಿದೆ. ಬಹುಶಃ ಎಲ್ಲ ಪ್ರಾಂತೀಯ ಭಾಷೆಗಳು ತಮ್ಮ ಹೊಸ ಯುಗದ ತೊದಲುನುಡಿಯನ್ನು

ಪರಿವರ್ತನೆಗಳಲ್ಲಿ ಮೂಡಿಸಿರುತ್ತವೆ. ಇಂದಿಗೆ ಸಹ ನಮ್ಮಲ್ಲಿ ಉಜ್ವಲವಾದ ಹಾಗೂ ಸರ್ವ ವಿಧವಾದ ಸಾಹಿತ್ಯವು ಉಂಟಾಗಬೇಕಾದರೆ ಅದಕ್ಕೆ ಮೊದಲು ಜಗತ್ತಿನ ವಾಙ್ಮಯದಿಂದ ಭಾಷಾಂತರಗಳು ಹೆಚ್ಚು ಹೆಚ್ಚಾಗಬೇಕೆಂದು ಬಲ್ಲವರು ಅರಿತಿದ್ದಾರೆ. 'ಸ್ವತಂತ್ರಕಾವ್ಯದ ಪೈರು ಹುಟ್ಟುವುದಕ್ಕೆ ಮೊದಲು ನಡೆದಿರಬೇಕಾದ ಉಳುಮೆಯ ಕೆಲಸವೇ ತರ್ಜುಮೆ' ಎಂದು ಶ್ರೀಮಾನ್ ಡಿ. ವಿ. ಗುಂಡಪ್ಪನವರು ತಮ್ಮ ಮ್ಯಾಕ್‌ಬೆತ್ ನಾಟಕದ ಪೀಠಿಕೆಯಲ್ಲಿ ಹೇಳಿದ್ದನ್ನು ಇಲ್ಲಿ ನೆನೆಯಬಹುದು. ಇಂಗ್ಲಂಡ್ ದೇಶದಲ್ಲಿ ಎಲಿಜಬೆಥ್ ರಾಣಿಯ ಕಾಲಕ್ಕೆ ಉಜ್ವಲವಾದ ಸ್ವತಂತ್ರ ವಾಙ್ಮಯದೊಡನೆ ಹೇರಳವಾದ ಭಾಷಾಂತರಗಳು ಗ್ರೀಕ್, ಲ್ಯಾಟಿನ್ ಭಾಷೆಗಳಿಂದ ಇಂಗ್ಲಿಷ್ ಸಾಹಿತ್ಯಕ್ಕೆ ಲಭಿಸಿದವು. ಅಂದಿನ ವಾಚಕವರ್ಗಕ್ಕೆ ಆ ಭಾಷಾಂತರ ಗ್ರಂಥಗಳಲ್ಲಿ ಸಾಹಿತ್ಯದ ಹೊಸ ಹೂಳಿಟ್ಟ ನಿಧಿಯು ದೊರೆತಂತಾಯಿತು. ಈ ಕಾರ್ಯ ದಲ್ಲಿ ಹ್ಯಾಲಂಡ್, ಚ್ಯಾಪ್‌ಮನ್ ಮೊದಲಾದ ಭಾಷಾಂತರಕಾರರು ಪ್ರಮುಖ ರಾಗಿದ್ದರು. ಒಂದು ದೇಶದ ಸಾಹಿತ್ಯವು ತೀರ ಉನ್ನತಿಯನ್ನು ಹೊಂದಿದ ಕಾಲದಲ್ಲಿ ಜನಾಭಿರುಚಿ ಅದ್ಭುತವಾಗಿ ಬೆಳೆದಿರುತ್ತದೆ. ಜಗತ್ತಿನ ಎಲ್ಲ ಭಾಗಗಳ ಹೊಸ ಹೊಸ ಕೃತಿಗಳನ್ನು ಓದಿ ತಿಳಿಯಬೇಕೆಂಬ ಕುತೂಹಲವು ಹೆಚ್ಚುತ್ತದೆ. ಇಂಥ ಸ್ಥಿತಿ ಯಲ್ಲಿಯೂ ಭಾಷಾಂತರ ಗ್ರಂಥಗಳ ಸುಗ್ಗಿಯನ್ನು ನಾವು ನೋಡಬಹುದು. ಇಂದಿನ ಇಂಗ್ಲಿಷ್ ಸಾಹಿತ್ಯದ ಉದಾಹರಣೆಯನ್ನು ಲಕ್ಷಿಸಿದರೆ ಸ್ವತಂತ್ರ ಗ್ರಂಥಗಳ ಜೊತೆಗೆ ಅದೆಷ್ಟೋ ಭಾಷಾಂತರ ಗ್ರಂಥಗಳು ಪ್ರತಿ ವರ್ಷವೂ ಪ್ರಕಟವಾಗುತ್ತಲಿವೆ, ಆ ಸಾಹಿತ್ಯದ ವಿಸ್ತಾರವನ್ನೂ ಉನ್ನತಿಯನ್ನೂ ಸಾರುತ್ತಲಿವೆ ಎಂಬುದು ನಮ್ಮ ನಿದರ್ಶನಕ್ಕೆ ಬರುತ್ತದೆ. ಹೀಗೆ ಭಾಷಾಂತರಕಾರನಲ್ಲಿರುವ ಮೂಲಪ್ರೇರಣೆಯು ವೈಯಕ್ತಿಕ ಹಾಗೂ ಸಾಮಾಜಿಕವಾದ ಬೇರೆ ಪ್ರೇರಣೆಗಳಿಂದ ಕೂಡಿಕೊಂಡು ಅವನ ಮನೋಭೂಮಿಕೆಯನ್ನು ರೂಪಗೊಳಿಸುತ್ತದೆ. ಅಂತೇ ಬೇರೆ ಬೇರೆ ಕಾಲದಲ್ಲಿ ಬೇರೆ ಬೇರೆ ಭಾಷಾಂತರಕಾರರ ಮನೋಭೂಮಿಕೆ ಬೇರೆ ಬೇರೆ ಆಗಿರುವುದು ಸಹಜವಾಗಿಯೇ ಇದೆ.

ಭಾಷಾಂತರಕಾರನು ಸ್ವತಂತ್ರ ಗ್ರಂಥಕಾರನಷ್ಟು ಹಿರಿಯನಲ್ಲವೆಂಬುದನ್ನು ಎಲ್ಲರೂ ಒಪ್ಪುತ್ತಾರೆ. ಆದರೆ ಅವನ ವಿಷಯವಾದ ರಾಗದ್ವೇಷಗಳಿಂದ ಒಮ್ಮೊಮ್ಮೆ ವಿಪರೀತವಾದ ಅಭಿಪ್ರಾಯಗಳು ಹುಟ್ಟುತ್ತವೆ. ಅನೇಕ ಪ್ರಸಿದ್ಧ ಸಾಹಿತಿಗಳು ಭಾಷಾಂತರ ಗ್ರಂಥಗಳನ್ನು ಮೊದಲು ರಚಿಸಿ ಆಮೇಲೆ ಸ್ವತಂತ್ರ ಗ್ರಂಥಗಳನ್ನು ಬರೆದರೆಂಬ ಕಾರಣದಿಂದ ಪ್ರತಿಯೊಬ್ಬ ಉದಯೋನ್ಮುಖ ಸಾಹಿತಿಯು ಮೊಟ್ಟಮೊದಲು ಭಾಷಾಂತರಗಳನ್ನೇ ಮಾಡಬೇಕೆಂದು ಒಂದು ಅಭಿಪ್ರಾಯ. ಎಂದರೆ ಭಾಷಾಂತರ ಗ್ರಂಥಗಳ ಮಹತ್ವವನ್ನು ಅತಿರೇಕಕ್ಕೆ ಒಯ್ದು ಹೇಗೆ ಒಂದು ಶಾಸನವನ್ನು ಮಾಡಬಹುದೆಂಬುದನ್ನು ಇಲ್ಲಿ ಕಾಣಬಹುದು. ಇದಕ್ಕೆ ವಿರುದ್ಧವಾದ ಇನ್ನೊಂದು ಅಭಿಪ್ರಾಯವೆಂದರೆ ಭಾಷಾಂತರವು ಕೀಳಾದ ಮತ್ತು ಸುಲಭವಾದ ಕೆಲಸ; ಯಾರು ಬೇಕಾದರೂ ಭಾಷಾಂತರವನ್ನು ಮಾಡಬಹುದು. ಎಂದಮೇಲೆ ಭಾಷಾಂತರಕಾರರಿಗೆ ಸಾಹಿತ್ಯದಲ್ಲಿ ಮನ್ನಣೆಯ ಸ್ಥಾನವಿಲ್ಲ. ಈ ಅಭಿಪ್ರಾಯವು ಪ್ರಚಲಿತವಾಗಿ ಇರುವವರೆಗೆ ಯಾವ ಸಾಹಿತ್ಯವೂ ಮುಂದಡಿಯಿಡಲಾರದು.

ಸ್ವತಂತ್ರ ಪ್ರತಿಭೆಯುಳ್ಳವರಾಗಿ ಭಾಷಾಂತರಕಾರರಿಗೆಲ್ಲ ಮುಂದಾಳುಗಳಾದ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರು ಹೇಳಿದ ಕೆಳಗಿನ ಮಾತನ್ನು ಕನ್ನಡಿಗರು ಗಮನಿಸಬೇಕು. "ಭಾಷಾಂತರ ಕೀಳು ಕೆಲಸವಲ್ಲ; ಸುಲಭವಾದ ಕೆಲಸವೂ ಅಲ್ಲ; ನಿರರ್ಥಕವಾದ ಕೆಲಸವೂ ಅಲ್ಲ." ಸ್ವತಂತ್ರ ಕಲಾವಿದನಲ್ಲಿ ಇರಬೇಕಾದ ಪ್ರತಿಭೆ, ತಿಳಿವಳಿಕೆ, ನುಡಿಬಲ್ಮೆ ಮುಂತಾದ ಗುಣಗಳು ಒಳ್ಳೆಯ ಭಾಷಾಂತರ ಕಾರನಲ್ಲಿಯೂ ಇರಬೇಕಾಗುತ್ತದೆ. ಭಾಷಾಂತರಕ್ಕೆ ಎತ್ತಿದ ಗ್ರಂಥವು ವಿಚಾರ ಪ್ರಧಾನವಾಗಿದ್ದರೆ ಪ್ರತಿಭಾಂಶವು ಅಷ್ಟು ಮಟ್ಟಿಗೆ ಆವಶ್ಯಕವಾಗದೆ ಇರಬಹುದು. ಆದರೆ ಎಲ್ಲ ಭಾಷಾಂತರಕಾರರು ಮೂಲಗ್ರಂಥಕಾರನೊಡನೆ ಒಂದಾಗಿ ಅವನ ವ್ಯಕ್ತಿಸ್ವರೂಪವನ್ನು ಪಡಿಮೂಡಿಸುವಂಥ ತಾದಾತ್ಮ್ಯವನ್ನು ಹೊಂದಿರಬೇಕಾಗುತ್ತದೆ. ಈ ತಾದಾತ್ಮ್ಯ, ಸಹೃದಯತೆ, ವಾಙ್ಮಯ ತಪಸ್ಸಿನ ಒಂದು ಸಿದ್ಧಿ. ಈ ಸಿದ್ಧಿಬಲದಿಂದ ಸ್ವತಂತ್ರ ಕೃತಿಗಿಂತಲೂ ಮಿಗಿಲಾದ ಗ್ರಂಥವನ್ನು ಭಾಷಾಂತರ ಕಾರನು ಒಮ್ಮೊಮ್ಮೆ ನಿರ್ಮಿಸಬಲ್ಲನು. ಆದ್ದರಿಂದ ಭಾಷಾಂತರ ಕಲೆಗೂ ಭಾಷಾಂತರಕಾರನಿಗೂ ಪ್ರತಿಯೊಂದು ಸಾಹಿತ್ಯದಲ್ಲಿ ಮೇಲಾದ ಎಡೆಯುಂಟೆ ಎಂಬುದನ್ನು ಮರೆಯಲಾಗದು.

ಭಾಷಾಂತರ ಕಲೆಯ ಜೀವಾಳವೆಂದರೆ ತಾದಾತ್ಮ್ಯ, ಪರಕಾಯ ಪ್ರವೇಶ ದಂತೆ ಪರಹೃದಯ ಪ್ರವೇಶ. ಭಾಷಾಂತರಕಾರನಿಗೆ ಮೂಲಪ್ರೇರಣೆ ನಿವೇದನ ವಾದರೆ ಭಾಷಾಂತರ ಕಲೆಯ ಮೂಲರಹಸ್ಯವೂ ಅದರಲ್ಲಿಯೇ ಅಡಕವಾಗಿದೆ. ನಿವೇದನ ಪದಕ್ಕೆ ತಿಳಿಸುವುದು ಎಂಬ ಅರ್ಥವಿದ್ದಂತೆ ಅರ್ಪಿಸುವುದು, ಒಂದಾಗುವುದು ಎಂಬ ಅರ್ಥವೂ ಇರುತ್ತದೆ. ಮ್ಯಾಥ್ಯೂ ಅರ್ನಾಲ್ಡ್ ಅವರು Union of the translator with the original ಎಂಬಲ್ಲಿ ಇದೇ ತಾದಾತ್ಮ್ಯವನ್ನು ಕುರಿತು ಹೇಳಿದ್ದಾರೆ. ಮೂಲಗ್ರಂಥಕಾರ ಹಾಗೂ ಭಾಷಾಂತರಕಾರ ಇಬ್ಬರೂ ಭಿನ್ನವ್ಯಕ್ತಿಗಳು. ಅವರವರ ಜೀವನಾನುಭವ, ತತ್ವದೃಷ್ಟಿ, ಶೈಲಿಗುಣ ಇವೆಲ್ಲ ಸ್ವಾಭಾವಿಕವಾಗಿ ಒಂದೆ ಆಗಿರುವ ಸಂಭವ ಕಡಿಮೆ. ಅಂತೇ ತಾದಾತ್ಮ್ಯವು ಸುಲಭವಲ್ಲ. ಭಾಷಾಂತರಕಾರನ ಸಹೃದಯತೆಯು ಎಷ್ಟು ಹೆಚ್ಚುವುದೋ ಅಷ್ಟು ಅವನ ತಾದಾತ್ಮ್ಯವು ಸಫಲವಾಗುತ್ತದೆ. ಸಾಮಾನ್ಯವಾಗಿ ತನಗೆ ಸರಿಹೋಗುವ ಕೃತಿಯನ್ನೆ ಭಾಷಾಂತರಕಾರನು ಭಾಷಾಂತರಕ್ಕೆಂದು ಆರಿಸುವುದುಂಟು. ಆದರೆ ತನ್ನ ವೃತ್ತಿಗೆ ಸರಿಹೋಗದಿದ್ದರೂ ರಂಗಭೂಮಿಯಮೇಲೆ ಬಡವನು ಅರಸನ ವೇಷಕಟ್ಟಿ ಯಶಸ್ವಿಯಾಗುವಂತೆ ಭಾಷಾಂತರಕಾರನು ಯಾವಾಗ ವೇಷಾಂತರ ವಾಗುವನೋ ಆಗ ಅವನ ತಾದಾತ್ಮ್ಯ ಸಿದ್ಧಿಯನ್ನು ಅರಿಯುತ್ತೇವೆ. ಈ ತಾದಾತ್ಮ್ಯದ ಮುಖ್ಯ ಪರಿಣಾಮವೆಂದರೆ ಭಾಷಾಂತರವು ಬರೀ ಭಾಷಾಂತರ ಅಂದರೆ ಬೇರೆ ಭಾಷೆ, ಅಥವಾ ಬೇರೆ ಮಾತು ಆಗುವದಿಲ್ಲ; ಅದು ಮೂಲಕೃತಿಯ ಸಾರಸರ್ವಸ್ವವನ್ನು ಇನ್ನೊಂದು ಭಾಷೆಯಲ್ಲಿ ನಿರೂಪಿಸುವ ಸಜೀವ ಕೃತಿಯಾಗುತ್ತದೆ. ಯಾವುದೇ ಕೃತಿಯಲ್ಲಿ ದೇಹ-ಜೀವಗಳಂತೆ ಅರ್ಥ-ಶಬ್ದ, ವಸ್ತು-ರೀತಿ ಇವು ಅಗಲದ ಹಾಗೆ ಬೆರೆತುಕೊಂಡಿರುತ್ತವೆ. ಇವುಗಳ ಬೆಸುಗೆ ಭಾಷಾಂತರದಲ್ಲಿ ಸಾಧ್ಯವಾದ ಮಟ್ಟಿಗೆ ಕೆಡದಂತೆ ನೋಡಿಕೊಳ್ಳುವುದೇ ಭಾಷಾಂತರ ಕಲೆಯ ಗುಟ್ಟು.

ಇದು ತಾದಾತ್ಮ್ಯ ಸಾಧನೆಯಿಂದ ಮಾತ್ರ ಫಲಿಸತಕ್ಕ ವಿಷಯ. ಮೂಲಕೃತಿಯ ಕಥಾವಸ್ತುವನ್ನು ಯಾವ ರೀತಿಯಲ್ಲಾಗಲಿ ಪರಿವರ್ತಿಸಿದರೆ ಅದು ಮೂಲವನ್ನು ಪ್ರತಿಬಿಂಬಿಸಲು ಸಾಕೆಂದು ತಿಳಿಯುವುದು ತಪ್ಪು. ವಸ್ತು–ರೀತಿಗಳನ್ನು ಹೀಗೆ ಬೇರ್ಪಡಿಸಲು ಬಾರದು. ಮ್ಯಾಥ್ಯೂ ಅರ್ನಾಲ್ಡ್ ಅವರು ಹೇಳಿದಂತೆ– ‘The peculiar effect of a poet resides in his manner and movement, not in his words taken separately’. ಕೇವಲ ವಸ್ತುವಿಗಿಂತ ಒಬ್ಬ ಕವಿಯ ವೈಶಿಷ್ಟ್ಯವು ಅವನ ರೀತಿಯಲ್ಲಿಯೂ ಗತಿಯಲ್ಲಿಯೂ ಇರುತ್ತದೆ, ಬಿಡಿಯಾದ ಅವನ ಶಬ್ದಗಳಲ್ಲಿ ಅಲ್ಲ. ಎಂದಮೇಲೆ ಒಳ್ಳೆಯ ಭಾಷಾಂತರವು ಮೂಲಗ್ರಂಥದ ಶಾಬ್ದಿಕ ಪರಿವರ್ತನವಾಗಲಿ ಕಥಾಸಾರ ರೂಪವಾಗಲಿ ಇದ್ದರೆ ನಡೆಯದು. ಮೂಲ ಗ್ರಂಥಕಾರನೇ ಬೇರೊಂದು ಭಾಷೆಯಲ್ಲಿ ತಾನಾಗಿ ಬರೆದಿದ್ದರೆ ಹೇಗೆ ಬರೆಯ ಬಹುದಾಗಿತ್ತೋ ಹಾಗೆ ಅದು ಸಹಜಸುಂದರವಾದ ಮೂಲಾನುವಾದವಾಗಬೇಕು.

ಭಾಷಾಂತರಕಾರನನ್ನು ಇದಿರಿಸುವ ಕೆಲವು ಸಮಸ್ಯೆಗಳು ಇರುತ್ತವೆ. ಅವು ಗಳನ್ನು ಬಿಡಿಸಲು ಸಾಧ್ಯವಾಗದೆ ಹೋದಾಗ ‘ಭಾಷಾಂತರಕಾರರು ಕೊಲೆಗಾರರು’ ಅಥವಾ ‘ತರ್ಜುಮೆಕಾರನು ವಿಶ್ವಾಸಘಾತುಕನು’ ಎಂಬ ಅಪವಾದವನ್ನು ಅವನು ಹೊರಬೇಕಾಗುತ್ತದೆ. ಈ ಸಮಸ್ಯೆಗಳಲ್ಲಿ ಮೊದಲನೆಯದು ಕಥಾವಸ್ತು ಹಾಗೂ ವಾತಾವರಣ ಇವುಗಳಿಗೆ ಸಂಬಂಧಪಟ್ಟದ್ದು. ಒಂದು ದೇಶದ, ಪ್ರಾಂತದ ಜೀವನವು ಇನ್ನೊಂದರಿಂದ ವಿಶೇಷವಾಗಿ ಬಾಹ್ಯರೂಪದಲ್ಲಿ ಬೇರೆಯಾಗಿರಬಹುದು. ಒಂದು ಕಡೆ ತೀರ ಪ್ರಚಲಿತವಾದ ರೂಢಿ ನಡತೆಗಳು ಇನ್ನೊಂದು ಕಡೆ ಅಪರಿಚಿತವಾಗಲಿ, ಅಸಾಧುವೆಂದಾಗಲಿ ಇರಬಹುದು. ಇಂಥ ಪರಿಸ್ಥಿತಿಯಲ್ಲಿ ಇದ್ದ ಹಾಗೆ ಮೂಲಕೃತಿ ಯನ್ನು ಭಾಷಾಂತರಿಸುವುದು ಸಾಧ್ಯವೆಂದು ತೋರುವುದಿಲ್ಲ. ಅಂತೇ ಕಥಾವಸ್ತು ವನ್ನೂ ವಾತಾವರಣವನ್ನೂ ಬದಲಿಸಿ ರೂಪಾಂತರಮಾಡುವ ಪ್ರವೃತ್ತಿಯು ಗೆಲ್ಲುತ್ತದೆ. ಆದರೆ ರೂಪಾಂತರದಲ್ಲಿ ಮೂಲದ ಸೊಗಸು ಮೂಡಲಾರದು. ಸೃಷ್ಟಿಯ ಹೂವನ್ನು ನೋಡಿ ಬಣ್ಣದ ಹೂವನ್ನು ಮಾಡಿದಂತೆ ರೂಪಾಂತರವು ಆಗಬಹುದು. ಅದಕ್ಕೆ ಭಾಷಾಂತರದ ಶ್ರೇಯವಿಲ್ಲ, ಸ್ವತಂತ್ರ ಕೃತಿಯ ಕೀರ್ತಿ ಯಿಲ್ಲ. ಸಾಮಾನ್ಯವಾಗಿ ಭಾಷಾಂತರ ಕಲೆಯ ಜೀವಾಳಕ್ಕೆ ಬಾಧೆ ಬರದಂತೆ ಭಾಷಾಂತರಕಾರನು ನಡೆಯಬೇಕಾಗುತ್ತದೆ. ಈ ಮೇರೆಗೆ ಮೂಲಕೃತಿಯ ಕಥಾ ವಸ್ತುವನ್ನೂ ವಾತಾವರಣವನ್ನೂ ಪಲ್ಲಟಗೊಳಿಸುವುದು ಸರಿಯಲ್ಲ. ಕಥಾನಕವು ಒಂದು ಸಮಾಜಕ್ಕೆ ಅಪರಿಚಿತವಾಗಿದ್ದರೆ ಅದರ ಪರಿಚಯ ಮಾಡಿಕೊಡುವುದು ಭಾಷಾಂತರದ ಉದ್ದೇಶವಾಗಬೇಕು. ಅದು ವಿಚಿತ್ರ ಅಥವಾ ಅಸಾಧುವೆಂದಿದ್ದರೆ ಯಾವ ಸಮಾಜವು ಅದನ್ನು ಸ್ವೀಕರಿಸಲು ಸಿದ್ಧವಾಗಿಲ್ಲವೋ ಅಂಥಲ್ಲಿ ನಾಗರಿ ಕತೆಯು ಹೆಚ್ಚುವವರೆಗೆ ಇಂಥ ಭಾಷಾಂತರಗಳನ್ನು ಮಾಡದೆ ಇರಬಹುದು. ಇದರಿಂದ ರೂಪಾಂತರಗಳು ತೀರ ತ್ಯಾಜ್ಯವೆಂದು ನಮ್ಮ ಮತವಲ್ಲ. ಮೂಲದ ಸಮಾಜ ರೂಪವೊಂದನ್ನು ಬದಲಿಸಿ ಸಂವಿಧಾನ, ಪಾತ್ರರಚನೆ, ಮುಂತಾದುವನ್ನು ಇದ್ದಂತೆ ಅನುವಾದಿಸುವ ರೂಪಾಂತರವು ಪರಿಣಾಮಕಾರಕವಾಗುತ್ತದೆಂಬುದು ನಿಜ. ಆದರೆ ಒಳ್ಳೆಯ ರೂಪಾಂತರಕ್ಕಿಂತ ಒಳ್ಳೆಯ ಭಾಷಾಂತರವೇ ಮೂಲ

ಗ್ರಂಥಕ್ಕೆ ನ್ಯಾಯವನ್ನು ಮಾಡಬಲ್ಲುದು. ರೂಪಾಂತರದಲ್ಲಿಯ ಸ್ವತಂತ್ರ ಬುದ್ಧಿ ಕೆಲವು ಸಲ ತನ್ನ ಎಲ್ಲೆ ಮೀರಿ ಮೂಲದ ಹಾಗೂ ಸ್ವಂತ ಅಂಶಗಳಿಂದ ಕೂಡಿ ಕಿಚಡಿಯಾದ ಗ್ರಂಥಗಳನ್ನು ನಿರ್ಮಿಸುತ್ತದೆ. ಅಲ್ಲದೆ ಗ್ರಂಥಕರ್ತನು ಮೂಲದ ಋಣವನ್ನು ಅಲ್ಲಗಳೆದು ಎಲ್ಲ ಕೃತಿ ತನ್ನದೆಂದು ಭಾವಿಸುತ್ತಾನೆ. ಸಾಹಿತ್ಯಪ್ರಪಂಚದಲ್ಲಿ ಇದಕ್ಕಿಂತ ಹೆಚ್ಚಿನ ಭ್ರಾಂತಿಯು ಇನ್ನೊಂದಿಲ್ಲ.

ಭಾಷಾಂತರವನ್ನು ಮಾಡುವಾಗ ಮೂಲಗ್ರಂಥದ ಹೆಸರುಗಳನ್ನೇ ಇಡಬೇಕೇ ಅಥವಾ ಅವಕ್ಕೆ ಪ್ರತಿಹೆಸರುಗಳನ್ನು ಕಲ್ಪಿಸಬೇಕೇ ಎಂಬುದು ಭಾಷಾಂತರಕಾರನ ಇನ್ನೊಂದು ಸಮಸ್ಯೆ. ಅವೇ ಹೆಸರುಗಳನ್ನು ಇಟ್ಟರೆ ಭಾಷಾಂತರದ ಭಾಷೆಯಲ್ಲಿ ಅವುಗಳ ಉಚ್ಚಾರ, ಜೋಡಣೆ ಹೊಂದುವದಿಲ್ಲ. ಅವನ್ನು ಭಾಷಾಂತರಿಸಿದರೆ ಮೂಲದ ಕಥಾನಕಕ್ಕೂ ಹೊಸ ಹೆಸರುಗಳಿಗೂ ವಿಸಂಗತಿ ಹುಟ್ಟಬಹುದು. ಯಥಾವತ್ತಾದ ಭಾಷಾಂತರದಲ್ಲಿ ಮೂಲದ ಕಥೆ ಸಂನಿವೇಶಗಳಿರುವಂತೆ ಮೂಲದ ಹೆಸರುಗಳೇ ಇರಬೇಕು. ಅವುಗಳ ಉಚ್ಚಾರದಲ್ಲಿ ಆಯಾ ಭಾಷೆಗೆ ಅನುಕೂಲ ವಾಗುವಂತೆ ತುಸು ಮಾರ್ಪಡಿಸಿಕೊಳ್ಳಬಹುದು. ಇದರಲ್ಲಿ ಒಂದು ಬಗೆಯ ಕೃತಕತೆ ತೋರಬಹುದಾದರೂ ಪ್ರತಿಹೆಸರುಗಳ ವಿಸಂಗತಿಗಿಂತ ಇದು ಲೇಸು ಎಂದು ಒಪ್ಪ ಬೇಕಾಗುತ್ತದೆ. ರೂಪಾಂತರಗಳಲ್ಲಿ ಮಾತ್ರ ಹೆಸರುಗಳನ್ನು ಬದಲಿಸಲೇಬೇಕು.

ಭಾಷಾಂತರಕಾರನ ಹೆಚ್ಚಿನ ಸಮಸ್ಯೆಯೆಂದರೆ ಮೂಲದ ರೀತಿಯು ಅಥವಾ ಶೈಲಿಯು ಅನುವಾದವನ್ನು ಸಂಬಂಧಿಸಿದ್ದು. ಶಬ್ದಕ್ಕೆ ಶಬ್ದವನ್ನು ಇಡುವುದು ಭಾಷಾಂತರವಲ್ಲ. ಹೀಗೆಂದು ಆಯಾ ಭಾಷೆಗೆ ಅನುಗುಣವಾಗಿ ಶಬ್ದ, ವಾಕ್ಯ, ಪರಿಚ್ಛೇದ ಇವುಗಳಲ್ಲಿ ಸ್ವಾತಂತ್ರ್ಯವಹಿಸಿ ಯುಕ್ತರೀತಿಯ ಅನುವಾದವನ್ನು ಮಾಡಬೇಕೆ? ಇದೂ ಸರಿಯಾಗದು. ಒಂದು ಭಾಷೆಯ ದೇಸಿಯ ವೈಶಿಷ್ಟ್ಯ ಹಾಗೂ ಸೌಂದರ್ಯ ಇವು ಇನ್ನೊಂದು ಭಾಷೆಗಿಲ್ಲ. ಒಂದರಲ್ಲಿಯ ಹಲಕೆಲವು ಪದಗಳನ್ನೂ ಬಳಕೆ ಮಾತುಗಳನ್ನೂ ಇನ್ನೊಂದರಲ್ಲಿ ಜೊಕ್ಕಾಗಿ ಭಾಷಾಂತರಿಸುವೆ ನೆಂಬ ಎದೆಯು ಎಂಥ ಭಾಷಾಪಂಡಿತನಿಗೂ ಇರಲಾರದು. ಅವುಗಳನ್ನು ವಿವರಿಸಿ ವ್ಯಾಖ್ಯಾನ ಮಾಡಬಹುದು, ಅವುಗಳಿಗೆ ಪ್ರತಿಶಬ್ದಗಳನ್ನು ಹೇಳಲಿಕ್ಕಾಗದು. ಈ ತೊಡಕನ್ನು ಇನ್ನೊಂದು ರೀತಿಯಾಗಿ ಶ್ರೀಮಾನ್ ಡಿ. ವಿ. ಗುಂಡಪ್ಪನವರು ಹೀಗೆ ಬಣ್ಣಿಸಿದ್ದಾರೆ: "ಪ್ರತಿಯೊಂದು ಭಾಷೆಯಲ್ಲಿಯೂ ಮಾತಿಗೆ ಎರಡು ತರದ ಶಕ್ತಿಗಳಿರುತ್ತವೆ: ಒಂದು ಕಿವಿಯನ್ನೊಲಿಸಿಕೊಳ್ಳುವುದು, ಇನ್ನೊಂದು ಬುದ್ಧಿಯ ಮುಂದೆ ವಸ್ತುಗಳನ್ನೂ ಭಾವಗಳನ್ನೂ ಚಿತ್ರಿಸುವುದು.... ಈ ಶ್ರವಣಾ ಕರ್ಷಣೆ ಮತ್ತು ಅರ್ಥಬೋಧನೆಯೆಂಬ ಶಕ್ತಿಗಳೆರಡೂ ಒಟ್ಟಿಗೆ ಯಾವ ಎರಡು ಭಾಷೆಗಳ ಮಾತುಗಳಿಗೂ ಒಂದೇಸಮನಾಗಿರುವುದಿಲ್ಲ.... ಭಾಷೆಗಳಲ್ಲಿಯೂ ಇದೇ ತೆರದ ಸ್ಥೂಲಸದೃಶತೆಯೂ ಸೂಕ್ಷ್ಮವಿಷಮತೆಯೂ ಅವುಗಳ ಸಹಜ ಲಕ್ಷಣ ವಾಗಿ, ಅನಿವಾರ್ಯವಾದವುಗಳಾಗಿ, ಕಾಣಬರುತ್ತವೆ. ಈ ಕಾರಣದಿಂದ ಒಂದು ಭಾಷೆಗೆ ಇನ್ನೊಂದು ಭಾಷೆಯನ್ನು ಬಗ್ಗಿಸುವ ಪ್ರಯತ್ನವು ಒಂದಡಿಯಷ್ಟು ದೂರದಲ್ಲಿ ಆರಂಗುಲ ಎಂಟಂಗುಲಗಳಷ್ಟು ಸಾಗಬಹುದೇ ಹೊರತು ಹನ್ನೆರಡಂಗುಲ ಗಳಷ್ಟೂ ಚರಿತಾರ್ಥವಾಗುವುದು ಬಹು ವಿರಳ." ಈ ತೊಡಕುಗಳನ್ನು ಬಿಡಿಸುವ

ಜಿಕ್ಕವೆಂದು ತಿಳಿಯುವ ಉಚ್ಚಾರಿಕೆಯ ಗಂಟಿನಿಂದು ಭಾಷಾಂತರಕಾರನು ತಿಳಿಯ ಬೇಕು, ತನ್ನ ರಸಿಕತೆಯನ್ನೂ ವಿವೇಚನೆಯನ್ನೂ ಸರಿಯಾಗಿ ಉಪಯೋಗಿಸಬೇಕು. ಮೂಲಕೃತಿಯ ಭಾವ, ರಸ, ಶೈಲಿ, ಛಂದಸ್ಸು–ಇವುಗಳನ್ನು ಸಾಧ್ಯವಾದಷ್ಟು ತದ್ರೂಪವಾಗಿ ಭಾಷಾಂತರಗೊಳಿಸುವುದು ಅಸಾಧ್ಯವಾದ ಮಾತಲ್ಲ. ಎಲ್ಲಿ ತದ್ರೂಪತೆಯಿಂದ ಭಾಷಾಂತರವು ಮೂಲವನ್ನು ವಿರೂಪಗೊಳಿಸುವಂತೆ ತೋರುವುದೋ ಅಲ್ಲಿ ಶಬ್ದಕ್ಕಿಂತ ಭಾವರಸವನ್ನು ಗಮನಿಸಿ ಪದರಚನೆಯಲ್ಲಿ ಸಮತೂಕದ ಸ್ವಾತಂತ್ರ್ಯವನ್ನು ವಹಿಸಬೇಕು. ಶಬ್ದಕ್ಕೆ ಪ್ರತಿಶಬ್ದ ದೊರೆಯದಿದ್ದರೆ ಅದಕ್ಕೆ ಬಹುಮಟ್ಟಿಗೆ ಸಮೀಪವಾದ ಹಾಗೂ ಸುಮಾರು ಅದೇ ಧ್ವನಿಸ್ವಾರಸ್ಯವುಳ್ಳ ಶಬ್ದವನ್ನು ಪ್ರಯೋಗಿಸಬಹುದು. ಬಹು ಕಾಲದವರೆಗೆ ಸಂಸ್ಕೃತಿಯ ಬೀದಿಯಲ್ಲಿ ಹಾದಾಡಿದ ಪ್ರೌಢಭಾಷೆಗಳಿಗೆ ಶಬ್ದದಾರಿದ್ರ್ಯವು ಸಾಮಾನ್ಯವಾಗಿ ಸೋಕಲಾರದು. ಧ್ವನಿಸ್ವಾರಸ್ಯದ ವೈಷಮ್ಯವು ತೋರಬಹುದು. ಆದರೆ ಭಾಷಾಂತರಕಾರನ ಕುಶಲಕಲೆ ಇಂಥ ವೈಷಮ್ಯವನ್ನು ಕಡಿಮೆಮಾಡಿ ಭಾಷಾಂತರದ ಸೇತುವಿನಿಂದ ಎರಡು ಭಾಷೆಗಳ ಬಾಂಧವ್ಯವನ್ನು ಹೆಚ್ಚುಗೊಳಿಸಲಾರದೆ?

ಹೊಸಗನ್ನಡವು ಭಾಷಾಂತರ ಗ್ರಂಥಗಳ ರಾಶಿಯಿಂದ ಮೊದಲಾಯಿತು. ಆದರೆ ಭಾಷಾಂತರ ಕಲೆಯ ಉತ್ತಮ ಲಕ್ಷಣಗಳನ್ನು ಒಳಗೊಂಡ ಗ್ರಂಥಗಳು ಕನ್ನಡದಲ್ಲಿ ಇನ್ನೂ ರಾಶಿ ರಾಶಿಯಾಗಿ ನಿರ್ಮಾಣವಾಗಬೇಕಾಗಿದೆ. ಇಂಥ ಎಲ್ಲ ಕೃತಿಗಳ ಮಂದಿರಕ್ಕೆ ಶ್ರೀಕಾರವನ್ನು ಬರೆದಂತೆ 'ಶ್ರೀ'ಯವರು ತಮ್ಮ ಇಂಗ್ಲಿಷ್ ಗೀತಗಳನ್ನು ರಚಿಸಿ ಹೊಸ ದೃಷ್ಟಿಯನ್ನೂ ಸೃಷ್ಟಿಯನ್ನೂ ಸಾಹಿತ್ಯಲೋಕಕ್ಕೆ ನೀಡಿದರು. ಭಾಷಾಂತರ ಕಲೆಯ ಮಹಿಮೆಯನ್ನು ಕನ್ನಡಿಗರು ಇಂದು ಅರಿತಿದ್ದಾರೆ. ಸ್ವತಂತ್ರ ಕೃತಿಯ ಸತ್ವವನ್ನೂ ಸೌಂದರ್ಯವನ್ನೂ 'ಶ್ರೀ'ಯವರ ಇಂಗ್ಲಿಷ್ ಗೀತಗಳು ಸಾರುತ್ತವೆ. ಇಂಗ್ಲಿಷ್ ಹಾಗೂ ಕನ್ನಡ ಭಾಷೆಗಳಲ್ಲಿಯ ಅವರ ರಸಿಕತೆ ಪಾಂಡಿತ್ಯಗಳು ನಮ್ಮನ್ನು ಬೆರಗುಗೊಳಿಸುತ್ತವೆ. 'ಇಂಗ್ಲಿಷ್ ಗೀತಗಳು' ಗ್ರಂಥದಲ್ಲಿ 'ಕಾಣಿಕೆ' ಎಂಬ ಮೊದಲ ಕವಿತೆಯ ಕೊನೆಗೆ 'ಬಲ್ಲವರಿಗೆ ಬೆರಗೆ ಇಲ್ಲಿ? ಅರಿಯದವರು ನಾಲ್ವರಲ್ಲಿ ಕಳೆಯ ಬೆಳಕು ಹೊಳೆಯಲೆಂದು ದಣಿದು ಹೋದೆನು' ಎಂದು 'ಶ್ರೀ'ಯವರು ವಿನಯದಿಂದ ಹೇಳಿದ್ದಾರೆ. ಆದರೆ ಅವರ ಭಾಷಾಂತರ ಕೃತಿಗಳನ್ನು ನೋಡಿದರೆ 'ಬಲ್ಲವರಿಗು ಬೆರಗು ಇಲ್ಲಿ!' ಎನ್ನುವಂತಾದರೆ ಆಶ್ಚರ್ಯವೇನು!

ರಂ. ಶ್ರೀ. ಮುಗಳಿ

# ಸಣ್ಣ ಕತೆ

ಕತೆ ಜನತೆಗೆ ಹೊಸದಲ್ಲ. ಮಾನವನು ಮಾತನಾಡುವುದಕ್ಕೆ ಆರಂಭಿಸಿ ದಂದಿನಿಂದ ಕತೆ ಹೇಳುವ ಪ್ರವೃತ್ತಿ ಅವನಲ್ಲಿ ಅಂಕುರಿಸಿದೆ. ಮಗುವಿಗೆ ಹೇಳಿದ್ದನ್ನು ಕೇಳಿ ತಿಳಿದುಕೊಳ್ಳುವ ಚೇತನ ಒದಗಿದೊಡನೆ ಕತೆಗಳನ್ನು ಕೇಳಬೇಕೆಂಬ ಅಭಿಲಾಷೆ ಅದರಲ್ಲಿ ಹುಟ್ಟುವುದು. ಅಜ್ಜಿಯನ್ನು ಪೀಡಿಸಿ ಆಕೆಯಿಂದ ಕತೆಗಳನ್ನು ಹೇಳಿಸಿ ಕೇಳುವುದು ಮೊದಲಾಗುವುದು. ಅಜ್ಜಿ ತಾನು ಕೇಳಿದ್ದ ಕತೆಯನ್ನೋ ತನ್ನ ಅನುಭವಕ್ಕೆ ಬಂದಿದ್ದ ಸಂಗತಿಯನ್ನೋ ತೆಗೆದುಕೊಂಡು ಅದಕ್ಕೆ ರೂಪುಗೊಟ್ಟು ಮಗುವಿಗೆ ರಂಜನೆಯಾಗುವಂತೆ ಹೇಳುತ್ತಾಳೆ. ನಾಲ್ಕು ಜನರು ಸೇರಿದಲ್ಲಿ ಹೊತ್ತು ಹೋಗಲು ಯಾವುದಾದರೂ ಸಂಗತಿಯನ್ನು ಕುರಿತು ಮಾತನಾಡುವಾಗ ಆ ಸಂಗತಿಯನ್ನು ಚಿತ್ರಿಸುವವನು ಅಲ್ಲಿದ್ದವರಿಗೆ ರಂಜಿಸುವಂತೆ ರೂಪುಗೊಟ್ಟು ಹೇಳುತ್ತಾನೆ. ಕತೆ ಹಾಗೇ ಕಟ್ಟುತ್ತದೆ. ಬಾಯಿಂದ ಬಾಯಿಗೆ ಹರಿಯುತ್ತದೆ. ಎಲ್ಲಾ ದೇಶಗಳಲ್ಲೂ ಎಲ್ಲಾ ಭಾಷೆಗಳಲ್ಲೂ ಸಾವಿರಾರು ಕತೆಗಳು ಕಿವಿಯಿಂದ ಕಿವಿಗೆ ಬಿದ್ದು ಬಂದಿವೆ. ಕಥಾ ಎಂಬ ಪದ ಕಥ್ ಎಂದರೆ ಹೇಳು ಎಂಬ ಪದದಿಂದ ಹುಟ್ಟಿದ್ದು. ಹಾಗೆ ಹರಿದು ಬಂದ ಕತೆಗಳಲ್ಲಿ ಕಥಾ ವಸ್ತುವಿಗೇ ಹೆಚ್ಚು ಪ್ರಾಧಾನ್ಯವಿರುವುದು.

ಜನರಿಗೆ ಧರ್ಮವನ್ನು ಬೋಧಿಸಲು ಹೊರಟವನೂ ಕತೆಯನ್ನು ಸಲಕರಣೆ ಯಾಗಿ ಉಪಯೋಗಿಸಿಕೊಂಡು ಕೇಳುವವನ ಮನದಲ್ಲಿ ನೀತಿ ನಾಟುವಂತೆ ಕತೆ ಕಟ್ಟಿ ಚಿತ್ರಿಸುತ್ತಾನೆ. ಆ ಕತೆಗಳಲ್ಲಿ ನೀತಿಗೇ ಪ್ರಧಾನ ಸ್ಥಾನವಿರುವುದು.

ವೇದಗಳಲ್ಲಿಯೂ ಉಪನಿಷತ್ತುಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಕತೆಗಳು ಅಲ್ಲಲ್ಲಿ ಕೋದುನಿಂತಿವೆ. ಪುರಾಣಗಳಂತೂ ಕತೆಗಳ ಗಣಿ. ಲಾವಣಿಗಳು ಕತೆಗಳ ಆಗರ. ಅವುಗಳಲ್ಲೆಲ್ಲಾ ಸಣ್ಣ ಕತೆಯ ವಸ್ತುವಿದೆ. ಅವೇ ಸಣ್ಣ ಕತೆಗಳು ಎನ್ನಿಸಿ ಕೊಳ್ಳಲಾರವು.

ಶ್ರೀನಿವಾಸರ ಸಣ್ಣ ಕತೆಗಳನ್ನು ಮೊದಲುಗೊಂಡು ಇಲ್ಲಿಯವರೆಗೆ ಕನ್ನಡದಲ್ಲಿ ಬಂದಿರುವ ಸಣ್ಣ ಕತೆಗಳನ್ನು ಪರಿಶೀಲಿಸಿದರೆ ಅವುಗಳೆಲ್ಲವೂ ಪಾಶ್ಚಾತ್ಯ ಸಾಹಿತ್ಯದಲ್ಲಿನ ಸಣ್ಣ ಕತೆಗಳ ಜಾಡನ್ನೇ ಅನುಸರಿಸಿರುವುದು ಕಾಣುವುದು. ಪಾಶ್ಚಾತ್ಯ ಸಾಹಿತ್ಯಗಳ ಸಂಪರ್ಕದಿಂದ ಇಂದಿನ ಸಾಹಿತಿಗಳು ಕತೆ ಬರೆಯುವುದರಲ್ಲಿ, ಗೀತಗಳನ್ನು ರಚಿಸು ವುದರಲ್ಲಿ, ವಿಮರ್ಶೆಮಾಡುವುದರಲ್ಲಿ ಒಂದು ಹೊಸ ದಾರಿಯನ್ನು ಕಂಡುಕೊಂಡರು. ಹೊಸ ಸಾಹಿತ್ಯ ಹುಟ್ಟಿತು. ಆ ಬರವಣಿಗೆಗಳ ವಿಷಯದಲ್ಲಿ ಮಾಸ್ತಿ ವೆಂಕಟೇಶ ಅಯ್ಯಂಗಾರರು ಈ ರೀತಿ ಅಭಿಪ್ರಾಯಪಟ್ಟಿರುವರು.

> “ಇವು ಒಂದು ದೃಷ್ಟಿಯಿಂದ ನೋಡಿದರೆ ಹೊಸವು, ಒಂದು ದೃಷ್ಟಿಯಿಂದ ಹಳೆಯವು. ಬರಹದ ದೇಹ ಹಿಂದಿನದು. ಅದು ವಸ್ತ್ರ ಧರಿಸಿರುವ ರೀತಿ ಬೇರೆ. ಕೆಲವುವೇಳೆ ವಸ್ತ್ರದ ಬಣ್ಣ ರಚನೆ ಬೇರೆ. ಕೆಲವು ವೇಳೆ ಅದೇ ವಸ್ತ್ರ; ಸೆರಗು ಬಲತೋಳಿನಮೇಲೆ ಬರುವುದಕ್ಕೆ ಬದಲಾಗಿ

ಎಡತೋಳಿನಮ್ಯೋಲೆ ಬಂದಿರುತ್ತದೆ. ಹಳೆಯದು ಅಂಗರೇಕು, ಕಸೆ. ಹೊಸದು ಅಂಗಿ, ಗುಂಡಿ.''

ಕನ್ನಡ ಕತೆಗಾರರು ಕನ್ನಡಿಗರ ಜೀವನಕ್ಕೆ ಸಂಬಂಧಿಸಿದ ವಸ್ತುಗಳನ್ನು ತೆಗೆದುಕೊಂಡು ಪಾಶ್ಚಾತ್ಯ ಕತೆಗಳಲ್ಲಿನ ರೂಪನ್ನು ಅವುಗಳಿಗೆ ಕೊಟ್ಟು ಅದರಲ್ಲಿ ತಮ್ಮ ಕೌಶಲ್ಯತೆಯನ್ನು ತೋರಿಸಿ ಉತ್ತಮ ಕತೆಗಳನ್ನು ರಚಿಸಿರುವರು. ಕೆಲವು ಕತೆಗಳಂತೂ ಪ್ರಪಂಚದ ಉತ್ತಮೋತ್ತಮ ಸಣ್ಣ ಕತೆಗಳ ಶ್ರೇಣಿಯಲ್ಲಿ ಸೇರುವಂತಹವಾಗಿರುವವು.

ಸಣ್ಣ ಕತೆಯ ಸ್ವರೂಪ ಏನು ಎಂಬುದನ್ನು ಕುರಿತು ಇನ್ನು ವಿಚಾರ ಮಾಡೋಣ. ಪಾಶ್ಚಾತ್ಯ ಸಾಹಿತ್ಯದಲ್ಲಿ ಸಣ್ಣ ಕತೆಯ ಮೂಲಪುರುಷ ಅಮೆರಿಕಾ ದೇಶದ ಸಾಹಿತಿ ಎಡ್ಗರ್ ಆಲನ್ ಪೋ ಎಂಬಾತ. ಅವನು ಸಣ್ಣಕತೆಯನ್ನು ''ಅರ್ಧ ಗಂಟೆಯಿಂದ ಒಡಿದು ಒಂದು ಗಂಟೆ ಅಥವಾ ಎರಡು ಗಂಟೆಗಳೊಳಗೆ ಓದಿ ಮುಗಿಸಲು ಸಾಧ್ಯವಾಗುವ ಗದ್ಯರೂಪದಲ್ಲಿ ನಿರೂಪಿಸಿರತಕ್ಕ ಕತೆ'' ಎಂದು ಕರೆದಿರುವನು. ಅವನ ಅಭಿಪ್ರಾಯದಲ್ಲಿ ಸಣ್ಣಕತೆಯಲ್ಲಿ ಕಥಾವಸ್ತುವಿಗಿಂತ ಕಥಾರಚನೆಗೇ ಹೆಚ್ಚು ಪ್ರಾಧಾನ್ಯವಿದೆ. ಕತೆಗೆ ಕಲೆಯ ಮುದ್ರೆ ಬಿದ್ದ ಹೊರತು ಅದು ಸಣ್ಣ ಕತೆಯೆನ್ನಿಸಿ ಕೊಳ್ಳದು. ಪಾಶ್ಚಾತ್ಯ ಸಾಹಿತ್ಯ ಸಂಪರ್ಕದಿಂದ ಭರತಖಂಡದ ಭಾಷೆಗಳಲ್ಲಿ ಜಾಗೃತಿ ಮೊದಲು ಕಂಡುಬಂದದ್ದು ಬಂಗಾಲಿ ಭಾಷೆಯಲ್ಲಿ. ಅಲ್ಲಿನ ರವೀಂದ್ರರ ಕತೆಗಳಲ್ಲೂ ಕಥಾವಸ್ತುವಿಗಿಂತ ಕಥಾನಿರೂಪಣದ ಕಲೆಗೇ ಹೆಚ್ಚು ಬೆಲೆಯಿದೆ. ಶ್ರೀನಿವಾಸರ ಕತೆಗಳಲ್ಲೂ ಹಾಗೆಯೇ.

ಸಣ್ಣ ಕತೆಯಲ್ಲಿ ಕತೆಗಾರ ಒಂದೇ ಒಂದು ವಿಷಯವನ್ನೆತ್ತಿ ರಸವತ್ತಾಗಿ ವರ್ಣಿಸಿ ಓದುಗನ ಮೇಲೆ ಒಂದು ನಿರ್ದಿಷ್ಟವಾದ ಪರಿಣಾಮವನ್ನುಂಟು ಮಾಡುತ್ತಾನೆ. ಅದರಲ್ಲಿ ನಿರ್ದೇಶಿಸಿರುವ ವಿಷಯ ಒಂದೇ ಒಂದು ಸನ್ನಿವೇಶಕ್ಕೆ ಸಂಬಂಧಪಟ್ಟಿರಬಹುದು. ಅಥವಾ ಅನೇಕ ಸನ್ನಿವೇಶಗಳನ್ನು ಒಳಗೊಂಡಿರ ಬಹುದು. ಜೀವನದ ಒಂದೇ ಒಂದು ಚಿತ್ರವನ್ನು ಚಿತ್ರಿಸಿರಬಹುದು; ಜೀವನದ ಅನೇಕ ಅಂಶಗಳು ಅದರಲ್ಲಿ ಬಂದಿರಬಹುದು. ಕತೆ ನಡೆಯುವ ಕಾಲ ಒಂದೇ ದಿನದಲ್ಲಿ ಕೆಲವು ಗಂಟೆಗಳ ಅವಧಿಯಲ್ಲಿ ನಡೆದಿದ್ದಾಗಬಹುದು. ನಡುವೆ ವರ್ಷಗಳ ಅವಧಿಯೂ ಬರಬಹುದು. ಆದರೆ ಕತೆಯ ವಸ್ತು, ಅಲ್ಲಿನ ಪಾತ್ರರಚನೆ, ಅದರಲ್ಲಿನ ಆವರಣ ಎಲ್ಲವೂ ಒಂದೇ ಒಂದು ಗುರಿಯನ್ನು ಮುಟ್ಟಿಸುವಂತೆ ಪರಿಪೋಷಕವಾಗಿದ್ದು ಓದುಗನಲ್ಲಿ ಒಂದೇ ಒಂದು ಪರಿಣಾಮವನ್ನು ಮೂಡಿಸು ವಂತಿದ್ದರೇ ಅದು ಸಣ್ಣ ಕತೆ ಎನ್ನಿಸಿಕೊಳ್ಳುವುದು.

ಕತೆಗಾರನು ತನ್ನ ಕತೆಗೆ ಇಂತಹ ವಸ್ತುವನ್ನೇ ಆರಿಸಿಕೊಳ್ಳಬೇಕೆಂಬ ನಿಮಯವಿಲ್ಲ. ತಾನು ಕಂಡ ಒಂದು ನೋಟ, ತನಗೆ ಬಿದ್ದ ಒಂದು ಕನಸು, ತನಗೆ ಲಭಿಸಿದ ಒಂದು ಅನುಭವ, ತಾನು ಕೇಳಿದ ಒಂದು ವಿಚಾರ ಕತೆಗಾರನಿಗೆ ಕತೆ ಬರೆಯಲು ವಸ್ತುವಾಗಬಹುದು. ಅನೇಕವೇಳೆ ಅವನ ಕಿವಿಯಮೇಲೆ ಬಿದ್ದ ಒಂದು ಮಾತೇ ಅವನ ಕತೆಗೆ ಆಧಾರವಾಗುತ್ತದೆ. ''ಮೈಸೂರು ಇನ್ನು ಮುಲ್ಲಾನಿಗಳ ಪಾಲಾಯಿತಪ್ಪ'' ಎಂದು ದಾರಿಯಲ್ಲಿ ಯಾರೋ ನುಡಿದ ಮಾತು

ಕತೆಗಾರನ ಕಿವಿಗೆ ಬಿತ್ತು, ಮನವನ್ನು ಮುಟ್ಟಿತು. ಭಾವನಾಲಹರಿ ಹರಿಯಿತು, ಕತೆಯೊಂದು ಕಟ್ಟಿತು, ಕಲೆಯ ಜಲದಲ್ಲಿ ಮಿಂದು ಸಣ್ಣ ಕತೆಯಾಗಿ ಹೊರಬಿತ್ತು. ಶ್ರೀನಿವಾಸರು "ರಂಗಪ್ಪನ ದೀಪಾವಳಿ" ಎಂಬ ಕತೆಯನ್ನು ಬರೆದಾಗ ಯಾರೋ ಒಬ್ಬರು ಚೇಷ್ಟೆಗಾಗಿ ತಾವು ಉಗ್ರಪ್ಪನ ಉಗಾದಿಯನ್ನು ಕುರಿತು ಕತೆ ಬರೆಯ ಬೇಕಾಗುತ್ತದೆಯೆಂದು ಹೇಳಿದರಂತೆ. ಅವರು ಬರೆಯಲಿಲ್ಲ. ಆ ಮಾತು ನಡೆದ ಬಹಳ ವರ್ಷಗಳ ಮೇಲೆ ಶ್ರೀನಿವಾಸರೇ "ಉಗ್ರಪ್ಪನ ಉಗಾದಿ" ಕತೆಯನ್ನೂ ಬರೆದರು. ಆ ಮಾತೇ ಅವರ ಕತೆಗೆ ಆಧಾರವಾಯಿತು. ಕತೆಗಾರನ ಮನದಲ್ಲಿ ಒಂದು ಸಂಗತಿ ಹೊಮ್ಮಿ ಕತೆ ಹೇಗೆ ಕಟ್ಟಿಕೊಂಡಿತು ಎಂಬುದನ್ನು ಶ್ರೀನಿವಾಸರು "ಆಚಾರ್ಯರ ಪತ್ನಿ"ಯಲ್ಲಿ ಈ ರೀತಿ ಹೇಳಿರುವರು.

"ಹತ್ತು ವರ್ಷದ ಹಿಂದೆ ಒಮ್ಮೆ ಸಾಲಿಗ್ರಾಮಕ್ಕೆ ಹೋದಾಗ ನಾನು ದೇವಾಲಯದ ಬಳಿಯಲ್ಲಿ ಸುಳಿಯುತ್ತ ಆಚಾರ್ಯರ ಕತೆಯನ್ನು ನೆನೆದೆನು. ಅದು ಬಹು ಸೊಗಸಾದ ಚರಿತ್ರೆ. ಬಡತನದಲ್ಲಿ ಹುಟ್ಟಿ ವಿದ್ಯೆಯಲ್ಲಿ ಬುದ್ಧಿವಂತ ನೆನ್ನಿಸಿಕೊಂಡು ಐವರು ಗುರುಗಳಿಂದ ಭಾಗವತ ಧರ್ಮವನ್ನು ತಿಳಿದು ಆಚಾರ್ಯರು ಆ ಮಠದ ಪ್ರತಿಷ್ಠಾಪಕರಾದರು. ಅನಕ್ಕೆ ರಾಜರ ಮನ್ನಣೆಯನ್ನು ಗಳಿಸಿದರು; ಅದರಿಂದ ಲಕ್ಷಾಂತರ ಜೀವಿಗಳನ್ನು ಉದ್ಧಾರವಾಡಿದರು. ಹಾಗೆಯೇ ಯೋಚಿಸುತ್ತ ನಾನು ಆ ಬಾಳ ವಿಷಯದಲ್ಲಿ ಬಹು ಹೆಮ್ಮೆಗೊಂಡೆನು. ಆದರೆ ಒಂದು ವಿಷಯದ ಬಳಿ ಬಂದು ನನ್ನ ಮನಸ್ಸು ಹಾಗೆಯೇ ನಿಂತಿತು. ಆಚಾರ್ಯರು ಸಂನ್ಯಾಸ ತೆಗೆದುಕೊಳ್ಳಬೇಕಾದರೆ ಅವರ ಹೆಂಡತಿಯ ಅವಿವೇಕ ಕಾರಣ ವಾಯಿತೆಂದು ಇತಿಹಾಸ ಹೇಳುತ್ತದೆ. ಇವರು ತನ್ನ ಗುರು ಒಬ್ಬನಿಗೆ ಮರ್ಯಾದೆ ಮಾಡಬೇಕೆಂದು ನೋಡಿದರು. ಆ ಹೆಂಡತಿ ಅವನಿಗೆ ಬಡಿಸಿ ಆತನು ಕಡಮೆಯ ಜಾತಿಯವನೆಂಬ ಕಾರಣದಿಂದ ಸ್ನಾನಮಾಡಿದರು. ಇವರು ಆ ಗುರುವಿನ ಮನೆ ಯವರಿಗೆ ಬಹು ಮರ್ಯಾದೆ ತೋರಿಸುತ್ತಿದ್ದರು. ಆಕೆ ಬಾವಿಯ ಬಳಿ ಏನೋ ಜಗಳ ಬಂದಾಗ ಆ ಮನೆಯವರನ್ನು ಬೈದು ಮಾತನಾಡಿದರು. ಅವರು ಒಂದು ದಿನ ಹೊತ್ತು ಮಾಡಿಕೊಂಡು ಮನೆಗೆ ಬಂದರು: ಆಕೆ ಹಾಸಿಗೆಯಲ್ಲಿ ಮಲಗಿ ನಿದ್ರಿಸುತ್ತಿದ್ದರು. ಈ ಕಾರಣಗಳಿಂದ ಆಚಾರ್ಯರು ಸಂನ್ಯಾಸ ತೆಗೆದುಕೊಂಡರಂತೆ. ಈ ಮಾತಿಗೆ ನನ್ನ ಮನಸ್ಸು ಹೀಗೆಂದಿತು; ಆಚಾರ್ಯರು ಮಾಡಿದ್ದು ಸರಿ ಇರ ಬಹುದು. ಆದರೆ ಆ ಹೆಂಗಸು ಮಾಡಿದ ತಪ್ಪಿಗೆ ಶಿಕ್ಷೆ ಹೆಚ್ಚಲ್ಲವೆ? ಇವರಿಗೆ ತಮ್ಮ ವಿದ್ಯೆ ದೊಡ್ಡದು, ತಮ್ಮ ಧರ್ಮಸೇವೆ ದೊಡ್ಡದು. ಆದರೆ ಅರಿಯದ ಹೆಂಗಸಿಗೆ ಇನ್ನು ಸ್ವಲ್ಪ ತಾಳ್ಮೆಯಿಂದ ಬುದ್ಧಿ ಹೇಳಬಾರದಾಗಿತ್ತೆ? ಆಕೆಯ ಸ್ವಭಾವ ಹೇಗೋ! ಸಂಸಾರವೇ ಹೀಗೆ. ಗಂಡನು ಸಂನ್ಯಾಸಿಯಾಗಲು ತಾಯಮನೆಗೆ ಹೋದ ಆ ಹೆಂಡತಿಯ ಪಾಡು ಆಮೇಲೆ ಏನಾಯಿತು?..ಹೀಗೆ ಯೋಚಿಸುತ್ತ ನಾನು ಅಲ್ಲಿ ಒಂದು ಮರದ ಕೆಳಗೆ ಕುಳಿತೆನು. ಒಂದು ಕೊಕ್ಕರೆ ಹಾರಿಬಂದು ಹೊಂಡದ ಒಂದು ಕೊನೆಯಲ್ಲಿ ಕುಳಿತಿತು. ಅದನ್ನು ನೋಡುತ್ತಿರಲು ನನ್ನ ಮನಸ್ಸಿನಲ್ಲಿ ಒಂದು ಸಂಗತಿ ತಾನೇ ಕಟ್ಟಿಕೊಂಡಿತು."

ಕತೆಗಾರ ಯಾವ ವಸ್ತುವನ್ನಾದರೂ ತೆಗೆದುಕೊಳ್ಳಬಹುದು, ಬಿತ್ತರಿಸ

ಬಹುದು. ಕತೆ ವರ್ಣನಾತ್ಮಕವಾಗಿರಬಹುದು, ಸಂಭಾಷಣಾ ರೂಪದಲ್ಲಿರಬಹುದು. ಪತ್ರಗಳ ಮಾಲೆಯಾಗಿರಬಹುದು, ದಿನಚರಿಯ ಪುಟಗಳಾಗಿರಬಹುದು. ಕತೆಗಾರ ತಾನು ಯಾವ ಉದ್ದೇಶವನ್ನು ಪ್ರತಿಪಾದಿಸಲು ಹೊರಡುವನೋ ಅದಕ್ಕೆ ಸಾಧಕ ವಾಗುವಂತೆ ಅದರ ರೂಪನ್ನು ಆರಿಸಿಕೊಳ್ಳುವನು. ಉತ್ತಮ ಛಾಯಾ ಚಿತ್ರಗಾರ ಒಂದು ಚಿತ್ರದ ಬಿಂಬ ಹಿಡಿಯುವಾಗ ತಾನು ಯಾವ ಪರಿಣಾಮವನ್ನು ಈಕ್ಷಿಸು ವವರಮೇಲೆ ಉಂಟುಮಾಡಬೇಕೆಂದಿರುವನೋ ಅದನ್ನು ಮನದಲ್ಲಿಟ್ಟುಕೊಂಡು ವಸ್ತುವನ್ನು ಅನೇಕ ದೃಷ್ಟಿಕೋನಗಳಿಂದ ಪರೀಕ್ಷಿಸಿ ನೋಡಿ ಚಿತ್ರವನ್ನು ತೆಗೆಯುವ ಹಾಗೆ ಕತೆಗಾರ ತನಗೆ ಸಿಕ್ಕಿದ ವಸ್ತುವಿನಿಂದ ತಾನು ಯಾವ ಪರಿಣಾಮವನ್ನು ಓದುಗನಲ್ಲಿ ಉಂಟುಮಾಡಬೇಕೆಂದಿರುವನೋ ಅದನ್ನು ನಿಶ್ಚಯಿಸಿಕೊಂಡು ಕತೆಗೆ ಯಾವ ರೂಪ ಕೊಟ್ಟರೆ ತನ್ನ ಉದ್ದೇಶ ಸಫಲವಾಗುವುದೆಂಬುದನ್ನು ವಿವೇಚಿಸಿ ಸರಿಯಾದ ರೂಪ ಅದಕ್ಕೆ ಕೊಡುತ್ತಾನೆ. ಓದುಗನಲ್ಲಿ ರಸೋತ್ಪಾದನೆ ಮಾಡ ಬೇಕಾದರೆ ಎಲ್ಲಿ ತಂತಿಯನ್ನು ಮಿಾಟಬೇಕು ಎಂಬ ಗುಟ್ಟು ಅವನಿಗೆ ಗೊತ್ತು.

ಒಬ್ಬ ಗೃಹಿಣಿ ತನ್ನ ಮನೆಯಲ್ಲಿ ಪದಾರ್ಥಗಳು ಎಷ್ಟಿದ್ದರೆ ಅಷ್ಟೇ ಸಾಕು, ಭಕ್ಷ್ಯಗಳ ಮೊದಲುಗೊಂಡು ಗೊಡ್ಡು ಸಾರಿನ ವರೆಗೆ ಯಾವ ಪಾಕವಾಗಲಿ ಮಾಡು ವುದರಲ್ಲಿ ಒಂದು ನಿಪುಣತೆಯನ್ನು ತೋರಿಸುತ್ತಿದ್ದಳಂತೆ. ಅವಳ ಅಡಿಗೆ ನಳಪಾಕ ವಾಗಿಬಿಟ್ಟರುತ್ತಿತ್ತು. ಇತರರು ಸಾರಿಗೆ ಯಾವ ಯಾವ ಸಾಮುಗ್ರಿಗಳನ್ನು ಹಾಕುತ್ತಿದ್ದರೋ, ಯಾವ ಪರಿಮಾಣದಲ್ಲಿ ಹಾಕುತ್ತಿದ್ದರೋ ಅವಳೂ ಅದೇ ಪದಾರ್ಥಗಳನ್ನು ಅದೇ ಪರಿಮಾಣದಲ್ಲಿ ಹಾಕುತ್ತಿದ್ದಳು. ಅನೇಕವೇಳೆ ಸಂಬಾರದ ಪದಾರ್ಥಗಳೂ ಅವಳ ಕೈಗೆ ಸಿಕ್ಕುತ್ತಿರಲಿಲ್ಲವಂತೆ. ಆದರೂ ಅವಳು ಮಾಡಿದ ಅಡಿಗೆ ಅಷ್ಟು ರುಚಿಕರವಾಗಿ ಹೇಗೆ ಆಗುತ್ತಿತ್ತು? ಅವರಲ್ಲಿನ ಗುಟ್ಟು ಏನು? ಅವಳನ್ನೇ ಕೇಳಿದರೂ ಅವಳು ಕೂಡ ಹೇಳಲಾರಳು. ಉತ್ತಮ ಕತೆಗಾರನಲ್ಲಿರುವ ಕಥನ ಕಲೆಯ ಗುಟ್ಟೂ ಹಾಗೆಯೇ ಅನಿರ್ವಚನೀಯವಾದದು.

ಸಣ್ಣ ಕತೆಯನ್ನು ಭಾವಗೀತೆಗೆ, ಏಕಾಂಕ ನಾಟಕಕ್ಕೆ ಅನೇಕರು ಹೋಲಿಸು ವರು. ಹೋಲಿಕೆಯೇನೊ ಅನೇಕ ವಿಧಗಳಲ್ಲಿ ಒಪ್ಪುತ್ತದೆ. ಆಕೃತಿಯಲ್ಲಿ ಮೂರೂ ಒಂದೇ ದಾರಿಯನ್ನು ಹಿಡಿದಿವೆ. ಭಾವಗೀತೆ ಸಮಗ್ರ ಕಾವ್ಯವಾಗಲಾರದು. ಸಣ್ಣ ಕತೆ ಕಾದಂಬರಿಯಾಗಲಾರದು. ಏಕಾಂಕ ನಾಟಕ ಸಂಪೂರ್ಣ ನಾಟಕವಾಗಲಾರದು. ಆದರೆ ಅವು ಯಾವವೂ ದೊಡ್ಡದರ ಒಂದೊಂದು ಭಾಗಗಳಲ್ಲ; ಅವುಗಳ ಮೊಟಕೂ ಅಲ್ಲ. ಒಂದೊಂದೂ ಸ್ವತಂತ್ರವಾದದ್ದು. ತನ್ನದೇ ಒಂದು ಶಿಸ್ತನ್ನು ಪಾಲಿಸಿ ಕೊಂಡಿರತಕ್ಕದ್ದು.

ಭಾವಗೀತೆಯಲ್ಲಿ ಕವಿ ತನ್ನಲ್ಲಿ ಸ್ಫುರಿಸಿದ ಭಾವವೊಂದನ್ನು ಗೀತ ರೂಪದಲ್ಲಿ ಬರೆದಿಡುತ್ತಾನೆ. ಬರೆಯುವ ಕಾಲದಲ್ಲಿ ಅದನ್ನು ಹೇಗೆ ಬರೆದರೆ ಜನರಿಗೆ ರುಚಿಸುತ್ತದೆ, ಎಂಬ ಯೋಚನೆಗೆ ಮನದಲ್ಲಿ ಅಷ್ಟಾಗಿ ಎಡೆ ಕೊಡುವುದಿಲ್ಲ. ತನ್ನ ಭಾವವನ್ನು ಚೆನ್ನಾಗಿ ವ್ಯಕ್ತಗೊಳಿಸಬೇಕು. ಅಷ್ಟೇ ಅವನಿಗೆ ಬೇಕಾದುದು. ಕತೆಗಾರನಿ ಗಾದರೋ ಓದುಗನ ಮೇಲಿನ ದೃಷ್ಟಿಯೂ ಒಂದೆಡೆ ಇರುವುದು. ಸ್ವಕಲ್ಪಿತವಾದ ಅಥವಾ ತನ್ನ ಅನುಭವಕ್ಕೆ ಬಂದ ಸನ್ನಿವೇಶದಿಂದ ತಾನು ಪಟ್ಟ ಆನಂದವನ್ನು

ಇತರರಿಗೆ ಧಾರೆ ಎರೆಯುವುದು ಅವನ ಆಶಯ. ಸಣ್ಣ ಕತೆಯ ರೂಪ ಅದಕ್ಕೆ ಸರಿಯಾಗಿ ಹೊಂದುವುದರಿಂದ ಆ ರೂಪನ್ನು ಉಪಯೋಗಿಸಿಕೊಳ್ಳುತ್ತಾನೆ. ಅವನು ಅದನ್ನು ಬರೆಯುವಾಗ ಅವನ ಮನದ ಒಂದು ಭಾಗ ಕತೆಯ ನಿರೂಪಣೆಯಲ್ಲಿ ತೊಡಗಿದ್ದರೆ ಮತ್ತೊಂದು ಭಾಗ ಓದುಗನಾಗಿ ಕೇಳುತ್ತಿರುತ್ತದೆ. ಏಕಾಂಕ ನಾಟಕ ರಚನೆಯಲ್ಲಿ ತೊಡಗಿರುವ ನಾಟಕಕಾರನ ದೃಷ್ಟಿ ಒಂದು ಕಡೆ ನಾಟಕದ ವಸ್ತುವಿನ ಕಡೆಗೆ, ಇನ್ನೊಂದು ಕಡೆ ಅಭಿನಯಿಸುವವರ ಸಾಧನ ಶಕ್ತಿಯ ಕಡೆಗೆ, ಮತ್ತೊಂದು ಕಡೆ ಪ್ರೇಕ್ಷಕರ ಮನದಲ್ಲಿ ರಸೋತ್ಪಾದನೆ ಹೇಗೆ ಉಂಟುಮಾಡಬೇಕು ಎಂಬುದರ ಕಡೆಗೆ ಇರುವುದು.

ಸಾಹಿತ್ಯದಲ್ಲಿ ಸಣ್ಣ ಕತೆಗೆ ಯಾವ ಸ್ಥಾನವಿರುವುದು? ಈ ಪ್ರಶ್ನೆಗೆ ಉತ್ತರ ವಾಗಿ ಒಂದೇ ಒಂದು ಉಪಮೆಯನ್ನು ಇಲ್ಲಿ ಕೊಡುತ್ತೇನೆ. ಭಾರತೀಯ ಸಂಸಾರದಲ್ಲಿ ಹತ್ತು ವರ್ಷದಿಂದ ಹದಿನಾಲ್ಕು ವರ್ಷದ ಕನ್ನೆಯರಿಗೆ ಯಾವ ಸ್ಥಾನ ಇದೆಯೋ ಅದೇ ಸ್ಥಾನ ಸಾಹಿತ್ಯದಲ್ಲಿ ಸಣ್ಣ ಕತೆಗೆ ಇದೆ. ಮನೆಯಲ್ಲಿ ಆ ವಯಸ್ಸಿನ ಹುಡುಗಿಯರಿದ್ದರೇ ಕೆಲವು ಹಬ್ಬಗಳು, ಮಂಗಳಕಾರ್ಯಗಳು ನಡೆಯುವವು. ಸಂಸಾರಕ್ಕೆ ಅವರಿಂದ ಕಳೆ ಬರುವುದು. ಆ ವಯಸ್ಸಿನಲ್ಲಿ ಹುಡುಗಿಯರೂ ತಂದೆ ತಾಯಿಯರಿಗೆ ಅನೇಕ ಸಮಸ್ಯೆಗಳನ್ನು ತಂದೊಡ್ಡುವರು. ಅವರ ನಡೆ-ನುಡಿ, ದಿನದಿನದ ಬೆಳವಣಿಗೆ ಹಿರಿಯರಿಗೆ ಸಂತೋಷ, ಆನಂದಗಳನ್ನು ತರುವುವು. ಹಿಂದುಗಡೆಯೇ ಆಲೋಚನಾ ತರಂಗಗಳನ್ನೂ ಎಬ್ಬಿಸುವವು. ಸಮಾಜದ ತುಂಬುಜೀವನಕ್ಕೆ ಒದಗುವ ಸಾಹಿತ್ಯದಲ್ಲಿ ಸಣ್ಣಕತೆಗಳ ಇರವೂ ಹಾಗೆಯೇ. ಅದಿದ್ದರೆ ಒಂದು ಕಳೆ ತುಂಬುತ್ತದೆ, ಒಂದು ವಿಚಾರ ಲಹರಿ ಹರಿಯುತ್ತದೆ.

ಸಾಹಿತ್ಯಕ್ಕೂ ಸಮಾಜಕ್ಕೂ ನಿಕಟ ಬಾಂಧವ್ಯವಿದೆ. ಸಾಹಿತ್ಯದಲ್ಲಿ ಜನತೆಯ ಸಂಸ್ಕೃತಿ, ಅಂದಿನ ಸಮಾಜದ ಸ್ಥಿತಿ ಬಿಂಬಿಸಲ್ಪಡುವವು. ಸಮಾಜದ ಅನೇಕ ಸಮಸ್ಯೆಗಳು ಸಣ್ಣ ಕತೆಗಳಲ್ಲಿ ಚರ್ಚಿಸಲ್ಪಡುವವು. ಸಮಾಜದ ನೀತಿ ತಿದ್ದಲು ಸಣ್ಣ ಕತೆ ಒಳ್ಳೆಯ ಸಲಕರಣೆ, ಹೌದು. ಆದರೆ, ಸಮಾಜದ ಸಮಸ್ಯೆ ಗಳನ್ನು ಕುರಿತು ಕತೆ ಬರೆಯಲು ಹೊರಟ ಕತೆಗಾರ ಬಹಳ ಎಚ್ಚರಿಕೆಯಿಂದ ನಿಪುಣತೆಯಿಂದ ಸಣ್ಣ ಕತೆಯ ಸಲಕರಣೆಯನ್ನು ಉಪಯೋಗಿಸಿಕೊಳ್ಳಬೇಕು. ಕೆಲವು ಗಾಯಗಳಿಗೆ ಶಸ್ತ್ರ ಚಿಕಿತ್ಸೆಯಿಂದ ಬೇಗ ಗುಣವಾಗುವುದು. ಮತ್ತೆ ಕೆಲವು ಗಾಯಗಳು ಚೂರಿಯನ್ನು ಸೋಕಿಸಿದ ಹಾಗೆಲ್ಲಾ ಇನ್ನೂ ರಣವಾಗುವವು. ಆ ಗಾಯಗಳ ಗೋಜಿಗೆ ಹೋಗದೆ ಹಾಗೇ ಬಿಟ್ಟದ್ದರೆ ಅವು ತಾವಾಗಿಯೇ ವಾಸಿ ಯಾಗುವವು. ಸಮಾಜದ ಸಮಸ್ಯೆಗಳೂ ಹಾಗೆಯೇ. ಅವುಗಳನ್ನು ಬಿಡಿಸಲು ಯತ್ನಿಸುವ ಕತೆಗಾರನ ಮೇಲಿನ ಹೊಣೆ ಹೆಚ್ಚು. ಅವನಲ್ಲಿ ವಿಚಾರಜ್ಞಾನ ಪಕ್ವವಾಗಿರಬೇಕು. ಆದುದರಿಂದಲೇ 'ಶ್ರೀ'ಯವರು "ಸಣ್ಣ ಕತೆ ಬರೆಯುವುದು ಬಹಳ ಕಷ್ಟದ ಕೆಲಸ. ಕಿರಿದರಲ್ಲಿ ಹಿರಿದಾದ ಭಾವ ಜ್ಞಾನ ಅನುಭವಗಳನ್ನು ತುಂಬಿ ಜೀವನಕ್ಕೆ ಬೆಳಕು ಬೀರುವುದು ಅದರ ವೈಶಿಷ್ಟ್ಯ" ಎಂದು ಅಪ್ಪಣೆ ಕೊಡಿಸಿರುವುದು.

ಸಣ್ಣ ಕತೆ ಇಂದು ಜನರಿಗೆ ಅತ್ಯಂತ ಪ್ರಿಯವಾಗಿದೆ. ಎಲ್ಲರೂ ಸಣ್ಣ ಕತೆಗಳನ್ನು ಅತ್ಯಾದರದಿಂದ ಓದಿ ಆನಂದಿಸುತ್ತಿದ್ದಾರೆ. ಮನೆಗೆ ಯಾವ ಪತ್ರಿಕೆ

ಬರಲಿ ಮೊದಲು ಅದರಲ್ಲಿರುವ ಸಣ್ಣ ಕತೆಯನ್ನು ಓದಿ ಮುಗಿಸುತ್ತಾರೆ. 'ಪ್ರಬುದ್ಧ ಕರ್ಣಾಟಕ' ಬಂದೊಡನೆ ಅದರಲ್ಲಿನ ಕತೆಯನ್ನು ಮೊದಲು ಓದಿ ಇತರ ಲೇಖನಗಳನ್ನು ಓದುವುದಕ್ಕೆ ತಿಂಗಳುಗಟ್ಟಳೆ ತೆಗೆದುಕೊಂಡಿರುವ ಮಹನೀಯರನೇಕರನ್ನು ನಾನು ನೋಡಿದ್ದೇನೆ. ಶ್ರೀನಿವಾಸರ ಕತೆಯನ್ನು ಓದಲು ತೋರಿದ ಉತ್ಸಾಹದ ಸಂಗತಿಯೊಂದು ಇಲ್ಲಿ ನೆನಪಿಗೆ ಬರುತ್ತದೆ. ನಾನಿನ್ನೂ ತೀರ ಎಳೆಯವನಿದ್ದಾಗ ಒಂದು ದಿನ ಸಂಜೆ ನನ್ನ ಗೆಳೆಯನ ಮನೆಯಲ್ಲಿದ್ದು ಮಾವಿನ ಮರದ ಮೇಲೆ ಮರಕೋತಿ ಆಟವನ್ನಾಡುತ್ತಿರಲು ನನ್ನ ಗೆಳೆಯನ ಅಣ್ಣಂದಿರು ಶ್ರೀನಿವಾಸರ ಮೊದಲ ಕತೆಯ ಸಂಗ್ರಹವನ್ನು ತಂದು ನಮ್ಮನ್ನು ಕರೆದು ನಮಗೆ "ನಮ್ಮ ಮೇಸ್ಟರು" ಎಂಬ ಕತೆಯನ್ನು ಓದಿ ಹೇಳಿದರು. ಆಮೇಲೆ ಅವರು ಟೆನ್ನಿಸ್ಸಿಗೆ ಹೋಗಬೇಕಾಗಿರಲು ಆ ಪುಸ್ತಕವನ್ನು ತಮ್ಮ ಕೊಠಡಿಯಲ್ಲಿಟ್ಟು ಬೀಗ ಹಾಕಿಕೊಂಡು ಹೊರಟುಹೋದರು. ನಾವೆಷ್ಟು ಕೇಳಿಕೊಂಡರೂ ಅವರು ಆ ಪುಸ್ತಕವನ್ನು ನಮ್ಮ ವಶಕ್ಕೆ ಕೊಟ್ಟು ಹೋಗಲಿಲ್ಲ. ಅವರು ಮನೆಯನ್ನು ಬಿಟ್ಟು ನಾಲ್ಕು ಮಾರು ಹೋಗುವುದರೊಳಗೆ ನಾವು ಅವರ ಕೊಠಡಿಯ ಬೀಗವನ್ನೊಡೆದು ಆ ಪುಸ್ತಕವನ್ನು ಕದ್ದು ತಂದು ಆದ್ಯಂತವಾಗಿ ಓದಿದೆವು, ಆನಂದಪಟ್ಟೆವು.

ಸಣ್ಣ ಕತೆ ಎಲ್ಲರಿಗೂ ಆನಂದವನ್ನೊದಗಿಸುವುದೇನೋ ನಿಜ. ಆದರೆ ಅದರಲ್ಲಿನ ಸುಖವನ್ನು ಅನುಭವಿಸಿ ಸಂಪೂರ್ಣ ಆನಂದ ಪಡೆಯುವವರು ವಿದ್ಯಾವಂತರು ಮಾತ್ರ. ಅದರ ಉದ್ದೇಶ ಸಫಲಗೊಳ್ಳುವುದು ವಿದ್ಯಾವಂತರಲ್ಲಿ. ಕಲೆಯ ಮುದ್ರೆ ಬಿದ್ದೆಡೆಯಲ್ಲೆಲ್ಲಾ ಹೀಗೆ ಆಗುವುದು ಸಹಜ.

**ಕೆ. ಗೋಪಾಲಕೃಷ್ಣರಾಯ**

# ಕನ್ನಡ ಏಕಾಂಕ ನಾಟಕ

ಸಣ್ಣ ಕಥೆ ಮತ್ತು ಏಕಾಂಕ ನಾಟಕ ಇವೆರಡೂ ಆಧುನಿಕ ಕನ್ನಡ ಸಾಹಿತ್ಯದ ಅವಳಿಮಕ್ಕಳು. ಇವು ಒಂದನ್ನೊಂದು ಹೋಲುವುದು ಮಾತ್ರವಲ್ಲ, ಹೆಚ್ಚು ಕಡಮೆ ಒಂದೇ ಕಾಲದಲ್ಲಿ ಹುಟ್ಟಿದವೂ ಆಗಿವೆ. ಆದರೂ, ಸಣ್ಣ ಕಥೆ ಎಷ್ಟು ಬೇಗನೆ ಜನಪ್ರಿಯವಾಯಿತೊ ಏಕಾಂಕ ನಾಟಕ ಅಷ್ಟು ಬೇಗನೆ ಜನಪ್ರಿಯ ವಾಗಲು ಸಾಧ್ಯವಾಗಿಲ್ಲ. ಸಣ್ಣ ಕಥೆ ಎಂಬ ಹೆಸರು ಎಷ್ಟರ ಮಟ್ಟಿಗೆ ಜನಕ್ಕೆ ಪರಿಚಿತವಾಗಿದೆಯೊ 'ಏಕಾಂಕ ನಾಟಕ' ಎಂಬ ಹೆಸರು ಕೂಡ ಅಷ್ಟು ಪರಿಚಿತ ವಾಗಿರುವಂತೆ ಕಾಣುವುದಿಲ್ಲ. ಇದಕ್ಕೆ ಕಾರಣವನ್ನು ದೂರ ಅರಸಬೇಕಾಗಿಲ್ಲ: ಆಡಬೇಕಾದ್ದನ್ನು ಆಡಿ ತೋರಿಸಿದರೆ ಅದು ಜನದ ಮನಸ್ಸಿನಲ್ಲಿ ನೆಲಸಿ ನಿಂತೀತೆ ಹೊರತು ಸುಮ್ಮನೆ ಓದಕೊಟ್ಟರೆ ಹೇಗೆ ನೆಲಸೀತು? ಆದರೂ, ಈಚೆಗೆ ಅಲ್ಲಲ್ಲಿ ಏಕಾಂಕ ನಾಟಕಗಳನ್ನು ಆಡತೊಡಗಿದ್ದರಿಂದಲೂ ಪತ್ರಿಕೆಗಳು ಅವನ್ನು ಪ್ರಕಟಿಸ ತೊಡಗಿದ್ದರಿಂದಲೂ ಏಕಾಂಕ ನಾಟಕ ಜನವೊಲವನ್ನು ಸಂಪಾದಿಸತೊಡಗಿತು.

ಏಕಾಂಕ ನಾಟಕ ಎಂದರೆ ಒಂದು ಅಂಕದ ನಾಟಕ. ಆದರೆ, ಹಲವು ಅಂಕಗಳ ನಾಟಕದಿಂದ ಒಂದು ಅಂಕವನ್ನು ತನಿಯಾಗಿ ತೆಗೆದಿಟ್ಟರೆ ಅದು ಏಕಾಂಕ ನಾಟಕ ಆಗಲಾರದು. ಕಾದಂಬರಿಯ ಒಂದು ಅಧ್ಯಾಯ ಹೇಗೆ ಸಣ್ಣ ಕಥೆ ಆಗಲಾರದೊ ಹಾಗೆಯೆ. ಸಣ್ಣ ಕಥೆಗೆ ಹೇಗೆ ಅದರದ್ದೇ ಆದ ಒಂದು ಸ್ವರೂಪ ವಿದೆಯೊ ಏಕಾಂಕ ನಾಟಕಕ್ಕೂ ಒಂದು ವಿಶಿಷ್ಟ ಕಲಾಸ್ವರೂಪವಿದೆ. ಕಾದಂಬರಿಗೂ ಸಣ್ಣ ಕಥೆಗೂ, ಅಥವಾ ಪ್ರಗಾಥಕ್ಕೂ (Ode) ಅಷ್ಟಷಟ್ಪದಿಗೂ (Sonnet) ಯಾವ ಅಂತರವಿದೆಯೊ ಅನೇಕಾಂಕಗಳ ದೀರ್ಘ ನಾಟಕಕ್ಕೂ ಏಕಾಂಕ ನಾಟಕಕ್ಕೂ ಆ ಬಗೆಯ ಭೇದವಿದೆ. ಕಾದಂಬರಿಯಲ್ಲಿ ಹೇಗೋ ಹಾಗೆ, ದೀರ್ಘ ನಾಟಕದ ಕಥಾಸಂವಿಧಾನದಲ್ಲಿ ವಿಸ್ತಾರ ಹೆಚ್ಚು, ತೊಡಕುಗಳೂ ಉಂಟು; ಅದರಲ್ಲಿ ನಾಯಕ, ನಾಯಿಕೆ ಮುಂತಾದ ಮುಖ್ಯ ಪಾತ್ರಗಳಲ್ಲದೆ ಹಲವಾರು ಪಾತ್ರಗಳ ಶೀಲಸ್ವಭಾವ ಅರಳುವುದು ನಮ್ಮ ಕಣ್ಣೆದುರು ಕಾಣುತ್ತದೆ; ಪ್ರತಿ ಅಂಕವೂ ಕಥೆಯನ್ನು ಒಂದು ನೆಲೆಯಿಂದ ಇನ್ನೊಂದು ನೆಲೆಗೆ ಒಯ್ಯುವ ಘಟ್ಟ; ಪ್ರತಿ ದೃಶ್ಯವೂ ಕಥೆಯ ಹಲವು ನಾಟಕೀಯ ಸನ್ನಿವೇಶಗಳಲ್ಲಿ ಒಂದೊಂದನ್ನು ಚಿತ್ರಿಸುತ್ತದೆ; ಕಥೆಯ ಸರಪಣಿ ಯಲ್ಲಿ ಅಂಕಗಳೂ ದೃಶ್ಯಗಳೂ ಕೊಂಡಿಗಳಿದ್ದ ಹಾಗೆ. ದೀರ್ಘ ನಾಟಕವನ್ನು ಹಲವು ಕೊಂಡಿಗಳಿಂದಾದ ಚಿನ್ನದ ಸರಪಣಿಗೆ ಹೋಲಿಸಬಹುದಾದರೆ, ಏಕಾಂಕ ನಾಟಕವನ್ನು ಒಂದೇ ವರ್ತುಳದಿಂದಾದ ಉಂಗುರಕ್ಕೆ ಹೋಲಿಸಬಹುದು. ಏಕಾಂಕ ನಾಟಕದಲ್ಲಿ ದೀರ್ಘ ನಾಟಕದ ವಿಸ್ತಾರವಿಲ್ಲ. ಇದರಲ್ಲಿ ಇರುವುದು ಒಂದೇ ನಾಟಕೀಯ ಸನ್ನಿವೇಶ, ಬರುವುದು ಸಾಮಾನ್ಯವಾಗಿ ಒಂದೇ ಮುಖ್ಯ ಪಾತ್ರ. ದೀರ್ಘ ನಾಟಕದಲ್ಲಿ ಸಾವಧಾನವಾಗಿ ಪ್ರಕಾಶಗೊಳ್ಳುವ ನಾಟಕೀಯ ಘರ್ಷಣೆ (Dramatic conflict) ಏಕಾಂಕ ನಾಟಕದಲ್ಲಿ ಮಿಂಚಿನಂತೆ ಹೊಳೆಯುತ್ತದೆ. ಹೀಗಿರುವುದರಿಂದ, ದೀರ್ಘ ನಾಟಕವನ್ನು ಬರೆಯಲು ಯಾವ ಜಾಣ್ಮೆ ಬೇಕೊ

ಏಕಾಂಕ ನಾಟಕವನ್ನು ಬರೆಯಲೂ ಅದೇ ಜಾಣ್ಮೆ ಬೇಕು; ಅದನ್ನು ಬರೆಯು ವುದು ಎಷ್ಟು ಕಷ್ಟವೋ ಇದನ್ನು ಬರೆಯುವುದೂ ಅಷ್ಟೇ ಕಷ್ಟ. ದೀರ್ಘ ನಾಟಕದಲ್ಲಿ ನಾಟಕಕಾರ ಅಕಸ್ಮಾತ್ ಎಡವಿ ಮುಗ್ಗರಿಸಿದರೆ ಚೇತರಿಸಿಕೊಳ್ಳಲು ಅವಕಾಶವಿರು ವಂತೆ ಇದರಲ್ಲಿ ಅವಕಾಶವಿಲ್ಲ; ಅದರಲ್ಲಿ ಎರಡು ಮೂರು ಗಂಟೆ ಕಾಲ ಹಿಡಿಯುವ, ಹಲವು ಅಂಕಗಳಲ್ಲಿ ಸಾಗಿಸಿಕೊಂಡು ಹೋಗುವ, ನಿರೂಪಣ (Exposition), ಪರಾಕಾಷ್ಠೆ (Climax), ನಿರ್ವಹಣ (Denouement)— ಇವುಗಳನ್ನು ಏಕಾಂಕ ನಾಟಕದಲ್ಲಿ ೨೦–೩೦ ನಿಮಿಷ ಮಾತ್ರ ತೆಗೆದುಕೊಳ್ಳುವ ಒಂದೇ ಅಂಕದಲ್ಲಿ ಸಾಧಿಸ ಬೇಕಾಗಿದೆ. ದೀರ್ಘ ನಾಟಕದಲ್ಲಿ ಉದ್ದುದ್ದ ಭಾಷಣಗಳಿಂದಲೂ ವಿವರಣೆ ಗಳಿಂದಲೂ ವೈವಿಧ್ಯದಿಂದಲೂ ಎಸಗುವ ಪರಿಣಾಮವನ್ನು ಏಕಾಂಕ ನಾಟಕದಲ್ಲಿ ವ್ಯಂಗ್ಯತೆ ಅಥವಾ ಧ್ವನಿಯ ಮೂಲಕ ಉಂಟುಮಾಡಬೇಕಾಗುತ್ತದೆ. ಏಕಾಂಕ ನಾಟಕದಲ್ಲಿ ಸಾವಕಾಶಕ್ಕೆ ಎಡೆಯೇ ಇಲ್ಲ: ಪಾತ್ರಗಳು ಪಾದರಸದಂತೆ ಓಡಾಡ ಬೇಕು; ಭಾವ-ರಸ ಪ್ರವಾಹ ಕೊಚ್ಚಿಕೊಂಡು ಬರಬೇಕು; ಮಾತು ಕ್ಷಣಕ್ಷಣಕ್ಕೆ ಮಿಂಚಿನಂತೆ ಹೊಳೆದು, ಒಟ್ಟು ನಾಟಕವನ್ನು ಬೆಳಗುತ್ತಿರಬೇಕು; ಪ್ರಾರಂಭದಲ್ಲೆ ಕುತೂಹಲ ಕೆಣಕುವಂತಿರಬೇಕು, ಘರ್ಷಣೆ ಕೆರಳಬೇಕು, ಕ್ರಿಯೆ ಹೊನಲಿಡ ಬೇಕು. ಸಂಗ್ರಹವಾಗಿ, ಐಕ್ಯತೆ (Unity), ತೀವ್ರಗತಿಯ ಕ್ರಿಯೆ (Speedy action), ಭಾವಾವೇಶದ ಕೊಚ್ಚು (Sweep of emotion and passion), ಹೇಳುವ ರೀತಿಯಲ್ಲಿ ಹಾಳತ (Economy of expression), ಘರ್ಷಣೆ (Conflict) — ಇಷ್ಟು ಏಕಾಂಕ ನಾಟಕದ ಜೀವಾಳ ಎನ್ನಬಹುದು. ದೀರ್ಘ ನಾಟಕವನ್ನು ನೋಡಿದ ಮೇಲೆ ಯಾವ ಬಗೆಯ ಒಂದು ಸಂತೃಪ್ತಿಯುಂಟಾಗುತ್ತದೆಯೋ ಏಕಾಂಕ ನಾಟಕವನ್ನು ನೋಡಿದರೂ ಅದೇ ಬಗೆಯ ಸ್ವಸಂಪೂರ್ಣವಾದ ಸಂತೃಪ್ತಿ ಯುಂಟಾಗುತ್ತದೆ, ಉಂಟಾಗಬೇಕು. ಎಂದಮೇಲೆ, ಏಕಾಂಕ ನಾಟಕ ಪ್ರಮಾಣ ದಲ್ಲಿ ಕಿರಿದೇ ಹೊರತು ಗುಣದಲ್ಲಿ, ಮಾಡುವ ಕಾರ್ಯದಲ್ಲಿ, ಪ್ರೇಕ್ಷಕರಿಗೆ ಊಡುವ ನಲಿವಿನಲ್ಲಿ, ಅನೇಕಾಂಕ ನಾಟಕದಷ್ಟೆ ಪರಿಣಾಮಕಾರಿ; ಅದರ ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು.

ಸಣ್ಣ ಕಥೆ ಹೇಗೆ ಕಾದಂಬರಿಯ ಕೂಸಲ್ಲವೊ ಹಾಗೆಯೆ ಏಕಾಂಕ ನಾಟಕ ದೀರ್ಘ ನಾಟಕದ ಮರಿಯೇನೂ ಅಲ್ಲ. ಪಾಶ್ಚಾತ್ಯ ನಾಟಕದ ಹಾಗೂ ಸಂಸ್ಕೃತ ನಾಟಕದ ಇತಿಹಾಸವನ್ನು ಪರಿಶೀಲಿಸಿದರೆ ಇದು ಸ್ಪಷ್ಟವಾಗುತ್ತದೆ. ಏಕಾಂಕ ನಾಟಕವೂ ದೀರ್ಘ ನಾಟಕವೂ ಜೊತೆ ಜೊತೆಯಾಗಿಯೇ ಬೆಳೆದುಬಂದಿರಬೇಕು. ಭರತಮುನಿ ಹೇಳುವ ದಶರೂಪಕಗಳಲ್ಲಿ ಐದು ಏಕಾಂಕ ರೂಪಕಗಳು. ಎಂದ ಮೇಲೆ, ಸಂಸ್ಕೃತದಲ್ಲಿ ಅಂದರೆ ನಮ್ಮ ಸೀಮೆಯಲ್ಲಿ, ಭರತನ ಕಾಲಕ್ಕೇ ಏಕಾಂಕ ರೂಪಕಗಳು ಹುಟ್ಟಿರಬೇಕೆಂದು ವ್ಯಕ್ತವಾಗುತ್ತದೆ. ದೀರ್ಘ ನಾಟಕಗಳನ್ನು ಬರೆದ ಭಾಸಕವಿ ಐದು ಏಕಾಂಕ ನಾಟಕಗಳನ್ನು ಬರೆದಿದ್ದಾನೆ. ಇತರ ಕೆಲವು ಸಂಸ್ಕೃತ ಕವಿಗಳೂ ಏಕಾಂಕ ನಾಟಕಗಳನ್ನು ಬರೆದಿದ್ದಾರೆ. ಪಾಶ್ಚಾತ್ಯ ಪ್ರಪಂಚದಲ್ಲಿ ದೀರ್ಘ ನಾಟಕ ಒಂದು ವಿಶಿಷ್ಟ ಸ್ವರೂಪವನ್ನು ಪಡೆಯುವ ಮೊದಲೇ ಚಿಕ್ಕ ಚಿಕ್ಕ ದೃಶ್ಯಗಳು ಪ್ರಾಚುರ್ಯದಲ್ಲಿದ್ದುವು. ಅವುಗಳಿಗೆ ರಹಸ್ಯ

ನಾಟಕ (Mystery play), ಪವಾಡ ನಾಟಕ (Miracle play) ಎಂಬ ಹೆಸರುಗಳಿದ್ದುವು. ಕ್ರಿಸ್ತನ ಚರಿತ್ರೆ, ಸಾಧುಸಂತರ ಜೀವನ ಚರಿತ್ರೆ, ಬೈಬಲ್ಲಿನ ಕಥೆಗಳು — ಇವುಗಳಿಂದ ಈ ದೃಶ್ಯಗಳ ವಸ್ತುಗಳನ್ನು ಆಯ್ದುಕೊಳ್ಳುತ್ತಿತ್ತು. ಈ ಬಗೆಯ ದೃಶ್ಯಗಳೆ ಮುಂದೆ ಏಕಾಂಕ ನಾಟಕಕ್ಕೆ ಮೂಲವಾದುವು. ಕ್ರಿಸ್ತ ದೇವಾಲಯಗಳಲ್ಲಿ ಮೊದಮೊದಲು ಮೇಲೆ ಹೇಳಿದಂಥ ಬಿಡಿ ದೃಶ್ಯಗಳನ್ನೂ, ಕಾಲ ಕ್ರಮದಲ್ಲಿ ಅವನ್ನು ಕೂಡಿಸಿ ಒಂದು ದೃಶ್ಯಮಾಲೆಯನ್ನೂ ಅಭಿನಯಿಸುವ ರೂಢಿ ಮೂಡಿತು. ಧಾರ್ಮಿಕ ಆವರಣದಲ್ಲಿ ಹುಟ್ಟಿಕೊಂಡ ದೃಶ್ಯಗಳು ಬರುಬರುತ್ತ ಲೌಕಿಕವಾಗತೊಡಗಿದಾಗ ಅವಕ್ಕೆ ಹೆಚ್ಚು ಹೆಚ್ಚು ಕಲಾಸ್ವರೂಪ ಬಂದು ಅವುಗಳಿಂದ ಏಕಾಂಕ ನಾಟಕವೂ ಅಂತೆಯೆ ದೀರ್ಘ ನಾಟಕವೂ ಜೊತೆ ಜೊತೆಯಾಗಿ ರೂಪಗೊಂಡುವು. ಇಂಗ್ಲಿಷ್ ನಾಟಕ ೧೬ನೆಯ ಶತಮಾನದಲ್ಲಿ ಕಸಬುದಾರರನ್ನು (Professionals) ಸಂಪೂರ್ಣವಾಗಿ ಆಶ್ರಯಿಸಿತು. ಇದರಿಂದ ನಾಟಕದ ಪ್ರಗತಿಗೆ ತುಂಬ ಸಹಾಯವೇನೊ ಆಯಿತು. ಆದರೆ ಏಕಾಂಕ ನಾಟಕಕ್ಕೆ ಮಾತ್ರ ಕಸಬುದಾರಿ ನಾಟಕಶಾಲೆಯಲ್ಲಿ ಅಷ್ಟಾಗಿ ಪ್ರೋತ್ಸಾಹ ದೊರೆಯುತ್ತಿರಲಿಲ್ಲ. ೧೬ನೆಯ ಶತಮಾನದಲ್ಲಿ ಏಕಾಂಕ ನಾಟಕವನ್ನು ರಂಗಭೂಮಿಯಿಂದಲೇ ಓಡಿಸಲಾಗಿತ್ತು. ೧೮ನೆಯ ಶತಮಾನದಲ್ಲಿ ಪ್ರಹಸನಗಳ (Farces) ಮತ್ತು ನಕಲಿ ನಾಟಕಗಳ (Burlesques) ಹುಚ್ಚು ಬೆಳೆಯಲ್ಲಿ ಏಕಾಂಕ ನಾಟಕದ ಜಿಲೆ ಮರೆಯಾಗಿಹೋಯಿತು. ಮತ್ತೆ ೧೯ನೆಯ ಶತಮಾನದಲ್ಲಿ ಏಕಾಂಕ ನಾಟಕಕ್ಕೆ ರಂಗಭೂಮಿಯಲ್ಲಿ ಒಂದು ಸ್ಥಾನ ದೊರೆಯಿತು; ಆದರೆ ಅದು ಏಕಾಂಕ ನಾಟಕಕ್ಕೆ ಗೌರವ ತರುವಂಥದಾಗಿರಲಿಲ್ಲ. ಪೂಜೆಗೆ ಮೊದಲು ಗಂಟೆ ಬಾರಿಸುವಂತೆ, ದೀರ್ಘ ನಾಟಕವನ್ನು ಆಡುವ ಮುನ್ನ ಏಕಾಂಕನಾಟಕವೊಂದನ್ನು ಪ್ರಾರಂಭ ದೃಶ್ಯವಾಗಿ (Curtain-raiser) ಅಭಿನಯಿಸುತ್ತಿದ್ದರು. ಒಂದು ಕಲಾಪ್ರಕಾರವಾಗಿ ಅದರ ಉಳಿವು ಸಂದೇಹಾಸ್ಪದವಾಗುತ್ತಿರುವ ಸಮಯಕ್ಕೆ, ನಾಟಕ ಕಲಾಸೇವೆಯನ್ನೆ ಮುಖ್ಯ ಧ್ಯೇಯವಾಗಿ ಉಳ್ಳ ಕಲಾವಿಲಾಸಿಗಳ Repertory Theatre Movement ಎಂಬ 'ನಾಟಕ ಭಂಡಾರ ಚಳವಳಿ'ಯೊಂದು ಪ್ರಾರಂಭವಾಗಿ ಅದಕ್ಕೆ ಜೀವದಾನ ಮಾಡಿತು. ಇಂಗ್ಲಿಷ್ ಮಾತಾಡುವ ಸೀಮೆಯಲ್ಲಿ ಮೊದಲು ಸ್ಥಾಪಿತವಾದ ನಾಟಕ ಭಂಡಾರ (Repertory Theatre) ಎಂದರೆ ಡಬ್ಲಿನ್‌ನಲ್ಲಿ ೧೯೦೪ರಲ್ಲಿ ಏರ್ಪಟ್ಟ ಆಬಿ ನಾಟಕಶಾಲೆ (Abbey Theatre). ಕಾಲಕ್ರಮದಲ್ಲಿ ಈ ಬಗೆಯ ಕಲಾವಿಲಾಸಿ ನಾಟಕ ಸಂಘಗಳು ಸೀಮೆಯಲ್ಲೆಲ್ಲ ಹರಡಿ, ಏಕಾಂಕ ನಾಟಕಕ್ಕೆ ವಿಶೇಷ ಚೇತನ ದೊರೆತು, ಸಾಹಿತ್ಯ ನಾಟಕ ಪ್ರಪಂಚಗಳಲ್ಲಿ ಅದಕ್ಕೊಂದು ಪ್ರಮುಖ ಸ್ಥಾನ ದೊರೆಯಲು ಅವಕಾಶವಾಯಿತು. ೧೯೧೪ರ ಮಹಾಯುದ್ಧವಾದ ತರುಣದಲ್ಲಿ ಕೆಲವು ಕಾಲ ಇಂಗ್ಲಿಷ್ ಏಕಾಂಕ ನಾಟಕದ ಪ್ರಗತಿ ಕುಂಠಿತವಾಯಿತು. ಆದರೆ ಮತ್ತೆ ೧೯೨೦ ರಿಂದ ಈಚೆಗೆ ಏಕಾಂಕ ನಾಟಕ ಮತ್ತೆ ಉಚ್ಛ್ರಾಯ ಸ್ಥಿತಿಗೆ ಏರಿ, ಅದರಲ್ಲಿ ಹಿಂದೆ ನಡೆಯದೆ ಇದ್ದ ಹಲವು ಪ್ರಯೋಗಗಳು ನಡೆದು, ಇಂಗ್ಲಿಷ್ ಏಕಾಂಕ ನಾಟಕದಲ್ಲಿ ಬೇರೆ ಬೇರೆ ಪ್ರಕಾರಗಳು ಮೂಡಿದುವು. ರುದ್ರನಾಟಕ (Tragedy), ಹರ್ಷನಾಟಕ (Comedy), ಪ್ರಹಸನ

(Farce)–ಇವೇ ಮುಂತಾದ ಸಾಮಾನ್ಯ ಬಗೆಗಳಲ್ಲದೆ, ಹಳ್ಳಿಯ ನಾಟಕ (Village Drama), ಮೇಳ ನಾಟಕ (Choric Drama), ಮೇಳ ಭಾಷಣ ಕೂಡಿದ ಮೂಕಾಭಿನಯ (Mime with Choric speech)— ಇವು ಹೊಸ ಪ್ರಕಾರಗಳಲ್ಲಿ ಕೆಲವು. ಸ್ತ್ರೀ ಪಾತ್ರಗಳನ್ನು ಮಾತ್ರ ಉಳ್ಳ ಏಕಾಂಕ ನಾಟಕಗಳೂ ಕೆಲವು ಇವೆ; ಮಹಿಳಾ ಸಂಘಗಳ ಕೋರಿಕೆಯ ಫಲವಾಗಿ ಹುಟ್ಟಿದವು ಇವು. ಇಂಗ್ಲಿಷ್ ಏಕಾಂಕ ನಾಟಕವಲ್ಲಿ ಇನ್ನೂ ಪ್ರಯೋಗಗಳು ನಡೆಯುತ್ತಿವೆ; ನಾಟಕಗಳ ಸಂಖ್ಯೆ ದಿನದಿನಕ್ಕೆ ಬೆಳೆಯುತ್ತಿದೆ.*

ನಮ್ಮ ಭರತಖಂಡದಲ್ಲಿ ಸಾವಿರಾರು ವರ್ಷಗಳ ಹಿಂದೆಯೆ ನಿರ್ದಿಷ್ಟ ಸ್ವರೂಪವನ್ನು ಹೊಂದಿದ್ದ ಏಕಾಂಕ ನಾಟಕಗಳು ಸಂಸ್ಕೃತ ಸಾಹಿತ್ಯದಲ್ಲಿ ಬೇರೆ ಬೇರೆ ಹೆಸರಿನಿಂದ ಪ್ರಚುರವಾಗಿದ್ದುವು. ಭರತಮುನಿ ಅವುಗಳನ್ನು ಉಲ್ಲೇಖಿಸಿದ್ದಾನೆ. (ಅವು ಯಾವುವೆಂದರೆ:—ಭಾಣ, ಪ್ರಹಸನ, ವ್ಯಾಯೋಗ, ವೀಥೀ, ಅಂಕ, ನಾಟ್ಯರಾಸಕ, ಉಲ್ಲಾಸ್ಯ, ಕಾವ್ಯ, ಪ್ರೇಂಖಣ, ರಾಸಕ, ವಿಲಾಸಿಕಾ, ಹಲ್ಲೀಶ, ಭಾಣಿಕಾ.) ಹಲವು ಸಂಸ್ಕೃತ ಏಕಾಂಕ ನಾಟಕಗಳು ಉಪಲಬ್ಧವಾಗಿವೆಯೆಂದು ತಿಳಿಯಬಂದಿದ್ದರೂ ಕನ್ನಡಿಗರಿಗೆ ಹೆಚ್ಚಾಗಿ ಪರಿಚಿತವಾಗಿರುವವು ಕೆಲವು ಮಾತ್ರ.†

ಇಷ್ಟು ಹೇಳಿದಮೇಲೆ, ಕನ್ನಡ ಏಕಾಂಕ ನಾಟಕ ಹುಟ್ಟಿದ್ದು ಎಂದು, ಅದರ ಬೆಳವಣಿಗೆ ಎಂತು, ಕನ್ನಡ ಸಾಹಿತ್ಯದಲ್ಲಿ ಅದರ ಸ್ಥಾನವೇನು, ಅದರ ಭವಿಷ್ಯ ಎಂತು — ಎಂಬಿವು ಸಹಜವಾಗಿ ಏಳುವ ಮರುಪ್ರಶ್ನೆಗಳು.

ಕನ್ನಡದಲ್ಲಿ ಹುಟ್ಟಿದ ಮೊದಲ ನಾಟಕ ಸಿಂಗರಾರ್ಯನ 'ಮಿತ್ರವಿಂದಾ ಗೋವಿಂದ' (೧೬೮೦); ಅಲ್ಲಿಂದ ಈಚೆಗೆ ಬಹುಕಾಲದವರೆಗೆ ಯಾವ ಕಾರಣದಿಂದಲೊ ಏನೊ ಕನ್ನಡದಲ್ಲಿ ನಾಟಕ ಸಾಹಿತ್ಯ ಬೆಳೆಯಲಿಲ್ಲ. ೧೯ನೆಯ ಶತಮಾನದ ಕಡೆಕಡೆಗೆ ಸಂಸ್ಕೃತದಿಂದ ಕೆಲವು ನಾಟಕಗಳು ಕನ್ನಡಕ್ಕೆ ಬಂದುವಾದರೂ ಕನ್ನಡದಲ್ಲಿ ಸ್ವತಂತ್ರವಾದ ನಾಟಕ ಯುಗ ಮೊದಲಾದದ್ದು ಈ ಶತಮಾನದ ಪ್ರಾರಂಭದಲ್ಲಿಯೆ. ಅಲ್ಲಿಯವರೆಗೆ ಕನ್ನಡದಲ್ಲಿ ನಾಟಕ ಸಾಹಿತ್ಯವೆ ಇಲ್ಲವೆಂದಮೇಲೆ ಇನ್ನು ಏಕಾಂಕ ನಾಟಕ ಎಲ್ಲಿಂದ ಬರಬೇಕು? ಕನ್ನಡ ಏಕಾಂಕ ನಾಟಕ ಸಂಪೂರ್ಣವಾಗಿ ಈ ಶತಮಾನದ ಕೂಸು; ಅದು ಹುಟ್ಟಿ ಕೇವಲ ೨೦–೨೫ ವರ್ಷಗಳು ಮಾತ್ರ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಹುಟ್ಟಿಕೊಂಡಿರುವ ಹೊಸ ಹೊಸ ಪ್ರಕಾರಗಳಲ್ಲಿ ಏಕಾಂಕ ನಾಟಕವೂ ಒಂದು. ಕನ್ನಡದಲ್ಲಿ ಮೊದಮೊದಲು ಏಕಾಂಕ ನಾಟಕಗಳನ್ನು ಬರೆದ ಕೆಲವು ವಿದ್ವಾಂಸರಿಗೆ ಸಂಸ್ಕೃತ ಏಕಾಂಕ ನಾಟಕಗಳ ಇರವು

---

* ಬರ್ನಾರ್ಡ್ ಷಾ, ಗಾಲ್ಸ್‌ವರ್ದಿ (Bernard Shaw, Galsworthy) ಇವರಂಥ ಸುಪ್ರಸಿದ್ಧ ನಾಟಕಕಾರರೆಲ್ಲ ಏಕಾಂಕ ನಾಟಕಗಳನ್ನು ಬರೆದಿದ್ದಾರೆ. ಇವರಿಬ್ಬರ ಜೊತೆಗೆ, ಏಕಾಂಕ ನಾಟಕವನ್ನು ಬೆಳೆಸಿಕೊಂಡು ಬಂದವರಲ್ಲಿ ಯೇಟ್ಸ್, ಬ್ಯಾರಿ, ಸಿಂಗ್, ಅರ್ವಿನ್, ಬ್ರಿಗ್‌ಹೌಸ್, ಚ್ಯಾಪಿನ್, ಡ್ರಿಂಕ್‌ವಾಟರ್, ಲಾರ್ಡ್ ಡನ್‌ಸೇನಿ, ನೋಯಲ್ ಕೌಅರ್ಡ್ (Yeats, Barrie, Synge, St. John Ervine, Brighouse, Chapin, John Drinkwater, Lord Dunsany, Noel Coward) ಇವರುಗಳು ಹೆಸರಾದ ಇಂಗ್ಲಿಷ್ ಏಕಾಂಕ ನಾಟಕಕರ್ತರಲ್ಲಿ ಕೆಲವರು ಮಾತ್ರ.

† ಭಾಸನ ಏಕಾಂಕ ನಾಟಕಗಳು ಶ್ರೀ॥ ಎಲ್. ಗುಂಡಪ್ಪನವರ ಭಾಷಾಂತರದ ಮೂಲಕ (೧೯೩೩) ಪರಿಚಿತವಾಗಿವೆ. ಶ್ರೀ॥ ಬೆನಗಲ್ ರಾಮರಾಯರೂ, ಶ್ರೀ॥ ಪಾಸ್ಯಂ ಸುಂದರಶಾಸ್ತ್ರಿಗಳೂ ಕೆಲವು ಪ್ರಹಸನಗಳನ್ನು ಕನ್ನಡಕ್ಕೆ ಭಾಷಾಂತರಿಸಿದ್ದಾರೆ.

ಗೊತ್ತಿಲ್ಲದೆ ಇರಲಿಲ್ಲವಾದರೂ ಕನ್ನಡ ಏಕಾಂಕ ನಾಟಕ ಇಂಗ್ಲಿಷ್ ಏಕಾಂಕ ನಾಟಕದ ಸ್ಫೂರ್ತಿ ಪ್ರಭಾವಗಳ ಫಲ ಎಂದು ಹೇಳಲು ಅಡ್ಡಿಯಿಲ್ಲ. ಆದರೂ, ಇಂಗ್ಲಿಷ್ ಮಾದರಿಯ ಮೇಲೆ ಏಕಾಂಕ ನಾಟಕ ರಚನೆಗೆ ಮೊದಲಾಗುವ ಮುನ್ನವೆ ಕನ್ನಡದಲ್ಲಿ ಏಕಾಂಕ ನಾಟಕದ ಕಡೆಗೆ ಒಂದು ಪ್ರವೃತ್ತಿ ಅಂತರ್ಗಾಮಿಯಾಗಿ ಹರಿಯುತ್ತಿತ್ತು ಎಂಬ ಅಂಶವನ್ನೂ ನಾವು ಲಕ್ಷ್ಯಕ್ಕೆ ತಂದುಕೊಳ್ಳಬಹುದಾಗಿದೆ. ಆ ಪ್ರವೃತ್ತಿ ಮೊದಮೊದಲು ಕೆಲವರ ಸಣ್ಣ ದೃಶ್ಯಗಳಲ್ಲಿ ಪ್ರಕಾಶಗೊಂಡಿತು. ಉದಾಹರಣೆಗಾಗಿ, ಶ್ರೀ॥ ಮಾಸ್ತಿ ವೆಂಕಟೇಶ ಅಯ್ಯಂಗಾರರ 'ಶಾನ್ತಾ' (೧೯೨೨), 'ಸಾವಿತ್ರಿ' (೧೯೨೩), 'ಉಷಾ' (೧೯೨೬) ಅಂಥ ಸಣ್ಣ ದೃಶ್ಯಗಳು. ಶ್ರೀ॥ ಕೆ. ವಿ. ಪುಟ್ಟಪ್ಪನವರ 'ಮೋಡಣ್ಣನ ತಮ್ಮ' (೧೯೨೬), 'ಯಮನ ಸೋಲು', 'ಜಲಗಾರ', 'ನನ್ನ ಗೋಪಾಲ' — ಇವೂ ಅದೇ ಜಾತಿಯ ಸಣ್ಣ ದೃಶ್ಯಗಳು. ಇದೇ ಸುಮಾರಿನಲ್ಲಿ ಇನ್ನೂ ಹಲವರು ಅಂಥ ಸಣ್ಣ ದೃಶ್ಯಗಳನ್ನು ಬರೆದು ಏಕಾಂಕ ನಾಟಕದ ಬೆಳೆಗೆ ನೆಲವನ್ನು ಹದಗೊಳಿಸಿದರು. ಅತ್ತ, ಮಂಗಳೂರಿನ ಶ್ರೀ॥ ಎಂ. ಎನ್. ಕಾಮತ್ ಅವರು ತಾವು ಅಧ್ಯಾಪಕರಾಗಿದ್ದ ಶಾಲೆಯ ವರ್ಧಂತ್ಯುತ್ಸವಗಳಲ್ಲಿ ವಿದ್ಯಾರ್ಥಿಗಳು ಅಭಿನಯಿಸುವುದಕ್ಕಾಗಿ ಅವರಿಗೆ ತಕ್ಕ ಸಣ್ಣ ದೃಶ್ಯಗಳನ್ನು ಬರೆದುಕೊಡುತ್ತಿದ್ದರು. ಅವೆಲ್ಲ ಬಹುತರ ಏಕಾಂಕ ರೂಪಕಗಳೆ. ಇತ್ತ, 'ಆಧುನಿಕ ಕನ್ನಡ ನಾಟಕ ಪಿತಾಮಹ' ಎಂದು ಹೆಸರಾದ ಶ್ರೀ॥ ಕೈಲಾಸಂ ಅವರು ಏಕಾಂಕ ನಾಟಕ ರಚನೆಗೆ ತೊಡಗಿದ್ದರು. ಇವರ 'ಪ್ರಕಟವಾದ' ಏಕಾಂಕ ನಾಟಕಗಳಲ್ಲಿ 'ಗಂಡಸ್ಕತ್ರಿ' ಅಥವಾ 'ಸ್ತ್ರೀಮುಖವ್ಯಾಘ್ರ'ವೇ (೧೯೩೦) ಬಹುಶಃ ಮೊದಲನೆಯದಾಗಿ ಕಾಣುತ್ತದೆ. ಈ ಇಬ್ಬರು ಮಹನೀಯರೂ ಆ ವೇಳೆಯಲ್ಲಿ ತಮ್ಮ ಏಕಾಂಕ ನಾಟಕಗಳಿಗೆ ಆ ಅಂಕಿತದ ಮುದ್ರೆಯನ್ನು ಮಾತ್ರ ಒತ್ತಿಕೊಳ್ಳಲಿಲ್ಲ, ಅಷ್ಟೆ! ೧೯೩೦ರಲ್ಲಿ ಪ್ರಕಟವಾದ 'ತಿರುಕರ ಪಿಡುಗು' ಎಂಬ 'ಹುಚ್ಚಾಟ'ಗಳ ಸಂಗ್ರಹದಲ್ಲಿನ ಶ್ರೀ॥ ಬೇಂದ್ರೆಯವರ 'ತಿರುಕರ ಪಿಡುಗು' ಮತ್ತು ಶ್ರೀ॥ ಕೃಷ್ಣಕುಮಾರರ 'ಹಾಳ್‌ಗಂಡು' ಇವೂ ಏಕಾಂಕ ನಾಟಕಗಳೆ. ೧೯೩೧ರಲ್ಲಿ ಶ್ರೀ॥ ಅ. ನ. ಕೃಷ್ಣರಾಯರ 'ಆವಪ್ಪೇನು' ಎಂಬ "ಏಕಾಂಕ ವಿನೋದಮಯ ವಿಷಾದಾಂತ ನಾಟಕ"ವೂ, ಶ್ರೀ॥ ರಾಜರತ್ನಂ ಅವರ ಕಾವ್ಯಮಯ ಏಕಾಂಕ ದೃಶ್ಯ 'ಗಂಡುಗೊಡಲಿ'ಯೂ ಪ್ರಕಟವಾದುವು. ಈ ಎಲ್ಲ ನಾಟಕಗಳು ಕನ್ನಡ ಏಕಾಂಕ ನಾಟಕದ ಮುಂಬೆಳಕಿನ ಕೆಲವು ಕಿರಣಗಳು ಮಾತ್ರ. ಮೇಲೆ ಹೇಳಿದ ಮಹನೀಯರೂ, ಇವರೊಡನೆ ಶ್ರೀ॥ ಕಾರಂತ, ಶ್ರೀ॥ ಜಾಗಿರದಾರ ಇವರೂ ಕೂಡಿ ಕನ್ನಡ ಏಕಾಂಕ ನಾಟಕದ ಭವ್ಯವಾದ ಕಟ್ಟಡದ ತಳಪಾಯ ಹಾಕಿದರು. ಕನ್ನಡ ಏಕಾಂಕ ನಾಟಕ ಚೆನ್ನಾಗಿ ರೂಪಗೊಂಡು, ತನ್ನದೇ ಆದ ಒಂದು ವಿಲಾಸದಿಂದ ಬೆಳಗುತ್ತ ನೆಲೆಯೂರಿ ನಿಂತು, ಕನ್ನಡ ಸಾಹಿತ್ಯದ ಪೀಠಪಂಕ್ತಿಯಲ್ಲಿ ತನಗೊಂದು ಸ್ಥಾನವನ್ನು ಗಳಿಸಿಕೊಂಡಿತು. ಸಾಹಿತಿಗಳು ಹಲವರು ಏಕಾಂಕ ನಾಟಕ ರಚನೆಗೆ ಕೈಹಾಕಿದರು. ಮಂಗಳೂರು, ಬೆಂಗಳೂರು, ಮೈಸೂರು, ಧಾರವಾಡ ಮುಂತಾದ ಕೇಂದ್ರಗಳ ಶಾಲೆ ಕಾಲೇಜುಗಳಲ್ಲಿ ಏಕಾಂಕ ನಾಟಕಗಳನ್ನು ಆಡತೊಡಗಿದರು. ೧೯೩೩ರ ಹೊತ್ತಿಗೆ ಶ್ರೀ॥ ಕಾರಂತರು ತಮ್ಮ

'ಏಕಾಂಕ ನಾಟಕಗಳು' ಎಂಬ ಸಂಗ್ರಹವನ್ನು ಪ್ರಕಟಿಸಿದರು. ಮರುವರುಷ ಮಂಗಳೂರಿನ 'ಮಿತ್ರಮಂಡಳಿ'ಯವರು ದಕ್ಷಿಣ ಕನ್ನಡದ ಬೇರೆ ಬೇರೆ ಸಾಹಿತಿಗಳ ಏಕಾಂಕ ನಾಟಕಗಳನ್ನು ಕೂಡಿಸಿ 'ಸಂಸಾರ' ಎಂಬ ಸಂಗ್ರಹವನ್ನು ಕೊಟ್ಟರು. ೧೯೩೫ರಲ್ಲಿ ಧಾರವಾಡದ ಮನೋಹರ ಗ್ರಂಥಮಾಲೆಯವರು 'ಕೋಲ್ಮಿಂಚು' ಎಂಬ ಸಂಗ್ರಹವನ್ನು ಹೊರಕ್ಕೆ ತಂದರು. "ಕನ್ನಡ ನಾಡಿನ ಬೇರೆ ಬೇರೆ ಭಾಗಗಳಲ್ಲಿ ಕೆಲಸ ಮಾಡುತ್ತಿರುವ ಸಾಹಿತಿಗಳಿಂದ ಒಂದಂಕದ ನಾಟಕಗಳನ್ನು ಪಡೆದು ಅವುಗಳನ್ನು ಸಂಗ್ರಹಿಸಬಹುದಾದ ಗ್ರಂಥಗಳಲ್ಲಿ 'ಕೋಲ್ಮಿಂಚು' ಮೊದಲನೆಯದೆಂದು ತೋರುತ್ತದೆ" ಎಂಬುದಾಗಿ ಆ ಗ್ರಂಥದ ಮುನ್ನುಡಿಯಲ್ಲಿ ಹೇಳಲಾಗಿದೆ. 'ಕೋಲ್ಮಿಂಚು' ಮಿಂಚಿ ಕನ್ನಡ ಏಕಾಂಕ ನಾಟಕದ ಕಡೆಗೆ ಜನಗಮನವನ್ನು ಸೆಳೆಯಿತೆಂದರೆ ತಪ್ಪಾಗದು. ಕೂಡಲೆ ಏಕಾಂಕ ನಾಟಕ ಕನ್ನಡ ನಾಡಿನಲ್ಲೆಲ್ಲ ಗುಡುಗಾಡಿ ವೃಷ್ಟಿಗರೆಯತೊಡಗಿತು. ಪ್ರತಿಭಾವಂತರಾದ ಸಾಹಿತಿಗಳು ಅದರ ಮರ್ಮವರಿತು ಅದನ್ನು ಹೆಚ್ಚು ಹೆಚ್ಚಾಗಿ ಬರೆಯತೊಡಗಿದರು. ಕಲಾವಿಲಾಸಿಗಳು ಗುಂಪುಗೂಡಿ ಆಡತೊಡಗಿದರು. ಬರಿಯ ಪ್ರಬಂಧ, ಕವಿತೆ, ಕಥೆಗಳಿಂದ ತುಂಬಿರುತ್ತಿದ್ದ ಕನ್ನಡ ಪತ್ರಿಕೆಗಳು ಏಕಾಂಕ ನಾಟಕಗಳನ್ನೂ ಪ್ರಕಟಿಸಲು ತೊಡಗಿದುವು. ಏಕಾಂಕ ನಾಟಕದ ಬೆಳವಣಿಗೆಗೆ ಪತ್ರಿಕೆಗಳು ಬಹು ಮಟ್ಟಿಗೆ ಸಹಕಾರಿಯಾದುವು. ಹೀಗೆ ಪತ್ರಿಕೆಗಳಲ್ಲಿ ಪ್ರಕಟವಾಗಿ ಚೆದರಿಹೋಗಿರುವ ನಾಟಕಗಳ ಸಂಖ್ಯೆ ಲೆಕ್ಕಕ್ಕೆ ಸಿಕ್ಕುವಂತಿಲ್ಲ; ಸುಮಾರು ೨೦೦ಕ್ಕೆ ಮೇಲ್ಪಟ್ಟಿದೆ ಎಂದು ಅಂದಾಜು ಮಾಡಬಹುದಾಗಿದೆ. ಈ ಮೊದಲೇ ಪ್ರಸ್ತಾವಿಸಿರುವ ಸಂಗ್ರಹಗಳಲ್ಲದೆ, 'ಹುಚ್ಚಾಟಗಳು' (ಬೇಂದ್ರೆ), 'ನಡುಮನೆಯಲ್ಲಿ' (ಎನ್. ಕೆ. ಕುಲಕರ್ಣಿ), 'ಬಣ್ಣದ ಬೀಸಣಿಕೆ' (ಅ. ನ. ಕೃಷ್ಣರಾಯ), 'ಸರಪಣಿ' (ದಿವಂಗತ ಪೇಜಾವರ ಸದಾಶಿವರಾಯ)—ಇವೇ ಮುಂತಾಗಿ ಸುಮಾರು ೧೦–೧೨ ಸಂಗ್ರಹಗಳು ಹೊರಬಿದ್ದಿವೆ.

ಕನ್ನಡ ಏಕಾಂಕ ನಾಟಕಕ್ಕೆ ಪ್ರತ್ಯೇಕವಾದ ಲಕ್ಷಣಗಳೇನೂ ಇಲ್ಲ. ಈ ಹಿಂದೆ ಹೇಳಿರುವ ಸಾಮಾನ್ಯಲಕ್ಷಣಗಳು ಕನ್ನಡ ಏಕಾಂಕ ನಾಟಕಕ್ಕೂ ಅನ್ವಯಿಸುತ್ತವೆ. ಉತ್ತಮ ಏಕಾಂಕ ನಾಟಕ ಹೇಗಿರಬೇಕು ಎನ್ನುವುದಕ್ಕೆ ಹಲವು ಕನ್ನಡ ಏಕಾಂಕ ನಾಟಕಗಳಿಂದಲೆ ನಿದರ್ಶನ ಕೊಡಬಹುದಾಗಿದ್ದರೂ, ಇಲ್ಲಿ ಸಾಧ್ಯವಿಲ್ಲವಾಗಿದೆ. ಪ್ರಕಟವಾಗಿರುವ ಎಲ್ಲ ಏಕಾಂಕ ನಾಟಕಗಳೂ ಒಂದೇ ಮಟ್ಟದಲ್ಲಿವೆ ಅಥವಾ ಲಕ್ಷಣಬದ್ಧವಾಗಿವೆ ಎಂದು ಹೇಳಬರುವುದಿಲ್ಲ; ಹಾಗೆ ಇರಬೇಕೆಂದು ನಿರೀಕ್ಷಿಸುವುದೂ ತಪ್ಪು. ಹಲಕೆಲವು ಬರಿಯ ದೃಶ್ಯಚಿತ್ರಗಳು ಮಾತ್ರ.

ಒಟ್ಟನಮೇಲೆ, ಸಂಖ್ಯಾದೃಷ್ಟಿಯಿಂದಲೆ ನೋಡಲಿ ಗುಣದ ದೃಷ್ಟಿಯಿಂದಲೆ ನೋಡಲಿ, ಇಷ್ಟು ಅಲ್ಪಕಾಲದಲ್ಲಿ ಆಗಿರುವ ಕನ್ನಡ ಏಕಾಂಕ ನಾಟಕದ ಬೆಳವಣಿಗೆ ಆಶಾಜನಕ ಮಾತ್ರವಲ್ಲ, ತೃಪ್ತಿಕರ ಎಂದೇ ಹೇಳಬೇಕು.

ಕನ್ನಡ ಏಕಾಂಕ ನಾಟಕದಲ್ಲಿ ಇನ್ನೂ ಪ್ರಯೋಗಗಳು ನಡೆಯುತ್ತಲೇ ಇವೆ. ಇದುವರೆಗೆ ನಡೆದ ಪ್ರಯೋಗಗಳ ಫಲವಾಗಿ, ಇಂಗ್ಲಿಷಿನಲ್ಲಿರುವಂತೆ ಹಲವು ಮಾದರಿಗಳು ಈಗಾಗಲೇ ಕನ್ನಡದಲ್ಲೂ ತಲೆದೋರಿವೆ. ಶೈಲಿಯ ದೃಷ್ಟಿಯಿಂದ

ನೋಡಿದರೆ ಗದ್ಯನಾಟಕವಿದೆ, ಪದ್ಯನಾಟಕವಿದೆ, ಗೀತನಾಟಕ (Operetta) ಇದೆ. ವಸ್ತುದೃಷ್ಟಿಯಿಂದ,— ಪೌರಾಣಿಕ, ಐತಿಹಾಸಿಕ, ಸಾಮಾಜಿಕ ನಾಟಕಗಳಿವೆ. ಪದ್ಯನಾಟಕ ಬರೆಯುವವರು ವಿಶೇಷವಾಗಿ ಸರಳರಗಳೆಯನ್ನು ಬಳಸಿಕೊಳ್ಳುತ್ತಿದ್ದಾರೆ. ಸಾಮಾಜಿಕ ನಾಟಕಗಳೆಲ್ಲ ಸಾಮಾನ್ಯವಾಗಿ ಗದ್ಯದಲ್ಲಿವೆ. ಪೌರಾಣಿಕ ವಸ್ತುಗಳನ್ನುಳ್ಳ ಏಕಾಂಕ ನಾಟಕಗಳನ್ನು ಪದ್ಯದಲ್ಲಿ ಎಷ್ಟು ಗಂಭೀರವಾಗಿ ಬರೆಯಬಹುದೊ ಗದ್ಯದಲ್ಲೂ ಅಷ್ಟೇ ಗಂಭೀರವಾಗಿ ಬರೆಯಬಹುದೆಂಬುದಕ್ಕೆ ಹಲವು ನಿದರ್ಶನಗಳಿವೆ. ಗೀತನಾಟಕ ನಮ್ಮವರಿಗೆ ಇನ್ನೂ ಹೊಸದು. ಏಕಾಂಕ ನಾಟಕದಲ್ಲಿ ಅದರ ಪ್ರಯೋಗ ನಡಸಿದ ಸಾಹಸದ ಯಶಸ್ಸು ಶ್ರೀ॥ ಕಾರಂತರದ್ದು; ಅವರ 'ಯಾರೋ ಅಂದರು', 'ಬದುಕಬಹುದು', 'ಕಿಸಾಗೋತಮಿ'— ಇವು ಮೂರು ಈ ಮಾದರಿಯವು. ಈ ಗೀತನಾಟಕದ ಆನಂದದಾಯಕ ಶಕ್ತಿ ನಮ್ಮ ಜನಕ್ಕೆ ಇನ್ನೂ ಹೆಚ್ಚಾಗಿ ತಿಳಿಯಬೇಕಾಗಿದೆ. ದೀರ್ಘ ನಾಟಕವನ್ನು ಇಡಿಯಾಗಿ ಗೀತದಲ್ಲಿ ಬರೆದರೆ ನಡುನಡುವೆ ಬೇಸರವಾದೀತೋ ಏನೋ? ಇಡಿಯ ಏಕಾಂಕ ನಾಟಕ ಗೀತದಲ್ಲಿದ್ದರೆ ಆ ಶಂಕೆಗೆ ಅವಕಾಶವಿಲ್ಲ.

ಪೌರಾಣಿಕ ಏಕಾಂಕ ನಾಟಕಗಳು ಹಲವು ಹುಟ್ಟಿವೆ. ಏಕಾಂಕ ನಾಟಕ ಕರ್ತರಿಗೆ ನಮ್ಮ ಮಹಾಕಾವ್ಯಗಳೂ ಪುರಾಣಗಳೂ ದೊಡ್ಡ ಗಣಿ. ಐತಿಹಾಸಿಕ ವಸ್ತುಗಳನ್ನುಳ್ಳ ಏಕಾಂಕ ನಾಟಕಗಳು ಕನ್ನಡದಲ್ಲಿ ಇನ್ನೂ ಹೆಚ್ಚಾಗಿ ಹುಟ್ಟಿಲ್ಲ. ಈ ಅವಸರದಲ್ಲಿ 'ಸಂಸ' ಅವರ 'ಬಿರುದೆಂತೆಂಬರ ಗಂಡ' ಎಂಬ ಮೈಸೂರು ಇತಿಹಾಸಕ್ಕೆ ಸಂಬಂಧಿಸಿದ ನಾಟಕವನ್ನು ನೆನೆಯಬೇಕಾಗಿದೆ. ಅವರು ಬದುಕಿದ್ದರೆ ಏಕಾಂಕ ನಾಟಕ ಭಂಡಾರವನ್ನು ಐತಿಹಾಸಿಕ ನಾಟಕಗಳಿಂದ ತುಂಬಿಸುತ್ತಿದ್ದರು. ಶ್ರೀ॥ ಕೆ. ಗೋಪಾಲಕೃಷ್ಣರಾಯರ 'ರುಗ್ಣಶಯ್ಯೆ', ಶ್ರೀ॥ ಅ. ನ. ಕೃಷ್ಣರಾಯರ 'ಅನುಗ್ರಹ' ಇವೆರಡೂ ವಿಜಯನಗರ ಇತಿಹಾಸಕ್ಕೆ ಸಂಬಂಧಪಟ್ಟ ಮಾರ್ಮಿಕವಾದ ಏಕಾಂಕ ನಾಟಕಗಳು. ನಮ್ಮ ಕನ್ನಡ ನಾಡ ಚರಿತ್ರೆಯಲ್ಲಿ ಏಕಾಂಕ ನಾಟಕಕ್ಕೆ ಒದಗಿಬರುವಂಥ ನೂರಾರು ಸನ್ನಿವೇಶಗಳು ದೊರೆಯುತ್ತವೆ. ಬಹುಸಂಖ್ಯೆಯ ಏಕಾಂಕ ನಾಟಕಗಳು ಸಾಮಾಜಿಕ ವಸ್ತುಗಳನ್ನುಳ್ಳವು. ಈ ಸಾಮಾಜಿಕ ಏಕಾಂಕ ನಾಟಕಗಳಲ್ಲೂ ವೈವಿಧ್ಯವಿಲ್ಲದೆ ಇಲ್ಲ: 'ಕನ್ಯಾರ್ಥಿ', 'ಕವಿಕುಟೀರ' (ಶ್ರೀ॥ ಕೆ. ಗೋಪಾಲಕೃಷ್ಣರಾಯ), 'ಅತಿಥಿ ದೇವರು' (ಶ್ರೀ॥ ರಂ. ಶ್ರೀ. ಮುಗಳಿ)—ಇಂಥವು ಒಂದು ವಿಶಿಷ್ಟ ಪಾತ್ರವನ್ನು ಪರಿಚಯಮಾಡಿಕೊಡುತ್ತವೆ. 'ಗುಬ್ಬಚ್ಚಿಗೂಡು', 'ಧರ್ಮಸಂಕಟ' (ಅ. ನ. ಕೃಷ್ಣರಾಯ)— ಇವು ಸಮಾಜದ ಹೊಲಸು ಭಾಗಗಳನ್ನು ಇದ್ದಂತೆ ಬತ್ತಲೆಯಾಗಿ ತೆರೆದು ತೋರಿಸುತ್ತವೆ. ಶ್ರೀ॥ ಗಳಾದ ಕೈಲಾಸಂ, ಬೇಂದ್ರೆ, ಕಾರಂತ, ಜಾಗಿರದಾರ— ಇವರೇ ಒಂದು ಗುಂಪು. ಇವರ ಸಾಮಾಜಿಕ ಏಕಾಂಕ ನಾಟಕಗಳೇ ಒಂದು ರೀತಿ. ಅವು ನಮ್ಮ ಸಮಾಜವನ್ನು ಯಥಾರ್ಥವಾಗಿ ಚಿತ್ರಿಸುವುವಲ್ಲದೆ, ಅದರ ಕುಂದುಕೊರತೆಗಳಿಗೆ ಭೂತಗನ್ನಡಿ ಹಿಡಿದುತೋರಿಸುತ್ತವೆ. ತೋರಿಸುವುದು ಮಾತ್ರವಲ್ಲ, ನಮಗೆ ಮನವಟ್ಟಾಗುವಂತೆ ಮಾಡುತ್ತವೆ. ಹಾಗೆ ಮಾಡಲು ಅವು ಉಪಯೋಗಿಸಿಕೊಂಡಿರುವ ಸಾಧನ ಹಾಸ್ಯ ಮತ್ತು ವಿಡಂಬನ. ಇಂಥ ನಾಟಕಗಳನ್ನು 'ವಿಡಂಬನಾತ್ಮಕ ಪ್ರಹಸನ'

ಗಳಿಂದು ಕಲಿಯಬಹುದು. ಇನ್ನು ಕೆಲವು ಸಾಮಾಜಿಕ ನಾಟಕಗಳು ಒಂದು ಉದ್ದೇಶವನ್ನು ಗುರಿಯಲ್ಲಿಟ್ಟುಕೊಂಡು, ಅದರ ಸಾಧನೆಗೆ ಅನುವಾಗುವಂಥ ಪಾತ್ರಗಳನ್ನೂ ಸನ್ನಿವೇಶಗಳನ್ನೂ ಸೃಷ್ಟಿಸಿಕೊಂಡು, ಕುರಿತ ಉದ್ದೇಶವನ್ನು ಮನಹೊಗುವಂತೆ ಮಾಡುತ್ತವೆ. 'ಜಾತ್ರೆ' (ಶ್ರೀ॥ ಬೇಂದ್ರೆ), 'ಬೆಳಕು' (ಶ್ರೀ॥ ಎನ್. ಕೆ. ಕುಲಕರ್ಣಿ)—ಇವನ್ನು ಈ ಬಗೆಗೆ ಉದಾಹರಿಸಬಹುದು. 'ದೆವ್ವನ ಮನೆ' (ಶ್ರೀ॥ ಬೇಂದ್ರೆ)ಯಂಥ ವಾತಾವರಣವನ್ನು ಕಟ್ಟುವ ಏಕಾಂಕ ನಾಟಕ ವಿರಳ. ಹಿಂದಿಗೆ ಎದುರಾಗಿ ಕನ್ನಡವನ್ನು ಎತ್ತಿ ಹಿಡಿಯುವ 'ಜ್ವಾಲಾಮುಖಿ' (ಶ್ರೀ॥ ಅ. ನ. ಕೃ.) ಒಂದೇ ಒಂದಾದ ಪ್ರಚಾರಾತ್ಮಕ ಏಕಾಂಕ ನಾಟಕ ಎಂದು ತೋರುತ್ತದೆ. ಒಟ್ಟಿನಲ್ಲಿ, ಎಲ್ಲ ಸಾಮಾಜಿಕ ಏಕಾಂಕ ನಾಟಕಗಳಲ್ಲೂ ಹೆಚ್ಚಾಗಿಯೊ ಮಿತಿಯಾಗಿಯೊ ಹಾಸ್ಯ ಕಂಡುಬರುತ್ತದೆ. ಅವು ನಗೆಯನ್ನು ಮುಂದುಮಾಡಿಕೊಂಡು, ನಲಿವು ಕೊಟ್ಟು, ಆವಶ್ಯಕತೆ ಬಿದ್ದಲ್ಲಿ ಸಮಾಜದ ಕುಂದುಕೊರತೆಗಳನ್ನು ಎತ್ತಿ ತೋರಿಸಿ ತಿಳಿವುಕೊಡುವ ಕೆಲಸ ಮಾಡುತ್ತಿವೆ. ಇದು ಸ್ತುತ್ಯವಾದ್ದು.

ಇಂಗ್ಲಿಷಿನಲ್ಲಿ ಮಕ್ಕಳಿಗಾಗಿಯೆ ಬರೆದ ಬಗೆಬಗೆಯ ಸರಳಸುಂದರ ಏಕಾಂಕ ನಾಟಕಗಳು ಇವೆ. ಕನ್ನಡದಲ್ಲಿ ಮಕ್ಕಳ ಏಕಾಂಕ ನಾಟಕಗಳು ಸಾಕಷ್ಟು ಇಲ್ಲ. ಈ ಕೊರತೆಯನ್ನು ತುಂಬಬೇಕಾದ್ದು ಆವಶ್ಯಕ. ಮತ್ತು ಇಂಗ್ಲಿಷಿನಲ್ಲಿ ಇರುವಂತೆ, ಸ್ತ್ರೀ ಸಂಘಗಳಿಗಾಗಿ ಬರಿಯ ಸ್ತ್ರೀ ಪಾತ್ರಗಳನ್ನು ಮಾತ್ರ ಉಳ್ಳ ಏಕಾಂಕ ನಾಟಕಗಳನ್ನು ಪ್ರಯೋಗಾತ್ಮಕವಾಗಿ ರಚಿಸಿ, ಅವುಗಳ ಆವಶ್ಯಕತೆ ಇದೆಯೆ ಎಂಬುದನ್ನೂ ಕಂಡುಕೊಳ್ಳಬೇಕಾಗಿದೆ.

ಹೊಸ ಬೆಳೆ ಬೆಳೆಯುವಂದು ಜೊತೆಯಲ್ಲಿ ಕಳೆಯೂ ಬೆಳೆಯುವುದು ಸ್ವಾಭಾವಿಕ. ಆದರೆ ಕಳೆ ಬೆಳೆಯನ್ನು ಮುಚ್ಚದಂತೆ ನೋಡಿಕೊಳ್ಳಬೇಕು. ಕನ್ನಡದಲ್ಲಿ ಉತ್ತಮವಾದ ಏಕಾಂಕ ನಾಟಕಗಳೂ ಹುಟ್ಟಿವೆ, ಕಳಪೆಯವೂ ಹುಟ್ಟಿವೆ. ಇದರಿಂದ ನಾವು ಹಿಂದೆಗೆಯಬೇಕಾಗಿಲ್ಲ. ಒಟ್ಟಿನ ಮೇಲೆ ಏಕಾಂಕ ನಾಟಕದ ಭವಿಷ್ಯ ಚೆನ್ನಾಗಿದೆ. ಅದು ಈಗಾಗಲೆ ನಮ್ಮ ಸಾಹಿತ್ಯ ಕ್ಷೇತ್ರದಲ್ಲಿ ಚೆನ್ನಾಗಿ ಬೇರುಬಿಟ್ಟಿದೆ. ಅದನ್ನು ಸರಿಯಾದ ರೀತಿಯಲ್ಲಿ ಬೆಳಸಿಕೊಳ್ಳಬೇಕು. ಅದರಲ್ಲಿ ಉತ್ತಮ ಕೃತಿಗಳು ಬಿದಬೇಕಾದರೆ ಅವಕ್ಕೆ ತಕ್ಕ ಉತ್ತೇಜನ ಕೊಡಬೇಕು. ಈಗ ಬಹುಮಟ್ಟಿಗೆ 'ಓದುನಾಟಕ'ವಾಗಿರುವ ಏಕಾಂಕ ನಾಟಕ 'ಆಡುನಾಟಕ'ವಾಗಬೇಕು. ಕಸಬುದಾರಿ ನಾಟಕ ಸಂಘಗಳಿಗೆ ಏಕಾಂಕ ನಾಟಕಗಳು ಬೇಕಾಗಿಲ್ಲ. ಪ್ರತಿಯೊಂದು ಶಾಲೆ ಕಾಲೇಜಿನ ಕಲಾಭಿಮಾನಿ ವಿದ್ಯಾರ್ಥಿಗಳು ಪ್ರತಿ ವರ್ಷವೂ ಒಂದು ಏಕಾಂಕ ನಾಟಕ ಆಡಬೇಕು; ಪ್ರತಿಯೊಂದು ಕರ್ನಾಟಕ ಸಂಘವೂ ಒಂದು ನಾಟಕ ಭಂಡಾರ (Repertory Theatre) ಆಗಬೇಕು. ಈ ರೀತಿ ಒಂದು 'ನಾಟಕ ಭಂಡಾರ ಚಳವಳಿ'ಯೇ ಮೂಡಬೇಕು. ಆಗ, 'ಓದುನಾಟಕ'ವಾಗಿರುವ ಏಕಾಂಕ ನಾಟಕ 'ಆಡುನಾಟಕ' ಆಗುವುದು ಮಾತ್ರವಲ್ಲ, ಜನತೆಯ ನಾಟಕಾಭಿರುಚಿಯನ್ನು ಕೆರಳಿಸಿ ಕನ್ನಡ ನಾಟಕ ಪ್ರಪಂಚ ಪುನರುಜ್ಜೀವನಗೊಳ್ಳಲು ಸಹ ನೆರವಾಗುವುದು. ಆ ಸುದಿನ ಬೇಗನೆ ಬರಲಿ.

**ಎಂ. ವಿ. ಸೀತಾರಾಮಯ್ಯ**

# ಗ್ರೀಕ್ ರುದ್ರನಾಟಕ

ಹೊಸ ಹೊಸ ಚಿಗುರೊಡೆದು ಬಗೆ ಬಗೆಯ ಹೂವು ಹಣ್ಣುಗಳಿಂದ ಕಂಗೊಳಿಸಿ ನಾಡು ನಾಡುಗಳಲ್ಲಿ ಹಬ್ಬಿರುವ ಪಡುವಲ ನಾಟಕದ ಹೆಮ್ಮರನ ತಾಯಿಬೇರನ್ನು ಅರಸುವರೆ ಹಳಹಿರಿಯ ಹೆಲ್ಲಾಸಿಗೆ ಹೋಗಬೇಕು. ೨೫ ಶತಮಾನಗಳ ಹಳಮೆಯ ಆ ಜಗದ್ವಿಖ್ಯಾತ ಗ್ರೀಸ್‌ನಾಡು ಸಮಸ್ತ ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿಗಳ ತವರು. ದೇಶವಿಸ್ತಾರದಲ್ಲಾಗಲಿ ಜನಬಾಹುಳ್ಯದಲ್ಲಾಗಲಿ ಅಷ್ಟೇನೂ ದೊಡ್ಡದಲ್ಲದ ಒಂದು ಜನ, ಅದರಲ್ಲಿಯೂ ಒಂದು ಪಟ್ಟಣ, ಒಂದೆರಡು ತಲೆಮೊರೆಯಲ್ಲಿ ತನ್ನ ಸರ್ವಶಕ್ತಿ ಚೈತನ್ಯಗಳನ್ನೂ ಹೊಮ್ಮಿಸಿಕೊಂಡು, ತನ್ನ ಉಜ್ವಲ ಪ್ರತಿಭೆಯ ಅಮರ ಪ್ರಭಾವವನ್ನು ಇಡಿಯ ಜಗತ್ತಿನ ಮೇಲೆ ಬೀರಿ, ಇಂದಿನ ಜಗತ್ತಿನ ಒಂದು ದೊಡ್ಡ ನಾಗರಿಕತೆಯನ್ನು ಅಂದೇ ತನಗೆ ಋಣಿಯಾಗಿ ಮಾಡಿಕೊಂಡ ಅದ್ಭುತ ಮಹಿಮೆ ಮತ್ತೆಲ್ಲಿಯೂ ಕಾಣಬರುವುದಿಲ್ಲ. ಗ್ರೀಸಿನ ಸ್ವರ್ಣಯುಗವೆಂದು ಕರೆಯುವ ಪೆರಿಕ್ಲೀಸಿನ ಕಾಲದಲ್ಲಿ, ಅಥೇನೇ ಪಟ್ಟಣದಲ್ಲಿ, ಉಳಿದೆಲ್ಲ ಕಲೆಗಳೂ ಶಾಸ್ತ್ರಗಳೂ ಹೊಮ್ಮಿ ಹೊನ್ನಾದಂತೆಯೇ ರುದ್ರನಾಟಕವೂ ತನ್ನ ತುದಿ ನೆಲೆಯನ್ನು ಮುಟ್ಟಿತು. ಮೂವರು ಮಹಾ ಕವಿಗಳ ಕೃಷಿಯಿಂದ ಸುಮಾರು ೫೦ ವರ್ಷಗಳಲ್ಲಿ ಗ್ರೀಕ್ ರುದ್ರನಾಟಕ ಮೊಳೆತು ಚಿಗುತು ಹೂವಿಗೆ ಬಂದು ಹಣ್ಣು ಬಿಟ್ಟಿತು. ಅದರ ಹುಟ್ಟು ಬೆಳವಣಿಗೆಗಳನ್ನು ಕುರಿತು ಹೆಗ್ಗುರುತಾಗಿ ನಾಲ್ಕು ಮಾತುಗಳನ್ನು ಹೇಳುತ್ತದೆ.

ನಮ್ಮಲ್ಲಿ ಕೆಲವೆಡೆ ಮಾರಿಯ ಮೆರವಣಿಗೆಗಳಲ್ಲಿಯೂ ಜಾತ್ರೆಗಳಲ್ಲಿಯೂ ಜೋಮನ ಕುಣಿತ ನಡೆಯುವುದುಂಟು. ಮೆರವಣಿಗೆ ಅಲ್ಲಲ್ಲಿ ನಿಂತಾಗ ಮಾರಮ್ಮನ ಮುಂದೆ ಭಕ್ತನೊಬ್ಬ ಮೊಗವಾಡ ಹಾಕಿಕೊಂಡು ಆವೇಶದಿಂದ ಕುಣಿಯುತ್ತಾನೆ. ಅವನ ಸುತ್ತ ಹಲವರು ಹರೆ ತಮಟೆಗಳನ್ನು ಬಾಜಿಸುತ್ತ ಹಾಡು ಹೇಳಿಕೊಂಡು ಸುತ್ತುತ್ತಾರೆ. ಮೊಗವಾಡ ಉಪಾಸನಾ ದೇವತೆಯ ಸ್ವರೂಪಕ್ಕೆ ತಕ್ಕಂತೆ ಭೀಷಣವಾಗಿರುತ್ತದೆ. ಕುಣಿತ ಸಾಮಾನ್ಯವಾಗಿ ರಾಕ್ಷಸ ರೀತಿಯದು. ಹಾಡು ಬಹುಪಾಲು ಮಾರಿಯ ಸಾಹಸ ಪರಾಕ್ರಮಗಳನ್ನು ಕುರಿತುವು. ದಕ್ಷಿಣಕನ್ನಡ ತುಳು ಸೆರಗಿನ ಕೆಲವೆಡೆಗಳಲ್ಲಿ ನಡೆಯುವ ದೆಯ್ವನ ಕುಣಿತ ಅಥವಾ ಮೇಳ ಹೆಚ್ಚು ಕಡಮೆ ಇದೇ ತೆರದ್ದು.* ಮಾರಿಯ ಜಾತ್ರೆಯಲ್ಲಿ ಆಡು ಕುರಿ ಕೋಣಗಳನ್ನು ಬಲಿಕೊಡುವುದು ಇಂದಿಗೂ ನಡೆದುಬಂದದ್ದೇ. ಹೆಚ್ಚುಕಡಮೆ ಎಲ್ಲ ಜನರಲ್ಲಿಯೂ ಮೊದಮೊದಲು ದೇವತಾರಾಧನೆ, ಮತಾಚರಣೆ ಇದೇ ಜಾತಿಯದಾಗಿರಬೇಕು: **ಬಲಿ, ಕುಡಿತ, ಕುಣಿತ, ಹಾಡು.**

೨೫೦೦ ವರ್ಷಗಳ ಕೆಳಗೆ ಗ್ರೀಸಿನಲ್ಲಿ ದಿಯೊನೂಸೊಸ್ ದೇವತೆಯ ಜಾತ್ರೆ ಈ ರೀತಿಯಲ್ಲಿ ನಡೆಯುತ್ತಿತ್ತು. ಅತಿಕ ಪ್ರಾಂತದ ತಲೆಯೂರಾದ ಅಥೇನೇ ಪಟ್ಟಣದಲ್ಲಿಯಂತೂ ಅದನ್ನು ನಾಡಹಬ್ಬವಾಗಿ, ರಾಜ್ಯದ ಉತ್ಸವವಾಗಿ, ಬಹು ಸಂಭ್ರಮದಿಂದ ಆಚರಿಸುತ್ತಿತ್ತು. ದಿಯೊನೂಸೊಸ್ ಸಸ್ಯಾಧಿದೇವತೆ, ಮದ್ಯಾಧಿ

* ಇದೇ ಗ್ರಂಥದಲ್ಲಿಯ ಶ್ರೀ|| ಶಿವರಾಮಕಾರಂತರ 'ನಮ್ಮ ನಾಡಿನ ನೃತಗಳು' ನೋಡಿ.

ದೇವತೆ. ಜನವೆಲ್ಲ ದಿಯೊನೂಸೊಸ್ ದೇವತೆಯ ವಿಗ್ರಹದ ಮುಂದೆ ನೆರೆದು, ಆಡನ್ನು ಬಲಿಕೊಟ್ಟು, ಬಲಿಗಂಬದ ಸುತ್ತ ಕೊಳಲ ಹಿಮ್ಮೇಳಕ್ಕೆ ಹಾಡು ಹೇಳಿ ಕೊಂಡು ಕುಣಿದು, ಪಾನೋತ್ಸವ ನಡಸಿ ಜಾತ್ರೆ ಆಚರಿಸುತ್ತಿದ್ದರು. ಬಟ್ಟೆಯು ಮರಸನ್ನೂ ಮೊಗವಾಡವನ್ನೂ ಹಾಕಿಕೊಂಡು ಕುಣಿಯುತ್ತಿದ್ದ ಆ ಉಪಾಸಕರಿಗೆ ಮೇಳದವರೆಂದೂ ಅವರ ತಲೆಯಾಳಿಗೆ ಮೇಳನಾಯಕನೆಂದೂ ಹಾಡುತ್ತಿದ್ದ ಗೀತಕ್ಕೆ ದೀಥುರಂಬೊಸ್ ಎಂದೂ ಹೆಸರು. ಆ ದೀಥುರಂಬೊಸ್ ಗೀತಗಳು ದಿಯೊನೂಸೊಸ್ ದೇವತೆಯನ್ನು ಕುರಿತುವು. ದಿಯೊನೂಸೊಸ್ ಗ್ರೀಸಿಗೆ ಹೊರಗಿನಿಂದ ಬಂದು ನೆಲಸಿದ ದೇವತೆ. ಆದ್ದರಿಂದ, ಅವನು ಒಲುಂಪೊಸ್ ದೇವತೆಗಳ ಪಂಕ್ತಿಗೆ ಸೇರಿ ಮನ್ನಣೆ ಪಡೆಯಬೇಕಾದರೆ ಮೊದಲು ಬಲು ಪಾಡುಪಡಬೇಕಾಯಿತು. ಆ ಹಾಡುಗಳಲ್ಲಿ ಅವನು ಪಟ್ಟ ಪಾಡುಗಳನ್ನೂ ಸಾಧಿಸಿದ ಸಾಹಸ ಪರಾಕ್ರಮಗಳನ್ನೂ ವರ್ಣಿಸುವುದು ವಾಡಿಕೆಯಾಯಿತು. ದಿಯೊನೂಸೊಸ್ಸಿನ ಪರಿವಾರದವರೆಲ್ಲ ಮದಿರೋನ್ಮತ್ತರು, ಆವೇಶೋದ್ರಿಕ್ತರು. ಅವನನ್ನು ಕುರಿತ ನೃತ್ಯ ಗೀತಗಳಲ್ಲಿಯೂ ಈ ಉನ್ಮಾದ ಉದ್ರೇಕಗಳು ಕಾಣುತ್ತವೆ. ಆ ದೇವತೆಗೆ ವರ್ಷದಲ್ಲಿ ನಡೆಯುತ್ತಿದ್ದ ಹಲವು ಜಾತ್ರೆಗಳಲ್ಲಿ ವಸಂತದ ಜಾತ್ರೆಯೂ ಮಾಗಿಯ ಜಾತ್ರೆಯೂ ಮುಖ್ಯವಾದುವು. ಕಾಲಕ್ರಮದಲ್ಲಿ ವಸಂತದ ಜಾತ್ರೆಯ ನೃತ್ಯಗೀತಗಳಿಂದ ರುದ್ರನಾಟಕವೂ ಮಾಗಿಯ ಜಾತ್ರೆಯ ನೃತ್ಯಗೀತಗಳಿಂದ ಹರ್ಷನಾಟಕವೂ ಬೆಳೆದುವು.

ನಾಡಿನ ಒಳ್ಳಿತಿಗಾಗಿ ದುಡಿದು ಮಡಿದ ವೀರರಿಗೆ ಸಲ್ಲುವ ಪೂಜೆಗೌರವಗಳನ್ನು ಅವಲಂಬಿಸಿದೆ ಎಂಬ ನಂಬಿಕೆಯಿಂದ ಗ್ರೀಸಿನಲ್ಲಿ ಕೀರ್ತಿಶೇಷರಾದ ವೀರಪುರುಷರ ಸಮಾಧಿಗಳಿಗೆ ಪೂಜೆ ನಡೆಯುತ್ತಿತ್ತು. ಆಗ ಆ ವೀರರ ಸಾಹಸಕೃತ್ಯಗಳನ್ನೂ ಅಳಲು ಸೋಲುಗಳನ್ನೂ ವರ್ಣಿಸುವ ಹಾಡುಗಳನ್ನು ಹೇಳಿ ಕುಣಿಯುವುದು ಪದ್ಧತಿಯಾಗಿತ್ತು. ಆ ವೀರಪೂಜಾ ಸಮಯದ ಹಾಡು ಕುಣಿತಗಳಿಂದ ರುದ್ರನಾಟಕ ಬೆಳೆಯಿತೆಂಬ ಮತವೂ ಒಂದುಂಟು. ಈ ಮತಕ್ಕೆ ಅಷ್ಟಾಗಿ ಯಾರೂ ಈಗ ಮನ್ನಣೆ ಕೊಡುತ್ತಿಲ್ಲ. ಆದರೆ, ವೀರಪೂಜೆಯಿಂದ ರುದ್ರನಾಟಕ ನೇರವಾಗಿ ಬೆಳೆಯದಿದ್ದರೂ ರುದ್ರ ನಾಟಕದ ಬೆಳವಣಿಗೆಯಲ್ಲಿ ವೀರಪೂಜಾ ಪ್ರಕ್ರಿಯೆಯೂ ನೆರವಾಗಿದ್ದಿರಬಹುದು.

ಕ್ರಿಸ್ತಪೂರ್ವ ೭–೬ ಶತಮಾನದ ಕಾಲಕ್ಕೆ ಆರಿಯೋನ್ ಎಂಬ ಮೇಧಾವಿಯೊಬ್ಬನು ತಲೆದೋರಿ, ಅಲ್ಲಿಯವರೆಗೂ ಇನ್ನೂ ಕ್ರಮನಿಯಮಗಳಿಲ್ಲದೆ ಚಲಪ್ಲವ ರೂಪದಲ್ಲಿ ಹಳ್ಳಿಯ ಹಾಡಾಗಿಯೇ ಉಳಿದಿದ್ದ ದೀಥುರಂಬೊಸ್ ಗೀತಗಳಿಗೆ ನಿಷ್ಕೃಷ್ಟ ಸ್ವರೂಪ ಕೊಟ್ಟು ವ್ಯವಸ್ಥೆಗೊಳಿಸಿದನು. ಅವನ ಕಾಲಕ್ಕೆ ಮೇಳದವರ ಸಂಖ್ಯೆ ೫೦ ಎಂದು ಗೊತ್ತಾದ್ದಲ್ಲದೆ, ಗೀತಗಳನ್ನು ಬಲಮುರಿ ಎಡಮುರಿಗಳಾಗಿ ಸಮಜೋಡಿಯಲ್ಲಿ ಕಟ್ಟುವ ಪದ್ಧತಿಯೂ ಬಂತು. ನಾಟಕ ದೃಷ್ಟಿಯಿಂದ ಗಮನಿಸಬೇಕಾದ ಮುಖ್ಯ ಮಾರ್ಪಾಟೆಂದರೆ: ಆರಿಯೋನ್ ಮೇಳಗೀತಗಳ ನಡುವೆ ವಿಷಯ ವಿವರಣ ರೂಪದ ಭಾಷಣ ಪದ್ಯಗಳನ್ನು ಸೇರಿಸಿದ್ದು. ಗೀತಗಳ ನಡುವೆ ಮೇಳನಾಯಕನು ಅಟ್ಟಣೆ ಹತ್ತಿನಿಂತು ಕೆಳಕಣದಲ್ಲಿದ್ದ ಮೇಳದವರೊಡನೆ ಭಾಷಣ ಪದ್ಯಗಳ ಮೂಲಕ ನಡಸುತ್ತಿದ್ದ ಕಥನ ಸ್ವರೂಪದ ಆ ಸಂವಾದಗಳೇ

ಗ್ರೀಕ್‌ನಾಟಕದ ತಳಹದಿ ಎನ್ನಬಹುದು. ಭಾಷಣ ಪದ್ಯದ ಛಂದಸ್ಸೂ ಗೀತದ ಛಂದಸ್ಸೂ ಬೇರೆಯಾಗಿದ್ದುವು. ಆರಿಯೋನಿನ ಮತ್ತು ಅವನ ತರುವಾಯದವರ ದಿಥುರಂಬೋಸ್ ಗೀತಗಳಿಗೆ ತ್ರಗೋದಿಯ (ಟ್ರ್ಯಾಜೆಡಿ) ಎಂದು ಹೆಸರಾಯಿತು. ಅದರ ಪದಶಃ ಅರ್ಥ ಆಡಿನ ಹಾಡು, ಅಜಗೀತೆ ಎಂದು. ಆದರೆ, ಆ ಪದಕ್ಕೆ ಆಗ ತರುವಾಯದ ವ್ಯಾಪಕಾರ್ಥ ಇನ್ನೂ ಬಂದಿರಲಿಲ್ಲ.

ಕ್ರಿಸ್ತಪೂರ್ವ ೬ನೆಯ ಶತಮಾನದ ಮೊದಲಲ್ಲಿ ಥೆಸ್ಪಿಸ್ ಎಂಬ ಮತ್ತೊಬ್ಬ ಮೇಧಾವಿ ಹುಟ್ಟಿ ಆರಿಯೋನ್ ಹಸನು ಮಾಡಿದ್ದ ನೆಲದಲ್ಲಿ ನಾಟಕ ಬೀಜ ಬಿತ್ತಿ ರುದ್ರನಾಟಕದ ಜನಕನೆಂದು ಹೆಸರುಗೊಂಡನು. ಥೆಸ್ಪಿಸ್ ಮೇಳದವರ ಜತೆಗೆ ಒಬ್ಬ ನಟನನ್ನು ತಂದು ಸೇರಿಸಿದನು. ಸಂಭಾಷಣೆಗಳು ಈ ನಟನಿಗೂ ಮೇಳ ನಾಯಕನಿಗೂ ನಡೆಯತೊಡಗಿ, ಮೇಳದವರ ಕೆಲಸ ಗೀತ ಹಾಡಿ ಕುಣಿಯುವುದೂ ನಡುವೆ ಸಂಭಾಷಣೆ ನಡೆಯುವಾಗ ಸುಮ್ಮನೆ ಪ್ರೇಕ್ಷಕರಾಗಿ ನಿಂತಿರುವುದೂ ಆಯಿತು. ಒಬ್ಬನೇ ನಟ ಸಂದರ್ಭಾನುಸಾರ ವೇಷ ಬದಲಾಯಿಸಿಕೊಂಡು ದೇವತೆ, ದೊರೆ, ದೂತ ಎಲ್ಲವೂ ಆಗುತ್ತಿದ್ದನು. ನಟನಿಗೂ ಮೇಳನಾಯಕನಿಗೂ ನಡೆಯುತ್ತಿದ್ದ ಮಾತುಕತೆಗಳನ್ನು ಸಂಭಾಷಣೆ ಎಂದು ಕರೆಯುವುದಕ್ಕಿಂತ ಪ್ರಶ್ನೋತ್ತರ ಎಂದು ಕರೆಯುವುದು ಹೆಚ್ಚು ಸಮಂಜಸವಾದೀತು. ಮೇಳನಾಯಕನ ಒಂದು ಮೊಟಕು ಪ್ರಶ್ನೆಗೆ ನಟನು ಕೊಡುತ್ತಿದ್ದ ಉತ್ತರ ಒಂದು ದೀರ್ಘ ಭಾಷಣ ಇಲ್ಲವೆ ಕಥನ. ಅಂತೂ ಈ ಸಂವಾದ ಭಾಗ ಬೆಳೆದಂತೆಲ್ಲ ಮೇಳದ ಕೇವಲ ಕಥನಸ್ವರೂಪ ಹಿಮ್ಮೆಟ್ಟಿ ನಾಟಕಸ್ವರೂಪ ವಿಕಾಸವಾಗತೊಡಗಿತು. ಬಲುಬೇಗ, ಅಟ್ಟಣೆ ನಟನಿಗೂ ಕೆಳಕಣ ಮೇಳಕ್ಕೂ ಮೀಸಲಾಯಿತು. ಅಲ್ಲಿಯವರೆಗೂ ಮೇಳದ ಗೀತ ಕಥನಗಳ ವಸ್ತು ದಿಯೊನೂಸೊಸ್ ದೇವತೆಗೆ ಸಂಬಂಧಿಸಿದ ಕಥೆಗಳು ಮಾತ್ರವಾಗಿದ್ದದ್ದು, ಥೆಸ್ಪಿಸ್ಸಿನ ಕಾಲದಲ್ಲಿ ಇತರ ಗ್ರೀಕ್ ಪುರಾಣ ಕಥೆಗಳೂ ನಾಟಕವಸ್ತುವಾಗ ಬಂದುವು. ಹೊಮೇರೊಸ್ಸಿನ ಕಾವ್ಯಗಳೂ ಜನರ ಬಾಯಲ್ಲಿದ್ದ ಇತರ ವೀರ ಕಥೆಗಳೂ ರುದ್ರನಾಟಕಗಳಿಗೆ ಕಥಾವಸ್ತುವನ್ನು ಒದಗಿಸಿದುವು. ವಸ್ತುವನ್ನೊದಗಿಸಿದ ಈ ಕಥನ ಕಾವ್ಯದ ಪ್ರಭಾವ ಗ್ರೀಕ್ ರುದ್ರನಾಟಕದ ಮೇಲೆ ಕೊನೆಯವರೆಗೂ ನಿಂತುಬಿಟ್ಟಿತೆನ್ನಬಹುದು. ಪಕ್ವಕಾಲದ ನಾಟಕಗಳಲ್ಲಿ ಕೂಡ, ಪಾತ್ರಗಳ ಭಾಷಣಗಳಲ್ಲಿ ಸಂವಾದಗುಣಕ್ಕಿಂತ ಕಥನಗುಣವೇ ಹೆಚ್ಚಾಗಿ ತೋರುತ್ತದೆ. ಹಲವೊಮ್ಮೆ, ನಾಟಕದಲ್ಲಿ ನಾಟಕೀಯತೆಗಿಂತ ಮಹಾಕಾವ್ಯ ಲಕ್ಷಣವೂ ಭಾವಗೀತಾ ಲಕ್ಷಣವೂ ಕಾಣಬರುತ್ತವೆ.

ಗ್ರೀಕ್ ರುದ್ರನಾಟಕಕಾರರಲ್ಲಿ ಅಪ್ರತಿಮ ಪ್ರತಿಭಾವಂತರೆಂದು ಹೆಸರುಗೊಂಡ ರತ್ನತ್ರಯರಲ್ಲಿ ಮೊದಲಿಗನಾದ ಅಯ್‌ಸ್ಕುಲೊಸ್ (ಉಳಿದಿಬ್ಬರು : ಸೊಫೊಕ್ಲೇಸ್, ಯುರಿಪಿದೇಸ್) ಗ್ರೀಕ್ ರುದ್ರನಾಟಕದ ಎರಡನೆಯ ಜನಕನೆಂದು ಹೆಸರು ಪಡೆದಿದ್ದಾನೆ. ಥೆಸ್ಪಿಸ್ಸಿನ ಮತ್ತು ಅವನ ತರುವಾಯದವರ ಕೈಯಲ್ಲಿ ಇನ್ನೂ ಮೊಳೆಯುವುದರಲ್ಲಿದ್ದ ರುದ್ರನಾಟಕವನ್ನು ಅಯ್‌ಸ್ಕುಲೊಸ್ ತೆಗೆದುಕೊಂಡು ಕೃಷಿಮಾಡಿ ಬೆಳಸಿ ಅದು ನಿಸ್ಪಷ್ಟ ರೂಪ ತಳೆದು ನೆಲಸುವಂತೆ ಮಾಡಿದನು. ಅಟ್ಟಣೆಯ ಮೇಲೆ ಎರಡನೆಯ ನಟನನ್ನು ತಂದು ನಾಟಕದ ಸಂಭಾಷಣೆ ಎರಡು

ಪಾತ್ರಗಳಿಗೆ, ಪ್ರತ್ಯಕ್ಷ ವ್ಯಕ್ತಿಗಳಿಗೆ, ನಡೆಯುವಂತೆ ಮಾಡಿದನು. ಇದರಿಂದ ನಾಟಕದ ತಿರುಳಾದ, ಆಕರ್ಷಣಕೇಂದ್ರವಾದ, ಜೀವಂತ ಸಂವಾದಕ್ಕೆ ಹೆಚ್ಚು ಪ್ರಾಧಾನ್ಯ ದೊರೆತು, ನೋಟಕರ ಕಣ್ಣು ಕಿವಿ ಮುಂಗಣದ ಮೇಳದಿಂದ ಅಟ್ಟಣೆಯ ನಟರ ಮೇಲೆ ತಿರುಗಿದುವು. ಆದರೂ, ಮೇಳದ ಪ್ರಾಮುಖ್ಯತೆ ಅಷ್ಟೇನೂ ಕಡಮೆಯದಾಗಿರಲಿಲ್ಲ. ಸೊಫೊಕ್ಲೇಸ್ ಬಂದು ಮೂರನೆಯ ನಟನನ್ನು ತಂದು, ಅಗ್ರಸ್ಥಾನಕ್ಕಾಗಿ ನಟರಿಗೂ ಮೇಳದವರಿಗೂ ಗ್ರೀಕ್ ರುದ್ರರಂಗದ ಮೇಲೆ ಆಗಾಗ ನಡೆಯುತ್ತಿದ್ದ ಮೇಲಾಟವನ್ನು ಬಗೆಹರಿಸಿದನು. ನಟರಿಗೆ ಪ್ರಧಾನಸ್ಥಾನ ಕೊಡಿಸಿ, ಮೇಳದವರು ಹಿನ್ನೆಲೆಯಲ್ಲಿದ್ದುಕೊಂಡು ಎಡೆಯರಿತು ಪಾತ್ರಗಳಿಗೆ ನೆರವಾಗಿ ನಾಟಕಕ್ಕೆ ಕಳೆ ತರುವಂತೆ ಮಾಡಿದನು. ಸೊಫೊಕ್ಲೇಸಿನಲ್ಲಿ ಮೇಳ, ಬರುಬರುತ್ತ, ನಾಟಕದ ನಡುವಣ ಬಿಡುವುಗಳನ್ನು ತುಂಬುವುದಕ್ಕೆ ಮಾತ್ರ ಉಪಯೋಗವಾಗತೊಡಗಿದರೂ, ಮೇಳಕ್ಕೂ ನಾಟಕದ ಕಥೆಗೂ ಇರುವ ಸಂಬಂಧ ಕೃತಕವಾದ್ದಲ್ಲ, ಸ್ವಾಭಾವಿಕವಾದ್ದು. ಯುರಿಪಿಡೀಸಿನ ನಾಟಕಗಳಲ್ಲಿ ಕಥಾವಸ್ತುಸಂವಿಧಾನಕ್ಕೂ ಮೇಳಕ್ಕೂ ಸಂಬಂಧ ಕ್ರಮೇಣ ತಪ್ಪಿ, ಕೊನೆಕೊನೆಗೆ ಮೇಳ ನಡುನಡುವೆ ಕೇವಲ ವಿನೋದಕ್ಕಾಗಿ ಬರುವ ಬರಿಯ ಸಂಗೀತವಾಗುತ್ತ ಬಂತು. ಅವನಲ್ಲಿ ಒಮ್ಮೊಮ್ಮೆ ಮೇಳ ನಾಟಕಕ್ಕೆ ನೆರವಾಗುವುದಕ್ಕಿಂತ ಹೊರೆಯಾಗಿರುವುದು ಕಾಣಬರುತ್ತದೆ. ಹೀಗೆ, ಗ್ರೀಕ್ ರುದ್ರನಾಟಕದ ಹುಟ್ಟು ದಿಯೊನೂಸೊಸ್ ಮೇಳದಿಂದ ಆದರೂ, ಬರುಬರುತ್ತ ನಾಟಕವೇ ಮುಂದೊತ್ತಿ ಮೇಳ ಹಿಂಬಿದ್ದಿತು. ಆದರೂ ಮೇಳವಿಲ್ಲದ ಗ್ರೀಕ್ ನಾಟಕ ಯಾವುದೂ ಇಲ್ಲ. ತರುವಾಯದ ಪರಿಪಕ್ವ ಗ್ರೀಕ್ ನಾಟಕಗಳಲ್ಲಿಯೂ ಮೇಳಕ್ಕೆ ಒಂದು ಎಡೆ ಕೊಟ್ಟಿದ್ದರೆ, ಅದು ನಾಟಕ ತನ್ನ ತಾಯಿ ನಾಟ್ಯಕ್ಕೆ ಒಪ್ಪಿಸಿದ ತವರು ಕಾಣಿಕೆ ಎನ್ನಬಹುದು.

ಗ್ರೀಕ್ ರುದ್ರನಾಟಕದಲ್ಲಿ ಬರುವ ಮೇಳ ಸಾಮಾನ್ಯವಾಗಿ ಎರಡು ಸ್ವರೂಪದ್ದು. ಮೇಳದವರು ಕೆಲವೊಮ್ಮೆ ನಾಟಕ ಪಾತ್ರಗಳೊಡನೆ ಸಹಕರಿಸಿ ಕಥೆಯನ್ನು ಮುಂದುವರಿಸುತ್ತಾರೆ; ಇಲ್ಲವೆ, ಸಮಯೋಚಿತವಾದ ಪ್ರಶ್ನೆ, ವಿವರಣೆ ಮೊದಲಾದುವುಗಳಿಂದ ಕಥೆಯ ಬೇರೆಬೇರೆ ಪ್ರಕರಣಗಳಿಗೆ ಸಂಬಂಧ ಕಲ್ಪಿಸಿ ಕೊಡುತ್ತಾರೆ. ಆಗ ಅವರನ್ನು ಉಪಪಾತ್ರಗಳೆಂದು ಭಾವಿಸಬಹುದು. ಹಲವೊಮ್ಮೆ ಅವರು ನಾಟಕದ ಕಥೆಯಲ್ಲಿ ಯಾವ ಭಾಗವನ್ನೂ ವಹಿಸದೆ ನಾಟಕಪಾತ್ರಗಳ ಅಭಿನಯವನ್ನು ನೋಡುತ್ತ ಸುಮ್ಮನೆ ನಿಂತಿರುತ್ತಾರೆ. ಆಗ ಅವರನ್ನು ಪ್ರೇಕ್ಷಕರೆಂದು ಭಾವಿಸಬಹುದು. ಅಂತೂ, ಮೇಳದವರು ಉಪಪಾತ್ರಗಳಾಗಿ ನಾಟಕದ ಕಥೆಯಲ್ಲಿ ಭಾಗವನ್ನಾದರೂ ವಹಿಸಲಿ, ಇಲ್ಲವೆ, ನಾಟಕದಲ್ಲಿಯೇ ಒಂದು ಬಗೆಯ ಒಳಪ್ರೇಕ್ಷಕರಾಗಿ ಸುಮ್ಮನೆ ನಿಂತಾದರೂ ಇರಲಿ, ಅವರನ್ನು ನಾಟಕವ್ಯಕ್ತಿಗಳಿಗೂ ಹೊರಪ್ರೇಕ್ಷಕರಿಗೂ ನಡುವಣ ಸಂಬಂಧಕಾರಿಗಳನ್ನಾಗಿ ಎಣಿಸಬಹುದು.

ಒಂದು ದೃಷ್ಟಿಯಿಂದ, ದೀಥುರಂಬೊಸ್ ಗೀತನೃತ್ಯ ನಮ್ಮ ಚೌಮನ ಹಾಡು ಕುಣಿತವನ್ನು ಹೋಲಿದರೆ, ಮತ್ತೊಂದು ದೃಷ್ಟಿಯಿಂದ ಗ್ರೀಕ್ ರುದ್ರನಾಟಕಕ್ಕೂ ನಮ್ಮ ಬಯಲಾಟಕ್ಕೂ* ಕೆಲವು ಬಗೆಯಲ್ಲಿ ಸಾಮ್ಯ ಹೇಳಬಹುದು.

* ದೊಂಬಿದಾಸರ ಕುಣಿತ ಅಥವಾ ಯಕ್ಷಗಾನ.

ನಮ್ಮ ಮೇಳದ ಮುಂದಾಳಾದ ಭಾಗವತನನ್ನು ಗ್ರೀಕ್ ಮೇಳನಾಯಕನಿಗೆ ಹೋಲಿಸಬಹುದು. ಈ ಭಾಗವತನಿಗೂ ನಾಟಕ ಪಾತ್ರಗಳಿಗೂ ನಡೆಯುವಂತೆಯೇ ಮೇಳನಾಯಕನಿಗೂ ನಾಟಕ ಪಾತ್ರಗಳಿಗೂ ಪ್ರಶ್ನೋತ್ತರ ಸಂಭಾಷಣೆ ನಡೆಯುತ್ತದೆ: ಮೊಟಕು ಪ್ರಶ್ನೆ, ನೀಳ ಉತ್ತರ. ನಮ್ಮಲ್ಲಿ ಸಾಮಾನ್ಯವಾಗಿ ಮೇಳದವರು ಒಂದೆಡೆ ನಿಂತೊ ಕುಳಿತೊ ಹಾಡುತ್ತಾರೆ; ನಟರು ಕುಣಿಯುತ್ತಾರೆ. ಆದರೆ, ಗ್ರೀಕ್ ರುದ್ರನಾಟಕದಲ್ಲಿ ಹಾಡುವುದು ಕುಣಿಯುವುದು ಎರಡೂ ಮೇಳದವರು. ಬಯಲಾಟದಲ್ಲಿ ಅಟ್ಟಣೆಯ ಮೇಲೆ ಒಟ್ಟಿಗೆ ಕಾಣಿಸಿಕೊಳ್ಳುವುದು ಸಾಮಾನ್ಯವಾಗಿ ಎರಡೇ ಪಾತ್ರಗಳು; ಒಂದೇ ಸಲ ಮೂರಕ್ಕಿಂತ ಹೆಚ್ಚು ಬರುವುದು ಬಹು ಅಪರೂಪ. ಗ್ರೀಕ್ ರಂಗದ ಮೇಲೆಯೂ ಏಕಕಾಲದಲ್ಲಿ ಮೂರಕ್ಕಿಂತ ಹೆಚ್ಚು ಪಾತ್ರ ಯಾವಾಗಲೂ ಬರುವುದಿಲ್ಲ.* ನಾಟಕದಲ್ಲಿ ಬರುವ ಪಾತ್ರಗಳು ಸಾಮಾನ್ಯವಾಗಿ ದೇವತೆಗಳು, ವೀರಪುರುಷರು, ಪುರಾಣ ವ್ಯಕ್ತಿಗಳು. ಅಂಥವರನ್ನು ರಂಗದ ಮೇಲೆ ತಂಡ ತಂಡವಾಗಿ ತಂದು ನಿಲ್ಲಿಸುವುದಕ್ಕಿಂತ, ಒಬ್ಬಿಬ್ಬರು ಬಂದು ವಿಶಾಲ ರಂಗವನ್ನು ತುಂಬುವಂತೆ ಅಳವಡಿಸಿದರೆ ಪಾತ್ರಗಳ ಘನತೆ ಗಾಂಭೀರ್ಯ ವ್ಯಾಪ್ತಿ ವ್ಯಕ್ತಿತ್ವಗಳ ಚಿತ್ರ ಚೆನ್ನಾಗಿ ಕಣ್ಣಿಗೆ ಕಟ್ಟುತ್ತದೆ. ಅಲ್ಲದೆ ಕೆಳಕಣದಲ್ಲಿಯ ಸಾಮಾನ್ಯ ವ್ಯಕ್ತಿಗಳ ಮೇಳ ಆ ಬೃಹನ್ ಮಹಾವ್ಯಕ್ತಿಗಳಿಗೆ ಹಿನ್ನೆಲೆಯಂತಿದ್ದು ಪುರಾಣ ಪಾತ್ರಗಳ ಔನ್ನತ್ಯ ಮತ್ತೂ ಎದ್ದು ಕಾಣುವಂತೆ ಮಾಡುತ್ತದೆ. ಬಯಲಾಟಗಳಲ್ಲಿಯಂತೆ ಗ್ರೀಕ್ ರುದ್ರನಾಟಕಗಳಲ್ಲಿಯೂ ವಸ್ತು ಪುರಾಣ ಕಥೆಗಳು. ಪುರಾಣವ್ಯಕ್ತಿಗಳಂತೆ ಕಾಣಲು ನಮ್ಮಲ್ಲಿ ನಟರು ಕಿರೀಟ, ಭುಜಕೀರ್ತಿ ಮೊದಲಾದ ಅಣಿ ತೊಟ್ಟು ಬಣ್ಣ ಬಳಿದುಕೊಳ್ಳುವಂತೆ, ಗ್ರೀಕ್ ರುದ್ರನಟರು ಮೊಗವಾಡ, ಮೆತ್ತೆಯ ನಿಲುವುಡುಪು, ಎತ್ತರ ಅಟ್ಟೆಯ ಜೋಡು ಮೊದಲಾದುವನ್ನು ಹಾಕಿಕೊಳ್ಳುತ್ತಿದ್ದರು. ಪಾತ್ರಭೇದ ತೋರಿಸಲು ಕಿರೀಟ, ಭುಜಕೀರ್ತಿ, ಬಣ್ಣ ಮೊದಲಾದುವುಗಳಲ್ಲಿ ವ್ಯತ್ಯಾಸವಿರುವಂತೆ, ಗ್ರೀಕ್ ನಟರಿಗೂ ರೌದ್ರ, ಸೌಮ್ಯ, ಗಂಭೀರ, ಹಾಸ್ಯ ಮೊದಲಾದ ಪಾತ್ರಗಳಿಗೆ ತಕ್ಕಂತೆ ಬಗೆ ಬಗೆಯ ಮೊಗವಾಡಗಳು ಇರುತ್ತಿದ್ದುವು. ಬಿಡುಹೊತ್ತಿನಲ್ಲಿ ನಮ್ಮ ನಟರು ಅಟ್ಟಣೆಯ ಹಿಂಬದಿಗೆ ಹೋಗಿ ವಿಶ್ರಮಿಸಿಕೊಳ್ಳುವಂತೆ, ಗ್ರೀಕ್ ನಟರು ವಿಶ್ರಾಂತಿಗೂ ವೇಷ ಬದಲಾಯಿಸಿಕೊಳ್ಳುವುದಕ್ಕೂ ಅಟ್ಟಣೆಯ ಹಿಂಬದಿಯ ಗುಡಾರದೊಳಕ್ಕೆ ಹೋಗುತ್ತಿದ್ದರು. ಬಯಲಾಟದಲ್ಲಿಯಂತೆಯೇ ಗ್ರೀಕ್ ರುದ್ರನಾಟಕದಲ್ಲಿಯೂ ಪಟ, ಪರದೆ ಮೊದಲಾದ ದೃಶ್ಯ ಸಲಕರಣೆಗಳು ಇರಲಿಲ್ಲ. ಕೆಲವೊಮ್ಮೆ ಗುಡಾರದ ಮುಂದನ್ನು ಬಣ್ಣ ಬಳಿದು ಅಲಂಕರಿಸಿ, ಆಟಕ್ಕೆ ಹಿನ್ನೆಲೆಯಾಗಿ ಮಾಡಿಕೊಳ್ಳುತ್ತಿದ್ದರು. ಬಟ್ಟಬಯಲಲ್ಲಿ ನಡುಹಗಲಲ್ಲಿ ಆಟವಾಡುತ್ತಿತ್ತಾದ್ದರಿಂದ ರಂಗಪ್ರಸಾಧನೆಗೆ ಭ್ರಾಮಕ ಸಾಧನಗಳ ಆವಶ್ಯಕತೆಯಾಗಲಿ ಪ್ರಯೋಜನವಾಗಲಿ ಅಷ್ಟು ಇರಲೂ ಇಲ್ಲ.

* ನಾಟಕದಲ್ಲಿ ಹಲವು ಪಾತ್ರಗಳಿರಬಹುದು. ಆದರೆ, ನಟರು ಮೂವರೆ ಆದ್ದರಿಂದ ರಂಗದ ಮೇಲೆ ಒಟ್ಟಿಗೆ ಮೂರು ಪಾತ್ರಗಳಿಗಿಂತ ಹೆಚ್ಚಾಗಿ ಬರಲ ಅವಕಾಶವಿರಲಿಲ್ಲ. ಒಬ್ಬನೇ ನಟ ಸಂದರ್ಭಾನುಸಾರ ಹಲವು ಪಾತ್ರಗಳನ್ನು ಧರಿಸುತ್ತಿದ್ದನು. ಒಂದು ನಾಟಕದಲ್ಲಿಯ ಪಾತ್ರಗಳನ್ನು ಮೂರು ನಟರಿಗೆ ಹಂಚಿ ಹಾಕುವುದರಲ್ಲಿ ಒಂದು ಬಗೆಯ ಕ್ರಮಾನುಸರಣೆಯೂ ಇತ್ತು.

ಗ್ರೀಕ್ ನಾಟಕಗಳು ಬೆಳಗಿನಿಂದ ಬೈಗಿನವರೆಗೆ ಬಯಲಲ್ಲಿ ನಡೆಯುತ್ತಿದ್ದುವು ಮೇಲೆ ಬಾನು, ಕೆಳಗೆ ನೆಲ, ಸುತ್ತ ಮೇಡು. ದುಂಡಗೆ ಸುತ್ತ ಕಡಿದಿದ್ದ ಕಲ್ಲು ಬಂಡೆಗಳನ್ನು ಕೆತ್ತಿ ಮಾಡಿದ ಕೂರಿಡೆಗಳು ಒಂದರ ಹಿಂದೆ ಒಂದು, ಒಂದರ ಮೇಲೆ ಒಂದು ಎಷ್ಟು ಸಾಲುಗೊಂಡ ಪ್ರೇಕ್ಷಕಾಂಗಣ. ನಡುವೆ ಅಮೃತಶಿಲೆ ಹಚ್ಚಿಸಿದ ಹರಹಾದ ಬಟ್ಟ ಕಣದ ಮೇಳರಂಗ. ಅದರ ಒಂದು ಅಂಚಿನಲ್ಲಿ ಪ್ರೇಕ್ಷಕಾಂಗಣಕ್ಕೆ ಎದುರಾಗಿ ಹಾಕಿದ ಅಟ್ಟಣೆಯ ನಟರಂಗ. ಅದರ ಹಿಂದೆ ಗುಡಾರದ ಅಥವಾ ಕಲ್ಲುಕಟ್ಟಡದ ನೇಪಥ್ಯ. ಇದು ಸ್ಥೂಲವಾಗಿ ಗ್ರೀಕ್ ನಾಟಕಶಾಲೆಯ ಚಿತ್ರ. ನಾಟಕ ನೋಡುವುದಕ್ಕೆ ಊರಿಗೆ ಊರೇ ಅಲ್ಲಿ ನೆರೆಯುತ್ತಿತ್ತು. ನಾಟಕ ದಿಯೊನೂಸೊಸ್ ದೇವತೆಯ ಉತ್ಸವದ ಅಂಗ. ಆ ಉತ್ಸವ ರಾಜ್ಯದ ಉತ್ಸವ. ಅದರಲ್ಲಿ ಭಾಗ ವಹಿಸುವುದು ಪ್ರತಿಯೊಬ್ಬ ಪ್ರಜೆಯ ಧರ್ಮ. ಹೀಗಾಗಿ, ಇಡಿಯ ಪಟ್ಟಣವೇ ಪ್ರೇಕ್ಷಕವೃಂದವಾಗುತ್ತಿತ್ತು. ದೊಡ್ಡ ದೊಡ್ಡ ನಾಟಕಾಂಗಣಗಳಲ್ಲಿ ಇಪ್ಪತ್ತರಿಂದ ಮೂವತ್ತು ಸಾವಿರದವರೆಗೆ ಜನ ಹಿಡಿಸುತ್ತಿತ್ತು. ದಿಯೊನೂಸೊಸ್ ದೇವತೆಯ ಅರ್ಚಕ, ರಾಜ್ಯನಾಯಕರು, ಹೊರದೇಶದ ರಾಯಭಾರಿಗಳು, ಮೇಲಾಟದ ತೀರ್ಪಿಗರು ಮೊದಲಾದ ಮಾನ್ಯರಿಗೆ ಮುಂದಿನ ಸಾಲಿನಲ್ಲಿ ಅಮೃತಶಿಲೆಯ ಪೀಠಗಳಿದ್ದುವು.

ಪ್ರತಿ ವರ್ಷದ ಜಾತ್ರೆಯ ರುದ್ರ ನಾಟಕ ಸ್ಪರ್ಧೆಯಲ್ಲಿಯೂ ಮೂವರು ರುದ್ರ ಕವಿಗಳಿಗೆ ತಮ್ಮ ನಾಟಕಗಳನ್ನು ಆಡಿಸಲು ಅವಕಾಶವಿತ್ತು, ಗೆದ್ದವರಿಗೆ ಬಹುಮಾನ ಕೊಡುತ್ತಿತ್ತು. ಒಬ್ಬೊಬ್ಬ ಕವಿಯೂ ಮೂರು ರುದ್ರ ನಾಟಕಗಳನ್ನೂ ಕೊನೆಯಲ್ಲಿ ಒಂದು ಅಣಕ ನಾಟಕವನ್ನೂ ಪ್ರದರ್ಶಿಸಬೇಕಾಗಿತ್ತು. ಒಂದೊಂದು ದಿನದ ಉತ್ಸವವೂ ಒಂದೊಂದು ಹರ್ಷನಾಟಕದಿಂದ ಕೊನೆಗೊಳ್ಳುತ್ತಿತ್ತು. ಒಂದು ಹಗಲು ಒಬ್ಬ ಕವಿ ತೋರಿಸುವ ಮೂರು ರುದ್ರ ನಾಟಕಗಳೂ ಒಂದೇ ದೊಡ್ಡ ಕಥೆಯ ಪರಿವಿಡಿಯಾಗಿ ಬರುವ ಮೂರು ಪ್ರಕರಣಗಳನ್ನು ಕುರಿತದ್ದಾಗಿ ಪರಸ್ಪರ ಸಂಬಂಧವುಳ್ಳವಾಗಿದ್ದಾಗ ಆ ಗುಂಪಿಗೆ ಮುಕ್ಕೂಟ ನಾಟಕವೆಂದು ಹೆಸರು ಬರುತ್ತಿತ್ತು. ಅಣಕ ನಾಟಕವೂ ಅದಕ್ಕೇ ಸಂಬಂಧಪಟ್ಟಿದ್ದರೆ ಒಟ್ಟಿಗೆ ನಾಲ್ಕೂಟ ನಾಟಕವೆಂದು ಹೆಸರುಪಡೆಯುತ್ತಿತ್ತು. ಅಯ್‌ಸ್ಕುಲೊಸ್ ಮುಕ್ಕೂಟ ನಾಟಕಗಳನ್ನು ಕಟ್ಟಿ ಪ್ರಸಿದ್ಧನಾಗಿದ್ದಾನೆ. ಸೊಫೊಕ್ಲೇಸೂ, ಯುರಿಪಿದೇಸೂ ತನಿ ನಾಟಕಗಳನ್ನೇ ಬಳಕೆಗೆ ತಂದರು.

ಇಲ್ಲಿಯವರೆಗೂ ಬಲುಪಾಲು ಗ್ರೀಕ್ ರುದ್ರನಾಟಕದ ಹೊರಮೈಯನ್ನೇ ಕುರಿತು ಹೇಳಿತು. ಇನ್ನು ಅದರ ಒಳಗನ್ನು ಕುರಿತು ಎರಡು ಮಾತುಗಳನ್ನು ಹೇಳಬಹುದು. ಗ್ರೀಕ್ ರುದ್ರನಾಟಕಗಳ ವಸ್ತುವಿಗೆ ಆಕರ ಗ್ರೀಕ್ ಪುರಾಣ ಕಥೆಗಳೆಂದು ಆಗಲೆ ಹೇಳಿದೆ. ಆ ಪುರಾಣ ಕಥೆಗಳಲ್ಲಿ ಸಾಮಾನ್ಯವಾಗಿ ಎದ್ದು ಕಾಣುವ ಎರಡು ತತ್ವಗಳೆಂದರೆ: ಆಳು ಅರಿತು ಆಗಲಿ ಅರಿಯದೆ ಆಗಲಿ ಮಾಡಿದ ತಪ್ಪಿಗೆ ಶಿಕ್ಷೆ ಅನುಭವಿಸಿಯೇ ತೀರಬೇಕು ಎಂಬ ಪಾಪ ಪ್ರಾಯಶ್ಚಿತ್ತವಾದ; ಮತ್ತು, ಮನುಷ್ಯನಿಗೂ ವಿಧಿಗೂ ನಿರಂತರವಾಗಿ ನಡೆಯುವ ಹೋರಾಟದಲ್ಲಿ ಕೊನೆಗೆ ಗೆಲ್ಲುವುದು ವಿಧಿಯೇ ಎಂಬ ನಿಯತಿವಾದ. ವಿಧಿಯಷ್ಟು ಬಲವತ್ತಾದದ್ದು ಬೇರೆ

ಯಾವ ಶಕ್ತಿಯೂ ಇಲ್ಲ. ಮನುಷ್ಯರ ಮಾತಿರಲಿ, ದೇವತೆಗಳೂ ವಿಧಿಗೆ ಬಾಗಬೇಕು. ದೇವೇಂದ್ರ ಜ್ಯೂಸ್ ಕೂಡ ದೇವಮಾನವರನ್ನು ಆಳುವುದು ಈ ವಿಧಿಯ ನೆರವಿನಿಂದ, ಅದಕ್ಕೆ ಹೊಂದಿಕೊಂಡು ನಡೆದು. ಈ ವಿಧಿ ಹೊರಗಿನ ಯಾವುದೋ ಒಂದು ಕುರುಡು ಶಕ್ತಿಯಾಗಿರಬಹುದು. ಈ ದೃಷ್ಟಿಯೇ ಹೆಚ್ಚು. ಇಲ್ಲವೆ, ವ್ಯಕ್ತಿಯ ಒಳಗೇ ನೆಲಸಿದ್ದು ಅವನಿಗೇ ತಿಳಿಯದಂತೆ ಅವನನ್ನು ಪ್ರೇರಿಸುವ ಯಾವುದೋ ಒಳಶಕ್ತಿ ಯಾಗಿರಬಹುದು. ಗ್ರೀಕ್ ರುದ್ರ ನಾಟಕಗಳು ಸಾಮಾನ್ಯವಾಗಿ ಮೇಲಿನ ಎರಡು ತತ್ವಗಳ ಮೇಲೆ ಕಟ್ಟಿವೆ. ಪಾಪಕ್ಕೆ ಪ್ರಾಯಶ್ಚಿತ್ತ, ಮನುಷ್ಯನಿಗೂ ವಿಧಿಗೂ ಹೋರಾಟ—ಇವೇ ಗ್ರೀಕ್ ರುದ್ರ ನಾಟಕದ ಜೀವಾಳ.

ಪಾಪ ಪ್ರಾಯಶ್ಚಿತ್ತ: ಒಬ್ಬನು ಮಾಡಿದ ಪಾಪ ತನ್ನಲ್ಲಿಯೇ ಕೊನೆಗೊಳ್ಳ ಬಹುದು. ಇಲ್ಲವೆ, ತಲೆಯಿಂದ ತಲೆಗೆ ಹಬ್ಬಿ ಮನೆತನದ ಉದ್ದಕ್ಕೂ ಹರಿಯುವ ಪಾಪಸೂತ್ರವಾಗಿ ಪರಿಣಮಿಸಬಹುದು. ಇಂಥ ಪಾಪ ಪರಂಪರೆಯ ಕಥೆಯೊಂದನ್ನು ಅಯಿಸ್ಕಲೊಸ್ ಕವಿ ತನ್ನ 'ಒರೆಸ್ಟೈಯ' ಎಂಬ ಮುಕ್ಕೂಟ ನಾಟಕದಲ್ಲಿ ಚಿತ್ರಿ ಸಿದ್ದಾನೆ. ದೇವತೆಗಳ ತಣ್ಪನ್ನೂ ನಾಡೊಳ್ಪನ್ನೂ ಗಳಿಸುವುದಕ್ಕಾಗಿ ತನ್ನ ಕರುಳ ಮಗಳನ್ನು ಬಲಿಕೊಟ್ಟ ದೊರೆಯನ್ನು ಸೇಡಿನಿಂದ ರಾಣಿ ಇರಿದು ಕೊಲ್ಲುವುದೂ; ಕೊಲೆಯಾದ ತಂದೆಯ ಪ್ರೇತಶಮನಕ್ಕಾಗಿ ಮಗ ತಾಯನ್ನು ಕೊಲೆ ಮಾಡು ವುದೂ; ತಾಯ್‌ಕೊಲೆಯ ಪಾಪದಿಂದ ಮಗ ಉಗ್ರಕನ್ನಿಕೆಯರ ಕೈಯಲ್ಲಿ ಸಿಕ್ಕಿ ಪಾಡುಪಟ್ಟು, ಕೊನೆಗೆ ದೇವತೆಯ ಕೃಪಾಪ್ರಸಾದದಿಂದ ಬಿಡುಗಡೆ ಹೊಂದುವುದೂ ಆ ಮುಕ್ಕೂಟ ನಾಟಕದಲ್ಲಿ ನಿರೂಪಿತವಾಗಿವೆ.

ಮನುಷ್ಯ–ದೇವತೆ–ವಿಧಿ: ಮನುಷ್ಯನು ಮದಿಸಿ ದೇವಮಾನವ ಧರ್ಮಗಳನ್ನು ಮೀರಿಯೋ, ಇಲ್ಲವೆ, ದೇವತೆಗಳನ್ನು ಕೆಣಕಿಯೋ ಕೆರಳಿಸಿಯೋ ವಿಧಿಯ ಕೈಗೆ ಸಿಕ್ಕಿ ನರಳುತ್ತಾನೆ; ಕೊನೆಗೆ ಮುರಿದು ಬೀಳುತ್ತಾನೆ. ಒಂದು ಅರ್ಥದಲ್ಲಿ, ಗ್ರೀಕರ ದೃಷ್ಟಿಯಲ್ಲಿ ಮದಕ್ಕಿಂತ ಹೆಚ್ಚಿನ ಪಾಪವೇ ಇಲ್ಲ. ಗ್ರೀಕ್ ರುದ್ರ ನಾಟಕಗಳ ಕೊನೆಯಲ್ಲಿ ಸಾಮಾನ್ಯವಾಗಿ ಬರುವ ಮೇಳದ ಭರತವಾಕ್ಯ "ಸೊರ್ಕಿದರ ಸೊರ್ಕು ನುಡಿ ತೆತ್ತಪುದು ದಂಡಮನ್", ಇಲ್ಲವೆ, "ಬಂದುದನೆ ಕೊಂಡುಂಡು ತಾಳ್ದವನೆ ಜಾಣನ್; ತಬ್ಬಿ ನಡೆದೊಡೆ ದೇವನೊಲ್ಲದೆಯೆ ಮಾಣನ್" ಎಂಬ ನೀತಿಯನ್ನು ಸಾರುವುದಾಗಿರುತ್ತದೆ. ಒಂದಲ್ಲ ಒಂದು ಬಗೆಯಲ್ಲಿ ವಿಧಿಯ ಪ್ರಾಬಲ್ಯವನ್ನು ಪ್ರತಿಪಾದಿಸದ ಗ್ರೀಕ್ ರುದ್ರನಾಟಕವೇ ಇಲ್ಲವೆನ್ನಬಹುದು. ವಿಧಿಯನ್ನು ಕೆಣಕಿ ಬದುಕಿದವರಿಲ್ಲ.

ಗ್ರೀಕರು ಜನ್ಮಾಂತರವನ್ನು ನಂಬಿದವರಲ್ಲವಾದ್ದರಿಂದ, ಈ ಜನ್ಮದ ಕಷ್ಟ ಸುಖಗಳಿಗೆ ಹೋದ ಜನ್ಮದ ಪಾಪ ಪುಣ್ಯಗಳ ಕಾರಣವನ್ನು ಹೇಳುವಂತಿರಲಿಲ್ಲ. ಮಾಡುವ ಕರ್ಮಕ್ಕೂ ಅನುಭವಿಸುವ ಫಲಕ್ಕೂ ಪ್ರತ್ಯಕ್ಷ ಸಂಬಂಧ ಕಾಣದೆ ಹೋದಾಗ, ಶಿಕ್ಷೆಯ ಸಮರ್ಥನೆಗಾಗಿ ಏನಾದರೊಂದು ನ್ಯಾಯವನ್ನು ಹುಡುಕ ಬೇಕಾಗಿ ಬಂದು, ಪಾಪದ ವಂಶಪರಂಪರತೆಯ ತತ್ವವನ್ನೂ ವಿಧಿತತ್ವವನ್ನೂ ಕಟ್ಟಿದರು.

ಆಳ ಬಾಳಿನ ಹೆಣಗಾಟ ಹೋರಾಟಗಳು ಈ ರುದ್ರ ನಾಟಕಗಳಲ್ಲಿ ಚೆನ್ನಾಗಿ

ಚಿತ್ರಿತವಾಗಿವೆ. ಮಹಾವ್ಯಕ್ತಿಯೊಬ್ಬನು ಯಾವುದೋ ಒಂದು ಸತ್ಯಕ್ಕೆ ಧರ್ಮಕ್ಕೆ ಪ್ರೇಮಕ್ಕೆ ಅಭಿಮಾನಕ್ಕೆ, ಇಲ್ಲವೆ, ಛಲಕ್ಕೆ ಕ್ರೋಧಕ್ಕೆ ಮದಕ್ಕೆ ಮತ್ಸರಕ್ಕೆ ಒಳಗಾಗಿ, ದುರ್ಭರ ಸನ್ನಿವೇಶದ ಸುಳಿಯಲ್ಲಿ ಸಿಕ್ಕಿಕೊಂಡು, ವಿಧಿಲೀಲೆಯ ಕೈಗೊಂಬೆಯಾಗಿ ಕೊನೆಗೆ ಕೈಗುಂದಿ ಮುರಿದು ಬೀಳುವ ಘರ್ಷಣಮಯ ಜೀವನದ ಚಿತ್ರದಲ್ಲಿ ಒಂದು ಭೀಷಣ ಸುಂದರತೆ ಇದೆ, ರುದ್ರ ರಮಣೀಯತೆ ಇದೆ. ರುದ್ರ ವೀರನು ಪ್ರಯತ್ನಿಸುವ ಸಾಹಸ ಪರಾಕ್ರಮಗಳಲ್ಲಿ, ಅನುಭವಿಸುವ ಯಾತನೆ ಸಂಕಟಗಳಲ್ಲಿ, ಅವನು ಸಾಧಿಸಹೋಗುವ ಆದರ್ಶ ಧ್ಯೇಯಗಳಲ್ಲಿ, ಸಂಧಿಸುವ ಪರಾಭವ ಪತನಗಳಲ್ಲಿ ಮಾನವ ಮಹತ್ವವನ್ನು ತೊಳಗಿ ಬೆಳಗುವ, ಮಾನವ ಹೃದಯವನ್ನು ಕಲಕಿ ಕೆರಳಿಸುವ ಒಂದು ಅಲೌಕಿಕ ಶಕ್ತಿ ಇದೆ. ವಿಧಿಗೆ ಬಲಿಬಿದ್ದ ರುದ್ರ ನಾಯಕನ ದುರಂತ ದುರ್ಮರಣಗಳಲ್ಲಿ ಕೂಡ ಮಾನವನ ಅಜೇಯ ಪೌರುಷ ಮೆರೆದು ನಲಿಯುವುದನ್ನು ನಾವು ಕಾಣಬಹುದು. ಬಿದ್ದವನು ಸೋಲಬೇಕಾಗಿಲ್ಲ, ಎದ್ದವನೇ ಗೆದ್ದವನಾಗಬೇಕಾಗಿಲ್ಲ ಎಂಬುದಕ್ಕೆ ನಿದರ್ಶನಗಳಾಗಿವೆ ಇಂಥ ವಿಧಿಹತ ಮಹಾಪುರುಷರ ರೌದ್ರಮಯ ದುರಂತ ಜೀವನ.

ರುದ್ರ ನಾಟಕ ನಾಯಕನ ಮರಣದಲ್ಲೇ ಮುಕ್ತಾಯಗೊಳ್ಳಬೇಕಾಗಿಲ್ಲ. ಅಯ್‌ಸ್ಕಿಲೊಸ್ಸಿನ ಹಲವು ನಾಟಕಗಳಲ್ಲಿ ನಾಯಕರು ಮಾನಹಾನಿ, ವೈಭವನಾಶ, ತೇಜೋವಧೆ ಪಟ್ಟರೂ ದೈಹಿಕ ಮರಣ ಹೊಂದುವುದಿಲ್ಲ. ಒಳ ಸತ್ತು ಹೊರ ಸಾಯದೇ ಉಳಿದುಕೊಳ್ಳುವುದೂ ಒಂದು ಬಗೆಯ ರೌದ್ರವೆ. ‘ಪಾರಸಿಕರು’ ರುದ್ರನಾಟಕದಲ್ಲಿ ಕ್ಸೆಯಾರ್ಷನು ಸ್ವತಂತ್ರ ಜನತೆಯೊಂದನ್ನು ತನ್ನ ನೊಗದಡಿ ತರಲೆಳಸಿ ಹೆರನಾಡ ಮೇಲೆ ದಂಡೆತ್ತಿಹೋಗಿ ಜನ, ಧನ, ಸೈನ್ಯ, ಸಂಪತ್ತು, ಸಾಮ್ರಾಜ್ಯ—ಎಲ್ಲವನ್ನೂ ನೀಗಿಕೊಂಡು ಚಿಂದಿಯುಟ್ಟು ಬಿಕಾರಿಯಂತೆ ಮನೆಗೆ ಹಿಂದಿರುಗುತ್ತಾನೆ. ಆದರೆ ಸಾಯುವುದಿಲ್ಲ. ‘ಯೂಮೆನಿಡೀಸ್’ ರುದ್ರನಾಟಕದಲ್ಲಿ ನಾಯಕ ಒರೆಸ್ಟೀಸ್ ತಾಯ್ಕೊಲೆಯ ಪಾಪಕ್ಕಾಗಿ ಉಗ್ರ ಕನ್ನಿಕೆಯರ ಕೈಯಲ್ಲಿ ಪಡಬಾರದ ಪಾಡುಗಳನ್ನೆಲ್ಲ ಪಟ್ಟರೂ, ಕೊನೆಗೆ ಅಥೇನೇ ದೇವತೆಯ ಕೃಪಾ ಪ್ರಸಾದದಿಂದ ಬಿಡುಗಡೆ ಹೊಂದುತ್ತಾನೆ. ‘ಪ್ರೊಮೇಥ್ಯೂಸ್ ಬದ್ಧ’ ರುದ್ರ ನಾಟಕದಲ್ಲಿ ನಾಯಕನಾದ ಅಮರ ಪ್ರೊಮೇಥ್ಯೂಸ್ ಸಾಯುವುದಿಲ್ಲ; ಸಾಯಲಾರ. ಮರ್ತ್ಯ ಮಾನವನಿಗೆ ಅಗ್ನಿದಾನ ಮಾಡಿದ ಮಹಾಪರಾಧಕ್ಕಾಗಿ ಜ್ಯೂಸ್ ದೇವನ ಆಗ್ರಹಕ್ಕೆ ಪಾತ್ರನಾಗಿ ಕಗ್ಗಾಡ ನಡುವೆ ಬಂಡೆಯೊಂದಕ್ಕೆ ಬಿಗಿವಡೆದು ಕೇಳುವವರಿಲ್ಲದೆ ಪಾಡುಪಡುತ್ತಾನೆ. ದಿನವೂ ಒಂದು ಗಿಡುಗ ಎದೆಯ ಮೇಲೆ ಕೂತು ಕರುಳನ್ನು ಹೆಕ್ಕಿ ತಿನ್ನುತ್ತಿದ್ದರೆ ಓಡಿಸಲು ಕೈಯೆತ್ತಲಾರದೆ ದೇವತೆ ಯಾತನೆ ಅನುಭವಿಸುತ್ತಿರುತ್ತಾನೆ. ಸೊಫೊಕ್ಲೀಸಿನ ‘ಒಯ್ದಿಪೌಸ್ ದೊರೆ’ ರುದ್ರನಾಟಕದಲ್ಲಿಯೂ ಹೀಗೆಯೆ. ರುದ್ರನಾಯಕ ಸಾಯುವುದಿಲ್ಲ. ಅರಿಯದೆಯೆ ತನ್ನ ತಾಯಲ್ಲಿ ನೆರೆದ ಪಾತಕದ ಪ್ರಾಯಶ್ಚಿತ್ತಕ್ಕಾಗಿ ತಾನೇ ಕಣ್ಣಿರಿದುಕೊಂಡು ದೇಶಭ್ರಷ್ಟನಾಗಿ ದೇಹಹೊತ್ತುಕೊಂಡು ಅಲೆಯುತ್ತಿರುತ್ತಾನೆ. ಹೀಗೆ, ರುದ್ರನಾಟಕದ ರುದ್ರತೆ ಇರುವುದು ದುರಂತ ಮರಣದಲ್ಲಲ್ಲ. ರುದ್ರನಾಯಕನ ಕೆಚ್ಚು ನೆಚ್ಚುಗಳಲ್ಲಿ, ಹೆಣಗು ಹೋರುಗಳಲ್ಲಿ, ಅಳಲು ಕೊರಗುಗಳಲ್ಲಿ, ಬೀಳು ಮುರಿತಗಳಲ್ಲಿ.

ನಾಯಕ ಕೊನೆಗೆ ಸಾಯದೆ ಬದುಕಿರಬಹುದು. ಆದರೆ ರುದ್ರನಾಯಕನ ಗಭೀರ ಜೀವನದ ಘೋರ ಘರ್ಷಣೆಗಳೂ ವೀರ ಯಾತನೆಗಳೂ ರುದ್ರವಾಗಿರುತ್ತವೆ. ನಮ್ಮ ನೆನಪಿನಲ್ಲಿ ನಂದದೆ ಕನಲಿಡುತ್ತಿರುವುದು ಆ ದುರದೃಷ್ಟ ಮಹಾವ್ಯಕ್ತಿಯ ರುದ್ರ ಜೀವನ; ಅವನು ಕೊನೆಗೆ ಸತ್ತದ್ದಾಗಲಿ, ಸಾಯದೆ ಬದುಕಿದ್ದಾಗಲಿ ಅಲ್ಲ.

ಗ್ರೀಕ್ ಪುರಾಣ ಕಥೆಗಳಲ್ಲಿ ದೇವತೆ, ಮನುಷ್ಯ, ಪ್ರಕೃತಿ—ಈ ಮೂರಕ್ಕೂ ಪರಸ್ಪರ ನಿಕಟ ಸಂಬಂಧವಿದೆ. ವಿಶ್ವವಿಶಾಲ ಪ್ರಕೃತಿರಂಗದಲ್ಲಿ ದೇವತೆಗಳೂ ಮನುಷ್ಯರೂ ಒಡನಾಡಿಗಳು, ಇಲ್ಲವೆ, ಎದುರಾಳಿಗಳು. ಮಾನವನ ಗುಣಾವ ಗುಣಗಳೂ ಬಲದೌರ್ಬಲ್ಯಗಳೂ ರಾಗದ್ವೇಷಗಳೂ ಮಿಗಿಲಳತೆಯಲ್ಲಿ ದೇವತೆ ಗಳಲ್ಲಿಯೂ ಇವೆ. ಅತಿಮಾನುಷ ಮಹಿಮೆಗಳಿಂದ ದೇವತ್ವಕ್ಕೇರಿದ ಮನುಷ್ಯ ರಿದ್ದಾರೆ. ನೈಚ್ಯದಿಂದ ಭೂಪತನವಾದ ದೇವತೆಗಳಿದ್ದಾರೆ. ದೇವಮಾನವ ಸಂಬಂಧ ದಿಂದ ಹುಟ್ಟಿದ ಮಹಾವೀರರು ಹಲವರಿದ್ದಾರೆ. ದೇವತೆ ಮನುಷ್ಯನಿಗೆ ನೆರ ವಾಗಿದ್ದರೆ, ಮನುಷ್ಯ ದೇವತೆಯ ಬಂಧನ ಬಿಡಿಸಿರುವುದೂ ಉಂಟು. ಮನುಷ್ಯರ ವ್ಯವಹಾರಗಳಲ್ಲಿ ತಲೆಹಾಕಿ ಗೊಂದಳವೆಬ್ಬಿಸುವ ದೇವತೆಗಳಿದ್ದರೆ, ಸ್ವರ್ಗ ಪಾತಾಳ ಗಳನ್ನು ಹೊಕ್ಕು ದೇವತೆಗಳನ್ನು ಅಲ್ಲಾಡಿಸುವ ನರಪುಂಗವರಿದ್ದಾರೆ. ಸುತ್ತಣ ಪ್ರಕೃತಿ ಜಡವಸ್ತುವಲ್ಲ. ದೇವಮಾನವ ವ್ಯಾಪಾರಗಳಲ್ಲಿ ಜೀವಂತ ಭಾಗವಹಿಸುವ ಚೈತನ್ಯಸ್ವರೂಪಿ ಆ ಪ್ರಕೃತಿ. ಗ್ರೀಕ್ ರುದ್ರನಾಟಕಗಳಲ್ಲಿಯೂ ಈ ಸ್ವರೂಪಗಳೆಲ್ಲ ಚೆನ್ನಾಗಿ ಒಡೆದು ಮೂಡಿವೆ. ಗ್ರೀಕರ ಹಡಗುಪಡೆ ಔಲಿಸ್ ಬಂದರಿನಲ್ಲಿ ನೆರೆದಿರು ವಾಗ, ಪಡೆವಳನಾದ ಅಗಮೆಮ್ನೋನ್ ದೊರೆ ಹಿಂದೆ ತಾನು ದೇವತೆಗೆ ಹರಕೆ ಹೊತ್ತಿದ್ದಂತೆ ತನ್ನ ಮಗಳು ಇಫಿಗೆನೈಯಳನ್ನು ಬಲಿಕೊಟ್ಟ ಹೊರತು ಗಾಳಿ ಬೀಡುವುದಿಲ್ಲ. ಗಂಡನನ್ನು ಕೊಂದ ತಾಯಿ ಕ್ಲುತಮ್ನೆಸ್ತ್ರಳನ್ನು ಕೊಲೆಮಾಡು ವಂತೆ ಮಗ ಒರೆಸ್ತೇಸನ್ನು ಪ್ರೇರಿಸುವುದೂ ಮುಂದೆ ಅಥೇನೇ ದೇವತೆಯ ನ್ಯಾಯಾ ಸ್ಥಾನದಲ್ಲಿ ತಾಯ್‌ಗುಲಿಯ ಪರವಾಗಿ ವಾದಿಸುವುದೂ ಅಪೊಲ್ಲೋನ್ ದೇವತೆ.

ಗ್ರೀಕ್ ರುದ್ರನಾಟಕಕಾರರು ತಮಗೆ ಮನಬಂದ ವಿಷಯವನ್ನು ಎತ್ತಿಕೊಂಡು ನಾಟಕವನ್ನು ರಚಿಸುವಂತಿರಲಿಲ್ಲ. ದೇವತೆಯ ಉತ್ಸವದ ಅಂಗವಾಗಿ, ಮತ ಪ್ರಕ್ರಿಯೆಯ ಅನುಸಾರವಾಗಿ ನಾಟಕವಾಡುತ್ತಿದ್ದದ್ದರಿಂದ ನಾಟಕವಸ್ತುವನ್ನು ಪುರಾಣ ಕಥೆಗಳಿಂದಲೇ ತೆಗೆದುಕೊಳ್ಳುವ ಸಂಪ್ರದಾಯ ಬಂದುಹೋಯಿತು. ಯಾವ ನಾಟಕಕಾರನೂ, ಅವನು ಎಷ್ಟೇ ಪ್ರತಿಭಾವಂತನಿರಲಿ, ಆ ಸಂಪ್ರದಾಯ ವನ್ನು ಮುರಿಯುವ ಯೋಚನೆ ಮಾಡಲಿಲ್ಲ. ಇದರಿಂದ, ನಾಟಕದ ವಸ್ತುವಿನ ಆಯ್ಕೆಗೆ ಒಂದು ಪರಿಮಿತಿ ಉಂಟಾಗಿ, ಒಬ್ಬನು ತೆಗೆದುಕೊಂಡ ವಿಷಯವನ್ನೇ ಮತ್ತೊಬ್ಬನೂ ತೆಗೆದುಕೊಳ್ಳಬೇಕಾಯಿತು. ಆದರೂ, ಒಂದೇ ಪುರಾಣ ಕಥೆಯನ್ನು ತೆಗೆದುಕೊಂಡು ಹಲವು ಕವಿಗಳು ನಾಟಕ ಕಟ್ಟಿದ್ದರೂ ಒಬ್ಬೊಬ್ಬನೂ ತನಗೆ ಬೇಕಾದ ಮಾರ್ಪಾಟುಗಳನ್ನೇನೋ ಮಾಡಿಕೊಂಡಿದ್ದಾನೆ. ಒಟ್ಟು ಕಟ್ಟಡ, ಪಾತ್ರನಿರೂಪಣೆ, ವಸ್ತುಪ್ರತಿಪಾದನೆ ಮೊದಲಾದುವುಗಳಲ್ಲಿ ವ್ಯಕ್ತಿ ವೈಶಿಷ್ಟ್ಯ ಕಾಣಬರುತ್ತದೆ. ಅಯ್‌ಸ್ಕುಲೊಸ್ಸಿನಲ್ಲಿ ದೇವಪಾತ್ರಗಳಿಗೆ ಉನ್ನತ ಸ್ಥಾನವಿದೆ, ಅಗ್ರಮರ್ಯಾದೆ ದೊರೆಯುತ್ತದೆ, ದಿವ್ಯಗೌರವ ಸಲ್ಲುತ್ತದೆ. ಯುರಿಪಿದೇಸ್

ದೇವತೆಗಳನ್ನು ಅವರ ಅದೈವನಡತೆಗಾಗಿ ಲೇವಡಿಮಾಡುತ್ತಾನೆ; ಅವರ ಪೋಕರಿತನಗಳನ್ನೆಲ್ಲ ಬಯಲಿಗೆಳೆದು ಕುಚೋದ್ಯಮಾಡುತ್ತಾನೆ. ಸೊಫೊಕ್ಲೇಸ್ ಯಾವ ಅತಿಗೂ ಹೋಗುವುದಿಲ್ಲ. ಮಾದರಿಯ ಗ್ರೀಕ್‌ಬಾಳಿನ ಹಿರಿಯ ತತ್ವಗಳಲ್ಲಿ ಒಂದಾದ ಸುಮಿತಿ ಅಥವಾ ಹಾಳಿತ ಅವನಲ್ಲಿ ಚೆನ್ನಾಗಿ ಕಾಣಬರುತ್ತದೆ. ಅಯ್‌ಸ್ಕ್ಯು ಲೊಸ್ಸಿನಲ್ಲಿ ಮನುಷ್ಯರಿಗಿಂತ ದೇವತೆಗಳಿಗೆ ಪ್ರಾಧಾನ್ಯ ಹೆಚ್ಚು. ಅವನ ಬೃಹದ್ ವಿಶ್ವದೃಷ್ಟಿಯಲ್ಲಿ ಮನುಷ್ಯನು ದೈವಿಕ ಶಕ್ತಿಗಳ ಮತ್ತು ವಿಧಿಲೀಲೆಯ ವ್ಯಾಪಾರ ಗಳಿಗೆ ಹಿನ್ನೆಲೆ ಅಥವಾ ಸಾಧನ ಮಾತ್ರ. ದೇವತಾಭೂಯಿಷ್ಠವಾದ ಅಯ್‌ಸ್ಕ್ಯು ಲೊಸ್ಸಿನ ನಾಟಕವನ್ನು ಸೊಫೊಕ್ಲೇಸ್, ಅದರ ದೈವೀ ಪ್ರಭಾವವನ್ನು ಕಳೆಯದೆ, ಮಾನವೀಕರಿಸಿದನೆನ್ನಬಹುದು. ಅವನಲ್ಲಿ ಮನುಷ್ಯ ವ್ಯಕ್ತಿಗಳಿಗೂ ಮನುಷ್ಯ ವ್ಯಾಪಾರಕ್ಕೂ ಪ್ರಾಧಾನ್ಯವಿದ್ದು, ಮಾನವ ಸ್ವಭಾವ ಪ್ರವೃತ್ತಿಗಳೂ ರಾಗದ್ವೇಷ ಗಳೂ ಸೆಣಸು ಹೋರಾಟಗಳೂ ಚೆನ್ನಾಗಿ ನಿರೂಪಿತವಾಗಿವೆ. ಆದರೆ, ಸೊಫೊಕ್ಲೇಸ್ ಆದರ್ಶವಾದಿ. "ಯುರಿಪಿದೇಸ್ ಮನುಷ್ಯರನ್ನು ಅವರು ಹೇಗಿದ್ದಾರೋ ಹಾಗೆ ಚಿತ್ರಿಸುತ್ತಾನೆ; ನಾನು ಅವರು ಹೇಗಿರಬೇಕೋ ಹಾಗೆ ಚಿತ್ರಿಸುತ್ತೇನೆ" ಎಂದು ಸೊಫೊಕ್ಲೇಸೇ ಹೇಳುತ್ತಿದ್ದನು. ಯುರಿಪಿದೇಸಿನಲ್ಲಿ ಮಾನವ ಸ್ವಭಾವದ ಸ್ವಸ್ವರೂಪ ನಿರೂಪಣೆಯಿದೆ. ಸೊಫೊಕ್ಲೇಸ್ ಆರಂಭಿಸಿದ ಪುರಾಣ ವ್ಯಕ್ತಿಗಳ ಮಾನವೀಕರಣ ಯುರಿಪಿದೇಸಿನಲ್ಲಿ ಪರಿಣತಿಗೊಂಡಿದೆ. ಯುರಿಪಿದೇಸಿನ ನಾಟಕಗಳಲ್ಲಿ ಚಿತ್ರಿತ ವಾಗಿರುವ ಮನುಷ್ಯ ಹೃದಯದ ದೋಷದೌರ್ಬಲ್ಯಗಳು, ಮಾರ್ದವಲಾಲಿತ್ಯಗಳು, ಪ್ರೇಮವಾತ್ಸಲ್ಯಗಳು ಉಳಿದಿಬ್ಬರಲ್ಲಿ ಅಷ್ಟು ಸ್ಫುಟವಾಗಿ ಕಾಣಬರುವುದಿಲ್ಲ.

ಯುರಿಪಿದೇಸಿನ ತರುವಾಯ ಗ್ರೀಕ್ ರುದ್ರನಾಟಕ ಒಮ್ಮೆಯೇ ಬರಡು ಬಿದ್ದು ಹೋಗಲಿಲ್ಲ. ಆದರೆ, ಉತ್ತಮ ಕೃತಿಗಳು ಯಾವುದೂ ಬರಲಿಲ್ಲ. ಅಯ್‌ಸ್ಕ್ಯುಲೊಸ್, ಸೊಫೊಕ್ಲೇಸ್, ಯುರಿಪಿದೇಸ್–ಈ ಮೂವರೂ ಹಿಂದಿನವರ ಮತ್ತು ಮುಂದಿನವರ ಹೆಸರೊಂದೂ ತಲೆಯೆತ್ತದಂತೆ ಮೆಟ್ಟಿ ನಿಂತುಬಿಟ್ಟಿದ್ದಾರೆ. ಏಕಕಾಲದಲ್ಲಿ ಈ ಮೂವರು ಮಹಾಮೇಧಾವಿಗಳು ತಲೆದೋರಿ ಇನ್ನೂ ಮೊಳೆಯುವುದರಲ್ಲಿದ್ದ ಗ್ರೀಕ್ ರುದ್ರನಾಟಕವನ್ನು ತಮ್ಮ ಅಪ್ರತಿಮ ಪ್ರತಿಭೆಯ ವರ್ಚಸ್ಸಿನಿಂದ ಒಮ್ಮೆಗೇ ಅದರ ತುದಿನೆಲೆಗೆ ಕೊಂಡೊಯ್ದುಬಿಟ್ಟದ್ದು ಅದರ ಮುಂದಿನ ವೃದ್ಧಿ ವಿಸ್ತರಣ ಗಳಿಗೆ ಒಂದು ಬಗೆಯಿಂದ ಅಡಚಣೆಯಾಯಿತೆನ್ನಬಹುದು. ಈ ಕಾರಣದಿಂದಲೇ ಗ್ರೀಕ್ ರುದ್ರನಾಟಕಗಳಲ್ಲಿ ಅಷ್ಟಾಗಿ ವೈವಿಧ್ಯ ಕಾಣುವುದಿಲ್ಲ, ವಸ್ತುವೈಶಾಲ್ಯವಿಲ್ಲ, ಬಹುಮುಖತೆಯಿಲ್ಲ. ಆದರೆ, ಅದರ ಉನ್ನತಿ ಮುಗಿಲನ್ನು ಮುಟ್ಟಿದೆ. ಆ ಜಾತಿಯ ಕೃತಿಗಳಲ್ಲಿ ಅವನ್ನು ಮೀರಿಸುವ ಕೃತಿ ಇಲ್ಲಿಯವರೆಗೂ ಹುಟ್ಟಿಲ್ಲ. ಗ್ರೀಕ್ ರುದ್ರ ನಾಟಕದ ನಭೋಮಂಡಲದಲ್ಲಿ ಶಾಶ್ವತವಾಗಿ ಪ್ರಕಾಶಿಸುವ ಅಮರಜ್ಯೋತಿಗಳು ಮೂರೇ — ಅಯ್‌ಸ್ಕ್ಯುಲೊಸ್, ಸೊಫೊಕ್ಲೇಸ್, ಯುರಿಪಿದೇಸ್. ಬಾನು ಬೆಳಗ ವುದಕ್ಕೆ ಎಷ್ಟು ಸೂರ್ಯ ಚಂದ್ರರು ಬೇಕು?

**ಕೆ. ವಿ. ರಾಘವಾಚಾರ್**

# ಪಾರ್ತಿ ಸುಬ್ಬ

ಯಕ್ಷಗಾನ ಪ್ರಸಂಗಕ್ಕೆ ಹೊಸದೊಂದು ಕಳೆಕೊಟ್ಟು ಕೀರ್ತಿವಂತನಾದ ಪಾರ್ತಿಸುಬ್ಬನ ಹೆಸರು ದಕ್ಷಿಣ ಕನ್ನಡದ ಮನೆಮನೆಯಲ್ಲಿಯೂ ಬಳಕೆಯಾಗಿದೆ. ಈತನ ತಂದೆ ವೆಂಕಣಾರ್ಯ(?), ತಾಯಿ ಪಾರ್ತಿ. ಪಾರ್ತಿ, ಪಾರ್ವತಿ ಎಂಬುದರ ಅಪಭ್ರಂಶ. ಸುಬ್ಬನು ಮಂಜೇಶ್ವರ ಕಾಸರಗೋಡುಗಳ ನಡುವಣ ಕುಂಬಳೆ ಎಂಬ ಊರಿನವನು; ಸ್ಥಾನಿಕ ಬ್ರಾಹ್ಮಣ ಸಮಾಜಕ್ಕೆ ಸೇರಿದವನು. ನೆರೆ ಹಳ್ಳಿಯಾದ ದೇಶಮಂಗಲದಲ್ಲಿ ದೇವಸ್ಥಾನದ ಪಾಟಾಳಿಯಾಗಿದ್ದಂತೆ ತಿಳಿಯುತ್ತದೆ. (ದೇವಾಲಯದಲ್ಲಿ ಹಾಡುವುದು, ಮೃದಂಗಾದಿ ವಾದ್ಯಗಳನ್ನು ಬಾರಿಸುವುದು ಮೊದಲಾದ್ದು ಪಾಟಾಳಿಯ ಕೆಲಸ.) ಬಾಲ್ಯದಲ್ಲಿಯೆ ತಂದೆ ತೀರಿಹೋದುದರಿಂದ ತಾಯಿಯೊಬ್ಬಳ ಪೋಷಣೆಯಲ್ಲಿಯೇ ಬಳೆಯಬೇಕಾಯಿತು. ಆದುದರಿಂದಲೇ ಮೊತ್ತಮೊದಲು ನೆರೆಹೊರೆಯವರ ಬಾಯಲ್ಲಿ ಪಾರ್ತಿಸುಬ್ಬ ಎಂಬ ಹೆಸರು ಬಳಕೆಗೆ ಬಂದು ಕಟ್ಟಕಡೆಗೂ ಅದೇ ನೆಲೆಗೊಂಡಿತು ಎನ್ನುತ್ತಾರೆ. ಸುಬ್ಬನಿಗೆ ಗಂಡು ಮಕ್ಕಳಿರಲಿಲ್ಲ; ಒಬ್ಬ ಮಗಳಿದ್ದಳು. ಈತನು ಕ್ರಿ. ಶ. ೧೮ನೆಯ ಶತಮಾನದ ಮಧ್ಯಭಾಗದಲ್ಲಿ ಹುಟ್ಟಿ ೧೯ನೆಯ ಶತಮಾನದ ಆದಿಭಾಗದಲ್ಲಿ ದಿವಂಗತನಾಗಿದ್ದಿರಬೇಕೆಂದು ತೋರುತ್ತದೆ.

ಸಾಹಿತ್ಯವನ್ನು ಜೀವಂತವನ್ನಾಗಿ ಮಾಡುವುದು ದೇಸಿ ಸಾಹಿತ್ಯ. ಮಾರ್ಗ ಸಾಹಿತ್ಯವು ಮದುವೆ ಮಾಂಗಲ್ಯಾದಿ ನೈಮಿತ್ತಿಕ ಆಚಾರಗಳಂತಾದರೆ, ದೇಸಿ ನಿತ್ಯಾಚಾರದಂತಿರುವುದು. ಆಡುನುಡಿ ಸಮಾಜದ ಉಸಿರಿನಂತೆ ಎಚ್ಚರ ಕನವರಿಕೆ ನಿದ್ದೆಗಳಲ್ಲಿಯೂ ಸಾಗುವುದರಿಂದ, ಅದೇ ಆಧಾರವಾದ ದೇಸಿ (ಜನಪದ) ಸಾಹಿತ್ಯವನ್ನು ಜನತೆಯ ನಿರಂತರಾಹಾರದೊಡನೆ ಹೋಲಿಸುವುದೇ ತಕ್ಕುದಾಗಿದೆ. ಒಂದುವೇಳೆ, ಮಾರ್ಗ ಸಾಹಿತ್ಯವು ಇಲ್ಲದಿರುತ್ತಿದ್ದರೂ ದೇಸಿ ಸಾಹಿತ್ಯವಿಲ್ಲದಿದ್ದರೆ ನಮ್ಮ ಸಂಸ್ಕೃತಿಯೆ ಬೇರಳಿದುಹೋಗುತಿತ್ತು. ತೆಂಕನಾಡಿನ ದೇಸಿಗಬ್ಬಗಳೊಳಗೆ ಅತಿ ಪ್ರಬಲವಾದುದೆಂದರೆ ಯಕ್ಷಗಾನ ಪ್ರಬಂಧ. ಆ ಯಕ್ಷಜನಾಂಗ ಯಾವುದು? ಅಮರಸಿಂಹನ ನಿಘಂಟು "ಯಕ್ಷ ರಕ್ಷೋ ಗಂಧರ್ವ ಕಿನ್ನರಾಃ । ಪಿಶಾಚೋ ಗುಹ್ಯಕಸ್ಸಿದ್ಧೋ ಭೂತೋಮೀ ದೇವಯೋನಯಃ" ಎಂದು ಯಕ್ಷರನ್ನು ದೇವಯೋನಿಗಳೊಳಗೆ ಒಂದು ವರ್ಗದವರನ್ನಾಗಿ ಸಾರುತ್ತಿದೆ. ಈ ಯಕ್ಷರ ಒಡೆಯನಾದ ಕುಬೇರನು ಲಂಕಾನಗರಾಧಿಪತಿಯಾಗಿದ್ದನೆಂದೂ, ರಾವಣನಿಂದ ಸೋಲಿಸಲ್ಪಟ್ಟು ಉತ್ತರದ ಕೈಲಾಸಪರ್ವತಕ್ಕೆ ಹೋದನೆಂದೂ ಪುರಾಣದ ಹೇಳಿಕೆ. ಇದರಿಂದ ಯಕ್ಷಜನಾಂಗದ ಮೂಲನಿವಾಸಸ್ಥಾನವು ದಕ್ಷಿಣಾಪಥವೇ ಆಗಿತ್ತೆಂದು ಹೇಳಬಹುದು. ವೇದಕಾಲದಲ್ಲಿ ನಟಗಾಯಕಾದಿಗಳಿಗೆ ಆರ್ಯರೊಡನೆ ಸಮಾನಸ್ಥಾನವಿದ್ದಂತೆ ಕಂಡುಬರುವುದಿಲ್ಲ. ಆರ್ಯಪುರುಷನು ತಂದೆಯಾಗಿ ದೇಶೀಯ ಸ್ತ್ರೀಯಲ್ಲಿ ಜನಿಸಿದ ವ್ಯಕ್ತಿಗೆ ಯಕ್ಷನೆಂದೂ ಅಂಥ ವ್ಯಕ್ತಿಸಮೂಹಕ್ಕೆ ಯಕ್ಷವರ್ಗವೆಂದೂ ಹೆಸರೊದಗಿರಬಹುದೆ? ಈ ಯಕ್ಷರ ಗಾನವೇ ಯಕ್ಷಗಾನವಾಗಿರಬೇಕು.

ಈ ಯಕ್ಷರು ಈ ನಾಡಿನ ಮೂಲನಿವಾಸಿಗಳಾದುದರಿಂದಲೆ ಅವರ ಗಾನವು ಅಷ್ಟು ರೂಢವಾಗುವುದಕ್ಕೆ ಕಾರಣ.

ನಮ್ಮ ಹಿಂದಿನ ಸಾಹಿತ್ಯದೊಳಗೆ ಅಲ್ಲಲ್ಲಿ ತೋರುವ ದೇಸಿಗಬ್ಬ ಅಷ್ಟಿವೆ ನಾಟ್ಗಬ್ಬ (ನಾಡಿನ ಕಬ್ಬ) ಎಂಬುದು ಜನಪದ ಸಾಹಿತ್ಯ ಸಾಮಾನ್ಯಕ್ಕೆ ವಾಚಕ ಪದವಾದರೆ ನಾಟ್ಯಗರಣ ಎಂಬುದು ದೃಶ್ಯಕಾವ್ಯಗಳಿಗೆ ಹೆಸರು. ನಾಗವರ್ಮನು ಹೇಳಿರುವ ಪದ, ಮೆಲ್ವಾಡು, ಪಾಡು, ಮೇಲ್ವಾಡು, ಜಿದಂಡೆಗಬ್ಬ, ಪಾಡುಗಬ್ಬ, ಬಾಜನೆಗಬ್ಬ ಎಂಬ ಏಳು ತೆರದ ದೇಸಿಗಬ್ಬಗಳೊಳಗೆ ಬಾಜನೆಗಬ್ಬ ಎಂಬುದು "ವಾದನ ಕಾವ್ಯ" ಎಂಬುದರ ಅಪಭ್ರಂಶರೂಪವಾಗಿರಬೇಕು. ಇದಕ್ಕೆ ವಾದ್ಯಗಳೊಡನೆ ಹಾಡುವ ಕಾವ್ಯ ಎಂದು ಅರ್ಥವಾಗಬಹುದು. ಇದರಿಂದ ಈ ಬಾಜನೆಗಬ್ಬ ದೃಶ್ಯವಾಗಿರಬಹುದೋ ಎಂಬ ಸಂದೇಹವಾಗುತ್ತವೆ. ನಾಟ್ಯಗರಣದ ಅಥವಾ ಯಕ್ಷಗಾನ ಪ್ರಬಂಧದ ಇನ್ನೊಂದು ಹೆಸರೇ ಈ ಬಾಜನೆಗಬ್ಬವಾಗಿರಬಹುದು. ನಾಗವರ್ಮನು ಬಾಜನೆಗಬ್ಬಕ್ಕೆ ಹೇಳುವ ಲಕ್ಷಣಗಳೆಲ್ಲಾ ಯಕ್ಷಗಾನಕ್ಕೆ ಹೊಂದಿಕೆಯಾಗುತ್ತವೆ. ದೇಸಿಯಾದ ಈ ದೃಶ್ಯಕ್ಕೆ 'ಆಟ' ಎಂಬ ಹೆಸರು ಈಗಲೂ ರೂಢವಾಗಿದೆ. ಈ 'ಆಟ'ಗಳು ನಮ್ಮ ಕನ್ನಡ ಸಂಸ್ಕೃತಿಯನ್ನು ಈ ಪ್ರಾಂತದೊಳಗೆ ಹಾಸುಹೊಕ್ಕಾಗಿ ಹೆಣೆದಿವೆ ಎಂಬಲ್ಲಿ ಸಂಶಯವಿಲ್ಲ.

ದಕ್ಷಿಣಕನ್ನಡ ಪ್ರಾಂತದಲ್ಲಿ ಹಲವು ಪ್ರಸಿದ್ಧ ಯಕ್ಷಗಾನ ಕವಿಗಳು ಆಗಿ ಹೋದರು. ಕೆಲವರು ಯಕ್ಷಗಾನ ಕವಿಗಳು ಮಾತ್ರವಾದರೆ, ಕೆಲವರು ಆಟವಾಡಿಸುವ ಭಾಗವತರಾಗಿದ್ದರು. ಇನ್ನು ಕೆಲವರು ಕವಿ–ಭಾಗವತರಾಗಿದ್ದರು. ನಮ್ಮ ಪಾರ್ತಿ ಸುಬ್ಬನು ಕವಿ–ಭಾಗವತನಾಗಿದ್ದನೆಂದು ತೋರುತ್ತದೆ.

ಸುಬ್ಬನು ಪಾಟಾಳಿಯಾಗಿ ದೇವಸ್ಥಾನದಲ್ಲಿ ಹಾಡುಗಳನ್ನು ಹಾಡುತ್ತಿದ್ದನು. ಅವನ ಹಾಡುಗಳು ಜನಮನವನ್ನು ಆಕರ್ಷಿಸುತ್ತಿದ್ದುವಂತೆ. ಸುಬ್ಬನು ನಾರಾಯಣ ಮಂಗಲ ಎಂಬ ಊರಿನ ಗೋಪಾಲಕೃಷ್ಣ ದೇವಸ್ಥಾನದಲ್ಲಿಯೂ ಪಾಟಾಳಿಯಾಗಿದ್ದನೆಂದು ತೋರುತ್ತದೆ. ಆ ದೇವಸ್ಥಾನದಲ್ಲಿ ಹಾಡುಗಳನ್ನೂ ಯಕ್ಷಗಾನ ಪ್ರಬಂಧಗಳನ್ನೂ ಬರೆಯುತ್ತಿದ್ದನೆಂದು ಹೇಳುತ್ತಾರೆ. ಅವನು ಕುಳಿತುಕೊಳ್ಳುತ್ತಿದ್ದ ಕಲ್ಲನ್ನು 'ಸುಬ್ಬನ ಕಲ್ಲು' ಎಂದು ಈಗಲೂ ಕರೆಯುತ್ತಾರಂತೆ. ಆದರೆ ಅವನ ಪ್ರಸಂಗಗಳಲ್ಲೆಲ್ಲಾ ಕಣ್ವಪುರದ ಗೋಪಾಲಕೃಷ್ಣ ಎಂಬ ಮುದ್ರೆಯೆ ತೋರುತ್ತಿದೆ. ಈ ಕಣ್ವಪುರವೆಂದರೆ ನಾರಾಯಣಮಂಗಲದಿಂದ ಮೂರುಮೈಲಿ ದೂರದ ಕುಂಬಳೆಯೇ.

ಇವನು ಜನ್ಮತಃ ಗೋಪಾಲಕೃಷ್ಣನ ಭಕ್ತನಂತೆ. ಭಾಗವತದ ದಶಮಸ್ಕಂಧಕ್ಕೆ ಸೇರಿದ ಬಾಲಲೀಲೆ (ಶ್ರೀ ಕೃಷ್ಣನ ಬಾಲ್ಯಕಥಾನಕ), ಬಿಲ್ಲಹಬ್ಬ ಎಂಬ ಎರಡು ಪ್ರಸಂಗಗಳನ್ನು ಬರೆದಿದ್ದನು. ಆದರೆ ಸರ್ವರ ಆದರಕ್ಕೆ ಪಾತ್ರವಾದುವು ಎಂದರೆ ಅವನ ರಾಮಾಯಣದ ಪ್ರಸಂಗಗಳು. ರಾಮಾಯಣ ಕಥಾನಕಗಳೊಳಗೆ: (೧) ಪಟ್ಟಾಭಿಷೇಕ, (೨) ಪಂಚವಟಿ, (೩) ವಾಲಿ ಸುಗ್ರೀವರ ಕಾಳಗ, (೪) ಉಂಗುರಸಂಧಿ, (೫) ಸೇತುಬಂಧನ, (೬) ಅಂಗಸಂಧಾನ, (೭) ಕುಂಭಕರ್ಣ ಕಾಳಗ— ಎಂಬುವನ್ನು ಸುಬ್ಬನೆ ಬರೆದನೆಂಬಲ್ಲಿ ಸಂಶಯವಿಲ್ಲ. ಇವನು ಇನ್ನೂ ಎಷ್ಟು ರಾಮಾಯಣ ಪ್ರಸಂಗಗಳನ್ನು ಬರೆದಿರುವನೋ ತಿಳಿಯದು.

ನಮ್ಮ ಸುಬ್ಬನು ಅಷ್ಟೊಂದು ವಿದ್ವಾಂಸನಾಗಿರದಿದ್ದರೂ, ಪ್ರತಿಭೆ ಅವನನ್ನು ಯಕ್ಷಗಾನ ಕವಿತೆಯತ್ತ ಸೆಳೆಯಿತು. ಆ ದಾರಿಯಲ್ಲೆ ಹರಿದುದರಿಂದ ಅವನು ಕೃತಾರ್ಥನಾದನು. ಅವನೆಷ್ಟರ ಮಟ್ಟಿಗೆ ಕೃತಾರ್ಥನಾದನು ಎಂಬುದು ಕನ್ನಡದ ಇತರ ಪ್ರಾಂತದವರಿಗೆ ಗೊತ್ತಿರಲಾರದು. ಯಾಕೆ? ಈ ನಾಡಿನವರಿಗೇ ಸರಿಯಾಗಿ ತಿಳಿದಿಲ್ಲ. 'ಹಿತ್ತಲ ಗಿಡ ಮದ್ದಲ್ಲ' ಎಂಬ ಗಾದೆಯಂತೆ 'ಅವನೇನು ದೊಡ್ಡ ಕವಿಯೆ?' ಎಂದು ನಕ್ಕುಬಿಡುತ್ತಾರೆ. ಇಂಥವರ ಮೂಢತೆಗೆ ಬಲ್ಲವರು ನಗಬೇಕಾಗಿದೆ. ಅದಂತಿರಲಿ. ಮೊದಲು ಅವನ ಪ್ರಸಂಗಗಳೊಳಗಿನ ಕೆಲ ಕೆಲವು ಪದ್ಯಗಳನ್ನು ದೃಷ್ಟಾಂತವಾಗಿ ಕೊಟ್ಟು, ಅಲ್ಲಲ್ಲಿ ಇಷ್ಟಿಷ್ಟು ಹೊಲಬುದೋರುತ್ತೇನೆ. ನನಗೆ ಅವನ ಭಾಗವತ ಪ್ರಸಂಗದ ಶುದ್ಧ ಮಾತೃಕೆ ಇನ್ನೂ ಒದಗದುದರಿಂದ ಒದಗಿದ ರಾಮಾಯಣ ಪ್ರಸಂಗಗಳಿಂದ ಮಾತ್ರವೇ ದೃಷ್ಟಾಂತಗಳನ್ನಾರಿಸಿ ಕೊಂಡಿರುತ್ತೇನೆ.

ತಾಯಿಯಾದ ಕೈಕೆಯ ವರದಂತೆ ತಾನೊಬ್ಬನೆ ವನವಾಸಕ್ಕೈದುವುದೆಂದು ರಾಮನು ಮೊದಲು ಭಾವಿಸಿದ್ದನು. ಆ ಸಮಯದಲ್ಲಿ ಕಳವಳಕ್ಕೆ ತುತ್ತಾದ ಕೌಸಲ್ಯಾದೇವಿಯನ್ನು ಶ್ರೀರಾಮನು ಸಮಾಧಾನಗೊಳಿಸುವ ಸಂದರ್ಭವಿದು:

ರಾಗ: ಕೇದಾರಗೌಳ—ಅಟತಾಳ

(ಪಟ್ಟಾಭಿಷೇಕ) ಕಣ್ಣನೀರಬುಧಿಯೊಳಾಳುವ ಜನನಿಯ ।
ಪುಣ್ಯಪುರುಷ ನೋಡುತ ।
ಬಣ್ಣಗಾರಿಕೆ[1]ಯಲ್ಲ ತಾಯ್ನುಂದೆಯರ ಮಾತ ।
ನುಣ್ಣದುರಿ[2]ಯಲಾಗದು ॥ ೧ ॥

ಜಾನಕಿ ಲಕ್ಷ್ಮಣರರಿಯರು ಕಿರಿಯರು ।
ನೀನೊಲ್ದು ಬುದ್ಧಿ ಪೇಳಿ ।
ನಾನಿಲ್ಲದೊದಗುವ ಬಗೆಯೊಂದು ಗಾಯದ ।
ಬೇನೆಯನಾರಿಸವ್ವಾ ॥ ೨ ॥

ಹಂದರದಲಿ ಪಿಡಿದಾ ಸೆರಗನ್ನು ನಾ ।
ನಿಂದು ಸಡಿಲಿಸುವಾಗ ।
ತಂದೆಯನುಳಿದ ತಾಯಿಲ್ಲದ ಬಾಲೆಯೇ ।
ನೆಂದು ಮಮ್ಮಲಿಸುವಳೋ ॥ ೩ ॥

ಬೇರೇನು ತಂದೆಗೆ ಮುಪ್ಪು ಲಕ್ಷ್ಮಣ ಬಾಲ ।
ನಾರಿ ಸಣ್ಣವಳು ಸೀತೆ ।
ಆರಯ್ವುದೆಲ್ಲವನಳಲಿನ ತೊರೆಯೊಳ ।
ಗೂರಬಾರದು ಮನವ ॥ ೪ ॥

೧ ಬಣ್ಣಗಾರಿಕೆ = ಠಕ್ಕು.
೨ ಉಣ್ಣದುರಿ = ಪರಾಂಬರಿಸದೆ ದುಃಖಿಸು (ಉಣ್ಣದೆ + ಉರಿ = ಊಟನಾಡದೆ ಹಸಿವೆಯಿಂದ ದುಃಖಿಸು). ಇದು ಸುಬ್ಬನ ವಿಶಿಷ್ಟಗಳಾದ ನುಡಿಗಟ್ಟುಗಳಲ್ಲೊಂದು.

ಹಗಲ ನೋರೆಯಲಿ ಕತ್ತಲೆ ಕತ್ತಲೆಯ ಮೇಲೆ ।
ಹಗಲರಳುವ ನಿಯಮ ।
ಜಗದೊಂದವಸ್ಥೆ ದುಃಖವನುಂಡು ಬೆಳೆವುದೆ ।
ಸೊಗವೆಂದು ಬಗೆವುದಮ್ಮಾ ॥ ೫ ॥

ಇಲ್ಲಿ ಬೋಧಿಸುವವನು ಕಿರಿಯನಾದರೂ, ಹಿರಿಯರದಕ್ಕಿಂತಲೂ ಹಿರಿಯ ಬುದ್ಧಿ ಪ್ರಭಾವವು ಅವನಲ್ಲಿರುವುದು ಪ್ರಸಿದ್ಧವಾದುದರಿಂದ, ಬೋಧನೆಯುಮ ಪ್ರಕೃತಿವಿರುದ್ಧವಾಗಿ ತೋರುವುದಿಲ್ಲ. ಇದರೊಳಗಿನ 'ಬಣ್ಣಗಾರಿಕೆ, ಉಣ್ಣಮರಿ' ಎಂಬ ನುಡಿ–ನುಡಿಗಟ್ಟುಗಳು ಎಷ್ಟು ನೂತನವಾಗಿವೆ, ಉದ್ದಿಷ್ಟಾರ್ಥಗಳನ್ನೊದಗಿಸುವಲ್ಲಿ ಅಂದಗಳಾಗಿವೆ ಎಂಬುದನ್ನು ವಾಚಕರು ಅವಗಾಹಿಸಬೇಕು. ಮೂರನೆಯ ಪದ್ಯವು ರಸಿಕರೆದೆಯನ್ನು ಅದೆಷ್ಟು, ಹೇಗೆ ಅಲುಗಿಸುತ್ತಿದೆ ಎಂಬುದನ್ನು ಕವಿಯ ಮನಸ್ಸಿಗೆ ಸಾಕ್ಷಿಯಾದ ಓದುಗಾರನ ಮನಸ್ಸೆ ಹೇಳಬೇಕು. ಕಡೆಯ ಹಾಡು 'ಸುಖಸ್ಯಾನಂತರಂ ದುಃಖಂ' ಎಂಬ ಸಂಸ್ಕೃತ ಶ್ಲೋಕದ ಛಾಯೆಯೇ ಆದರೂ ಮುಸುಕಿಹೋಗದೆ ಅದೊಂದು ಕಾಂತಿಯನ್ನೊದಗಿಸಿರುತ್ತದೆ. ಮುಂದೆ ಸೀತಾರಾಮ ಲಕ್ಷ್ಮಣರು ವನವಾಸಕ್ಕಾಗಿ ಹೊರಟು ಪಟ್ಟಣದಲ್ಲಿ ಹೋಗುತ್ತಾರೆ. ಆಗ ಊರವರು ಸೈನಿಕರೆಲ್ಲರೂ ಅವರನ್ನು ಹಿಂಬಾಲಿಸುತ್ತಾರೆ. ಸಂದರ್ಭವನ್ನು ಕವಿ ವರ್ಣಿಸುವುದನ್ನೀಕ್ಷಿಸಿರಿ:

ರಾಗ : ಅಟತಾಳ

(ಪಟ್ಟಾಭಿಷೇಕ) ಬಂದರು ರಾಮಲಕ್ಷ್ಮಣರು । ಆನೆ–
ಮಂದಿ ಕುದುರೆ ತೇರುಗಳು ಕೂಡೆ ಬರಲು ॥ ಪಲ್ಲವಿ ॥

ಕೇರಿಕೇರಿಯನೆಲ್ಲ ಕಳೆದು । ತಮ್ಮ–
ಊರಿದು ಮನೆಯಿದೆಂಬಾ ಭ್ರಮೆಯುಳಿದು ।
ಸೇರಿ ನೋಳ್ಪರ ಕಣ್ಣೊಳ್ಸುರಿದು । ಹಾಯ್ವ
ನೀರೊಡನಾಶಾಪಾಶವ ಹರಿದು ॥ ೧ ॥

ಹಿರಿಯರ ಮನದೊಳಗಿರಿಸಿ । ಕುಲ–
ದಿರವನೆ ತಮ್ಮಯ ಗುರಿಯಲಿ ಬೆರಸಿ ।
ಧರಣಿಗೆ ಮೇಲ್ಪಂತಿ ಬರೆಸಿ । ಹೊಸ–
ಪರಿಯೊಂದು ದಾರಿಯ ಹಿಡಿದು ಮುಂಬರಿಸಿ ॥ ೨ ॥

ಈ ಹಾಡಿನ ಮೈ ಬಲು ಸಣ್ಣದು, ಮಹಿಮೆ ದೊಡ್ಡದು. ಸಜ್ಜನಿಕೆಯನ್ನಭ್ಯಾಸಿಸುವವರಿಗೆ ಇದು ಅತ್ಯುತ್ತಮವಾದೊಂದು ಆದರ್ಶವೆಂದಿಷ್ಟೇ ಹೇಳುತ್ತೇನೆ.

ತನ್ನ ದುರಾಶೆಗನುವಾಗಿ ಲಕ್ಷ್ಮಣನಿಂದ ಮಾನಭಂಗವನ್ನೊಂದಿದ ಶೂರ್ಪಣಖೆ, ತನ್ನ ಭಂಗವನ್ನು ಖರಾದಿಗಳಿಗೆ ದೂರುತ್ತಾಳೆ. ಶ್ರೀರಾಮನಿಂದ ಅವರೆಲ್ಲರೂ ಮಡಿಯುತ್ತಾರೆ. ಮುಯ್ಯುರಿ ಆಕೆಯ ಮೈಯ್ಯೇರುತ್ತಿದೆ. ಲಂಕೆಗೈದಿ ರಾವಣನೊಡನೆ ಮೊರೆಯಿಡುವ ಸಂದರ್ಭವಿದು:

ರಾಗ: ಕಾಂಬೋದಿ—ಜಂಪೆ ತಾಳ

(ಪಂಚವಟಿ)

ದಶರಥನ ಸುತರಾದ ರಾಮಲಕ್ಷ್ಮಣರೆಂಬ ।
ಪೆಸರುಳ್ಳ ಪೋರರಿಬ್ಬರಿಗೆ ।
ವಸುಧೆಯೊಳಗಿದಿರಿಲ್ಲ ನೋಡಿದರೆ ಬಾಲಕರು ।
ಅಸಮ ಸಾಹಸರು ಕೇಳಣ್ಣ ॥ ೧ ॥

ರಾಮನೆಂಬಾತನಿಗೆ ರಾಜಿಸುವಳೊರ್ವ ಸತಿ ।
ಕಾಮನರಗಿಣಿಯಂತೆ ತರುಣಿ ।
ಕಾಮಿನಿಯ ಕಂಡು ಹೆಣ್ಣಾನೆ ಮರುಳಾದೆನೆನೆ ।
ಭೂಮಿಯೊಳವಳ್ಗೆ ಜೋಡಿಹರೆ ॥ ೨ ॥

ನಾಗವೇಣಿಯ ಕಂಡು ಸೈರಿಸದೆ ಮನಸು ನಿನ ।
ಗಾಗಿ ಕೈಯಿಕ್ಕಿದೆನು ಸತಿಗೆ ।
ಮೂಗು ದುರಿಸಿದ[1] ಮೂಕನಾದ ಲಕ್ಷ್ಮಣನಿದೋ ।
ಮೂಗನೇ ಮೂದಲಿಸಿ ಕೊಯ್ದು ॥ ೩ ॥

ಖರದೂಷಣಾದಿಗಳ ಹೆಸರಿಲ್ಲವಾಗಿಸಿದ ।
ರುರುದಂಡಕಾರಣ್ಯದೊಳಗೆ ।
ಸ್ಥಿರವಾಗಿ ನೆಲಸಿದಾ ಖಳರ ಕುಲವೆಲ್ಲ ಹಗೆ ।
ಯುರಿ ಹೊಗೆದು ಹವೆಯೊಳೊಂದಾಯ್ತು ॥ ೪ ॥

ದಾನವರ ಸಂಹರಿಸಿ ನಮ್ಮವರ ಹೊಳಲೆಲ್ಲ ।
ದಾನವಿತ್ತರು ಮೌನಿಗಳಿಗೆ ।
ಏನು ಬಂದರು ಬರಲಿ ಎಂತಾದರಾಗಲಾ ।
ಮಾನಿನಿಯ ತರಬೇಕು ಸಿದ್ಧ ॥ ೫ ॥

ಈ ಹಾಡನ್ನು ಹಾಡುವಲ್ಲಿ ಕವಿ, ಶೂರ್ಪಣಖಿಯೇ ತಾನಾಗಿಬಿಟ್ಟುದು ವ್ಯಕ್ತವಾಗುತ್ತಿದೆ. ತನ್ನ ಮಾನಿನೀತ್ವವನ್ನೇ ಭಂಗಿಸುವ ನಡವಳಿಯವಳಿಗೆ ಮಾನಭಂಗವೆಂಬರೇನು? ಅದರ ಫಲವಾಗಿ ಅಂಗಭಂಗವಾದುದೇನೋ ಸರಿ. 'ರಾಮಲಕ್ಷ್ಮಣರಲ್ಲಿ ಮೋಹಪರವಶಳಾದೆನು. ಆ ಕಾರ್ಯದಲ್ಲಿ ನಿರಾಶಳಾದುದರಿಂದ ಸೇಡಿಗಾಗಿ ಸೀತೆಯ ಮೇಲೆ ಕೈಯೆತ್ತಿದೆನು. ಆಗ ಲಕ್ಷ್ಮಣನು ಹೀಗೆ ಅಂಗಭಂಗವನ್ನೆಸಗಿದನು' ಎಂದರೆ ಸತ್ಯವನ್ನೇ ಹೇಳಿದಂತಾಗುತ್ತಿತ್ತು. ಆದರೇನು? ಅಂಥ ನಡವಳಿಗಿಳಿದು ಪಳಗಿದವಳು ಸತ್ಯದ ಗಾಳಿಯನ್ನಾದರೂ ಮೂಸಿನೋಡುವಳೆ? ತನ್ನ ಸ್ವಭಾವವನ್ನರಿತ ಅಣ್ಣನು 'ರಾಮಲಕ್ಷ್ಮಣರನ್ನು ಮೋಹಿಸಿ ಅತಿಕ್ರಮಿಸಿದುದರ

[1] ಇತರರು ತಮ್ಮ ಮುಖವನ್ನು ನೋಡುತ್ತಾ ತಮ್ಮ ಮೂಗನ್ನು ತುರಿಸಿಕೊಂಡರೆ ಮೂಕರಿಗೆ ಸೈರಿಸಲಾರದ ಸಿಟ್ಟು ಬರುವುದು ಲೋಕಸಿದ್ಧವು. 'ಮೂಗುದುರಿಸಿದ ಮೂಕನಾದ' — ಎಂಬುದಕ್ಕೆ ತನ್ನ (ಶೂರ್ಪಣಖಿಯ) ಮಾತು ಕೆಲಸಗಳಿಂದರೆ ಲಕ್ಷ್ಮಣನೆಂಬ ಮೂಕನನ್ನೀಕ್ಷಿಸಿಕೊಂಡು ಮೂಗನ್ನು ತುರಿಸಿದಂತಾಯಿತು; ಆ ತನ್ನ ನಡವಳಿಯಿಂದ ಅವನು ಕೋಪಾವೇಶಗೊಂಡನು ಎಂಬ ತಾತ್ಪರ್ಯ. ಮೂಗೆಂಬ ಇಂದ್ರಿಯವು ಸಶಕ್ತವಾಗಿಲ್ಲದವರು ಸರಿಯಾಗಿ ಮಾತಾಡಲಾರರಷ್ಟೆ. ಅದರಿಂದಲೆ ಮೂಕರು, ಇತರರು ಮೂಗುದುರಿಸುವುದೆಂದರೆ ತಮ್ಮನ್ನು ಸೀಕರಿಸುವುದು ಎಂಬ ಭಾವನೆಯಿಂದ ಕೋಪಗೊಳ್ಳುವುದಾಗಿರಬಹುದೆ?

ಫಲವಾಗಿ ಇವಳಿಗೆ ಈಯವಸ್ಥೆಯೊದಗಿರಬೇಕು' ಎಂಬುದಾಗಿ ಸಂದೇಹಪಡ ಬಹುದು ಎಂದು ಭಾವಿಸಿದಳು. ಅಣ್ಣನ ಆ ಸಂಶಯನಿವೃತ್ತಿಗಾಗಿಯೇ 'ರಾಮ ಲಕ್ಷ್ಮಣರೆಂಬ ಹೆಸರುಳ್ಳ ಘೋರರಿಬ್ಬರು' ಎನ್ನುತ್ತಾಳೆ. ಆದರೆ 'ಅಂಥ ಘೋರ ರೊಳಗೊಬ್ಬನಿಂದ ಅತಿ ಬಲಶಾಲಿನಿಯಾದ ತನಗೆ ಇಂಥ ಅಂಗಭಂಗವಾಗುವುದು ಹೇಗೆ?' ಎಂಬ ಪ್ರಶ್ನೆಯೊದಗುತ್ತಿದೆ. ತನ್ನಿವೃತ್ತಿಗಾಗಿಯೇ 'ನೋಡಿದರೆ ಬಾಲಕರು' ಎಂದೂ 'ಅಸಮಸಾಹಸರು' ಎಂದೂ ಹಿಂದುಮುಂದಿನ ತಾಂಗು ಮಾತುಗಳು. ಹಾಗೆ ತನ್ನೆದೆಯ ವಿಕಾರವನ್ನುದ್ದಿ ತೆಗೆದು ರಾವಣನೆದೆಗೆ ಬಣ್ಣ ವನ್ನು ಬಳಿದು ಅದರಮೇಲೆ ಸೀತೆಯ ಚಿತ್ರವನ್ನು ಬರೆದು ತೋರಿಸುತ್ತಾಳೆ. ಕಾಮುಕನವನು ಆ ಚಿತ್ರವನ್ನೀಕ್ಷಿಸುವಲ್ಲಿ 'ಸೈರಿಸದೆ ಮನಸು ನಿನಗಾಗಿ ಕೈಯಿಕ್ಕಿ ದೆನು ಸತಿಗೆ' ಎನ್ನುತ್ತಾಳೆ. ಎಂದರೇನು? ಸಾಹಸವೆಂಥದೇ ಆಗಲಿ; ಅಂಥ ಲೋಕಾತೀತ ಸೌಂದರ್ಯಶಾಲಿನಿ ಯುವತಿಯಾದ ಸೀತೆ, ನಿನಗಲ್ಲದೆ ಆ 'ಘೋರ' ರಾಮನಿಗೆ ವಲ್ಲಭೆಯಾಗಿರುವುದೆಂದರೆ ಪ್ರಕೃತಿವಿರುದ್ಧವಲ್ಲವೆ? ಎಂದಾಡದೆ ಆ ದುರುದುಂಬಿ ಶೂರ್ಪಣಖೆ, ರಾವಣನೆದೆಗೆ ಹಾಡಿ ಹೇಳಿದಳು. ಚಾಡಿ ಗಾರ್ತಿಯ ವ್ಯಂಗ್ಯೋಕ್ತಿಯನ್ನು ಕವಿ ಬಲು ಜಾಣ್ಮೆ ನುಡಿಗಳ ಹಾಡಿನಿಂದ ಸೂಸಿ ದ್ದಾನೆ. ನೋಡಿರಿ: ರಾವಣನೆಂದರೆ ಸಾಂಗವೇದಗಳನ್ನೋದಿದವನು, ಮಥಿಸಿ ದವನು; ಹುರುಳನ್ನುಂಡವನು; ಧರ್ಮಸ್ವರೂಪವನ್ನರಿತವನು. ಆದರೆ ಓದಿಕೆ ಯೆಂಬುದೇ ಬೇರೆ; ಓದಿಕೆಯ ಸಾರವು ಅಂತರಂಗದೊಡನೊಂದಾಗುವುದೆಂಬುದೇ ಬೇರೆ. ಆ 'ಕಾಮನರಗಿಣಿ' ಸೀತೆಯ ಮೇಲೆ 'ನಿನಗಾಗಿ ಕೈಯಿಕ್ಕಿದೆನು' ಎಂದೊಡನೆ ಆ ಧರ್ಮಶಾಸ್ತ್ರದ ಮುಗಿಲೆಲ್ಲ ಗಾಳಿಯ ಗಂಟಾಗತೊಡಗಿತಲ್ಲವೆ? ಆ ಮಾಯಾ ಸಂಸ್ಕೃತಿಸ್ವರೂಪಿಣಿಗದು, ಅಣ್ಣನ ಮೋರೆಯಲ್ಲಿ ಮೊಳೆಯಲಾರಂಭಿ ಸಿದ ಬಗೆಬಗೆಯ ಸನ್ನೆಗಳಿಂದಲೇ ಗೊತ್ತಾಯಿತು. ಗಾಳಿ ಬೀಸಿದಲ್ಲಿಗೆ ಚುಕ್ಕಾಣಿ ಯನ್ನಾಮೇಲೆ ತಿರುಗಿಸುತ್ತಾಳೆ: 'ಸತಿಗೆ ನಿನಗಾಗಿ ಕೈಯಿಕ್ಕಿ'ದುದೆಂದರೆ ಅದೊಂದು ನ್ಯಾಯಬದ್ಧಕಾರ್ಯವೇ ಆಯಿತು. ಆಗ ಲಕ್ಷ್ಮಣನು 'ಮೂಗುದುರಿ ಸಿದ ಮೂಕ'ನಂತಾದನು. ಈ ಮಾತಿನಿಂದ, ರಾವಣನ ಕಾಮ ಲಾಭಕ್ಕೆ ವಿರುದ್ಧವಾಗಿ ಲಕ್ಷ್ಮಣನೆಸಗಿದ ತಡೆಯೂ ಅಧಾರ್ಮಿಕಪ್ರವೃತ್ತಿ ಎಂದಾಯಿತು. ದುರ್ಮಾರ್ಗಿ ಗಳ ಭಾವನಾನುಸಾರವಾಗಿ ನೋಡುತ್ತಾ ಹೋದರೆ ಯಾವುದು ಹೇಗಾಗಿ ತೋರದು? ಆಕೆಯ ಅಂಗಭಂಗ, ಅವಳ ಚಾಡಿಗೊಳಗಾದ ಖರದೂಷಣಾದಿಗಳ ವಧೆ, ಮೊದಲಾದುವೆಲ್ಲ ಬಸವನ ಹಿಂದಿನ ಬಾಲವಾಗಿ ಸಂಭವಿಸಿತು. ಅಷ್ಟೆಲ್ಲ ಅಡಿಗೆಯಾದಮೇಲೆ, ರಾಮನು 'ದಾನವರ ಸಂಹರಿಸಿ'ದನು; 'ನಮ್ಮವರ ಹೊಳಲೆಲ್ಲ ದಾನವನು ಕೊಟ್ಟ ಮುನಿಗಳಿಗೆ' ಎಂಬುದೀಗ ಒಗ್ಗರಣೆ. ಈಗಿನ ವಾತಾವರಣದೊಳಗೆ ಹರಡಿರುವ ಜಾತಿಭೇದ ಮತ್ಸರ—ಆ ಮತ್ಸರ ಪ್ರೇರಕ ಬೋಧನೆಗಳಲ್ಲವೆ ಆಕೆಯ ಮಾತಿನಲ್ಲಿ ಹುರಿದುಂಬಿರುವುದು? ಕಡೆಯ ಮಾತನ್ನವ ಧರಿಸಿರಿ: ಹೀಗೆಸಗಿದ ರಾಮಲಕ್ಷ್ಮಣರಲ್ಲಿ ಮುಯ್ಯನ್ನು ತೀರಿಸುವುದೇ ನಿನ್ನ ಕರ್ತವ್ಯವು. ಆ ಕರ್ತವ್ಯವಾವುದು?—ಆ 'ಮಾನಿನಿ'ಯನ್ನು ತರುವುದು. ಇದೇ ಸಿದ್ಧಾಂತವು. ಕಾಮಭಂಗ, ಮುಖಭಂಗಗಳಿಂದ ಉರಿದೆದ್ದ ಮಾತದು ಆಕೆಯ

ನಡವಳಿಯಾಗಿಬಿಟ್ಟಿದೆ ಎನ್ನುವ. ವೇದ ವೇದಾಂಗ ಶಾಸ್ತ್ರಾದಿಗಳನ್ನು ಕರತಲಾಮಲಕವನ್ನಾಗಿಸಿದ ರಾವಣನೂ ಆ ಬಲೆಯಲ್ಲಿ ಬಿದ್ದುಬಿಟ್ಟನು. ಕ್ರಮವಾಗಿ, ಆಕೆ ಅಂತಶ್ಶತ್ರುವಾದ ಕಾಮುಕ್ಕೊಳಗಾದಳು; ಕಾಮುಭಂಗವದು ಕ್ರೋಧವಾಗಿ ಪರಿಣಮಿಸಿತು; ಕ್ರೋಧವು ಕರಗಿ ಲೋಭವೆನ್ನಿಸಿತು; ಲೋಭವೇ ಮೋಹ (ಮೂಢ ಮೂರ್ಖ ಪ್ರೇಮ)ವಾಗಿ ಮಾರ್ಪಟ್ಟುದು; ಮೋಹವೇ ಬಲವಡೆದು ಮದವಾಗಿ ಬಣ್ಣವಡೆದುದು; ಮದವು ತಡೆಗೊಂಡು ಮತ್ಸರವೆಂಬ ಹೆಸರ್ಗೊಂಡುದು. ಅದೀಗ ಅಂತಶ್ಶತ್ರುಗಳೆಂಬ ಬಲೆ. ತಾನು ಬಿದ್ದ ಬಲೆಯನ್ನು ಆಕೆ ಅಣ್ಣನಿಗೂ ಬೀಸಿದಳು. ಸುಳಿಗೊಂಡ ಪ್ರವಾಹದಲ್ಲಿ ಬಿದ್ದವರು, ತನ್ಮೃನ್ನೆತ್ತಬಂದವರನ್ನೂ ಅವುಕಿ ಹಿಡಿದೆಳೆದು ಮುಳುಗಿಸಿಬಿಡುವುದು ಆ ಸಂದರ್ಭದ ಪ್ರಕೃತಿಯಲ್ಲವೆ? ರಾವಣನು ಆ ಬಲೆಯೊಳಗೆ ಸಿಲುಕಿದನು. ಅವನ ಓದಿಕೆ ಎಲ್ಲವೂ ಮಾಯವಾಯಿತು. ಆ ರಾಮ ಲಕ್ಷ್ಮಣರಿಗೆ ನೀನೇನಾದರೂ ಅಲ್ಲಸಲ್ಲದುದನ್ನು ಆಚರಿಸಿದೆಯಾ? ಎಂದು ಅವನು ಪ್ರಶ್ನಿಸಲೇ ಇಲ್ಲ. ಅವನ ಮಾತು ಎಂಥದು ಎಂಬುದನ್ನೀಕ್ಷಿಸಿರಿ:

ರಾಗ : ಅಟತಾಳ

ತರಬೇಕು ತರುಣಿಯಳ— ಕಾಮನ ಮುಂಗೈ-
ಯರಗಿಣಿಯಂತಿಹಳ ।
ಸ್ಮರನ ಸಿಂಗಾಡಿ ಪುರ್ಬಿನ ನೀರೆ ಜೌವನ ।
ಪರಿಮಳಿಪಾ ಮೆಯ್ಯ ವರಕರಿ ಗಮನೆಯ ॥ ೧ ॥

ಪನ್ನಗ ನಿಭವೇಣಿಯ । ಪಂಕಜದೆಸ
ಳ್ಗಣ್ಣ ಕನ್ನಡಜಾಣೆಯ ।
ಹೊನ್ನ ಪುತ್ತಳಿ ಬೊಂಬೆಯಂತೆ ರಾಮನ ಕೈಯ ।
ಕನ್ನಡಿ ಕದಪಿನ ಕಡು ಸುಪ್ರವೀಣೆಯ ॥ ೨ ॥

ಕಿರುನಗೆ ಮೊಗದೋಜೆಯ । ಲಾವಣ್ಯ ಭಾ-
ಸ್ಕರಕೋಟಿ ನಿಭತೇಜೆಯ ।
ವರಕುಂಭ ಕುಚೆಯ ಚೆಂದಳಿರಡಿಗೊಂಡ ಕೇ ।
ಸರಿನಡುವಿನ ಮನಕ್ಕೊರೆಯಾದಸಿಯಳನು ॥ ೩ ॥

ಹಾಡಿನ ವಿಷಯವೆಂದರೆ ಅಂತಶ್ಶತ್ರುಕಾಮುವಿಲಸನ. ಆದರೇನು? ತತ್ಕಾಲದಲ್ಲಿ ರಾವಣನೇ ಆಗಿ ಪರಿಣಮಿಸಿದ ಕವಿ, ಆ ದೃಷ್ಟಿಯಲ್ಲಿ ಎಷ್ಟು ಆಕರ್ಷಕವಾಗಿ ಬಣ್ಣಿಸಿದ್ದಾನೆಂಬುದನ್ನೀಕ್ಷಿಸಿರಿ. ಮಾಡುವುದೇನು? ಹಾಡಿದನ್ನು ಮುಟ್ಟದಪ್ಪದೆ ಭಾವ-ವಿಭಾವ-ಅನುಭಾವಗಳ ಆವೇಶಗೊಂಡು ಹಾಡುವ ಭಾಗವತನಿರಬೇಕು; ಆಡಿ ತೋರುವ ವೇಷಧಾರಿ(ಪಾತ್ರ) 'ರಂಗಂಜೊಗ'ಬೇಕು; ರಸಿಕರಾದ ನೋಟಕರಿರಬೇಕು. ಅಂಥ 'ಬೇಕು'ಗಳಿಗೆಡೆಯಿಲ್ಲದ ಈ ಲೇಖದಲ್ಲಿ ನನ್ನಂಥವನು ಎಷ್ಟು 'ಬೇಕು'ಗುಟ್ಟಿದರೂ ಸುಬ್ಬನ ಜಾಣ್ಮೆ ಸರಿಯಾಗಿ ಪ್ರಕಟವಾಗುವುದೋ ಇಲ್ಲವೋ ಎಂದು ಸಂಶಯವಾಗುತ್ತಿದೆ. ಒಂದುವೇಳೆ ಕೈಗೆ ನಾಲಗೆ ಇರುತ್ತಿದ್ದರೆ ಅದನ್ನೂ ಒಂದುಕೈ ನೋಡಬಹುದಾಗಿತ್ತು, ಎಂದಿಲ್ಲಿ ನಿರಾಶನಾಗದೆ ಬೇರೆ ಉಪಾಯವಿಲ್ಲ.

ಕವಿ ಸೀತೆಯನ್ನಿಲ್ಲಿ 'ಕನ್ನಡಜಾಣೆ'ಯನ್ನಾಗಿ ಮಾಡಿದ ಅಭಿಮಾನವನ್ನವ ಗಾಹಿಸಿರಿ. 'ಜೌವನ ಪರಿಮಳಿಸಾಪ್ಪೆ' ಎಂಬ ನುಡಿಗಟ್ಟನ್ನಾಘ್ರಾಣಿಸಿ ನೋಡಿರಿ. 'ಮನಕ್ಕೊರಿಯಾದ ಅಸಿಯುಳನು' ಎಂಬಲ್ಲಿ 'ತನ್ನ ಮನಸ್ಸೆಂಬ ಅಸಿಗೆ ಒರೆಯಾ ದುದರಿಂದ ಸೀತೆ ಅಸಿಯುಳು (ಅಸಿಯನ್ನೊಳಕೊಂಡ ಒರೆ) ಎಂಬ ಅತಿ ನೂತನ ವಾದ ಅಲಂಕಾರ ಪದ್ಧತಿಯನ್ನವಧಾನಿಸಿರಿ. ಸುಬ್ಬನ 'ನವನವೋನ್ಮೇಷಶಾಲಿನಿ' ಯಾದ ವರ್ಣನಾವೈಖರಿಯನ್ನು ತರುಣ ಕವಿಗಳು ಗಮನಿಸಬೇಕು.

ಆಮೇಲೆ ಸಂನ್ಯಾಸವೇಷಧಾರಿಯಾದ ರಾವಣನು ಸೀತೆಯನ್ನಪಹರಿಸುತ್ತಾನೆ. ಮಾರೀಚನ ಮಾಯಾಮೃಗವನ್ನು ತರಲೆಂದು ಹೋದ ರಾಮನೂ, ಓಂಬಾಲಿಸಿ ಹೋಗಬೇಕಾಗಿ ಬಂದ ಲಕ್ಷ್ಮಣನೂ ಹಿಂದಿರುಗಿ ಬರುತ್ತಾರೆ. ಆ ಸಂದರ್ಭವನ್ನು, ನಮ್ಮ ಕವಿ ಪಾರ್ತಿಸುಬ್ಬನ ಹಾಗೆ, ಅಥವಾ ಅವನ 'ಹಾಗೆ'ಯ ಹಾಗೆ ಬಣ್ಣಿಸುವ ಕವಿ ಇನ್ನೊಬ್ಬನಿದ್ದನೇ? ಎಂಬದನ್ನು ಪರಾಂಬರಿಸಿರಿ.

ಮೃಗವನ್ನು ನಾಶಿಸಿ ಅದು ರಾಕ್ಷಸನ ಮಾಯಾ ಮೃಗವೆಂದರಿತ ರಾಮನೂ ಲಕ್ಷ್ಮಣನೂ ಕಳವಳದೊಡನೆ ಹಿಂದಿರುಗಿ ಬರುತ್ತಾರೆ. ಪರ್ಣಶಾಲೆಯಲ್ಲಿ ಸತಿ ಇಲ್ಲದಿರಲು, ಅವರ ಅಂತರಂಗಕ್ಕೆ 'ಇರುಳು ಕತ್ತಲೆಯಾಯ್ತು', 'ಸಿಡಿಲೆರಗಿ ದಂತಾದ' ಲಕ್ಷ್ಮಣನ 'ನಾಲಿಗೆ ಸೆಳೆದುದು, ಎದೆ ಆರಿದುದು', ಅವನು 'ನಡನಡುಗಿ ಕೈಮುಗಿದು ನಿಂದಿ'ದ್ದನು. ಆಗ 'ಸೀತೆ ಏನಾದಳೋ ಎಂದು ತಮ್ಮಗಬುಜಾಕ್ಷ ನುಡಿದ'ನು. ಹಾಗೆ ರಾಮನು ತಮ್ಮನೊಡನಾಡಿದುದನ್ನೇ ಕವಿ ನಮ್ಮೊಡನೆ ಹಾಡಿ ಹೇಳುತ್ತಾನೆ:

ರಾಗ: ಜಂಪೆ ತಾಳ

ಪೊಡವಿ ಗಿಡುಮರ ಕಲ್ಲು – ನೋಡಿದರೆ ಅರಸಿನದ ।
ಪುಡಿಗೆದರಿದಂತಿಹುದು ತಮ್ಮಾ ।
ಒಡಲೊಳುರಿ ಹರಿ ಹರಿದು – ಚೇತನವೆ ಬರಬರತು ।
ನಡುಗುತಿದೆ ಕೈಕಾಲು ತಮ್ಮಾ ॥ ೧ ॥

ನುಡಿವೆನೆಂದರೆ ಗಂಟ – ಲೆಡೆಯ ಕೈಯಿಂದವುಕಿ ।
ಪಿಡಿದೊತ್ತಿದಂತಹುದು ತಮ್ಮಾ ।
ಮಡದಿ ಜಾನಕಿ ರತುನ – ವಿಲ್ಲದೀ ಮೈಯೊಂದು ।
ಬಿಡುಹಗ್ಗವಾಯ್ತಲೋ ತಮ್ಮಾ ॥ ೨ ॥

ತಂದೆತಾಯ್ಗಳನುಳಿದು – ಬಂಧು ಬಳಗವ ಬಿಟ್ಟು ।
ಒಂದಾಗಿ ಸಂದಾಗಿ ತಮ್ಮಾ ।
ಎಂದಿಗಾದರು ಎನ್ನ – ಪಾದವೇ ಗತಿಯೆನುತ ।
ಬಂದು ಕೂಡಿದಳಲ್ಲೊ ತಮ್ಮಾ ॥ ೩ ॥

ಏಳು ಜನ್ಮಾಂತರಕು – ತಪವಗೈದರು ಇಂಥ ।
ಬಾಲೆ ಕೈ ಸೇರುವಳೆ ತಮ್ಮಾ ।
ಬಾಳು ಮುಂದಿನದಿರಲಿ – ಪಡೆದು ಬಂದಿರುವ ಈ ।
ಬಾಳೆ ಬಾಳಾಯ್ತಲೋ ತಮ್ಮಾ ॥ ೪ ॥

ಹುಟ್ಟಿದವರೆಂದಾದರೊಮ್ಮೆ ನಾಡಲಿ ಮೆಯ್ಯ ।
ನಿಟ್ಟಿದಬೇಕಹುದು ತಮ್ಮಾ ।
ಹುಟ್ಟಿದುವೆ ಹುಳದೊಂದು– ಹುಟ್ಟಾಗಿ ಹೊಲಸು ನಾ ।
ರಿಟ್ಟುದೇನೆಂಬುದಿಳೆ ತಮ್ಮಾ ॥ ೫ ॥

ಹಾಳು ಬದುಕಿಗೆ ಹೋಗು– ವಾಗಳೇ ನಿನ್ನೊಡನೆ ।
ಪೇಳಲಿಲ್ಲವೆ ನಾನು ತಮ್ಮಾ ।
ಕೀಳುಮೇಲೆಣಿಸದಾಡಿದ ಸತಿಯ ಬಿರುನುಡಿಯ ।
ಕೇಳಿ ನೀ ಬರಬಹುದೆ ತಮ್ಮಾ ॥ ೬ ॥

ಇದು ನುಡಿಯಲ್ಲ, ಹಾಡಲ್ಲ; ಶ್ರೀರಾಮನೆದೆಯ ಅಣೆಗಡಿದು ಹರಿಯುವ ಆದರ್ಶ ಸಂಸಾರಸಾರದ ಹೊನಲು. ಮಾರ್ಗೀಯವಾದ ಹಲವು ಉತ್ತಮ ರಾಮಾಯಣ ಕಾವ್ಯಗಳೊಳಗೆ ಈ ಸಂದರ್ಭವನ್ನೀಕ್ಷಿಸಿರಿ. ಯಾವುವಾದರೂ ಸುಬ್ಬನ ಈ ಹಾಡಿನಂತೆ ಸಂಸಾರದ ಸಾರವನ್ನು ಸೂಸುತ್ತಿವೆಯೋ ಎಂಬುದನ್ನಾ ಮೇಲೆ ವಿವೇಚಿಸಿರಿ. ಇನ್ನೂ ಕೆಲವು ಹಾಡುಗಳ ಇಂಪನ್ನು ವಾಚಕರಿಗಿಲ್ಲಿ ಸವಿಯಿಸಬೇಕಾಗಿದೆ. ಅದರಿಂದ ಹೆಚ್ಚಿನ ವಿಮರ್ಶೆಯಲ್ಲಿ ತೊಡಕದೆ ದ್ರಾಕ್ಷೆಯ ಮಾಲೆಗಳಂತಿರುವ ಆ ಹಾಡುಗಳನ್ನು ಮಾತ್ರವೆ, ಸಂದರ್ಭ ಸೂಚನೆಯೊಡನೆ ವಾಚಕರಿಗೊಪ್ಪಿಸುತ್ತೇನೆ.

ಶ್ರೀರಾಮ ಸುಗ್ರೀವರಿಂದ ಅಪ್ಪಣೆ ಪಡೆದ ಅಂಗದನು ದೂತನಾಗಿ ಸಂಧಾನಕ್ಕೈದುತ್ತಾನೆ. ಲಂಕಾ ಭವನ ಸಮ್ಮುಖದ ಬೀದಿಯೊಳಗೆ ಅಂಗದನೈದು ವಲ್ಲಿ ನಡೆದ ಕೆಲಕೆಲವು ವಿಶಿಷ್ಟ ಸಂದರ್ಭಗಳನ್ನು ಕವಿ ಅಂದವಾಗಿ ಬಣ್ಣಿಸುತ್ತಾನೆ. ಅರಮನೆಯ ಓಲಗ ಸಾಲೆಗೇರಿದರೆ ಯಾರೂ ಆತನನ್ನು ಲಕ್ಷಿಸುವುದಿಲ್ಲ. ತನ್ನ ಬಾಲವನ್ನೇ ಮುಡಿಚಿ ಮಣೆಮಾಡಿ ಮಂಡಿಸಿಕೊಳ್ಳುತ್ತಾನೆ. ಆಮೇಲೆ ಪ್ರಹಸ್ತಾಂಗದರ ವಾಗ್ವಿಲಸನಕ್ಕೆ ಪ್ರಾರಂಭ. ಒಬ್ಬನದಕ್ಕಿಂತ ಇನ್ನೊಬ್ಬನ ಮಾತು ಪುಟವೇರುತ್ತಾ ಹೋಗುತ್ತದೆ. ಒಂದೇ ಆಕಾರದ ಹಲವರು ಕಂಗೊಳಿಸುವುದರಿಂದ ರಾವಣನೆಂಬರಾರೆಂಬುದು ಗೊತ್ತಾಗುವುದಿಲ್ಲ. ಆತನೊಡನೆ ಶ್ರೀರಾಮನ ನೀತಿ ವಚನಗಳನ್ನಾಡುವುದಕ್ಕಾಗಿ ತಾನು ಬಂದವನು, ಎಂದು ಅಂಗದನಾಡುತ್ತಾನೆ. ಪ್ರಹಸ್ತನು ತನ್ನೊಡೆಯನಾದ ಆ ರಾವಣನನ್ನು ಅವನ ವೀರತ್ವಾದಿಗಳ ಪರಿಚಯ ಸೂಚನೆಯೊಡನೆ ತೋರಿಸುತ್ತಾನೆ. ಆಮೇಲೆ ರಾವಣನನ್ನುದ್ದೇಶಿಸಿ, ಅಂಗದನು ಮಾತಾಡುತ್ತಾನೆ. ಶ್ರೀರಾಮನ ನಯ ನುಡಿಗಳನ್ನೇನೋ ಅಂಗದನು ಆಡುತ್ತಾನೆ. ಆದರೆ ಅದು ಆಮೇಲೆ. ರಾವಣನೆಸಗಿದ ಕಾರ್ಯಗಳೆಂಬರೆ ಅಪರಾಧಗಳೆಂದು ಎತ್ತಿ ಹೇಳುವ ಮಾತುಗಳಿವು ಅಂಗದನವೇ. ಈ ಸಂದರ್ಭದಲ್ಲಿ ಕವಿ ಅಂಗದನೇ ಆಗಿ ರಾವಣನಿದಿರಿನಲ್ಲಿದ್ದನೆಂದು ತೋರುತ್ತದೆ. ಹಾಡಿವನ್ನು ಕವಿಯಂತೆ ಅಂಗದನಾಗಿಯೇ ಹಾಡಬೇಕೆಂದು ಸೂಚಿಸಿ ಆ ವೇಷವನ್ನು ಹಾಕಲು ಯತ್ನಿಸುತ್ತೇನೆ:

ರಾಗ : ಸವಾಯ್ – ಏಕತಾಳ

ಏನಾಮ್ಯ ರಾವಣ ನೀನಾಮ್ಯ ಸೀತೆಯು ।
ಕಾಣದ ಹಾಗೆ ಕದ್ದು ತರಬಹುದೇನಾಮ್ಯ ।
ತಾನಾಗಿ ರಾಮಚಂದ್ರ ಸೇನೆಯ ಕೂಡಿಕೊಂಡು ।
ನೀನಿದ್ದ ಬಳಿಗಾಗಿ ಬಂದ ಕಾಣಾಮ್ಯ ॥ ೧ ॥

ನಿನ್ನ ಬಳಿಗೆ ರಾಮನೆನ್ನ ಕಳುಹಿಕೊಟ್ಟ ।
ನಿನ್ನಾದ್ರು ಸೀತೆಯು ಬಿಡು ಕೇಳಾಮ್ಯ ।
ತನ್ನಿಂದ ತಪ್ಪಿತೆಂದು ಹೊನ್ನ ಕಾಣಿಕೆಗೊಟ್ಟು ।
ಬೆನ್ನನು ಮರೆಹೊಗುತಲಿ ಬಾಳಾಮ್ಯ ॥ ೨ ॥

ಯಾತಕ್ಕೆ ಛಲ ರಘುನಾಥ ಮಾನವನಲ್ಲ ।
ನಾತ ನಾರಾಯಣಸ್ವಾಮಿ ಕಾಣಾಮ್ಯ ।
ಸೀತೆ ಲಕುಮಿ ತಮ್ಮನಾತನನಂತನಿಂತು ।
ಭೂತಳದವತಾರವಿದು ಕೇಳಾಮ್ಯ ॥ ೩ ॥

ಮಂಡೋದರಿಯು ಬಹಳ ಮಕ್ಕಳ ಹೆತ್ತಳೆಂದು ।
ಕಂಡೋರ ಬಾಯ ತುತ್ತ ಮಾಡಬೇಡ ಕೇಳಾಮ್ಯ ।
ಕೊಂಡೆಯರ ಮಾತ ಕಿವಿಗೊಂಡು ಕುಲವನಿಕ್ಕಿ ।
ದಿಂಡತನದಿ ಕೆಡದಿರು ಕಾಣಾಮ್ಯ ॥ ೪ ॥

ಚಂಡಾಲತನದಿಂದ ತಂಡ ತಂಡದ ನಿನ್ನ ।
ಹೆಂಡಿರೋಲೆಯು ಕಳಚದಿರೇನಾಮ್ಯ ।
ರುಂಡಮಾಲೆಯನಾಂತು ಕೊಂಡಿಹ ಶಿವಕೊಟ್ಟ ।
ದುಂಡುಂಡು ಸುಖದಿಂದ ಬಾಳೊ ಕಾಣಾಮ್ಯ ॥ ೫ ॥

ಈರೇಳು ಲೋಕಂಗಳ ಪಾರುಪತ್ಯವೆನ್ನದೆಂದು ।
ಹೋರಾಡಿ ಕೆಟ್ಟುಹೋಗಬೇಡ ಕೇಳಾಮ್ಯ ।
ಭೂರಿ ಸಂಪತ್ತು ತುಂಬಿ ಸೇರಿಕೊಂಡಿಪ್ಪ ಲಂಕೆ ।
ಯೂರೆಲ್ಲ ಹಾಳೆಸಗದಿರೇನಾಮ್ಯ ॥ ೬ ॥

ಶೂರ್ಪನಖಿ ಹುಚ್ಚು ಮೂಳಿಯ ಮಾತ ಕೇಳಿ ।
ಶೂರ ಖರಾದ್ಯರೇನಾದರ್ಮ್ಯಾ ।
ಸಾರವನರಿತೆನು ಸಕಲವ ಬಲ್ಲೆನೆಂದು ।
ಮಾರಿಗೆ ತುತ್ತಾಗದಿರೇನಾಮ್ಯ ॥ ೭ ॥

ವೇದ ಬಾಯೊಳಗಂತೆ ಶಾಸ್ತ್ರ ಬಗೆಯೊಳಂತೆ ।
ಕೋದಿಹ ಬಲೆ ಕೈಯೊಳಗೇನಾಮ್ಯ ।
ಭೂದೇವಿ ಹೊರದಪರಾಧವ ಹೊತ್ತು ದೊರೆ ।
ಯಾದವರಿಳೆಯೊಳಗಿಹರೇನಾಮ್ಯ ॥ ೮ ॥

ಹಾಡಿದನ್ನು ಕವಿಯ ಆವೇಶದೊಡನೆ ಮುಟ್ಟುದಪ್ಪದೆ ಓದಿದರೆ ಸಾಕು, ಎಂದಿಷ್ಟೇ ಹೇಳಿ ವಿಮರ್ಶೆಯನ್ನು ಮುಗಿಸುತ್ತೇನೆ. ಇದರೊಳಗೆ ದೇಸಿಯಾಗಿ ತೋರುವ ಪದರೂಪಗಳೆಲ್ಲ ಅಂಗದಪಾತ್ರದ ಆಗಿನ ಸಂದರ್ಭಕ್ಕೆ ಅಂಗವಾಗಿ ಬಂದುದೆಂದು ಯಕ್ಷಗಾನದಲ್ಲಿ ನುರಿತವರ ಭಾವನೆ. ಆದರೆ, ಇಂಥ ಆವೇಶ ಯುಕ್ತವಾದ ಜನಪದ ಸಾಹಿತ್ಯಕ್ಕೆ ಅಚ್ಚುಗಟ್ಟಾದ ಸಂದರ್ಭಕ್ಕೆ ಸಹಕಾರಿಯಾದ ಹಾಡು, ಕನ್ನಡ ಸಾಹಿತ್ಯದೊಳಗಾದರೂ ಎಷ್ಟಿದೆ? ಹಾಡಿದು ಸುಬ್ಬನ ಪ್ರತಿಭೆಯನ್ನು ಪ್ರಪಂಚದ ಮಾಡದಮೇಲೇರಿಸಿದೆ.

ಅಂಗದನ ಈ ಹೇಳಿಕೆಯಿಂದ ಲಂಕಾನಗರದ ಅರಮನೆಯೊಳಗೆ ಗಲಬೆಯುಂಟಾಯಿತು. ಹತ್ತಿರದಲ್ಲಿ ಸೇನೆಯೊಡನೆ ಬೀಡುಬಿಟ್ಟಿದ್ದ ಶ್ರೀರಾಮನ ಕಿವಿಗೆ ಗಲಬೆಯ ದನಿ ನಾಟಿತು. ರಕ್ಕಸರಲ್ಲಿಗೆ, ಸಂಧಾನಕ್ಕಾದರೂ ಈ ಬಾಲಕನನ್ನು ಕಳುಹಿದುದು ತಪ್ಪಾಗಿಬಿಟ್ಟಿದೆಂದು ಅವನು ಕಳವಳಿಸಿದನು. ಒಡನೆ ಹನುಮಂತನು ಆ ರಾಕ್ಷಸ ರಾಜ ಭವನಕ್ಕೆ ಧಾವಿಸುತ್ತಾನೆ. ರಕ್ಕಸರಿಂದ ಸುತ್ತುಮುತ್ತಲ್ಪಟ್ಟ, ಮುತ್ತಿದವರನ್ನೆತ್ತಿ ನೂಕಿ ಆನೆ ಕುದುರೆಗಳನ್ನು ತೆಗೆಬಗಿಮಾಡಲಾರಂಭಿಸಿದ, ಅಂಗದನನ್ನವನು ಕೈ ಹಿಡಿದು ನಿಲ್ಲಿಸುತ್ತಾನೆ. ಈ ಹೊಸ ಕಪೀಶ್ವರನನ್ನು ಕಂಡು ಗುರುತು ಹಿಡಿದು ದಿಗಿಲಾದ ರಕ್ಕಸರು ಅತ್ತಿತ್ತ ತೊಲಗುತ್ತಾರೆ. ಅಧರ್ಮದ ಸಂಕಲೆಯಲ್ಲಿ ಸಿಲುಕಿ ಹೋದ ರಾವಣನಾಗಲಿ, ಅವನ ಆಪ್ತ ಮಂತ್ರಿಗಳಾಗಲಿ ಆ ವಚನಸಾರದ ಸವಿಯನ್ನು ಹೀರಲಾರದವರಾಗಿದ್ದರು. ಅದಕ್ಕೆ ಬದಲಾಗಿ ರಾಮನು ಯುದ್ಧ ಮೂಲಕವಾಗಿಯೇ ಸಾಧ್ಯವಾದಲ್ಲಿ ಸೀತೆಯನ್ನು ಕೊಂಡುಹೋಗಲಿ ಎಂಬ ಉತ್ತರವು ದೊರೆಯಿತು. ಅಂಗದ ಹನುಮಂತರಿಬ್ಬರೂ ಶ್ರೀರಾಮನ ಸನ್ನಿಧಿಗೆ ಬಂದರು. ದೂತಕಾರ್ಯದ ಪರಿಣತಿಯನ್ನು ಅಂಗದನು ನಿವೇದಿಸುವಲ್ಲಿಗೆ 'ಅಂಗದ ಸಂಧಾನ' ಪ್ರಬಂಧವು ಕೊನೆಗೊಳ್ಳುತ್ತಿದೆ. ದಿಗ್ದರ್ಶನವಿದು, ಪಾರ್ತಿಸುಬ್ಬನ ಪ್ರತಿಭಾಬಲವನ್ನೂ ಕನ್ನಡ ಸಾಹಿತ್ಯದಲ್ಲಿ ಅವನ ಸಾಹಿತ್ಯವೆಂಥದೆಂಬುದನ್ನೂ ನಿರ್ಧರಿಸುವಲ್ಲಿ ಒಂದಿಷ್ಟಾದರೂ ನೆರವಾಗಬಹುದೆಂದು ನಂಬಿರುತ್ತೇನೆ.

ಈಗಿನ ದಕ್ಷಿಣ ಕನ್ನಡದ ಬಡಗಣ ಎಲ್ಲೆಯಾದ ಕುಂದಾಪುರ ತಾಲ್ಲೂಕಿನಲ್ಲಿ ಕುಂಭಕಾಶಿ ಎಂಬ ಕ್ಷೇತ್ರವಿದೆ. ಅಲ್ಲಿಯ 'ಆನೆಯ ಗುಡ್ಡ' ಎಂಬ ಗುಡ್ಡದಲ್ಲಿ ಈಗಲೂ, ಅತಿ ಕಾರಣಿಕತೆಯ ವಿಶ್ವಾಸಕ್ಕೆ ಪಾತ್ರವಾದ ಗಣಪತಿಯ ಗುಡಿಯೂ ಇದೆ. ಈ ಪ್ರಾಂತದೊಳಗೆ ಅಲ್ಲಲ್ಲಿಯ ದೇವಸ್ಥಾನಗಳ ಆಡಳಿತದಲ್ಲಿ ಒಂದೊಂದು 'ಯಕ್ಷಗಾನ ಮೇಳ'ಗಳಿರುವುದನ್ನು ಈಗಲೂ ಕಾಣಬಹುದು. ವೇಷಧಾರಿಗಳನ್ನೂ, ಭಾಗವತ– ಮದ್ದಳೆಗಾರ– ಚಂಡೆಗಾರರೆಂಬ ಮೇಳದವರನ್ನೂ, ಸಂಬಳದ ನಿಯಮದೊಡನೆ ಕೂಡಿಸಿಕೊಂಡು, ನಾಯಕನಾದೊಬ್ಬನು ಇಡಿಯ ಮೇಳವನ್ನು ದೇವಸ್ಥಾನಾಧಿಕಾರಿಗಳಿಂದ ಬಾಡಿಗೆಗೆ ಪಡಕೊಳ್ಳುತ್ತಾನೆ. ಮೇಳದ ಮೊದಲನೆಯ 'ಆಟ'ಕ್ಕೆ 'ಸೇವೆಯಾಟ' ಎಂದು ಹೆಸರು. ಅದು ಆ ಮೇಳದಧಿಕಾರವನ್ನೊಂದಿದ ದೇವಾಲಯದ ಅಂಗಣದಲ್ಲಿಯೇ ನಡೆಯಬೇಕು. ಪ್ರಾರಂಭದ 'ಸೇವೆ' ತುಳಸೀ ಹಬ್ಬದ ರಾತ್ರಿಯಲ್ಲಿ ಮೊದಲಾಗುವುದು. 'ಹಬ್ಬಕ್ಕೆ

ಕಟ್ಟಿದ ಗೆಜ್ಜೆ, ಪತ್ತಾಜೆಗೆ (ಮೇಷಮಾಸ ೧೦ರಂದು) ಬಿಡಿಸುವುದು' ಎಂಬುದು ನಾಡ ನುಡಿ. ಮೇಳದವರು ಆರು ತಿಂಗಳು ತಿರುಗಾಡಿ ಆಟಗಳನ್ನಾಡಿ ಪುನಃ ಒಂದು, ಕಡೆಗೆ ಒಂದು ಸೇವೆಯಾಟವನ್ನಾಡಿ ದೇವರ ಹರಕೆಯೊಡನೆ, ಮಳೆಗಾಲದ ಆದಿಯಲ್ಲಿ ತಂತಮ್ಮ ಊರು ಮನೆಗಳಿಗೆ ಹೋಗುವುದಿದು ವಾಡಿಕೆ. ಈ ಸಂದರ್ಭಕ್ಕಾಗಿಯೇ ರಚಿಸಿದ ಪಾರ್ತಿಸುಬ್ಬನ ಗಣಪತಿ ಸ್ತುತಿಯಲ್ಲಿ 'ಷಣ್ಮಾಸ ಸಂಚರಿಸಿಯೂರಿಗೆ ಪೋಪ......' ಎಂದು ಬರುತ್ತದೆ. ಆ ದೇವಸ್ಥಾನಕ್ಕೆ ಸಂಬಂಧಿಸಿದ ಮೇಳದ 'ಸೇವೆಯಾಟ'ದ ಆದಿಯಲ್ಲಿ ಗಣಪತಿ ಪೂಜೆಯ ಸ್ತುತಿಯನ್ನಾಗಿ ಸುಬ್ಬನು ಈ ಕವಿತೆಯನ್ನು ಅಲ್ಲೇ ಕಟ್ಟಿ ಹಾಡಿದನೆಂಬಲ್ಲಿ ಸಂಶಯವಿಲ್ಲ. ಅದರಲ್ಲಿಯು 'ಕಾರಂತನ ಮೇಳದೊಳಗೆ' ಎಂಬುದರಿಂದ ಆ ಮೇಳವನ್ನು ಆರು ತಿಂಗಳವರೆಗೆ ಪಡೆದು ಆಡಿಸಲಿಕ್ಕೆ ಹೊರಟ 'ಕಾರಂತ'ನೊಬ್ಬನು ಸೂಚಿತನಾಗುತ್ತಾನೆ. 'ಕಾರಂತ' ಎಂಬುದು 'ಕೋಟ ಬ್ರಾಹ್ಮಣ' ರೆಂಬವರೊಳಗೆ ಒಂದು ಕುಲನಾಮ. ಈ ವಿಶಿಷ್ಟ 'ಕಾರಂತ'ನ ಅಂಕಿತನಾಮವೇ ಮೊದಲಾದುವುಗಳು ಗೊತ್ತಿಲ್ಲ. ಆದರೂ 'ಅಣೆಯ ಗುಡ್ಡದ ಮೇಳ'ವೊಂದು ಇಂದಿಗೂ ಜೀವಂತವಾಗಿರುವುದು ಗೊತ್ತಾಗಿದೆ.

ಕುಂಬಳೆಯಿಂದ ಕುಂದಾಪುರಕ್ಕೆ ಸುಮಾರು ೬೦ ಮೈಲುಗಳಿಗಿಂತಲೂ ಹೆಚ್ಚಿನ ದೂರವಿದೆ. ಈಗಿನಂತೆ ಬಸ್ಸು ಮೊದಲಾದ ವಾಹನಗಳ ಅನುಕೂಲ್ಯ ವಿಲ್ಲದ ಕಾಲವದು. ಆಗಿನ ಕಾಲದಲ್ಲಿ ಮಧ್ಯವಯಸ್ಸಿಗೂ ಮೀರಿದ ವಾತರೋಗಿ ಸುಬ್ಬನು 'ಕಾರಂತನ ಮೇಳ'ಕ್ಕೆ ಭಾಗವತನಾಗಿ ಹೋಗಿರಬಹುದೆ? ಅವನು ಯಕ್ಷಗಾನ ಕವಿ ಎಂಬುದು ಪ್ರಸಿದ್ಧ. ಅದರಂತೆ ಭಾಗವತನಾಗಿಯೂ ಇದ್ದನೆಂದು ಸುಬ್ಬನ ಜಾತಿಯವರೂ ನನ್ನ ಮಾನ್ಯ ಮಿತ್ರರೂ ಆಗಿದ್ದ ಶ್ರೀಮಂತ ವಂಶಕ್ಕೆ ಸೇರಿದ ಕೀರ್ತಿಶೇಷ ಕೂಡಲ ಸುಬ್ರಾಯ ಶಾನುಭಾಗರು ನನ್ನೊಡನೆ ಹೇಳಿದ ನೆನಪಿದೆ. ಯಕ್ಷಗಾನ ಆಟದ ಉತ್ಸಾಹವೆಂದರೆ ಅಂಥದು. ಹುರುಪೇರಿದ ಉತ್ತಮ ಭಾಗವತ ವೇಷಧಾರಿಗಳು ಬೆಳಗಿನವರೆಗೆ ಹಾಡಿ ಕುಣಿದು, ಗಂಟಿಗೆಜ್ಜೆಗಳೊಡನೆ ಪ್ರಾಣವನ್ನು ಬಿಟ್ಟದ್ದಕ್ಕೂ ದೃಷ್ಟಾಂತವನ್ನೀಯ ಬಹುದು. ವಾಹನಾದಿ ಸೌಕರ್ಯಗಳು ಏರುತ್ತಾ ದೂರವು ಹತ್ತಿರವಾದಂತೆ ಈಗಿನವರ ಕಾಲ ಬಲಕ್ಕೆ ಹತ್ತಿರವು ದೂರವಾಗುತ್ತಾ ಹೋಗುತ್ತಿದೆ ಎಂಬುದನ್ನಿಲ್ಲಿ ಮರೆಯಬಾರದು. ಹಾಗೆ ಕುಂದಾಪುರದಿಂದಲೂ ಉತ್ತರಕ್ಕೆ ಅವನು ಭಾಗವತ ನಾಗಿ ಹೋಗಿರಬಹುದೆಂದು ತೋರುತ್ತಿದೆ. ಗೋಕರ್ಣ ಮೊದಲಾದೆಡೆಯ ಯಕ್ಷಗಾನ ಮೇಳದವರು ಇಂದಿಗೂ ಪಾರ್ತಿಸುಬ್ಬನ ರಾಮಾಯಣ ಪ್ರಸಂಗ ಗಳನ್ನಾಡುತ್ತಾರೆ. ಇದರಿಂದ ಪಾರ್ತಿಸುಬ್ಬನು ಯಕ್ಷಗಾನದಲ್ಲಿ ಉತ್ತಮ ಕವಿ ಯಾಗಿದ್ದಂತೆ ಭಾಗವತನೂ ಆಗಿದ್ದನೆಂಬುದನ್ನು ಮರೆಯಲಾಗದು. ಪಾರ್ತಿಸುಬ್ಬನ ಯೋಗ್ಯತೆಯ ಹೊಲಬಾದರೂ ಆದರೆ, ನನ್ನ ಪ್ರಯತ್ನವಿದು ಸಫಲವಾಯಿತೆಂದು ಭಾವಿಸುತ್ತೇನೆ.

**ಮುಳಿಯ ತಿಮ್ಮಪ್ಪಯ್ಯ**

# ಇಬ್ಬರು ಮಹಾಕವಿಗಳು

ಕಾಲಿದಾಸನು ಹುಟ್ಟುವಾಗಲೇ 'ಪ್ರಥಿತಯಶ'ನಾಗಿ ಹುಟ್ಟಲಿಲ್ಲ. ತನ್ನ ತಪಸ್ಸಿನಿಂದ ಜನತೆಯನ್ನು ಒಲಿಸಿಕೊಂಡು ಕೀರ್ತಿಯನ್ನು ಗೆದ್ದುಕೊಂಡನು. ಆತನು ತನ್ನ ಮೊದಲನೆಯ ನಾಟಕವಾದ 'ಮಾಲವಿಕಾಗ್ನಿಮಿತ್ರ'ವನ್ನು ಬರೆದಾಗ ಆತನಿಗಿಂತಲೂ ಪ್ರಾಚೀನರಾದ ಕವಿಗಳು ಹಲವರ ಕೀರ್ತಿಯು ಹಬ್ಬಿತ್ತು. ಕೀರ್ತಿವಂತರಾದ ಕವಿಗಳ ನಾಟಕಗಳನ್ನು ನೋಡಿ ತಣಿದ ಮಹಾಜನರ ಎದುರಿಗೆ ಹೊಸಬನಾದ ತನ್ನ ನಾಟಕದ ಪ್ರಯೋಗವೇ? ಎಂದು ಶಂಕಿಸಿದಂತೆ ಮಾಡಿ ಅದಕ್ಕೊಂದು ಸಮಾಧಾನವನ್ನು ಹೇಳಿ ತನ್ನ ನಾಟಕವನ್ನು ಮುಂದುವರಿಸಿದ್ದಾನೆ.

ಆ ಸಮಾಧಾನವೂ ವಿಚಿತ್ರವಾದುದು: ಎಲ್ಲಾ ಕಾಲಗಳಲ್ಲಿಯೂ ಎಲ್ಲಾ ದೇಶಗಳಲ್ಲಿಯೂ ಒಂದೇ ಸಮನಾಗಿ ಎಲ್ಲ ವಿಚಾರಿಗಳ ಮನಸ್ಸಿಗೂ ಬರುವಂಥದು. ಕಾವ್ಯಪರೀಕ್ಷೆಗೆ ಒಂದು ಸೂತ್ರವನ್ನು ಮಾಡಿಟ್ಟು, ಈ ಮಾನದಂಡದಿಂದ ಅಳೆದು ನೋಡಿ ಎಂದು ಹೇಳಿದನಾ ಕವಿ. "ಹಳೆಯದು ಎಲ್ಲವೂ ಸೊಗಸಲ್ಲ: ಹೊಸದೇನೂ ಕಸವಲ್ಲ. ತಿಳಿದವರು ನೋಡಿ ಮೆಚ್ಚಿದರೆ, ಇತರರು ಸುದ್ದಿಗಳನ್ನು ನಂಬುವರು" ಎಂದು ತನ್ನ ಕಾವ್ಯವನ್ನು ಹೊಗಳಿಕೊಳ್ಳುವ ಮಾತನ್ನು ಮುಚ್ಚಿ ಆಡಿ, ತನ್ನ ಯೋಗ್ಯತೆಯಿಂದ ಜನವನ್ನು ಮೆಚ್ಚಿಸಿ ಕೀರ್ತಿಯನ್ನು ಪಡೆದನು.

ಜನತೆಯು ಕವಿಯನ್ನು ಮೆಚ್ಚಿತು. ಕಾಲಿದಾಸನು ಇನ್ನೂ ಬರೆದನು. ಹೇಗೆ ಬರೆದರೂ ತನ್ನ ಕಾವ್ಯವೆಂದರೆ ಜನರು ಮೆಚ್ಚುವರೆಂಬ ನಂಬಿಕೆಯು ಬಂದರೂ ಕವಿಯು ಕಾವ್ಯದೇವತೆಯ ಆರಾಧನೆಯಲ್ಲಿ ಅಶ್ರದ್ಧನಾಗಲಿಲ್ಲ. ಶ್ರದ್ಧೆಯಿಂದ ಆಕೆಯನ್ನು ಆರಾಧಿಸಿದನು. ಕೀರ್ತಿಯು ಬಲಿತಂತೆ ಕಾವ್ಯದಲ್ಲಿ ಗುಣವೂ ಬಲಿಯಿತು. ಎಲ್ಲೆಲ್ಲಿಯೂ ಆತನ ಯಶೋದುಂದುಭಿಯು ಮೊಳಗಿತು. ಆಲದ ಮರದಂತೆ ಆತನ ಬೆಳ್ಳಸವು ಇನ್ನೂ ಹರಡುತ್ತಿದೆ.

ಕಾಲಿದಾಸನು ಯಶಶ್ಶರೀರನಾದಮೇಲೆ ಸುಮಾರು ಏಳುನೂರು ವರ್ಷಗಳು ಕಳೆದುವು. ಭರತಖಂಡದಲ್ಲಿ ಇನ್ನೊಬ್ಬ ಮಹಾಕವಿಯು ಅವತಾರವಾಯಿತು. ಈತನು ತಾನು 'ವಶ್ಯವಾಕ್' ಎಂದುಕೊಂಡು ಕಾವ್ಯವನ್ನು ಬರೆದನು. ಆದರೂ ರಸಿಕ ಬೃಂದವು ಇವನನ್ನು ಥಟ್ಟನೆ ಮೆಚ್ಚಿಕೊಳ್ಳಲಿಲ್ಲ. ಭವಭೂತಿಯು ವಿಜೃಂಭಿಸಿದನು. 'ನೀವೊಪ್ಪಿರುವ ಕವಿಯ ಕೃತಿಯಲ್ಲಿ ಏನಿದೆ?' ಎಂದು ಮಲೆತು ನಿಂತನು. ಆದರೂ ಮೊದಲನೆಯ ಕವಿಯು ನಡೆದ ಜಾಡೆಯನ್ನೇ ಅರಿತೋ ಅರಿಯದೆಯೋ ತಾನೂ ನಡೆದು ಆತನಂತೆಯೇ ಕೀರ್ತಿವಂತನಾದನು.

ಭವಭೂತಿಯು ಹೀಗೆ ವಿಜೃಂಭಿಸಿ ಮಲೆತು ನಿಂತಿರುವುದು ಕಂಡುಬರುವುದು 'ಮಾಲತೀಮಾಧವ'ದಲ್ಲಿ. 'ಮಾಲತೀಮಾಧವ'ವನ್ನು ಬರೆಯುವ ವೇಳೆಗೆ ಕವಿಯು 'ಮಹಾವೀರ ಚರಿತ'ವನ್ನು ಬರೆದಿದ್ದಾನೆ. ಅದು "ಧರ್ಮದ್ರುಹೋ ದಮಯಿತುಃ ರಘುನಂದನಸ್ಯ ಅಸ್ತ್ರೋಕವೀರಗುರುಸಾಹಸಮದ್ಭುತಂ ಚ ಚರಿತಂ": ಅಲ್ಲದೆ,

ಪ್ರಾಚೇತಸೋ ಮುನಿವೃಷಾ ಪ್ರಥಮಃ ಕವೀನಾಂ
ಯತ್ಪಾವನಂ ರಘುಪತೇಃ ಪ್ರಣಿನಾಯ ವೃತ್ತಂ
ಭಕ್ತಸ್ಯ ತಸ್ಯ ಸಮರಂತ ಮಮಾಪಿ ವಾಚ
ಸ್ತಾಸು ಪ್ರಸನ್ನಮನಸಃ ಕೃತಿನೋ ಭಜಂತಾಂ

ಎಂದು ಸಮಾಧಾನವಾಗಿಯೇ ಹೇಳಿಕೊಂಡು ತನ್ನ ನಾಟಕವನ್ನು ರಸಿಕರಿಗೆ ಒಪ್ಪಿಸಿದ್ದಾನೆ.

ಆದರೆ ಅವರು ಒಪ್ಪಿದಂತೆ ಕಾಣಲಿಲ್ಲ. ಅವರು 'ಅನ್ಯಚ್ಚ ಮನಸಿ ಕೃತ್ವಾ' 'ಏನೋ ಈ ನಾಟಕ ನಮ್ಮ ಮನಸ್ಸಿಗೆ ಹಿಡಿಯಲಿಲ್ಲ' ಎಂದಿರಬೇಕು. ರೇಗಿತು ಭವಭೂತಿಗೆ. ಹೊಸದೊಂದು ನಾಟಕವನ್ನು ಬರೆಯಲು ಹೊರಟನು. ನಾಟಕಕ್ಕಿಂತ ಪ್ರಕರಣವೇ ಸೊಗಸು. ಪ್ರಕರಣದಲ್ಲಿ ಯಥೇಚ್ಛವಾಗಿ ಸ್ವಾತಂತ್ರ್ಯವನ್ನು ತಳೆದು ವಿಜೃಂಭಿಸಬಹುದು ಎಂದು ಆರಂಭಿಸಿದನು. ಆರಂಭದಲ್ಲಿ 'ಪ್ರಬಂಧವೆಂದರೆ ಹೀಗಿರಬೇಕು' ಎಂದು ಆರಂಭಿಸಿ, ಕಾವ್ಯಗುಣಗಳನ್ನು ತಾನೇ ಹೇಳಿದನು. ಆದರೂ ರಸಿಕರು ಒಪ್ಪಲಿಲ್ಲವೋ ಏನೋ? ಇನ್ನೂ ರೇಗಿ, ವಿಪಕ್ಷವನ್ನು ಚೆನ್ನಾಗಿ ಭರ್ತ್ಸನೆ ಮಾಡಿದನು.

ಯೇ ನಾಮ ಕೇಚಿದಿಹ ನಃ ಪ್ರಥಯಂತ್ಯವಜ್ಞಾಂ
ಜಾನಂತಿ ತೇ ಕಿಮಪಿ ತಾನ್ ಪ್ರತಿ ನೈಷಯತ್ನಃ
ಉತ್ಪತ್ಸ್ಯತೇ ಮಮ ತು ಕೋಪಿ ಸಮಾನಧರ್ಮಾ
ಕಾಲೋಹ್ಯಯಂ ನಿರವಧಿಃ ವಿಪುಲಾ ಚ ಪೃಥ್ವೀ

"ನಮಗೆ ತಿಳಿಯದು ಎನ್ನುವ ನೀವೇನು ಬಲ್ಲಿರಿ ಮಹಾ! ನಿಮಗಾಗಿ ಇದನ್ನು ನಾನು ಬರೆಯಲಿಲ್ಲ. ನನ್ನಂತಹವನೊಬ್ಬನು ಯಾವಾಗಲೋ ಎಲ್ಲಿಯೋ ಹುಟ್ಟುತ್ತಾನೆ. ಅವನಿಗಾಗಿ ಇದನ್ನು ಬರೆದಿದ್ದೇನೆ" ಎಂದು ಕೊಚ್ಚಿದನು. ಆದರೂ, ಆತನು ಕಾವ್ಯಗುಣಗಳೆಂದು ಪ್ರಶಂಸಿಸಿರುವೆಡೆಯಲ್ಲಿ ಯಾರದೋ ಯಾವುದೋ ಒಂದು ಗ್ರಂಥವನ್ನೇ ಲಕ್ಷಿಸಿ, ಅದರಲ್ಲಿರುವ ಗುಣಗಳನ್ನು ಹಿಡಿದು ತದ್ವಿರುದ್ಧವಾದ ಗುಣಗಳನ್ನೇ ಪ್ರಶಂಸಿಸಿರುವಂತೆಯೇ ತೋರುತ್ತದೆ.

ಭವಭೂತಿಯ ಮನಸ್ಸಿನಲ್ಲಿ ಕಾಲಿದಾಸನ 'ವಿಕ್ರಮೋರ್ವಶೀಯ'ವೇ ಇರಬೇಕು. 'ಮಾಲತೀಮಾಧವ'ದಲ್ಲಿ ಬರುವ "ತಸ್ಯಾಸ್ಸಖೇ ನಿಯತಮಿಂದುಕಲಾ ಮೃಣಾಲ ಜ್ಯೋತ್ಸ್ನಾದಿ ಕಾರಣಮಭೂನ್ಮದನಶ್ಚ ವೇಧಾಃ" ಎಂಬ ಪದ್ಯಾರ್ಥ ವನ್ನು ಓದುವಾಗಲಂತೂ ಪುರೂರವನು ಉರ್ವಶಿಯನ್ನು ಕುರಿತು ಹೇಳುವ ಶ್ಲೋಕದ ನೆನಪಾಗುವುದು. ಹೀಗೆಯೇ ಕಾಲಿದಾಸನು ಹೇಳಿರುವ ಅರ್ಥವನ್ನೇ ಇದರಲ್ಲಿ ಸಮಾಸವ್ಯಾಸವಾಗಿ ವಚೋಭಂಗಿಯಿಂದ ಹೇಳಿರುವುದರಿಂದ ಈ ಕಾವ್ಯವೇ ಆತನ ಮನಸ್ಸಿನಲ್ಲಿರಬೇಕು.

ಈ ಅರ್ಥವು ಭವಭೂತಿಯ ಶ್ಲೋಕವನ್ನು ವಿಮರ್ಶಿಸಿದರೆ ಚೆನ್ನಾಗಿ ಅರ್ಥ ವಾಗುವುದು. ಆತನ ಶ್ಲೋಕವಿದು:

ಭೂಮ್ನಾಂ ರಸಾನಾಂ ಬಹುಧಾಃ ಪ್ರಯೋಗಾಃ
ಸೌಹಾರ್ದ್ರ ಹೃದ್ಯಾನಿ ವಿಚೇಷ್ಟಿತಾನಿ
ಔದ್ಧತ್ಯಮಾಯೋಜಿತ ಕಾಮಸೂತ್ರಂ
ಚಿತ್ರಾಕಥಾ ವಾಚಿ ವಿದಗ್ಧತಾ ಚ

ಈ ಕವಿಯ ದೃಷ್ಟಿಯಲ್ಲಿ ಕಾವ್ಯವು, ಅದರಲ್ಲೂ ದೃಶ್ಯಕಾವ್ಯವು (ಭವಭೂತಿಗೆ ದೃಶ್ಯ ಶ್ರವ್ಯವೆಂಬ ಭೇದವು ಅಷ್ಟಾಗಿ ಮನಸ್ಸಿಗೆ ಹಿಡಿದಿರಲಿಲ್ಲವೋ ಏನೋ?) ಅನೇಕ ರಸಗಳ ನಾನಾ ವಿಧ ಪ್ರಯೋಗಗಳಿಂದ ಕೂಡಿರಬೇಕು. (ಇಲ್ಲಿ ಹೇಳಿರುವುದನ್ನು ಮುಂದೆ 'ಉತ್ತರರಾಮ ಚರಿತ'ದಲ್ಲಿ ಹೇಳಿರುವ 'ಏಕೋ ರಸಃ ಕರುಣ ಏವ' ಎಂಬುದರೊಡನೆ ಹೋಲಿಸಿ.) ಪಾತ್ರಗಳು ಮಾಡುವ ಕಾರ್ಯಗಳೆಲ್ಲವೂ ವಿಶ್ವಾಸ ಸುಂದರವಾಗಿರಬೇಕು. ಅದರಲ್ಲಿ ಬರುವ ಕಾದಲನು ಕಾದಲೆಯನ್ನು ತನ್ನ ಸಾಹಸದಿಂದ ಸಂಪಾದಿಸಿಕೊಂಡಿರಬೇಕು. ಕಥೆಯು ಚಿತ್ರವಾಗಿ, ಮಾತು ಪ್ರೌಢವಾಗಿ, ಪಾಂಡಿತ್ಯ ಭೂಯಿಷ್ಠವಾಗಿ ಇರಬೇಕು. ಇದಿಷ್ಟೂ 'ಮಾಲತೀಮಾಧವ'ದಲ್ಲಿದೆ. ಶೃಂಗಾರ ವೀರ ಅದ್ಭುತ ಕರುಣ ಭಯಾನಕಗಳಿವೆ. ಅವುಗಳ ಪ್ರಯೋಗವೂ ವಿಚಿತ್ರವಾಗಿದೆ. ಮಕರಂದಾದಿ ಪಾತ್ರಗಳ ಕಾರ್ಯಗಳು ಸೌಹಾರ್ದ್ರ ಹೃದ್ಯಗಳಾಗಿವೆ. ಕಥಾನಾಯಕನು ನಾಯಿಕೆಗಾಗಿ ಮಹಾಮಾಂಸ ವಿಕ್ರಯವನ್ನು ಮಾಡಲೂ ಹೊರಟಿದ್ದಾನೆ. ಕಥೆಯು ಮಹಾನದಿಯಂತೆ ನಾನಾ ಮುಖವಾಗಿ ನಾನಾ ಭಂಗಿಗಳಿಂದ ಹೊರಟಿದೆ. ಮಾತುಗಳಂತೂ ಪ್ರೌಢಿಮಾ ರಂಜಿತವಾಗಿವೆ. ಇದೆಲ್ಲವೂ ಆತನ ಪ್ರಬಂಧದಲ್ಲಿದೆ.

'ವಿಕ್ರಮೋರ್ವಶೀಯ'ವು ಇದಿಷ್ಟಕ್ಕೂ ವಿರುದ್ಧ. ಅದರಲ್ಲಿ ಶೃಂಗಾರವೊಂದೇ ರಸ. ರಸಪೋಷಣೆಯು ಲೋಕಸಾಮಾನ್ಯವಾದ ಸಂದರ್ಭಗಳಿಂದಲೇ ಆಗಿದೆಯಲ್ಲದೆ ಅವುಗಳಲ್ಲಿ ಅಂತಹ ವೈಚಿತ್ರ್ಯಗಳೇನೇನೂ ಇಲ್ಲ. 'ಮಾಲತೀಮಾಧವ'ದಲ್ಲಿ ಬರುವ ಅಘೋರಘಂಟಾದಿಗಳಂತಹ ದುಷ್ಕರ್ಮಿಗಳಿಂದ ಒದಗುವ ಘೋರ ವಿಪತ್ತುಗಳಂತೂ ಇಲ್ಲವೇ ಇಲ್ಲ. ಪಾತ್ರ ವಿಚೇಷ್ಟಿತಗಳಂತೂ ಬೇಕಾದ ಹಾಗೆ ರಸಪೋಷಕಗಳಾಗಿದ್ದರೂ ಭವಭೂತಿಯು ಹೇಳುವಂತೆ ಸೌಹಾರ್ದ್ರ ಹೃದ್ಯಗಳಲ್ಲ. ದೇವಿಯು ತನ್ನೊಡೆಯನನ್ನು ಇತರರಿಗಾದರೂ ಕೊಟ್ಟುಬಿಡಲು ಸಿದ್ಧವಾಗುವುದು ಆತನ ಮೇಲಿನ ಪ್ರೇಮದಿಂದಲೇ ಆದರೂ ಅಲ್ಲಿ ಅಲೌಕಿಕವಾದ ಒಂದು ತ್ಯಾಗವಿದ್ದು ನಮ್ಮ ಮನಸ್ಸು ದ್ವಿಸ್ವಭಾವವಾದ ವೇದನೆಗಳಿಗೆ ಎಡೆಯಾಗುತ್ತದೆ. ಉರ್ವಶೀಪುರೂರವರ ಕಾಮಸೂತ್ರವಂತೂ 'ಔದ್ಧತ್ಯಮಾಯೋಜಿತಂ' ಎಂದಿಗೂ ಅಲ್ಲವೇ ಅಲ್ಲ. ಸ್ವಸಾಮರ್ಥ್ಯದಿಂದ ಕ್ಷತ್ರಿಯೋಚಿತವಾದ ರೀತಿಯಲ್ಲಿ ಲಭಿಸಿರುವ ನಾರೀರತ್ನವನ್ನು ಪುರೂರವನು ಇಂದ್ರನಿಗೆ ಬಿಟ್ಟುಬಿಡುವಂತಹವನು. ಅನಂತರ, ಮತ್ತೆ ಉರ್ವಶಿಯೇ ಬರುತ್ತಾಳೆ. ಭರತಶಾಪದ ನೆಪದಿಂದ ಒಂದು ಸಲ, ಅರಸನು ಶಸ್ತ್ರಸಂನ್ಯಾಸ ಮಾಡದಿರಲೆಂದು ಇಂದ್ರನು ತಾನಾಗಿ ಒಪ್ಪಿಸಿದನಾಗಿ ಇನ್ನೊಂದು ಸಲ, ಹೀಗೆ ಉರ್ವಶಿಯು ಪುರೂರವನನ್ನು ಹೊಂದುವುದು. ಹೀಗೆ ನಾಯಿಕೆಯು ಸ್ವಯಂ ವರಿಸಿ ಬಂದರೂ ನಾಯಕನು ಸಾಂಖ್ಯಪುರುಷನ ಹಾಗೆ ಇರುವುದು ಭವಭೂತಿಯ ಆಕ್ಷೇಪಣೆಗೆ ಕಾರಣವಾಗಿದೆ.

ಹಾಗೆಯೇ ಇಲ್ಲಿಯ ಕಥೆಯೂ ಬಹು ಸರಳವಾದುದು. ಭವಭೂತಿಯ ನಾಟಕದ ಕಥೆಯ ಹಾಗೆ ಚಿತ್ರವಾದುದಲ್ಲ: ಮಾತುಗಳಂತೂ ಭವಭೂತಿಯ ಜಾತಿಯವು ಅಲ್ಲವೇ ಅಲ್ಲ. ಅಂದವಾಗಿ ಮಿತಿಮೀರದಂತೆ ಆಸ್ಥೆ ಅಕ್ಕರೆಗಳಿಂದ ಅಲಂಕರಿಸಿಕೊಂಡ ಸುಂದರಿಯ ಅಲಂಕಾರದಂತೆ, ನಾತಿಬಹುಳವಾದ ನಕ್ಷತ್ರಗಳಿಂದ ಮನೋಹರವಾದ ಸಂಧ್ಯೆಯ ಸೊಬಗಿನಂತೆ ಗಂಭೀರವಾದ ಸಾರ್ಥವತ್ತಾದ ಮಾತುಗಳು 'ವಿಕ್ರಮೋರ್ವಶೀಯ'ದ್ದು. 'ಮಾಲತೀಮಾಧವ'ದಲ್ಲಿ ಆಡಂಬರವು ಹೆಚ್ಚು. ಎರಡು ಮಾತಿನಲ್ಲಿ ಪೂರಯಿಸಬಹುದಾದರೂ ಬೇಕೆಂದು ವಿಸ್ತಾರಿತವಾಗಿರುವುದು ಭವಭೂತಿಯ ಮಾತು.

ಹೀಗೆ ಇಷ್ಟಾದರೂ ಮೇಲೆ ಹೇಳಿದಂತೆ ಕಾಲಿದಾಸನ ಜಾಡೆಯನ್ನೇ ಹಿಡಿದಿರುವುದು, ಅಥವಾ ಬೇಡಬೇಡವೆಂದು ಹೇಳುತ್ತ ಅವನಂತಾಗಿರುವುದು ಭವಭೂತಿಯ ವೈಶಿಷ್ಟ್ಯ. ಕಾಲಿದಾಸನು ರಸಯೋಗಿ. ಅವಾಪ್ತಕಾಮನಾದ ಪರಮೇಶ್ವರನನ್ನು ತಪಸ್ಸುಮಾಡಲು ಕೂರಿಸಿ 'ಕೇನಾಪಿ ಕಾಮೇನ ತಪಶ್ಚಚಾರ' ಎನಿಸಿದವನು. ಆತನು ಸೃಷ್ಟಿಯ ರಹಸ್ಯವನ್ನು ಭೇದಿಸಿದವನು. ಅವನ ಕಣ್ಣಿಗೆ ಕಾರ್ಮೋಡದಿಂದ ಇಳಿಯುವ ಸಿಡಿಲೂ ಮಳೆಯೂ, ಎರಡೂ ಮಾಡುವ ಕೆಲಸಗಳೂ ಪ್ರಿಯವೇ ಆಗಿ ಕಂಡು ಲೋಕದಲ್ಲಿ ಎಲ್ಲಿಂದೆಲ್ಲಿಗೂ ಶೃಂಗಾರೈಕರಸವಾಯಿತು. ಭವಭೂತಿಗೆ ಲೋಕದಲ್ಲಿ ಎಲ್ಲಿ ನೋಡಿದರೂ ದುಃಖವೇ ಕಣ್ಣಿಗೆ ಬಿದ್ದು 'ಏಕೋರಸಃ ಕರುಣ ಏವ' ಆಯಿತು. ಇಬ್ಬರೂ ಮಹಾನುಭಾವರು. ಆದರೆ ಕಾಲಿದಾಸನ ಸ್ಥಾಯಿಭಾವವು ರತಿಯಾದರೆ ಭವಭೂತಿಯ ಸ್ಥಾಯಿಭಾವವು ಶೋಕ. ಅದರಿಂದಲೇ ಇಬ್ಬರೂ ಏಕರಸವೆನ್ನುವ ಘಟ್ಟಕ್ಕೆ ಬಂದರೂ ಒಬ್ಬನಿಗೆ ಶೃಂಗಾರವಾದುದು ಇನ್ನೊಬ್ಬನಿಗೆ ಕರುಣವಾಯಿತು.

ಲೋಕವೇ ಹೀಗೆ: ತಾನಾಗಿ ಭಾವವು ಪಕ್ವವಾದರೆ ಎಲ್ಲೆಲ್ಲೂ ಯಾವುದು ಯಾವುದರಲ್ಲಿಯೂ ರತಿಯೇ ಸ್ಥಾಯಿಭಾವ. ಹಾಗಿಲ್ಲದೆ 'ಬಲಾದಾಸೀತ'ವಾದರೆ ಶೋಕವೇ ಸ್ಥಾಯಿಭಾವ. ಈ ಎರಡಲ್ಲದೆ ನಡುವಿನಂತರದಲ್ಲಿರುವವು ಇನ್ನೂ ಪಕ್ವವಿಲ್ಲದವು.

**ದೇವುಡು ನರಸಿಂಹಶಾಸ್ತ್ರಿ**

# ಭಾಸನಲ್ಲಿ ಚಿತ್ರಕಲೆ ಮತ್ತು ಸಂಗೀತ

## ಚಿತ್ರ

ಭಾಸನ ನಾಟಕಗಳಲ್ಲಿ ಬರುವ ಹಲವು ಸನ್ನಿವೇಶಗಳಿಂದಲೂ ಭಾವಗರ್ಭಿತವಾದ ವಚನಗಳಿಂದಲೂ ಆ ಕವಿಗೆ ಲಲಿತಕಲೆಗಳಲ್ಲಿದ್ದ ಅಭಿಪ್ರಾಯ, ಅಭಿಮಾನ, ದೃಷ್ಟಿ— ಇವುಗಳನ್ನು ತಿಳಿಯಬಹುದು. ಲಲಿತಕಲೆಯ ಅತಿಮುಖ್ಯ ಭಾಗವಾದ 'ಚಿತ್ರಕರ್ಮ'ಕ್ಕೆ ಭಾಸನ ನಾಟಕಗಳಲ್ಲಿ ಬಾರಿಬಾರಿಗೂ ಅನ್ವಯವು ದೊರೆಯುತ್ತದೆ. ವಾಸುದೇವನು ಪಾಂಡವದೂತನಾಗಿ ಶಾಂತಿಸಂಧಾನಕ್ಕೆ ದುರ್ಯೋಧನನ ಸಭೆಗೆ ಬರಲು ಆತನನ್ನು ಇದಿರ್ಗೊಂಡು ನಮಸ್ಕರಿಸಲು ಇಷ್ಟಪಡದ ದುರ್ಯೋಧನ, ದ್ರೌಪದಿಯ ಮಾನಭಂಗ ಪ್ರಕರಣವನ್ನು ಚಿತ್ರಿಸಿರುವ ಚಿತ್ರಪಟವನ್ನು ತೆಗೆದುಕೊಂಡು ಬಾರೆಂದು ಬಾದರಾಯಣನಿಗೆ ಆಜ್ಞಾಪಿಸಿ, ಅದರಲ್ಲಿ ದೃಷ್ಟಿಯನ್ನು ನೆಟ್ಟು, ಕೇಶವನು ಬಂದಾಗ ಎದ್ದುನಿಲ್ಲುವುದಿಲ್ಲವೆಂದು ನಿಶ್ಚಯಿಸುವನು.[1] ಮುಂದೆ, ಇದೇ ಚಿತ್ರವು ಕೃಷ್ಣನ ಕಣ್ಣಿಗೆ ಬೀಳಲು, ಚಿತ್ರಿತವಾದ ವಸ್ತುವನ್ನು ಸಹಿಸದೆ ಆತ ಚಿತ್ರಪಟವನ್ನು ಕಣ್ಮರೆಮಾಡೆಂದು ಕಂಚುಕಿಗೆ ಹೇಳುವನು.[2] ಶಕ್ರನು ಬ್ರಾಹ್ಮಣನ ರೂಪವೆತ್ತಿ ರಣರಂಗದಲ್ಲಿದ್ದ ಕರ್ಣನ ಬಳಿಗೆ ಬಂದು ಮಹತ್ತರವಾದ ಭಿಕ್ಷೆ ಬೇಡಲು, ಬ್ರಾಹ್ಮಣನ ಧೀರ ಮತ್ತು ಮಧುರ ಸ್ವರವನ್ನು ಕೇಳಿ ಕರ್ಣನ ಕುದುರೆಗಳು ಕಿವಿಗಳನ್ನೆತ್ತಿ, ಎವೆಯಿಕ್ಕದೆ, 'ಕೊರಳ ಕೊಂಕಿಸಿ', 'ಅಂಗಗಳ ವಶತಪ್ಪಿ' ಚಿತ್ರದಲ್ಲಿ ಬರೆದಂತೆ ನಿಲ್ಲುವುವು.[3] ಭೀಕರವಾದ ಸಮಂತ ಪಂಚಕವು ನೃತನೃಪರೊಂದಿಗೆ ಕಲೆತ ಹತಾಶ್ವ, ಗಜ ಮತ್ತು ಯೋಧವೃಂದದಿಂದ ತುಂಬಿ ಅಸ್ಪಷ್ಟವಾದ ಚಿತ್ರವೊಂದರಂತಿತ್ತು.[4] ಇದೇ ರಣಭೂಮಿಯ ಮೇಲೆ ತೊಡೆಯೊಡೆದು ಬಿದ್ದಿದ್ದ ದುರ್ಯೋಧನನ ಬಳಿಸಾರಿ, ಆತನ ಗುರುಪುತ್ರ ಅಶ್ವತ್ಥಾಮ, ಸುಯೋಧನನ ಪರಾಭವಕ್ಕೆ ಕಾರಣರಾದ ಪಾಂಡವರನ್ನೂ ಕೃಷ್ಣನನ್ನೂ ಕಡಿದು 'ಮಸಿ ಬಳಿದ ಪಟದಂತೆ ಕಲಸಿ' ಬಿಸುಡುವೆನೆಂದು ಗರ್ಜಿಸುವನು.[5] ವಸಂತಕನು ಶಿವಾಲಯದಲ್ಲಿ ತಾಸಿಟ್ಟ ಕಡುಬಿನ ಪಾತ್ರೆಯನ್ನು ಕಾಣದವನಾಗಿ ಹುಡುಕುತ್ತಿರಲು ಚಿತ್ರಿತವಾದ 'ಮೋದಕಮಲ್ಲಕ'ವನ್ನು ಕಂಡು ತನ್ನ ಪಾತ್ರೆಯೆಂದೇ ಭ್ರಮಿಸುವನು.[6] ವತ್ಸರಾಜನು ವಾಸವದತ್ತೆಯೊಡನೆ 'ಭದ್ರವತಿ'ಯನ್ನೇರಿ 'ಘೋಷವತಿ' ಯನ್ನು ಕೈಯಲ್ಲಿ ಹಿಡಿದು ಕೌಶಾಂಬಿಗೆ ಹಾರಿಹೋದ ಸುದ್ದಿಯನ್ನು ಕೇಳಿ, ಶೋಕಾಭಿಭೂತಳಾದ ಅಂಗಾರವತಿ ಪ್ರಾಣಬಿಡಲುದ್ಯುಕ್ತಳಾಗಲು, ಆಕೆಯ ಪತಿ ಆ ಸಾಹಸ ಕಾರ್ಯಕ್ಕೆ ಅಡ್ಡಿಬಂದು, "ಚಿತ್ರಫಲಕಸ್ಥರಾದ ವತ್ಸ–ವಾಸವದತ್ತೆಯರ

---

1 ಬಾದರಾಯಣ! ಆನೀಯತಾಂ ಸ ಚಿತ್ರಪಟೋ ನನು, ಯತ್ರ ದ್ರೌಪದೀಕೇಶಾಂಬರಾಕರ್ಷಣಮಾಲಿಖಿತಮ್. ದೂತವಾಕ್ಯ, ಅಂ. ೧, ಪುಟ ೪೪೪12.

2 ಆಃ! ಅಪನೀಯತಾಮೇಷ ಚಿತ್ರಪಟಃ. ದೂ. ವಾ., ೧, ಪುಟ ೪೪೭21.

3 ಆಕರ್ಣ್ಯ ಸ್ವರಮಸ್ಯ ಧೀರನಿನದಂ ಚಿತ್ರಾರ್ಪಿತಾಂಗಾ ಇವ. ಕರ್ಣಭಾರ, ೧, ಪದ್ಯ ೧೫.

4 ಸಂಕೀರ್ಣಲೇಖ್ಯಮಿವ ಚಿತ್ರಪಟಂ ಪ್ರವಿದ್ಧಮ್. ಊರುಭಂಗ, ೧. ೩.

5 ಸಂಕೀರ್ಣಲೇಖ್ಯಮಿವ ಚಿತ್ರಪಟಂ ಕ್ಷಿಪಾಮಿ. ಊರುಭಂಗ, ೧. ೬೦.

6 ಅವಿಧಾ ಆಲಿಖಿತಂ ಖಲು ಮಮ ಮೋದಕಮಲ್ಲಕಂ. ಪ್ರತಿಜ್ಞಾಯೌಗಂಧರಾಯಣ, ೩. ಪು, ೮೩30.

ವಿವಾಹಕ್ಕೆ ಅಣಿಮಾಡಿ, ಮಡದಿಯನ್ನು ಸಂತೋಷಗೊಳಿಸುವನು.[7] ಪದ್ಮಾವತಿಯನ್ನು ಉದಯನ ಕಾಣಬಯಸಲು, ವಿದೂಷಕ ಆಕೆ 'ಮೃಗಪಕ್ಷಿ ಸಂಕುಲ' ಚಿತ್ರಿತವಾಗಿರುವ 'ದಾರುಪರ್ವತಕ' ಪ್ರಾಸಾದದಲ್ಲಿರಬಹುದೆಂದು ಊಹಿಸುವನು.[8] ಪದ್ಮಾವತಿಯು ತನ್ನ ಪತಿಯ ಪ್ರೇಮಕ್ಕೂ ಆದರಕ್ಕೂ ಪಾತ್ರಳಾದ ವಾಸವದತ್ತೆಯ ಚಿತ್ರವನ್ನು ನೋಡಬಯಸುವಳು ;[9] ಧಾತ್ರಿಯು ಆಕೆಯ ಇಷ್ಟವನ್ನು ನೆರವೇರಿಸುವಳು. ಚಾರುದತ್ತ, ಸಂಪದ್ಯುಕ್ತನಾಗಿದ್ದಾಗ ಆತನ ಮನೆಯಲ್ಲಿ ಭೋಜನಪಾತ್ರೆಗಳ ಮಧ್ಯೆ ಕುಳಿತು ಭುಂಜಿಸುತ್ತಿದ್ದ ತಾನು, ನಾನಾ ಬಣ್ಣವುಳ್ಳ ಪಾತ್ರೆಗಳ ಮಧ್ಯೆ ಕುಳಿತು ಕೆಲಸಮಾಡುವ ಚಿತ್ರಗಾರನಂತೆ ಮೆರೆಯುತ್ತಿದ್ದನೆಂದು ವಿದೂಷಕ ತನ್ನ ಹಿಂದಿನ ಸುಸ್ಥಿತಿಯನ್ನು ನೆನೆನೆನೆದು ಕೊರಗುವನು.[10] ರಾಮ, ಲಕ್ಷ್ಮಣ, ಸೀತೆ ವನಾಭಿಮುಖರಾಗಿ ಹೊರಟರೆಂಬ ವಾರ್ತೆಯನ್ನು ಕೇಳಿ, ಮುಪ್ಪಿನ ದಶರಥ ಅವರನ್ನು ಕೊನೆಯ ಬಾರಿ ಕಾಣ ಹೊರಡಲು, ಅರಸನು ತಾವು ಹೊರಟ ನಂತರ ಅರಮನೆಯಲ್ಲಿರುವ ತಮ್ಮ ಪ್ರತಿಕೃತಿಗಳನ್ನು ಕಾಣಲೆಂದು ಹೇಳಿ ರಾಮಾದಿಗಳು ಕಣ್ಮರೆಯಾಗುವರು.[11]

ಭಾಸನಾಟಕ ಚಕ್ರದಲ್ಲಿ ಚಿತ್ರಕಲೆಗೆ ಕಂಡುಬರುವ ಅನ್ವಯದ ವಿಚಾರ ಇಷ್ಟು. ಅಂದಮೇಲೆ ಭಾಸಕವಿಗೆ ಈ ಕಲೆಯಲ್ಲಿ ಹೆಚ್ಚಿನ ಮಮತೆ ಇತ್ತೆಂದು ಹೇಳಿದ ಹಾಗಾಯಿತು. ಭಾಸನ ಕಾಲದ ಸಮಾಜ ಚಿತ್ರಗಾರನಿಗೆ ಪ್ರಾಶಸ್ತ್ಯ ಕೊಟ್ಟಿತ್ತು. ರಾಜಾಶ್ರಯವನ್ನು ಪಡೆದ ಚಿತ್ರಗಾರರಾದರೋ ಅರಮನೆಗಳನ್ನು ಕಲಾಕೋಶಗಳನ್ನಾಗಿಯೇ ಮಾಡಿರಬೇಕು. ತಮ್ಮ ಜೀವನದಲ್ಲಾದ ದೊಡ್ಡ ದೊಡ್ಡ ಘಟನೆಗಳನ್ನು ರಾಜರು ಚಿತ್ರರೂಪವಾಗಿ ಬರೆಯಿಸುವ ಪದ್ಧತಿಯೂ ಇದ್ದಿರಬಹುದು.[12] ದೇವಾಲಯದ ಭಿತ್ತಿಯು ಚಿತ್ರಪಟಗಳಿಂದ ಶೋಭಿಸುತ್ತಿತ್ತು. ವಧೂವರರ ಪ್ರತಿಕೃತಿಯುಳ್ಳ ಚಿತ್ರಪಟವನ್ನು ತಯಾರಿಸಿ ವಿವಾಹವಿಧಿಯನ್ನು ಸಾಂಗವಾಗಿ ನೆರವೇರಿಸುವ ಪದ್ಧತಿಯೂ ಇದ್ದಿರಬಹುದು.[13] ಇದು ಕ್ಷತ್ರಿಯ ಧರ್ಮಕ್ಕೆ ಅವಿರುದ್ಧವಾದ ಪದ್ಧತಿಯೆಂದೇ ಪರಿಗಣಿಸಲ್ಪಟ್ಟಿರಬೇಕು.[14] ಈ ಕಾರ್ಯಕ್ಕಾಗಿ ತಯಾರಿಸಿದ ಚಿತ್ರಗಳೂ ಮನಮೋಹಕವಾಗಿದ್ದಿರಬೇಕು. ಪ್ರಾಸಾದದ ಒಂದು ಭಾಗವಾದ 'ದಾರುಪರ್ವತಕ'ದ ಗೋಡೆಗಳು ರಮಣೀಯವಾದ ಚಿತ್ರಗಳಿಂದ ಶೋಭಿಸುತ್ತಿದ್ದವು. ಬೇಸರವಾದಾಗ ಅಥವಾ ವಿರಾಮಕಾಲದಲ್ಲಿ ಅಂತಃಪುರದವರು ಅಲ್ಲಿ ಬಂದು ಹರ್ಷಹೊಂದುವರು. ಅಸ್ವಸ್ಥರಾದವರು

---

7 ತಚ್ಚಿತ್ರಫಲಕಸ್ಥಯೋರ್ವತ್ಸರಾಜವಾಸವದತ್ತಾಯೋರ್ವಿವಾಹೋಽನುಷ್ಠೀಯತಾಮ್ ಇತಿ. ಪ್ರ. ಯೌ., ೪. ಪು. ೧೦೬8.

8 ಆಲಿಖಿತಮೃಗಪಕ್ಷಿಸಂಕುಲಮ್ ದಾರುಪರ್ವತಕಂ ಗತಾ ಭವೇತ್. ಸ್ವಪ್ನವಾಸವದತ್ತಂ ೪. ಪು. ೨೫22.

9 ಸ್ವಪ್ನ., ೬. ಪು. ೫೧3.

10 ಚಿತ್ರಕರ ಇವ ಬಹುಮಲ್ಲಕೈಃ ಪರಿವೃತಃ. ಚಾರುದತ್ತ, ೧. ಪು. ೧೯೫32-35.

11 ಗತೇಷ್ವಸ್ಮಾಸು ರಾಜಾ ನಃ ಶಿರಃಸ್ಥಾನಾನಿ ಪಶ್ಯತು. ಪ್ರತಿಮಾ., ೧. ೩೧.

12 ದೂ. ವಾ., ೧. ಪು. ೪೪೪14.

13 ಸ್ವಪ್ನ., ೬. ಪು. ೫೧1-2.

14 ಕ್ಷತ್ರಧರ್ಮೇಣೋದ್ದಿಷ್ಟಸ್ತೇ ದುಹಿತುರ್ವಿವಾಹಃ. ಪ್ರತಿಜ್ಞಾ., ೪. ಪು. ೧೦೬7.

ಚಿತ್ರಪಟಗಳಿಂದ ಅಲಂಕರಿಸಲ್ಪಟ್ಟ 'ಸಮುದ್ರಗೃಹ'ಕ್ಕೆ ಬಂದು ಗುಣಹೊಂದುವ ವರೆಗೆ ಮಲಗಿರುವುದೂ ಪದ್ಧತಿಯಾಗಿತ್ತು.[15] ಚತುರತೆಯಿಂದ ಬರೆಯಲ್ಪಟ್ಟ ಚಿತ್ರ ಮನಸ್ಸಿಗೆ ಶಾಂತಿತರುವುದಲ್ಲವೆ? ಶೀರ್ಷವೇದನೆಯಿಂದ ದುಃಖಿತಳಾದ ಪದ್ಮಾವತಿ ತತ್ಪರಿಹಾರಾರ್ಥವಾಗಿ ಸಮುದ್ರಗೃಹಕ್ಕೆ ತೆರಳುವಳು. ಇಷ್ಟಜನರ ಪ್ರತಿಕೃತಿಗಳನ್ನು ನೋಡಿ ತೃಪ್ತಿಗೊಳ್ಳುವುದೂ ಸ್ವಾಭಾವಿಕವಾಗಿತ್ತು.[16] ಅಂತೂ ರಾಜಗೃಹದಲ್ಲಾಗಲೀ ಸಾಮಾನ್ಯರ ಮನೆಗಳಲ್ಲಾಗಲೀ ಗೋಡೆಗಳು ಮನೆಜನರ ಚಿತ್ರಗಳಿಂದ ರಂಜಿಸುತ್ತಿದ್ದುದೂ ಸಹಜವಾದ ದೃಶ್ಯವೇ ಆಗಿತ್ತು.

ಭಾಸಕವಿ ಚಿತ್ರಕಲೆಯ ಶ್ರೇಷ್ಠವಿಮರ್ಶಕ. ಆದರ್ಶಚಿತ್ರ ಆದರ್ಶಗುಣದಂತೆ ಸರ್ವರನ್ನೂ ರಂಜಿಸಬಲ್ಲುದೆಂಬುದೇ ಭಾಸನ ಮತ. "ಅಹೋ! ದರ್ಶನೀಯಃ ಅಯಂ ಚಿತ್ರಪಟಃ"[17]—ಎಂಬೊಂದು ಮಾತಿನಲ್ಲಿ ಕವಿ ಚಿತ್ರಪಟಾವಲೋಕನ ಕಣ್ಣಿನ ಸವಿಯೂಟವೆಂದು ಸಾರುತ್ತಾನೆ. ಒಳ್ಳೆಯ ಚಿತ್ರಪಟ ಮನಸ್ಸಿನಲ್ಲಿ ಭಾವನಾತರಂಗಗಳನ್ನೇ ಏಳಿಸಬಲ್ಲುದು.[18] ಚಿತ್ರ ಶೋಭಿಸಬೇಕಾದರೆ ಬಣ್ಣಗಳು ಕಳೆಗೂಡಿರಬೇಕು.[19] ಪ್ರೇಕ್ಷಕನ ಮನಸ್ಸನ್ನು 'ಸುವ್ಯಕ್ತ'ವಾಗಿ 'ಆಲಿಖಿತ'ವಾದ ಚಿತ್ರಪಟ ಸೆಳೆಯಬಲ್ಲುವೇ ಹೊರತು, ಹಾಗೆ ಮಾಡಲು ಸಾಧಾರಣ ಚಿತ್ರಗಳಿಗೆ ಸಾಧ್ಯವಲ್ಲ.[20] ಚಿತ್ರದ ಪ್ರತಿಯೊಂದು ಗೆರೆಯೂ ವರ್ಣವೂ 'ಘನ'ವಾಗಿ, 'ತಿಳಿ'ಯಾಗಿ, 'ಸ್ಪಷ್ಟ'ವಾಗಿ, 'ಧೀರ'ವಾಗಿ ಇರಬೇಕು. ಈ ಲಕ್ಷಣಗಳಿಲ್ಲದ 'ಸಂಕೀರ್ಣ ಲೇಖ್ಯ'ದಲ್ಲಿ ಭಾಸಕವಿಗೆ ಗೌರವವಿಲ್ಲ; ಇಂತಹವು ವರ್ಜನೀಯವೇ ಸರಿ. ಸದ್ವಸ್ತುವು ಚಿತ್ರದ ಸೊಬಗನ್ನೇ ಇಮ್ಮಡಿಸುವುದು; ದ್ರೌಪದಿಯ ಮಾನಭಂಗಪ್ರಸಂಗ ಎಷ್ಟು ಶಕ್ತಿಯುತನಾದ ಚಿತ್ರಗಾರನಿಂದ ಬರೆಯಲ್ಪಟ್ಟಿದ್ದರೂ ರಸಮೂರ್ತಿ ಕೃಷ್ಣನಿಗೆ ಅದು ರುಚಿಸದೆ ಹೋಯಿತು! ಉಚಿತ ಬಣ್ಣಗಳಿಂದ ಜನಿತವಾದ ಚಿತ್ರದ ಕಾಂತಿಗೆ ಎಂದಿಗೂ ಕುಂದುಂಟಾಗದು. ಒಂದು ವೇಳೆ ಪ್ರಮಾದದಿಂದ ಬೂದಿಮುಚ್ಚಿದ ಕೆಂಡದಂತೆ ಕಳೆಗುಂದಲು, ಚಿತ್ರವನ್ನು ಶುಭ್ರಮಾಡಿದ ಮಾತ್ರಕ್ಕೆ ಅದು ಹೆಚ್ಚು ಕಳೆಯಿಂದ ಶೋಭಿಸುವುದು.[21] ಬಣ್ಣ ಬಣ್ಣಗಳಿಂದ ಪ್ರಕಾಶಿಸುವ ಚಿತ್ರಗಳು ವಿವಿಧ ವರ್ಣಗಳಿಂದ ಕಂಗೊಳಿಸುವ ಕುಸುಮಗಳಂತೆ ದರ್ಶನೀಯ. ಪ್ರತಿಕೃತಿಯನ್ನು ಪದಾರ್ಥದ ಸಮನಾಗಿ ಮಾಡುವುದೇ ಚಿತ್ರಗಾರನ ಗುರಿಯಾಗಬೇಕು. ವಾಸವದತ್ತೆಯ ಚಿತ್ರವನ್ನು ನೋಡಿ ಪದ್ಮಾವತಿ ಬೆರಗಾಗುವಳು.[22] ಚಿತ್ರವು ಭಾವಪೂರಿತವಾದಲ್ಲಿ ಚಿತ್ರಗಾರನ ಕೌಶಲವನ್ನು ಹೊರಪಡಿಸುವುದು. ಚತುರತೆಯಿಂದ ರಚಿಸಲ್ಪಟ್ಟ ಚಿತ್ರ ನಡೆದುಹೋದ

15 ರೋಗೇ ದೃಷ್ಟಿವಿಲೋಭನಂ ಜನಯಿತುಂ ಶೋಭಾ ನ ಕಾಚಿತ್ ಕೃತಾ. ಸ್ವ. ವಾ., ೫. ೪.

16 ಏಷಾ ಚಿತ್ರಫಲಕಾ ತವ ಸಕಾಶಂ ಪ್ರೇಷಿತಾ। ಏತಾಂ ದೃಷ್ಟ್ವಾ ನಿರ್ವೃತ್ತೋ ಭವ.
ಸ್ವಪ್ನ., ೬. ಪುಟ ೫೧[3].

17 ದೂ. ವಾ., ೧. ಪು. ೪೪೪[19].

18 ಅಹೋ ಭಾವೋಪಪನ್ನತಾ. ದೂ. ವಾ., ೧. ಪು. ೪೪೬[1].

19 ಅಹೋ ವರ್ಣಾಢ್ಯತಾ. ದೂ. ವಾ., ೧. ಪು. ೪೪೬[1].

20 ಅಹೋ ಯುಕ್ತಲೇಖತಾ। ಸುವ್ಯಕ್ತಂ ಆಲಿಖಿತಃ ಅಯಂ ಚಿತ್ರಪಟಃ. ದೂ. ವಾ., ೧. ಪು. ೪೪೬[2].

21 ಯುಕ್ತಲೇಖತಯಾ ವರ್ಣಾನಾಂ ಯಥಾ ಯಥಾ ಪ್ರಮಾರ್ಜ್ಯ, ತಥಾ ತಥೋಜ್ವಲತರಂ ಭವತಿ.
ಪ್ರತಿಜ್ಞಾ., ೩. ಪು. ೮೩[32].

22 ಆರ್ಯಪುತ್ರ! ಅಸ್ಯಾಃ ಪ್ರತಿಕೃತ್ಯಾಃ ಸದೃಶೀ ಇಹೈವ ಪ್ರತಿವಸತಿ. ಸ್ವಪ್ನ., ೬. ಪು. ೫೨[1].

ಒಂದು ದೊಡ್ಡ ಸನ್ನಿವೇಶ ಅಥವಾ ಘಟನೆಯನ್ನೇ ಮನಸ್ಸಿಗೆ ನೆನಪುಂಟುಮಾಡ ಬಲ್ಲುದು. ದುರ್ಯೋಧನನು ಬರೆಯಿಸಿದ ಚಿತ್ರಪಟದಲ್ಲಿ ದುಶ್ಶಾಸನನು ದ್ರೌಪದಿಯ ಮುಡಿಹಿಡಿದು ನಿಂತಿರುವುದನ್ನೂ, ದ್ರೌಪದಿ ಆಗ ಕಣ್ದೆರೆದು ದಿಗ್ಭ್ರಾಂತಳಾಗಿ ನೋಡುತ್ತಿರುವುದನ್ನೂ, ಆಕೆಯ ದುಃಸ್ಥಿತಿಯನ್ನು ಕಂಡು ಕುಪಿತನಾದ ಭೀಮ ಸಭಾಮಂಟಪದ ಕಂಬವನ್ನು ತೂಗಿ ನೋಡುತ್ತಿರುವುದನ್ನೂ, ಇದನ್ನರಿತು ಮತಿಗೆಟ್ಟ ಯುಧಿಷ್ಠಿರ ಕಡೆಗಣ್ಣ ನೋಟದಿಂದಲೇ ತಮ್ಮನ ಕೋಪ ಶಮನಕ್ಕಾಗಿ ಯತ್ನಿಸುವುದನ್ನೂ, ಮಡದಿಯ ಗತಿ ಕಂಡು ರೋಷದಿಂದ ಕಣ್ಣು ಕೆರಳಿ 'ಅಧರೋಷ್ಠವಲುಗುತಿರೆ' ಗಾಂಡಿವದ ಹೆದೆಯೆಳೆಯುವ ಅರ್ಜುನನನ್ನೂ, ನಡು ಕಟ್ಟು ಕಟ್ಟಿ, ಕತ್ತಿಯ ಹಿಡಿ ಹಿಡಿದು, ಹಲ್ಲುಕಚ್ಚಿ ನಿಂತಿರುವ ನಕುಲ ಸಹದೇವರನ್ನೂ ಕಾಣಬಹುದು! ಇಂತಹ ಭಾವಪೂರಿತ ಸನ್ನಿವೇಶವನ್ನೂ ಮಹಾವ್ಯಕ್ತಿಗಳನ್ನೂ, ಅವರ ಆಗಣ ಮನೋವೃತ್ತಿಯನ್ನೂ ವಿವರಿಸುವ ಇದು ಎಂತಹ ಚಿತ್ರಫಲಕ!—[23]
"ಸಾಧು ರೇ ಚಿತ್ರಕರ! ಭಾವ! ಸಾಧು!"[24]

## ಗೀತ

ಚಿತ್ರಕಲೆಯಲ್ಲಿ ಭಾಸಕವಿಗೆ ಎಷ್ಟು ಆಸಕ್ತಿ ಮತ್ತು ಆದರವೋ ಸಂಗೀತ ದಲ್ಲಿಯೂ ಅಷ್ಟೇ ಆಸಕ್ತಿ ಮತ್ತು ಆದರ. ಚೋರವೇಷದಲ್ಲಿದ್ದ ಅವಿಮಾರಕ ನಡುರಾತ್ರಿ ಬೀದಿಯಲ್ಲಿ ಬರುತ್ತಿರಲು 'ಗಾಂಧರ್ವಧ್ವನಿ'ಯನ್ನು ಕೇಳುವನು.[1] ಮುಂದೆ, ಆತ ಅರಮನೆಯಲ್ಲಿಳಿಯಲು ಆತನನ್ನು 'ತಂತ್ರೀನಾದ'ವು ಸ್ವಾಗತಿಸಿತು.[2] ನಾರದನು ಹಾಡಿದನೆಂದರೆ ಹರಿ ಪುಳಕಿತನಾಗುವನು;[3] ಸಂಗೀತರಸಭರಿತ ಅವಿಮಾರಕ ಮೈಮರೆಯುವನು. 'ಅವಿಮಾರಕ'ದ ನಾರದ ಕೇವಲ ಕಲಹಪ್ರಿಯ ಮಾತ್ರನಲ್ಲ; ಗಾನಪ್ರಿಯನೂ ಹೌದು.[4] ಬೃಂದಾವನದಲ್ಲಿ ಗೋಪಸುಂದರಿ ಯರು ಸಂತೋಷದಿಂದ ಹಾಡುವರು.[5] ನಟಿಯು ಹಾಡಿದಳೆಂದರೆ ಸಾಮಾಜಿಕರು 'ಪ್ರಸಾದಿತ'ರಾಗುವುದರಲ್ಲಿ ಎಳ್ಳಷ್ಟೂ ಸಂಶಯವಿಲ್ಲವೆಂಬುದೇ ಸೂತ್ರಧಾರನ ದೃಢಮತ.[6] ಉದಯನ 'ಗಾಂಧರ್ವವೇತ್ತಾ'; ವೀಣಾನಾದದಿಂದಲೇ ಗಜವನ್ನು ಜಯಿಸಬಲ್ಲ ಶಕ್ತಿ ಆತನ ವಿಶೇಷ ಗುಣ.[7] ತಾನು ಸಂಗೀತಜ್ಞನೆಂಬುದು ಆತನ ಹಿರಿ ಹೆಮ್ಮೆ.[8] ವಾಸವದತ್ತೆಗಾದರೋ ವೀಣೆಯ ಹುಚ್ಚೇ ಹಿಡಿದುಹೋಯಿತು.[9] ವತ್ಸನು ಸಂಗೀತಪ್ರಿಯನೆಂದರಿತು ಆತನ ಪ್ರೇಯಸಿ ಪದ್ಮಾವತಿ ತಾನೂ ವಾಸವದತ್ತೆಯಂತೆ

---

23 ದೂತವಾಕ್ಯ, ೧. ೭,೮,೯,೧೦,೧೧,೧೨.

24 ಪ್ರತಿಜ್ಞಾ., ೩. ಪು. ೮೩[31].

1 ಅಯೇ ಗಾಂಧರ್ವಧ್ವನಿರಿವ ಶ್ರೂಯತೇ. ಅವಿಮಾರಕ, ೩. ಪು. ೧೩೯[1].

2 ಅಯೇ ತಂತ್ರೀನಾದೋ ಯುವತಿಕಲಗೀತಧ್ವನಿಯುತಃ. ಅವಿ., ೩. ಪು. ೧೪೨[1].

3 ವೇದೈಃ ಪಿತಾಮಹಮಹಂ ಪರಿತೋಷಯಾಮಿ ಗೀತೈಃ ಕರೋಮಿ ಹರಿಮುದ್ಗತ ರೋಮಹರ್ಷಮ್. ಅವಿ., ೬. ೧೧.

4 ತಂತ್ರೀಷು ಚ ಸ್ವರಗಣಾನ್ ಕಲಹಾಂಶ್ಚ ಲೋಕೇ ಉತ್ಪಾದಯಾಮಿ. ಅವಿ., ೬. ೧೧.

5 ವೃಂದಾರಣ್ಯಗತೇ ಸಮುಪ್ರಮುದಿತಾ ಗಾಯಂತಿ ಕೇಚಿತ್‌ಸ್ಥಿತಾಃ. ಬಾಲಚರಿತ, ೩. ೩.

6 ತತಸ್ತವ ಗೀತಪ್ರಸಾದಿತೇ ರಂಗೇ ವಯಮಪಿ ಪ್ರಕರಣಮಾರಭಾಮಹೇ. ಪ್ರತಿಜ್ಞಾ., ೧. ಪು. ೫೭[10].

7 ಪ್ರತಿಜ್ಞಾ., ೧. ಪು. ೬೨[37].

8 ಪ್ರತಿಜ್ಞಾ., ೧. ಪು. ೮೦[4].

9 ಪ್ರತಿಜ್ಞಾ., ೧. ಪು. ೮೧[4].

ವೀಣೆ ಕಲಿಯಬಯಸುವಳು.[10] 'ಘೋಷವತಿ'ಗೆ ಹೊಸ ತಂತಿಗಳನ್ನು ಹಾಕಿಸಿ ತಾರೆಂದು ವತ್ಸರಾಜ ವಸಂತಕನನ್ನು ಆಜ್ಞಾಪಿಸುವನು.[11] ಚಾರುದತ್ತನಿಗೆ ವೀಣಾ ವಾದ್ಯದಲ್ಲಿ ಬಹು ಗೌರವ; ಅದರ ಪ್ರಭಾವವನ್ನು ಮೈತ್ರೇಯನಿಗೆ ವರ್ಣಿಸುವನು.[12]

ಭಾಸನ ಕಾಲದಲ್ಲಿ ಸಂಗೀತಕಲೆ ಜನಪ್ರಿಯವಾದುದಾಗಿತ್ತೆಂದು ಹೇಳಲು ಸಾಕಷ್ಟು ಆಧಾರಗಳಿವೆ. ಸ್ತ್ರೀಯರು ಮಾತ್ರವಲ್ಲ; ಪುರುಷರೂ ಈ ಕಲೆಯ ಉಪಾಸಕರಾಗಿದ್ದರು.[13] ವಸಂತಸೇನೆಯಂತಹ ಗಣಿಕಾಸ್ತ್ರೀಯರಂತೂ ಈ ಕಲಾಭ್ಯಾಸ ಸ್ವಧರ್ಮವೆಂದೇ ಅರಿತಿದ್ದರು.[14] ಸಂಗೀತವಿಲ್ಲದ ಯಾವ ಉತ್ಸವವೂ ಶೋಭಿಸುತ್ತಿರಲಿಲ್ಲ. ರಾಜಾಶ್ರಯ ಈ ಕಲೆಯ ಅಭಿವೃದ್ಧಿಗೆ ಮೂಲಕಾರಣವಾಗಿತ್ತು. ರಾಜನ ಅಂತಃಪುರದಲ್ಲಿ ಗಾಯಕಿಯರಿರುವುದು ಸ್ವಾಭಾವಿಕವಾಗಿತ್ತು. ವೈತಾಳಿಕೆ ಉತ್ತರೆ ವೀಣೆ ಕಲಿಸುವುದರಲ್ಲಿ ನಿಪುಣೆ; ಅದೇ ಅಂತಃಪುರದ ಕಾಂಚನಮಾಲೆ ವೀಣೆ ಬಾರಿಸುವುದರಲ್ಲಿ ಇನ್ನೂ ಚತುರೆ.[15] ಈಕೆಯ ಕೌಶಲವನ್ನು ನೋಡಿ ವಾಸವದತ್ತೆಗೆ ವೀಣೆ ಕಲಿಯಬೇಕೆಂಬ ಆಸೆ ಊರಿತು. ನೃಪಮಂದಿರದಲ್ಲಿ ಸುವ್ಯವಸ್ಥಿತವಾದ ಸಂಗೀತ ಶಾಲೆಗಳು ಬೇರೆ![16] ಸಂಗೀತ ಕಲಿಸುವವರೂ ಹೇರಳ. ಅಂಗಾರವತಿ ತನ್ನ ಮಗಳಿಗೆ ವೀಣೆ ಕಲಿಸಲು 'ಆಚಾರ್ಯ'ನೊಬ್ಬನನ್ನು ನಿಯಮಿಸುವಂತೆ ಪತಿಯನ್ನು ಪ್ರಾರ್ಥಿಸುವಳು.[17] ಪುರುಷರೂ ಸಂಗೀತ ಚತುರರಾಗಿದ್ದುದರಿಂದ, ಅವರು ವಿವಾಹಾನಂತರ ತಮ್ಮ ತಮ್ಮ ಗೃಹಿಣಿಯರಿಗೆ ಸಂಗೀತ ಕಲಿಸುವ ಸಂಪ್ರದಾಯವೂ ಇದ್ದಿರಬೇಕು. ತನ್ನ ಮಗಳು ವಿವಾಹಿತಳಾದಮೇಲೆ ಪತಿಯಿಂದಲೇ ಸಂಗೀತ ಕಲಿಯಲಿ ಎಂಬುದೇ ಪ್ರದ್ಯೋತನ ಅಭಿಪ್ರಾಯ.[18] ಪದ್ಮಾವತಿ ಉದಯನನಿಂದ ವೀಣೆ ಕಲಿಯಲು ಯತ್ನಿಸುವಳು. ಸಮಾಜದಲ್ಲಿ 'ಸಂಗೀತ ಕಲಾನಭಿಜ್ಞ'ರೂ ಇದ್ದರೆಂದು ಸಾಧಿಸಲು ಆಧಾರಗಳಿವೆ. ಮನೆಗೆ ಬಂದ ಸೊಸೆ ಹಾಡುತ್ತಿರುವುದು ಶ್ಲಾಘ್ಯವಲ್ಲವೆಂಬ ಒಂದು ಪಕ್ಷವಿದ್ದಿರಬಹುದು. ಹುಟ್ಟಿದ ಮನೆಯಲ್ಲಿ ಹೆಣ್ಣುಮಗು ಯಥೇಚ್ಛವಾಗಿ ಹಾಡುವಂತೆ ಅತ್ತೆ–ಮಾವಂದಿರ ಮನೆಯಲ್ಲಿ ಸಾಧ್ಯವೆ?[19] ಸಂಗೀತಾಸ್ವಾದನೆ ಸುಸಂಸ್ಕೃತನಿಗೆ ಮಾತ್ರ ಸಾಧ್ಯ, ಅದರನುಭವಕ್ಕೆ ಪೂರ್ವಜನ್ಮವಾಸನಾ ವಿಶೇಷ ಅತ್ಯಗತ್ಯ; ಆದುದರಿಂದಲೇ ವೀಣಾನಾದ ರುಚಿಸುವ ಪುಣ್ಯ ಚಾರುದತ್ತನದಾಯಿತು, ವಿದೂಷಕನಿಗಿದೆಂತು ಸಾಧ್ಯ?[20] ಅರ್ಥಶಾಸ್ತ್ರಾಧ್ಯಯನದಲ್ಲಿ ತೀವ್ರಾಸಕ್ತನಾದ

---

10 ಸ್ವಪ್ನ., ೪. ಪು. ೨೪16.

11 ಸ್ವಪ್ನ., ೬. ಪು. ೪೬23.

12 ವಯಸ್ಯ! ವೀಣಾ ನಾಮಾಸಮುದ್ರೋತ್ಥಿತಂ ರತ್ನಮ್. ಚಾರುದತ್ತ, ೩. ಪು. ೨೨೩13.

13 ಕೋ ನು ಖಲು ಅಯಂ ಪುರುಷಃ ಗಾಂಧರ್ವಮನುಭವತಿ; ಗೀತಂತು ಪುನಃ ಸ್ತ್ರಿಯಾಃ.
ಅವಿ., ೩. ಪು. ೧೩೯1.

14 ಚಾರು., ೧. ಪು. ೨೦೧13.

15 ಪ್ರತಿಜ್ಞಾ., ೨. ಪು. ೭೫19. 21.

16 (1) 'ನಾರದೀಯಾ'. ಪ್ರತಿಜ್ಞಾ., ೨. ಪು. ೭೫20.
(2) 'ಸಂಗೀತಶಾಲಾಂ ಗತ್ವಾ'. ಪ್ರತಿಮಾ., ೧. ಪು. ೨೫೧8.

17 'ಆಚಾರ್ಯಮಿಚ್ಛಾಮಿ'. ಪ್ರತಿಜ್ಞಾ., ೨. ಪು. ೭೬4.

18 "ಪತಿರೇವ ಏನಾಂ ಶಿಕ್ಷಯಿಷ್ಯತಿ". ಪ್ರತಿಜ್ಞಾ., ೨. ಪು. ೭೬5.

19 ಕ್ರೀಡತು ಕ್ರೀಡತು! ನೈತತ್ ಸುಲಭಂ ಶ್ವಶುರಕುಲೇ. ಪ್ರತಿಜ್ಞಾ., ೨. ಪು. ೮೧5.

20 ವಯಸ್ಯ! ಭಾವಶಾಬಲೇನ ಜಸುರಃ ಖಲ್ವದ್ಯ ಮಧುರಂ ಗೀತಮ್ । ನ ಚ ಭವಾನ್ ರಮತೇ.
ಚಾರು., ೩. ಪು. ೨೨೪1.

ಪ್ರದ್ಯೋತನ ಮೊದಲನೆಯ ಮಗ 'ಗಾಂಧರ್ವದ್ವೇಷಿ'; ಇನ್ನು ವ್ಯಾಯಾಮವನ್ನೇ ದೈವವೆಂದು ನಂಬಿದ್ದ ಅವನ ತಮ್ಮನ ಮಾತೇನು?[21] ಅಂದಮಾತ್ರಕ್ಕೆ ಸಮಾಜವೆಲ್ಲವೂ 'ಗೋಪಾಲಕ' ಮತ್ತು 'ಪಾಲಕ' ಮಯವಾಗಿರಲಿಲ್ಲ. ಹಾಗಿದ್ದಲ್ಲಿ ನಾರದನಂತೆ 'ಸ್ವರಗಣ'ಗಳನ್ನು 'ಉತ್ಪಾದಿಸು'ವ ಶಕ್ತಿಯುಳ್ಳ ಜನರಿರುತ್ತಿರಲಿಲ್ಲ. ಸ್ತ್ರೀ ಪುರುಷರಿರ್ವರೂ ಈ ಕಲೆಯಲ್ಲಿ ನಿಷ್ಣಾತರಾಗಿದ್ದಾಗ್ಯೂ, ಭಾಸ ಈ ಕಲೆ ಮುಖ್ಯವಾಗಿ ಸ್ತ್ರೀಯರದೆಂದೇ ಸಾಧಿಸುವಂತೆ ತೋರಿಬರುತ್ತೆ. ಈ ಅರ್ಥ ಬರುವಂತೆ ಕವಿ ವಿದೂಷಕನ ಬಾಯಲ್ಲಿ ಸ್ವಾರಸ್ಯವಾದ ನಾಲ್ಕು ಮಾತುಗಳನ್ನಾಡಿಸಿದ್ದಾನೆ. ವಿದೂಷಕನಿಗೆ ಓದುವ ಸ್ತ್ರೀಯಂತೆ ಹಾಡುವ ಮನುಷ್ಯನನ್ನು ಕಂಡರಾಗದು. ಹಾಡುವ ಮನುಷ್ಯನು ರಕ್ತವರ್ಣ ಪುಷ್ಪಮಾಲಿಕೆಯನ್ನು ಧರಿಸುವ ಪುರೋಹಿತನಂತೆ ಹಾಸ್ಯಾಸ್ಪದನು. ಓದುವ ಸ್ತ್ರೀಯಾದರೋ ಮೂಗೊಡೆದ ಹಸುವಂತೆ ನಗೆಗೀಡಾಗುವಳು. ಆದ್ದರಿಂದ ಸಂಗೀತ ಸ್ತ್ರೀಗೆ ಉಚಿತ; ಓದು ಪುರುಷನಿಗೆ.[22] ಸಂಗೀತ ಶೃಂಗಾರದ ಉದ್ದೀಪನ ವಿಭಾವ.[23] ಅದು ಸಂತೋಷ ಸೂಚಕ. ವಾಸುದೇವ ಕಂಸನನ್ನು ವಧಿಸಿ ವಸುದೇವನ ಬಂಧವಿಮೋಚನೆಮಾಡಿದೊಡನೆಯೇ ವಾದ್ಯಗಳು ಮೊಳಗುವುವು;[24] ನಾರದನೂ ದೇವ ಗಾಯಕರೂ ಕೃಷ್ಣನನ್ನು ಪೂಜಿಸಲು ಬರುವರು.[25] ಭಾಸನ ನಾಟಕಗಳಲ್ಲಿ ತೂರ್ಯ, ಶಂಖ, ಪಟಹ, ಡಿಂಡಿಮ, ವೀಣಾ, ಕಾಕಲೀ—ಇತ್ಯಾದಿ ವಿವಿಧ ವಾದ್ಯಗಳ ಹೆಸರು ಸೂಚಿಸಲ್ಪಟ್ಟಿವೆ. ಇವುಗಳಲ್ಲಿ 'ಶಂಖ' ಯುದ್ಧದಲ್ಲಿ ಉಪಯೋಗಿಸಲ್ಪಡುತ್ತಿತ್ತು.[26] ಪಟಹವನ್ನು ಯುವತಿಯರು ಹಬ್ಬಹಾಡಿಗಳಲ್ಲಿ ನುಡಿಸುವ ಸಂಪ್ರದಾಯವಿತ್ತು.[27] ಪ್ರಭಾತ ಸಮಯವನ್ನು ಸೂಚಿಸುವ ವಾದ್ಯವೂ ಇದಾಗಿತ್ತು.[28] ರಾಜರ ಮನೆಗಳಲ್ಲಿ ಶುಭಕಾರ್ಯವಾಗಲು, ಅದನ್ನು ಸೂಚಿಸಲು ಪಟಹವನ್ನೇ ಉಪಯೋಗಿಸುತ್ತಿದ್ದರು.[29] ಬಣ್ಣಬಣ್ಣಗಳಿಂದ ಕಂಗೊಳಿಸುವ ಡಿಂಡಿಮ ವಾದ್ಯ ನೃತ್ಯದಲ್ಲಿ ಉಪಯೋಗಿಸಲ್ಪಡುತ್ತಿತ್ತು.[30] ಕಾಕಲಿ ಚೋರರ ವಾದ್ಯ.[31] ಮನೆಯವರೆಲ್ಲರೂ ನಿದ್ರೆಮಾಡುತ್ತಿರುವರೇ ಎಂಬುದನ್ನು ತಿಳಿಯಲು ಈ ಅಲ್ಪ ಧ್ವನಿಯ ವಾದ್ಯವನ್ನು ಅವರು ಉಪಯೋಗಿಸುತ್ತಿದ್ದರು. ಉತ್ತಮ ಜಾತಿಯ ತಂತ್ರೀವಾದ್ಯಗಳಲ್ಲಿ ವೀಣೆಯ ಹೆಸರನ್ನು ಮಾತ್ರ ಕವಿ ಪದೇ ಪದೇ ಸೂಚಿಸಿ,

---

21 ಪ್ರತಿಜ್ಞಾ., ೨. ೧೩.

22 ಮಮ ಖಲು ತಾವತ್ ಗಾಯನ್ ಮನುಷ್ಯಃ ಸ್ತ್ರ್ಯಪಿ ಪಠಂತ್ಯುಭಯಮಾದರಂ ನ ದದಾತಿ ।
ಗಾಯಂ ಸ್ತಾವನ್ಮನುಷ್ಯೋ ರಕ್ತಸುಮನೋವೇಷ್ಟಿತ ಇವ ಪುರೋಹಿತೋ ದೃಢಂ ನ ಶೋಭತೇ ।
ಸ್ತ್ರ್ಯಪಿ ಪಠಂತೀ ಛಿನ್ನನಾಸಿಕೇವ ಧೇನುರತಿವಿರೂಪಾ ಭವತಿ । ಚಾರು., ೩. ಪು. ೨೨೪ 15–18.

23 ಅವಿ., ೩. ೧೩೯ 2; ಸ್ವಪ್ನ., ೪. ೩; ಸ್ವಪ್ನ. ೫, ೬; ಚಾರು., ೩. ೧.

24 ಬಾಲ., ೫. ೧೪.

25 ಬಾಲ., ೫. ೧೭.

26 ದೂ. ವಾ., ೧–೫೦ ; ಬಾಲ., ೧. ೨೫.

27 ಬಾಲ., ೩. ಪು. ೫೩೮ 4.

28 ಚಾರು., ೩. ಪು. ೨೩೦ 19–20.

29 ಪ್ರತಿಮಾ., ೧. ಪು. ೨೫೪ 84; ೧. ೫.

30 ಬಾಲ., ೩. ೩.

31 ಚಾರು., ೩. ೧೦.

ಮತ್ತೆ ಯಾವುದರ ಹೆಸರನ್ನೂ ಹೇಳದಿರುವುದು ಆಶ್ಚರ್ಯವೇ ಸರಿ.[32] ಇಷ್ಟರಿಂದಲೇ ಭಾಸನ ಕಾಲದಲ್ಲಿ ಇತರ ತಂತ್ರೀವಾದ್ಯಗಳು ಇರಲಿಲ್ಲವೆಂದು ಸಿದ್ಧಾಂತಮಾಡುವುದು ಸಾಹಸ. ಭಾಸನಿಗೆ ವೀಣೆ ಪ್ರಿಯತರವಾದ ವಾದ್ಯವಾಗಿರಬೇಕು. ಇದರ ಪ್ರಾಶಸ್ತ್ಯದ ಸೂಚನೆಗಾಗಿಯೇ ಇತರ ತಂತ್ರೀವಾದ್ಯಗಳ ಹೆಸರನ್ನಾತ ಎತ್ತಿಲ್ಲ. ವೀಣೆಯನ್ನು ನುಡಿಸುವ ವಿಧಾನವನ್ನು ಕವಿ ಒಂದೆಡೆ ವಿವರಿಸಿದ್ದಾನೆ.[33] ಬಹುಶಃ ವೀಣೆ ಈಗಿನ ಕಾಲದ ವೀಣೆಯಷ್ಟು ಉದ್ದ ಮತ್ತು ಗಾತ್ರವುಳ್ಳ ವಾದ್ಯ ವಿಶೇಷವಾಗಿದ್ದಿರಲಾರದು.[34] ತಂತ್ರೀವಾದ್ಯದಲ್ಲಿ ಕುಶಲರಾದಂತೆ ಕಂಠಗೀತದಲ್ಲಿಯೂ ಜನರು ದಕ್ಷರಾಗಿದ್ದರು.[35] ಬಾಯ ಹಾಡಿಕೆಯವರನ್ನು ಅನುಸರಿಸುತ್ತ ಇತರರು ತಂತ್ರೀವಾದ್ಯವನ್ನು ನುಡಿಸುವ ಪದ್ಧತಿಯೂ ಇತ್ತು.[36] ಬೃಂದಾವನದ ಗೋಪಿಕಾಸ್ತ್ರೀಯರ ಇಂಪಾದ ಗಾನಕ್ಕೆ 'ಬಾಲಚರಿತ'ದಲ್ಲಿ ಪದೇ ಪದೇ ಅನ್ವಯವು ದೊರಕುತ್ತದೆ.

ಇಷ್ಟಾದ ಮೇಲೆ ಈ ದಿವ್ಯ ಕಲೆಯಲ್ಲಿ ಭಾಸನ ಮತವೇನೆಂಬುದೇ ಸ್ವಾರಸ್ಯವಾದ ಪ್ರಶ್ನೆ. ಗೀತ ಸೌಖ್ಯದಾಯಿ; ಪರುಷವೇ ಗೀತಕ್ಕೆ ಮಾತೃಸ್ಥಾನ.[37] ನಟಿ ಹಾಡಿದಳೆಂದರೆ ರಂಗಸ್ಥಳ 'ಪ್ರಸಾದಿತ'ವಾಗುವುದು. ದುಃಖಿ ಹಾಡಲಸಾಧ್ಯ. 'ಜ್ಞಾತಿಕುಲದ ಅಸ್ವಾಸ್ಥ್ಯ'ವನ್ನು ಸ್ವಪ್ನದಲ್ಲಿ ಕಂಡು ಖೇದಪಡುತ್ತಿರುವ ನಟಿ ಹಾಡುವುದೆಂತು?[38] 'ಮುಖ' ಮತ್ತು 'ನಾಸಿಕ' ಜನಿತವಾದ ಧ್ವನಿಯು ಮೃದುವಾಗಿಯೂ ಸ್ಫುಟವಾಗಿಯೂ ಇರಬೇಕು.[39] ಗೀತ ತಾಳಬದ್ಧವಾಗಿದ್ದಲ್ಲಿ ಅದರ ರಮ್ಯತೆ ಹೆಚ್ಚುವುದು.[40] ಈ ತೆರನಾದ ಸಂಗೀತದ ಇಂಪಾದ ನಾದವೆಲ್ಲಿ! ಇದರ ಆಸ್ವಾದನೆಗೆ ಭಂಗ ತರುವ 'ಉಲೂಕ'ದ ಭೈರವ ಸ್ವರವೆಲ್ಲಿ! ಪಾಪ! ತಪಸ್ವಿ ಅವಿಮಾರಕ ಎರಡನ್ನೂ ಕೇಳಬೇಕಾದ ಪ್ರಸಂಗ ಒದಗಿತು![41] ತಂತ್ರೀಗೀತವಾಗಲೀ ಕಂಠಗೀತವಾಗಲೀ ಸುಶ್ರಾವ್ಯವಾಗಿರಬೇಕೆಂಬುದೇ ಭಾಸನ ಶ್ಲಾಘ್ಯಮತ.[42] ಗೀತದ ಸಾಹಿತ್ಯವನ್ನುಚ್ಚರಿಸುವಾಗ ಉಚಿತವಾದ ಅಭಿನಯವಿದ್ದಲ್ಲಿ ಸಂಗೀತ ಇನ್ನೂ ಶೋಭಿಸುವುದು. ನಾರದ ಹಾಡಿದರೆ, ವೇದಘೋಷಿಸಿದರೆ ಮಾಧುರ್ಯದ ಮಳೆ ಬಂದಂತೆ. ಯಾವ ತಂತ್ರೀವಾದ್ಯವಾದರೂ 'ಘೋಷವತಿ'ಯ ರೀತಿಯನ್ನನುಸರಿಸಬೇಕು. 'ಘೋಷವತಿ'ಯನ್ನು ನೋಡಿದರೆ

---

32 ಪ್ರತಿಜ್ಞಾ., ೧. ಪು. ೬೨ 37; ೨. ಪು. ೭೫18–19.

33 ಸ್ವಪ್ನ., ೫. ೬.
ಬಾಲ., ೧. ೪ "ತಂತ್ರೀಶ್ಚ ಘಟ್ಟಯಾಮಿ"; ೧. ೫ "ಕರಜಾಗ್ರಹತಾ ಚ ವೀಣಾ"
ಪ್ರತಿಜ್ಞಾ., ೨. ೧೨ "ಕರಜಮುಖೋಲ್ಲಿಖಿತಾಗ್ರಘೃಷ್ಟತಂತ್ರೀ"

34 ಸ್ವಪ್ನ., ೬. ೨. ಈ ಪದ್ಯದಲ್ಲಿ ಬರುವ 'ಶ್ರೋಣೀಸಮುದ್ವಹನ', 'ಸ್ತನಾಂತರ ಸುಖಾನ್ಯುಪಗೂಹಿತಾನಿ' ಎಂಬ ಪದಗಳಿಂದ ಈ ರೀತಿ ಊಹಿಸಬಹುದು.

35 ಅವಿ., ೩. ೬.

36 ಅವಿ , ೩. ೧೪.

37 ಅವಿ., ೩. ಪು. ೧೩೯ 2: 'ಸುಖೀ ಪುರುಷಃ ಗಾಂಧರ್ವಮನುಭವತಿ.'

38 ಪ್ರತಿಜ್ಞಾ., ೧. ಪು. ೫೭9.

39 'ತಾನಸ್ತು ಮಂದೋ ವಿಶದಪ್ರವೃತ್ತೋ ಜಾತಶ್ಚನಾದೋ ಮುಖನಾಸಿಕೇನ', ಅವಿ., ೩. ೬.

40 ಸ್ಥೂಲೋऽಪಿ ಹೇತುಃ ಕರತಾಲನಾದಃ". ಅವಿ., ೩. ೬.

41 ಅವಿ., ೩. ಪು. ೧೩೯20.

42 ಅವಿ., ೬. ೧೬2.

‘ಮಧುರ’; ಕೇಳಿದರೆ ‘ಶ್ರುತಿಸುಖ’. ತಂತಿಗಳನ್ನೊತ್ತಲು ವಿವಿಧ ರಾಗಗಳು ಸ್ವಾಭಾವಿಕವಾಗಿ ಏಳುವುವು! ಋಷಿಗತವಾದ ಮಂತ್ರವಿದ್ಯೆಯಂತೆ ತಂತ್ರೀನಾದ ಪರಹೃದಯವನ್ನು ವಶಪಡಿಸಿಕೊಳ್ಳಬೇಕು.[43] ಇಂತಹ ಶಕ್ತಿಯನ್ನು ಪಡೆದ ವೀಣೆಯನ್ನು ಕೊಟ್ಟುದನೆಯೆ ವಾಸವದತ್ತೆ ಉನ್ಮತ್ತೆಯಾಗುವುದೇನಚ್ಚರಿ? ಅಥವಾ ಇಂತಹ ವೀಣಾಗಾನವನ್ನು ಕೇಳಿ ಆನೆ ಪರವಶವಾಗುವುದರಲ್ಲೇನದ್ಭುತ? ಘೋಷವತಿಯ ಸವಿಧ್ವನಿ ಕಿವಿಗೆ ಬಿದ್ದೊಡನೆಯೇ ಶ್ರೇಷ್ಠ ಚಿತ್ರಪಟವೊಂದನ್ನು ಕಂಡಂತೆ ವತ್ಸನ ಹೃದಯದಲ್ಲಿ ವಾಸವದತ್ತಾ ವಿಷಯಿಕವಾದ ಭಾವನಾತರಂಗಗಳು ಏಳುತ್ತವೆ.[44] ಒಟ್ಟಿನಲ್ಲಿ ಗೀತ ಹೇಗಿರಬೇಕೆಂಬುದನ್ನು ಭಾಸ ‘ಚಾರುದತ್ತ’ದ ನಾಯಕನ ನುಡಿಯಿಂದ ಸ್ಪಷ್ಟಪಡಿಸುತ್ತಾನೆ.

ನಾಯಕಃ—ಸರ್ವಥಾ ಸುವ್ಯಕ್ತಂ ಗೀತಮ್। ಕುತಃ,

> ರಕ್ತಂ ಚ ತಾರ ಮಧುರಂ ಚ ಸಮಂ ಸ್ಫುಟಂ ಚ
> ಭಾವಾರ್ಪಿತಂ ಚ ನ ಚ ಸಾಭಿನಯಪ್ರಯೋಗಮ್।
> ಕಿಂ ವಾ ಪ್ರಶಸ್ಯ ವಿವಿಧೈರ್ಬಹು ತತ್ತದುಕ್ತ್ವಾ
> ಭಿತ್ಯಂತರಂ ಯದಿಭವೇದ್ಯುವತೀತಿ ವಿದ್ಯಾಮ್॥[45]

**ಎಸ್. ರಾಮಚಂದ್ರರಾವ್**

---

43 “ಶ್ರುತಿಸುಖಮಧುರಾ ಸ್ವಭಾವರಕ್ತಾ ಕರಜಮುಖೋಲ್ಲಿಖಿತಾಗ್ರಘೃಷ್ಟತಂತ್ರೀ।
ಋಷಿವಚನಗತೇವ ಮಂತ್ರವಿದ್ಯಾ ಗಜಹೃದಯಾನಿ ಬಲಾತ್ ವಶೀಕರೋತಿ॥”
ಪ್ರತಿಜ್ಞಾ., ೨. ೧೨.

44 ‘ಚಿರಪ್ರಸುಪ್ತಃ ಕಾಮೋ ಮೇ ವೀಣಯಾ ಪ್ರತಿಬೋಧಿತಃ’. ಸ್ವಪ್ನ., ೬. ೩.

45 ಚಾರು., ೩. ೨.

[ಪ್ರೊಫೆಸರ್ ದೇವಧರ್ ಅವರು ಪ್ರಕಟಿಸಿರುವ “ಭಾಸನಾಟಕಚಕ್ರಮ್” ಎಂಬ ಪುಸ್ತಕದಲ್ಲಿ ಅಂಕಿಗಳು ಸೂಚಿಸುವ ಪುಟವನ್ನೂ ವಾಕ್ಯವನ್ನೂ ಶ್ಲೋಕವನ್ನೂ ಗುರುತಿಸಬಹುದು]

# ಕನ್ನಡ ನಾಡಿನ ಪ್ರೌಢಶಿಕ್ಷಣ ಕನ್ನಡದಲ್ಲಿ

ಮೈಸೂರು ಸಂಸ್ಥಾನದಲ್ಲಿ ಹೈಸ್ಕೂಲ್ ಶಿಕ್ಷಣವನ್ನು ಕನ್ನಡದ ಮೂಲಕ ನಡೆಸುವ ಸುಧಾರಣೆಯು ಆಚರಣೆಗೆ ಬಂದು ಈಗ ಐದಾರು ವರ್ಷಗಳಾದುವು. ನಮ್ಮ ಸಂಸ್ಥಾನದ ಎಸ್.ಎಸ್.ಎಲ್. ಸಿ. ಪರೀಕ್ಷೆಗೆ ಕೂತುಕೊಳ್ಳುವ ವಿದ್ಯಾರ್ಥಿಗಳಲ್ಲಿ ಬಹು ಭಾಗ ಕನ್ನಡದಲ್ಲೇ ತಮ್ಮ ಚರಿತ್ರೆ, ಗಣಿತ, ವಿಜ್ಞಾನ ಮುಂತಾದ ವಿಷಯಗಳನ್ನು ವ್ಯಾಸಂಗ ಮಾಡುತ್ತಿರುವರು: ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುತ್ತಿರುವರು. ಈ ಹೊಸ ಕ್ರಮವು ಆರಂಭವಾದಾಗ ಅಧ್ಯಾಪಕರಿಗೆ ತೋರಿದ್ದ ಅಧೈರ್ಯವೂ ಸಂಕೋಚವೂ ಈಗ ಬಹಳಮಟ್ಟಿಗೆ ದೂರವಾಗಿವೆ. ಈ ಕ್ರಮವನ್ನು ಕೇವಲ ಪ್ರಯೋಗವೆಂದು ಭಾವಿಸುತ್ತಿದ್ದವರು ಕೆಲವರು. ಇದು ಆಚರಣೆಗೆ ಬರಬೇಕಾದ ಸುಧಾರಣೆಯೆಂದು ಬಯಸಿದವರು ಕೆಲವರು. ಇದು ಒಂದು ಪ್ರಯೋಗಮಾತ್ರವಾದ್ದು, ಇದು ನಿಷ್ಫಲವಾಯಿತೆಂದು ನಿರ್ಧರವಾದರೆ ಇದನ್ನು ರದ್ದುಮಾಡಬೇಕು ಎಂಬ ಕುತೂಹಲವಾಗಲೀ ಹವಣಿಕೆಯಾಗಲೀ ಈಗ ಯಾರಲ್ಲಿಯೂ ಇರಲಾರದು. ಈ ಸುಧಾರಣೆಯು ಸಾಧುವೆಂದೂ ಅನುಸರಣೀಯವೆಂದೂ ಬಹು ಜನರ ಮತ. ಕೆಲವು ಶಾಲೆಗಳಲ್ಲಿ ಇದನ್ನು ಅನುಷ್ಠಾನಕ್ಕೆ ತರಬಲ್ಲ ಅಧ್ಯಾಪಕರು ಸಿದ್ಧರಾಗಿಲ್ಲದಿರುವುದು ಒಂದು ದೊಡ್ಡ ಅಡ್ಡಿಯಾಗಿರುತ್ತದೆ. ಪೂರ್ವ ಸಂಪ್ರದಾಯವಾದ ಇಂಗ್ಲೀಷಿನಲ್ಲಿ ಕಲಿಯುವ ಕ್ರಮವನ್ನು ಕೈಬಿಡುವುದು ಅಪಾಯಕರವಾಗಬಹುದೆಂಬ ಶಂಕೆಯು ಇನ್ನೂ ಹಲಕೆಲವು ಹಿರಿಯರಲ್ಲಿಯೂ ಪೋಷಕರಲ್ಲಿಯೂ ಇರುವುದು ಮತ್ತೊಂದು ಅಡ್ಡಿ. ಆದರೆ ಬಹುಜನ ವಿದ್ಯಾರ್ಥಿಗಳು ಅನುಸರಿಸುವ ಮಾರ್ಗವನ್ನು ಇವರೂ ಕ್ರಮೇಣ ಒಪ್ಪುವುದರಲ್ಲಿ ಯಾವ ಸಂಶಯವೂ ಇಲ್ಲ. ಈ ಸುಧಾರಣೆಯು ಇನ್ನೂ ಹೆಚ್ಚಿಗೆ ವ್ಯಾಪಿಸುವುದಕ್ಕೆ ಬೇರೆ ಯಾವ ಆತಂಕವೂ ಇರುವಂತಿಲ್ಲ. ಪಠ್ಯ ಪುಸ್ತಕಗಳು ಸಿದ್ಧವಾಗಿವೆ. ವರ್ಷೇ ವರ್ಷೇ ನೂರಾರು ವಿದ್ಯಾರ್ಥಿಗಳು ಕನ್ನಡದಲ್ಲೇ ಪಾಠಗಳನ್ನು ಕಲಿತು ಕಾಲೇಜುಗಳಿಗೆ ಸೇರುತ್ತಿರುವರು. ಅಲ್ಲಿ ಇಂಗ್ಲೀಷು ಮೂಲಕ ವ್ಯಾಸಂಗಗಳನ್ನು ಮಾಡಿ ಪರೀಕ್ಷೆಗಳಲ್ಲಿ ಉತ್ತೀರ್ಣರಾಗುತ್ತಿರುವರು.

ಆದರೆ ಸಿದ್ಧಾಂತದ ದೃಷ್ಟಿಯಿಂದ ಹಲವರಲ್ಲಿ ಇದ್ದ ಶಂಕೆಗಳು ಈಗಲೂ ಸಂಪೂರ್ಣವಾಗಿ ನಿರ್ಮೂಲವಾಗಿಲ್ಲ. ಅವು ಮುಖ್ಯವಾಗಿ:

(೧) ಕನ್ನಡದ ಮೂಲಕ ಪಾಠಗಳನ್ನು ಕಲಿಯುವುದರಿಂದ ಇಂಗ್ಲೀಷು ಭಾಷೆಯ ಜ್ಞಾನವು ಕಡಮೆಯಾಗುವುದು.

(೨) ಕನ್ನಡದಲ್ಲಿ ಕಲಿತ ವಿದ್ಯಾರ್ಥಿಗಳು ಕಾಲೇಜುಗಳಿಗೆ ಹೋಗಿ ಇಂಗ್ಲೀಷಿನಲ್ಲಿ ಕಲಿಯಬೇಕಾದಾಗ ಕಷ್ಟಕ್ಕೆ ಗುರಿಯಾಗುವುದು.

ಕೆಲವು ವರ್ಷಗಳ ಹಿಂದೆ ನಮ್ಮ ಸಂಸ್ಥಾನದ ವಿದ್ಯಾಖಾತೆಯವರೇ ಒಂದು ಸಣ್ಣ ಸಂಶೋಧನೆಯನ್ನು ನಡೆಸಿದರು. ಇದಕ್ಕೆ ಸಂಬಂಧಪಟ್ಟ ಅಂಕಿಗಳನ್ನು, ಅಂದರೆ ೧೯೩೪, ೧೯೩೫, ೧೯೩೬ ವರ್ಷಗಳಲ್ಲಿ ನಡೆದ ಎಸ್.ಎಸ್.ಎಲ್.ಸಿ. ಪರೀಕ್ಷೆ

ಗಳಲ್ಲಿ ಕುಳಿತಿದ್ದ ವಿದ್ಯಾರ್ಥಿಗಳಲ್ಲಿ ಕನ್ನಡದ ಮೂಲಕ ಉತ್ತರಗಳನ್ನು ಬರೆದ ವಿದ್ಯಾರ್ಥಿಗಳ ಸರಾಸರಿ ಅಂಕಿಗಳನ್ನು ೧೯೩೦ನೆಯ ಇಸವಿಯ ಜನವರಿ ೩೦ನೆಯ ತಾರೀಖು ಪ್ರಕಟವಾದ ಮೈಸೂರು ಗೆಜೆಟಿನಲ್ಲಿ ಪ್ರಕಟಿಸಿದರು. ಕನ್ನಡದ ಮೂಲಕ ಕಲಿತ ವಿದ್ಯಾರ್ಥಿಗಳು ಎಲ್ಲ ವಿಷಯಗಳಲ್ಲೂ ಹೆಚ್ಚು ಸಂಖ್ಯೆಗಳನ್ನು (ಸರಾಸರಿ) ಪಡೆದಿದ್ದರು. ಇದೇನೂ ಸಹಜವೆಂದೇ ಹೇಳಬೇಕು. ಅಷ್ಟೇ ಅಲ್ಲ; ಇವರು ಇಂಗ್ಲೀಷಿನಲ್ಲಿಯೂ ಸರಾಸರಿಯಲ್ಲಿ ಇತರರಿಗಿಂತಲೂ ಹೆಚ್ಚು ಸಂಖ್ಯೆಯನ್ನೇ ಪಡೆದಿದ್ದರು.

ಆದರೆ ಈ ಸುಧಾರಣೆಯಲ್ಲಿಯೇ ವಿಶ್ವಾಸವಿಲ್ಲದವರಿಗೆ ಈ ಅಂಕಿಗಳ ವಿಮರ್ಶೆಯಲ್ಲಿ ಏನೋ ದೋಷವಿರುವುದೆಂದು ಕಾಣುವುದು. ಇನ್ನೂ ಕೂಲಂಕಷವಾಗಿ ಶೋಧಿಸಿ ಈ ನಿರ್ಣಯಕ್ಕೆ ಬರಬೇಕೆಂದು ಅವರ ವಾದ. ನಮ್ಮ ಶಾಲೆಗಳ ವಿದ್ಯಾರ್ಥಿಗಳಲ್ಲಿ ಇಂಗ್ಲೀಷು ಭಾಷಾಜ್ಞಾನ ಕುಂದಿರುವುದಕ್ಕೆ ಈ ಸುಧಾರಣೆಯು ಒಂದು ಕಾರಣವೆಂದು ಅವರ ಮತ.

ಆದರೆ ಆಧುನಿಕ ಶಿಕ್ಷಣವೆಂದರೆ ಇಂಗ್ಲೀಷು ಭಾಷಾಜ್ಞಾನವೆಂದೆಣಿಸುವುದು ಬಹಳ ಸಂಕುಚಿತ ಭಾವನೆ. ಆಧುನಿಕ ಜ್ಞಾನವನ್ನು ಉತ್ತಮ ರೀತಿಯಲ್ಲಿ ಪಡೆದಿರುವ ಇಂಗ್ಲೀಷರಲ್ಲದ ಇತರ ಯಾವ ಜನಾಂಗದಲ್ಲಿಯೂ ಈ ಬಗೆಯ ಸಂಕುಚಿತ ಧ್ಯೇಯವಿಲ್ಲ. ಜರ್ಮನಿ, ಫ್ರಾನ್ಸ್, ಜಪಾನ್ ಮುಂತಾದ ದೇಶಗಳಲ್ಲಿ ಇಂಗ್ಲೀಷು ವ್ಯಾಸಂಗಕ್ಕೆ ಸಾಕಾದಷ್ಟು ಅವಕಾಶವಿದ್ದರೂ ಅದೇ ಶಿಕ್ಷಣದ ಸರ್ವಸ್ವವೆಂದು ಅವರು ಭಾವಿಸುವುದಿಲ್ಲ. ಆದರೆ ನಮ್ಮ ದೇಶದಲ್ಲಿ ಒಂದು ಶತಮಾನದ ಪರಿಪಾಠಿಯೂ ನಮ್ಮ ರಾಜಕೀಯ ಸ್ಥಿತಿಯೂ ಈ ಸಂಕುಚಿತ ದೃಷ್ಟಿಗೆ ಕಾರಣವಾಗಿವೆ.

ಹೈಸ್ಕೂಲಿನಲ್ಲಿ ಕನ್ನಡದ ಮೂಲಕ ಶಿಕ್ಷಣ ಹೊಂದಿದ ವಿದ್ಯಾರ್ಥಿಗಳು ಕಾಲೇಜುಗಳಲ್ಲಿ ಆ ವಿಷಯಗಳನ್ನು ಇಂಗ್ಲೀಷು ಮೂಲಕ ಕಲಿಯಬೇಕಾದಾಗ ತೊಂದರೆಗೆ ಈಡಾಗುವರಲ್ಲವೇ ಎನ್ನುವುದನ್ನು ವಿಚಾರಮಾಡಬೇಕು. ಈ ವಿಷಯವನ್ನು ಇತ್ಯರ್ಥಮಾಡಲು ಅಂಕಿಗಳ ಸಂಶೋಧನೆಯನ್ನು ಯಾರೂ ಮಾಡಿದಂತಿಲ್ಲ. ಆದರೆ ಈ ವಿಷಯದಲ್ಲಿ ಹಿಂದಿನ ಪರಿಸ್ಥಿತಿಯನ್ನೂ ಈಗಿನದನ್ನೂ ಹೋಲಿಸಬಹುದು. ಕೆಲವು ವರ್ಷಗಳ ಹಿಂದೆ ಲೋವರ್ ಸೆಕೆಂಡರಿ ಪರೀಕ್ಷೆ ಮಾಡಿಕೊಂಡು ಹೈಸ್ಕೂಲಿಗೆ ಸೇರುವ ವಿದ್ಯಾರ್ಥಿಗಳು ಎಲ್ಲವನ್ನೂ ಇಂಗ್ಲೀಷಿನಲ್ಲಿಯೇ ಕಲಿಯುವ ನಿರ್ಬಂಧವಿತ್ತು. ಹೈಸ್ಕೂಲಿನಲ್ಲಿ ಮೊದಲನೆಯ ತರಗತಿಯಲ್ಲಿರುವ ವಿದ್ಯಾರ್ಥಿಗಳು ಪಡುತ್ತಿದ್ದ ಕಷ್ಟಕ್ಕೂ, ಹೈಸ್ಕೂಲ್ ಶಿಕ್ಷಣವನ್ನು ಮುಗಿಸಿ, ಇ.ಸಿ.ಪಿ.ಎಸ್. ಪಡೆದ ವಿದ್ಯಾರ್ಥಿಗಳು ಕಾಲೇಜಿನಲ್ಲಿ ಮೊದಲನೆಯ ತರಗತಿಯಲ್ಲಿ ಈಗ ಪಡುವ ಕಷ್ಟಕ್ಕೂ ಹೋಲಿಸಬೇಕು. ಇಂಗ್ಲೀಷಿನಲ್ಲಿ ೪೦ ಅಂಕಿಗಳನ್ನು ಪಡೆದವರೇ ಸೇರಬಹುದೆಂಬ ನಿಯಮವಿದೆ. ಇಂತಹ ವಿದ್ಯಾರ್ಥಿಗಳು ಎಲ್ಲಾ ವಿಷಯಗಳನ್ನೂ ಇಂಗ್ಲೀಷು ಮುಖಾಂತರ ಕಲಿಯಲು ಅಷ್ಟು ತೊಂದರೆಯಾಗಲಾರದೆಂದು ಧಾರಾಳವಾಗಿ ಹೇಳಬಹುದು. ಆರಂಭದಲ್ಲಿ (ಹೊಸ ಪಾದರಕ್ಷೆಗಳನ್ನು ಹಾಕಿಕೊಳ್ಳುವವರು ಅನುಭವಿಸುವಂತೆ) ಒಂದು ಬಗೆಯ ತೊಂದರೆಯನ್ನು ಅನುಭವಿಸಿದರೂ ಕಾಲಕ್ರಮದಲ್ಲಿ ಅಭ್ಯಾಸದಿಂದ ಇಂಗ್ಲೀಷನ್ನೂ ಸರಿಯಾಗಿಯೇ ಹೊಂದಿಸಿಕೊಳ್ಳುವರು. ಆದರೆ ವಸ್ತುತಃ ಇವರ

ಇಂಗ್ಲೀಷು ಜ್ಞಾನವೂ ಸಾಲದೆಂದು ನಿರ್ಧರವಾಗುವ ಪಕ್ಷಕ್ಕೆ, ಇಂಟರ್‌ಮೀಡಿಯೆಟ್ಟಿನಲ್ಲಿಯೂ ವಿಷಯುಗಳನ್ನು ಕನ್ನಡದ ಮೂಲಕ ಕಲಿಸುವುದೇ ತಕ್ಕ ಉಪಾಯ. ಈ ವಿಚಾರವನ್ನು ವಿಶ್ವವಿದ್ಯಾನಿಲಯದ ಅಧಿಕಾರಿಗಳು ನಡೆಸಿಯೇ ಇದ್ದಾರೆ.

ಇದುವರೆಗೂ ನಡೆದಿರುವ ಸುಧಾರಣೆಯು ಕೇವಲ ಶಿಕ್ಷಣವಿಧಾನದ ದೃಷ್ಟಿಯಿಂದ ಮಾಡಿದುದೆಂದು ಹೇಳಬಹುದು. ಆದರೆ ಕನ್ನಡ ಭಾಷೆಯ ಪ್ರಾಶಸ್ತ್ಯ, ಅದರ ಭವಿಷ್ಯ, ಕನ್ನಡ ಜನತೆಯ ಸಂಸ್ಕೃತಿಯ ಅಭ್ಯುದಯ — ಈ ದೃಷ್ಟಿ ವಿಶೇಷವಾಗಿ ಸುಧಾರಕರ ಮನಸ್ಸಿನಲ್ಲಿ ಇದ್ದಂತೆ ತೋರುವುದಿಲ್ಲ. ಆದರೆ ಎಲ್ಲೆಲ್ಲಿಯೂ ಪ್ರಬಲವಾದ ಮಾರ್ಪಾಟುಗಳೂ ಹೊಸ ಯೋಜನೆಗಳೂ ನಡೆಯುತ್ತಿರುವ ಈ ಕಾಲದಲ್ಲಿ ಕನ್ನಡ ದೇಶದ ಮುಂದಿನ ಶಿಕ್ಷಣ ವ್ಯವಸ್ಥೆ ಉತ್ತರೋತ್ತರದಲ್ಲಿ ಯಾವ ರೂಪವನ್ನು ತಾಳಬೇಕೆನ್ನುವ ವಿಚಾರವು ಅಪ್ರಸ್ತುತವಾಗಲಾರದು. ಮತ್ತೊಂದು ಹೆಜ್ಜೆಯನ್ನು ಮುಂದಿಡಲು ಕ್ಷಿಪ್ರದಲ್ಲಿಯೇ ಸಾಧ್ಯವಾಗದೆ ಹೋಗಬಹುದು. ಆದರೆ ನಮ್ಮ ಗುರಿಯಾವುದು, ನಾವು ನಡೆಯಬೇಕೆಂದಿರುವ ಮಾರ್ಗ ಯಾವುದು, ಎನ್ನುವ ವಿಚಾರವನ್ನು ಮಾಡುವುದು ಅಪ್ರಾಸಂಗಿಕವಲ್ಲ.

ಬಿ.ಎ., ಬಿ.ಎಸ್‌ಸಿ. ಮುಂತಾದ ಪ್ರೌಢ ತರಗತಿಗಳಲ್ಲಿಯೂ ಕನ್ನಡದ ಮೂಲಕ ವ್ಯಾಸಂಗಮಾಡುವ ಅವಕಾಶವನ್ನು ಏತಕ್ಕೆ ಕೊಡಬಾರದು? ಇದಕ್ಕೆ ಬೇಕಾದ ಗ್ರಂಥಸಾಮಗ್ರಿ ಈಗ ಸದ್ಯದಲ್ಲಿ ಇಲ್ಲದಿದ್ದರೂ, ಇದನ್ನು ಒದಗಿಸುವುದು ಸಾಧ್ಯವೆಂದು ಎಲ್ಲರೂ ಒಪ್ಪಬಹುದಾಗಿದೆ. ಈಗಾಗಲೇ ಪ್ರಕಟವಾಗಿರುವ, ಆಗುತ್ತಿರುವ, ಪುಸ್ತಕಗಳೂ ಲೇಖನಗಳೂ ಆಶಾಜನಕವಾಗಿವೆ. ಕಾಲೇಜುಗಳ ಅಧ್ಯಾಪಕ ವರ್ಗದಲ್ಲಿ ಕನ್ನಡವನ್ನು ಬಳಸುವ ಅಭ್ಯಾಸವು ಹೆಚ್ಚುತ್ತಲಿದೆ. ಕನ್ನಡ ಭಾಷೆ ಆಧುನಿಕ ವಿಜ್ಞಾನಕ್ಕೂ ಶಾಸ್ತ್ರಗಳಿಗೂ ಒಗ್ಗುವುದೇ ಎಂದು ತಿಳಿದವರಾರೂ ಈಗ ಶಂಕಿಸಬೇಕಾದ ಅಗತ್ಯವಿಲ್ಲ.

ವಿಶ್ವವಿದ್ಯಾನಿಲಯದ ಪ್ರೌಢ ವರ್ಗಗಳಲ್ಲಿ ಕನ್ನಡದ ಮೂಲಕ ವ್ಯಾಸಂಗವನ್ನು ಮಾಡಲು ಅವಕಾಶವನ್ನೇರ್ಪಡಿಸುವುದು ಸಾಧ್ಯವಾದರೂ ಇದು ಯುಕ್ತವೇ ಎನ್ನುವ ವಿಷಯದಲ್ಲಿ ಏಕಮತವಿಲ್ಲದೆ ಹೋಗಬಹುದು. ನಮ್ಮ ವಿಶ್ವವಿದ್ಯಾನಿಲಯದ ಪದವೀಧರರು ಹೊರಗಣ ಪ್ರಪಂಚದೊಂದಿಗೆ ವ್ಯವಹಾರವನ್ನು ನಡೆಸುವ ಅವಕಾಶವನ್ನೂ ಶಕ್ತಿಯನ್ನೂ ಕಳೆದುಕೊಳ್ಳಲಾರರೇ ಎನ್ನುವುದು ಸಹಜವಾದ ಶಂಕೆಯೇ ಸರಿ. ಆದರೆ ಈ ಸಂದರ್ಭದಲ್ಲಿ ಇಂಗ್ಲೀಷರಲ್ಲದ ವಿದ್ವಾಂಸರು ಇತರ ದೇಶಗಳಲ್ಲಿ ಯಾವ ಭಾಷೆಯಲ್ಲಿ ವ್ಯಾಸಂಗ ಮಾಡುವರೆನ್ನುವುದನ್ನು ವಿಚಾರ ಮಾಡಬಹುದು. ಇಂಗ್ಲೀಷು ಭಾಷೆ ರೂಢಿಯಲ್ಲಿರುವ ದೇಶಗಳಲ್ಲಿ ಮಾತ್ರ ಇಂಗ್ಲೀಷಿನಲ್ಲಿ ಪ್ರೌಢ ವ್ಯಾಸಂಗವಾಗುವುದೇ ವಿನಾ, ಭಾರತವನ್ನು ಬಿಟ್ಟು ಉಳಿದ ಎಲ್ಲ ನಾಗರಿಕ ಜನಾಂಗಗಳಲ್ಲಿಯೂ ತಮ್ಮ ತಮ್ಮ ದೇಶಭಾಷೆಗಳಲ್ಲಿಯೇ ಆಗುವುವು. ಪ್ರೌಢ ವಿಷಯುಗಳನ್ನು ಕಲಿಯುತ್ತಿರುವ ವಿದ್ಯಾರ್ಥಿಗಳು ಒಂದೆರಡು ಅನ್ಯಭಾಷೆಗಳನ್ನು (ಯೂರೋಪಿನಲ್ಲಿ ಮುಖ್ಯವಾಗಿ ಜರ್ಮನ್, ಫ್ರೆಂಚು ಭಾಷೆಗಳನ್ನು ಕಲಿಯುವರು) ಕಲಿತು ಆ ಭಾಷೆಗಳಲ್ಲಿ ಸಿಕ್ಕುವ ಶಾಸ್ತ್ರೀಯ ಪುಸ್ತಕಗಳನ್ನೂ ನೋಡುವುದುಂಟು. ಅದೇ ರೀತಿ ನಮ್ಮ ವಿದ್ಯಾರ್ಥಿಗಳೂ ಅನಿವಾರ್ಯವಾಗಿ

ಒಂದೆರಡು ಅನ್ಯಭಾಷೆಗಳನ್ನು, ಮುಖ್ಯವಾಗಿ ಇಂಗ್ಲೀಷನ್ನು, ಕಲಿಯಬೇಕು. ಗಣಿತ ಮತ್ತು ವಿಜ್ಞಾನ ಶಾಸ್ತ್ರಗಳಲ್ಲಿ ಭಾಷಾಭಾಗವು ಬಹಳ ಕಡಮೆ. ಈ ಶಾಸ್ತ್ರಗಳ ಪಾರಿಭಾಷಿಕ ಶಬ್ದಗಳನ್ನು ದೇಶಭಾಷೆಯಲ್ಲಿಯೂ ಇಂಗ್ಲೀಷಿನಲ್ಲಿಯೂ ಕಲಿಯ ಬಹುದು. ಈ ಪದ್ಧತಿಯನ್ನು ಅನುಸರಿಸುವುದರಿಂದ ನಮ್ಮ ಪ್ರೌಢತರಗತಿಯ ವಿದ್ಯಾರ್ಥಿಗಳು ಹೊರಗಣ ದೇಶಗಳೊಂದಿಗೆ ಬೇಕಾದಷ್ಟು ಸಂಬಂಧವನ್ನು ಬೆಳೆಸುವುದಕ್ಕೆ ಯಾವ ಅಡ್ಡಿಯೂ ಇರಲಾರದು.

ಈ ಪಾರಿಭಾಷಿಕಶಬ್ದಗಳನ್ನು ದೇಶಭಾಷೆಯಲ್ಲಿ ಕಲಿಯಬೇಕೆಂದು ಮೇಲೆ ಹೇಳಿರುವ ಮಾತನ್ನು ಸ್ವಲ್ಪ ವಿಶದಗೊಳಿಸಬೇಕು. ಈಗ ಭಾರತದ ಎಲ್ಲ ಪ್ರಾಂತಗಳಲ್ಲಿಯೂ ತಮ್ಮ ತಮ್ಮ ಪ್ರಾಂತಭಾಷೆಗಳಲ್ಲಿ ಪಾರಿಭಾಷಿಕ ಶಬ್ದಗಳನ್ನು ನಿರ್ಮಾಣಮಾಡಿ ಪಠ್ಯಪುಸ್ತಕಗಳನ್ನು ಬರೆಯುತ್ತಲಿರುವರು. ಆದರೆ ಇಡಿಯ ಭಾರತದೇಶದಲ್ಲಿ ಈ ಪಾರಿಭಾಷಿಕ ಶಬ್ದಗಳು ಏಕರೂಪವನ್ನು ತಾಳುವುದು ಅತ್ಯವಶ್ಯಕವಾದ ಸುಧಾರಣೆ. ಹಾಗಿಲ್ಲವಾದರೆ ಒಂದು ಪ್ರಾಂತದ ವಿದ್ಯಾರ್ಥಿಗಳು ಮತ್ತೊಂದು ಪ್ರಾಂತದ ವಿದ್ಯಾರ್ಥಿಗಳೊಂದಿಗೆ ವಿಚಾರವಿನಿಮಯ ಮಾಡುವುದು ಕಷ್ಟವಾಗುತ್ತದೆ. ಕನ್ನಡ, ತೆಲುಗು, ತಮಿಳು, ಮರಾಠಿ, ಬಂಗಾಳಿ, ಹಿಂದೀ ಮುಂತಾದ ಭಾಷೆಗಳಲ್ಲಿ ಬಹುಮಟ್ಟಿಗೆ ಸಂಸ್ಕೃತದ ಸಹಾಯದಿಂದ ಅನೇಕ ಪಾರಿಭಾಷಿಕ ಶಬ್ದಗಳು ನಿರ್ಮಾಣವಾಗಿರುವುವು. ಪ್ರಾಯಶಃ ತಮಿಳಿನಲ್ಲಿ ದ್ರಾವಿಡ ಭಾಷೆಯ ಕೆಲವು ಶಬ್ದಗಳನ್ನು ಮಾಡಿರುವರು. ಉಸ್ಮಾನಿಯಾ ವಿಶ್ವವಿದ್ಯಾ ನಿಲಯದವರು ಅರಬ್ಬಿ, ಪಾರಸಿ ಭಾಷೆಗಳ ಸಹಾಯದಿಂದ ಇಂತಹ ಶಬ್ದಗಳನ್ನು ಸಿದ್ಧಗೊಳಿಸಿರುವರು. ಎಲ್ಲ ಪ್ರಾಂತಗಳಿಂದಲೂ ಆರಿಸಿದ ವಿದ್ವಾಂಸರಿಂದ ಕೂಡಿದ ಸಮಿತಿಯನ್ನು ಏರ್ಪಾಡುಮಾಡಿ, ಈ ಎಲ್ಲ ಪಾರಿಭಾಷಿಕ ಶಬ್ದಗಳಿಗೆ ಒಂದು ರೂಪವನ್ನು ಕೊಡುವುದು ಅತ್ಯವಶ್ಯಕ. ಇವು ಎಲ್ಲ ಪ್ರಾಂತಗಳಲ್ಲೂ ಬಳಕೆಗೆ ಬರಬೇಕು. ಮತ್ತು ಈ ಭಾರತೀಯ ಪಾರಿಭಾಷಿಕ ಶಬ್ದಗಳೊಂದಿಗೆ ಇಂಗ್ಲೀಷು ಶಬ್ದಗಳನ್ನೂ ನಮ್ಮ ವಿದ್ಯಾರ್ಥಿಗಳು ಕಲಿಯಬೇಕು. ಹೀಗೆ ಮಾಡಿದರೇ ಅನ್ಯಪ್ರಾಂತಗಳೊಂದಿಗೂ ಅನ್ಯದೇಶಗಳೊಂದಿಗೂ ನಮ್ಮ ಪ್ರಾಂತದ ವಿದ್ಯಾ ವಂತರು ಸಂಬಂಧವನ್ನು ಬೆಳೆಸಬಲ್ಲರು.

ನಮ್ಮ ದೇಶದಲ್ಲಿ ಅನೇಕ ಭಾಷೆಗಳಿರುವುದರಿಂದ ಪ್ರಾಂತಭಾಷೆಗಳ ವ್ಯವಸಾಯವೂ, ಇವುಗಳ ಮೇಲಣ ಅಭಿಮಾನವೂ ದೇಶದ ಒಟ್ಟು ಐಕ್ಯಭಾವ ವನ್ನು ಹೋಗಲಾಡಿಸಿ, ಹಲವು ಭಾಷೆಗಳ ಗೊಂದಲವನ್ನು ಏಳಿಸುವುವೆಂದು ಕೆಲವರ ಭಯವಿರುತ್ತದೆ. ನಮ್ಮ ದೇಶದಲ್ಲಿ ಅನೇಕ ಭಾಷೆಗಳಿರುವುವೆನ್ನುವ ಪ್ರತೀತಿಯನ್ನು ನಾವು ಮೊದಲು ಪರೀಕ್ಷಿಸಿ ಸತ್ಯಾಂಶವನ್ನು ಗ್ರಹಿಸಬೇಕು. ಖಾನೇಸುಮಾರಿಯ ಲೆಕ್ಕದ ಪ್ರಕಾರ ೨೦೦ಕ್ಕೆ ಮಿಗಿಲಾಗಿಯೇ ಭಾಷೆಗಳ ಸಂಖ್ಯೆಯಿದ್ದರೂ, ಚೆನ್ನಾಗಿ ರೂಪುಗೊಂಡು ಉತ್ತಮ ಸಾಹಿತ್ಯದಿಂದ ಕೂಡಿದ ಗ್ರಾಂಥಿಕ ಭಾಷೆಗಳು ೧೨–೧೩ಕ್ಕೆ ಹೆಚ್ಚಾಗಿಲ್ಲ. ಉಳಿದುವೆಲ್ಲವೂ ಗ್ರಾಂಥಿಕ ಭಾಷೆಗಳಲ್ಲ — ಕೆಲವು ಸಾವಿರ ಜನರು ಮಾತ್ರ ಆಡುವ ಭಾಷೆ. ಹಿಮಾಲಯದ ತಪ್ಪಲಿನಲ್ಲಿಯೂ, ಕೆಲವು ಪ್ರಾಂತಗಳ ಮಲೆಸೀಮೆಗಳಲ್ಲೂ ವಾಸಿಸುವ ಅನಾಗರಿಕ

ಪಂಗಡಗಳು ಆಡುವ ಭಾಷೆಗಳನ್ನು ಬೇರೆ ಬೇರೆಯಾಗಿ ಎಣಿಕೆಗೆ ತೆಗೆದುಕೊಂಡು ದರಿಂದ ಇಷ್ಟು ದೊಡ್ಡ ಸಂಖ್ಯೆ ಸಿದ್ಧವಾಯಿತು. ಸುಮಾರು ೪೫ ಕೋಟಿ ಜನರು ವಾಸಿಸುವ ಭೂಖಂಡದಲ್ಲಿ ೧೨–೧೩ ಭಾಷೆಗಳು ಬಹಳ ಹೆಚ್ಚೆಂದು ನಾವು ಕುಗ್ಗಬೇಕಾದುದಿಲ್ಲ. ಪ್ರಪಂಚದ ಇತರ ದೇಶಗಳಲ್ಲಿ ಐದಾರು ಭಾಷೆಗಳನ್ನು ಬಿಟ್ಟರೆ ಉಳಿದುವೆಲ್ಲವೂ ನಮ್ಮ ಅನೇಕ ಪ್ರಾಂತ ಭಾಷೆಗಳಷ್ಟೇ ವ್ಯಾಪ್ತಿಯುಳ್ಳುವು. ಅಲ್ಲದೆ, ನಮ್ಮ ಪ್ರಾಂತ ಭಾಷೆಗಳಲ್ಲಿರುವ ಪರಸ್ಪರ ಸಾಮ್ಯ ಸಂಬಂಧಗಳೂ ಆ ಭಾಷೆಗಳಲ್ಲಿ ದುರ್ಲಭ.

ಇಷ್ಟು ಪ್ರಾಂತ ಭಾಷೆಗಳಿದ್ದರೂ ಹಿಂದಿನ ಕಾಲದಿಂದ ದೇಶದ ಏಕತೆಯನ್ನು (ಧಾರ್ಮಿಕ ದೃಷ್ಟಿಯಿಂದ ಮುಖ್ಯವಾಗಿ) ಸಾಧಿಸಲು ನಮ್ಮ ಪೂರ್ವಿಕರು ಅನೇಕ ಸಂಪ್ರದಾಯಗಳನ್ನಿಟ್ಟುಕೊಂಡಿದ್ದರು. ಭಾರತವು ಚತುಸ್ಸಾಗರ ಪರಿವೃತವಾದ ಒಂದು ದೇಶವೆಂಬ ಭಾವನೆಯನ್ನು ಜನರ ಮನಸ್ಸಿನಲ್ಲಿ ಮೂಡುವಂತೆ ಧಾರ್ಮಿಕ ಭಾವನೆಗಳನ್ನು ಹಿಂದಿನ ಕಾಲದಿಂದಲೂ ಉಂಟುಮಾಡುತ್ತ ಬಂದಿರುವರು. ಆದರೆ ರಾಜಕೀಯದಲ್ಲಿಯೂ ಸಾಮಾಜಿಕ ಜೀವನದಲ್ಲಿಯೂ ಈ ರೀತಿಯ ಐಕ್ಯಸಿದ್ಧಿಯು ಅಷ್ಟು ಸುಲಭವಾಗಿರಲಿಲ್ಲ. ಇದಕ್ಕೆ ದೇಶದ ವೈಶಾಲ್ಯವೇ ದೊಡ್ಡ ಅಡ್ಡಿ. ಈಗಿನ ಕಾಲದಲ್ಲಿ ವ್ಯಾವಹಾರಿಕ ಕ್ಷೇತ್ರದಲ್ಲಿ ಈ ಐಕ್ಯವು ಬೆಳೆಯುವಂತೆ ನಮ್ಮ ಮುಖಂಡರು ಶ್ರಮಿಸುತ್ತಿರುವರು. ಪ್ರಾಂತಗಳ ಜೀವನವು ಸರ್ವಾಂಗ ಪುಷ್ಟವಾಗಿ ಬೆಳೆಯುವುದಕ್ಕೂ ಇಡಿಯ ದೇಶದ ಏಕತೆಗೂ ಪರಸ್ಪರ ವಿರೋಧ ಬಾರದಂತೆ ವರ್ತಿಸುವುದೇ ಮುಂದಿನ ಭಾರತ ಪ್ರಜೆಗಳ ದೊಡ್ಡ ಸಮಸ್ಯೆ.

ಆದರೆ ಸಾಂಸ್ಕೃತಿಕ ಬೆಳವಣಿಗೆಯು ಎಲ್ಲ ಪ್ರಾಂತಗಳಲ್ಲಿಯೂ ಆಯಾ ಪ್ರಾಂತ ಭಾಷೆಗಳ ಮುಖಾಂತರವೇ ಆಗಬೇಕು. ಯಾವ ಅನ್ಯ ಭಾಷೆಯಿಂದಲೂ ಇದು ಸಾಧ್ಯವಾಗಲಾರದು. ಧರ್ಮಪ್ರವರ್ತಕರು ಸಂಸ್ಕೃತ, ಅರಬ್ಬಿ, ಪಾರಸಿ–ಮುಂತಾದ ಪುರಾತನವೂ ಪವಿತ್ರವೂ ಆದ ಭಾಷೆಗಳನ್ನು ಕಲಿಯುವರು. ವ್ಯವಹಾರದ ಅನುಕೂಲಕ್ಕಾಗಿ ಹಿಂದುಸ್ತಾನೀ, ಇಂಗ್ಲೀಷು ಭಾಷೆಗಳನ್ನು ಅನೇಕರು ಕಲಿಯುವರು. ಆದರೆ ಸ್ವತಂತ್ರ ಭಾರತದಲ್ಲಿ ಪ್ರತಿಯೊಂದು ಪ್ರಾಂತದ ಶಿಕ್ಷಣ, ಸಾಹಿತ್ಯ, ಸಂಗೀತಗಳಿಗೆ—ಒಟ್ಟಿನಲ್ಲಿ ಜನಸಾಮಾನ್ಯ ಸಂಸ್ಕೃತಿಗೆ—ಪ್ರಾಂತ ಭಾಷೆಯೇ ಮಾತೃಕೆಯಾಗಿರಬೇಕು. ಇಲ್ಲವಾದರೆ ನಮ್ಮ ಸಾಂಸ್ಕೃತಿಕ ಬೆಳವಣಿಗೆಯು ಜನಸಾಮಾನ್ಯಕ್ಕೆ ಪ್ರಯೋಜನವನ್ನು ಕೊಡಲಾರದು. ಜನಸಮುದಾಯದ ಜೀವನವು ಪುಷ್ಟವಾಗಲಾರದು.

ಒಂದೊಂದು ಪ್ರಾಂತದಲ್ಲಿಯೂ ಆ ಪ್ರಾಂತದ ಭಾಷೆಯನ್ನು ಮಾತೃಭಾಷೆಯನ್ನಾಗಿ ಆಡದ ಜನರಿರುವರು; ಅನ್ಯಮತೀಯರಿರುವರು. ಇವರ ಸಂಖ್ಯೆ ಸಣ್ಣದಾದರೂ ಇವರ ಸಮಸ್ಯೆ ದೊಡ್ಡದು. ಈ ಸಮಸ್ಯೆಯನ್ನು ಬಗೆಹರಿಸುವುದೇ ಎಲ್ಲ ಆಡಳಿತದವರಿಗೂ ಪ್ರಬಲವಾದ ಚಿಂತೆಯಾಗಿದೆ. ಈ ಸಂಖ್ಯೆಯು ಸಾಕಾದಷ್ಟು ಇರುವ ಪ್ರದೇಶಗಳಲ್ಲಿ ಇವರಿಗಾಗಿಯೇ ವಿಶೇಷವಾದ ಶಿಕ್ಷಣ ವ್ಯವಸ್ಥೆಯು ಇರಬೇಕಾಗುವುದು. ಇವರ ಜೀವನಕ್ಕೂ ಬೆಳವಣಿಗೆಗೂ ತಕ್ಕ ಏರ್ಪಾಡನ್ನು ಮಾಡುವುದು ಆಡಳಿತದವರ ಕರ್ತವ್ಯವಾಗುವುದು. ಆದರೆ

ಇಂತಹವರು ಸಾಧ್ಯವಾದ ಮಟ್ಟಿಗೆ ತಾವು ನೆಲಸಿರುವ ಪ್ರಾಂತದ ಭಾಷೆಯನ್ನು ಕಲಿತು ಆ ಪ್ರಾಂತದ ಜನಜೀವನದೊಂದಿಗೆ ಬೆರೆತು ವಾಸಿಸುವುದೇ ಅವರಿಗೂ ಹಿತ, ಪ್ರಾಂತಕ್ಕೂ ಹಿತ.

ಆದುದರಿಂದ ಕನ್ನಡ ದೇಶದಲ್ಲಿ ಕನ್ನಡಕ್ಕೆ ಸರ್ವ ವಿಧದಿಂದಲೂ ಪ್ರಾಪ್ತಿಯುಂಟಾಗುವುದಕ್ಕೆ ನಾವು ಹವಣಿಸಬೇಕು. ಈ ಧ್ಯೇಯವನ್ನು ಪೂರ್ಣವಾಗಿ ಸಾಧಿಸಲು ಸದ್ಯದಲ್ಲಿ ಅಡಚಣೆಗಳೂ ಕಷ್ಟಗಳೂ ಇರುವುವು. ಆದರೆ ನಮ್ಮ ಆಕಾಂಕ್ಷೆಯೂ, ಅಭಿಮಾನವೂ ದೃಢವಾಗಿದ್ದಲ್ಲಿ ಇವೆಲ್ಲವೂ ಕಾಲಕ್ರಮದಲ್ಲಿ ಮಾಯವಾಗುವುವು. ಕನ್ನಡ ನಾಡಿನ ಬೆಳವಣಿಗೆಯೂ, ಕನ್ನಡ ಸಂಸ್ಕೃತಿಯ ವಿಕಾಸವೂ ಭಾರತ ದೇಶದ ಇತರ ಯಾವ ಪ್ರಾಂತದ ಬೆಳವಣಿಗೆಗೂ ಕಡಮೆಯಾಗದಂತೆ ಆಗಿ, ಭಾರತ ದೇಶದ ಒಟ್ಟಿನ ಯಶಸ್ಸನ್ನು ಹೆಚ್ಚಿಸುವುದರಲ್ಲಿ ಯಾವ ಸಂಶಯವೂ ಇಲ್ಲ.

ಕೋಲಾರ ಸಂಪದ್ಗಿರಿರಾವ್

# ಗ್ರಾಮ ಪುನರುಜ್ಜೀವನ – ಸಾಹಿತ್ಯ

**"ನನಗೆ ಡಿಳ್ಳಿ ಬಲು ದೂರ; ಕನ್ನಡ ನಾಡಿನ ಹಳ್ಳಿಯೇ ಸಾಕು"—ಶ್ರೀ**

ನಮ್ಮ ದೇಶದ ಹಳ್ಳಿಗಳು ಗಾಳಿಗೊಡ್ಡಿದ ಸೊಡರುಗಳಂತೆ ಯಂತ್ರಯುಗದ ಹೊಡೆತಕ್ಕೆ ಸಿಲುಕಿ ಅಸ್ತವ್ಯಸ್ತವಾಗಿ ತತ್ತರಿಸುತ್ತಿವೆ. ಅವು ಚೇತರಿಸಿಕೊಂಡು ಮತ್ತೆ ಬೆಳಗದೆಹೋದರೆ ನಾವು ಮುಂದುವರಿಯಲಾರೆವು. ಅತ್ಯಗತ್ಯವಾದ ಈ ಗ್ರಾಮ ಪುನರುಜ್ಜೀವನ ಕಾರ್ಯವನ್ನು ಹೇಗೆ ತೊಡಗಬೇಕು, ಯಾವ ರೀತಿ ಕ್ರಮಗೊಳಿಸಬೇಕು, ಎಂತಹ ಕನಸನ್ನು ಕಣ್ಣಲ್ಲಿ ತುಂಬಿಕೊಂಡು ಅಡಿಯಿಡಬೇಕು ಎಂಬುದರಲ್ಲಿ ಭಿನ್ನಭಿನ್ನ ಅಭಿಪ್ರಾಯಗಳಿರಬಹುದು. ಆದರೂ, ಹಳ್ಳಿಗಳನ್ನೆಲ್ಲ ತೊಡೆದುಹಾಕುವುದೇ ದೇಶಕ್ಕೆ ಕ್ಷೇಮವೆಂದು ಮಾತ್ರ ಯಾರೂ ಹೇಳುವುದಿಲ್ಲ.

ಆಡಳಿತದ ರೀತಿ ನೀತಿಗಳನ್ನು ತಿದ್ದಿ ಹೊಸ ಕಾನೂನುಗಳನ್ನು ರೂಪುಗೊಳಿಸಿ ಆಯ ವ್ಯಯವನ್ನು ಪುನರ್ವ್ಯವಸ್ಥೆ ಮಾಡುವುದರಿಂದ ಗ್ರಾಮೋದ್ಧಾರ ಕಾರ್ಯವು ಬಹುಮಟ್ಟಿಗೆ ಸುಗಮವಾಗುವುದೆಂದು ಕೆಲವರ ಮತ. ಋಣಪರಿಹಾರ, ಪಾನನಿರೋಧ, ನವೀನ ವ್ಯವಸಾಯ ಪದ್ಧತಿಗಳ ಪ್ರಚಾರ, ಸಣ್ಣ ಪುಟ್ಟ ಕೈಗಾರಿಕೆ ಗಳಿಗೆ ಪ್ರೋತ್ಸಾಹ, ಅಕ್ಷರಪ್ರಚಾರ, ಗ್ರಾಮನೈರ್ಮಲ್ಯ ಸಾಧನೆ, ಮಾರ್ಗಗಳ ನಿರ್ಮಾಣ— ಇವುಗಳಿಂದ ಗ್ರಾಮಜೀವನದಲ್ಲಿ ಮತ್ತೆ ಸುಖಸಂಪತ್ತುಗಳನ್ನು ತುಂಬಬಹುದು. ಆದರೆ, ಗ್ರಾಮಗಳ ಈಗಿನ ದುಃಸ್ಥಿತಿಗೆ ಬಡತನ, ಅನಾರೋಗ್ಯ, ತಿಳಿವಳಿಕೆಯಿಲ್ಲದಿರುವುದು— ಇವು ಮಾತ್ರ ಕಾರಣವಲ್ಲ. ಇವೆಲ್ಲಕ್ಕಿಂತ ಮುಖ್ಯ ವಾಗಿ, ಇವೆಲ್ಲಕ್ಕೂ ಪ್ರೇರಕವಾಗಿ ಮತ್ತೊಂದು ಕಾರಣ ಬೇರೂರಿ ನಿಂತಿದೆ. ಅದನ್ನು ನಿರುತ್ಸಾಹವೆನ್ನಬಹುದು; ನಿರಾಶೆ ಎನ್ನಬಹುದು. ನಮ್ಮ ದೇಶದ ಜನರನ್ನೆಲ್ಲಾ, ಅದರಲ್ಲೂ ವಿಶೇಷವಾಗಿ ಹಳ್ಳಿಯ ಜನರನ್ನೆಲ್ಲಾ, ಆವರಿಸಿರುವ ಈ ತಾಮಸಗುಣದ ಪ್ರಭಾವವನ್ನು ಜೀವನದ ಪ್ರತಿಯೊಂದು ಶಾಖೋಪಶಾಖೆ ಯಲ್ಲೂ ಕಾಣಬಹುದಾಗಿದೆ.

ಅದೃಷ್ಟ, ವಿಧಿ, ಹಣೆಯಬರಹ, ಕರ್ಮ, ದೈವ ಎಂಬ ನಾನಾ ಬಗೆಯ ವೇಷಗಳನ್ನು ಧರಿಸಿ ಈ ಪಿಶಾಚಿಯು ಹಳ್ಳಿಗರನ್ನು ಪೀಡಿಸುತ್ತಿದೆ. ಇದರಿಂದ ಅವರ ಮೈ ಜಡ್ಡುಕಟ್ಟಿದೆ; ಮನಸ್ಸು ಎರಕದಲ್ಲಿ ಹುಯ್ದಂತೆ ಗಟ್ಟಿಯಾಗಿಬಿಟ್ಟಿದೆ. ಅವರು ಅತ್ತಿತ್ತ ನೋಡಲಂಜುವರು. ಸಮಾಜದ ಸೊಟ್ಟನ್ನು 'ತಿದ್ದುವುದು' ಹಾಗಿರಲಿ, ಕಣ್ಣನ್ನು ಕುಕ್ಕುತ್ತಿರುವ ಡೊಂಕನ್ನೂ ಸಹ 'ಗೋಚರಿಸು'ವುದೇ ಪಾಪವೆಂದು ಹೆದರಿ ರೆಪ್ಪೆ ಮುಚ್ಚಿ ತೆಪ್ಪಗಿರುವರು. ಬಂದದ್ದೆಲ್ಲವೂ ಬರಲಿ ಎಂಬ ಕಪಟ ವೈರಾಗ್ಯ ತಾಳಿ ಕೃತಾರ್ಥರಾಗುವರು. ಅಲ್ಲದೆ ಮುಂದೆ ಬರುವುದೆಲ್ಲವೂ ಹಿಂದಿನದಕ್ಕಿಂತ ಹೊಲಸು, ಹಿಂದಿನದಕ್ಕಿಂತ ಕಡಮೆ ಎಂದು ನಂಬಿ ಕಷ್ಟಪರಂಪರೆ ಗಳಲ್ಲಿ ಕಲಿಯ ವಿಲಾಸವನ್ನು ಕಂಡು ಅಷ್ಟರಲ್ಲೇ ತೃಪ್ತರಾಗುವರು. "ನಮ್ಮ ಹಿರಿಯರಿಗಿಂತ ನಾವು ಕೀಳು. ಅವರ ಸಿರಿ ನಮಗೆ ಸಿಗದು. ನಮ್ಮ ಮುಮ್ಮಕ್ಕಳು ತುಂಬೆಯ ಗಿಡಕ್ಕೆ ಏಣಿ ಹಾಕಿಕೊಂಡು ಹತ್ತುತ್ತಾರೆ. ಬರುಬರುತ್ತಾ ಮಾನವನು ಕುಗ್ಗಿ ಕಣ್ಣೀರು ಬಿಟ್ಟು ಹುಳದಂತೆ ನರಳುತ್ತಾನೆ."—ಎಂದು ಹೇಳುತ್ತಾ ಸಂಕಟಕ್ಕೆ ತಲೆತಗ್ಗಿಸಿ ಎದೆಯನ್ನು ಕಲ್ಲುಮಾಡಿ ಹಳ್ಳಿಗರು ಭೂಭಾರವನ್ನು ಹೊತ್ತು ನಿಂತಿದ್ದಾರೆ.

ಇಂತಹ ಮನೋಭಾವವು ತೊಲಗಬೇಕಾದರೆ ಉಪನಿಷತ್ತುಗಳೂ, ಭಗವದ್ಗೀತೆಯೂ, ರಾಮಾಯಣ ಮಹಾಭಾರತಗಳೂ ಮತ್ತೆ ಕೆಲಗಳಲ್ಲಿ ಮೊಳಗಿ ಹೃದಯಾಂತರಾಳದಿಂದ ನಾರ್ದನಿಗೊಡಬೇಕು. ಇದಕ್ಕಾಗಿ ಹಿಂದಿನವರು ಏರ್ಪಡಿಸಿದ್ದ ಭಾರತ ವಾಚನ, ರಾಮಾಯಣ ಪಠನ, ಹರಿಕಥಾಶ್ರವಣ, ಪುರಾಣ ಪಾರಾಯಣ— ಇವು ಈಗಲೂ ಹಲಕೆಲವು ಹಳ್ಳಿಗಳಲ್ಲಿ ನಡೆಯುತ್ತಿವೆ. ಆದರೂ, ಪರಪೆಯ ಮೇಲೆ ಬೀಳುವ ಸಮುದ್ರದ ಚಿತ್ರದಂತೆ, ಅವು ಕೇಳುವವರ ಎದೆಯನ್ನು ತೋಯಿಸುತ್ತಿಲ್ಲ. ಮೆದುಳಲ್ಲಿ ವಿಚಾರ ತರಂಗಗಳನ್ನು ಎಬ್ಬಿಸುತ್ತಿಲ್ಲ. ತತ್ವಬೋಧೆಗೆ ಬದಲಾಗಿ ಮತ್ತುಹಿಡಿಸುತ್ತಿದೆ, ಅಷ್ಟೆ. ತಾಮಸಗುಣಕ್ಕೆ ರಾಮರಸ ಕುಡಿಸುತ್ತಿದೆ, ಅಷ್ಟೆ. ಅದನ್ನು ನಿರ್ಮೂಲವಮಾಡಿ ರಾಜಸ ಸಾತ್ವಿಕ ಗುಣಗಳನ್ನು ಅಲ್ಲಿ ನೆಡುತ್ತಿಲ್ಲ. ನಮ್ಮ ನಾಡಿನ ಗಮಕಿಗಳೂ ಹರಿಕಥಾ ದಾಸರೂ ಪುರಾಣ ಪಾಠಕರೂ ಈ ಅಂಶಕ್ಕೆ ಗಮನ ಕೊಡಲೇಬೇಕು. ತಮ್ಮ ಶ್ರೋತೃಗಳಲ್ಲಿ ಸ್ವಾಭಿಮಾನ, ಸ್ವಾವಲಂಬನಗಳನ್ನು ಬೆಳೆಸಲು ಅವರು ಪ್ರಯತ್ನಿಸಬೇಕು. ದೇಹವನ್ನು ವೃಥಾ ಹಳಿಯದೆ, ಬದುಕನ್ನು ಶಪಿಸದೆ, ಕರ್ತವ್ಯದ ದಾರಿಯನ್ನು ತೊರೆಯದೆ, ಕೆಚ್ಚಿನಿಂದ ಬಾಳಲು ಬೇಕಾದ ಹಿತವಚನಗಳೂ ಉದಾಹರಣೆಗಳೂ ತತ್ವೋಪದೇಶವೂ ನಮ್ಮ ಪ್ರಾಚೀನ ಸಾಹಿತ್ಯದಲ್ಲಿ ಸಾಕಷ್ಟಿವೆ. ಅದನ್ನು ಉಪಯೋಗಿಸಿಕೊಳ್ಳುವುದು ಮಾತ್ರ ನಮ್ಮ ಜನಸೇವಕರ ಕೈಯಲ್ಲಿದೆ.

ಮತ್ತೊಂದು ಮುಖ್ಯ ವಿಷಯದ ಕಡೆಗೂ ನಮ್ಮ ಗಮನ ಹೋಗಬೇಕಾಗಿದೆ. ಈಚೆಗೆ ಹಳ್ಳಿಯವರಿಗೆ ಹಳ್ಳಿಯ ಮೇಲೆ ನಂಬಿಕೆಯಿಲ್ಲದಂತಾಗಿದೆ. ಕೆಂಬೂತವನ್ನು ಕಂಡು ನವಿಲು ಪುಕ್ಕ ಉದುರಿಸಿಕೊಂಡಹಾಗೆ ಪಟ್ಟಣಗಳನ್ನನುಕರಿಸಿ, ಅಲ್ಲಿಯವರ ದುರಭ್ಯಾಸಗಳನ್ನನುಸರಿಸಿ ಹಳ್ಳಿಗಳು ಹಾಳಾಗುತ್ತಿವೆ. ಉಪ್ಪುನೀರಿಗೆ ಮನಸೋತು ಹೊಳೆಗಳು ಕಡಲೆಡೆಗೆ ಹರಿವಂತೆ ಹಳ್ಳಿಯ ತರುಣರೆಲ್ಲರೂ ನಗರಗಳ ಕಡೆಗೆ ಹರಿದು ಅಲ್ಲಿಯ ಗಡಿಬಿಡಿಯಲ್ಲಿ ಮಾಯವಾಗುತ್ತಿದ್ದಾರೆ. ಇಂತಹವರನ್ನು ತಡೆದು ನಿಲ್ಲಿಸಿ "ಹಳ್ಳಿಗಳಿಗೆ ಹಿಂತಿರುಗಿ" ಎಂದು ಬೋಧಿಸಿದರೆ ಹೆಚ್ಚು ಪ್ರಯೋಜನವಾಗುವುದಿಲ್ಲ. ಇಂದಿನ ವಿದ್ಯಾವಂತರಿಗೆ ಹಳ್ಳಿಗೆ ಹಿಂತಿರುಗುವ ಮನೋಭಾವವೇ ಇಲ್ಲ. ಕೈಗೆ ಕೆಸರಾಗದೆ ಬಾಯಿಗೆ ಮೊಸರಾಗಬೇಕೆಂಬುದು ಅವರ ಜೀವನ ತತ್ವವಾಗಿದೆ. ಅಥವಾ ಬಲವಂತಕ್ಕೆ ಅವರು ಹಿಂತಿರುಗಿದರೂ ಹಳ್ಳಿಗಳಿಗೂ ಕಷ್ಟ; ಅವರಿಗೂ ದುಃಖ. ನಗರಗಳಿಗೆ ಹೋಗದೆ ಹಳ್ಳಿಯಲ್ಲೇ ಉಳಿದವರಿಗೂ ಕೂಡ ಏನೋ ಒಂದು ತೆರನಾದ ನಾಚಿಕೆ, ಬೇಸರಿಕೆ, ಜುಗುಪ್ಸೆ. ಈ ದೋಷವನ್ನು ಪರಿಹಾರ ಮಾಡಿ ಜನರಲ್ಲಿ ಗ್ರಾಮಾಭಿಮಾನವನ್ನು ಹೆಚ್ಚಿಸಲು ಕೆಲವು ತೆರನ ಗ್ರಂಥಗಳು ನೆರವಾಗುತ್ತವೆ. ಹಿಂದೆ ಸ್ಥಳಪುರಾಣಗಳು ಇದೇ ಉದ್ದೇಶವನ್ನು ನೆರವೇರಿಸುತ್ತಿದ್ದುವು. ಪ್ರತಿಯೊಬ್ಬನೂ ತನ್ನ ಊರಿನ ಹೆಸರನ್ನುಳಿಸಲು ಕಾತರನಾಗಿದ್ದು ತನ್ನ ನಡೆನುಡಿಯನ್ನೂ, ತಾನು ತಯಾರಿಸುವ ಪದಾರ್ಥಗಳ ಅಂದಚೆಂದವನ್ನೂ ಒಟ್ಟು ಹಳ್ಳಿಯ ಕೀರ್ತಿಯ ದೃಷ್ಟಿಯಿಂದ ಪರಿಪಾಲಿಸುತ್ತಿದ್ದನು. ಆದರೆ ಈಗ ಅಂತಹ ಕಟ್ಟುಕಟ್ಟಳೆಗಳೆಲ್ಲವೂ ಸಡಿಲವಾಗಿಹೋಗಿವೆ. ಆದ್ದರಿಂದ ಗ್ರಾಮಾಭಿಮಾನವನ್ನು ಮತ್ತೆ ಸರ್ವವಿಧದಿಂದಲೂ ನಾವು ಬೆಳೆಸಬೇಕಾಗಿದೆ.

ಹಳ್ಳಿಗರ ಜೀವನವನ್ನೂ ಹಳ್ಳಿಗಳ ಸುತ್ತುಮುತ್ತಲಿನ ರಮಣೀಯತೆಯನ್ನೂ ಚಿತ್ತಾಕರ್ಷಕವಾಗಿ ವಿವರಿಸುವ ಲಾವಣಿಗಳೂ ಕುಣಿತದ ಹಾಡುಗಳೂ ಪದಗಳೂ ನಮ್ಮಲ್ಲಿ ಅನೇಕವಿವೆ. ಅವುಗಳನ್ನು ಸಂಗ್ರಹಿಸಿ ಪ್ರಚಾರಕ್ಕೆ ತರಬೇಕು. ಹೆಚ್ಚು ಹೆಚ್ಚಾಗಿ ಹೊಸ ಪದಗಳು ಸೃಷ್ಟಿಯಾಗಬೇಕು. ಈ ತೆರನ ಸಾಹಿತ್ಯದಿಂದಲೇ ನಿಜವಾದ ದೇಶಾಭಿಮಾನವೂ ಕೂಡ ವೃದ್ಧಿಯಾಗುವುದು. ಏಕೆಂದರೆ, ದೇಶದ ಪ್ರತಿನಿಧಿಯಾಗಿ ಅಚ್ಚಳಿಯದೆ ಅಂತರಂಗದಲ್ಲಿ ನಿಂತು ನಡತೆಯನ್ನು ತಿದ್ದುವುದು ಇಡಿಯ ದೇಶದ ಇಡಿಯ ಚಿತ್ರವಲ್ಲ, ದೇಶದ ಒಂದು ಭಾಗವಾದ ತನ್ನ ಗ್ರಾಮದ ಚಿತ್ರ ಮಾತ್ರ. ಆದ್ದರಿಂದ ಹಳ್ಳಿಗಳಲ್ಲಿ ಉಲಿಯುವ ಹಕ್ಕಿಗಳು, ಅರಳುವ ಹೂವುಗಳು, ನಾಲಗೆಯಲ್ಲಿ ನೀರೂರಿಸುವ ಹಣ್ಣುಗಳು, ಅಡಿಗೆಗಳು, ಹಳ್ಳಿಗರ ಉಡಿಗೆ ತೊಡಿಗೆಗಳು, ಕಟ್ಟುನಿಟ್ಟುಗಳು, ಸಂಪ್ರದಾಯಗಳು, ಹಳ್ಳಿಯ ದೇವತೆಗಳು — ಇವುಗಳ ಮೇಲೆ ಮಮತೆ ಹೆಚ್ಚಿದಷ್ಟೂ ಗ್ರಾಮಾಭಿಮಾನವೂ ಸ್ಥಿರವಾಗುತ್ತದೆ; ದೇಶಾಭಿಮಾನದ ತಳಹದಿಯೂ ಭದ್ರವಾಗುತ್ತದೆ. ಹಳ್ಳಿಯ ಜೀವನದ ಪರಿಚಯವಿರುವವರು ಇದಕ್ಕಾಗಿ ಕತೆಗಳನ್ನೂ ಕಾದಂಬರಿಗಳನ್ನೂ ಪದಗಳನ್ನೂ ಬರೆಯಬೇಕು. ಓದು ತಿಳಿಯದ ಹಳ್ಳಿಗರು ಈ ವಿಧದ ಬರವಣಿಗೆಯಿಂದ ಲಾಭ ಹೊಂದುವುದು ಹೇಗೆ ಎಂಬ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ಆದರೆ ನಮ್ಮ ದೇಶದ ಜನರು ಓದಿ ಹೇಳಿದುದನ್ನು ಕೇಳಿ ಸವಿಯಬಲ್ಲರು. ಅವರ ಮನಸ್ಸಿಗೆ ಹಿಡಿಯುವಂತೆ ಓದುವವರೂ ಹಲವಾರು ಜನರಿದ್ದಾರೆ. ಅಂತಹವರನ್ನು ಇನ್ನೂ ಹೆಚ್ಚಾಗಿ ತಯಾರಿಸುವ ಯೋಜನೆಯನ್ನೂ ನಾವು ಮಾಡಬಹುದು.

ಬಂಗಾಳದ ವ್ರತಚಾರಿ ಚಳುವಳಿಯಂತೆ ನಮ್ಮಲ್ಲೂ ಒಂದು ತರುಣ ಸಂಘವೇರ್ಪಟ್ಟರೆ, ಹಳ್ಳಿಗರ ಸರಳತೆಯೂ ಅವರ ಶಾಂತಿಯುತವಾದ ಜೀವನವೂ ಮತ್ತೊಮ್ಮೆ ಜನರ ಮನ್ನಣೆಯನ್ನು ಪಡೆಯಲು ನೆರವಾದೀತು.

ಹೀಗೆ ಗ್ರಾಮಾಭಿಮಾನವು ಮೊಳೆತು ಚಿಗುರಿದರೆ ಬಹು ಬೇಗ ಗ್ರಾಮ ನೈರ್ಮಲ್ಯವನ್ನೂ ಸಾಧಿಸಬಹುದು; ಗ್ರಾಮದ ಆಡಳಿತ ಸಂಸ್ಥೆಗಳು ಕೂಡ ಹೊಸ ಹುರುಪಿನಿಂದ ಕೆಲಸ ಮಾಡುತ್ತವೆ. ಊರೊಟ್ಟಿನ ಕೆಲಸಗಳೆಲ್ಲವೂ ಸಾಂಗವಾಗಿ ನಡೆಯುತ್ತವೆ. ಗ್ರಾಮದ ಮೇಲೆ ಜನರಿಗೆ ಪ್ರೀತ್ಯಾದರಗಳು ಹೆಚ್ಚುವಂತೆ ಗ್ರಾಮ ದೇವತೆಯ ಉತ್ಸವಾದಿಗಳನ್ನು ಅವರೆಲ್ಲರಿಂದಲೂ ಸೇವಾಕಾಣಿಕೆಯನ್ನು ತೆಗೆದು ಇನ್ನೂ ಅರ್ಥವತ್ತಾದ ಹಬ್ಬವಾಗಿ ಕೊಂಡಾಡಬಹುದು.

ಅಂತೂ ಹಳ್ಳಿಯ ಜನರಿಗೆ ಮೊತ್ತಮೊದಲು ತಮ್ಮ ಮೇಲೂ ಅನಂತರ ತಮ್ಮ ಹಳ್ಳಿಯ ಮೇಲೂ ಗೌರವ ಹುಟ್ಟಬೇಕಾದದ್ದು ಅತ್ಯಾವಶ್ಯಕ. ಸಾಹಿತಿಗಳ ಕಣ್ಣ ಮುಂದೆ ಇದೇ ಆದರ್ಶ ನಿಂತು ಅವರ ಲೇಖಣಿಯನ್ನು ಸಾರ್ಥಕಗೊಳಿಸಲಿ.

ನಮ್ಮ ದೇಶದಲ್ಲಿ ಈಗ ಮತ್ತೊಂದು ಮಹಾ ಸಮಸ್ಯೆಯೂ ಏಳುತ್ತಿದೆ. ಪಟ್ಟಣಗಳಿಗೂ ಹಳ್ಳಿಗಳಿಗೂ ನಡುವಣ ಕಂದಕವು ದಿನ ದಿನಕ್ಕೂ ಅಗಲ ಅಗಲವಾಗಿ ಬಾಯ್ದೆರೆಯುತ್ತಿದೆ. ಪಟ್ಟಣಿಗರೆಂದರೆ ಹಳ್ಳಿಗರಿಗೆ ಭಯ, ಅನುಮಾನ. ಹಳ್ಳಿಗರೆಂದರೆ ಪಟ್ಟಣಿಗರಿಗೆ ದ್ವೇಷ, ಅಪಹಾಸ್ಯ. ಒಬ್ಬರ ಜೀವನ ಮತ್ತೊಬ್ಬರಿಗೆ ತಿಳಿಯದು. ಇಬ್ಬರ ಪ್ರಪಂಚವೂ ಬೇರೆ ಬೇರೆಯದು; ದೂರದೂರದ್ದು.

ದೇಶೋನ್ನತಿಯ ದೃಷ್ಟಿಯಿಂದ ಈ ಅಂತರವನ್ನು ಆದಷ್ಟು ಬೇಗ ಹೋಗಲಾಡಿಸಲೇ ಬೇಕು. ಹೋಳಾಗುತ್ತಿರುವ ಸಮಾಜವನ್ನು ಒಂದುಗೂಡಿಸದೆ ಗತ್ಯಂತರವಿಲ್ಲ. ಈಗಿನ ನಮ್ಮ ಕಾದಂಬರಿಗಳೂ ಕತೆಗಳೂ ಬಹುಭಾಗ ಕೇವಲ ನಗರಜೀವನವನ್ನೇ ಚಿತ್ರಿಸುತ್ತಿವೆ. ಅದರಲ್ಲೂ ಬಡತನ ಬಿಟ್ಟು ಸಿರಿತನಕ್ಕೆ ಹಾತೊರೆಯುತ್ತಿರುವ ನಡುವಣ ಮಟ್ಟದ ಸಂಸಾರಗಳ ಆಸೆ ಆತಂಕಗಳನ್ನೇ ಹೆಚ್ಚಾಗಿ ಪ್ರತಿಪಾದಿಸುತ್ತಿವೆ. ಗ್ರಾಮ ಜೀವನವನ್ನು ವರ್ಣಿಸುವ ಅನೇಕ ಗ್ರಂಥಗಳು ಕೃತಕ; ಅವುಗಳ ಶೈಲಿ ಬಂಜೆಶೈಲಿ. ಹೀಗೆ ಎರಡನೆಯವರಿಂದ ಎರವಲು ತಂದ ಅನುಭವ ಸಾಮಗ್ರಿಯಿಂದ ಗ್ರಂಥವನ್ನು ತುಂಬಿದರೆ ಅದು ಹೇಗೆ ಫಲಕಾರಿಯಾದೀತು?

ಹಳ್ಳಿಗರ ಸಂಪ್ರದಾಯ ಜೀವನದಲ್ಲಿ ಒಂದು ಅಮೃತತತ್ವವಿದೆ. ಅವರ ಕಟ್ಟುನಿಟ್ಟುಗಳಲ್ಲಿ ಐಕಮತ್ಯದ ಹಂಬಲಿದೆ. ಅವುಗಳನ್ನು ತುಳಿದು ಹಾಳು ಮಾಡುವ ಬದಲು ನೀರೆರೆದು ಪೋಷಿಸಬೇಕು. ಅಲ್ಲದೆ ಗ್ರಾಮಜೀವನದ ಸರಳತೆ, ಪ್ರಾಮಾಣಿಕತೆ, ಅದರಲ್ಲಿ ಕಂಡುಬರುವ ಸ್ಥಿತಪ್ರಜ್ಞತೆ— ಇವುಗಳನ್ನು ಪಟ್ಟಣಿಗರು ಚೆನ್ನಾಗಿ ಅರಿತುಕೊಳ್ಳಬೇಕು.

ಹಳ್ಳಿಗರ ಒಲವು ಗೆಲುವುಗಳಲ್ಲೂ, ನೋವು ಸಾವುಗಳಲ್ಲೂ, ಆಸೆ ಪ್ರತ್ಯಾಸೆಗಳಲ್ಲೂ, ನಗೆ ನಿಟ್ಟುಸಿರುಗಳಲ್ಲೂ ಮನುಜಸಹಜವಾದ ಕಾವಿದೆ ಎಂಬುವನ್ನಾದರೂ ಪಟ್ಟಣಿಗರು ಅರಿತುಕೊಳ್ಳಬೇಡವೆ? ಹಾಗೆಯೇ ಪಟ್ಟಣಿಗರ ಕೃತಕಜೀವನದ ಭೀಷಣಪ್ರವಾಹದ ಕೆಳಗೆ ಅದೇ ಮಾನವ ಸತ್ವವು ಹರಿಯುತ್ತಿದೆ ಎಂದು ಹಳ್ಳಿಗರೂ ಮನಗಾಣಬೇಡವೆ? ಹಾಗೆ ಕಂಡಾಗ ಇಬ್ಬರೂ ಅಣ್ಣತಮ್ಮಂದಿರಂತೆ ಹತ್ತಿರಕ್ಕೆ ಬರುವರು. ನಡುವಣ ಕಂದಕವೇ ಮುಚ್ಚಿಹೋಗುವುದು.

ಸಮಾಜದ ನೆಮ್ಮದಿಗೂ ಆರ್ಥಿಕ ಅಭಿವೃದ್ಧಿಗೂ ಅಡಚಣೆಯಾಗಿರುವ ಅನೇಕ ಮೂಢ ನಂಬಿಕೆಗಳನ್ನು ಪಟ್ಟಣಿಗರಿಗಿಂತ ಹಳ್ಳಿಗರೇ ಜೋಪಾನವಾಗಿ ಕಾಪಾಡಿಕೊಂಡು ಬಂದಿದಾರೆ. ಈಗಲೂ ಅವು ಹಳ್ಳಿಗಳಲ್ಲಿ ಬಲವಾಗಿ ಬೇರೂರಿವೆ. ಅವುಗಳನ್ನು ಅನೇಕವೇಳೆ ತಿಳಿಯಾದ ಹಾಸ್ಯದಿಂದಲೇ ತೆಗೆದುಹಾಕಬಹುದು. ಕೆಲವುವೇಳೆ ಚುಚ್ಚುಹಾಸ್ಯದಿಂದ ಅಗೆದು ಕೀಳಬೇಕಾಗಿ ಬರಬಹುದು. ಅಲ್ಲದೆ, ಉತ್ತಮ ಸಾಹಿತ್ಯ ಗ್ರಂಥಗಳಿಂದ ಮಿದುಳಲ್ಲಿ ವಿಚಾರವೆಂಬ ಹೆಪ್ಪು ಹಾಕಿ ಕಲಕಿ ಕದಡಿಸಿ ಕಡೆದು ಜ್ಞಾನನವನೀತವನ್ನು ಉಂಟುಮಾಡಬಹುದು.

ಒಳಗಣ ಸ್ಫೂರ್ತಿ ಹೊರಹೊಮ್ಮಿದಾಗ ಅದು ಹೇಗೆ ಹೊಮ್ಮಿತೋ ಹಾಗೆ ಬರೆಯುವ ನಿರಂಕುಶಮತಿಗಳು ಬರಹಗಾರರು. ಅವರನ್ನು ಕುರಿತು ಈ ಗೊತ್ತುಗುರಿಗಳನ್ನಿಟ್ಟುಕೊಳ್ಳಿ, ಇಂತಹ ಉದ್ದೇಶಸಾಧನೆಗಳಿಗಾಗಿ ಸಹಾಯ ಮಾಡಿರಿ ಎಂದು ಹೇಳುವುದು ಉದ್ಧಟತನ. ಆದರೆ ಸಮಾಜ, ಪ್ರಕೃತಿ ಇವೆರಡರಿಂದ ಕೂಡಿದ ತಮ್ಮ ಆವರಣದಲ್ಲಿ ಅಗಾಧವಾದ ಅನುಭವ ಪಡೆದು ಅನಂತರ ಆದಷ್ಟು ಉತ್ಸಾಹವನ್ನೂ ಸಂತೋಷವನ್ನೂ ಬೆಳಕನ್ನೂ ತಮ್ಮ ಬರಹಗಳ ಮೂಲಕ ಇತರರಿಗೆ ನೀಡಿರಿ ಎಂದು ಸಾಹಿತಿಗಳನ್ನು ಪ್ರಾರ್ಥಿಸಿದರೆ ಅವರು ಅನ್ಯಥಾ ಭಾವಿಸಲಾರರು. ಉತ್ಸಾಹ, ಸಂತೋಷ, ಬೆಳಕು — ಇವು ಮೂರೂ ಈಗ ದೇಶೋದ್ಧಾರಕ್ಕೂ ಬೇಕು; ಗ್ರಾಮೋದ್ಧಾರಕ್ಕೂ ಬೇಕು.

**ನಾ. ಕಸ್ತೂರಿ**

# ಸ್ತ್ರೀಯರ ವಿದ್ಯಾಭ್ಯಾಸ

ಆತ್ಮೋನ್ನತಿ ವ್ಯಕ್ತಿ ಮಾತ್ರದ ಗುರಿ. ಇದು ವ್ಯಕ್ತಿವಿಕಾಸ, ಶೀಲರಚನೆಗಳ ಆಧಾರದಿಂದ ಉಂಟಾಗುವ ಸಿದ್ಧಿ. ವಿದ್ಯಾರ್ಜನೆ ಇವನ್ನು ಒದಗಿಸಿಕೊಡುವ ಅಮೂಲ್ಯ ಸಾಧನೆ. ಜನಸಂಖ್ಯೆಯಲ್ಲಿ ಅರ್ಧವಾಗಿರುವ ಸ್ತ್ರೀಯರಲ್ಲಿ ವಿದ್ಯಾ ಪ್ರಸಾರ ಹೆಚ್ಚುತ್ತಿರುವುದು ಶುಭ ಚಿಹ್ನೆ. ಅವರ ಪ್ರಯೋಜನಕ್ಕಾಗಿ ಅಲ್ಲದೆ ಪ್ರಜಾ ವರ್ಗಕ್ಕೆ ತಿಳಿವನ್ನು ಉಂಟುಮಾಡಲು ಕೂಡ ಸ್ತ್ರೀಯರಿಗೆ ವಿದ್ಯಾವ್ಯಾಸಂಗಬೇಕು.

ವಿದ್ಯೆಯನ್ನು ವ್ಯಾಖ್ಯೆಯಿಂದ ತಿಳಿಸುವುದು ಕಷ್ಟ; ಅದು ಒಂದು ಶಕ್ತಿ, ಬೆಳಕು, ಮನುಷ್ಯ ಪ್ರಾಣಿಯನ್ನು ವಿಚಾರವಂತ ವ್ಯಕ್ತಿಯಾಗಿ ಮಾರ್ಪಡಿಸುವ ಬಲವಿಶೇಷ. ತಿಳಿವಳಿಕೆಯ ವ್ಯಾಪನೆ ಪ್ರಜಾಪ್ರಭುತ್ವದ ಹೆದ್ದಾರಿ. ಸ್ತ್ರೀ ಪುರುಷ ರೆಲ್ಲರೂ ಪೌರರು, ನಾಗರಿಕರು, ಜ್ಞಾನವುಳ್ಳವರು. ಆದುದರಿಂದ ಸಂಸ್ಕೃತಿಯನ್ನು ನೇರವಾಗಿಯೋ ಪರೋಕ್ಷವಾಗಿಯೋ ಕಾಣಬಲ್ಲರು; ಕಂಡುದನ್ನು ಮನಸಿನಲ್ಲಿ ಹಿಡಿದು,ಮೈಗೂಡಿಸಿಕೊಂಡು ಹಿರಿಯರಾಗಿ ದೊಡ್ಡ ಬದುಕನ್ನು ನಡಸಲು ತಕ್ಕವರು.

ಜೀವನದ ಮುಖ್ಯ ಅಂಗವಾದ ವಿದ್ಯೆಯನ್ನು ಹೇಳಿಕೊಡುವ ಸಂಸ್ಥೆಗಳು, ಸಂಘಗಳು ಪ್ರಾಚೀನ ಕಾಲದಿಂದಲೂ ಬೆಳೆದುಕೊಂಡುಬಂದಿವೆ. ಗುರುಕುಲಗಳು, ಪಾಠಶಾಲೆಗಳು, ಕೂಲಿಯ ಮಠಗಳು; ಆಧುನಿಕ ವಿದ್ಯಾಭ್ಯಾಸ ಸಂಸ್ಥೆಗಳಾದ ಪ್ರಾಥಮಿಕದಿಂದ ಉಚ್ಚಶಿಕ್ಷಣದವರೆಗೆ ಹಬ್ಬಿರುವ ಶಾಲೆ, ವಿದ್ಯಾಲಯಗಳು; ಮಹಾಜನರ ಸಹಾಯದಿಂದಲೂ, ಸರಕಾರದ ಪ್ರೋತ್ಸಾಹದಿಂದಲೂ ನಡೆದು ಕೊಂಡು ಬಂದು ಶಾಲಾ ವಿದ್ಯಾರ್ಥಿಗಳಲ್ಲದವರಿಗೆ ಅಕ್ಷರಜ್ಞಾನವನ್ನು ಉಂಟುಮಾಡಿ ಕೊಡುವ ಸ್ತ್ರೀಯರ ಸಂಸ್ಥೆ ಸಮಾಜಗಳು; ಸಾಂಸ್ಕೃತಿಕ ಕೇಂದ್ರಗಳಾದ ಕನ್ನಡ ಸಾಹಿತ್ಯ ಪರಿಷತ್ತಿನಂಥ ಸಂಸ್ಥೆಗಳು.

ಸಮಾಜವನ್ನು ತಿದ್ದುವ ಪ್ರಭಾವವೆಂದೂ ಈ ವಿದ್ಯಾಸಂಸ್ಥೆಗಳಿಗೆ ಮಹತ್ವ ಸಲ್ಲಬೇಕು. ತಪ್ಪು ಅಭಿಪ್ರಾಯಗಳನ್ನು ತೊಲಗಿಸಿ ಸರಿಯಾದ ವಿಚಾರಗಳನ್ನು ಜನತೆಯಲ್ಲಿ ನೆಡಲು ಇವು ತುಂಬ ಅಗತ್ಯವಾದವು. ವರದಕ್ಷಿಣೆಯಂಥ ದುಷ್ಟ ರೂಢಿಗಳು ಹಿಮ್ಮೆಟ್ಟುತ್ತಿರುವದು ವಿದ್ಯಾಪ್ರಚಾರದಿಂದ. ಹುಡುಗನಷ್ಟೇ ಹುಡುಗಿಯೂ ವಿದ್ಯೆಯನ್ನು ಹೊಂದಲು ಅರ್ಹಳು ಎಂಬ ಉದಾರ ಭಾವನೆ ಎಲ್ಲರಲ್ಲಿ ಉಂಟಾಗಿ ಹೆಣ್ಣುಮಕ್ಕಳ ವಿದ್ಯಾಭ್ಯಾಸಕ್ಕೆ ಸರ್ವತೋಮುಖವಾದ ಬೆಂಬಲ ದೊರೆಯುತ್ತಿರುವದೂ ತಿಳಿವು ಹೆಚ್ಚುತ್ತಿರುವುದರ ಕಾರಣದಿಂದ. ಕಳೆದ ಶತಮಾನದಲ್ಲಿ ಮೊದಲಾಗಿ ಈಗ ದೊಡ್ಡ ಪ್ರಮಾಣದಲ್ಲಿ ಮುಂದುವರಿಯುತ್ತಿರುವ ಸ್ತ್ರೀಯರ ವಿದ್ಯಾಭ್ಯಾಸ, ಸಮಾಜಕ್ಕೆ ವಿದ್ಯೆ ನೀಡಿದ ಹೊಸ ದೃಷ್ಟಿಯ ಫಲವಾಗಿಯೇ.

ಸ್ತ್ರೀಯರ ವಿದ್ಯಾಭ್ಯಾಸ ತನ್ನದೇ ಆದ ಚರಿತ್ರೆಯೊಂದನ್ನು ಪಡೆದಿದೆ. ಇದಕ್ಕೆ ಏರಿಳಿತಗಳು ಇವೆ. ವೇದಗಳ ಕಾಲದಲ್ಲಿ ಹೆಣ್ಣುಮಗುವಿನ ತಿಳಿವಿಗಾಗಿ ಅನೇಕ ಸೌಕರ್ಯಗಳಿದ್ದುವು. ಗುರುಕುಲಗಳಿದ್ದುವು. ವಿದುಷಿಯರು, ಬ್ರಹ್ಮವಾದಿನಿಯರು

ಇದ್ದರು. ಸ್ತ್ರೀತ್ವದ ಪೂಜ್ಯತೆ 'ಮಾತೃದೇವೋ ಭವ' ಎಂಬ ಉಕ್ತಿಯಿಂದ ಸ್ಪಷ್ಟವಾಗುತ್ತಿತ್ತು. ಉಪನಿಷತ್ತುಗಳ ಕಾಲದಲ್ಲಿಯೂ ಸ್ತ್ರೀಯರು ವಿದ್ಯಾವತಿಯ ರಾಗಿದ್ದರು; ತತ್ವಶಾಸ್ತ್ರದಲ್ಲಿ ಹೆಸರನ್ನು ಗಳಿಸಿದ್ದರು. ಅನೇಕರು ಅಧ್ಯಾಪಕರ ವೃತ್ತಿಯನ್ನು ಅನುಸರಿಸುತ್ತಿದ್ದರು. ಆದರೆ ಹುಡುಗಿಯರು ಗುರುಕುಲಗಳಿಗೆ ಹೋಗುವದು ಕಡಮೆಯಾಯಿತು; ಅವರ ತಂದೆ, ಬಳಗದವರು ಮನೆಯಲ್ಲಿ ಕಲಿಸುವ ವಾಡಿಕೆ ಬಂತು. ಸೂತ್ರಗಳ, ಪುರಾಣಗಳ ಕಾಲದಲ್ಲಿ ಅನೇಕ ಸಂದರ್ಭಗಳು ಒದಗಿ ಬಾಲ್ಯವಿವಾಹ ಕಾಲಿಟ್ಟಿತು; ಹೆಣ್ಣುಮಕ್ಕಳ ಪ್ರೌಢ ವಿದ್ಯಾಭ್ಯಾಸ ಕುಗ್ಗಿತು. ಮುಂದೆ ಪರಕೀಯರ ದಾಳಿಗಳಿಂದ, ಸಾಮಾಜಿಕ ಅವ್ಯವಸ್ಥೆಗಳಿಂದ ಹೆಣ್ಣಿನ ವಿದ್ಯಾಭ್ಯಾಸ ಕ್ಷೀಣಿಸಿತು.

ಹತ್ತೊಂಬತ್ತನೆಯ ಶತಮಾನ ಪಾಶ್ಚಾತ್ಯ ಸಂಸ್ಕೃತಿಯನ್ನು, ರಾಜ್ಯಭಾರ ಕ್ರಮದ ಮೂಲಕ ಭರತಖಂಡಕ್ಕೆ ತಂದಿತು. ಓದಿಗಾಗಿ ಶಾಲೆಗಳು ಸ್ಥಾಪಿತವಾದುವು. ಕಳೆದ ಶತಮಾನದ ಮಧ್ಯಭಾಗದಿಂದ ಯೂರೋಪಖಂಡದಲ್ಲಿ ಪ್ರಾರಂಭವಾದ ಸ್ತ್ರೀಯರ ವಿದ್ಯಾಭ್ಯಾಸ ಕ್ರಮ, ರೀತಿಗಳು ಹಿಂದುಸ್ಥಾನಕ್ಕೂ ಮುಂಬರಿದುವು.

ಎಲ್ಲ ಜನಾಂಗದ ಮಹಿಳೆಯರೂ ವಿದ್ಯೆಯಲ್ಲಿ ಮುಂದುವರಿದಿರುವಂತೆಯೇ, ಭಾರತೀಯ ಮಹಿಳೆಯರೂ ಅಭಿವೃದ್ಧಿಯನ್ನು ಹೊಂದಿದ್ದಾರೆ; ಪರಿಪರಿಯಲ್ಲಿ ತಿಳಿವನ್ನು ಹೊಂದಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗಿಯಾಗುತ್ತಿದ್ದಾರೆ; ಸೋದರಿಯರ ಸೇವೆ, ಸಮಾಜ ಸೇವೆಗಳಿಗೆ ಸೊಂಟಕಟ್ಟಿ ನಿಂತಿದ್ದಾರೆ; ಹಳ್ಳಿಯ ಜನರನ್ನು ಪರಾಂಬರಿಸಿ ಅವರಿಗೆ ತಿಳಿವನ್ನು ಕೊಡುತ್ತಿದ್ದಾರೆ. ಪಟ್ಟಣದ ಸ್ತ್ರೀಯರೆಲ್ಲರೂ ಸಾಮಾನ್ಯವಾಗಿ ಬಹುಶ್ರುತರು.

ಮೈಸೂರು ಸಂಸ್ಥಾನದಲ್ಲಿಯೂ ಸ್ತ್ರೀಯರ ವಿದ್ಯಾಭ್ಯಾಸವು ಬಹಳ ಹಿಂದಿನಿಂದ ಏರ್ಪಟ್ಟಿದೆ. ವರ್ಷವರ್ಷವೂ ವಿದ್ಯಾರ್ಥಿನಿಯರು ಹೆಚ್ಚುತ್ತಿದ್ದಾರೆ. ಪ್ರಾಥಮಿಕ ದರ್ಜೆಯಿಂದ ಹಿಡಿದು ವಿಶ್ವವಿದ್ಯಾನಿಲಯದ ಪದವಿಯ ವಿದ್ಯಾಭ್ಯಾಸದ ವರೆಗೆ ಹುಡುಗಿಯರಿಗೆ ತುಂಬ ಸವಲತ್ತು ಸಿಕ್ಕುತ್ತದೆ: ಮಾಧ್ಯಮಿಕ ಪರೀಕ್ಷೆಯ ವರೆಗೆ ಉಚಿತಪಾಠ; ಮೇಲ್ತರಗತಿಯಲ್ಲಿ ಹುಡುಗರು ಕೊಡುವ ಮೊಬಲಗಿನ ಅರ್ಧ ಇವರು ಕೊಡಬೇಕಾದ ರುಸುಂ; ಹಣಕಟ್ಟುವ ಪರೀಕ್ಷೆಗಳಲ್ಲಿಯೂ ಇದೇ ದಾಕ್ಷಿಣ್ಯ ತೋರಲಾಗುತ್ತಿದೆ. ವಿದ್ಯಾರ್ಥಿ ವೇತನಗಳನ್ನು ಕೊಡುತ್ತಾರೆ; ಉತ್ತಮ ರೀತಿಯಲ್ಲಿ ತೇರ್ಗಡೆ ಹೊಂದಿದವರಿಗೆ ಬಹುಮಾನ ಪಾರಿತೋಷಿಕಗಳು ಲಭಿಸುತ್ತವೆ. ವಿದ್ಯಾರ್ಥಿನಿಯರಿಗಾಗಿ ವಸತಿಗೃಹಗಳು, ಕ್ರೀಡಾಂಗಣಗಳು, ಸ್ಪರ್ಧೆ ಮೊದಲಾದ ಉತ್ತೇಜನಗಳು ವಿಶೇಷವಾಗಿವೆ. ಪಾಠಕ್ರಮಕ್ಕೆ ಸೇರದ ಚಟುವಟಿಕೆ, ಸಾಧನಗಳು, ಶಿಸ್ತು, ಸಂಘಟನೆಗಳು ಏರ್ಪಟ್ಟಿವೆ: ಶಾಲಾ ಮಂದಿರಗಳ ಸಂಘಗಳು, ಅಂಗಸಾಧನೆಯ ಯೋಜನೆಗಳು, ಗರ್ಲ್‌ಗೈಡ್ ಮುಂತಾದ ವ್ಯವಸ್ಥೆಗಳು; ಪ್ರಥಮಚಿಕಿತ್ಸೆ ಮೊದಲಾದವುಗಳ ತಿಳಿವಳಿಕೆ. ಮೈಸೂರಿನ ಕೈಗಾರಿಕೆಯ ಶಾಲೆ ಹೆಂಗಸರಿಗೆ ವೇತನಕೊಟ್ಟು, ಕೈಕೆಲಸ ಕಲಿಸುತ್ತದೆ. ಅವರ ಜೀವನೋಪಾಯಕ್ಕೆ ಅವಕಾಶ ಕಲ್ಪಿಸುತ್ತದೆ. ಹಳ್ಳಿಗಳಲ್ಲಿ ಸಹ ವಿದ್ಯಾಶಾಖೆಯ

ಅಧಿಕಾರಿಗಳು ಪರಿಶೀಲನೆಯ ಕಾಲದಲ್ಲಿ ಜನರಿಗೆ ಕೊಡುವ ತಿಳುವಳಿಕೆಯಿಂದ, ಶ್ರದ್ಧೆಯ ಮಾತುಕತೆಯಿಂದ ಹುಡುಗಿಯರ ಓದಿನ ಸಲಕರಣೆಗಳು ಹೆಚ್ಚುತ್ತಿವೆ. ಆಯಾ ಪೌರಸಭೆಯವರ ಸಹಾಯವು ದೊರೆತಿದೆ. ಅಖಿಲ ಭಾರತ ಮಹಿಳಾ ಪರಿಷತ್ತಿನ ಮೈಸೂರು ಶಾಖೆಯೂ, ಬೆಂಗಳೂರ ಮಹಿಳಾ ಸಮಾಜದಂಥ ಸ್ತ್ರೀಯರ ಏಳಿಗೆಗಾಗಿ ಹುಟ್ಟಿರುವ ಸಂಸ್ಥೆಗಳೂ ಹತ್ತಿರದ ಹಳ್ಳಿಗಳಲ್ಲಿ ಬಾಲಿಕಾಶಾಲೆಗಳನ್ನು ನಡಸುತ್ತಿವೆ. ಆದರೆ ಸ್ತ್ರೀಯರ ವಿದ್ಯಾಭ್ಯಾಸ ಸರಕಾರದ ವೆಚ್ಚ, ಖರ್ಚಿನಿಂದಲೇ ಮೈಸೂರಿನಲ್ಲಿ ಮುಂದುವರಿದಿದೆ.

ಮೈಸೂರಿನ ಸ್ತ್ರೀಯರ ವಿದ್ಯಾಭ್ಯಾಸದ ಇತಿಹಾಸದಲ್ಲಿ ಮಹಾರಾಣಿ ಕಾಲೇಜಿನ ಸ್ಥಾನ ಅಪೂರ್ವವಾಗಿದೆ. ಮಹಾಮಾತೃಶ್ರೀ ವಾಣೀವಿಲಾಸ ಸನ್ನಿಧಾನದವರು ಇದಕ್ಕೆ ಕೃಪಾಶ್ರಯ ಕೊಟ್ಟರು. ಅಂಬಿಲ್ ನರಸಿಂಹ ಅಯ್ಯಂಗಾರ್‌ರವರು ಸ್ತ್ರೀಯರ ವಿದ್ಯಾಭ್ಯಾಸವಲ್ಲಿ ತಮಗಿರುವ ಆಸಕ್ತಿಯಿಂದ, ಬಿಚ್ಚುಗೈಯಿಂದ ಕೊಟ್ಟ ಹಣದಿಂದ ಪ್ರಾರಂಭದ ದೆಸೆಯಲ್ಲಿ ಸ್ತ್ರೀಯರು ಕಾಲೇಜಿಗೆ ಅಂದಿನ ರೂಢಿಯನ್ನು ಕಡೆಗಣಿಸಿ ಬರುವಂತಾಯಿತು. ಸರಕಾರದವರ ಘನಪೋಷಣೆಯಲ್ಲಿ ಕಾಲೇಜು ಬಲವನ್ನು ಪಡೆಯಿತು. ಮಹಾರಾಣಿ ಕಾಲೇಜಿನ ಮೊದಲ ಮಹಿಳಾ ಪದವೀಧರರಾದ ಲೋಕಸೇವಾಪರಾಯಣೆ ಶ್ರೀಮತಿ ಕೆ. ಡಿ. ರುಕ್ಮಿಣಮ್ಮನವರೂ, ಶ್ರೀಮತಿ ಶ್ರೀರಂಗಮ್ಮನವರೂ ಇಂದಿಗೂ ಸೋದರಿಯರ ಸೇವೆಯಲ್ಲಿ ನಿರತರಾಗಿದ್ದಾರೆ. ಕಳೆದ ವರ್ಷ ಮೈಸೂರಿನಿಂದ ಮಹಾರಾಣಿ ಕಾಲೇಜಿನ ಬಿ.ಎ. ತರಗತಿಗಳನ್ನು ಬೆಂಗಳೂರಿಗೆ ವರ್ಗಾಯಿಸಿ ಇಲ್ಲಿಯ ಮಹಿಳೆಯರ ಇಂಟರ್‌ಮೀಡಿಯೆಟ್ ಕಾಲೇಜನ್ನು ಅದಕ್ಕೆ ಒಂದುಗೂಡಿಸಿಯಾಯಿತು. ಸಾಹಿತ್ಯ ವಿಜ್ಞಾನದ ಶಾಖೆಗಳೆರಡೂ ಈಗ ಗೆಳೆತನದಿಂದ ಕಳಕಳಿಸುತ್ತವೆ. ವಿದ್ಯಾರ್ಥಿನಿಯರು ಬಹು ಸಂಖ್ಯೆಯಲ್ಲಿ ಬಂದು ತಮ್ಮ ವಿನಯದಿಂದ ಪಾಠದಲ್ಲಿಯ ಶ್ರದ್ಧೆಯಿಂದ ಅಧ್ಯಾಪಕಿಯರಿಗೆ ಹೆಮ್ಮೆಯನ್ನು ಉಂಟುಮಾಡುತ್ತಾರೆ. ಸಂಗೀತದ ಅಭ್ಯಾಸಕ್ಕೂ ಅನುಕೂಲವಿದೆ. ಹುಡುಗಿಯರ ಆರೋಗ್ಯದ ಆರೈಕೆ ಪೋಷಣೆಗಾಗಿ ಅವರಿಗೆ ಬಗೆಬಗೆಯ ಆಟಗಳನ್ನು ಕಲಿಸಲು ಅಧ್ಯಾಪಕಿಯೊಬ್ಬರು ನೇಮಕವಾಗಿದ್ದಾರೆ. ವಿದ್ಯಾರ್ಥಿನಿಯರಿಗೆ ತುಂಬುಜೀವನದ ಗುರುತು ಮಾಡಿಕೊಡುವ ಸನ್ನಾಹಗಳೆಲ್ಲ ಅಲ್ಲಿವೆ.

ಇದೇ ಸಂದರ್ಭದಲ್ಲಿ ಪೂನಾ ನಗರದಲ್ಲಿರುವ ನಾಥೀಬಾಯಿ ದಾಮೋದರ ಥಾಕರಸಿಯ 'ಭಾರತೀಯ ಮಹಿಳಾಪೀಠ'ದ ಅಭ್ಯಾಸ ಕ್ರಮವನ್ನು ನೋಡುವುದು ಲೇಸು. ತಾಯ್ನುಡಿಯ ವ್ಯಾಸಂಗ ನಿರ್ಬಂಧದ ಪಾಠಗಳ ಗುಂಪಿನಲ್ಲಿ, ಐಚ್ಛಿಕ ಪಾಠಗಳ ಗುಂಪಿನಲ್ಲಿ ಒಂದು ಸ್ಥಾನಮಾನವನ್ನು ಹೊಂದಿದೆ; ಇಂಗ್ಲಿಷ್ ವ್ಯಾಸಂಗಕ್ಕೆ ಮಾತ್ರ ಇಂಗ್ಲಿಷ್ ಭಾಷೆ ಉಪಯೋಗವಾಗುತ್ತದೆ; ಮಿಕ್ಕ ವಿಷಯಗಳ ಬೋಧಭಾಷೆ ತಾಯ್ನುಡಿ; ಶಿಶುಮನಶ್ಶಾಸ್ತ್ರ ಮುಂತಾದ ವಿಷಯಗಳೊಡನೆ ಗೃಹದ ಅರ್ಥಶಾಸ್ತ್ರ, ಆರೋಗ್ಯಶಾಸ್ತ್ರ ಸೇರಿವೆ; ಸಂಗೀತ, ಚಿತ್ರಕಲೆಗಳಿಗೆ ಪದವಿಯ ತರಗತಿಯವರೆಗೆ ಇಂಬುಂಟು; ಶಿಕ್ಷಣ ತತ್ವದ ಅಭ್ಯಾಸಕ್ಕೆ ಅವಕಾಶವಿದೆ. ಈ ವಿಶ್ವವಿದ್ಯಾನಿಲಯಕ್ಕೆ ವಿದ್ಯಾರ್ಥಿನಿಯರನ್ನು ಒದಗಿಸಲು ಮಹಾರಾಷ್ಟ್ರದ ಮುಖ್ಯ ಪಟ್ಟಣಗಳಲ್ಲಿ ಕನ್ಯಾ ಶಾಲೆಗಳುಂಟು.

ಡಾ॥ ರವೀಂದ್ರನಾಥ ಠಾಕೂರರವರ 'ಶಾಂತಿನಿಕೇತನ', 'ವಿಶ್ವಭಾರತಿ', 'ಶ್ರೀನಿಕೇತನ'ಗಳು ಹಿಂದಿನ ಗುರುಕುಲವನ್ನು ನೆನಪಿಗೆ ತರುವ ಆಧುನಿಕ ವಿದ್ಯಾ ಸಂಸ್ಥೆಗಳು. ಇಲ್ಲಿ ದೇಶ ಭಾಷೆಯಲ್ಲಿ ಪಾಠಹೇಳುವದು; ಇಂಗ್ಲಿಷು ದ್ವಿತೀಯ ಭಾಷೆ; ಸಹವಿದ್ಯಾಭ್ಯಾಸ; ಪರೀಕ್ಷೆಗಳಿಲ್ಲ. ಠಾಕೂರರ ಸರಸ್ವತೀ ಪೀಠ ಸಂಸ್ಕೃತಿದಾನ ಮಾಡುವದು, ಸಂಶೋಧನೆಗೆ ಉತ್ತೇಜನ ಕೊಡುವದು—ಈ ಎರಡು ವಿಶ್ವವಿದ್ಯಾ ನಿಲಯಗಳ ಮಹಾ ಆದರ್ಶಗಳನ್ನು ಕೈಕೊಂಡಿದೆ. 'ಶ್ರೀನಿಕೇತನ' ಬಗೆಬಗೆಯ ಕೈಕಸಬುಗಳನ್ನು ಹೇಳಿಕೊಡುವುದರ ಜತೆಗೆ ವಿದ್ಯಾರ್ಥಿಗಳಲ್ಲಿ ಹೆಚ್ಚು ಕಲಾಭಿ ರುಚಿಯನ್ನು ಉಂಟುಮಾಡುತ್ತದೆ.

ವಿದ್ಯಾಭ್ಯಾಸದ ಹೆಗ್ಗುರಿ ಸಂಸ್ಕೃತಿಯನ್ನು ಗಳಿಸುವದು; ಬದುಕಿನ ಎಲ್ಲ ಕ್ಷೇತ್ರಗಳಲ್ಲಿ ಇರುವಾಗಲೂ ಸಭ್ಯತೆಯನ್ನು ಆಚರಿಸುವದು; ಹುಡುಗಿಯರು ಹದಿನಾರು, ಹದಿನೆಂಟು ವರ್ಷಗಳ ಕಾಲ ಶಾಲೆ ವಿದ್ಯಾಲಯಗಳಲ್ಲಿ ಓದಿ ಪದವೀ ಧರರಾದರೂ ತಿಳಿದದ್ದನ್ನು ಕಡೆಯವರೆಗೆ ಉಳಿಸಿಕೊಂಡು ಬೆಳಸಲು ತಕ್ಕ ಸನ್ನಿವೇಶಗಳನ್ನು ಹವಣಿಸಿಕೊಳ್ಳಬೇಕಾಗುತ್ತದೆ. ಮುಕ್ಕಾಲುಪಾಲು, ಸುಶಿಕ್ಷಿತ ಸ್ತ್ರೀಯರೂ ಮದುವೆ ಮಾತೃತ್ವಗಳನ್ನು ಧ್ಯೇಯವಾಗಿ ಇಟ್ಟುಕೊಳ್ಳುವುದರಿಂದ ಅವರು ಸ್ತ್ರೀಯರ ಮೇಲ್ಮೆಗಾಗಿ ಶ್ರಮಿಸುತ್ತಿರುವ ಸಂಸ್ಥೆಗಳಿಗೆ ಹೋಗಿ ಬಂದು ವಿದ್ಯೆಯ ಸಂಸ್ಕಾರವನ್ನು ಪೋಷಿಸಬೇಕಾಗುತ್ತದೆ. ಈ ದೃಷ್ಟಿಯಿಂದ ಮಹಿಳಾ ಸಂಸ್ಥೆಗಳು ವಿದ್ಯಾಮಂದಿರಗಳು; ಸೋದರಿಯರ ತಿಳಿವಿಗಾಗಿ ಅವು ದುಡಿಯುವದ ರಿಂದ ಗಣ್ಯವಾದುವು.

ಸಂಸ್ಕೃತಿಯ ಪರಿಚಯಕ್ಕೆ ಸಾಕಷ್ಟು ಗಮನವನ್ನು ಮಹಿಳಾ ಸಂಸ್ಥೆಗಳು ಕೊಡಲಾರವು. ಬೇರೆ ವಿಷಯಗಳ ಪಾಠಪ್ರವಚನಗಳು, ಕೈಕೆಲಸದ ತರಗತಿಗಳು, ಆಟಪಾಟದ ಯೋಜನೆಗಳು—ಇವುಗಳು ಲಕ್ಷ್ಯವನ್ನು ಸೆಳೆದಿರುತ್ತವೆ. ಸಂಸ್ಕೃತಿ ಲಾಭವನ್ನು ಸಾಹಿತ್ಯ ಪಾಠಗಳ ಮೂಲಕ ಜನಸಾಮಾನ್ಯಕ್ಕೂ ಸ್ತ್ರೀಯರಿಗೂ ಮಾಡಿಕೊಡಬೇಕೆಂಬ ಸದುದ್ದೇಶದಿಂದ ಕನ್ನಡ ಸಾಹಿತ್ಯ ಪರಿಷತ್ತು ಬಹು ವರ್ಷ ಗಳಿಂದ ದುಡಿಯುತ್ತಿದೆ. ವಿಶೇಷೋತ್ಸವಗಳಲ್ಲಿ ಮಹಿಳಾ ಗೋಷ್ಠಿಯು ಏರ್ಪಾಟು ಆಗುತ್ತದೆ. ಪರಿಷತ್ತಿನ ಮಾನ್ಯ ಉಪಾಧ್ಯಕ್ಷರಾದ ರಾಜಸೇವಾಸಕ್ತ ಶ್ರೀಮಾನ್ ಬಿ. ಎಂ. ಶ್ರೀಕಂಠಯ್ಯನವರ ನೇತೃತ್ವದಲ್ಲಿ ಕಳೆದ ವರ್ಷ 'ಮಹಿಳಾ ಶಾಖೆ' ಯೊಂದು ಪರಿಷತ್ತಿನಲ್ಲಿ ಸ್ಥಾಪಿತವಾಗಿದೆ. ಇಲ್ಲಿ ಸಾಹಿತ್ಯ, ಸಂಗೀತ, ಉತ್ಸವ— ಈ ವಿಚಾರವಾಗಿ ಕಾರ್ಯಕ್ರಮಗಳು ನಡೆದು ಸ್ತ್ರೀ ಸಾಮಾನ್ಯರಿಗೆ ತಿಳಿವನ್ನು ಒದಗಿಸುತ್ತದೆ. ನನ್ನ ವಿದ್ಯಾಗುರುಗಳಾದ ಪೂಜ್ಯ 'ಶ್ರೀ'ಯವರು ಮೈಸೂರು ಸಂಸ್ಥಾನದ ಮತ್ತು ಹೊರಗಿನ ಮಹಿಳಾ ಸಂಸ್ಥೆಗಳಿಗೆ ಉದಾರ ಮನಸಿನಿಂದ ಧನ ಸಹಾಯವನ್ನು ಮಾಡಿದ್ದಾರೆ. ಉತ್ತಮವಾದ ತಿಳಿವನ್ನು ಅಮೃತರಸ ದಂತೆ ಹಿತವಾದ ಮಾತುಗಳಲ್ಲಿ ನೀಡಿದ್ದಾರೆ. ಕರ್ನಾಟಕ ಸಂಸ್ಕೃತಿಯ ಚಿತ್ರದ ಪರಿಚಯವನ್ನು ಕನ್ನಡ ಸಾಹಿತ್ಯದ ಅಭ್ಯಾಸದಿಂದ ಕನ್ನಡಿಗರಿಗೆ, ಇತರರಿಗೆ, ಸುಲಭ ದಲ್ಲಿ ಮಾಡಿಕೊಡಬಹುದೆಂದು ಕನ್ನಡದಿಂದ ಕನ್ನಡ ಜನತೆಯ ರುಚಿ ಶುದ್ಧಿಯನ್ನೂ ಬದುಕಿನ ನೀತಿಯನ್ನೂ ಸಾಹಿತ್ಯ ಪರೀಕ್ಷೆಗಳ ತರಗತಿಗಳ ಮೂಲಕ ಅತ್ಯುತ್ಕೃಷ್ಟ

ಗೊಳಿಸಲು ವಿಶೇಷ ಶ್ರಮಪಡುತ್ತಾರೆ. ಮಾನ್ಯರಾದ 'ಶ್ರೀ'ಯವರ ಪ್ರಯತ್ನ ಗಳಿಂದ ಮಹಿಳೆಯರಿಗೆ ಪರಿಷತ್ತಿನಲ್ಲಿ ಗೌರವದ ಸ್ಥಾನವೂ ಅವರ ಉತ್ಕರ್ಷಕ್ಕೆ ಅವಕಾಶವೂ ದೊರಕಿವೆ. ಇದಕ್ಕಾಗಿ ಪರಿಷತ್ತಿನ ಗಣ್ಯ ಉಪಾಧ್ಯಕ್ಷರಿಗೆ ಮಹಿಳೆಯರ ಕೃತಜ್ಞತಾಪೂರ್ವಕವಾದ ವಂದನೆಗಳು ಸಲ್ಲಬೇಕಾಗಿವೆ.

ಸ್ತ್ರೀಯರ ವಿದ್ಯಾಭ್ಯಾಸದ ವಿಚಾರವಾಗಿ ಶಿಕ್ಷಣ ಶಾಸ್ತ್ರಜ್ಞರಲ್ಲಿ ಭಿನ್ನಾಭಿಪ್ರಾಯವಿದೆ. ಸ್ತ್ರೀಯರು ಭಾವನಾ ಪ್ರಧಾನ ವ್ಯಕ್ತಿಗಳಾದುದರಿಂದ ಅವರಿಗೆ ಆ ಒಲವುಗಳು ವಿಕಾಸವಾಗುವ ಕಲಾಭ್ಯಾಸವಾದರೆ ಸಾಕು. ಸಂಸಾರನಿರ್ವಹಣ ಅವರ ಕಾರ್ಯ; ಮಕ್ಕಳನ್ನು ಪೋಷಿಸುವದು ಅವರ ಜೀವನ ಕರ್ತವ್ಯ. ಆದುದರಿಂದ 'ಮನೆಯ ಮಹಾರಾಣಿ'ಯಾಗಬಲ್ಲ, ತಕ್ಕಮಟ್ಟಿನ ಉದಾರ ಶಿಕ್ಷಣ, ಹೆಚ್ಚಿನ ಗೃಹಸಂಬಂಧದ ಶಾಸ್ತ್ರೀಯ ಅರಿವು, ಮಿತವ್ಯಯದ ಮೂಲ ಸೂತ್ರಗಳ ಗ್ರಹಿಕೆ– ಇವು ಇದ್ದರೆ ಸಾಕು ಎನ್ನುವರು. ಆದರೆ, ತಾಯ್ನಾಡಿನ ಚರಿತ್ರೆ, ಸಂಸ್ಕೃತಿ, ಮಹಾ ವ್ಯಕ್ತಿಗಳ ಅರಿವು ಅವರಿಗೆ ಖಂಡಿತವಾಗಿ ಬೇಕು. ಕೈಗಾರಿಕೆಯಲ್ಲಿ ಪರಿಶ್ರಮವಿರಬೇಕು. ಸಬಲೆಯರಾಗಿ ತಮ್ಮ ಸಾಮಾಜಿಕ, ಆರ್ಥಿಕ ಹಕ್ಕುಬಾಧ್ಯತೆಗಳ ತಿಳಿವುಳ್ಳವರೂ, ಅವನ್ನು ಸಮಯದಲ್ಲಿ ಉಪಯೋಗಿಸಬಲ್ಲವರೂ ಆಗಿರಬೇಕು. ರಾಷ್ಟ್ರೀಯ ಕರ್ತವ್ಯದ ಮಹತ್ವವನ್ನು ಮನಗಂಡು ದೇಶಾಭಿಮಾನದಿಂದ •ತುಂಬಿದವರೂ, ಆಯಾ ಪ್ರಾಂತದಲ್ಲಿ ಸಿದ್ಧವಾಗುವ ಸರಕು, ಸುಗಂಧಗಳನ್ನು ಬಳಸುವ ವೀರಾಭಿಮಾನವುಳ್ಳವರೂ ಆಗಬೇಕು. ಇದು ಒಂದು ಮತ. ಸ್ತ್ರೀಯೂ ಬುದ್ಧಿಶಕ್ತಿಯುಳ್ಳ ಮನುಷ್ಯವ್ಯಕ್ತಿಯಾದುದರಿಂದ ಆಕೆಯ ಮನಸಿಗೆ ಸಮತೋಲ ಆವಶ್ಯಕವಾಗಿ ಬೇಕು. ಉದಾರವಾದ ಉಚ್ಚ ಶಿಕ್ಷಣವೂ, ವೈಜ್ಞಾನಿಕ ವ್ಯಾಸಂಗವೂ ಆಕೆಯ ಪೂರ್ಣವಿಕಾಸಕ್ಕೆ ಬೇಕೇ ಬೇಕು. ಮುಂದುವರಿದ ನವಯುಗದಲ್ಲಿ ಆಕೆ ಮನುಷ್ಯತ್ವದ ಸೀಮೆ ಮಹಿಮೆಯನ್ನು ತಿಳಿಯಲಾರದೆಹೋದರೆ ತುಂಬು ಬೆಳವಣಿಗೆಯನ್ನು ಹೊಂದುವುದು ಹೇಗೆ? ರಾಗ ಪ್ರಧಾನವಾಗಿದ್ದರೆ ಅದು ಅಧೀನವಾಗುವಂಥ ವಿದ್ಯೆ ಹೊಂದಲಿ. ತಿಳಿವಿನ ಹೊಳಪನ್ನು ಕಾಣುವಾಗ ವ್ಯತ್ಯಾಸ ಮಾಡಲೇಕೆ? ಇದಲ್ಲದೆ, 'ವಿದ್ಯೆ ವಿರಾಮಕಾಲದ ಸದ್ವಿನಿಯೋಗಕ್ಕೆ ಸಹಾಯಕ.' ಸಾಹಿತ್ಯಾಭ್ಯಾಸದಿಂದ ಮನಸ್ಸಿನ ರಾಗದ ಶಕ್ತಿಗೆ ನಯವುಂಟಾಗುವುದು; ವಿಜ್ಞಾನದ ತಿಳಿವಳಿಕೆಯಿಂದ ಬುದ್ಧಿಗೆ ನಯ ಬರುವದು, ಒಟ್ಟು ಚಿತ್ತಸಂಸ್ಕಾರ ಸುಲಭದಲ್ಲಿ ಆಗುವದು. ಆದುದರಿಂದ ವಿಶ್ವವಿದ್ಯಾನಿಲಯಗಳಲ್ಲಿ ಪುರುಷರಿಗೆ ದೊರೆಯುವ ಬುದ್ಧಿಶಕ್ತಿಯನ್ನು ತಿದ್ದುವ ವಿದ್ಯಾಭ್ಯಾಸವೇ ಸ್ತ್ರೀಯರಿಗೂ ಸಿಗಾಗವಾಗಬೇಕು. ಭಾರತೀಯ ಹೆಣ್ಣುಮಕ್ಕಳಿಗೆ ಕಡ್ಡಾಯವಾಗಿ, ಉಚಿತವಾಗಿ ಪ್ರಾಥಮಿಕ ವಿದ್ಯಾಭ್ಯಾಸ ಮಾಡಿಸಿದರೆ ಮಾತ್ರ ಭಾರತ ಮಹಿಳೆಯರ ಅಂತಸ್ತು ಹೆಚ್ಚುವುದು. ಉಚ್ಚ ಶಿಕ್ಷಣ ಸಾಧ್ಯವಾಗುವುದು. ಸಂಸ್ಕೃತಿ ಸುವಿಚಾರಗಳು ಒಳಗೆ ತುಂಬಿದ್ದರೆ ಸಂಸಾರವತಿಯಾದ ಮಹಿಳೆ ಯಾವ ಸನ್ನಿವೇಶದಲ್ಲಿದ್ದರೂ ಅದನ್ನು ಒಗ್ಗಿಸಿಕೊಳ್ಳಬಲ್ಲಳು. ಕುಟುಂಬ ಪದ್ಧತಿ ಅವಿಭಕ್ತವಾಗಿರಲಿ, ವಿಭಕ್ತವಾಗಿರಲಿ ವಿದ್ಯಾವತಿಯಾದ ಮಹಿಳೆ ಉಚ್ಚಾದರ್ಶಗಳಲ್ಲಿ, ಘನಕಾರ್ಯಗಳಲ್ಲಿ ತಾದಾತ್ಮ್ಯಹೊಂದಿ ಮನೆಯ ಆವರಣವನ್ನು ಉದಾತ್ತಮಾಡಬಲ್ಲಳು. ಅನೇಕ ಕುಟುಂಬಗಳು ಸೇರಿ ಒಂದು

ರಾಷ್ಟ್ರವಾಗುತ್ತದೆ. ಒಂದು ರಾಷ್ಟ್ರ ಅದರ ಸ್ತ್ರೀಯರ ಸಂಸ್ಕೃತಿಯ ಮಟ್ಟಕ್ಕೆ ಮಾತ್ರ ಬೆಳೆಯುವದು.

ಕಡೆಯ ಮಾತಾಗಿ, ವಿದ್ಯೆ ಎಲ್ಲ ಶಕ್ತಿ ಸಂಚಯಗಳಿಗೆ ಮೂಲಧನ. ಬದುಕಿನ ಸಂಗಾತಿ, ಶುಭಶಕ್ತಿ; ಅದರ ವ್ಯಾಪ್ತಿ ವೈಶಾಲ್ಯ ಅನಂತವಾಗಿದೆ. ಸ್ತ್ರೀಯರೂ ಹೊಸಯುಗದ ಧರ್ಮದಲ್ಲಿ ಜೀವಿಸಬೇಕು; ಬದುಕಿನ ಹೊಸ ಬೆಲೆಗಳನ್ನು ಹಿಡಿದು ಅದರಂತೆ ನಡೆದು ಬೆಳೆಯಬೇಕು.

ಡಿ. ಚಂಪಾಬಾಯಿ

# ಗೃಹಸುಖ

ಪರಸ್ಪರ ಪ್ರೇಮವೂ ತಿಳುವಳಿಕೆಯೂ ಇಲ್ಲದೆ ತಮ್ಮ ಸಂಸಾರ ರಥವನ್ನು ಏಕಪ್ರಕಾರವಾಗಿ ಸಾಗಿಸಿಕೊಂಡು ಮುಂದುವರಿಯಲು ಯಾವ ದಂಪತಿಗಳಿಗೂ ಸಾಧ್ಯವಿಲ್ಲವೆಂಬ ಮಾತು ಅಕ್ಷರಶಃ ನಿಜ. ಪ್ರತಿಯೊಬ್ಬ ತರುಣನೂ ತರುಣಿಯೂ ತನ್ನ ಸಂಸಾರ ಸುಖಮಯವಾಗಿರಬೇಕು, ಯಾವಾಗಲೂ ಪ್ರಕಾಶಮಾನವಾಗಿ ಬೆಳಗುತಿರಬೇಕು ಎಂದು ಇಚ್ಛಿಸುವುದು ಸಹಜವಾಗಿದೆ. ಆದರೆ ಅವರು ಒಂದು ಮಾತನ್ನು ಮಾತ್ರ ಯಾವಾಗಲೂ ಗಮನದಲ್ಲಿಟ್ಟುಕೊಳ್ಳಬೇಕಾಗುವುದು. ಬರೀ ಪ್ರೇಮವಿವಾಹದಿಂದ ಇದು ಸಾಧ್ಯವಾಗಲಾರದು. ಪಾಶ್ಚಾತ್ಯ ವಿದ್ಯೆಯ ಪ್ರಭಾವ ದಿಂದ, ಅವರ ಸಾಮಾಜಿಕ ಜೀವನದ ಆದರ್ಶಗಳಿಂದ, ಅವರ 'ಸುಧಾರಣೆ'ಯಿಂದ ನಮ್ಮ ತರುಣ ತರುಣಿಯರ ಮನಸ್ಸಿನ ಪರಿಯೇ ಬದಲಾಗುತ್ತ ಬಂದಿದೆ. ಹಿರಿಯರು ಮಗಳಿಗೋಸ್ಕರ ಯೋಗ್ಯ ವರನನ್ನು ಹುಡುಕುವುದನ್ನಾಗಲಿ, ಮಗನಿಗೆ ಒಳ್ಳೇ ಹೆಣ್ಣು ತರಬೇಕೆಂಬ ಅವರ ಲವಲವಿಕೆಯನ್ನಾಗಲಿ ನಮ್ಮ ಆಧುನಿಕ ತರುಣ ತರುಣಿಯರು ಸಂಶಯಾತ್ಮಕ ದೃಷ್ಟಿಯಿಂದ ನೋಡುವ ಕಾಲ ಬಂದೊದಗಿದೆ. ಪ್ರೇಮ ವಿವಾಹವೇ ಶ್ರೇಷ್ಠವೆಂದೂ ಅದನ್ನೇ ಸಂಪ್ರದಾಯವಾಗಿ ಇಟ್ಟುಕೊಳ್ಳ ಬೇಕೆಂದೂ ಅವರು ಕಾದಾಡುವ ಕಾಲ ಬಂದಿದೆ.

ಪ್ರೇಮವಿವಾಹ ಗೃಹಸುಖಕ್ಕೆ ಅಡಿಗಲ್ಲಾಗಿರುವುದು ನಿಜವಿರಬಹುದು; ಉಚಿತವೂ ಇರಬಹುದು. ಆದರೆ ಆ ಪ್ರೇಮವೊಂದೇ ಮುಂದೆ ಸಂಸಾರಸುಖಕ್ಕೆ, ಗೃಹಸುಖಕ್ಕೆ ಸಹಕಾರಿಯಾಗಬಹುದೆ ಎಂಬುದನ್ನು ಮಾತ್ರ ನಮ್ಮ ತರುಣ ದಂಪತಿ ಗಳು ವಿಚಾರಮಾಡತಕ್ಕಂತಹ ವಿಷಯವಾಗಿದೆ. ವೈವಾಹಿಕ ಜೀವನವು ಬರೀ ಪ್ರೇಮವಲ್ಲ. ಅದಕ್ಕೆ ಪ್ರೇಮಕ್ಕಿಂತಲೂ ಮೇಲಿನ ಹಂತಗಳಿವೆ. ಅದನ್ನು ಒಂದೊಂದಾಗಿ ಏರದೆ ನಾವು ಸುಖದ ಸೋಪಾನವನ್ನು ಮುಟ್ಟಲಾರೆವು. ಭಿನ್ನ ವಿಚಾರಗಳುಳ್ಳವರೂ, ಭಿನ್ನ ಭಿನ್ನ ಅಭಿಪ್ರಾಯವುಳ್ಳವರೂ, ಭಿನ್ನ ಭಿನ್ನ ಆದರ್ಶ ಗಳುಳ್ಳವರೂ ಆದ ಎರಡು ಜೀವಿಗಳು "ನಮ್ಮ ಜೀವನವನ್ನು ವಿವಾಹವೆಂಬ ಶೃಂಖಲೆಯಿಂದ ಬಂಧಿಸಿ ಈ ಜಗತ್ತಿನಲ್ಲಿ ಕಾಲಿಟ್ಟಿದ್ದೇವೆ. ಇಂದಿನಿಂದ ನಾವು ಸಹಭಾಗಿಗಳು. ಏನಿದ್ದರೂ ಈ ಬಂಧನದಿಂದ ಬಿಡಿಸಿಕೊಳ್ಳಲಾರೆವು. ಆ ಪವಿತ್ರ ಶೃಂಖಲೆ ದೇವದತ್ತವಾದುದು. ಕಷ್ಟದಲ್ಲಾಗಲಿ ಸುಖದಲ್ಲಾಗಲಿ, ಬಡತನದಲ್ಲಾಗಲಿ ಶ್ರೀಮಂತಿಕೆಯಲ್ಲಾಗಲಿ, ಅನ್ಯೋನ್ಯಾಶ್ರಯದಿಂದ ಒಬ್ಬರಿ ಗೊಬ್ಬರು ತಿಳಿದುಕೊಂಡು ನಮ್ಮ ಜೀವನವನ್ನು ಸುಖಮಯವಾಗಿ ಮಾಡಿಯೇ ಜೀವನದ ಕೊನೆ ಮುಟ್ಟುವೆವು" ಎಂಬ ಪ್ರತಿಜ್ಞೆಯನ್ನು ಮಾಡಲೇಬೇಕು. ಆಗ ಮಾತ್ರ ಅವರ ಗೃಹಸುಖ ಆದರ್ಶವಾಗುವುದು. ಪಾಶ್ಚಾತ್ಯರಲ್ಲಿ ಕೂಡ ಪಾದ್ರಿಯು ಮದುವೆ ನಡಸುವ ಕಾಲಕ್ಕೆ ಅಂತಹ ಅರ್ಥವುಳ್ಳ ಮಾತುಗಳೇ ಬರುತ್ತವೆ. "ಇಹಲೋಕದಲ್ಲಾಗಲಿ ಪರಲೋಕದಲ್ಲಾಗಲಿ ನಿನಗೆ ನಾನು ವಿಧೇಯಳಾಗಿ ನಿನ್ನ ಸುಖ ದುಃಖದಲ್ಲಿ ಸಹಭಾಗಿಯಾಗಿ ಇರುವೆನು" ಎಂಬ

ಅರ್ಥದ ಮಾತುಗಳನ್ನು ವಧುವು ವರನಿಗೆ ಹೇಳುವಳು. ಇದು ಹೆಣ್ಣುಗಳಿಗೆ ಮಾತ್ರ ಅನ್ವಯಿಸುವುದಿಲ್ಲ. ವರನೂ ಈ ರೀತಿ ದೃಢಪ್ರತಿಜ್ಞನಾಗಬೇಕು. ಮದುವೆಯ ಸಮಯದಲ್ಲಿ ದಂಪತಿಗಳೊಳಗೆ ಈ ತರದ ಕರಾರು, ಪರಸ್ಪರ ಪ್ರತಿಜ್ಞಾಬಂಧನ ಇದ್ದರೆ ಆ ಸಂಸಾರ ಸುಖಮಯವಾಗಿ ಸಾಗುವುದು. ವ್ಯಾಪಾರದಲ್ಲಿ ಪಾಲುಗಾರಿಕೆ ಇದ್ದಂತೆಯೇ ದಂಪತಿಗಳೂ ಜೀವನದ ವ್ಯಾಪಾರದಲ್ಲಿ ಉಚ್ಚವಾದ ಆದರ್ಶಗಳಿಂದ ಬಂಧಿತರಾದರೇನೇ ಅವರ ಸಂಸಾರದ ರಥ ಕಲ್ಲುಮುಳ್ಳುಗಳಿಲ್ಲದೆ ಒಳ್ಳೇ ಸೊಗಸಾದ ಪಥದಲ್ಲಿ ಸಹಜವಾಗಿ ಹೋಗಲು ಸಾಧ್ಯ. ಒಟ್ಟಿನಲ್ಲಿ ಹೇಳುವುದಾದರೆ ವೈವಾಹಿಕ ಜೀವನ ವಿಜಯಿಯಾಗಬೇಕಾದರೆ ಕೇವಲ ಹೃದಯಗಳ ಮಿಲನ ಮಾತ್ರವಲ್ಲ, ಮಿದುಳುಗಳ ಮಿಲನವೂ ಅಗತ್ಯ.

ಈ ಪವಿತ್ರಬಂಧನದ ಮಹತ್ವವನ್ನು ತಿಳಿಯದೆ ನಮ್ಮ ಆಧುನಿಕ ತರುಣ ತರುಣಿಯರು ಕೇವಲ ಹೃದಯ ಮಿಲನಗಳ ಬಲದಿಂದಲೇ ಇಂದು ಸಂಸಾರವಲ್ಲಿ ಕಾಲಿಡಲು ಯತ್ನಿಸುತ್ತಾರೆ. ಯೌವನದ ಬಿಸಿರಕ್ತದ ಹರಿತ ಅವರಲ್ಲಿ ಎಷ್ಟು ಒತ್ತಾಟಮಾಡುತ್ತದೆಂದು ಹೇಳಿದರೆ ಅವರು ಬೇರೆ ಯಾವ ವಿಚಾರವನ್ನೂ ಮಾಡದೆಯೇ ಕೇವಲ ಪ್ರೇಮಕ್ಕೆ ಬಲಿಯಾಗಿ ವಿವಾಹ ಮಾಡಿಕೊಳ್ಳುತ್ತಾರೆ. ಯೌವನದ ಬಿಸಿ ಆರಲು ಅವರೊಳಗೆ ಪ್ರೇಮವೂ ಕ್ರಮೇಣ ಕಡಮೆಯಾಗುತ್ತ ಬಂದು ಕೊನೆಗೆ ಅವರ ವೈವಾಹಿಕಜೀವನದ ನೌಕೆ ಅನೇಕ ಬಿರುಗಾಳಿಗಳಿಗೆ ಸಿಲುಕಿ ಆಮೇಲೆ ಬಂಡೆಯೊಂದು ಸಿಕ್ಕಿಬಿಟ್ಟರೆ ಮುಗಿಯಿತು, ನೌಕೆ ಕ್ಷಣದಲ್ಲಿ ಒಡೆದು ಚೂರು ಚೂರಾಗುವುದು. ಪ್ರೇಮ ಒಂದರಿಂದಲೇ ದಿನದ ಇಪ್ಪತ್ನಾಲ್ಕು ಗಂಟೆಗಳನ್ನೂ, ವರ್ಷದ ಹದಿನೆರಡು ತಿಂಗಳುಗಳನ್ನೂ ಕಳೆಯಲು ಯಾವ ಮಾನವನಿಗೂ ಸಾಧ್ಯವೇ? ಇಂತಹ ಅನೇಕ ಪ್ರೇಮವಿವಾಹಗಳನ್ನು ನಾವು ಈಗ ನೋಡಬಹುದು. ನೈಸರ್ಗಿಕ ಇಚ್ಛೆ ಪೂರೈಸಿತೆಂದರೆ ಆ ನಿಸರ್ಗದಿಂದ ಮೋಸಹೋದ ಈ ದಂಪತಿಗಳಿಗೆ ಜೀವನ ನೀರಸವಾಗಿ ತೋರಲು ಮೊದಲಾಗುವುದು. ಮನೋವಿಕಾರಗಳೂ ವಿಚಾರಗಳೂ ಯಾವಾಗಲೂ ಒಂದೇ ರೀತಿಯಾಗಿರುವುದಿಲ್ಲ. ಪ್ರಕೃತಿಯ ಪ್ರೇರೇಪಣೆಯನ್ನು ಅವಳೇ ಭಸ್ಮಮಾಡಲೂ ಶಕ್ತಳಿರುವಳು. ಕೆಲವು ಸಲ ಪ್ರೇಮವೆಂದು ಹಿಗ್ಗಿ ಮಾಡಿಕೊಳ್ಳುವ ವಿವಾಹವೆಂದರೆ ಕೇವಲ ಶರೀರ ಸುಖಕ್ಕೋಸ್ಕರವೂ ಆಗಬಹುದು. ಎರಡು ತರುಣಜೀವಿಗಳ ದೇಹಗಳೂ ತೃಪ್ತಿಯಾದುವೆಂದರೆ, ಅವರಿಗೆ ಆ ಆನಂದದಲ್ಲಿ ಹೊಸತನವೇನೂ ಇಲ್ಲವೆಂದು ತಿಳಿದುಬಂದರೆ, ಅವರ ಗೃಹಸುಖ ಮಾಸುತ್ತ ಬರುವುದು. ಪಾಶ್ಚಾತ್ಯರಲ್ಲಿ ದಾಂಪತ್ಯವಿಚ್ಛೇದಗಳಾಗುವುದಕ್ಕೆ ಇದೇ ಮೊದಲನೆಯ ಕಾರಣವೆಂದು ತಿಳಿದವರು ಹೇಳುತ್ತಾರೆ.

ಇಂದಿನ ಶಿಕ್ಷಿತ ವಾತಾವರಣದಲ್ಲಿ ಅತಿ ಪ್ರಾಚೀನವಾದ ಮದುವೆಯ ರೂಢಿ ತನ್ನ ಬಿಗುವನ್ನು ಕಳೆದುಕೊಂಡಿವೆ, ಇನ್ನೂ ಕಳೆದುಕೊಳ್ಳುತ್ತಲಿದೆ. ಧರ್ಮದ ಕಟ್ಟಳೆಗಳಿಗೆ ಅಷ್ಟು ಮಾನ್ಯತೆ ಇಲ್ಲ. ಮದುವೆ ಎಂಬ ಶಬ್ದದ ಪಾವಿತ್ರ್ಯವೇ ಮಾಯವಾಗಲಾರಂಭಿಸಿದೆ. ಪೂರ್ವಿಕರ ಸಂಪ್ರದಾಯಗಳು ಗೊಡ್ಡು ಸಂಪ್ರದಾಯಗಳಿಂದೂ ಅಂಧಶ್ರದ್ಧೆಗಳಿಂದೂ ನಮ್ಮ ಶಿಕ್ಷಿತ ತರುಣ ತರುಣಿಯರು ಹೇಳುವ ಕಾಲವಿದು. ಮದುವೆ ಎಂದರೆ "ಅಪರಿಚಿತರಾದ ಇಬ್ಬರನ್ನು ತಂದು ಜೀವನ ನಡಸಲು

ಬಿಡುವುದಲ್ಲ; ಅದಕ್ಕೆ ಮೊದಲೇ ಅವರು ಪರಿಚಿತರಾಗಬೇಕು, ಹಾಗಾದರೇನೇ ಅವರು ಸುಖದಿಂದ ಬಾಳಲು ಅನುಕೂಲ'' ಎಂದು ಹೇಳುವವರ ಸಂಖ್ಯೆಯೇ ಹೆಚ್ಚು. ಅವರೊಡನೆ ನಾವಾದರೂ ವಾದಿಸಲು ಶಕ್ತರಿಲ್ಲ. ಆದರೆ ಇಷ್ಟುಮಾತ್ರ ಹೇಳಬಹುದು. ನಮ್ಮ ಹಿಂದೂ ಸಮಾಜದಲ್ಲಿ ಮದುವೆಗೆ ಮುಂಚೆ ಪ್ರೇಮವಿಲ್ಲದೆಯೇ ಒಬ್ಬರಿಗೊಬ್ಬರು ಅಪರಿಚಿತರಾಗಿದ್ದರೂ ಅವರೊಳಗೆ ವಿವಾಹವಾಗುತ್ತಿತ್ತು. ಈ ತರದ ಅನೇಕ ಸಂಸಾರಗಳು ಮೇಲೆ ಹೇಳಿದ ದಂಪತಿಗಳಿಗಿಂತ ಸುಖವಾಗಿಯೇ ಇರುತ್ತಿದ್ದುವು. ಇದು ಏತಕ್ಕೆಂದರೆ ಕೇವಲ ಕಾಮಮೋಹಗಳಿಗೋಸ್ಕರವೇ ನಮ್ಮ ಮದುವೆಗಳೆಂದು ಅವರು ತಿಳಿದುಕೊಳ್ಳುತ್ತಿರಲಿಲ್ಲ. ಧರ್ಮ ಅರ್ಥ ಮೋಕ್ಷವೇ ಮೊದಲಾದ ಪವಿತ್ರ ಆದರ್ಶಗಳಿಂದ ಆ ವಿವಾಹಗಳು ನಡೆಯುತ್ತಿದ್ದುವು. ಗೃಹಸ್ಥಾಶ್ರಮ ಧರ್ಮ, ಪತಿವ್ರತಾ ಧರ್ಮಗಳ ಪಾಠವನ್ನು ತರುಣ ತರುಣಿಯರಿಗೆ ಹೇಳಿಕೊಟ್ಟು ಸಂಸಾರದಲ್ಲಿ ಕಾಲಿಡಲು ಅಣಿಮಾಡುತ್ತಿದ್ದರು. ಆ ನವದಂಪತಿಗಳೂ ಆ ಆದರ್ಶಗಳಿಗನುಸಾರವಾಗಿ ನಡೆದು ತಮ್ಮ ಸಂಸಾರ ಬೆಳಗುವಂತೆ ಮಾಡುತ್ತಿದ್ದರು. ವೈವಾಹಿಕ ಜೀವನದಲ್ಲಿ ಅಪರಿಚಿತರಿಬ್ಬರನ್ನು ತಂದು ಹಿರಿಯರು ಗಂಟುಹಾಕಿದರೂ ಅವರು ಪರಸ್ಪರ ಮಿಲನದಿಂದ, ಪರಸ್ಪರ ಆದರ್ಶಗಳಿಂದ ಒಬ್ಬರಿಗೆ ಮತ್ತೊಬ್ಬರು ಜೀವ ಎಂಬಂತೆ ಇರಲು ಸಾಧ್ಯವಿದೆ. ಅವರ ಪ್ರೇಮವೆಂಬ ಬಳ್ಳಿ ಒಂದೇ ದಿನದಲ್ಲಿ ಹೂ ಹಣ್ಣು ಬಿಡದಿದ್ದರೂ ಕ್ರಮೇಣ ಬೆಳೆದು ಫಲಕೊಡುವುದರಲ್ಲಿ ಏನೇನೂ ಸಂದೇಹವಿಲ್ಲ. ಇಂತಹ ಫಲದಿಂದಲೇ ಅವರ ಗೃಹಸುಖ ಕೊನೆಯವರೆಗೂ ಅಚಲವಾಗಿ ನಿಲ್ಲಲು ಶಕ್ತಿಯುಳ್ಳದಾಗುತ್ತದೆ. ಅಂತೇ ನಮ್ಮ ಸಮಾಜದಲ್ಲಿ ವಯಸ್ಸುಹೋದಂತೆ ಪತಿ ಪತ್ನಿಯರ ಪ್ರೇಮ ಅಧಿಕವಾಗಿ ಅವರು ಧೈರ್ಯದಿಂದಲೂ ಆನಂದದಿಂದಲೂ ಮುಂದಕ್ಕೆ ಸಾಗುತ್ತಿರುವುದನ್ನು ನಾವು ನೋಡಬಹುದು. ಸಂಸಾರದಲ್ಲಿ ಬರುವ ಸಾಮಾನ್ಯವಾದ ಸುಖ ದುಃಖ ಆಪತ್ತುಗಳಲ್ಲಿ ಅವರು ಸಮಭಾಗಿಗಳಾಗಿ ಒಬ್ಬರಿಗೊಬ್ಬರು ಸಹಕರಿಸಿ ಮುಂದುವರಿಯುತ್ತಾರೆ. ಪಾಶ್ಚಾತ್ಯ ಶಿಕ್ಷಣ ಪಡೆದು ಅವರ ಆದರ್ಶಗಳುಳ್ಳ ನಮ್ಮ ತರುಣ ತರುಣಿಯರು ಇದನ್ನು ಖಂಡನೆಮಾಡಬಹುದು. "ಹುಚ್ಚು! ಹಿರಿಯರು ಹುಡುಕಿ ತಂದ ಹುಡುಗನಿಗೆ ಹುಡುಗಿಯನ್ನು ಕೊಟ್ಟರೆ ಅವಳಿಗೆ ಅವನಲ್ಲಿ ಪ್ರೇಮವೂ ಅವನಿಗೆ ಅವಳಲ್ಲಿ ಪ್ರೇಮವೂ ಉಂಟಾಗಲು ಸಾಧ್ಯವಿಲ್ಲ. ಅನೇಕರು ತಮ್ಮ ಕಾಮವಾಸನೆಗೋಸ್ಕರ ಮಾತ್ರ ಮದುವೆಯಾಗುವರು. ಪತ್ನಿಯು ಅವನ ಅರ್ಧಾಂಗಿ ಎಂದು ಯಾರು ತಿಳಿದುಕೊಳ್ಳುತ್ತಾರೆ? ಅವಳು ಸರಿಸಮಾನಳೆಂದು ಅವರು ತಿಳಿದುಕೊಳ್ಳುವುದಿಲ್ಲ'' ಎಂದು ವಾದಿಸಬಹುದು. ಅಂಥವರಿಗೆ ಇಷ್ಟು ಹೇಳಬಹುದು. ಪತಿ ಮನಃಪೂರ್ವಕವಾಗಿ ತನ್ನ ಪತ್ನಿಯನ್ನು ವಿಶ್ವಾಸದಿಂದ, ಭಕ್ತಿಯಿಂದ, ಆದರದಿಂದ, ಪ್ರೀತಿಯಿಂದ ಕಂಡರೆ, ಪತ್ನಿಯೂ ಅದೇ ರೀತಿ ಪತಿಯನ್ನು ಕಂಡರೆ ಅವರೂ ಆದರ್ಶಜೀವನವನ್ನು ನಿರಾತಂಕವಾಗಿ ಸಾಗಿಸಲು ಸಾಧ್ಯವಿದೆ, ಇದರಲ್ಲಿ ಸಂಶಯವೇ ಇಲ್ಲ. ಕಾರಣ ಗೃಹಸುಖ ಶಾಶ್ವತವಾಗಿ ನಿಲ್ಲಬೇಕಾದರೆ, ಶಾಂತಿಮಯವಾಗಬೇಕಾದರೆ ಕೇವಲ ಹೃದಯಗಳ ಮಿಲನ ಮಾತ್ರವಲ್ಲ, ವಿಚಾರಗಳ ಮಿಲನವೂ ಇರಬೇಕೆಂದು ಮತ್ತೊಮ್ಮೆ ಹೇಳಬಹುದು.

ಪತಿ ಪತ್ನಿಯ 'ಪ್ರಿಯತಮ'ನೂ ಪತ್ನಿ ಪತಿಯ 'ಪ್ರಿಯತಮೆ'ಯೂ ಆದರೆ ಸಾಲದು. ಪತಿ ತನ್ನ ಪತ್ನಿಗೆ ಪತಿಯೂ ರಕ್ಷಕನೂ ಸಂಗಾತಿಯೂ ಆಗಿ, ಪತ್ನಿ ತನ್ನ ಪತಿಗೆ ಪತ್ನಿಯೂ ಮಾತೆಯೂ ಗೆಳತಿಯೂ ಆಗಿದ್ದಲ್ಲಿ ಅವರ ಸಂಸಾರದಲ್ಲಿ ಸೂರ್ಯೋದಯವಾಗುವುದಕ್ಕೆ ವಿಳಂಬವಿಲ್ಲ. ಆದುದರಿಂದಲೇ ಬುದ್ಧಿಶಕ್ತಿಯೂ ವಿಚಾರಗಳೂ ಮಿಲನವಾಗಲೇಬೇಕೆಂದು ಹೇಳುವುದಾಗಿದೆ.

ಕೆಲವರು ಹಣದ ಅಭಾವವೇ ಗೃಹಸುಖಕ್ಕೆ ಅಡ್ಡಿ ಎಂದು ಅಭಿಪ್ರಾಯಪಡಬಹುದು. ಶ್ರೀಮಂತರ ವೈವಾಹಿಕ ಜೀವನ ಸುಖಮಯವೆಂದು ತಿಳಿದುಕೊಳ್ಳುವುದು ಕೇವಲ ತಪ್ಪು. ಪತಿ ಪತ್ನಿಯರ ವರ್ತನೆಗಳು ಕೂಡಿಬಂದರೆ ಬಡವನ ಗುಡಿಸಲಿನಲ್ಲೇನು ಗೃಹಸುಖಕ್ಕೆ ಕಡಮೆಯೇ? ಶ್ರೀಮಂತಿಕೆಗೂ ಬಡತನಕ್ಕೂ ಗೃಹಸುಖಕ್ಕೂ ಸಂಬಂಧವೇ ಇಲ್ಲ. ನಮ್ಮಲ್ಲಿ ಒಂದು ಗಾದೆ ಇದೆ. "ಗಂಜಿನೀರಾದರೂ ಸುಖದಿಂದ ಕುಡಿಯುವಂತಿರಬೇಕು" ಎಂದು. ಇದು ಸಾವಿರದಲ್ಲೊಂದು ಮಾತು.

ನಾವು ಎರಡು ಚಿತ್ರಗಳನ್ನು ಮನಸ್ಸಿನಲ್ಲಿ ತಂದುಕೊಳ್ಳೋಣ. ಒಂದು ಚಿತ್ರ: ಬಡತನ; ಮನೆತುಂಬ ಮಕ್ಕಳು; ಮನೆಯಲ್ಲಿ "ಡ್ರಾಯಿಂಗ್ ರೂಮು" ಇಲ್ಲ; ಆಸನಗಳಿಲ್ಲ; ಗೋಡೆಗಳಲ್ಲಿ ಚಿತ್ರಗಳಿಲ್ಲ; ಒಂದೂಟಕ್ಕೋಸ್ಕರ ಪತಿ ಪತ್ನಿಯರು ದೇಹದ ಪರಿವೆ ಇಲ್ಲದೆ ದುಡಿಯುತ್ತಾರೆ. ಇಂತಹ ಮನೆಗಳಲ್ಲಿ ಮಕ್ಕಳ ಕಿಲಕಿಲ ನಗು, ಮುದ್ದಾದ ಸ್ವರಗಳು, ಅವನ್ನು ಕೇಳಿ ಆನಂದಿಸುವ ತಂದೆ ತಾಯಿಗಳು. ಗೃಹಸುಖ ಅಲ್ಲಿ ಗೆಜ್ಜೆ ಕಟ್ಟಿಕೊಂಡು ಶೃಂಗಾರದಿಂದ ನರ್ತನಮಾಡುತ್ತದೆ.

ಇನ್ನೊಂದು ಚಿತ್ರ: ಶ್ರೀಮಂತರ ಮನೆ; ಮನೆಯೊಳಗೆ ಅಮೂಲ್ಯ ವಸ್ತುಗಳು; ರೇಷ್ಮೆದಿಂಬುಗಳು; ವಿಧವಿಧದ ಕಲಾಕುಶಲತೆಯ ಚಿತ್ರಗಳು; ಮುದ್ದುಮಾಡಿ ಸಾಕಿದ ನಾಯಿ (ಅದನ್ನು ಸಾಕುವ ಖರ್ಚಿನಿಂದ ಬಡವನೊಬ್ಬನ ಸಂಸಾರವನ್ನು ಯೋಚನೆ ಇಲ್ಲದೆ ಸಾಗಿಸಬಹುದು!); ಒಳ್ಳೇ ತಿಂಡಿ ತೀರ್ಥಗಳು; ಅವರ ಶ್ರೀಮಂತಿಕೆಗೆ ಸರಿಯಾದ ಉಡುಪುಗಳು. ಇಷ್ಟೆಲ್ಲ ಅನುಕೂಲಗಳಿದ್ದರೂ ಗೃಹಿಣಿ ಸಿಡುಕುಮೋರೆಯವಳೂ ಜಗಳಗಂಟಿಯೂ ಸೋಮಾರಿಯೂ ಜಂಬದವಳೂ ಆಗಿದ್ದರೆ, ಗೃಹಸ್ಥ ಕಠಿಣ ಹೃದಯಿಯೂ ಧನಮದವೇರಿದವನೂ ಆಗಿದ್ದರೆ, ಗೃಹಸುಖ ಅಲ್ಲಿಂದ ಪಲಾಯನ ಮಾಡಿಯೇ ಮಾಡುವುದು. ಗಂಡನ ಹಣದ ವ್ಯಯವನ್ನು ಹೆಂಡತಿ ದುರುಪಯೋಗವೆಂದು ತಿಳಿಯಬಹುದು. ಹೆಂಡತಿ ಗೃಹಕೃತ್ಯದಲ್ಲಿ ಮನಸ್ಸುಹಾಕುವುದಿಲ್ಲವೆಂದು ಗಂಡನು ತಿಳಿದುಕೊಳ್ಳಬಹುದು. ಇಲ್ಲವೇ ಗಂಡನು ಕುದುರೆ ಪಂದ್ಯಕ್ಕೆ ಹಣ ಖರ್ಚುಮಾಡುತ್ತಾನೆ ಎಂದು ಹೆಂಡತಿ ತನಗೆ ಅಗತ್ಯವಿಲ್ಲದಿದ್ದರೂ ಪೇಟೆಗೆ ಹೋಗಿ ಬೆಲೆ ಬಾಳುವ ಸೀರೆಗಳನ್ನೋ ಆಭರಣಗಳನ್ನೋ ಕೊಂಡುಕೊಳ್ಳುವುದು. ಈ ರೀತಿ ಅವರ ದಿನಚರಿಯಾದರೆ ಗೃಹಸುಖವೆಲ್ಲಿಂದ ಬರಬೇಕು? ಎಲ್ಲ ಶ್ರೀಮಂತರ ಮನೆಗಳು ಹೀಗೇ ಇರುತ್ತವೆಂದು ಹೇಳಲು ಬರುವುದಿಲ್ಲ. ಅಥವಾ ಎಲ್ಲ ಬಡವರ ಕುಟುಂಬಗಳಲ್ಲಿ ಗೃಹಸುಖ ಆದರ್ಶವಾಗಿರುತ್ತದೆಂದೂ ಹೇಳಲಾಗುವುದಿಲ್ಲ. ಮುಖ್ಯವಾಗಿ ಪರಸ್ಪರ ವಿಚಾರಗಳೂ ಆದರ್ಶಗಳೂ ಒಂದುಗೂಡಿದರೇನೇ ಗೃಹಸುಖ ಆಮಂತ್ರಣವಿಲ್ಲದೆ ಬರುವುದು. ನಶ್ವರವಾದ ಕೃತ್ರಿಮ ಸುಖದಿಂದ, ಬರಿಯ ಧನದ ಬಲದಿಂದ ಗೃಹಸುಖವನ್ನು ತನ್ನದನ್ನಾಗಿ

ಮಾಡಿಕೊಳ್ಳಲು ಸಾಧ್ಯವೇ ಇಲ್ಲವೆಂಬುದನ್ನು ಹೇಳಲು ಮಾತ್ರ ಮೇಲಿನ ಎರಡು ಚಿತ್ರಗಳನ್ನು ನಿದರ್ಶನವಾಗಿ ಕೊಟ್ಟಿರುತ್ತೇನೆ.

ಸದಾಕಾಲವೂ ಹಸನ್ಮುಖರಾಗಿ, ಎಂತಹ ಆಪತ್ತುಗಳು ವಿಘ್ನಗಳು ಬಂದರೂ, ಎಂತಹ ಅಪವಾದಗಳು ಬಂದರೂ ಲೆಕ್ಕಿಸದೆ ಒಬ್ಬರನ್ನೊಬ್ಬರು ಆದರಿಸಿ ಈ ಸಂಸಾರವನ್ನು ಗೆದ್ದೇ ತೀರಬೇಕು ಎಂದು ಮುಂದುವರಿಯುವ ವೈವಾಹಿಕ ಜೀವನದಲ್ಲಿ ಗೃಹಸುಖ ಎಷ್ಟು ಪ್ರಕಾಶಮಾನವಾಗಿ ಬೆಳಗೀತು! ಗಂಡಹೆಂಡಂದಿರು ಒಳ್ಳೆಯ ಆದರ್ಶ ಸ್ಥಿತಿಯಲ್ಲಿ ಮದುವೆಯಾದರೂ, ಆದರ್ಶ ವಾತಾವರಣದಲ್ಲಿದ್ದರೂ ಅವರಿಬ್ಬರ ವ್ಯಕ್ತಿಗತ ಸ್ವಭಾವವನ್ನು ಒಬ್ಬರನ್ನೊಬ್ಬರು ತಿಳಿದುಕೊಂಡು ಹೊಂದಿಕೊಂಡು ಹೋಗುವಂತೆ ದೃಢಪಡಿಸಬೇಕು. ಪರಸ್ಪರ ವಿಚಾರಗಳನ್ನು ಪೂರೈಸಲು ಪ್ರಯತ್ನಿಸಬೇಕು. ಅವರೊಳಗೆ ಕೊರತೆಗಳಿದ್ದರೆ ಒಬ್ಬರಿಗೊಬ್ಬರು ತಿಳಿಸಿಕೊಟ್ಟು ಅವುಗಳನ್ನು ತಿದ್ದಿಕೊಳ್ಳಲು ಹವಣಿಸಬೇಕು. ಪತಿ ತನ್ನ ದಿನದ ಕೆಲಸಗಳನ್ನು ಮುಗಿಸಿಕೊಂಡು ತನ್ನ ಪತ್ನಿಯ ಮತ್ತು ಮಕ್ಕಳ ಸ್ವರಗಳನ್ನು ಕೇಳಲು ಆತುರದಿಂದ ಮನೆಗೆ ಓಡಿಬರುವಂತೆಯೂ, ಪತ್ನಿ ಮನೆಗೆಲಸಗಳನ್ನು ಮುಗಿಸಿ ತನ್ನ ಮೇಲಿರುವ ಜವಾಬ್ದಾರಿಯನ್ನು ಹೊರೆಯೆಂದು ತಿಳಿಯದೆ ಸಂತೋಷದಿಂದ ಕರ್ತವ್ಯನಿಷ್ಠಳಾಗಿ ಪತಿಯ ಬರುವಿಕೆಯನ್ನು ನಿರೀಕ್ಷಿಸುವಂತೆಯೂ ಆದರೆ ಅಂತಹ ಗೃಹಗಳೇ ಸ್ವರ್ಗಗಳು! ಗೃಹವನ್ನು ಸ್ವರ್ಗ ನರಕಗಳನ್ನಾಗಿ ಮಾಡುವುದೂ, ಗೃಹಸುಖವನ್ನು ಮಣ್ಣುಪಾಲು ಮಾಡುವುದು ಅಥವಾ ಆನಂದದ ಉನ್ನತ ಶಿಖರಕ್ಕೆ ಏರಿಸುವುದೂ ಗಂಡಹೆಂಡಿರು ಇಬ್ಬರ ಮೇಲೂ ಹೊಂದಿಕೊಂಡಿದೆ.

ಜೀವನವನ್ನೂ ಪ್ರೇಮವನ್ನೂ ಬಹಳ ಬುದ್ಧಿ ಚಾತುರ್ಯದಿಂದಲೂ ಪವಿತ್ರ ವಿಚಾರಗಳಿಂದಲೂ ನಡಸಿಕೊಂಡುಹೋದರೆ ಅಂತಹ ಗೃಹಗಳಲ್ಲಿ ಸುಖದ ಸೂರ್ಯನು ಉದಯಿಸಲಾರನೇ? ನಿಶ್ಚಯವಾಗಿಯೂ ಉದಯಿಸುವನು.

**ಪ. ಸೀತಾದೇವಿ**

## ಜೀವನ

ಅಮೋಘವಾದ ನದಿಯ ಪ್ರವಾಹದಂತೆ ಹರಿಯುತ್ತಿದೆ—ಈ ಜೀವನ.
ಇದರ ಹುಟ್ಟು ಎಲ್ಲಿ, ಸಾವು ಎಲ್ಲಿ?
ಇದಕ್ಕೆ ಹುಟ್ಟು ಸಾವುಗಳಿವೆಯೇ?
ಇದರ ಉದ್ದೇಶವೇನು?
ಇದಕ್ಕೆ ಉದ್ದೇಶವಾದರೂ ಇದೆಯೇನು?

ಯೋಗಿಗಳು, ತಪಸ್ವಿಗಳು, ಮುನಿಗಳು, ತತ್ತ್ವಜ್ಞಾನಿಗಳು, ವೈಜ್ಞಾನಿಕರು — ಇವರೆಲ್ಲ ಈ ಪ್ರಶ್ನೆಯೊಡನೆ ಅನಾದಿಕಾಲದಿಂದ ಹೋರಾಡಿದ್ದಾರೆ. ಈಗಲೂ ಹೋರಾಡುತ್ತಿದ್ದಾರೆ.

ಪ್ರಶ್ನೆ ಮಾತ್ರ ಇನ್ನೂ ಬಗೆಹರಿಯದೆ ನಿಂತಿದೆ. ಆದಿ ಅಂತ್ಯವಿಲ್ಲದ ಕಾಲದ ಪ್ರವಾಹದಂತೆ ಜೀವನವೂ ಎಂದಿನಂತೆ ಹರಿಯುತ್ತಿದೆ.

ಅಣು, ರೇಣು, ತೃಣ, ಕಾಷ್ಠದಲ್ಲಿಯೂ ಪರಿಣಮಿಸುವ ಜೀವವು ಮಾನವನಲ್ಲಿ ಪ್ರಫುಲ್ಲಿತವಾಗಿದೆ. ಅಪಾರವಾದ ವಿಕಾಸತೆಯನ್ನು ಹೊಂದಿದೆ. ಅತ್ಯಂತ ಶ್ರೇಷ್ಠತೆಯನ್ನೂ ಪವಿತ್ರತೆಯನ್ನೂ ಪಡೆದಿದೆ. ಹುಟ್ಟು ಸಾವುಗಳ ಸಟ್ಟನಡುವೆ ನಿಂತಿದೆ ಮಾನವ ಜೀವನ. ಹುಟ್ಟು ಸಾವುಗಳ ನಡುವೆ ಸಂಚರಿಸುವ ಮಾರ್ಗಸ್ಥ—ಮಾನವ ಜೀವಿ.

ಹುಟ್ಟು, ಸಾವು. ಇವುಗಳೆಂದರೇನು? ಹುಟ್ಟು ಸಾವುಗಳ ಆಚೆ ಈಚೆ ಇರುವುದಾದರೂ ಏನು? ಪುನಃ ಬಗೆಹರಿಯದ ಪ್ರಶ್ನೆಗಳು. ಇವುಗಳ ಗೊಡವೆ ನಮಗೇಕೆ? ಹುಟ್ಟು ಸಾವುಗಳ ಪರಿಣಾಮವೇನೋ ನಮಗೆ ಗೊತ್ತಿದೆ. ನಮಗೆ ಅಷ್ಟೇ ಸಾಕು.

### ಹುಟ್ಟು

ಎರಡು ಸುಂದರವಾದ ಪ್ರೇಮಗಳು ಒಂದೇ ಸವನೆ ಏಕತ್ವವನ್ನು ಹೊಂದಿ, ದೇವತ್ವವನ್ನು ಪಡೆದುದರ ಫಲಿತಾಂಶವೇ ಒಂದು ಮಾನವಜೀವಿಯ ಹುಟ್ಟು.

ಆದರೆ ಎಂತಹ ಆಭಾಸಕರವಾದ ಹುಟ್ಟು!— ಎರಡು ಗೇಣು ಗಾತ್ರವುಳ್ಳ, ನಿರ್ಬಲವಾದ, ನಿಸ್ಸಹಾಯಕವಾದ, ನೋಡಿದರೆ 'ಅಯ್ಯೋ' ಎನಿಸುವ, ಸುಮಕೋಮಲವಾದ ಒಂದು ಜೀವಿಯ ಹುಟ್ಟು!

ಆದರೇನು? ಈ ಎಳೆಯ ಜೀವಿಯ ನಿರ್ಬಲತೆಯೇ ಅದರ ಬಲ. ಅದರ ನಿಸ್ಸಹಾಯಕತನವೇ ಅದರ ಕವಚ. ಅದರ ಎರಡು ಗೇಣಿನ ಗಾತ್ರವೇ ಅದರ ಲೋಕದ ಒಡೆತನದ ಕುರುಹು. ಅದರ ಸುಮಕೋಮಲತೆಯೇ ಅದರ ದೈವಿಕತೆಯ ಲಕ್ಷಣ.

ಎಲ್ಲಿಯೋ, ಬ್ರಹ್ಮಾಂಡದ ಯಾವ ಮೂಲೆಯಲ್ಲಿಯೋ, ಯಾವ ಸುಷುಪ್ತ್ಯವಸ್ಥೆಯಲ್ಲಿಯೋ ಇದ್ದ ಜೀವವೋ, ಶಕ್ತಿಯೋ, ಆತ್ಮವೋ — ಯಾವುದು, ಏನು,

ಎಲ್ಲಿಯದು ಎಂದು ಹೇಳಲಸಾಧ್ಯವಾದ ಒಂದು ತೇಜಸ್ಸಿನ ಬಿಂದು— ಈ ಲೋಕದ ಬಂಧನಕ್ಕೊಳಗಾಗಿ ಧರಣಿಯಲ್ಲಿ ಬಿದ್ದೊಡನೆ ಆರ್ತಸ್ವರದಿಂದ ಕೂಗುವುದು.

ಈ ಆರ್ತಸ್ವರದ ಕೂಗಿನ ನೋವು, ರಹಸ್ಯಗಳನ್ನು ಬಲ್ಲವರಾರು?

ಆದರೆ ಅದೇ ಬಂಧನಕ್ಕೊಳಗಾದ ಅದರ ಕಾರಣಜೀವಿಗಳಿಗಾದರೋ ಆ ಆರ್ತ ರೋದನವೇ ದಿವ್ಯಸಂಗೀತದಂತಿರುತ್ತದೆ. ಅದನ್ನು ಕೇಳಿದೊಡನೆ ತಾಯಿಜೀವಿ ತನ್ನ ಅಪಾರವಾದ ಪ್ರಸವ ವೇದನೆಯನ್ನೂ ಮರೆತುಬಿಡುತ್ತಾಳೆ. ಯುಗ ಯುಗಾಂತರಗಳಿಂದ ಹರಿಯುತ್ತಿರುವ ಜೀವನ ಪ್ರವಾಹ ತನ್ನಿಂದ ತಡೆಗಟ್ಟಲಿಲ್ಲ ವೆಂದೂ ತನ್ನ ಜೀವನ ಸಾರ್ಥಕವಾಯಿತೆಂದೂ ತಂದೆಜೀವಿಗೂ ಹೇಳಲಸಾಧ್ಯವಾದ ಆತ್ಮಸಂತುಷ್ಟಿ.

ಸೃಷ್ಟಿನಿಯಾಮಕನ ಮಾಯೆ ಅಗಾಧವಾದುದು. ಆಗತಾನೇ ಹುಟ್ಟಿ, ವಿಶ್ವದ ನೋವನ್ನೇ ಹೊರಸೂಸುವಂತೆ ಕೂಗುತ್ತಿರುವ ಈ ಹೊಸ ಜೀವಿ, ತಾಯಿಯ ಸ್ತನಗಳ ಸುಖಸ್ಪರ್ಶವನ್ನು ಹೊಂದಿ ಅಮೃತವನ್ನು ಪಡೆಯುತ್ತಲೇ, ತನ್ನ ಪೂರ್ವ ವಿಶ್ವವನ್ನೆಲ್ಲ ಒಂದೇಸವನೆ ಮರೆತು, ತಾಯಿಜೀವಿಯ ಸ್ತನಗಳಲ್ಲಿಯೇ ಹೊಸ ದೊಂದು ವಿಶ್ವವನ್ನು ಕಂಡು, ಶಾಂತಿಯನ್ನೂ ನೆಮ್ಮದಿಯನ್ನೂ ಪಡೆಯುವುದು.

ಇನ್ನು ಅದು ಮಾನವಜೀವಿ; ಆಹಾರ, ನಿದ್ರೆ, ನೋವುಗಳಿಂದ ಬಂಧಿತ ವಾದ ಪ್ರಾಣಿ.

## ಬಾಲ್ಯ

ಬಹಳ ಸಮಯದ ವರೆಗೆ ತಾಯಿಯ ಸ್ತನಗಳೇ ಈ ಜೀವಿಯ ವಿಶ್ವ. ಆಮೇಲೆ ಬೆಳಕು, ಕತ್ತಲೆ, ಬಣ್ಣಗಳು— ಇವುಗಳ ಮುಖಾಂತರ ಅದರ ಲಕ್ಷ್ಯ ಮೆಲ್ಲ ಮೆಲ್ಲಗೆ ಹೊರಗಿನ ಸುಂದರವಾದ ಪ್ರಪಂಚಕ್ಕೆ ಹರಿಯುತ್ತದೆ. ಪ್ರೇಮ, ಅಭಿ ಮಾನಗಳಿಂದ ಪ್ರಫುಲ್ಲಿತವಾದ ತಾಯಿಯ ಮುಖವನ್ನು ಎವೆಯಿಕ್ಕದೆ ನೋಡಿ, ತನಗೂ ಆಕೆಗೂ ಇರುವ ನಿಕಟ ಸಂಬಂಧವನ್ನು ಕಂಡುಕೊಳ್ಳುತ್ತದೆ. ತಂದೆಯ ಮುಖದ ಪರಿಚಯವೂ, ಸಮೀಪದ ಬಂಧು ಬಳಗದವರ ಮುಖಪರಿಚಯವೂ ಅದಕ್ಕೆ ಮೆಲ್ಲ ಮೆಲ್ಲಗೆ ಉಂಟಾಗುತ್ತಿದೆ. ನಯ, ನಗೆ, ಪ್ರೇಮ, ಸೌಂದರ್ಯ, ಸುಸ್ವರಗಳು— ಇವುಗಳಿಂದ ಆನಂದಪಡುತ್ತಿದೆ. ಗದ್ದಲ, ಕರ್ಕಶತೆ—ಇವುಗಳಿಂದ ಭಯಪಡುತ್ತಿದೆ.

ಕ್ರಮೇಣ ತನ್ನ ಸುತ್ತುಮುತ್ತಲಿರುವ ಪ್ರತಿಯೊಂದು ವಸ್ತುವಿನ ಮೇಲೆ ಅದರ ಲಕ್ಷ್ಯ ಹರಿಯುತ್ತದೆ. ತನ್ನ ಪುಟ್ಟಕೈಗಳಿಂದ ಪ್ರತಿಯೊಂದು ವಸ್ತುವನ್ನೂ ಎಟುಕಲು ಪ್ರಯತ್ನಿಸುತ್ತದೆ. ಪ್ರತಿಯೊಂದು ಕ್ಷಣದಲ್ಲಿ ಹೊಸ ಹೊಸ ಅನುಭವ ಗಳನ್ನು ಪಡೆಯುತ್ತದೆ. ಪ್ರತಿಯೊಂದು ಕ್ಷಣವೂ ಅದಕ್ಕೆ ಹೊಸ ಹೊಸ ಬೆರಗು ಗಳನ್ನು ಒದಗಿಸಿಕೊಟ್ಟು, ಅದಕ್ಕೂ ಹೊರಗಿನ ಪ್ರಪಂಚಕ್ಕೂ ಇರುವ ನಿಕಟ ಸಂಬಂಧವನ್ನು ಬಲವತ್ತರವಾಗಿ ತಿಳಿಸುತ್ತದೆ.

ಹೀಗೆಯೇ ಅದರ ಜನ್ಮಸಿದ್ಧವಾದ ಶಕ್ತಿಗಳು ಮೆಲ್ಲ ಮೆಲ್ಲನೆ ಅರಳುತ್ತವೆ. ತೊದಲು ನುಡಿಗಳಿಂದ ತನ್ನ ಎಳೆಯ ಭಾವನೆಗಳನ್ನೂ, ಮೊಳಕೆಯ ಆಸೆಗಳನ್ನೂ

ವ್ಯಕ್ತಪಡಿಸಲು ಕಲಿಯುತ್ತದೆ. ಬೀಳುವ ಹೆಜ್ಜೆಗಳನ್ನಾದರೂ ಹಾಕಿ ತನ್ನ ಶಕ್ತಿಯನ್ನು ಅಳೆಯುತ್ತದೆ. ಸ್ವಲ್ಪ ಸಮಯದಲ್ಲಿಯೇ ಈ ಚಟುವಟಿಕೆಯ ಜೀವಿ ಮನೆಯೊಳಗೆಲ್ಲ ಎರಡು ಕಾಲಿನ ಮೇಲಿರುವ ಬಿರುಗಾಳಿಯಾಗಿ ಪರಿಣಮಿಸುತ್ತದೆ. ಆಗ ಈ ಪುಟ್ಟ ಬಿರುಗಾಳಿಗೆ ಯಾವ ಹೆದರಿಕೆಯೂ ಇಲ್ಲ! ಬೆಂಕಿಗೂ ಅದು ಹೆದರದು!

ಏತಕ್ಕೆ ಹೆದರಬೇಕು? ತಾಯಿಯ ಅತ್ಯುಜ್ವಲವಾದ ಪ್ರೇಮದ ಕವಚ, ತಂದೆಯ ರಕ್ಷಾಪರವಾದ ಪ್ರೀತಿ, ಇವುಗಳು ಯಾವಾಗಲೂ ಅದರ ಹತ್ತಿರವೇ ಬೆಂಬಲಕ್ಕೆ ಇರುವಾಗ ಅದಕ್ಕೆ ಯಾವ ಹಾನಿಯ ಬೆದರಿಕೆಯೂ ಇಲ್ಲ! ಇಂತಹ ಪ್ರೇಮ ವಿಶ್ವಾಸಾದಿಗಳಿಂದ ಭರಿತವಾದ ವಾತಾವರಣದಲ್ಲಿ ಅದು ಪ್ರಪಂಚದ ಹೊಸ ಹೊಸ ಅನುಭವಗಳನ್ನು ಪಡೆಯುತ್ತ ಬೆಳೆಯುತ್ತದೆ. ಈ ಬೆಳವಣಿಗೆಯಲ್ಲಿ ಅದಕ್ಕೆ ಚಿಕ್ಕ ಪುಟ್ಟ ನೋವುಗಳೂ, ಕೈಗೂಡದ ಆಸೆಗಳೂ, ಚಿಲ್ಲರೆ ಪಲ್ಲರೆ ತೊಂದರೆ ತೊಡರುಗಳೂ ಬರುವುದಿಲ್ಲವೆಂತಲ್ಲ. ಆದರೆ ಇವುಗಳೆಲ್ಲ ಬರೀ ಕ್ಷಣಿಕವಾದುವುಗಳು. ಈ ಚಿಕ್ಕ ಕಾರ್ಮುಗಿಲುಗಳಿಂದುಂಟಾಗುವ ಅಶ್ರುಧಾರೆ ಸುರಿಯುತ್ತಿರುವಾಗಲೇ ನಗೆಯ ಸೂರ್ಯನು ಮೂಡಿ ಅದರ ಮುಖವನ್ನು ಪ್ರಕಾಶಮಯವನ್ನಾಗಿ ಮಾಡುವುದು ಸರ್ವಸಾಧಾರಣ ಸಂಗತಿಯಾಗಿದೆ.

ಹೀಗೆಯೇ, ತಾಯಿತಂದೆಗಳ ಪ್ರೇಮ ಮತ್ತು ರಕ್ಷಾಪರ ಆದ ವಾತಾವರಣದಲ್ಲಿ ಈ ಮಗುವಿನ ಮುಂದೆ ಪ್ರಪಂಚ ಅತಿ ರಮ್ಯವಾದ, ಹೊಸ ಹೊಸ ಆಶ್ಚರ್ಯ ಅನುಭವಗಳಿಂದ ಕೂಡಿದ ಒಂದು ಚಲಚ್ಚಿತ್ರ ಪಟದಂತೆ ತೆರೆಯುತ್ತಿರುವುದು. ಆಗ ಈ ಮಗುವಿಗೆ ಎಲ್ಲಿಯೂ ರಮ್ಯತೆ, ಆನಂದ, ಸೌಂದರ್ಯ, ನಗೆ— ಇವೇ ಕಾಣಬರುವುವು. ಪ್ರಪಂಚವೆಲ್ಲ ಪ್ರೇಮ, ದಯೆ, ನಯಗಳಿಂದಲೇ ತುಂಬಿ ಹೋದಂತೆ ಭಾಸವಾಗುವುದು. ಎಲ್ಲಿಯೂ ಬಿರುಸು, ಕ್ರೂರತ್ವ, ಕರ್ಕಶತೆ—ಇವುಗಳಿಗೆ ಎಡೆ ಇಲ್ಲವೆಂದು ತೋರುವುದು.

ಇದೇ ರೀತಿಯಲ್ಲಿ ತನ್ನ ತಾಯಿತಂದೆಗಳ ಪ್ರೇಮಾಶ್ರಯದಲ್ಲಿ ಈ ಜೀವಿಯ ಮೊದಲನೆಯ ಹದಿನೈದು ಹದಿನಾರು ವರ್ಷಗಳು ಸಂದುಹೋಗುವುವು. ಆಮೇಲೆ ಈ ಜೀವಿಗೆ

## ಯೌವನ

ಬಾಲ್ಯ ಕಳೆದೊಡನೆ ಈ ಜೀವಿಯ ಜೀವನ ನಾಟಕದ ಮೊದಲನೆಯ ಅಂಕ ಕಳೆಯಿತು. ಯೌವನದೊಡನೆ ಎರಡನೆಯ ಅಂಕದ ಪ್ರಾರಂಭ. ಈಗ ಯೌವನ ಬರಲು ಪ್ರೇಕ್ಷಕನಾಗುವುದನ್ನು ಬಿಟ್ಟು ಪ್ರಪಂಚದ ಮಹಾರಂಗಕ್ಷೇತ್ರದಲ್ಲಿ ತಾನೂ ಒಬ್ಬ ಪಾತ್ರಧಾರಿಯಾಗಿ ನರ್ತನಮಾಡಬೇಕೆಂದು ಹವಣಿಸುವನು. ತಾಯಿ ತಂದೆಗಳ ಬಿಗಿಯಾದ ಹಿಡಿತದಿಂದಲೂ ತಪ್ಪಿಸಿಕೊಂಡು ಪ್ರಪಂಚ ವ್ಯವಹಾರಗಳ ಮಹಾರಂಗದಲ್ಲಿ ದುಮುಕುವನು.

ಪ್ರೇಮಬಂಧನವಾದರೂ ಬಂಧನವೇ. ಆದರೆ ಈಗ ಅವನು ನಿರ್ಬಂಧಿತನಾಗಿರುವನು. ಸ್ವಾತಂತ್ರ್ಯದ ಅಮೃತವನ್ನು ಸೇವಿಸುತ್ತಿರುವನು. ಸಹಜವಾಗಿ

ಅದರ ಅಮಲು ಒಮ್ಮೆಗೇ ತಲೆಗೇರುವುದು. ವಿರಾಸೆ ಬರುವ ಸಮಯ, ದೇಶ ಕಾಣದು. ಈ ತನಕ ತಾಯಿ, ತಂದೆ, ಗುರು, ಮಠಗಳಿಂದ ಸಂಪಾದಿಸಿದ ಪರೋಕ್ಷ ಜ್ಞಾನವನ್ನು ಪ್ರತ್ಯಕ್ಷ ಅನುಭವಗಳಿಂದ ಪರಿಶೀಲಿಸುವನು. ಧೈರ್ಯ, ಉತ್ಸಾಹಗಳ ಮೂರ್ತಿ ಈಗ ಅವನು. ಆದರೆ ವಿವೇಚನಾ ಶಕ್ತಿ ಇನ್ನೂ ಸಾಲದು. ಇದರಿಂದಾಗಿ ತನ್ನ ಕೃತ್ಯಗಳಲ್ಲಿ ಎಷ್ಟೋ ಸಲ ತನ್ನ ಕೈಯನ್ನು ಸುಟ್ಟುಕೊಳ್ಳುವನು. ಹಾಗೆ ಕೈ ಸುಟ್ಟುಕೊಂಡಾಗಲೆಲ್ಲ ತಲೆಗೇರಿದ ಅಮಲು ಮೆಲ್ಲ ಮೆಲ್ಲನೆ ಕೆಳಗೆ ಇಳಿಯುವುದು. ಗುಲಾಬಿ ಗಿಡದಲ್ಲಿ ಬೆಳೆಯುತ್ತಿರುವ ಅಂದವಾದ ಹೂಗಳಿಗೆ ಮರುಳಾಗಿ ಗಿಡವನ್ನೇ ಅಪ್ಪಿಕೊಂಡಂತೆ ಅವನ ಸ್ಥಿತಿಯಾಗುವುದು.

ಸಾವಧಾನ ಚಿತ್ತದಿಂದ ಪ್ರಪಂಚವನ್ನು ಮತ್ತೊಮ್ಮೆ ನೋಡುವನು. ಅವನ ಈ ಎರಡನೆಯ ಪರಿಶೀಲನೆಯಲ್ಲಿ ಅವನು ಈಗಾಗಲೇ ಗಳಿಸಿದ ಪ್ರತ್ಯಕ್ಷ ಅನುಭವಗಳು ಅತ್ಯಂತ ಸಹಕಾರಿಯಾಗಿ ನಿಲ್ಲುವುವು. ಭೀಕರವಾದ ನಗ್ನತೆಯಿಂದ ಪ್ರಪಂಚ ತಾಂಡವ ನೃತ್ಯವನ್ನು ಮಾಡುತ್ತಿರುವ ಕರಾಳ ದೃಶ್ಯವನ್ನು ಈಗ ಅವನು ಸರಿಯಾಗಿ ನೋಡಿ ತಿಳಿದುಕೊಳ್ಳುವನು.

ತಾಯಿತಂದೆಗಳ ಕೈಗಳನ್ನು ಬಿಗಿಯಾಗಿ ಹಿಡಿದುಕೊಂಡು ಪ್ರಪಂಚವನ್ನು ದೂರದಿಂದ ನೋಡುತ್ತಿದ್ದಾಗ ಅದು ಎಂತಹ ಸುಖ, ಸೌಂದರ್ಯ, ಪ್ರೇಮ, ನಯ, ನಗೆಗಳಿಂದ ಕೂಡಿಕೊಂಡಿತ್ತು! ಈಗ ಅವೆಲ್ಲ ಎಲ್ಲಿ ಮಾಯವಾದುವು? ಅವುಗಳ ಬದಲು ಈಗೆಲ್ಲಿ ನೋಡಿದರೂ ಲೋಭ, ಮದ, ಮತ್ಸರ, ಹಿಂಸೆ, ಕಿರಿತನ, ಹಗೆ, ಹೊಲಸು— ಇವುಗಳೇ ಕಾಣುವುವು! ಇವುಗಳನ್ನು ನೋಡಿ ಹೆದರಿ ಹಿಂಜರಿಯುವನು. ಆದರೆ ತಾಯಿತಂದೆಗಳ ಪ್ರೇಮಾಶ್ರಯದಿಂದ ಬಲುದೂರ ಹಾರಿಬಂದವನು. ಎಲ್ಲಿಯವರೆಗೆ ಹಿಂದೆ ಹೋದಾನು? ಅದು ಸಾಧ್ಯವಿಲ್ಲದ ಮಾತು. ಆತ್ಮಗೌರವವೂ ಬಿಡದು. ಪುನಃ ಮುಂದಕ್ಕೆ ಹೋಗಿ ಆ ಭೀಕರವಾದ ತಾಂಡವನೃತ್ಯದಲ್ಲಿ ಸೇರಿ ತನ್ನ ಶಕ್ತಿಯನ್ನು ಅಳೆಯುವುದೇ ತನ್ನ ಕರ್ತವ್ಯವೆಂದು ತಿಳಿಯುವನು.

ಆದರೂ ತನ್ನ ಬಾಲ್ಯದ ದೃಷ್ಟಿಯಿಂದ ನೋಡಿದ ಪ್ರಪಂಚದ ಆ ಸೌಂದರ್ಯವನ್ನು ಅವನು ಮರೆಯುವಹಾಗಿಲ್ಲ. ಅದರ ಸವಿನೆನಪುಗಳು ಈಗಲೂ ಅವನ ಕಣ್ಣಮುಂದೆ ಪ್ರಜ್ವಲಿಸುತ್ತಿರುವುವು! ಆ ಸೌಂದರ್ಯವನ್ನು ಪ್ರಪಂಚ ನಿಜವಾಗಿ ಏಕೆ ಪಡೆಯಬಾರದು? ಈ ಅರ್ಥವಿಲ್ಲದ ಅಟ್ಟಹಾಸಗಳೇಕೆ? ಮನುಷ್ಯ ಮನುಷ್ಯನಲ್ಲಿ ಭೇದಭಾವಗಳೇಕೆ? ಹಣವಂತರು, ಹಣವಿಲ್ಲದವರು ಎಂಬ ಕೃತ್ರಿಮ ಭೇದಗಳೇಕೆ? ದುಡಿಯುವವನು ತ್ಯಾಗಿಯೂ, ದುಡಿಯದವನು ಭೋಗಿಯೂ ಆಗಿ ಮೆರೆಯುವ ಈ ವಿರುದ್ಧಾರ್ಥಕ ಸಮಸ್ಯೆ ಇರುವುದೇತಕ್ಕೆ? ಎಲ್ಲ ಮತಗಳೂ ಪ್ರೇಮ, ಸುಖ, ಸೌಂದರ್ಯಗಳ ಹೆದ್ದಾರಿಗಳನ್ನು ಉಪದೇಶಿಸುತ್ತಿರುವಾಗ ಮತದ ಹೆಸರಿನಲ್ಲೇ ಅಂತಹ ದ್ವೇಷ, ಚಿತ್ರಹಿಂಸೆಗಳೇತಕ್ಕೆ? ಈ ಸುಂದರವಾದ ಜಗತ್ತಿನಲ್ಲಿ ಎಲ್ಲರೂ ಸಮಾನಸ್ಕಂಧರಾಗಿ ಒಬ್ಬರಿನ್ನೊಬ್ಬರೊಡನೆ ಪ್ರೇಮವಾತ್ಸಲ್ಯಗಳಿಂದ ಕಲೆತು, ಎಲ್ಲರೂ ಸುಖಿಯಾಗಬಾರದೇಕೆ?.... ತಾನು ತನ್ನ ಬಾಲ್ಯದಲ್ಲಿ ಕಂಡ ಪ್ರಪಂಚವೇ ಸತ್ಯ! ಈಗ ಯಾವುದೋ ಒಂದು ಹಿಂಸಾತ್ಮಕವಾದ ವಿಕರಾಳ

ಪೇತುವಿಂದಾಗಿ ಲೋಕ ಈ ಭೀಕರ ರೂಪವನ್ನು ಧರಿಸಿಕೊಂಡಿದೆ!. . . . ಅದನ್ನು ಉದ್ಧರಿಸಲು ಸಾಧ್ಯವೆ? ಸಾಧ್ಯವಾಗುವುದಾದರೆ ಅದನ್ನು ಉದ್ಧರಿಸುವ ಮಹಾ ಮಂತ್ರವಾವುದು ?— ಸಂಸ್ಕರಣ, ವಿಕಸನೆ, . . . . ವಿಪ್ಲವ?

ಆಗ ಭಗವಾನ್ ಶ್ರೀಕೃಷ್ಣ, ಬುದ್ಧದೇವ, ಯೇಸುಕ್ರಿಸ್ತರು ಈ ಯುವಕನಲ್ಲಿ ಪುನರೊಮ್ಮೆ ಕಾಣಿಸಿಕೊಳ್ಳುತ್ತಾರೆ. ಲೋಕದ ಆದರ್ಶಪುರುಷರು— ಯೋಗಿಗಳು, ತ್ಯಾಗಿಗಳು, ವೀರರು, ಜ್ಞಾನಿಗಳು, ಕವಿಗಳು— ಇನ್ನೊಮ್ಮೆ ಈತನಲ್ಲಿ ಜನಿಸುತ್ತಾರೆ.

ಇದರಿಂದಲೇ ಯೌವನ ಅಷ್ಟು ಪವಿತ್ರವಾದುದು. ಯೌವನದ ಆಸೆ, ಪ್ರತಿಷ್ಠೆ, ಚಿತ್ತೋದ್ಭಾವಿತಗಳು ಅಷ್ಟು ಮಹತ್ವವುಳ್ಳವು. ಇಂತಹ ಮಹತ್ತರವಾದ ಭಾವನೆಗಳನ್ನು ತಮ್ಮ ಅವಸಾನಕಾಲದವರೆಗೆ ದೃಷ್ಟಿಪಥದಲ್ಲಿಟ್ಟುಕೊಳ್ಳುವವರೇ ಲೋಕದ ಮಹಾಮಹಿಮರು!. . . .

ಇದೇ ಸಮಯದಲ್ಲಿ ನಮ್ಮ ಯುವಕ ಇನ್ನೊಂದು ಮಹಾಪರ್ಯಟನೆಯ ಗೊಂದಲದಲ್ಲಿ ಸಿಕ್ಕಿಬೀಳುತ್ತಾನೆ! ಮೊದಲನೆಯದು ಬಾಹ್ಯ ಪ್ರಪಂಚಕ್ಕೆ ಸಂಬಂಧಿಸಿದ್ದರೆ, ಇದು ಅವನ ಆಂತರ್ಯದ ಪ್ರಪಂಚಕ್ಕೆ ಸಂಬಂಧಪಟ್ಟುದು. ಅವನ ಶರೀರದಲ್ಲುಂಟಾಗುವ ಹೊಸ ಹೊಸ ವಿಕಾಸಗಳು, ಮನಸ್ಸಿನ ನೂತನವಾದ ಪ್ರವೃತ್ತಿಗಳು, . ಎಲ್ಲಿಂದಲೋ ಯಾವ ಕಾರಣದಿಂದಲೋ ಆಗಾಗೆ ಬರುವ ಸುಮಧುರವಾದ ತೀಕ್ಷ್ಣ ನೋವುಗಳು, ವಿವರಿಸಲಸಾಧ್ಯವಾದ ತುರ್ತತೆಗಳು, ಅವನನ್ನು ಪೀಡಿಸುತ್ತಲೇ ಇದ್ದು ಅವನ ಜೀವನವನ್ನು ಅಡಿಮೇಲಾಗಿಮಾಡಿ ಬಿಡುತ್ತವೆ. ತಾಯಿ, ತಂದೆ, ಗುರು, ಮಠಗಳಿಂದ ದೊರೆತ ಶಿಕ್ಷಣವೇನೋ ಬಾಹ್ಯಪೀಡೆಗಳನ್ನು ಗುರುತಿಸಲು ಸಹಾಯಮಾಡುತ್ತವೆ. ಆದರೆ ಈ ಆಂತರ್ಯ ಪೀಡೆಗಳನ್ನು ಕುರಿತು ಈ ತನಕ ಯಾರೂ ಏನನ್ನೂ ಅವನಿಗೆ ಹೇಳಿಕೊಡಲಿಲ್ಲ! ಬಲ್ಲವರ ಕೂಡೆ ಕೇಳೋಣವೆಂದರೆ ಏನೋ ಒಂದು ಹೇಳಲಸಾಧ್ಯವಾದ ನಾಚಿಕೆ, ಶಂಕೆ. ಇದರ ಫಲಿತಾಂಶವಾಗಿ ಅವನು ಏಕಾಂತ ಜೀವಿಯಾಗಿ, ಸಹಿಸಲಾಗ ದಂತಹ ತನ್ನ ವೇದನೆಗಳನ್ನು ತನ್ನೊಳಗೇ ಮುದುರಿಕೊಂಡು ಅನುಭವಿಸುತ್ತಾನೆ.

'ಹೆಂಗಸು' ಎಂಬ ವ್ಯಕ್ತಿ ಇದೆ ಎಂಬ ಅರಿವು ಅವನಿಗೆ ಮೊದಲಾಗುವುದು ಇದೇ ಸ್ಥಿತಿಯಲ್ಲಿ. ಏಕೆಂದರೆ ಆಕೆಯ ನಗುಮುಖ, ತೀಕ್ಷ್ಣವಾದ ಕಟಾಕ್ಷಗಳು, ಕೋಮಲವಾದ ಸ್ಪರ ಅವನ ಗೂಢವೇದನೆಗಳನ್ನು ಇನ್ನಷ್ಟು ತೀವ್ರವಾಗಿ ಮಾಡಿ ಬಿಡುತ್ತವೆ. ಅವನ ಭಾವನಾ ರಾಜ್ಯದಲ್ಲಿ ಆಕೆ ಅನ್ಯುತಮಯವಾದ ಬೇರೊಂದು ಲೋಕವನ್ನೇ ತೆರೆದುಬಿಡುತ್ತಾಳೆ. 'ಹೆಂಗಸು'— ಆಕೆಯೇನು ಪರಕೀಯಳೇ? ಎಲ್ಲಿಯೋ, ಯಾವಾಗಲೋ ಒಂದು ಮಹಾಜೀವ ಇಬ್ಭಾಗಿ ಹೋಗಿರಬೇಕು. ಅದರ ಅರ್ಧ ಭಾಗ ಮಾತ್ರ ತಾನು. ಉಳಿದ ಅರ್ಧ ಭಾಗವೇ ಆಕೆ! ಆಕೆಯನ್ನು ಸೇರಿ, ಆಕೆಯ ಜೀವನವನ್ನು ತನ್ನ ಜೀವನದೊಳಗೆ ಮಿಲನಮಾಡುವವರೆಗೆ ತನ್ನ ಜೀವನಕ್ಕೆ ಸಂಪೂರ್ಣತೆಯಿಲ್ಲ, ಆತ್ಮಕ್ಕೆ ಶಾಂತಿಯಿಲ್ಲ, ದೇಹಕ್ಕೆ ನೆಮ್ಮದಿಯಿಲ್ಲ —ಎಂದು ಬಗೆದು ಆಕೆಯ ಜೀವನದಲ್ಲಿ ತನ್ನ ಜೀವನವನ್ನು ಬೆರೆಯಿಸುವನು.

ಇಲ್ಲಿಗೆ ಅವನ ಯೌವನ ಮುಗಿಯಿತು;

**ಗೃಹಸ್ಥಾಶ್ರಮ**
ಪ್ರಾರಂಭವಾಯಿತು. ಅವನ ಜೀವನ-ನಾಟಕದಲ್ಲಿ ಮತ್ತೊಂದು ಅಂಕ ತೊಡಗಿತು. ಅವನಿಗೆ ಪ್ರಾಯವಿನ್ನೂ ಹೆಚ್ಚಾಗದಿರಬಹುದು. ನೋಡಲಿಕ್ಕೆ ಅವನು ಇನ್ನೂ ಯುವಕನೇ ಅಹುದು. ಆದರೆ ಮದುವೆಯಾದ ಮರುದಿನವೇ ಅವನು ಎಷ್ಟೋ ವರ್ಷಗಳನ್ನು ಕಳೆದಂತಿರುವನು. ಎಷ್ಟೋ ವರ್ಷಗಳ ಅನುಭವ ವನ್ನು ಒಂದೇ ದಿನವಲ್ಲಿ ಪಡೆದುಕೊಂಡಂತಿರುವನು. ತನ್ನ ದೃಷ್ಟಿಪಥದಲ್ಲಿ ಒಂದೇ ದಿನದೊಳಗೆ ಅದ್ಭುತವಾದ ಮಾರ್ಪಾಟನ್ನು ಹೊಂದಿರುವನು. ಆದುದರಿಂದಲೇ ಅವನು ಇನ್ನು ಯುವಕನಲ್ಲ, ಗೃಹಸ್ಥ.

ಅಂದು ಅವನು ತನ್ನ ತಾಯಿತಂದೆಗಳ ಪ್ರೇಮಾಶ್ರಯದಿಂದ ಮುಂದಕ್ಕೆ ಹೋಗಿ ಸಂಸಾರಶರಧಿಯಲ್ಲಿ ದುಮುಕಿದಾಗ, ಚುಕ್ಕಾಣಿ ಇಲ್ಲದ ನಾವೆಯಂತೆ ಭೋರ್ಗರೆಯುತ್ತಿರುವ ಅಲೆಗಳ ಹೊಡೆತಕ್ಕೆ ಸಿಕ್ಕಿಕೊಂಡು ಅತ್ತ ಇತ್ತ ಹೊಯ್ದಾಡಿದ್ದನು. ಇಂದು ಅವನು ಗೃಹಸ್ಥಾಶ್ರಮದಲ್ಲಿ ಒಂದು ಸ್ಥಿರವಾದ ಪಡವನ್ನು ಮುಟ್ಟಿರುವನು. ಅವನ ಶರೀರವನ್ನು ಪೀಡಿಸುತ್ತಿರುವ ಅನೇಕ ತೀಕ್ಷ್ಣ ನೋವುಗಳೂ ಕ್ರಮೇಣ ಶಮನವನ್ನು ಪಡೆಯುವುವು. ಒಂದಕ್ಕೊಂದು ಸಂಬಂಧವಿಲ್ಲದ ಸಾವಿರಾರು ಭಾವನೆಗಳ ತಿಕ್ಕಾಟದಿಂದ ಕಲುಷಿತವಾದ ಅವನ ಮನಸ್ಸೂ ಈಗ ಗೃಹಸ್ಥಾಶ್ರಮದಲ್ಲಿ ಶಾಂತತೆಯನ್ನು ಹೊಂದುವುದು.

ಆದರೆ—ಯೌವನಾವಸ್ಥೆಯ ಅವನ ಆ ಮಹತ್ತರವಾದ ಆಸೆ, ಚೇತ್ತೋದ್ಭಾವಗಳು ಈಗ ಎಲ್ಲಿ? ಅವೇನೋ ಅವನಲ್ಲಿ ಇನ್ನೂ ಇವೆ, ಮಾಯವಾಗಿಲ್ಲ. ಆದರೆ ಮೊದಲು ಅವು ಪ್ರಜ್ವಲಿಸುತ್ತ ಇದ್ದರೆ ಈಗ ಅವು ಮಿನುಗುತ್ತ ಮಾತ್ರ ಇವೆ. ಯುವಕನ ವಿಶ್ವವ್ಯಾಪಕ ದೃಷ್ಟಿ ಈಗ ಗೃಹಸ್ಥನಲ್ಲಿ ಸಂಕುಚಿತತ್ವವನ್ನು ಪಡೆದಿದೆ. ತನ್ನ ಮನೆ, ಮಠ ಮೊದಲು; ಆಮೇಲೆ ದೇಶ, ವಿಶ್ವ. ತನ್ನ ಕೈಹಿಡಿದಾಕೆಯ ಸುಖ, ತನ್ನ ಮಕ್ಕಳು ಮರಿಗಳ ಸುಖ, ತನ್ನ ಸುಖ ಮೊದಲು; ಆಮೇಲೆ ಲೋಕದ ಕಲ್ಯಾಣ!

ಅವನಲ್ಲುಂಟಾದ ಈ ಮಾರ್ಪಾಟಿನಲ್ಲಿ ಆಶ್ಚರ್ಯವೇನೂ ಇಲ್ಲ. ಹೊಟ್ಟೆಯ ಪಾಡು ಅಷ್ಟು ದೊಡ್ಡದು—ಅಥವಾ ಕೆಟ್ಟದು. ಈ ಪ್ರಪಂಚದ ಸ್ಪರ್ಧೆಯ ವ್ಯವಹಾರಗಳಲ್ಲಿ ಅವನು ತನ್ನ ಮಹದಾದ ಶಕ್ತಿಗಳನ್ನೆಲ್ಲ ಬರೀ ಒಂದು ಕೈ ಬಾಯಿಯ ಜೀವನಕ್ಕಾಗಿ ವಿನಿಯೋಗಿಸಬೇಕಾಗುವುದು. ಅನೇಕವೇಳೆ ಇಷ್ಟು ಮಾಡಿದರೂ ಸಾಕಾಗುವುದಿಲ್ಲ. ತಾನು ಜೀವಿಸಬೇಕಾದರೆ ಇನ್ನೊಬ್ಬ ಸಾಯಬೇಕು. ತಾನು ಮೇಲಕ್ಕೆ ಬರಬೇಕಾದರೆ ಇನ್ನೊಬ್ಬನನ್ನು ಕೆಳಕ್ಕೆ ತುಳಿಯಬೇಕು. ತನ್ನನ್ನು ಮೇಲಾಡಿಸುವವನೊಬ್ಬನಿದ್ದರೆ ಅವನನ್ನು ಸ್ವಲ್ಪವಾದರೂ ಅಳುಕದೆ ಅಜಿಗೆ ತಲೆಯೆತ್ತದಂತೆ ತಳ್ಳಬೇಕು. ಬರೀ ಒಂದು ಜೀವನಕ್ಕಾಗಿ ಸ್ಪರ್ಧೆಯ ವ್ಯವಹಾರದ ಇಂತಹ ಪೈಶಾಚಿಕ ಸೂತ್ರಗಳನ್ನೂ ಅವನು ಅನುಸರಿಸಬೇಕಾಗುವುದು. ಉಪಾಯವಿಲ್ಲದೆ ಅನುಸರಿಸುವನು.

ಯೌವನಾವಸ್ಥೆಯ ಆ ಕವಿಯೆಲ್ಲಿ, ಗೃಹಸ್ಥಾಶ್ರಮದಲ್ಲಿ ಸ್ವಲ್ಪವಾದರೂ ಅಳುಕದೆ ಕಾದಾಡುವ ಈ ಬಂಟನೆಲ್ಲಿ? ಲೋಕೋದ್ಧಾರದ ಸುಖಸ್ವಪ್ನಗಳನ್ನು

ತೇಜಸ್ವಿಗಳಾದ ಕಣ್ಣುಗಳಿಂದ ಕಂಡ ಆ ಉತ್ಸಾಹೀ ತರುಣನೆಲ್ಲಿ, ಲೋಕದ ರಾಗ ದ್ವೇಷಗಳ ಕದನದಲ್ಲಿ ದೂಳಿನಿಂದ ಮಲಿನನಾದ ಈ ಯೋಧನೆಲ್ಲಿ?

## ನಾಲುವತ್ತರ ನಲುಗು

ಹೀಗೆಯೇ ಈ ಜೀವಿ ತನ್ನ ಗೃಹಸ್ಥಾಶ್ರಮದ ರಥವನ್ನು ಮುಂದಕ್ಕೆ ಸಾಗಿಸುತ್ತ ತನ್ನ ನಾಲುವತ್ತನೆಯ ವಯಸ್ಸನ್ನು ದಾಟುವನು. ಇಲ್ಲಿಗೆ ಅವನ ಜೀವನ-ನಾಟಕದಲ್ಲಿ ಇನ್ನೊಂದು ಅಂಕ ಮುಗಿಯಿತೆಂದು ಹೇಳಬಹುದು. ಅವನ ಬುದ್ಧಿಶಕ್ತಿ ಈಗ ಶಿಖರವನ್ನು ಮುಟ್ಟಿದೆ. ಅವನ ಭೌತಿಕ ಜೀವನವೂ, ಮಾನಸಿಕ ಭಾವನೆಗಳೂ ಒಂದು ವ್ಯವಸ್ಥಿತ ಸ್ಥಿತಿಗೆ ಬಂದಿವೆ. ಪ್ರಪಂಚ ವ್ಯವಹಾರದಲ್ಲಿ ತನ್ನದೇ ಆದ ಒಂದು ಸ್ಥಳವನ್ನು ಗಳಿಸಿಕೊಂಡು ಬಾಳುತ್ತಿದ್ದಾನೆ. ಜೀವನದ ಹೋರಾಟವೇನೋ ಇನ್ನೂ ಮುಗಿಯಲಿಲ್ಲ. ಆದರೆ ಅದರ ಒದ್ದಾಟ ಈಗ ಎಷ್ಟೋ ಮಟ್ಟಿಗೆ ಕಡಮೆಯಾಗಿದೆ. ಈಗ ಅವನು ಯುದ್ಧ ತಾಂಡವದಿಂದ ಗೆದ್ದು ಬಂದ ಕಡುಗಲಿ. ಕದನದ ದೂಳನ್ನು ಒರಸಲು ಈಗ ಅವನಿಗೆ ಸಮಯವಿದೆ. ಧೈರ್ಯ ದಿಂದ ಇದ್ದೆಡೆಯಲ್ಲೇ ನಿಂತು ತನ್ನ ಜೀವನದ ಸಿಂಹಾವಲೋಕವನ್ನೂ ಮುಂದಿನ ಪ್ರತ್ಯಾಶೆಗಳನ್ನೂ ನಿರ್ದಾಕ್ಷಿಣ್ಯದಿಂದ ಪರೀಕ್ಷಿಸಲು ಅವಕಾಶವಿದೆ....

ಗೃಹಸ್ಥಾಶ್ರಮದಲ್ಲಿ ಅವನು ಎಂತಹ ಅಮೂಲ್ಯವಾದ ಅನುಭವಗಳ ಸಂಪತ್ತನ್ನು ಪಡೆದಿರುವನು! ಈ ಅನುಭವಗಳ ಸಂಪತ್ತು ತನ್ನ ಯೌವನದಲ್ಲಿ ದ್ದಿದ್ದರೆ—! ಆಗ ಬಿಳಿದಾದುದೆಲ್ಲ ಹಾಲೆಂದು ತಿಳಿದುಕೊಂಡು ಎಂತೆಂತಹ ಗಂಡಾಂತರಗಳಲ್ಲಿ ಸಿಲುಕಿಕೊಂಡಿದ್ದನು! ಈಗಲಾದರೋ ಎಂತಹ ಗೂಢ ಸಂಗತಿಗಳ ಆಳವನ್ನಾದರೂ ಕೂಡಲೇ ಅವನು ಗ್ರಹಿಸಿಕೊಳ್ಳಬಲ್ಲನು!.... ಅನುಭವವೆಂಬುದು ವಿಚಿತ್ರವಾದುದು. ಅದರ ಉಪಯೋಗದ ಆವಶ್ಯಕತೆಯಿದ್ದಾಗ ಅದು ಸಿಕ್ಕ ಲೊಲ್ಲದು. ಅದು ಸಿಕ್ಕಿದಾಗ ಅದರ ಉಪಯೋಗದ ಆವಶ್ಯಕತೆಯಿಲ್ಲ!.... ಈ ಅನುಭವದ ಸಂಪತ್ತು ಮೊದಲೇ ಇದ್ದಿದ್ದರೆ ತನ್ನ ಜೀವನ ನೌಕೆಯನ್ನು ಎಷ್ಟು ಸುಗಮವಾಗಿ, ಸುರಕ್ಷಿತವಾಗಿ ಸಾಗಿಸಬಹುದಾಗಿತ್ತು! ತನ್ನ ಜೀವನವನ್ನು ತನಗೆ ಇಷ್ಟವಾದ ಉದ್ಯಮಗಳಲ್ಲಿಯೇ ಎರಕಹೊಯಿದು ಎಂತಹ ಸಾರ್ಥಕತೆಯನ್ನು ಪಡೆಯಬಹುದಾಗಿತ್ತು! ಅದರ ಬದಲು ಬರೇ ಒಂದು ಕೈ ಬಾಯಿಯ ಜೀವನ ಕ್ಕಾಗಿ ತನ್ನ ಬುದ್ಧಿಶಕ್ತಿಗಳ ಎಂತಹ ದುಂದುಗಾರಿಕೆಯನ್ನು ಮಾಡಬೇಕಾಯಿತು! ಯಾವುದಕ್ಕಾಗಿ?—**ಈಗ** ಯಾವ ಉಪಯೋಗಕ್ಕೂ ಇಲ್ಲದ 'ಅನುಭವ' ಪಡೆಯ ಲಿಕ್ಕೇನು?....ಈ ಅನುಭವದ ಸಂಪತ್ತು **ಆಗ** ಇದ್ದಿದ್ದರೆ! ಯೌವನದ ಅರ್ಥ ವಿಲ್ಲದ ಆಸೆಗಳು, ಗುರಿಯಿಲ್ಲದ ಉತ್ಸಾಹಗಳು, ಹೆದ್ದತನದ ದುಡುಕುಗಳು, ದುಸ್ಸಾಧ್ಯವಾದ ಹೋರಾಟಗಳು, ಕಾರಣವಿಲ್ಲದ ಶಂಕೆಗಳು, ಶಮನ ಹೊಂದದ ಕಾಮವಿಕಾರಗಳು— ಇವುಗಳಿಂದೆಲ್ಲ ಆಗ ಅಷ್ಟು ಬವಣೆಪಟ್ಟು ಕಂಗೆಡಬೇಕಾ ಗಿತ್ತೇ?.... ಯೋಚಿಸಿ ಫಲವಿಲ್ಲ. "ಬರೆಯುವ ಲೇಖಣಿ ಬರೆದುಹೋಗಿದೆ.... ಅದರ ಒಂದೇ ಒಂದು ಶಬ್ದವನ್ನಾದರೂ ನಿನ್ನ ಕಣ್ಣೀರಿನಿಂದ ಅಳಿಸಲು ಸಾಧ್ಯ ವಿಲ್ಲ!"....

ಈ ನಾಲುವತ್ತನೆಯ ವಯಸ್ಸಿನಲ್ಲಿ ಅವನ ಬುದ್ಧಿಶಕ್ತಿಯೇನೋ ಶಿಖರವನ್ನು ಮುಟ್ಟಿರಬಹುದು. ಆದರೆ ಅವನ ದೇಹಶಕ್ತಿ ಕುಗ್ಗುವುದರಲ್ಲಿದೆ. ಕಣ್ಣುಗಳಲ್ಲಿ 'ಚಾಳೀಸ'. ತಲೆಕೂದಲು ಉದುರಲು ಇಲ್ಲವೇ ಬಿಳುಪಾಗಲು ಪ್ರಾರಂಭ. ಶರೀರದ ಪ್ರತಿಯೊಂದು ಅವಯವವೂ ಮೆಲ್ಲಮೆಲ್ಲಗೆ ಕ್ಷೀಣತೆಯನ್ನು ಪಡೆಯುವ ಸಂದರ್ಭ. ಜೀವನದ ಹೋರಾಟದಲ್ಲಿ ಜೆಂದು ಬಳಲಿದ ಶರೀರ. ಇನ್ನು ಅದಕ್ಕೆ ಉತ್ಸಾಹವೆಲ್ಲಿಯದು? ಆ ಹೋರಾಟದಲ್ಲಿ ಗಳಿಸಿ ಉಳಿಸಿಕೊಂಡದ್ದನ್ನೇ ಭದ್ರವಾಗಿಡಲು ಇನ್ನು ಈ ಜೀವಿಯ ಹಂಬಲ. ಇದಕ್ಕಾಗಿ ಮಾತ್ರ ಇನ್ನು ಜೀವ. ಮನೆ, ಮಠ, ಆಸ್ತಿ, ಪಾಸ್ತಿ— ಇವೇ ಆ ಹೋರಾಟದ ಲಾಭಗಳು. ಆ ಪ್ರಪಂಚ ಮಂಥನದಿಂದ ಲಭಿಸಿದ ರತ್ನಗಳು. ಅವುಗಳನ್ನು ಹೇಗೆ ಸುರಕ್ಷಿತವಾಗಿ ಕಾಪಾಡಬೇಕೆಂಬುದೇ ಇನ್ನು ಅವನ ಮುಂದಿನ ಯೋಚನೆ.

ಆದುದರಿಂದಲೇ ಅವನಿಗೆ ಇನ್ನು ಹೊಸತೆಂದರೆ ಹೆದರಿಕೆ. ಹೊಸತೆಂದರೆ ಇಲ್ಲದ ಸಲ್ಲದ ಆಗ್ರಹ. ಹೊಸತು ಬಂದು ತನ್ನ ಭದ್ರವಾದ ಸ್ಥಾನವನ್ನು ಎಲ್ಲಿ ಕದಲಿಸಿಬಿಡುವುದೋ ಎಂಬ ಶಂಕೆ. ತನ್ನ ಆಯುಸ್ಸನ್ನೆಲ್ಲ ಸವೆಯಿಸಿ ಕಷ್ಟದಿಂದ ಗಳಿಸಿ ಉಳಿಸಿಕೊಂಡುದೆಲ್ಲವೂ ಹೊಸತಿನಿಂದ ಎಲ್ಲಿ ಅಳಿದುಹೋಗುವುದೋ ಎಂಬ ಭೀತಿ. ಹೊಸತೆಂದರೆ ಪುನಃ ಹೋರಾಟ. ಹೋರಾಟದಿಂದ ಮೊದಲೇ ಜೆಂದು ಬಳಲಿದ ಜೀವ. ಪುನಃ ಹೋರಾಟ ಸಾಧ್ಯವೇ? ಬುದ್ಧಿಶಕ್ತಿಯಿರಬಹುದು. ತನ್ನ ಅನುಭವ ಸಂಪತ್ತಿನಿಂದಾಗಿ ಬೇಕಾದಷ್ಟು ಯುಕ್ತಿಯೂ ಇರಬಹುದು. ಆದರೆ ಕುಗ್ಗಿದ ದೇಹ. ಪುನಃ ಹೋರಾಟಕ್ಕೆ ಶಕ್ತಿ ಸಾಲದು, ಉತ್ಸಾಹ ಸಾಲದು.

ಯೌವನದಲ್ಲಿ ಉಗ್ರವಾದಿಯಾಗಿದ್ದ ಇವನು ಈಗ ತನ್ನ ನಾಲುವತ್ತನೆಯ ವಯಸ್ಸಿನಲ್ಲಿ ಸಂಪ್ರದಾಯವಾದಿ! ಏಕೆಂದರೆ ಸಂಪ್ರದಾಯದಲ್ಲಿಯೇ ಅವನ ಮನೆ ಮಠ, ಪದವಿ, ಸ್ಥಾನ ಮಾನಾದಿಗಳಿಗೆ ಭದ್ರತೆಯಿದೆ. ಸಂಪ್ರದಾಯದಲ್ಲಿಯೇ ಅವನಿಗೆ ಈಗ ಬೇಕಾದ ನೆಮ್ಮದಿ, ಶಾಂತಿ, ಮೋಕ್ಷ ಇದೆ.

## ಸಂಧ್ಯಾರಾಗ

ಹೀಗೆಯೇ ಸಂವತ್ಸರಗಳು ಕಳೆಯುವುವು. ಅವು ಕಳೆದಾಗಲೆಲ್ಲ ಪ್ರಪಂಚ ಮೆಲ್ಲಮೆಲ್ಲನೆ ಅವನಿಂದ ದೂರ ಸರಿಯುವುದು. ಪ್ರಪಂಚದ ಮೇಲಿರುವ ಅವನ ಹಿಡಿತ ಮೆಲ್ಲಮೆಲ್ಲಗೆ ಸಡಿಲುವುದು. ದಿನೇ ದಿನೇ ಕುಗ್ಗುತ್ತಿರುವ ಅವನ ದೈಹಿಕ ಮತ್ತು ಮಾನಸಿಕ ಶಕ್ತಿಗಳು ಅವನ ಜೀವನದ ಸಂಧ್ಯಾರಾಗವನ್ನು ಬಲವತ್ತರವಾಗಿ ಸೂಚಿಸುವುವು. ಅನೇಕ ಹೋರಾಟಗಳಲ್ಲಿ ಕಾದಾಡಿ ಗೆದ್ದು ಬಂದ ವೀರನು ಈಗ ಒಂದು ದಿನ ತನ್ನ ಧನುಸ್ಸನ್ನು ಹಠಾತ್ತಾಗಿ ಕೆಳಗೆ ಇಳಿಸಬೇಕಾಗುವುದು.

ಅವನ ಮುಂದಿನ ಸ್ಥಿತಿ ಭಯಾನಕ ಸ್ಥಿತಿ. ಕರುಣಾರ್ದ್ರ ಸ್ಥಿತಿ. ಬಾಲ್ಯದ ನಿಸ್ಸಹಾಯಕತ್ವ ಪುನಃ ಅವನ ಜೀವನದಲ್ಲಿ ಬರುವುದು. ಬಲಹೀನತೆ, ಸ್ಥಿರವಲ್ಲದ ಮನಸ್ಸು, ತಾಳ್ಮೆ ಇಲ್ಲದಿರುವಿಕೆ— ಇವೆಲ್ಲ ಬಾಲ್ಯದ ಗುಣವಿಶೇಷಗಳನ್ನು ಪುನರೊಮ್ಮೆ ತೋರಿಸುವುವು. ಪ್ರಾಯ ಹೋದ ಮುದುಕನು ಎಳೆಯ ಮಗುವಿನಂತೆ ಎಂದು ಹೇಳುವುದುಂಟು. ಆದರೆ ಮುದಿತನ ಬಾಲ್ಯದಿಂದ ಎಷ್ಟೋ ಭಿನ್ನವಾಗಿರುವುದು.

ಎಳೆಯ ಮಗುವಿಗೆ ತಾಯಿತಂದೆಗಳ ಪ್ರೇಮಾಶ್ರಯವಿದ್ದರೆ ಮುದುಕನಿಗೆ ಅಂತಹ ಯಾವ ಆಶ್ರಯವೂ ಇಲ್ಲ. ಎಳೆಯ ಮಗುವನ್ನು ಜಗತ್ತಿಗೆ ಜಗತ್ತೇ ಪ್ರೀತಿಸುತ್ತದೆ. ಮುದುಕನನ್ನು ಯಾರೂ ಪ್ರೀತಿಸುವುದಿಲ್ಲ! ಯೌವನಕ್ಕಂತೂ ಮುದಿತನವೆಂದರೆ ವಿಶೇಷ ತಾತ್ಸಾರ, ಹೇಳಲಾರದಷ್ಟು ಹಗೆ!

ಮಗುವಾಗಿದ್ದಾಗ ಅವನು ಈ ಪ್ರಪಂಚವನ್ನು ಎದುರು ಮುಖವಾಗಿ ನಿಂತು ಎಂತಹ ಉತ್ಸುಕತೆಯಿಂದಲೂ ಮಹತ್ತರವಾದ ಆಸೆ ಊಹನೆಗಳಿಂದಲೂ ನೋಡಿದ್ದನು! ಜೀವನದ ಒತ್ತಾಸೆ ಅಷ್ಟಿತ್ತು ಆಗ. ಈಗ ಹಾಗಲ್ಲ. ಅವನು ಈಗ ಈ ಸುಂದರವಾದ ಪ್ರಪಂಚಕ್ಕೆ ಬೆನ್ನುಹಾಕಿರುವನು. ಪ್ರಪಂಚದ ಭ್ರಮೆಗಳನ್ನೆಲ್ಲ ಆಗಲೇ ನೀಗಿಕೊಂಡಿರುವನು. ಅವನಿಗಿನ್ನು ಪ್ರಪಂಚದಲ್ಲಿ ಯಾವ ಆಸೆ ಊಹನೆಗಳಿಲ್ಲ. ಅವನು ಪ್ರಪಂಚದಲ್ಲಿ ಇನ್ನೂ ಜೀವಿಸುತ್ತಿದ್ದರೂ ಅವನು ಈ ಪ್ರಪಂಚದವನಲ್ಲ. ಈ ಪ್ರಪಂಚ ಮೆಲ್ಲ ಮೆಲ್ಲಗೆ ಅವನಿಂದ ದೂರ ಸರಿಯುತ್ತಲೇ ಇರುವುದು!

ಹೀಗಾಗಿ ಇನ್ನು ಅವನದು ಒಂಟಿ ಜೀವ. ಅವನ ಶಕ್ತಿಗಳೆಲ್ಲ ಕುಗ್ಗುತ್ತಿರುವ ಸಮಯದಲ್ಲಿ, ತೀರ ನಿಸ್ಸಹಾಯಕತ್ವದ ಅವನ ಕರುಣಾರ್ದ್ರಸ್ಥಿತಿಯಲ್ಲಿ, ಬರೀ ಕೆಲವು ಕಹಿ ನೆನಪುಗಳು, ಒಡಕು ಅನುಭವಗಳು ಅಲ್ಲದೆ ಇನ್ನಾವುದೂ ಅವನ ಸಂಗಡವಿಲ್ಲ! ಅವನನ್ನು ಸರಿಯಾಗಿ ಅರಿತುಕೊಳ್ಳಲು ಕೂಡ ಯಾರೂ ಪ್ರಯತ್ನಿಸುವುದಿಲ್ಲ!

ಅವನ ಹಿಂದಿನದು ಹಿಂದಾಗಿ ಹೋಯಿತು. ಮುಂದಾದರೂ ಅವನಿಗೇನಿದೆ?— ಸಂಪ್ರದಾಯದ ಮತ ಧರ್ಮಗಳು, ತತ್ವಜ್ಞಾನಗಳು! ಜಪ, ತಪ, ನೇಮ, ಹೋಮಗಳು! ಶ್ರವಣ, ಮನನ, ಭಜನ, ಪಾರಾಯಣಗಳು! ಆತ್ಮ, ಜ್ಞಾನ, ಭಕ್ತಿ, ವೈರಾಗ್ಯ, ಸ್ವರ್ಗ, ನರಕ, ಪರಲೋಕ— ಇವೇ ಮೊದಲಾದ ಆಡಂಬರದ ಶಬ್ದಗಳನ್ನು ಚೆಂಡಾಡಿಸುವ ಉದ್ದುದ್ದ ವ್ಯಾಖ್ಯಾನ ಲಹರಿಗಳು!

ಇವು ಎಷ್ಟರ ಮಟ್ಟಿಗೆ ಅವನಿಗೆ ಶಾಂತಿ, ಸಮಾಧಾನಗಳನ್ನು ಕೊಡುತ್ತವೆಂದು ಹೇಳುವುದು ಅಸಾಧ್ಯ. ಇದು ಅವನ ಹಿಂದಿನ ಕಾರ್ಯಪ್ರವೃತ್ತಿ, ಬುದ್ಧಿವಿಕಾಸಗಳ ಮೇಲೆ ಹೊಂದಿಕೊಂಡಿರುತ್ತದೆ. ಇವೆಲ್ಲ ಅವನಿಗೆ ಬರೀ ಅರ್ಥವಿಲ್ಲದ ಆಡಂಬರದ ಮಾತುಗಳೆಂದು ತೋರಬಹುದು. ಇಲ್ಲವೆ, ಗೊತ್ತುಗುರಿಯಿಲ್ಲದ ಅವನ ಚಿತ್ತಕ್ಕೆ ಇವೆಲ್ಲ ಪರಮ ಅಫೀಮು ಔಷಧವಾಗಿ ಪರಿಣಮಿಸಬಹುದು! ಇಷ್ಟನ್ನು ಮಾತ್ರ ಹೇಳಬಹುದು. ಇವೆಲ್ಲ ಅನಿಶ್ಚಿತತೆಯ ಊಹಾಪೋಹಗಳು. ಲೋಕ ಇವನ್ನು ಎಂತಹ ನುಣ್ಣನೆಯ ಮಾತುಗಳಿಂದ ಪ್ರಸಿದ್ಧಿಪಡಿಸುವುದಾದರೂ, ಯಥಾರ್ಥದಲ್ಲಿ— ಸೂಕ್ಷ್ಮರೀತಿಯಲ್ಲಿ—ಇವೆಲ್ಲ ವ್ಯಕ್ತಿಗತವಾದ ಪರಿಚಯ ಭೋಗಗಳು, ಜೀವನದ ರಹಸ್ಯವನ್ನು ಭೇದಿಸಲು ಪ್ರಯತ್ನಿಸುವ ಮಾನವ ಶಕ್ತಿಯ ಅದ್ಭುತವಾದ ಕಲ್ಪನೆಗಳು, ಅಷ್ಟೆ. ಈ ಮುದುಕನ ಮುಂದೆ ಈಗ ನಿಶ್ಚಿತವಾದ— ಯಾರಿಂದಲೂ ತಡೆಗಟ್ಟಲು ಸಾಧ್ಯವಿಲ್ಲದ— ಸಂಗತಿಯಿರುವುದು ಒಂದೇ! ಅದು

## ಸಾವು !

ಅಹುದು, ಸಾವು! ಇದೊಂದೇ ಅವನಿಗೆ ಎದುರು ಇರುವ ಅನಿಶ್ಚಿತವಾದ ಸಂಗತಿ !

ಸಾವು !—ಮನುಷ್ಯಶಕ್ತಿಗೆ ಮೀರಿದ ಅಭೇದ್ಯವಾದ ವಿಕರಾಳ ಸಮಸ್ಯೆ !

ಸಾವು !—ಅಂಧಕಾರ— ನಾಶ— ಅಂತ್ಯ !

ತಾನು ಸಾಧಿಸಿದುದೆಲ್ಲದರ ಅಂತ್ಯ! ತನ್ನ ಎಲ್ಲ ಕರ್ಮ, ಹೋಮ, ತಪ, ಯಜ್ಞಗಳ ಅಂತ್ಯ !

ತನ್ನ ಬಾಳುವೆಯಾದರೂ ಏನು? ಅರಳಿದ ಎಲೆ ಬಾಡಿ ಮುದುರಿ ನೆಲಕ್ಕೆ ಉರುಳಿ ಮಣ್ಣುಗೂಡುವಂತೆ ತನ್ನ ಬಾಳುವೆಯೂ ಅಷ್ಟೇ ನಿಷ್ಫಲವೇನು? ಆಕಾಶದಲ್ಲಿ ಒಂದು ಕ್ಷಣ ಮಿಂಚಿನಂತೆ ಮೆರೆದು ಗರ್ಜಿಸಿ, ಕೂಡಲೇ ಕತ್ತಲೆಯೊಳಗೆ ಮಾಯವಾಗುವ ಬಾಣಬಿರುಸಿನಂತೆ ತನ್ನ ಜೀವನವೂ ಒಂದು ಕ್ಷಣಿಕ ಮಾಯೆಯೇನು?....

ಆಗದು! ಅದಾಗದು! ತಾನು ಈ ಪ್ರಪಂಚದೊಳಗಿಂದ ಅದೃಶ್ಯನಾದರೇನು? ಪ್ರಪಂಚದಲ್ಲಿದ್ದು ಮಹತ್ಕಾರ್ಯಗಳನ್ನು ಸಾಧಿಸಲಿಲ್ಲವೇ? ತಾನು ಪ್ರಪಂಚದೊಳಗಿಂದ ಅಳಿದುಹೋದರೂ ಈ ಸುಂದರ ಪ್ರಪಂಚ ನಿಲ್ಲುವುದು! ತಾನು ಅದೃಶ್ಯನಾದರೂ ತನ್ನ ಹೆಸರು ಈ ಸುಂದರ ಪ್ರಪಂಚದಲ್ಲಿ ನಿಲ್ಲಬೇಕು! ಲೋಕ ಸದಾ ಕಾಲ ತನ್ನ ನೆನಪನ್ನು ಮಾಡುತ್ತಿರಬೇಕು! ತಾನೂ ಈ ಸುಂದರವಾದ ಲೋಕದಲ್ಲಿದ್ದೆನು, ಅಪ್ರತಿಮವಾದ ಧೈರ್ಯಶೌರ್ಯಾದಿಗಳಿಂದ ಕಾದಾಡಿ ಗೆದ್ದು ಬಂದ ವೀರನು ತಾನು, ಎಂದು ಪ್ರಮಾಣಪೂರ್ವಕವಾಗಿ ಎಲ್ಲರಿಗೆ ತಿಳಿಸಬೇಕು! ಇದಕ್ಕಾಗಿ ಲೋಕದ ಚರಿತ್ರಾವಳಿಯಲ್ಲಿ ತನ್ನ ಹೆಸರನ್ನು ಬಲವತ್ತರವಾಗಿ ಸುವರ್ಣಾಕ್ಷರಗಳಿಂದ ಎಳೆಯಬೇಕು!

ಇದಕ್ಕಾಗಿ ಹಲವು ಹಂಬಲು ಹವಣಿಕೆ.....

ಗಭೀರವಾದ ರಾತ್ರಿ. ಈ ಜೀವಿಯು ಕೃಶವಾದ ಶರೀರ ಹಾಸಿಗೆಯಲ್ಲಿ ಬಿದ್ದುಕೊಂಡಿದೆ. ಸಾವು ಹೊಂಚುಹಾಕಿ ಹತ್ತಿರವೇ ನಿಂತಿದೆ. ಈ ಜೀವಿಯ ಅತ್ಯಾಶ್ಚರ್ಯಕರವಾದ ಈ ನಾಟಕ ಮುಗಿಯುತ್ತ ಬಂತು. ಜೀವ ಇನ್ನೂ ಹೋರಾಡುತ್ತಿದೆ.— ಆದರೆ ಅದರ ಸಮರ ಈಗ ಸಾವಿನ ಕೂಡೆ....

ತನ್ನ ಅಂತ್ಯಕಾಲದಲ್ಲಿಯಾದರೂ ಈ ಜೀವಿಗೆ ಜೀವನದ ಮರ್ಮ ತಿಳಿದು ಬಂತೇ? ಬಗೆಹರಿಯದ ಜೀವನದ ಸಮಸ್ಯೆ ಬಗೆಹರಿಯಿತೇ? ಸಾವೆಂದರೇನು, ಸಾವಿನ ಆಚೆ ಇರುವುದೇನು ಎಂಬುದರ ತಿಳಿವಳಿಕೆಯಾಯಿತೇ? ಹುಟ್ಟು, ಸಾವು ಎಂಬುದು ತಮ್ಮದೇ ತದುದ್ದಿಷ್ಟವಾದ ವ್ಯಾವಸಾಯಿಕ ಕ್ಷೇತ್ರಗಳು ಎಂದು ಲೋಕಕ್ಕೆಲ್ಲ ಪ್ರಸಿದ್ಧಿಮಾಡುವ ಮತ, ಧರ್ಮ, ತತ್ವ, ಜ್ಞಾನಗಳು ಈ ಅರ್ಥ ಪುಷ್ಟವಾದ ಸಮಯದಲ್ಲಿಯಾದರೂ ಅವನಿಗೆ ಬೇಕಾದ ಶಾಂತಿ, ಸಹನೆಗಳನ್ನು ಕೊಡಲು ಶಕ್ತವಾದುವೇ?— ಅಥವಾ, ಇವೆಲ್ಲವನ್ನೂ ಮೀರಿದ ಬೇರೊಂದು ಅಪಾರವಾದ ದಿವ್ಯಶಕ್ತಿಯೇ ಬಂದು ಅವನನ್ನು ಈ ಪರಮ ಪವಿತ್ರವಾದ ಪಲ್ಲಟಕ್ಕೆ ಸಿದ್ಧಪಡಿಸಿರುವುದೇ?— ಯಾರು ಬಲ್ಲರು?....

ಸಾವಿನ ಹಿಡಿತ ಬಲವಾಯಿತು. ಒಂದು ದೀರ್ಘ ನಿಟ್ಟುಸಿರು. ಆಮೇಲೆ ನಿಶ್ಶಬ್ದ. ಯಾತ್ರಿಕನ ಯಾತ್ರೆ ಮುಗಿಯಿತು. ಗಾಳಿಯಂತೆ ಬಂದಿತ್ತು ಜೀವ, ನೀರಿನಂತೆ ಹರಿದುಹೋಯಿತು.

ಅಂತ್ಯ....ಶಾಂತಿ.... ಪರಮ ಶಾಂತಿ.

ಸಾವು ಗೆದ್ದಿತು.

## ಸಾವು ಗೆದ್ದಿತೇ?

ಅದೇ ಸಮಯ. ಬೇರೆ ಯಾವುದೋ ಒಂದು ಕಡೆ.

ಶೀತಲವಾದ ಮಂದಮಾರುತ ಬೀಸುತ್ತಲಿದೆ. ಹೂಗಳ ಸುಮಧುರ ವಾಸನೆ ಎಲ್ಲೆಲ್ಲಿಯೂ ಹರಡಿಕೊಂಡಿದೆ. ಜೀವನದ ಆನಂದದಿಂದ ತುಂಬಿ ತುಳುಕುತ್ತಿರುವ ಯುವಕ. ಸುಮಕೋಮಲವಾದ ಶರೀರದಿಂದ ಹೊಳೆಯುತ್ತಿರುವ ಯುವತಿ. ಅವರಿಬ್ಬರ ಶುಭ್ರವಾದ ನಯನಗಳೂ ಮಿಲನವಾಗಿವೆ. ಹೃದಯಗಳು ರಭಸದಿಂದ ಹೊಡೆಯುತ್ತಿವೆ. ಶ್ವಾಸಗಳು ಬಿಗಿಬಿಗಿಯಾಗಿ ಬರುತ್ತವೆ. ಮನೋರಂಜಕವಾದ ವೇದನೆಯೊಂದು ಅವರಿಬ್ಬರನ್ನೂ ಆವರಿಸಿದೆ. ಅರ್ಥಪುಷ್ಟವಾದ ವಾತಾವರಣ. ಅತಿಶಯವಾದ ಪ್ರೇಮದ ನೋವು....

ಯುವಕ ಮೆಲ್ಲನೆ ಯುವತಿಯ ಕೈಯನ್ನು ಹಿಡಿಯುತ್ತಾನೆ. ಯುವತಿಯ ಕೋಮಲವಾದ ಬೆರಳುಗಳು ಸಲಿಗೆಯಿಂದಲೂ ಅರ್ಥ ಸಂಜ್ಞೆಯಿಂದಲೂ ಅವನ ಬೆರಳುಗಳನ್ನು ಮುಚ್ಚುತ್ತವೆ. ಸೃಷ್ಟಿ ತನ್ನ ಅಮರವಾದ ಗಾನವನ್ನು ಹೊರ ಸೂಸುತ್ತಿದೆ......

ಜೀವನ ಗೆದ್ದಿತು.

ಪ. ರಮಾನಂದ

# ಉಪನಿಷತ್ತುಗಳ ಹಿರಿಮೆ

I

ನಮ್ಮ ಬಾಳಿನ ಸದುಪಯೋಗವು ತತ್ತ್ವಹಿತ ಪುರುಷಾರ್ಥಗಳ ನಿಷ್ಕರ್ಷೆಯಿಂದ ಮಾತ್ರ ಸಾಧ್ಯ. ಆ ನಿರ್ಣಯಗಳನ್ನು ಪ್ರಕಾಶಪಡಿಸುವ ಗ್ರಂಥಗಳಲ್ಲಿ ಪರಮ ಪ್ರಾಚೀನವೂ ಪವಿತ್ರವೂ ಆದುವು ವೇದಗಳು. ಅವುಗಳಲ್ಲಿ ಪೂರ್ವಭಾಗ ಮತ್ತು ಉತ್ತರಭಾಗ ಎಂದು ಎರಡು ಭಾಗಗಳು ಏರ್ಪಟ್ಟಿವೆ. ಉಪನಿಷತ್ತುಗಳೆಂದು ಪ್ರಸಿದ್ಧವಾಗಿರುವ ಗ್ರಂಥಗಳು ಉತ್ತರಭಾಗಕ್ಕೆ ಸೇರಿದುವು. ಅವುಗಳಿಗೆ ವೇದಾಂತ, ಅಂದರೆ ವೇದದ ಕೊನೆಯ ಭಾಗ ಎಂದೂ ಹೆಸರಾಗಿದೆ. ಕೇವಲ ಪೂರ್ವಕಾಂಡದ ಅನಂತರ ಉಪನಿಷದ್ಗ್ರಂಥಗಳು ಅಧೀತವಾಗಿವೆ ಎಂಬ ಕಾರಣದಿಂದ ಅವುಗಳಿಗೆ ವೇದಾಂತವೆಂಬದಾಗಿ ಹೆಸರಾಯಿತೆಂದು ಭಾವಿಸುವುದು ಸರಿಯಾಗುವುದಿಲ್ಲ. ಮಹತ್ತರವಾದ ಕಾರಣಗಳಿಂದ ಆ ರೀತಿ ನಾಮನಿರ್ದೇಶವಾಗಿರಬೇಕು. ಆ ಕಾರಣಗಳಿಂದಲೇ ಉಪನಿಷತ್ತುಗಳಿಗೆ ಅಸಾಧಾರಣವಾದ ಪ್ರಾಶಸ್ತ್ಯವೂ ಶಿಷ್ಟಪರಿಗ್ರಹವೂ ಏರ್ಪಟ್ಟಿದೆ.

ಪೂರ್ವಕಾಂಡದಲ್ಲಿ ಮಂತ್ರಗಳು ಮತ್ತು ಬ್ರಾಹ್ಮಣಗಳು ಎಂದು ಎರಡು ಭಾಗಗಳು ಇವೆ. ದೇವತೆಗಳ ಸ್ತೋತ್ರ ರೂಪವಾದ ಮಂತ್ರಗಳಲ್ಲಿ ಕಾವ್ಯಜ್ಯೋತಿ ವಿಶೇಷವಾಗಿ ಬೆಳಗುತ್ತಿದ್ದರೂ, ಮೊದಲು ಮೊದಲು ಆ ಜ್ಯೋತಿಯಿಂದ ಜನರು ಮೋಹದ ಕತ್ತಲೆಯನ್ನು ನಿವಾರಿಸಲಿಲ್ಲ. ಬ್ರಾಹ್ಮಣಗಳಿಂದ ಪ್ರಧಾನವಾಗಿ ಯಾಗಗಳು ಸ್ಥಿರಪಟ್ಟಿದ್ದರಿಂದ, ಮಂತ್ರಗಳನ್ನು ಯಾಗಾಂಗವಾಗಿ ಋಷಿಗಳು ಬಳಸುತ್ತಿದ್ದಂತೆ ಕಂಡುಬರುತ್ತದೆ. ಅಗ್ನಿ, ಉಷಸ್ಸು, ಆದಿತ್ಯ ಮುಂತಾದುವುಗಳ ಶಕ್ತಿದೀಪ್ತಿಗಳು ಋಷಿಗಳ ಮನಸ್ಸನ್ನು ಆಕರ್ಷಿಸಿ ಅವರಲ್ಲಿ ವಿಸ್ಮಯವನ್ನೂ ಆನಂದವನ್ನೂ ತುಂಬಿದುವು. ಅದರ ಪರಿಣಾಮವಾಗಿ ಅವರಿಗೆ ತದಭಿಮಾನಿ ದೇವತೆಗಳಲ್ಲಿ ಭಕ್ತಿ ವಿಶ್ವಾಸಗಳುಂಟಾದುವು. ಆ ದೇವತೆಗಳ ಅನುಗ್ರಹದಿಂದ ಋಷಿಗಳು ತಮ್ಮ ಇಷ್ಟಾರ್ಥಗಳನ್ನು ಹೊಂದುತ್ತಿದ್ದರು.

ಈ ಜನ್ಮದಲ್ಲಿ ನಮಗೆ ದೊರೆಯಬಹುದಾದ ಶಾರೀರ ಸೌಖ್ಯವೇ ಪುರುಷಾರ್ಥವೆಂದು ಮೊದಲು ನಮಗೆ ತೋರುತ್ತದೆ. ಅರ್ಥ ಕಾಮಗಳಷ್ಟು ಪ್ರತ್ಯಕ್ಷವೂ ಸನ್ನಿಹಿತವೂ ಆದ ಬೇರೊಂದು ಪುರುಷಾರ್ಥವಿಲ್ಲ. ನಮ್ಮ ಇಷ್ಟಾನುಸಾರವಾಗಿ ಸುಖವನ್ನು ಸಾಧಿಸಲು, ಕೇವಲ ಸ್ವಪ್ರಯತ್ನದಿಂದ 'ಸಿದ್ಧಿರ್ಭವತಿ ವಾ ನೇತಿ, ಸಂಶಯ' ಉಂಟಾಗುತ್ತದೆ. ಇತರ ವಿಧವಾದ ಯಾವ ಸಹಾಯವೂ ಇಲ್ಲದೆ ಕೇವಲ ನಮ್ಮ ಯತ್ನದಿಂದಲೇ ಧ್ಯೇಯವನ್ನು ಸಾಧಿಸುತ್ತೇವೆ ಎನ್ನುವುದು ಸಾಹಸದ ಮಾತು. ಆದಕಾರಣ ಅತಿಮಾನುಷರಾದ ದೇವತೆಗಳ ಪ್ರೀತಿ ಸಹಾಯಗಳಿಂದ ಋಷಿಗಳು ಅಡಚಣೆಗಳನ್ನು ಒಕ್ಕಡೆಗೊತ್ತಿ ತಮ್ಮ ಅಭೀಷ್ಟಗಳನ್ನು ಸಂಪಾದಿಸುತ್ತಿದ್ದರು. 'ಚಿತ್ರಯಾ ಯಜೇತ ಪಶುಕಾಮಃ', 'ದಧ್ನಾ ಇಂದ್ರಿಯಕಾಮಸ್ಯ ಜುಹುಯಾತ್', 'ಶ್ಯೇನೇನಾಭಿಚರನ್ ಯಜೇತ' ಎಂಬೀ ವಾಕ್ಯಗಳಿಂದ ದೇವತಾರ್ಚನ

ರೂಪವಾದ ಯಾಗಗಳನ್ನು ಮಾಡಿದರೆ, ಜನರ ಆಶೋತ್ತರಗಳು ನಿಜವಾಗಿಯೂ ಕೈಗೂಡುವುವೆಂಬ ವಿಶ್ವಾಸ ಏರ್ಪಡುತ್ತದೆ. ಶಾಸ್ತ್ರೋಕ್ತವಾದ ರೀತಿಯಲ್ಲಿ ಯಾಗ ಮಾಡಿದರೆ ಮಾತ್ರ ಫಲಪ್ರಾಪ್ತಿ. ಇಲ್ಲದಿದ್ದರೆ, 'ಅನ್ಯಥಾ ಕೃತಂ ಅಕೃತಂ,—' ಪ್ರಯತ್ನವೆಲ್ಲ ವ್ಯರ್ಥವಾಗುತ್ತದೆ. ಆದ್ದರಿಂದ ಫಲಸಾಧನ ಕರ್ಮದಲ್ಲಿ ಪೂರ್ಣ ವಿಶ್ವಾಸವಿಟ್ಟು, ನಿಯಮಗಳಿಗೆ ಅಧೀನರಾಗಿ, ತಾತ್ಕಾಲಿಕವಾದ ಸುಖಾನುಭವದಲ್ಲಿ ಮನಸ್ಸನ್ನು ಬಿಡದೆ, ವಿಷಯಾಕಾಂಕ್ಷೆಯನ್ನು ಪ್ರತಿಭಟಿಸಿ ಜಯಿಸುವ ಸಂಯಮವನ್ನು ಯಾಗಾನುಷ್ಠಾನದಲ್ಲಿ ಅಭಿಲಾಷೆಯುಳ್ಳವರೆಲ್ಲರೂ ತೋರ್ಪಡಿಸಬೇಕು. ಆ ಅಭಿನಿವೇಶವೇ ಇದ್ದರೆ, ಇಹಲೋಕ ಸುಖಗಳಿಗಿಂತ ಅಧಿಕವೂ ಶಾಶ್ವತವೂ ಆದ ಪಾರಲೌಕಿಕ ಸುಖಗಳನ್ನು ಅನುಭವಿಸಬೇಕೆಂಬ ಆಸೆಯು ಸಹಜವಾಗಿ ಜನರಲ್ಲಿ ಉಂಟಾಗುತ್ತದೆ. ಆ ರೀತಿಯ ಪರಲೋಕ ಭೋಗವು ವಿಹಿತಕರ್ಮ ಪರರಿಗೆ ದೊರೆಯುತ್ತದೆಂದು 'ಜ್ಯೋತಿಷ್ಟೋಮೇನ ಸ್ವರ್ಗಕಾಮೋ ಯಜೇತ', ಇತ್ಯಾದಿ ವಾಕ್ಯಗಳು ಘೋಷಿಸುತ್ತವೆ. ಅಂಥ ಉಪದೇಶಗಳನ್ನು ನಂಬಿ ಯಾಗ ಮಾಡಿದವರಲ್ಲಿ ಒಂದು ವೈಶಿಷ್ಟ್ಯವು ಕಂಡುಬರುತ್ತದೆ. ಆತ್ಮನು ಸ್ಥಿರ ಪದಾರ್ಥ ಎಂಬ ತತ್ತ್ವಜ್ಞಾನ; ಚ ತು ತಪ್ಪದೆ ಶ್ರದ್ಧೆಯಿಂದ ಮಾಡಬೇಕಾದ ವಿಹಿತಕರ್ಮಗಳೇ ಫಲಸಾಧನವೆಂಬ ಹಿತಜ್ಞಾನ; ಇಹಲೋಕ ಸುಖಕ್ಕಿಂತ ಪರಲೋಕದ ಸುಖ ಉತ್ಕೃಷ್ಟ' ಎಂಬ ಪುರುಷಾರ್ಥ ಜ್ಞಾನ—ಈ ಮೂರು ರೀತಿಯ ಜ್ಞಾನ ಕರ್ಮತರ ವೈಲಕ್ಷಣ್ಯವನ್ನು ತೋರ್ಪಡಿಸುತ್ತದೆ.

ಮೇಲೆ ವಿವರಿಸಿದ ಸುಖಕ್ಕಿಂತಲೂ ಹಿರಿದಾದ ಆನಂದವುಂಟೆಂಬುದು ವೇದಾಂತದಲ್ಲಿ ವಿಶದವಾಗಿ ತೋರುತ್ತದೆ. ಅನುಭವದಿಂದಾಗಲಿ ವಿಮರ್ಶೆಯಿಂದಾಗಲಿ ಆಮುಷ್ಮಿಕಸುಖವೂ ಇಹಲೋಕದ ಸುಖದಂತೆ ಭಂಗುರವಾದದ್ದೆಂದು ತೋರಿ, ಅದರಲ್ಲಿ ಜುಗುಪ್ಸೆ ಹುಟ್ಟುತ್ತದೆ. 'ಕ್ಷೀಣೇ ಪುಣ್ಯೇ ಮರ್ತ್ಯಲೋಕಂ ವಿಶಂತಿ', 'ತದ್ಯಥೇಹ ಕರ್ಮಚಿತೋ ಲೋಕಃ ಕ್ಷೀಯತೇ, ಏವಮೇವಾಮುತ್ರ ಪುಣ್ಯಚಿತೋ ಲೋಕಃ ಕ್ಷೀಯತೇ'. ಆಮುಷ್ಮಿಕ ಸುಖವನ್ನು ನಿತ್ಯ ಮತ್ತು ಅನಂತ ಎನ್ನುವುದು ಕೇವಲ ಔಪಚಾರಿಕವಾದ್ದರಿಂದ, ಆಸೆಯು ಆ ಗುರಿಯನ್ನು ಬಿಟ್ಟು ನಿಜವಾಗಿ ಅನಂತವೂ ಸ್ಥಿರವೂ ಆದ ಸುಖವನ್ನು ಅನುಭವಿಸಬೇಕೆಂದು ತವಕಪಡುತ್ತದೆ. ಅಂಥ ಸುಖದ ಸ್ವರೂಪ ಮತ್ತು ಅದನ್ನು ಹೊಂದುವ ಬಗೆ—ಇವುಗಳು ವೇದಾಂತದಲ್ಲಿ ವ್ಯಕ್ತವಾಗಿವೆ.

ದೇವತೆಗಳ ವಿಚಾರದಲ್ಲಿಯೂ ಅಭಿಪ್ರಾಯವು ಬದಲಾಯಿಸಿದೆ. ಉದಾಸೀನರಾದ ದೇವತೆಗಳಿಗೆ ಪೂಜೆಯನ್ನು ಸಲ್ಲಿಸಿ ಸೋಮ ಮುಂತಾದ ಅವರ ಆಹಾರಗಳನ್ನು ಅರ್ಪಿಸಿದರೆ, ಅವರು ತೃಪ್ತರಾಗಿ, ಶಕ್ತರಾಗಿ, ನಮ್ಮಲ್ಲಿ ಪ್ರೀತರಾಗಿ ಸಹಾಯವನ್ನು ಮಾಡುತ್ತಾರೆ. ಇಂಥ ದೇವತೆಗಳ ಸಂಖ್ಯೆ ಅನಂತ. ಮೂವತ್ತು ಮೂರುಕೋಟಿ ದೇವತೆಗಳೆಂದರೆ, ಭಾರತ ಭೂಮಿಯಲ್ಲಿ ಜನಗಣನೆಯೂ ದೇವತಾ ಗಣನೆಯೂ ಸರಿತೂಗುವಂತಿದೆ.

ನಮ್ಮಂತೆಯೇ ದೇವತೆಗಳೂ ಆಹಾರ ಸೇವನೆಯಿಂದ ತೃಪ್ತರಾಗುತ್ತಾರೆ. ನಮಗೂ ಅವರಿಗೂ ವಾಸ್ತವವಾದ ಸಂಬಂಧವೇನೂ ಇಲ್ಲ. ನಮ್ಮ ಉಪಹಾರಕ್ಕೆ

ಪ್ರತ್ಯುಪಕಾರ ಮಾಡುತ್ತಾರೆ. ಅಷ್ಟೇ ಅಲ್ಲದೆ ಎಲ್ಲ ಫಲವನ್ನೂ ಒಂದೇ ದೇವತೆ ಕರುಣಿಸುವಂತಿಲ್ಲ. ಈ ಸಂದರ್ಭಗಳನ್ನೆಲ್ಲ ವಿಮರ್ಶೆ ಮಾಡಿದರೆ, ಆ ದೇವತೆಗಳೆಲ್ಲರಿಗೂ ಒಡೆಯನಾಗಿ, ಸರ್ವಫಲಪ್ರದನಾಗಿ, ಅವಾಪ್ತ ಸಮಸ್ತ ಕಾಮನಾಗಿ, ಸರ್ವಮಂಗಳ ಗುಣಾಕರನಾದ ಸರ್ವೇಶ್ವರನೊಬ್ಬನಿದ್ದಿರಬೇಕು. ಉಳಿದ ದೇವತೆಗಳೆಲ್ಲ ಅವನ ಅಂಶಭೂತರೋ, ಅಧೀನರೋ ಆಗಿರಬಹುದು. ಆ ಸರ್ವೇಶ್ವರನೂ ದೇವತೆಗಳ ಮೂಲಕವಾಗಿ ರಕ್ಷ್ಯಭೂತರಾದ ಜನರ ಮನೋರಥವನ್ನು ನೆರವೇರಿಸುತ್ತಾನೆ ಎಂಬುದಾಗಿ ದೇವತಾಪ್ರವೃತ್ತ ದೃಷ್ಟಿಯು ವೇದಾಂತದಲ್ಲಿ ಕಂಡುಬರುತ್ತದೆ.

ಹಿತದ ವಿಚಾರದಲ್ಲಿಯೂ ನಾವು ಮೇಲುಮೆಟ್ಟಲನ್ನು ಕಾಣಬಹುದು. ದೇವತೆ ಅಪೂರ್ಣವಾದ್ದರಿಂದ ನಮ್ಮಿಂದ ಹವಿಸ್ಸನ್ನು ಅಪೇಕ್ಷಿಸುತ್ತದೆ. ಅದು ಪೂರ್ಣವಾಗಿದ್ದಿದ್ದರೆ ಉಪಹಾರ ಆವಶ್ಯಕವಾಗಿರಲಿಲ್ಲ. ಹೊಟ್ಟೆ ತುಂಬಿದವನಿಗೆ ಹಸಿವೆಲ್ಲಿಯದು? ಸರ್ವರಕ್ಷಕನೂ, ಪರಿಪೂರ್ಣನೂ, ಸರ್ವಸ್ವಾಮಿಯೂ ಆದ ದೇವ ತೋತ್ತಮನಲ್ಲಿ ನಾವು ಯಾಗ ಸಲ್ಲಿಸುವ ರೀತಿಯೇ ಬೇರೆ. ನಾವು ಆಚರಿಸುವ ಕರ್ಮ ನಮ್ಮ ತ್ಯಾಗಶೀಲವನ್ನು ತೋರಿಸುತ್ತದೆ; ದೇವತೆಯ ಪ್ರತಿಗ್ರಹಶೀಲವನ್ನಲ್ಲ. ಕರ್ಮದಿಂದ ಮಮತಾಭಿಮಾನವು ಹೋಗಿ ಮನಸ್ಸು ನಿಷ್ಕಲ್ಮಷವಾಗುತ್ತದೆ. ಆಗ ಭಕ್ತಿಮಯವಾದ ಜ್ಞಾನದಿಂದ ಭಗವಂತನ ಸಾಕ್ಷಾತ್ಕಾರಮಾಡಿ, ಪ್ರಕೃತಿ ಸಾಯುಜ್ಯದಿಂದ ಉಂಟಾದ ದುಃಖಪರಂಪರೆಗಳನ್ನಳಿದು, ಪರಮಾತ್ಮನ ಸಾಯುಜ್ಯದಿಂದುಂಟಾದ ಅಪರಿಮಿತಾನಂದವನ್ನು ನಿತ್ಯವಾಗಿ ಅನುಭವಿಸಬಹುದೆಂಬ ವಿಷಯವನ್ನು 'ಸಾಯುಜ್ಯಮವಾಪ್ನೋತಿ', 'ಬ್ರಹ್ಮವೇದ ಬ್ರಹ್ಮೈವ ಭವತಿ', 'ಲಬ್ಧ್ವಾ ಆನಂದೀಭವತಿ', ಎಂಬ ಶ್ರುತಿಗಳು ತೋರಿಸಿಕೊಡುತ್ತವೆ.

ಪೂರ್ವಕಾಂಡದಲ್ಲಿ ಪ್ರತಿಪಾದಿತವಾದ ತತ್ತ್ವಹಿತ ಪುರುಷಾರ್ಥಗಳು ಮೊದಲು ನೋಟಕ್ಕೆ ಸಿಕ್ಕಿದ ವಸ್ತುಗಳೆಂದೂ, ಒಳಹೊಕ್ಕು ನೋಡಿದರೆ, ಉಪನಿಷತ್ತುಗಳಲ್ಲಿ ಹೇಳಿರುವ 'ಪುರುಷ'ನೇ ಸರ್ವೇಶ್ವರನೆಂದೂ, ಜ್ಞಾನದಿಂದಲೇ ಮೋಕ್ಷಪ್ರಾಪ್ತಿಯೆಂದೂ, ಸಂದೇಹಕ್ಕೆ ಎಡೆಗೊಡದ ನಿರ್ಣಯ ತೋರುವುದರಿಂದ ಉತ್ತರಭಾಗಕ್ಕೆ ವೇದಾರ್ಥದ ಅಂತವೆಂದೂ, ರಹಸ್ಯ ಪ್ರಕಾಶಕವಾದ ಉಪನಿಷತ್ತುಗಳೆಂದೂ ಹೆಸರು ಬಂದಿರುತ್ತದೆ.

II

ಉಪನಿಷತ್ತುಗಳ ಹಿರಿಮೆಯು ಮತ್ತೊಂದು ದೃಷ್ಟಿಯಿಂದ ವಿಶೇಷವಾಗಿ ತೋರುತ್ತದೆ. ಈ ದೃಷ್ಟಿಯಿಂದ ನೋಡಿದರೆ ಎರಡು ಕಾಂಡಗಳಿಗೂ ಹೆಚ್ಚುಕಡಮೆ ಹೊಂದಿಕೆಯೇ ಇಲ್ಲವೆನ್ನಬೇಕಾಗುತ್ತದೆ. ಈ ಸಂದರ್ಭದಲ್ಲಿ ಪೂರ್ವಕಾಂಡವನ್ನು ಕರ್ಮಕಾಂಡವೆಂದೂ, ಉತ್ತರಕಾಂಡವನ್ನು ಜ್ಞಾನಕಾಂಡವೆಂದೂ ವ್ಯವಹರಿಸುವುದು ವಾಡಿಕೆಯಾಗಿದೆ. ಫಲಾಪೇಕ್ಷೆಯಿಂದ ಹಲಕೆಲವು ಕರ್ಮಗಳನ್ನು ಆಚರಿಸಿ, ಕಾರ್ಯಸಿದ್ಧಿಗಾಗಿ ರೋಗಿಯು ವೈದ್ಯನನ್ನು ಬಯಸುವಂತೆ, ದೇವತೆಗಳನ್ನು ಪೂಜಿಸುವ ಕರ್ಮಠನಿಗೆ ದೇವತೆಗಳು ಕಾರ್ಯಾಂತೇ ಅಪ್ರಯೋಜಕರಾಗುತ್ತಾರೆ. ಆದರೆ ವಿದ್ವಾಂಸನು ಜ್ಞಾನಕ್ಕೆ ಬೆಲೆಯನ್ನು ಕಟ್ಟುತ್ತಾನೆ. ಜ್ಞಾನದ ತಳಹದಿಯ

ಮೇಲೆ ನಿಂತು ವಸ್ತು ಸ್ವರೂಪವನ್ನು ಕೂಲಂಕಷವಾಗಿ ಪರೀಕ್ಷಿಸುವುದರ ಮೂಲಕ ಉಂಟಾಗುವ ಸಮೃದ್ಧಿಯು ವರ್ಣನಾತೀತವಾದದ್ದು. ಆದ್ದರಿಂದ ಉಪನಿಷತ್ತು ಗಳಲ್ಲಿ ಕಂಡುಬರುವ ಸಿದ್ಧಾಂತವನ್ನು ದಾರ್ಶನಿಕ ಸಿದ್ಧಾಂತವೆನ್ನಬೇಕು. ಬುಭುಕ್ಷುವು ಹಾಕಿರುವ ವಿಶ್ವಾಸಪೀಠದಲ್ಲಿ ಕುಳಿತು ದೇವತೆಗಳು ಅವನ ಅಂಧ ಶ್ರದ್ಧೆಗೆ ಮೆಚ್ಚಿ ಅವನಿಗೆ ಫಲವನ್ನು ಮಾತ್ರ ಕರುಣಿಸಿದರೆ, ಮುಮುಕ್ಷುವು ರಚಿಸಿದ ಜ್ಞಾನಸಿಂಹಾಸನವನ್ನು ಮಂಡಿಸಿ ಆತ್ಮನು ಅವನಿಗೆ ಸರ್ವವಿಧದಲ್ಲಿಯೂ ನೇರವಾಗಿ ತನ್ನ ಭಕ್ತನಿಗೆ ವಿಶ್ವದ ರೂಪವನ್ನೇ ತೋರಿಸಿ ಅಮೋಘವಾದ ಜ್ಞಾನಾನಂದವನ್ನು ಉಂಟುಮಾಡುತ್ತಾನೆ. ಆತ್ಮನ ನಿತ್ಯತೆ, ದೇವತೆಗಳಲ್ಲಿ ನಂಬಿಕೆ ಮತ್ತು ಕರ್ಮದಲ್ಲಿ ಶ್ರದ್ಧೆ — ಇವು ಕರ್ಮಕಾಂಡದ ಐಶ್ವರ್ಯವಾದರೆ, ವಿಶುದ್ಧ ಜ್ಞಾನದಲ್ಲಿ ಶ್ರದ್ಧೆ, ವಿಶ್ವದ ರಹಸ್ಯದಲ್ಲಿ ಆಸಕ್ತಿ, ನಶ್ವರವಾದ ಭೋಗಗಳಲ್ಲಿ ಅನಾದರ — ಇವುಗಳು ಉಪನಿಷತ್ತುಗಳ ಸಂಪತ್ತು. ಈ ರೀತಿ ಎರಡು ಭಾಗಗಳಿಗೂ ಮಹತ್ತಾದ ಅಂತರ ದೇರ್ಪಟ್ಟಿದೆ.

ಇಂಥ ದೃಷ್ಟಿಗೆ ಬಹಳ ಉಪಯೋಗಕರವಾದ ಉಪನಿಷತ್ತುಗಳಲ್ಲಿ ತತ್ತ್ವ ಪ್ರತಿಪಾದಕ ಪದಗಳು ಮುಖ್ಯವಾಗಿ ಬ್ರಹ್ಮ ಮತ್ತು ಆತ್ಮಾ ಎಂಬುವು. ಬ್ರಹ್ಮ ಶಬ್ದಕ್ಕೆ ಸ್ತೋತ್ರವೆಂದೂ ದೊಡ್ಡದಾಗುವಿಕೆಯೆಂದೂ ಅರ್ಥವಿದೆ. ಸ್ತೋತ್ರ ರೂಪದಲ್ಲಿ ಹೊರಹೊಮ್ಮುವ ಶಬ್ದಕ್ಕೆ ಬ್ರಹ್ಮವೆಂದು ಅರ್ಥಮಾಡಿದ ಮೇಲೆ, ಕ್ರಮೇಣ ವಿಶ್ವದ ರೂಪವಾಗಿ ವಿಕಸಿಸುವ ವಸ್ತುವೂ ಬ್ರಹ್ಮವಾಗುತ್ತದೆ ಎಂದು ಅರ್ಥ ಹೇಳುವುದರಲ್ಲಿ ಬಾಧಕವಿಲ್ಲ. ಈ ರೀತಿ ಸಕಲ ಪ್ರಪಂಚಕ್ಕೂ ಉಪಾದಾನ ಕಾರಣವಾಗಿ ಎಲ್ಲವನ್ನೂ ಮೀರಿದ ಬೃಹತ್ಪದಾರ್ಥ ಬ್ರಹ್ಮವೆಂದಾಗುತ್ತದೆ. ಹಾಗೆಯೇ ಆತ್ಮಶಬ್ದವು ಪ್ರಾಣಸ್ವರೂಪವಾಗಿ ಸರ್ವಕ್ಕೂ ಸಾರಭೂತವೂ ಧಾರಕವೂ ಆಗಿರುವ ಅಂತಸ್ತತ್ತ್ವವನ್ನು ಸೂಚಿಸುತ್ತದೆ. ತತ್ತ್ವದ ಸಾರವು ಪ್ರಕೃತಿಗಿಂತ ಬೇರೆಯೆಂದೂ ಅದು ಚೈತನ್ಯಸ್ವರೂಪವೆಂದೂ ಎಲ್ಲಕ್ಕಿಂತಲೂ ಮುಖ್ಯವಾದು ದೆಂದೂ ಆತ್ಮಶಬ್ದ ಪ್ರಯೋಗದಿಂದ ಗೊತ್ತಾಗುತ್ತದೆ. ಆತ್ಮನ ಅಸ್ತಿತ್ವವು ಅಪರೋಕ್ಷವಾದುದು. ಅದನ್ನು ಅಪಲಪಿಸುವುದಕ್ಕೆ ಯಾವ ವಿಧದಲ್ಲಿಯೂ ಸಾಧ್ಯವಿಲ್ಲ. ಆದರೆ, ಆತ್ಮನು ಬೇರೆ, ಪ್ರಕೃತಿಯೂ ಸಹ ಬೇರೆಯಾದದ್ದು; ಪರಿಚ್ಛಿನ್ನ ಸ್ವರೂಪವೇ ಆತ್ಮನ ಸ್ವರೂಪ. ಆದ್ದರಿಂದ ದ್ವೈತವೇ ಉಳಿಯುತ್ತದೆ ಎಂಬುದಾಗಿ ಮನಸ್ಸಿಗೆ ವೇದ್ಯವಾಗುತ್ತದೆ. ಮನಸ್ಸಿನಲ್ಲಿ ಮಾತ್ರ ಅದ್ವೈತದ ಶಿಖರವನ್ನು ಮುಟ್ಟಬೇಕೆಂಬ ಆಕಾಂಕ್ಷೆ ಬಲವಾಗಿದೆ. ಬ್ರಹ್ಮಶಬ್ದದಿಂದ ಪ್ರಕೃತಿಯು ಬ್ರಹ್ಮೋಪಾದಾನಕವೆಂದು ಏರ್ಪಟ್ಟದ್ದರಿಂದ, ಬ್ರಹ್ಮನೂ ಆತ್ಮನೂ ಒಂದೇ ಆದರೆ ಅಪರಿಚ್ಛಿನ್ನ– ಅದ್ವೈತವು ಏರ್ಪಟ್ಟು, 'ದ್ವೈತಿನೋ ಅತಥ್ಯದರ್ಶಿನಃ' ಎಂಬ ನಿಂದೆಗೆ ನಾವು ಗುರಿಯಾಗುವುದಿಲ್ಲ. ಹಾಗೆಯೇ ಬ್ರಹ್ಮಶಬ್ದದಿಂದಲೂ ಏರ್ಪಡುವ ಕೆಲವು ನ್ಯೂನತೆಗಳನ್ನು ಆತ್ಮಶಬ್ದವು ಪರಿಹರಿಸುತ್ತದೆ. ಜಗತ್ಕಾರಣವಾಗಿದ್ದರೂ ಬ್ರಹ್ಮವು ಜಗತ್ತಿನಂತೆಯೇ ಅಚೇತನಮಯವಾಗಿರಬಹುದು ಎಂಬುದು ಒಂದು ಶಂಕೆ. ಆ ಬ್ರಹ್ಮದ ಅಸ್ತಿತ್ವವು ದೃಢನಿಶ್ಚಯ ರೂಪವಾಗಿ ತೋರದೆ, ಕರ್ಮಕಾಂಡದ ದೇವತೆಗಳಂತೆ ಸಂಭಾವಿತವಾದದ್ದೂ ಆಗಬಹುದು. ಈ ಎರಡು ದೋಷಗಳನ್ನೂ

ಆತ್ಮ ಶಬ್ದವು ನಿವಾರಣೆ ಮಾಡುವುದರಿಂದ, ಎರಡು ಶಬ್ದಗಳನ್ನೂ ಒಟ್ಟುಗೂಡಿಸಿ ಅರ್ಥಮಾಡಿದರೆ, ಸರ್ವಕಾರಣವಾದ ಬ್ರಹ್ಮವಸ್ತು ವಿಶ್ವವನ್ನೇ ಆವರಿಸಿ, ವಿಶ್ವವನ್ನು ಮೀರಿ ಚೈತನ್ಯ ಸ್ವರೂಪದಲ್ಲಿ ಅಪರಿಚ್ಛಿನ್ನವಾಗಿ ತೋರುತ್ತದೆ. ಈ ಅರ್ಥವನ್ನು 'ಸತ್ಯಂ ಜ್ಞಾನಮನಂತಂ ಬ್ರಹ್ಮ' ಎಂಬ ವಾಕ್ಯವು ಉಚಿತವಾಗಿಯೂ ಸಂಕ್ಷೇಪವಾಗಿಯೂ ವರ್ಣಿಸಿದೆ.

ಉದ್ದಾಲಕ ಮಹರ್ಷಿಯು ಶ್ವೇತಕೇತುವಿಗೆ ಮಾಡಿದ ಬ್ರಹ್ಮೋಪದೇಶವೂ ಈ ರೀತಿಯನ್ನೇ ಅನುಸರಿಸಿದೆ. ಮೊದಲು ಬ್ರಹ್ಮವನ್ನು ಸತ್ ಎಂದು ನಿರ್ದೇಶ ಮಾಡಿ, ಅದರಿಂದ ಸಕಲ ವಸ್ತುಗಳೂ ಉತ್ಪನ್ನವಾದುವೆಂದು ಉಪದೇಶಮಾಡಿ, ಕೊನೆಗೆ 'ತತ್ತ್ವಮಸಿ ಶ್ವೇತಕೇತೋ' ಎಂದು ಶಿಷ್ಯನಾದ ಶ್ವೇತಕೇತುವಿನಲ್ಲಿ ಉಪಸಂಹಾರಮಾಡಿರುವುದು ಬಹಳ ವಿಚಕ್ಷಣವಾಗಿದೆ. ಆದ್ದರಿಂದಲೇ 'ತತ್ತ್ವಮಸಿ', 'ಅಹಂ ಬ್ರಹ್ಮಾಸ್ಮಿ', 'ಅಯಮಾತ್ಮಾ ಬ್ರಹ್ಮ' ಎಂಬ ಅದ್ವೈತ ವಾಕ್ಯಗಳಿಗೆ ಮಹಾವಾಕ್ಯಗಳೆಂಬ ಸನ್ಮಾನವೂ ದೊರೆಯಿತು.

ವಸ್ತುಸ್ವರೂಪವು ಹೀಗಿದ್ದರೆ ಭೋಗವೂ ತದನುರೂಪವಾಗಿಯೇ ಇರುತ್ತದೆ. 'ಬ್ರಹ್ಮವೇದ ಬ್ರಹ್ಮೈವ ಭವತಿ'. ಬ್ರಹ್ಮಾನುಭವಕ್ಕಿಂತ ಮಿಗಿಲಾದುದು ಯಾವುದಿದೆ? ಬ್ರಹ್ಮಾನುಭವವೂ ಜ್ಞಾನದಿಂದಲೇ ಏರ್ಪಡುತ್ತದೆ. 'ಬ್ರಹ್ಮವಿದಾಪ್ನೋತಿ ಪರಂ'. ಜ್ಞಾನಕ್ಕೆ ಸಹಕಾರಿಯಾದದ್ದು ತ್ಯಾಗ, ಅಂದರೆ ಫಲಸಂಗ ಪರಿತ್ಯಾಗ. ಅದನ್ನೇ ಸಂನ್ಯಾಸವೆಂದೂ ಹೇಳಲಾಗಿದೆ.

ಅಂದಮೇಲೆ ಇತರ ಚಿಂತೆಗಳನ್ನೂ ಪುರುಷಾರ್ಥಗಳನ್ನೂ ಲಕ್ಷಿಸದೆ ತತ್ತ್ವರಹಸ್ಯವನ್ನು ಕಂಡುಕೊಂಡು ಬ್ರಹ್ಮಾನುಭವ ಸುಖವನ್ನು ಪಡೆಯುವ ಅತ್ಯುತ್ತಮ ಯೋಗವನ್ನು ಉಪದೇಶಮಾಡಿದ ಉಪನಿಷತ್ತುಗಳು ಅತಿ ಮುಖ್ಯಾರ್ಥದಲ್ಲಿ ವೇದಾಂತವಾಗುತ್ತವೆ.

III

ದಾರ್ಶನಿಕರಲ್ಲಿ ಮತ್ತೂ ಒಂದು ಸಂಪ್ರದಾಯವುಂಟು. ಅದಕ್ಕೆ ಸಮನ್ವಯ ದೃಷ್ಟಿಯೆಂದು ಹೆಸರು. ಅನೇಕ ಕಡೆ ಲಭಿಸಿದ ರತ್ನಗಳು ವಸ್ತುತಃ ಅಮೋಘವಾದುವೇ. ಆದರೂ ಅವುಗಳನ್ನು ಬೇರೆ ಬೇರೆಯಾಗಿ ಇಡುವುದಕ್ಕಿಂತ ಒಟ್ಟುಗೂಡಿಸಿ, ಯುಕ್ತ ಹಾರವನ್ನು ಮಾಡಿದರೆ, ಪರಿಣಾಮವೇನೆಂದು ಹೇಳಬೇಕಾಗಿಲ್ಲ. ಉಪನಿಷತ್ತುಗಳು ಅನೇಕ. ಪ್ರತಿಯೊಂದು ಉಪನಿಷತ್ತಿನಲ್ಲಿಯೂ ಒಂದು ರಹಸ್ಯವು ಅಡಗಿದೆ. ಆ ರಹಸ್ಯಗಳನ್ನೆಲ್ಲ ಸರ್ವವೇದಾಂತಪ್ರತ್ಯಯ ನ್ಯಾಯದಿಂದ ಒಟ್ಟುಗೂಡಿಸಿದರೆ ಮಾತ್ರ ತತ್ತ್ವಸಮನ್ವಯವು ಸಾಧ್ಯ. ಅದರ ವೈಖರಿ ಸಹ ಗಮನಾರ್ಹವಾಗಿರುತ್ತದೆ.

ಸಮನ್ವಯದೃಷ್ಟಿಯಲ್ಲಿ ನಾವು ಗಮನಿಸಬೇಕಾದುದು ದೇವತಾದ್ವೈತಕ್ಕೂ ಬ್ರಹ್ಮಾದ್ವೈತಕ್ಕೂ ಇರುವ ಆಪಾತ ಭೇದ. ದೇವತಾದ್ವೈತದಲ್ಲಿ ದಾರ್ಶನಿಕ ದೃಷ್ಟಿಗೆ ಪ್ರಾಶಸ್ತ್ಯವೇ ಇಲ್ಲ. ಬ್ರಹ್ಮಾದ್ವೈತದಲ್ಲಿ ದೇವತೆಯ ವಿಚಾರವೇ ಬಂದಂತಿಲ್ಲ. ಆದರೆ ಈ ಎರಡು ದೃಷ್ಟಿಗಳೂ ಗಮನಾರ್ಹವಾದುವು. ಅವುಗಳು ಪರಸ್ಪರ ಹೊಂದಿಕೊಂಡರೆ, ನಿಜವಾಗಿಯೂ ತತ್ತ್ವದೃಷ್ಟಿ ವಿಶಾಲವೂ ವಿಶಿಷ್ಟವೂ ಆಗುತ್ತದೆ.

ಆದ್ದರಿಂದ, ಆತ್ಮ ಬ್ರಹ್ಮ ಶಬ್ದಗಳಿಗೆ ಸಾಮಾನಾಧಿಕರಣ್ಯವನ್ನು ಒಪ್ಪಿ ಅರ್ಥವನ್ನು ಸ್ಪಷ್ಟೀಕರಿಸಿದಂತೆ ದೇವತೆಗೂ ಬ್ರಹ್ಮಕ್ಕೂ ಅಭೇದವೇರ್ಪಟ್ಟರೆ, ಸದ್ಗ್ರಹದಿಂದ ಸಮಸ್ತ ಕ್ಷೋಭವೂ ಮಾಯವಾಗುತ್ತದೆ. ಸಮನ್ವಯ ಬೋಧಕವಾದ ವಾಕ್ಯಗಳು ಕೆಲವು ಈ ದೃಷ್ಟಿಗೆ ಮುಖ್ಯ ಕಾರಣ. 'ಏಷ ಸರ್ವಭೂತಾಂತರಾತ್ಮಾ ಅಪಹತಪಾಪ್ಮಾ ದಿವ್ಯೋ ದೇವ ಏಕೋ ನಾರಾಯಣಃ' ಎಂಬ ಘಟಕ ಶ್ರುತಿಯು ಆತ್ಮನನ್ನು ನಾರಾಯಣನೊಂದಿಗೆ ಏಕೀಕರಿಸಿದೆ. ಈ ಘಟಕ ವಾಕ್ಯದಿಂದ ಶರೀರಾತ್ಮಭಾವದಲ್ಲಿ ಸಮನ್ವಯವನ್ನು ಧಾರಾಳವಾಗಿ ಮಾಡಬಹುದೆಂದೂ, ಆ ಸಮನ್ವಯವೇ ಸಾಮಾನಾಧಿಕರಣ್ಯದ ಮುಖ್ಯಾರ್ಥವಾಗುತ್ತದೆಯೆಂದೂ ಏರ್ಪಡುತ್ತದೆ. ಘಟಕ ಶ್ರುತಿಗಳು ಪರಭಾಗವಾದರೆ ಮಾತ್ರ ಅಭೇದ ಶ್ರುತಿಗಳು ಮಹಾವಾಕ್ಯಗಳಾಗುತ್ತವೆ ಎಂದು ನಿರ್ಣಯಪಡಿಸುವುದು ಸಮನ್ವಯ ದೃಷ್ಟಿ. ಆದ್ದರಿಂದ ಸಮನ್ವಯ ದೃಷ್ಟಿಯಲ್ಲಿ ನಾರಾಯಣ ಪದಕ್ಕೆ ಪ್ರಾಶಸ್ತ್ಯ ಬಂದಿರುತ್ತದೆ. ಸಕಲ ಚೇತನಾಚೇತನಾತ್ಮಕವಾದ ನಾರಗಳಿಗೆ ಅಯನಂ, ಆಶ್ರಯವೆಂದು ಬ್ರಹ್ಮಶಬ್ದಾರ್ಥವನ್ನೂ, ಸಕಲ ಚೇತನಾಚೇತನ ವಸ್ತುಗಳೂ ಆಶ್ರಯ ಯಾವುದಕ್ಕೋ ಅದು ಎಂದು ಆತ್ಮಶಬ್ದಾರ್ಥವನ್ನೂ ನಾರಾಯಣ ಪದವು ಯೋಗದಿಂದ ಬೋಧಿಸುತ್ತದೆ. ರೂಢ್ಯಾ ದೇವತಾವಿಶೇಷವನ್ನೂ ಬೋಧಿಸುತ್ತದೆಯಾದ್ದರಿಂದ, ಸಮನ್ವಯ ದೃಷ್ಟಿಯಲ್ಲಿ ಕಂಡ ಬ್ರಹ್ಮದೇವತೆಗಳ ಅಭೇದವು ವೇದಗಳ ಕೊನೆಯ ಅರ್ಥ ಎಂದು ಏರ್ಪಡುತ್ತದೆ.

ಪರತತ್ತ್ವದ ಐಕ್ಯ ಏರ್ಪಟ್ಟಿದ್ದರಿಂದ ಸಾಧನದಲ್ಲಿಯೂ ಸಹ ಅಭೇದವುಂಟಾಯಿತು. ಮೋಕ್ಷಸಾಧನ ಜ್ಞಾನವು ಕೇವಲ ವಾಕ್ಯಾರ್ಥಜ್ಞಾನವಾಗದೆ ಉಪಾಸನ ರೂಪವನ್ನು ತಾಳುತ್ತದೆ. ಧ್ಯಾನ, ಉಪಾಸನ, ಜ್ಞಾನ, ಭಕ್ತಿ ಮುಂತಾದ ಪದಗಳನ್ನು ಪರ್ಯಾಯ ಪದಗಳನ್ನಾಗಿ ಉಪಯೋಗಿಸಿರುವುದು ಕಂಡುಬರುತ್ತದೆ. ಆದ್ದರಿಂದ "ಸ್ನೇಹಪೂರ್ವಂ ಅನುಧ್ಯಾನಂ ಭಕ್ತಿರಿತ್ಯಭಿಧೀಯತೇ" ಎಂದು ಹೇಳಿರುವಂತೆ ಪ್ರೀತಿ ಪೂರ್ವಕವಾದ ಜ್ಞಾನವನ್ನು ಅಥವಾ ಜ್ಞಾನಪೂರ್ವಕವಾದ ಪ್ರೀತಿಯನ್ನು ಭಕ್ತಿಯೆಂದು ನಿಷ್ಕರ್ಷಿಸಲಾಗಿದೆ. ಪ್ರೀತಿಪೂರ್ವಕ ಜ್ಞಾನದಿಂದ ಬ್ರಹ್ಮಸಾಕ್ಷಾತ್ಕಾರವನ್ನು ಮಾಡಿದರೆ ಸರ್ವ ಕರ್ಮಗಳೂ ನಾಶವಾಗುತ್ತವೆ. ಬ್ರಹ್ಮಸಾಕ್ಷಾತ್ಕಾರದಲ್ಲಿ ಗೋಚರವಾಗುವ ಅತ್ಯಂತ ಆದರವೇ ಭಕ್ತಿಯಲ್ಲಿ ಪ್ರೀತ್ಯಂಶ. ಅದಿದ್ದರೆ ಇತರ ವಸ್ತುಗಳಲ್ಲಿ ಅಭಿಲಾಷೆ ಹುಟ್ಟುವುದಿಲ್ಲ. ಭಕ್ತಿಯಿಂದ ಭಗವಂತನ ಪ್ರಸಾದ ಅಥವಾ ಅನುಗ್ರಹವುಂಟಾಗುತ್ತದೆ; ಅಂದರೆ ನಮ್ಮ ದುರಭಿಸಂಧಿ ಮರೆಯಾಗಿ ಬ್ರಹ್ಮದೃಷ್ಟಿಗೆ ಅನುಗುಣವಾದ ದೃಷ್ಟಿಯೇ ನಮಗೂ ಉಂಟಾಗುತ್ತದೆ. ಆ ದೃಷ್ಟಿಯೇ ಶುದ್ಧಸತ್ತ್ವರಾದ ಯತಿಗಳ ದೃಷ್ಟಿ. ಅವರಲ್ಲಿ ಮಾತ್ರ ಸರ್ವತ್ರ ಸಾಮ್ಯ ಬುದ್ಧಿ ಹುಟ್ಟುತ್ತದೆ. ಅಂಥವರಿಗೆ ಮಾತ್ರ 'ಆತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ.'

ಮೇಲೆ ಹೇಳಿರುವಂತೆ ನಾನಾ ದೇವತೆಗಳಲ್ಲಿ ವಿಶ್ವಾಸವನ್ನು ಬವಲಾಯಿಸಿ 'ಏಕೋ ದೇವಃ' ಎಂಬ ಭಾವನೆ ಮೂಡುವುದರಿಂದಲೂ, ಪ್ರಪಂಚಕ್ಕೆಲ್ಲ ಆಧಾರವಾಗಿ ಜಗನ್ಮಯವಾಗಿ ತೋರುವ ಬ್ರಹ್ಮಸ್ವರೂಪವು ವಿಶದೀಕೃತವಾದದ್ದರಿಂದಲೂ,

ಬ್ರಹ್ಮವೂ ಪುರುಷೋತ್ತಮನೂ ಬೇರೆಬೇರೆ ವಸ್ತುಗಳಲ್ಲ ಎಂಬ 'ವಿಶಿಷ್ಟ' ಅದ್ವೈತ ಭಾವನೆ ವ್ಯಕ್ತಪಡುವುದರಿಂದಲೂ, ಚರಮಾವಧಿಯಾದ ಜ್ಞಾನವನ್ನು ಬೋಧಿಸುವ ಗ್ರಂಥಗಳಿಗೆ ವೇದಾಂತವೆಂದು ಸ್ವರಸವಾಗಿ ಹೆಸರಾಯಿತು.

ವೇದಾಂತಗಳಲ್ಲಿ ಉಪದಿಷ್ಟವಾದುದು ಎಷ್ಟು ರಹಸ್ಯವಾದ ಅರ್ಥವೋ ಅದು ಅಷ್ಟೇ ಪ್ರಧಾನವಾದದ್ದೂ ಆಗಿದೆ. ಪ್ರತಿಯೊಂದು ಉಪನಿಷತ್ತಿನಲ್ಲಿಯೂ ಒಂದೊಂದು ಮುಖ್ಯ ರಹಸ್ಯವಡಗಿದೆ. ಆ ರಹಸ್ಯವನ್ನು ಹೇಳುವ ವಾಕ್ಯವೂ ಸಹ ಪುಟ್ಟದಾಗಿ, ಪುಷ್ಟವಾಗಿ, ರಚಿತವಾಗಿದೆ. 'ಇತ್ಯುಪನಿಷತ್', 'ತದಪ್ಯೇಷ ಶ್ಲೋಕೋ ಭವತಿ' ಎಂಬ ಉಪನಿಷದ್ವಾಕ್ಯಗಳಲ್ಲಿಯೇ ಉಪನಿಷತ್ತು, ಶ್ಲೋಕ ಎಂಬ ಪದಗಳಿಂದ ಅಂಥ ರಹಸ್ಯವು ಸೂಚಿತವಾಗಿದೆ. ಆದ್ದರಿಂದ ಮುಖ್ಯಾರ್ಥದಲ್ಲಿ ಉಪನಿಷತ್ತು ಗೂಢವೂ, ಅನರ್ಘವೂ ಆದ ರಹಸ್ಯ ಬೋಧಕ ವಾಕ್ಯವೆಂದಾಗುತ್ತದೆ. ರಹಸ್ಯದ ಹಿರಿಮೆಗನುಗುಣವಾಗಿ ತತ್ಪ್ರತಿಪಾದಕ ವಾಕ್ಯಗಳನ್ನು ಏಕಾಂತದಲ್ಲಿ, ವಿನಮ್ರತೆಯಿಂದ ಕಲಿಯಬೇಕೆಂದೂ ಸಹ ಉಪ–ನಿ–ಷದ್ ಎಂಬ ಪದದಿಂದ ಗೊತ್ತಾಗುತ್ತದೆ.

ಉಪನಿಷತ್ತುಗಳಲ್ಲಿರುವ ಇತರ ವಾಕ್ಯಗಳು ರಹಸ್ಯಾರ್ಥವನ್ನು ಬೋಧಿಸುವುದಕ್ಕೆ ಅಗತ್ಯವಾದ ಗುರೂಪದೇಶ, ತತ್ತ್ವಾನ್ವೇಷಣೆ, ಗುರುಶಿಷ್ಯ ಸಂವಾದ ಮುಂತಾದ ಸಂದರ್ಭಗಳನ್ನು ವ್ಯಕ್ತಪಡಿಸುತ್ತವೆ.

ಈ ಸಂದರ್ಭದಲ್ಲಿ ಅತಿ ಮುಖ್ಯವಾದ ಪ್ರಶ್ನೆ ಏಳುತ್ತದೆ. ಋಷಿಗಳು ನಮ್ಮಲ್ಲಿ ಕೃಪೆಮಾಡಿ ನಮಗೆ ರಹಸ್ಯವನ್ನು ತಿಳಿಸಿ ನಮ್ಮನ್ನು ಉದ್ಧಾರಮಾಡಿದ್ದಕ್ಕಾಗಿ ಅವರಿಗೆ ನಾವು ಚಿರ ಋಣಿಗಳು. ಶ್ರಮದಿಂದ ಗಳಿಸಿದ ಧನವನ್ನು ಜಾಗರೂಕತೆಯಿಂದ ಕಾಪಾಡಿಕೊಂಡು ಬಂದು ಪ್ರಾಪ್ತವಯಸ್ಕನಾದ ಮಗನಿಗೆ ತಂದೆಯು ಬಿಟ್ಟುಕೊಡುವಂತೆ ಋಷಿಗಳೂ ಉಪನಿಷದರ್ಥ ಸಂಚಯವನ್ನು ನಮಗೆ ಬಿಟ್ಟುಕೊಟ್ಟರು. ಪಿತ್ರಾರ್ಜಿತವಾದ ಧನವು ಪ್ರಾಯಶಃ ಪುತ್ರಸಂತತಿಯಲ್ಲಿ ಮಾಯವಾಗುತ್ತದೆ. ಆ ರೀತಿ ಮಾಯವಾಗುವುದಕ್ಕೆ ಧನದ ಬೆಲೆ ತಿಳಿಯದಿರುವುದೂ ಅದನ್ನು ಪೋಲುಮಾಡದೆ ಕಾಪಾಡಿಕೊಳ್ಳುವುದಕ್ಕೆ ಆವಶ್ಯಕವಾದ ಯತ್ನೋತ್ಸಾಹಗಳು ಕಾಣದಿರುವುದೂ ಮುಖ್ಯ ಕಾರಣ. ಆದ್ದರಿಂದ ವಿವೇಕಿಗಳಾದ ಗುರುಗಳು ತಾವು ಪಟ್ಟ ಶ್ರಮವನ್ನು ವರ್ಣಿಸಿ, ತಾವು ಹೋದ ಮಾರ್ಗದಲ್ಲಿ ಹೋಗುವಂತೆ ಸಲಹೆ ಕೊಡುವುದರ ಮೂಲಕ ವಿಷಯ ವೈಲಕ್ಷಣ್ಯವು ನಮ್ಮ ಮನಮುಟ್ಟುವಂತೆ ಮಾಡುತ್ತಾರೆ.

ಬ್ರಹ್ಮಸ್ವರೂಪವನ್ನು ತಿಳಿದುಕೊಳ್ಳಬೇಕೆಂದು ಋಷಿಪುತ್ರನಾದ ಭೃಗು ತನ್ನ ತಂದೆಯಾದ ವರುಣನ ಸಮಾಪಕ್ಕೆ ಹೋದನು. ಅವನಿಗೆ ವರುಣನು ಮೊದಲೇ 'ಅನ್ಯೋಽಂತರ ಆತ್ಮಾನಂದಮಯಃ' ಎಂದು ಹೇಳಿದ್ದರೆ, ಯಾವ ಫಲವೂ ಆಗುತ್ತಿರಲಿಲ್ಲ. ಆದ್ದರಿಂದ ವರುಣನು ಬ್ರಹ್ಮದ ಲಕ್ಷಣವನ್ನು ಹೇಳಿ, ಆ ಲಕ್ಷಣವುಳ್ಳ ವಸ್ತುವನ್ನು ತಪಸ್ಸಿನಿಂದ ತಿಳಿದುಕೊಳ್ಳುವಂತೆ ಹೇಳುತ್ತಾನೆ. 'ನಾಯಮಾತ್ಮಾ ಪ್ರವಚನೇನ ಲಭ್ಯಃ'. ಆದ್ದರಿಂದ 'ತಪಸಾ ಬ್ರಹ್ಮ ವಿಜಿಜ್ಞಾಸಸ್ವ' ಎಂದು ತನ್ನ ಮಗನಿಗೂ ಋಷಿ ಉಪದೇಶ ಮಾಡಿದನು. ತಪಸ್ಸನ್ನು ಆಲೋಚನೆಯೆನ್ನಬಹುದು.

ಒಂದು ದೃಷ್ಟಿಯನ್ನು ಹೊಂದಿ ಅದನ್ನೇ ಎಡೆಬಿಡದೆ ಬೆಳಸಿಕೊಂಡು ಹೋಗುವುದು ತಪಸ್ಸು. ವಾರುಣಿಯೂ ಕೂಡ 'ಯತೋವಾ ಇಮಾನಿ ಭೂತಾನಿ ಜಾಯಂತೇ, ಯೇನ ಜಾತಾನಿ ಜೀವಂತಿ, ಯತ್ಪ್ರಯಂತ್ಯಭಿಸಂವಿಶಂತಿ, ತದ್ವಿಜಿಜ್ಞಾಸಸ್ವ' ಎಂದು ಉಪದೇಶಪಡೆದನು. ನಮಗೆ ಕಾಣುವ ವಸ್ತುಗಳಲ್ಲಿ ಉತ್ಪತ್ತಿ ಸ್ಥಿತಿ ಲಯಗಳು ತೋರುತ್ತವೆ. ಆದ್ದರಿಂದ ಅವುಗಳು ಕಾರ್ಯರೂಪವಾದುವು. ಅವುಗಳಿಗೆ ಕಾರಣವಾದದ್ದು ಯಾವುದೋ ಅದನ್ನು ಕಾಣಬೇಕು ಎಂದು ಹೇಳಿರುವುದರಿಂದ ಕಾರಣತಾನ್ವೇಷಣೆ ಉಪದೇಶದ ಮುಖ್ಯಾರ್ಥವಾಗುತ್ತದೆ. ಆ ಕಾರಣತ್ವವು ನಿರಾಬಾಧಿತವಾಗಿ ಎಲ್ಲಿ ತೋರುವುದೋ ಅದು ಬ್ರಹ್ಮವೆಂದು ಉಪದಿಷ್ಟವಾದ್ದರಿಂದ ಕಾರಣತ್ವ ಲಕ್ಷಣವನ್ನು ತಿಳಿದುಕೊಂಡು ಭೃಗುಕುಮಾರನು ಪ್ರಕೃತಿ ಪರೀಕ್ಷೆಯಲ್ಲಿ ತೊಡಗಿ ಅಂತ್ಯದಲ್ಲಿ 'ಆನಂದೋಬ್ರಹ್ಮೇತಿ ವ್ಯಜಾನಾತ್' ಎಂಬಂತೆ ಆನಂದ ಸ್ವರೂಪವಾದ ವಸ್ತು ಕಾರಣತಾನ್ವೇಷಣೆಯಿಂದ ಲಭಿಸುತ್ತದೆಯೆಂದು ತಿಳಿದನು. ಇದು ಬಾಹ್ಯದೃಷ್ಟಿಯ ಫಲ. ಹೀಗೆಯೇ ಆಂತರ ದೃಷ್ಟಿಯಿಂದ ಆತ್ಮನನ್ನು ತಿಳಿಯುವುದೂ ತಪಸ್ಸಾಗುತ್ತದೆ. ಈ ಎರಡು ದೃಷ್ಟಿಗಳಿಂದಲೂ ಲಭಿಸಿದ ಅರ್ಥವನ್ನು ಪುನಃ ವಿಮರ್ಶಿಸುವುದಕ್ಕೆ ತೊಡಗಿದರೆ ಸಮನ್ವಯರೂಪವಾದ ತಪಸ್ಸಿನಿಂದ ಬ್ರಹ್ಮಸ್ವರೂಪವು ಚೆನ್ನಾಗಿ ತಿಳಿಯುತ್ತದೆ. ಈ ತಪೋಲಬ್ಧ ಜ್ಞಾನಕ್ಕೆ ತಳಹದಿಯಾದದ್ದು ಒಂದು 'ಕಣಸು.' ಅದು ಕಾಣಿಸಿಕೊಂಡರೆ ಅದರ ಸಾಕ್ಷಾತ್ಕಾರಕ್ಕಾಗಿ ಪಡುವ ಪ್ರಯತ್ನವು ತಪಸ್ಸಾಗುತ್ತದೆ.

ಇಷ್ಟು ಸಂಪತ್ತೂ ಒದಗಿ ಕಾರ್ಯಕಾರಿಯಾಗಬೇಕಾದರೆ ನಮ್ಮಲ್ಲಿ ಕೊಂಚ ಸಾಮರ್ಥ್ಯವಿರಬೇಕು. 'ನಾಯಮಾತ್ಮಾ ಬಲಹೀನೇನ ಲಭ್ಯಃ'. ಉಪದೇಶ ಮಾಡುವ ಸಮಯದಲ್ಲಿ ರಹಸ್ಯದ ಮಹಿಮೆಯನ್ನೂ ಜನರಲ್ಲಿ ಕಂಡುಬರುವ ಚಿತ್ತಚಾಂಚಲ್ಯವನ್ನೂ ಗಮನಕ್ಕೆ ತಂದುಕೊಂಡು ಋಷಿಗಳು ನಿರ್ದಯಹೃದಯದಿಂದ ಶಿಷ್ಯ ಪರೀಕ್ಷೆಯನ್ನು ಮಾಡುತ್ತಾರೆ. 'ಶಾಂತೋದಾಂತ ಉಪರತಃ ತಿತಿಕ್ಷುಃ ಸಮಾಹಿತೋ ಭೂತ್ವಾ ಆತ್ಮನ್ಯೇವಾತ್ಮಾನಂ ಪಶ್ಯೇತ್'. ಆತ್ಮ ದರ್ಶನಕ್ಕೆ ಶಾಂತಿ ಮೊದಲಾದುವು ಬಹಳ ಆವಶ್ಯಕ. ವಿದ್ಯಾದೇವತೆಯೂ ಸಹ ಬ್ರಹ್ಮವಿತ್ತಮನಾದ ಬ್ರಾಹ್ಮಣನನ್ನು ಕುರಿತು ಈ ರೀತಿ ನುಡಿದಿದ್ದಾಳೆ—

'ಯಮೇವ ವಿದ್ಯಾಃ ಶುಚಿಮಪ್ರಮತ್ತಂ<br>
ಮೇಧಾವಿನಂ ಬ್ರಹ್ಮಚರ್ಯೋಪಪನ್ನಂ<br>
ಯಸ್ತೇ ನದ್ರುಹ್ಯೇತ್ ಕತಮಚ್ಚನಾಹ,<br>
ತಸ್ಮೈ ಮಾ ಬ್ರೂಯಾಃ ನಿಧಿಪಾಯ ಬ್ರಹ್ಮನ್

ಯಾವ ಮನುಷ್ಯನಲ್ಲಿ ಶುಚಿತ್ವ, ಜಾಗರೂಕತೆ, ಮೇಧೆ, ಬ್ರಹ್ಮಚರ್ಯೆ ಇವುಗಳು ಕಂಡುಬರುತ್ತವೆಯೋ, ಯಾವನು ಕೆಟ್ಟದ್ದನ್ನು ಮಾಡದೆ ನುಡಿಯದೆ ಇರುತ್ತಾನೆಯೋ ಅಂಥ ನಿಧಿಪನಿಗೆ ನನ್ನನ್ನು ಪ್ರಕಾಶಪಡಿಸೆಂದು ಹೇಳಿರುವುದು ತಿಳಿದು ಬರುತ್ತದೆ. ಇದೇ ಸಂದರ್ಭದಲ್ಲಿ, 'ಅಸೂಯಕಾಯ ಅನೃಜವೇ ಅಯತಾಯ ನಮಾ ಬ್ರೂಯಾಃ, ವೀರ್ಯವತೀ ತತಃ ಸ್ಯಾಂ' ಎಂದೂ ಮೊರೆಯಿಟ್ಟಿದ್ದಾಳೆ.

ಇಂಥ ಸಚ್ಛಿಷ್ಯರಲ್ಲಿ ಅಗ್ರೇಸರನಾದ ನಚಿಕೇತನು ತತ್ತ್ವಜಿಜ್ಞಾಸುಗಳಿಗೆ ಆದರ್ಶ ಪುರುಷನಾಗುತ್ತಾನೆ. ಶುಷ್ಕವಾದ ಧನವನ್ನು ಯಾಗದಲ್ಲಿ ಉಪಯೋಗಿಸಿದ ತಂದೆಗೆ ಸದ್ಗತಿ ದೊರೆಯಲಾರದೆಂದು, ತಂದೆಯಲ್ಲಿ ಮರುಕಗೊಂಡು ತಾನೇ ದಕ್ಷಿಣೆಯಾಗಿ, ಕುಪಿತನಾದ ತಂದೆಯ ಮಾತಿನಂತೆ ಯಮನ ಸಮೀಪಕ್ಕೆ ನಚಿಕೇತನು ಹೋಗುತ್ತಾನೆ. ಅವನನ್ನು ಕಂಡ ಯಮನು ಅವನಿಗೆ ಮೂರು ವರಗಳನ್ನು ಕೊಡುವುದಾಗಿ ಹೇಳುತ್ತಾನೆ. ನಚಿಕೇತನು ಎರಡು ಸಾಮಾನ್ಯ ವರಗಳನ್ನು ಕೇಳಿ, ಮೂರನೆಯದಾಗಿ ಬ್ರಹ್ಮಸ್ವರೂಪದ ವಿಚಾರವಾಗಿ ಉಪದೇಶ ವನ್ನು ಅಪೇಕ್ಷಿಸುತ್ತಾನೆ. ಅದನ್ನು ಹೇಳಲು ಹಿಂಜರಿದು ಯಮನು ಆ ವಿಚಾರ ವನ್ನು ತಿಳಿದುಕೊಳ್ಳುವ ಸಾಮರ್ಥ್ಯ ಪ್ರಾಯಶಃ ಯಾರಿಗೂ ಇಲ್ಲವಾದ್ದರಿಂದ ಆ ವಿಚಾರಕ್ಕೆ ಕೈಹಾಕುವುದು ಉಚಿತವಲ್ಲವೆಂದೂ ಇತರವಾದ ಪ್ರೇಯ ಸ್ಸಾಮ್ರಾಜ್ಯವನ್ನೆಲ್ಲಾ ನಚಿಕೇತನಿಗೆ ಕೊಡಲು ತಾನು ಸಿದ್ಧನಾಗಿರುವನೆಂದೂ ಯಮನು ಹೇಳಿದರೂ, ನಚಿಕೇತನು ತನ್ನ ಪ್ರಾರ್ಥನೆಯನ್ನು ಬಿಡಲಿಲ್ಲ. ತತ್ತ್ವದಲ್ಲಿ ಅವನ ಆಕಾಂಕ್ಷೆಯು ಮಹತ್ತರವಾಗಿತ್ತು. 'ನಾನ್ಯಂ ವರಂ ನಚಿಕೇತಾ ವೃಣೀತೇ' ಎಂದು ತತ್ತ್ವೈಕಪರನಾಗಿ ಯಮನಿಂದ ಉಪದೇಶವನ್ನು ತಿಳಿದುಕೊಳ್ಳುತ್ತಾನೆ. ಆ ಸಂದರ್ಭದಲ್ಲಿ ಯಾರಿಗೆ ಪರಮಾತ್ಮನು ಕಾಣಿಸಿಕೊಳ್ಳುತ್ತಾನೆ ಎಂಬುದನ್ನೂ ಯಮನು ಹೇಳುತ್ತಾನೆ.

ಯಮೇವೈಷ ವೃಣುತೇ ತೇನ ಲಭ್ಯಃ
ತಸ್ಯೈಷ ಆತ್ಮಾ ವಿವೃಣುತೇ ತನೂಂ ಸ್ವಾಂ.

ನಮ್ಮ ಆಕಾಂಕ್ಷೆಯು ಯಾವುದರಲ್ಲಿ ತೀವ್ರವೋ ಅದು ನಮಗೆ ವ್ಯಕ್ತವಾಗು ತ್ತದೆ.

ಹೀಗೆ ಪರಮೋತ್ಕೃಷ್ಟವಾದ ತತ್ತ್ವಹಿತ ಪುರುಷಾರ್ಥಗಳನ್ನು ಬೋಧಿಸುವ ಕಾರಣದಿಂದ ಜನಜೀವನದ ಉನ್ನತ ಸೋಪಾನವನ್ನು ಉಪನಿಷತ್ತುಗಳು ಪ್ರಕಾಶ ಪಡಿಸಿರುವುದು ಅವುಗಳ ಹಿರಿಮೆಯನ್ನು ಶಾಶ್ವತವಾಗಿ ಬೆಳಗಿಸುತ್ತದೆ.

ವಿ. ಟಿ. ತಿರುನಾರಾಯಣ ಅಯ್ಯಂಗಾರ್

## ಕ್ರೈಸ್ತ ಧರ್ಮದ ಐತಿಹಾಸಿಕತೆ

ಆಧ್ಯಾತ್ಮಿಕ ಸತ್ಯ ಬರಿಯ ಕಟ್ಟುಕಥೆಯ ಮತ್ತು ಪುರಾಣದ ಮೇಲೆಯೊ ಬುದ್ಧಿನಿಷ್ಠವಾದ ತತ್ತ್ವದ ಮೇಲೆಯೊ ಅವಲಂಬಿಸಿ ನಿಲ್ಲಬಲ್ಲುದು, ಅದಕ್ಕೆ ಇತಿಹಾಸದ ತಳಹದಿ ಅನಾವಶ್ಯಕ ಎಂದು ವಾದಿಸುವುದುಂಟು. ಆದರೆ ಯೆಹೂದ್ಯರಾಗಲಿ, ತರುವಾಯ ಬಂದ ಕ್ರೈಸ್ತರಾಗಲಿ, ದೇವರು ತಮ್ಮೊಡನೆ ನಡೆದುಕೊಂಡಿರುವ ರೀತಿ ಹಾಗೆಂದು ನಂಬಿಲ್ಲ. 'ಪಸ್ಕ' ಎಂಬುದು ಈ ೩೦೦೦ ವರ್ಷಗಳಿಂದಲೂ ಯೆಹೂದ್ಯರಿಗೆ ಬಹು ದೊಡ್ಡ ಹಬ್ಬ. ಅದು ಇಸ್ರಾಯೇಲ್ ಜನರನ್ನು ಐಗುಪ್ತ ದೇಶದಿಂದ ದೇವರು ಬಿಡುಗಡೆ ಮಾಡಿದ ಇತಿಹಾಸ ಸಂಗತಿಯ ಸ್ಮರಣೆಯಾಗಿದೆ. ಇಸ್ರಾಯೇಲ್ ಚರಿತ್ರೆಯಲ್ಲಿ ನಡೆದ ಸಂಗತಿಗಳು—ದೇವರ ಕೃತಿಗಳು, ಆತನು ದಂಡನೆಗಾಗಿಯೊ ಉದ್ಧಾರಕ್ಕಾಗಿಯೊ ಮಾಡಿದುವು ಎಂದೇ ಪ್ರವಾದಿಗಳು ಅವನ್ನು ಬಗೆದಿದ್ದಾರೆ. ಎಲ್ಲಕ್ಕಿಂತ ಹೆಚ್ಚಾಗಿ (ಕ್ರೈಸ್ತ ವಿಶ್ವಾಸದಂತೆ) ಆತನು ದೊರೆ, ಆತನದು ಪ್ರೇಮಸಂದೇಶ, ಸಾವಿನಿಂದಲೂ ಪುನರುತ್ಥಾನದಿಂದಲೂ ಆತನು ಜನರನ್ನು ಉದ್ಧರಿಸುತ್ತಾನೆ ಎಂಬುದನ್ನು ಬೋಧಿಸುವುದಕ್ಕಾಗಿಯೇ ದೇವರು ತನ್ನ ಮಗನನ್ನು ಭೂಮಿಗೆ ಕಳಿಸಿದನು. ಕ್ರಿಸ್ತನಲ್ಲಿ ದೇವರ ನುಡಿ ಮೈವೆತ್ತಿತು ; ಎಂದರೆ, ದೇವರ ಆಧ್ಯಾತ್ಮಿಕ ಸತ್ಯ ಸ್ಫುಟವಾದ ರೀತಿಯಲ್ಲಿ ಇತಿಹಾಸಕ್ಕೆ ಸೇರಿಕೊಂಡಿತು. ಬುದ್ಧಿಸಿದ್ಧವಾದ ಸತ್ಯ ಮೂರ್ತವಾಗಿ ಕಾಣಿಸಿಕೊಂಡು ಒಂದು ಇತಿಹಾಸಕ್ರಿಯೆಯಾಗಿ ಸ್ಥಾಪಿತವಾಯಿತು.

ಹೊಸ ಒಡಂಬಡಿಕೆಯ ಬಹು ಭಾಗ ಹೀಗೆ ಇತಿಹಾಸವನ್ನು ಒಳಗೊಂಡಿದ್ದಾಗಿದೆ. ಅದರ ನಾಲ್ಕು ಸುವಾರ್ತೆಗಳೂ ಅಪೋಸ್ತಲರ ಕೃತ್ಯಗಳೂ ಬಹು ಮಟ್ಟಿಗೆ ಪೂರ್ತಿಯಾಗಿ ಇತಿಹಾಸದಲ್ಲಿ ನಡೆದ ಸಂಗತಿಗಳ ಲೇಖನವೇ ಆಗಿವೆ. ಇತರ ಪುಸ್ತಕಗಳಲ್ಲಿಯೂ ಅನೇಕ ಐತಿಹಾಸಿಕ ಸಂಗತಿಗಳಿವೆ. ಹೊಸ ಒಡಂಬಡಿಕೆಯ ತತ್ತ್ವವೆಲ್ಲ ಕ್ರಿಸ್ತನು ಐತಿಹಾಸಿಕ ವ್ಯಕ್ತಿ ಎಂಬುದರಮೇಲೆ ನಿಂತು ಆತನ ಅನುಯಾಯಿಗಳ ಚರಿತ್ರೆಗಳಲ್ಲಿ ವಿವರವಾಗಿ ಕಾರ್ಯರೂಪಕ್ಕೆ ಬಂದಿದೆ. ಹಾಗೆಯೇ, ಕ್ರೈಸ್ತ ಧರ್ಮ ಅವಿವೇಚಿತ ನಂಬಿಕೆಗಳ ನಿರೂಪಣೆಯಲ್ಲ; ಕ್ರಿಸ್ತನ ಹುಟ್ಟು, ಸಾವು, ಪುನರುತ್ಥಾನ—ಇವು ಇತಿಹಾಸ ಸಂಗತಿಗಳು ಎಂಬ ನಂಬಿಕೆಯುಳ್ಳದ್ದು. ಆದ್ದರಿಂದ ಕ್ರಿಸ್ತನ ಐತಿಹಾಸಿಕತೆಯನ್ನು ಸ್ಥಾಪಿಸುವುದೂ ಒಪ್ಪಿಕೊಳ್ಳುವುದೂ ಅತ್ಯಂತ ಮುಖ್ಯವಾಗುತ್ತದೆ. ಕೆಲವರು ಈ ವಾದವನ್ನು ನಿರಸನಮಾಡುವರು ; ಐತಿಹಾಸಿಕತೆಯನ್ನೊಪ್ಪುವುದು ಅಷ್ಟೇನೂ ಅಗತ್ಯವಲ್ಲವೆಂದು ಇತರರು ವಾದಿಸುವರು. ಆದರೆ ಕ್ರೈಸ್ತ ಧರ್ಮವನ್ನು ಯಥಾವತ್ತಾಗಿ ಅರ್ಥಮಾಡಿಕೊಳ್ಳಬೇಕಾದರೆ ಅಂಥ ಒಪ್ಪಿಕೆ ಸಾರಭೂತವಾದ ಅಂಶವಾಗುತ್ತದೆ.

ಸುವಾರ್ತೆಗಳಲ್ಲಿ ಯೇಸುವಿನ ನಾಲ್ಕು ಜೀವನ ಚರಿತ್ರೆಗಳು ನಮಗೆ ಸಿಕ್ಕುವುವು. ಅವುಗಳಲ್ಲಿ ಅತಿ ಮುಂಚಿನದನ್ನು ಸಂತ ಮಾರ್ಕ್ ಬರೆದನು. ಅವನ ಕೃತಿಯನ್ನು ಮಾದರಿಯಾಗಿಟ್ಟುಕೊಂಡು ಆಮೇಲೆ ಸಂತ ಲೂಕ್ ಮತ್ತು ಸಂತ ಮ್ಯಾಥ್ಯೂ

ತಮ್ಮ ಸುವಾರ್ತೆಗಳನ್ನು ಬರೆದರು. ಆದ್ದರಿಂದ ಆ ಮೂವರ ಚಿತ್ರದ ಹೊರ ರೇಖೆಗಳು ಒಂದೇ ತೆರನಾಗಿವೆ. ವಿವರಗಳು ಮಾತ್ರ ಬಹು ಪ್ರಕಾರವಾಗಿರುತ್ತವೆ. ಸಂತ ಜಾನ್ ಬರೆದ ಸುವಾರ್ತೆಯು ದೃಷ್ಟಿರೀತಿಯೇ ಬೇರೆಯಾಗಿದ್ದರೂ ಮೇಲೆ ಹೇಳಿದ ಮುಖ್ಯ ಸಂಗತಿಗಳನ್ನೇ ಅದೂ ಒತ್ತಿ ಹೇಳುತ್ತದೆ. ಈ ಜೀವನ ಚರಿತ್ರೆಗಳನ್ನು ವಿಶ್ವಾಸಾರ್ಹವೆಂದೆಣಿಸಬಹುದೆ? ವಸ್ತು ದೃಷ್ಟಿಯಿಂದ ಅವುಗಳ ಯಥಾರ್ಥತೆಯನ್ನು ಪರೀಕ್ಷಿಸಿದರೆ ಅವು ತಡೆದುಕೊಳ್ಳಬಲ್ಲವೆ? ಎಂಬ ಪ್ರಶ್ನೆಗಳಿಗೆ ಉತ್ತರವಾಗಿ ನಾನು ಅಂತಹ ಮೂರು ಪರೀಕ್ಷೆಗಳನ್ನು ನಡಸುತ್ತೇನೆ.

(೧) ಪವಾಡ ಪುರುಷನೊಬ್ಬನ ಜೀವನ ಚರಿತ್ರೆಯಲ್ಲಿ ಆತನಲ್ಲಿರುವ ಪೂಜ್ಯತೆಯಿಂದ, ಅಶಕ್ಯವೆಂಬಷ್ಟು ಮಟ್ಟಿಗೆ ಪವಾಡಗಳನ್ನು ಅತಿಶಯಮಾಡಿ ತೋರಿಸುವ ಪ್ರಯತ್ನ ಇರುವುದುಂಟು. ಭಾರತೀಯ ಮತ್ತು ಕ್ರೈಸ್ತ ಸಾಹಿತ್ಯಗಳಲ್ಲಿನ ಇಂತಹ ಅನೇಕ ಉದಾಹರಣೆಗಳು ಈ ಸಮಯದಲ್ಲಿ ನೆನಪಿಗೆ ಬರುತ್ತವೆ. ವಾಸ್ತವವಾಗಿ ನೋಡಿದರೆ, ಬುದ್ಧಿಶಾಲಿಯಾದ ಜಿಜ್ಞಾಸುವಿನ ಮನಸ್ಸಿನ ಮೇಲೆ ಇದರ ಪರಿಣಾಮ ವಿಪರೀತವಾಗುವುದು. ಅಂತಹ ಅತ್ಯುಕ್ತಿಗಳು ಹಾಸ್ಯಾಸ್ಪದವಾಗಿ ಕಾಣುವುವು. ಬುದ್ಧಿಶಾಲಿಗೆ ಪವಾಡ ವಿಷಯದಲ್ಲಿ ಅಪನಂಬಿಕೆ ಇರಬೇಕಾದ್ದಿಲ್ಲ. ಅಪನಂಬಿಕೆಗೆ ಕಾರಣ ವಿವೇಚನೆಯಿಲ್ಲದ ಪೂರ್ವನಿರ್ಧಾರ. ಅತಿಮಾನುಷ ಸಂಗತಿಗಳನ್ನು ಕುರಿತದ್ದಾದರೂ ಹದವರಿತು ನಂಬುವಂತೆ ಹೇಳಿದ ಕಥೆ ಅವನಿಗೆ ಬೇಕು. ನಿಷ್ಪಕ್ಷವಾಗಿ ನೋಡುವವನಿಗೆ ಹೊಸ ಒಡಂಬಡಿಕೆಯಲ್ಲಿ ಅಂತಹ ಒಂದು ಕಥೆ ಸಿಕ್ಕುತ್ತದೆ. ಕ್ರಿಸ್ತನ ಪುನರುತ್ಥಾನ ಕಥೆಯನ್ನೇ ಉದಾಹರಣೆಗೆ ತೆಗೆದುಕೊಳ್ಳೋಣ. ಪುನರುತ್ಥಾನ ಪವಾಡದ ಪ್ರಭಾವವನ್ನು ಏರಿಸುವ ಯಾವ ಪ್ರಯತ್ನವೂ ಅಲ್ಲಿ ಇಲ್ಲ; ಎಷ್ಟು ವಿವರಗಳು ಬೇಕೇ ಬೇಕೊ ಅಷ್ಟು ಮಾತ್ರವೇ ಇವೆ. ನಿಜವಾಗಿ ನಡೆದ ಸಂಗತಿಗಳ ವರದಿಯಂತೆ ಕಥೆ ಹೇಳಿದೆ. ಮತ್ತು ಅವು ನಿಜವೆಂದು ನಿಶ್ಚಯ ಮಾಡಿಕೊಡಲು ಯಾವ ಅತ್ಯುಕ್ತಿಯೂ ಬೇಕಿಲ್ಲ.

(೨) ಎರಡನೆಯ ಮಟ್ಟದ ಬುದ್ಧಿಯುಳ್ಳ ಜನ ನಿರ್ಮಾಣ ಮಾಡಿ ಹೇಳುವ ನೀತಿಸೂತ್ರಗಳ ಪಟ್ಟಿ ಯಾವುದು? ದೇವರೊಡನೆ ಆಪ್ತವಾದ ವ್ಯಕ್ತಿಸಂಪರ್ಕವುಳ್ಳ ಒಬ್ಬಾತನ ವಾಣಿ ಯಾವುದು ಎಂಬುದರ ವ್ಯತ್ಯಾಸವನ್ನು ಹೇಳುವುದು ಕಷ್ಟವೇನಲ್ಲ. ಅನುಕರಣಕಾರನಿಗೂ ಸ್ವಂತ ಸೃಷ್ಟಿ ಶಕ್ತಿಯುಳ್ಳ ಪ್ರತಿಭಾಶಾಲಿಗೂ ಇರುವ ವ್ಯತ್ಯಾಸ ಸಾಮಾನ್ಯನಾದ ತಿಳಿಯುಳಿವು ಇರುವವನಿಗೆ ಕೂಡ ಗೊತ್ತಾಗುತ್ತದೆ. ಈ ಪರೀಕ್ಷೆಯಲ್ಲಿಯೂ ಸುವಾರ್ತೆಗಳು ತೇರುವುವು. ಅಲ್ಲಿನ ಉಪದೇಶಗಳು ಕೀಳ್ತರದ ಶಿಷ್ಯರ ಸೃಷ್ಟನೆಯಲ್ಲ; ನಿಜವಾಗಿ ಅವು ಸ್ಮೃತಿಯೇ. ಅಪೂರ್ಣವಾಗಿರಬಹುದು; ಆದರೂ ನರಮಾತ್ರನು ಎಂದೂ ನುಡಿಯದಿದ್ದಂತಹುದನ್ನು ನುಡಿದಾತನೊಬ್ಬನ ಮಾತಿನ ನೆನಪು ಅದು ಎಂದು ಅವನ್ನು ಓದಿದವರೆಲ್ಲರಿಗೂ ಖಂಡಿತ ಮಂದಟ್ಟಾಗುತ್ತದೆ. ಅಂತಹ ನುಡಿಗಳನ್ನು ನಿರ್ಮಾಣ ಮಾಡಬಲ್ಲವನು ಸ್ವತಃ ದೇವರೇ ಆಗಿರಬೇಕು.

(೩) ಸುವಾರ್ತೆಗಳು ತರುವಾಯದ ಸೃಷ್ಟನೆ ಆಗಿದ್ದಿದ್ದರೆ ಅವುಗಳ ವಿವರಣೆಯಲ್ಲಿ ಒಂದೊಂದಕ್ಕೆ ಈಗಿರುವಷ್ಟು ವ್ಯತ್ಯಾಸಗಳಿರುತ್ತಿರಲಿಲ್ಲ; ಅವು ಈಗಿಗಿಂತ

ಹೆಚ್ಚು ಒತ್ತಿರಸಾಗಿರುತ್ತಿದ್ದುವು. ಸುಳ್ಳು ರುಜು ಹಾಕುವವನು ಸ್ವಲ್ಪವೂ ವ್ಯತ್ಯಾಸ ಬಾರದಂತೆ ರುಜುವನ್ನು ನಕಲು ಮಾಡುವನು. ಸ್ವಂತ ಹೆಸರನ್ನು ಬರೆಯುವ ಮನುಷ್ಯನು ಖಚಿತವಾಗಿರಲು ಅಷ್ಟು ತೊಂದರೆ ತೆಗೆದುಕೊಳ್ಳುವುದಿಲ್ಲ. ಹೀಗೆ ಬೇರೆ ಬೇರೆ ಸುವಾರ್ತೆಗಳಲ್ಲಿರುವ ಈ ವ್ಯತ್ಯಾಸಗಳೇ ಇತಿಹಾಸ ದೃಷ್ಟಿಯಿಂದ ಅವು ಯಥಾರ್ಥವೆಂಬುದಕ್ಕೆ ಪ್ರಮಾಣವಾಗಿವೆ. ನಿಜವಾಗಿ ಇದ್ದ ಒಬ್ಬ ಐತಿಹಾಸಿಕ ವ್ಯಕ್ತಿಯನ್ನು ನೋಡುವ ಭಿನ್ನ ರೀತಿಗಳನ್ನು ತೋರಿಸುತ್ತವೆ. ಸಾಧಾರಣನೊಬ್ಬನಿಗೆ ಕಾಣುವ ಯೇಸುವಿನ ಚಿತ್ರವನ್ನು ಮಾರ್ಕ್ ಕಾಣಿಸಿದನು. ಅವನ ಪ್ರಕಾರ, ಯೇಸು ನಮ್ಮಂತೆಯೇ ಪೂರ್ತಿ ನರವ್ಯಕ್ತಿ. ದಯೆಯ ಮೂರ್ತಿ ಎಂಬಂತೆ ಲೂಕ್ ಯೇಸುವನ್ನು ಚಿತ್ರಿಸಿದ್ದರೆ, ಗುರು ಎಂಬಂತೆ ಮ್ಯಾಥ್ಯೂ ಆತನನ್ನು ಚಿತ್ರಿಸಿದ್ದಾನೆ. ಯೇಸು ಆಧ್ಯಾತ್ಮಿಕ ತತ್ವವಿಚಾರಕನು ಎಂಬಂತೆ ಜಾನ್ ತೋರಿಸಿದ್ದಾನೆ. ಎಲ್ಲರೂ ಹೀಗೆ ಯೇಸುವನ್ನು ಬೇರೆ ಬೇರೆ ದೃಷ್ಟಿಗಳಿಂದ ನೋಡುತ್ತಾರೆ. ಅವರಲ್ಲಿ ಕಾಣಬರುವ ವ್ಯತ್ಯಾಸಗಳು, ಒಟ್ಟಿನಲ್ಲಿ ಸತ್ಯದ ಸಂಪೂರ್ಣಚಿತ್ರವೊಂದನ್ನು ರಚಿಸಲು ಒದಗುವುವು. ಈ ಚಿತ್ರಕ್ಕೆ ಅಪೋಸ್ತಲ ಪಾಲ್‌ನ ಸಮರ್ಥನೆಯೂ ದೊರೆಯುತ್ತದೆ. ಯೇಸು ಮೊದಲು ಅವನಿಗೆ ಕಂಡದ್ದು ಹಗೆಯಂತೆ; ಆದರೂ ಪಾಲ್ ಕೂಡ ತನ್ನ ಬರವಣಿಗೆಗಳಲ್ಲಿ ಸುವಾರ್ತೆಗಳ ಲೇಖಕರು ಕೊಟ್ಟಿರುವ ಯೇಸುವಿನ ಬದುಕಿನ ಅವೇ ಮೂಲ ರೇಖೆಗಳನ್ನೇ ಒಪ್ಪಿರುವುದು ಕಂಡುಬರುತ್ತದೆ.

ಹೀಗೆ, ಸುವಾರ್ತೆಗಳಲ್ಲಿನ ಕಥೆ ಐತಿಹಾಸಿಕವಾದುದೆಂದು ಸ್ಥಾಪಿಸಲು ಯಥೇಷ್ಟ ಪ್ರಮಾಣವುಂಟು. ಇನ್ನೂ ಹೆಚ್ಚು ಪ್ರಮಾಣಗಳನ್ನು ಕೂಡಿಸುವುದು ಸುಲಭ; ಆದರೆ ಅನಾವಶ್ಯಕ. ಯೇಸು ನಿಜವಾದ ವ್ಯಕ್ತಿ. ದೇವರು ಆತನ ಮೂಲಕ ಕಾರ್ಯ ನಡಸಿದನು. ಈಗಿಗೂ ದೇವರು ಹಾಗೆಯೇ ಕಾರ್ಯ ನಡಸುತ್ತಿರುವನೆಂದೇ ಕ್ರೈಸ್ತ ಧರ್ಮ ನಂಬಿದೆ. ಇಂದಿನ ಕಷ್ಟಗಳೆಲ್ಲ ದೇವರು ವಿಧಿಸಿದ ಶಿಕ್ಷೆ; ಅದನ್ನು ಮನುಷ್ಯರೇ ತಮ್ಮ ಮೇಲೆ ತಂದುಕೊಂಡಿದ್ದಾರೆ; ಅವರ ಸ್ವಾರ್ಥಪರತೆ ದುರಾಶೆಗಳು ಈ ಶಿಕ್ಷೆಗೆ ಕಾರಣ; ಎಂಬುದು ನಮ್ಮ ನಂಬಿಕೆ. ಕ್ರಿಸ್ತನು ಪ್ರಕಾಶಮಾಡಿ ತೋರಿಸಿಕೊಟ್ಟಂತೆ ದೇವರಿಗೆ ವಿಧೇಯರಾಗಿರಲೂ, ದೇವರನ್ನು ಪ್ರೀತಿಸಲೂ ಜನ ಕಲಿತಾಗ ಮಾತ್ರವೇ,—ನಿಜವಾದ ವಿಧೇಯತೆ ಮತ್ತು ನಿಜವಾದ ಪ್ರೇಮ ಎಂಥವೆಂಬುದನ್ನು ತನ್ನ ನುಡಿ ಮತ್ತು ತನ್ನ ಬದುಕಿನ ಮೂಲಕ ಆತನು ತೋರಿಸಿಕೊಟ್ಟಂತೆ ಜನ ನಡೆದುಕೊಂಡರೆ ಮಾತ್ರವೇ,—ಮನುಷ್ಯರಿಗೆ ದಿವ್ಯಶಾಂತಿ ದೊರಕುವಂತೆ ಈ ಜಗತ್ತಿನ ವ್ಯಾಪಾರ ವ್ಯವಹಾರಗಳನ್ನು ದೇವರು ಯೋಜಿಸುವನು ಎಂದು ಕೂಡ ನಾವು ನಂಬಿದ್ದೇವೆ.

ಹ್ಯಾರಲ್ಡ್ ಕೀಲಿಂಗ್ ಮೌಲ್ಟನ್

# ಶ್ರೀ ರಾಮಾನುಜಾಚಾರ್ಯರೂ ಹರಿಜನರೂ

ಮೇಲುಕೋಟೆ; ಪವಿತ್ರವಾದ ಯಾದವಗಿರಿ; ಎಲ್ಲೆಲ್ಲು ಸಡಗರ. ಊರಿಗೆ ಊರೇ ಒಂದು ಸ್ಫೂರ್ತಿಯಿಂದ ಎಚ್ಚತ್ತಿದೆ. ಜನರು ಅಮೃತಪಾನವಾಡಿದವರಂತೆ ಉತ್ಸಾಹದಿಂದ ನಿಂತಲ್ಲಿ ನಿಲ್ಲದೆ ತಿರುಗುತ್ತಿದ್ದಾರೆ. ಹುಡುಗರಂತೂ ಪೊರೆಯುಚ್ಚಿದ ಹಾವುಗಳಂತೆ, ಎಷ್ಟು ಅಲೆದರೂ ಆಯಾಸವನ್ನೇ ಹೊಂದದೆ ಯಾದವಗಿರಿಯ ಪವಿತ್ರಕ್ಷೇತ್ರಗಳನ್ನೆಲ್ಲಾ ಸುತ್ತುತ್ತಿದ್ದಾರೆ. ಜಗತ್ತೇ ಯಾದವಗಿರಿಗೆ ಈ ದಿನ ಬಂದು ತುಂಬಿದೆ. ಪಂಚಕಚ್ಚೆಯ ಕಂಬಿಪಂಚೆಯನ್ನು ಅತ್ಯಂತ ರಸಿಕತೆಯಿಂದ ಉಟ್ಟು ದೇವರ ಪೂಜೆಮಾಡಿ ಕೇಸರಿ ಗಂಧವನ್ನು ಎದೆಗೆ ಪೂಸಿಕೊಂಡು ಹೊರಟಿರುವ ಈ ವೈದಿಕಮಹಾಶಯರನ್ನು ನೋಡಿದರೆ, ಅವರ ಮುಖದಲ್ಲಿ ಕಾಣುತ್ತಿರುವ ತೇಜಸ್ಸನ್ನೂ ವೈದಿಕ ಠೀವಿಯನ್ನೂ ನೋಡಿದರೆ, ಮುಖಕ್ಷೌರ ಮಾಡಿಸಿಕೊಳ್ಳುವ ಸ್ವಲ್ಪ ಆಧುನಿಕರಾದ ನಮಗೇ ಭಯವಾಗುವಾಗ, ನಿಜವಾಗಿಯೂ ಬ್ರಾಹ್ಮಣರಿಂದ ನಾಲ್ಕು ನೂರು ಆರು ನೂರು ದೂರದಲ್ಲಿರಬೇಕಾದ ಆದಿಕರ್ನಾಟಕರ ಆದಿದ್ರಾವಿಡರ ಎದೆ ನಡುಗುವುದರಲ್ಲಿ ಸಂದೇಹವೇನು? ಈ ವೈದಿಕ ಮಹಾಶಯರ ಬಾಯಿಂದ ಹೊರಡುವ ತಮಿಳು ವೇದಗಳನ್ನೂ ಸಂಸ್ಕೃತ ವೇದಗಳನ್ನೂ ಕೇಳಿದರೆ ಇದೇ ಬ್ರಹ್ಮಸಭೆಯಂತೆ ತೋರುತ್ತಿರುವುದು! ಯಾದವಗಿರಿ ಇಂದು ನಿಜವಾಗಿಯೂ ನಂದನವನ. ಲೋಕದ ಹೂವುಗಳೆಲ್ಲಾ ಇಂದು ನಾ ಮುಂದು ತಾ ಮುಂದು ಎಂದು ಬಗೆ ಬಗೆಯ ಮಾಲೆಗಳ ರೂಪಗಳನ್ನು ಧರಿಸಿ ತಿರುನಾರಾಯಣಯನ ಸೇವೆಗಾಗಿ ಬಂದಿವೆ. ದೇವಸ್ತ್ರೀಯರೇನಾದರೂ ಈ ಹೂವಾಡಿಗಿತ್ತಿಯರ ರೂಪಗಳಲ್ಲಿ, ಯದುಗಿರಿಯ ನಾರಾಯಣನಿಗೆ ಪಾರಿಜಾತ ಪುಷ್ಪಗಳನ್ನು ತಂದಿರಬಹುದೆ? ರಂಭೆ ಊರ್ವಶಿ ಮೇನಕೆ ರತಿ— ಇವರೆಲ್ಲಾ ಇಲ್ಲಿ ಮನೆಮನೆಯ ಬಾಗಿಲುಗಳಲ್ಲಿ ನಿಂತು ಭಗವಂತನ ಬರವನ್ನೇ ಎದುರುನೋಡುತ್ತಿದ್ದಾರೆ. ಅಬ್ಬಾ! ಈ ದಿನ ಇಲ್ಲಿ ನೆರೆದಿರುವ ಸ್ತ್ರೀಯರ ಅಲಂಕಾರಗಳೇನು? ಒಡವೆಗಳೇನು? ಹೂವುಗಳೇನು? ದೇವಸ್ಥಾನದ ಬಾಗಿಲಿನಲ್ಲಿ ಇರುವೆಗೂ ಸ್ಥಳವಿಲ್ಲದಂತೆ ಲಕ್ಷ ಮಂದಿ ಸೇರಿದೆ. ಮಂಗಳವಾದ್ಯಗಳು ಹೊಸ ಜಗತ್ತಿನ ಬಾಗಿಲನ್ನೇ ತೆರೆಯುವಂತೆ ಮೊಳಗುತ್ತಿವೆ. ಇನ್ನೇನು, ಜಯ ಜಯಕಾರದೊಂದಿಗೆ ದೇವರ ಉತ್ಸವ ಹೊರಟಿತು. ಸಮುದ್ರದ ತೆರೆಗಳಂತೆ ಭಗವಂತನನ್ನು ಅನುಸರಿಸಿಕೊಂಡು ಜನ ಹೋಗುತ್ತಿದೆ. ಎಲ್ಲೆಲ್ಲು ಆನಂದ; ಎಲ್ಲೆಲ್ಲು ಕೋಲಾಹಲ.

ಉತ್ಸವ ನಾಲ್ಕು ಬೀದಿಗಳನ್ನು ಸುತ್ತಿಕೊಂಡು ಮತ್ತೆ ದೇವಸ್ಥಾನದ ಹತ್ತಿರಕ್ಕೆ ಬಂದಿತು. ಈ ಎರಡು ಫರ್ಲಾಂಗಿಗೆ ಏನು ಸಡಗರ; ಏನು ಸಿಪ್ಪತೆ! ಎಷ್ಟು ವೈಭವ! ಆದರೆ ಈ ಉತ್ಸಾಹ, ಜೀವವಾನದ ನಿರುತ್ಸಾಹಕ್ಕೆಲ್ಲಾ ಮದ್ದು. ಹಾ! ಇದೇನು? ದೂರದಲ್ಲಿ ಹರುಕುಬಟ್ಟೆಗಳನ್ನು ತೊಟ್ಟು ಬಾಡಿದ ಮುಖವುಳ್ಳವರಾಗಿ ಈ ಕಡೆಯೇ ಆಸೆಯಿಂದ, ದೈನ್ಯದಿಂದ ನೋಡುತ್ತಿರುವ ಇವರು ಯಾರು? ಈ ಗಂಡಸರ ಮುಖದಲ್ಲಿ ಯಾಕೆ ಕಳೆಯಿಲ್ಲ? ಈ ಮಕ್ಕಳ ಮುಖದಲ್ಲಿ

ಯಾಕೆ ನಗುವಿಲ್ಲ? ಈ ಹೆಂಗಸರಿಗೆ ಯಾಕೆ ಹೊಸ ಸೀರೆಗಳಿಲ್ಲ? ಅವರ ತಲೆಗಳಲ್ಲಿ ಯಾಕೆ ಹೂವುಗಳಿಲ್ಲ? ವೇದಗೋಷ್ಠಿಯವರೆಲ್ಲಾ ನೂರಾರು ಮಾರು ದೂರದಲ್ಲಿ ನಿಂತಿರುವ ಆ ಹೆಣ್ಣು ಗಂಡುಗಳ ಗುಂಪನ್ನು ಮೃಗಗಳನ್ನು ನೋಡುವಂತೆ ಸರ್ರನೆ ತಿರುಗಿ ನೋಡಿದರು. ಸಾತ್ವಿಕತೆಯನ್ನೇ ಹೆಚ್ಚಿಸಬೇಕಾದ ಭಗವಂತನ ಸಾನ್ನಿಧ್ಯದಲ್ಲಿ ಅವರು ಇದ್ದರೂ, ಅವರ ಮುಖಗಳೆಲ್ಲಾ ಕೋಪದಿಂದ ಕೆಂಪಾದುವು. ಅವರು ದೇವಸ್ಥಾನದ ಪಾರುಪತ್ತೆಗಾರರನ್ನು ಕರೆದು ದೂರದಲ್ಲಿ ನಿಂತಿದ್ದ ಆ ಬಡಪಾಯಿಗಳನ್ನು ಸನ್ನೆಯಿಂದಲೇ ತೋರಿಸಿದರು. ಪಾರುಪತ್ತೆಗಾರರು ಅವರ ಹತ್ತಿರಕ್ಕೆ ಹೋಗಿ ದೂರದಿಂದಲೇ, ತುಟಿಯ ಮುಂದೆ ಪರದೆಯಂತೆ ಕೈಯನ್ನು ಮರೆಮಾಡಿಕೊಂಡು "ಇವೊತ್ತು ಯಾಕೆ ಬಂದಿರಿ? ನೀವು ಬರಬೇಕಾದುದು ನಾಳೆ" ಎಂದರು. ಆದಿಕರ್ನಾಟಕರು "ಗೊತ್ತು ಬುದ್ಧಿ, ನಾಳೆ. ಆದರೆ ಇವೊತ್ತು ದೂರದಿಂದ ನೋಡೋಣವೆಂದು ಬಂದೆವು. ನೆಂಟರು ಬಂದಿದ್ದಾರು" ಎಂದರು. ಪಾರುಪತ್ತೆಗಾರರು "ನೆಂಟರೋ ಪಂಟರೋ; ದೂರದಿಂದ ತಾನೇ ನೀವು ಯಾಕೆ ನೋಡಬೇಕು? ನಿಮಗೆ ಮೂರು ದಿವಸ ಕೊಟ್ಟದ್ದು ಮೊದಲು ತಪ್ಪು" ಎಂದರು. ಆದಿಕರ್ನಾಟಕರು "ಹಾಗೆ ಹೇಳಬೇಡಿ ಬುದ್ಧಿ. ವರುಷಕ್ಕೆ ಮೂರು ದಿನ ನಮ್ಮಪ್ಪನ್ನ ನೋಡದಿದ್ದರೆ ನಾವು ಬದುಕುತೇವಾ" ಎಂದರು. ಪಾರುಪತ್ತೆಗಾರರು "ಬದುಕದೆ ಸಾಯುವುದಕ್ಕೆ ನಿಮಗೆ ಆಗಿರುವುದೇನು" ಎಂದುಕೊಂಡು ದೇವಸ್ಥಾನಕ್ಕೆ ಹೋದರು.

ಮರುದಿನ ಬೆಳಗ್ಗೆ ಕಲ್ಯಾಣಿಗೆ ಸ್ನಾನಕ್ಕೆ ಹೋದೆ. ಅಂತಹ ದೊಡ್ಡ ಕೊಳದಲ್ಲಿ ನೀರಿಗೆ ಇಳಿಯುವುದಕ್ಕೆ ಕೂಡ ಸ್ಥಳವಿಲ್ಲದಂತೆ ಜನ, ಹೆಣ್ಣು ಗಂಡು ಮಕ್ಕಳು, ತುಂಬಿದೆ. ಎಲ್ಲಿ ನೋಡಲಿ ಒಂದೇ ಧ್ವನಿ "ರಾಮಾನುಜ ರಾಮಾನುಜ ರಾಮಾನುಜ." ಸುಮಾರು ಹತ್ತು ಸಾವಿರಕ್ಕಿಂತ ಹೆಚ್ಚು ಹರಿಜನ ಇಲ್ಲಿ ಸೇರಿದ್ದಾರೆ. ಸರ್ವ ಭಗವಂತನ ದರುಶನಕ್ಕೆ ಅವಕಾಶ ಸಿಕ್ಕಿತಲ್ಲಾ ಎಂದು ಜಗತ್ತಿನ ಹರಿಜನರೆಲ್ಲಾ ಇಲ್ಲಿ ಸೇರಿದಂತೆ ಕಾಣುತ್ತದೆ. ನಿಜವಾಗಿಯೂ ಅವರ ಮುಖದಲ್ಲಿ ಏನು ಸಡಗರ! ಭಗವಂತ ಅವರಿಗೆ ಇಲ್ಲೇ ಒಲಿದಂತೆ ಕಾಣುತ್ತದೆಯಲ್ಲ! ಇಲ್ಲಿ ಸ್ನಾನಮಾಡುತ್ತಿರುವ ವೈದಿಕರ ಮುಖದಲ್ಲಿ ನೆನ್ನೆ ನಾನು ಕಂಡ ತಿರಸ್ಕಾರ ಈಗ ಇಲ್ಲ. ಅವರೆ ಅವರ ಮಗ್ಗುಲಲ್ಲಿಯೇ ಹರಿಜನರು ಅವರಂತೆಯೇ ಕಲ್ಯಾಣಿಯಲ್ಲಿ ಸ್ನಾನಮಾಡುತ್ತಿದ್ದಾರೆ. ಅವರಂತೆಯೇ ನಾಮವನ್ನು ಧರಿಸುತ್ತಿದ್ದಾರೆ. ಆ ಕಡೆ ಎಲ್ಲಾ ಮಹಿಳೆಯರ ಜತೆಯಲ್ಲಿಯೂ ಹರಿಜನರ ಮಹಿಳೆಯರೂ ಸ್ನಾನಮಾಡಿ ಹೊಸ ಸೀರೆಗಳನ್ನು ಉಟ್ಟುಕೊಳ್ಳುತ್ತಿದ್ದಾರೆ. ಹೂವು ಮುಡಿದುಕೊಳ್ಳುತ್ತಿದ್ದಾರೆ; ಅರಸಿನ ಕುಂಕುಮದಿಂದ ಕಲ್ಯಾಣಿಯನ್ನು ಪೂಜಿಸುತ್ತಿದ್ದಾರೆ. ಗೋವಿಂದ ಗೋವಿಂದ ಎನ್ನುತ್ತಿದ್ದಾರೆ. ಓಲಗ ಛತ್ರಿ ಚಾಮರಗಳೊಂದಿಗೆ ಬಂದಿರುವ ತಿರುನಾರಾಯಣನ ದೇವಾಲಯದ ಪರಿಚಾರಕ, ಆ ಹರಿಜನರು ತನ್ನ ಊರ ಹೊಲಗೇರಿಯವರೇ ಎಂದು ತಿಳಿದಿದ್ದರೂ, ಮಾತನಾಡದೆ ಅವರ ಮಧ್ಯದಲ್ಲಿಯೇ ನೀರಿಗೆ ಇಳಿದು ಬೆಳ್ಳಿಯ ಬಿಂದಿಗೆಯಲ್ಲಿ ದೇವರ ಪೂಜೆಗೆ ತೀರ್ಥವನ್ನು ತೆಗೆದುಕೊಂಡು ದೇವಸ್ಥಾನಕ್ಕೆ ಓಲಗ ಸಮೇತ ಹೋಗುತ್ತಾನೆ. ಅವನ ಜತೆಯಲ್ಲಿ ಅನೇಕ ಹರಿಜನರು ಅವನನ್ನು ಮುಟ್ಟಿಕೊಂಡೇ ಸರಸರನೆ ದೇವಸ್ಥಾನಕ್ಕೆ

ಹೋಗುತ್ತಾರೆ. ದೇವಸ್ಥಾನದ ಬಾಗಿಲಿನಲ್ಲಿ ಅವರನ್ನು ತಡೆಯುವವರು ಯಾರು! ಪ್ರಪಂಚವೇ ಅವರದಾಗಿರುವಂತೆ ಹರಿಜನರಿಗೆ ತೋರುತ್ತದೆ. ಅವರಿಗೆ ಮತ್ತೇನು ತಾನೆ ಬೇಕು? ಯಾದವಗಿರಿಯ ಈ ದೇವಸ್ಥಾನ, ಅವರು ಎರಡು ಫರ್ಲಾಂಗ್ ದೂರದಲ್ಲಿ ನಿಂತು ನೋಡುವುದಕ್ಕೂ ಧೈರ್ಯವಿಲ್ಲದಿದ್ದ ಈ ದೇವಸ್ಥಾನ, ಇದರ ಬಾಗಿಲಿನಲ್ಲಿ ಈ ದಿವಸ ಅವರನ್ನು ತಡೆಯುವವರೇ ಯಾರೂ ಇಲ್ಲವಲ್ಲ! ಸ್ವತಃ ಭಗವಂತನೇ ಅವರನ್ನು ಕೈನೀಡಿ ಕರೆದಂತೆ ಅವರಿಗೆ ಭಾಸವಾಗುತ್ತದೆ. ಅವರ ಜನ್ಮ ಅಂದಿಗೆ ಸಾರ್ಥಕವಾದಂತೆಯೆ. ಒಳಗೆ ಅರ್ಚಕ ಅವರ ಕೈಯಿಂದ ಹಣ್ಣು ಕಾಯಿ ತೆಗೆದುಕೊಳ್ಳುತ್ತಾನೆ. ಅವರಿಗೆ ದೇವರ ತೀರ್ಥವನ್ನು ಕೊಡುತ್ತಾನೆ. ತೀರ್ಥದ ಬಟ್ಟಲಿಗೆ ಎರಡಾಣೆ ನಾಲ್ಕಾಣೆ ಹಾಕಿದವರ ಕತ್ತಿಗೆ ಭಗವಂತನು ಧರಿಸಿದ್ದ ಮಾಲೆಗಳನ್ನು ಹಾಕುತ್ತಾನೆ. ರಾಮಾನುಜ ನಿನ್ನ ಪಾದಕ್ಕೆ ಶರಣು.

*   *   *

ಈ ನಮ್ಮ ಊರಿನ ರಥೋತ್ಸವ; ಇದು ಊರಿಗೇ ಹಬ್ಬ. ನಮ್ಮ ಪ್ರಾಂತಕ್ಕೆ ರಾಷ್ಟ್ರೀಯ ಹಬ್ಬ. ಆದರೆ ಯಾರನ್ನು ನಾವು ಹತ್ತಿರಕ್ಕೆ ಬಂದರೆ ಓಡಿಸಿಕೊಂಡು ಹೋಗುತ್ತೇವೆಯೋ ಆ ಹರಿಜನ ಅಲ್ಲಿ ಬಾರದಿದ್ದರೆ "ಹಾರುವರ ಕೇರಿಯ ತೇಗದ ತೇರು ಯಾರ್ಯಾರು ನೂಕಿದರು ಮಲಕೊಲ್ಲು". ಭಗವಂತನ ಉತ್ಸವಗಳೆಲ್ಲಾ ಆಗಿ ಪಾನಕ ಪನಿವಾರಗಳ ಹಂಚಿಕೆಯೆಲ್ಲ ಆಗಿ ನರಸಿಂಹಸ್ವಾಮಿಗೆ ರಥಾರೋಹಣ ವಾಗಿ "ಆರು ಗಳಿಗೆಯಾಯ್ತು ಏರಿಯ್ಯ ತೇರನು ಹಾರಾಡುತಾವೆ ಹಣ್ಣ ವನ; ಹತ್ತು ಗಳಿಗೆಯಾಯ್ತು ಹತ್ತಯ್ಯ ತೇರನು ಎತ್ತಾಡುತಾವೆ ಹಣ್ಣವನ; ಎತ್ತಾಡು ತಾವೆ ಹಣ್ಣವನ ನರಸಿಂಹ್ನ ಭಾರಿಯ ತೇರು ಹರಿವಾಗ" ಎಂಬುದಾಗಿ ದಾಸಯ್ಯ ಗಳು ಹಾಡುತ್ತಿದ್ದರೂ ಭಕ್ತಾದಿಗಳಾರೂ ತೇರಿನ ಹೊರಜಿಯನ್ನು ಬಂದು ಹಿಡಿಯು ವುದಿಲ್ಲ. ಮುಖಂಡರು ಆಗಾಗ್ಗೆ ಕಿವಿಕೊಟ್ಟು ದೂರಕ್ಕೆ ಆಲಿಸಿ "ಇನ್ನೂ ಇಲ್ಲ" ಎನ್ನುತ್ತಾರೆ. ಇದ್ದಕ್ಕಿದ್ದಂತೆ ಹನ್ನೆರಡು ನಾಮಗಳನ್ನು ಧರಿಸಿದ ನಮ್ಮ ದೇವಸ್ಥಾನದ ಧರ್ಮದರ್ಶಿ, ಹೊದ್ದಿರುವ ಉತ್ತರೀಯವನ್ನು ಸೊಂಟಕ್ಕೆ ಸುತ್ತಿಕೊಂಡು ಸರಸರನೆ ಹೊಲಗೇರಿಗೆ ಹೋಗುತ್ತಾನೆ. ಉಳಿದ ಕಾಲದಲ್ಲಿ ಅವನನ್ನು ಹೊಲಗೇರಿಗೆ ಸೇರಿಸುವುದಿಲ್ಲ. ಆದರೆ ಈಪೊತ್ತು ಯಾವ ನಿಯಮವೂ ಇಲ್ಲ. ಹೊಲೆಯರೆಲ್ಲಾ ಸ್ವಲ್ಪ ಹೆಚ್ಚು ಕಡಮೆ ಸಿದ್ಧವಾಗಿಯೇ ಇರುತ್ತಾರೆ. ಧರ್ಮದರ್ಶಿ ಅವರ ಕೈ ಹಿಡಿದು ಎಳೆಯುತ್ತಾನೆ. ಬಟ್ಟೆ ಪೂರ್ಣವಾಗಿ ಹಾಕಿಕೊಳ್ಳದವನ ಮೈಮೇಲೆ ಬಟ್ಟೆ ಒಗೆಯುತ್ತಾನೆ. ಓಲಗ ತೆಗೆದುಕೊಳ್ಳುವುದು ಸಾವಕಾಶವಾದರೆ ತಾನೆ ಕೈಗೆ ತೆಗೆದುಕೊಂಡು ವಾದ್ಯಗಾರನಿಗೆ ಕೊಡುತ್ತಾನೆ. ಹೊಸ ಬಟ್ಟೆ ಇಲ್ಲವೆನ್ನುವವನಿಗೆ ತನ್ನ ಸೊಂಟದ ಉತ್ತರೀಯವನ್ನೇ ಕಿತ್ತು ಎಸೆದುಬಿಡುತ್ತಾನೆ. ಅಲ್ಲಿಂದ ಹೊಲೆಯರ ಮೆರವಣಿಗೆ ಪ್ರಾರಂಭವಾಗುತ್ತದೆ. ಅವರ ಕೊಂಬು, ವಾದ್ಯ, ತಾಳ, 'ಜಗ್ಗಣಕ ಜಗ್ಗಣಕ'—ಅದು ಕಿವಿಗೆ ಬಿದ್ದ ಕೂಡಲೆ ರಥದ ಸುತ್ತ ಕುಳಿತಿರುವ ಭಕ್ತರ ಹೃದಯಗಳು ವೇಗವೇಗವಾಗಿ ಮಿಡಿಯಲು ಪ್ರಾರಂಭವಾಗುತ್ತವೆ. "ಹೊ ಬಂದರು ಬಂದರು" ಎಂಬ ಮಾತು ಎಲ್ಲೆಲ್ಲೂ ಹರಡುತ್ತದೆ. ಅರ್ಧ ಗಂಟೆ ಒಳಗೆ ಹೊಲೆಯರೆಲ್ಲಾ ರಥದ ಬಳಿ ಬರುತ್ತಾರೆ; ವಾದ್ಯ ಕೊಂಬು ತಮಟೆಯೊಂದಿಗೆ

ಮೂರು ಸುತ್ತು ರಥವನ್ನು ಪ್ರದಕ್ಷಿಣೆ ಮಾಡುತ್ತಾರೆ. ತೀರ್ಥಪ್ರಸಾದ ತೆಗೆದು ಕೊಳ್ಳುತ್ತಾರೆ. ಹಾರ ಹಾಕಿಸಿಕೊಳ್ಳುತ್ತಾರೆ. ಅವರ ಮುಗ್ಗುಲಲ್ಲಿ, ಅವರ ಸುತ್ತ ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರ; ಆಹೊತ್ತಿನವುಟ್ಟಿಗೆ ಎಲ್ಲರಂತೆ ಹರಿಜನರೂ ಮನುಷ್ಯರೆ.

ರಾಮಾನುಜಾಚಾರ್ಯರು ಮನುಷ್ಯ ಸಮಾಜಕ್ಕೆ ಮಾಡಿದ ಮಹೋಪಕಾರ ಈ ಹರಿಜನೋದ್ಧಾರವೆ. ಆಗಿನ ಸಮಾಜದ ಸ್ಥಿತಿಯಲ್ಲಿ ಹರಿಜನರನ್ನು ಮನುಷ್ಯ ರೆಂದೇ ಯಾರೂ ಗಣಿಸಿರಲಿಲ್ಲ. ಉಳಿದವರ ಮಾತು ಇರಲಿ. ಸ್ವತಃ ಹರಿಜನರಿಗೇ ತಾವೂ ಇತರರಂತೆ ಮನುಷ್ಯರು; ಸರ್ವಾಂತರ್ಯಾಮಿಯಾದ ಭಗವಂತ ತಮ್ಮಲ್ಲೂ ನೆಲಸಿದ್ದಾನೆ; ಮನುಷ್ಯ ಸಾಮಾನ್ಯಕ್ಕೆ ಇರುವ ಹಕ್ಕುಬಾಧ್ಯತೆಗಳು ತಮಗೂ ಇವೆ; ಎಂಬ ತಿಳಿವಳಿಕೆ ಬಂದಿರಲಿಲ್ಲ. ಆ ತಿಳಿವಳಿಕೆ ಬರಲು ಮೇಲಿನ ವರ್ಣದವರು ಅವಕಾಶವನ್ನು ಕೊಟ್ಟಿರಲಿಲ್ಲ. ಹರಿಜನರು ನಮ್ಮವರೇ ಆದರೂ ಕಾಡುಜನ ರಂತೆಯೇ ಇದ್ದರು. ಅವರ ಮಾರಿ ಜಾತ್ರೆಗಳೇನು! ಕೋಣ ಕುರಿಗಳ ಬಲಿಗಳೇನು! ಊರು ಊರಿಗೂ ಚಂಡಿ ಉಡಸಲಮ್ಮ ಮುಂತಾದ ಲಂಚಕೋರ ದೇವತೆಗಳೇನು! ಕೇವಲ ಯಾವುದೋ ವಿಧವಾದ ಭಯದಿಂದ, ಆಸೆಯಿಂದ, ಮೌಢ್ಯದಿಂದ ಈ ರಣದೇವತೆಗಳನ್ನು ಪೂಜೆಮಾಡುತ್ತಿದ್ದ ಹರಿಜನರಿಗೆ, ನಿಜವಾಗಿ ಜಗತ್ತಿನ ಸತ್ಯವಾದ ಪರಾತ್ಪರ ವಸ್ತು ಒಂದು ಇದೆ; ಅದರ ಒಂದು ಕಿಡಿ ಅವರಲ್ಲೂ ಇದೆ ಎಂದು ಯಾರೂ ಹೇಳಲಿಲ್ಲ. ಆಚಾರ್ಯರ ವೇದಾಂತ ತತ್ವಗಳನ್ನು ಈ ದೃಷ್ಟಿಯಿಂದ ಹೀಗೆ ಹೇಳಬಹುದು: "ಭಗವಂತ ನಿಜ. ನಾವೆಲ್ಲಾ, ಜಗತ್ತಿನ ಚರಾಚರಗಳಾದ ಸಮಸ್ತ ವಸ್ತುಗಳೂ, ಅವನ ಭಾಗಗಳು. ಅವನಿಂದ ಬಂದವರು. ಇಲ್ಲಿ ಇರುವ ಪ್ರತಿಯೊಬ್ಬನಲ್ಲೂ, ಅವನು ಎಷ್ಟೇ ಅಲ್ಪನಾಗಿರಲಿ ಆ ಭಗವದಂಶ ಇದೆ. ಅವನ್ನು ಪ್ರಚೋದನಗೊಳಿಸಿದರೆ ಅವನ ಮನಸ್ಸು ಭಗವಂತನ ಕಡೆಗೆ ತಿರುಗುತ್ತದೆ. ಮನುಷ್ಯಪ್ರಾಣಿ ಉದ್ಧಾರವಾಗಬೇಕಾದರೆ ಅವನ ಮನಸ್ಸು ಭಗವಂತನ ಕಡೆಗೆ ತಿರುಗಬೇಕಾದುದು ಆವಶ್ಯಕ. ಇದಕ್ಕೆ ದೊಡ್ಡವರು ಚಿಕ್ಕವರು ಭೇದವಿಲ್ಲ. ಆದರೆ ಹರಿಜನರೊ? ಇವರು ನಮ್ಮವರೇ ಆದರೂ ಇವರ ಮನಸ್ಸು ಭಗವಂತನ ಕಡೆ ತಿರುಗಲಿಲ್ಲ. ಇವರಿಗೆ ಲಂಚಕೋರ ದೇವತೆಗಳನ್ನು ಪೂಜಿಸುವುದರ ಹೊರತು ನಿಜವಾದ ಭಕ್ತಿ ಎಂಬುದು ಉಂಟಾಗಲಿಲ್ಲ. ಆದುದರಿಂದ ಆ ಭಕ್ತಿಯನ್ನು ಇವರಲ್ಲೂ ಉಂಟುಮಾಡಬೇಕು. ಇವರು ಎಷ್ಟೇ ಅಲ್ಪರಾದರೂ ಭಗವಂತನ ಸೃಷ್ಟಿಯಲ್ಲಿ ಭಾಗವಾದುದರಿಂದ ನನ್ನೊಂದಿಗೇ ಸಮಾನರು." ಈ ಸೃಷ್ಟಿಯನ್ನೆಲ್ಲಾ ತನ್ನ ಜೀವದ ಭಾಗ ಎಂದು ತಿಳಿದುಕೊಂಡು ಅವರೊಂದಿಗೆ ಒಂದಾಗಿ ಅವನ್ನೂ ಉನ್ನತಿಗೆ ತೆಗೆದುಕೊಂಡುಹೋಗುವ ಈ ಹೃದಯ ವೈಶಾಲ್ಯವೇ ಆಧುನಿಕರಾದ ನಮಗೆ ಆಚಾರ್ಯರ ತತ್ವಗಳ ಮುಖ್ಯ ತಿರುಳು.

ರಾಮಾನುಜಾಚಾರ್ಯರು ಕರುಣಾಶಾಲಿ. ಅವರ ಕರುಣೆಗೆ ಹೊರಗಾಗುವಷ್ಟು ತೃಣವಾದ ನಿಕೃಷ್ಟವಾದ ಕೀಳಾದ ವಸ್ತು ಜಗತ್ತಿನಲ್ಲಿ ಯಾವುದೂ ಇಲ್ಲ. ಅವರ ಆ ಕರುಣೆಯಿಂದಲೇ, ಹರಿಜನರ ವಿಚಾರದಲ್ಲಿ ಅನೇಕ ಶತಮಾನಗಳಿಂದ ಇದ್ದ ತಿರಸ್ಕಾರ ಕಡಮೆಯಾಯಿತು. ಅವರ ಆ ಕರುಣೆಯ ಪ್ರಭಾವದಿಂದಲೇ ಹರಿಜನರಿಗೆ

ತಾವೂ ಮನುಷ್ಯರೆಂಬ ತಮ್ಮಲ್ಲೂ ದೇವತ್ವವಿರುವುದೆಂಬ ಭಾವ ಉಂಟಾಯಿತು. ಇಂತಹ ಒಂದು ಭಾವ ಒಂದು ಜನಾಂಗಕ್ಕೆ ಉಂಟಾಯಿತೆಂದರೆ ತೀರಿತು. ಅದು ಅದರ ಜೀವನದ ಸಮಸ್ತ ಭಾಗಕ್ಕೂ ಬೆಳಕನ್ನು ಬೀರಿ ಆ ಜೀವನವನ್ನು ಮಾರ್ಪಡಿಸುತ್ತದೆ. ಇಂದು ಹರಿಜನರ ಜೀವನ ಮಾರ್ಪಾಡಾಗಿರುವುದೂ ಹೀಗೆಯೆ. ಆದರೆ ಅನೇಕ ಶತಮಾನಗಳಿಂದ ನಡೆದುಕೊಂಡುಬಂದಿರುವ ಪದ್ಧತಿಗಳನ್ನು ಬದಲಾಯಿಸುವುದಕ್ಕೆ ಜಗತ್ಪೂಜ್ಯರಾದ ಆಚಾರ್ಯರಂತಹವರೇ ಬರಬೇಕಲ್ಲದೆ ಸಣ್ಣಪುಟ್ಟ ಸುಧಾರಕರಿಂದ ಸಾಧ್ಯವಿಲ್ಲ. ಕನ್ನಡ ನಾಡಿನಲ್ಲಿ ಆಚಾರ್ಯರು ಸಂಚರಿಸಿದ ಸ್ಥಳಗಳಲ್ಲಿ ನಾವು ಹೋದರೆ, ಯಾದವಗಿರಿಗೆ ಹೋದರೆ, ಅಲ್ಲಿಯ ಪ್ರತಿ ಅಡಿಯ ನೆಲದಲ್ಲೂ ರಾಮಾನುಜರ ಹೆಜ್ಜೆಯ ಗುರುತು ಕಾಣುತ್ತದೆ. ಅಲ್ಲಿಯ ವಾತಾವರಣದಲ್ಲಿ ಅವರ ಜೀವನದ ಸುಗಂಧ ಹರಡಿಕೊಂಡಿದೆ. ಆ ಕ್ಷೇತ್ರಕ್ಕೆ ಕಾಲಿಟ್ಟ ಕೂಡಲೇ, ಹೂವು ಮರೆಯಲ್ಲಿದ್ದರೂ ಅದರ ಸುಗಂಧ ಮಾತ್ರ ನಮಗೆ ಬರುವಂತೆ, ಮಹವ್ಯಕ್ತಿ ಸಂಚರಿಸಿದ, ಲೋಕೋಪಕಾರ ಮಾಡಿದ ಸ್ಥಳಕ್ಕೆ ನಾವು ಬಂದಿರುವುದು ನಮಗೆ ಗೊತ್ತಾಗುತ್ತದೆ. ಮಹಾತ್ಮರ ಸಾನ್ನಿಧ್ಯದಲ್ಲಿ ನಮ್ಮ ಜೀವ ಪವಿತ್ರವಾಗುವಂತೆ, ನಮ್ಮ ಬಾಳು ಪೂರ್ಣವಾಗುವಂತೆ, ಯಾದವಗಿರಿಗೆ ಹೋದ ಕೂಡಲೇ, ಸಾಲಿಗ್ರಾಮಕ್ಕೆ ಹೋದ ಕೂಡಲೇ, ರಾಮಾನುಜರ ಸಾನ್ನಿಧ್ಯದಿಂದ ನಮ್ಮ ಜೀವ ಸಾತ್ವಿಕತೆಗೆ ಏರುತ್ತದೆ. ಮಹಾತ್ಮರು ಹೇಗೆ ಲೋಕದಲ್ಲಿ ಅವತಾರ ಮಾಡುವುದು ಅನೇಕ ಶತಮಾನಗಳಿಗೆ ಒಂದು ಸಲವೋ, ಹಾಗೆಯೇ ಅವರ ಮಹಿಮೆ ಅವರ ಕಾಲದ ನಂತರ ಅನೇಕ ಶತಮಾನಗಳವರೆಗೆ ಜನತೆಯ ಬಾಳನ್ನು ತಿದ್ದುತ್ತಾ ಹೋಗುತ್ತದೆ. ಯಾದವಗಿರಿ, ಶ್ರೀರಂಗ, ಸಾಲಿಗ್ರಾಮ ಇವು ಸುಮಾರು ಏಳು ನೂರು ವರುಷಗಳಿಂದ ತಮ್ಮ ಪಾವಿತ್ರ್ಯತೆಗಳನ್ನು ಕಾಪಾಡಿಕೊಂಡುಬಂದಿರಲು ಆಚಾರ್ಯರಂತಹ ಜಗತ್ಪೂಜ್ಯರು ಅಲ್ಲಿ ನೆಲಸಿ ಲೋಕಕಲ್ಯಾಣವನ್ನು ಮಾಡಿರುವುದೇ ಕಾರಣ. ಒಟ್ಟಿನಲ್ಲಿ ಒಂದು ಕ್ಷೇತ್ರದ ಪವಿತ್ರತೆಗೆ ಮಹಿಮೆಗೆ ಅಲ್ಲಿ ಬಂದು ನೆಲಸುವ ಗುರುಗಳು ಮಾಡುವ ಜನತೆಯ ಉದ್ಧಾರ ಕಾರ್ಯವೇ ಕಾರಣವಾಗುತ್ತದೆ. ಆ ಕ್ಷೇತ್ರದ ಪವಿತ್ರತೆಯೇ ಆ ಕ್ಷೇತ್ರದಲ್ಲಿ ನಮ್ಮ ಪ್ರೀತಿಯನ್ನೂ ಭಕ್ತಿಯನ್ನೂ ಬೆಳಸುತ್ತದೆ. ಈ ಪ್ರೀತಿ ಮತ್ತು ಭಕ್ತಿಯೇ ಮತ್ತೊಂದು ದೃಷ್ಟಿಯಿಂದ ನಮ್ಮ ದೇಶಪ್ರೇಮ. ಹಾಗಲ್ಲದಿದ್ದರೆ ಯಾದವಗಿರಿಯಂತಹ ಮಲೆಯ ಮೇಲಿನ ಕುಗ್ರಾಮಗಳು ನಮ್ಮಲ್ಲಿ ಎಷ್ಟು ಇಲ್ಲ? ಅವುಗಳ ಜತೆಯಲ್ಲಿ ಇದೂ ಒಂದು ಆಗಿಬಿಡುತ್ತಿದ್ದಿತು.

ರಾಮಾನುಜಾಚಾರ್ಯರದು ಬಹಳ ದೊಡ್ಡ ಜೀವ. ಕನ್ನಡ ನಾಡಿನ ಹರಿಜನರ ಜೀವನದಲ್ಲಿ ಅವರು ಮಾಡಿದ ಮಾರ್ಪಾಡು ಅದ್ಭುತ. ಅವರ ಹೃದಯವೈಶಾಲ್ಯವು ಬಾಲ್ಯದಲ್ಲಿ ಅವರು ಗುರುವಿನ ಮಾತನ್ನು ಕೇಳದೆ ಜಗತ್ಕಲ್ಯಾಣಕ್ಕಾಗಿ ''ಓಂ ನಮೋ ನಾರಾಯಣಾಯ'' ಎಂಬ ಮಂತ್ರವನ್ನು ಲೋಕಕ್ಕೆಲ್ಲ ಕೇಳಿಸುವಂತೆ ಕೂಗಿದಾಗಲೇ ವ್ಯಕ್ತವಾಯಿತು. ''ಶಂಕರಾಚಾರ್ಯರ ಬುದ್ಧಿಶಕ್ತಿಯೂ ರಾಮಾನುಜರ ಹೃದಯವೈಶಾಲ್ಯವೂ ಇರುವ ಧರ್ಮವೇ ನಿಜವಾದ ಧರ್ಮ'' ಎಂದು ಪಾಶ್ಚಾತ್ಯರು ಒಬ್ಬರು ಹೇಳಿರುವುದು ನಿಜ. ಇಂದಿನ ನಮಗೆ ತಿಳಿದ ಮಟ್ಟಿಗೆ ರಾಮಾನುಜಾಚಾರ್ಯರ

ವೇದಾಂತವನ್ನೆಲ್ಲಾ ಅವರ ಈ ಹರಿಜನೋದ್ಧಾರ ಒಂದರಿಂದಲೇ ಹಿಡಿಸ ಬಹುದು. "ನ ಕರ್ಮಣಾ, ನ ಪ್ರಜಯಾ, ಧನೇನ, ತ್ಯಾಗೇನ". ಇವುಗಳು ಯಾವುದರಿಂದಲೂ ಪರತತ್ವವನ್ನು ತಿಳಿಯಲು ಸಾಧ್ಯವಿಲ್ಲ. ಆದರೆ "ವೇದಾಂತ ವಿಜ್ಞಾನ ಸುನಿಶ್ಚಿತಾರ್ಥ ಸಂನ್ಯಾಸ ಯೋಗದಿಂದ" ಮಾತ್ರ ಭಗವಂತನನ್ನೂ ಪರತತ್ವವನ್ನೂ ಗ್ರಹಿಸಬಹುದು. ಈ ಸುನಿಶ್ಚಿತಾರ್ಥವೇ ಭಗವಂತನ ಸಮಸ್ತ ಸೃಷ್ಟಿಯೊಂದಿಗೂ ತಾನೂ ಒಂದೆಂದು ಅರಿಯುವುದು. ಈಚೆಗೆ ಬಂದ ಎಲ್ಲಾ ಸಂಘಸಂಸ್ಥಾಪಕರಿಗೂ ರಾಮಾನುಜರೇ ಗುರುಗಳು. ಆದರೆ ಅವರಾರೂ ಆಚಾರ್ಯರನ್ನು ಸ್ಮರಿಸಿದಂದ, ಎದೆಗಾರಿಕೆಯಿಂದ ಈ ಕೆಲಸವನ್ನು ಕೈಕೊಂಡಿಲ್ಲ.

ಹಿಂದೂ ದೇಶದಲ್ಲಿ ಹುಟ್ಟಿ ಬೆಳೆದು ಬೆಳೆಯುತ್ತಿರುವ ಎಲ್ಲಾ ಭಕ್ತಿ ಪಂಥಗಳಿಗೂ ರಾಮಾನುಜಾಚಾರ್ಯರೇ ಮೂಲಪುರುಷರು. ಭಕ್ತನಿಗೆ ಭಗವಂತನ ರೂಪ ಯಾವಾಗಲೂ ಎದುರಿಗೇ ಕಣ್ಣಿಗೆ ಕಟ್ಟಿರುತ್ತದೆ. ಆಚಾರ್ಯರು ಭಗವಂತನ ರೂಪವನ್ನು ಬಹು ಮನೋಹರವಾಗಿ ವರ್ಣಿಸಿದ್ದಾರೆ.

"ಕರಗಿದ ಸುವರ್ಣಪರ್ವತದಂತೆ ಕಾಂತಿಯುಳ್ಳವನು, ಸಹಸ್ರಾಂಶು ಶತ ಸಹಸ್ರ ಕಿರಣನು, ಆಳವಾದ ನೀರಿನಲ್ಲಿ ಬೆಳೆದಿರುವ ಕಮಲವನ್ನು ಸೂರ್ಯ ಕಿರಣಗಳು ವಿಕಸಿತಮಾಡಿದಾಗ ಅದರ ಎಸಳುಗಳಂತೆ ಇರುವ ನೇತ್ರಗಳುಳ್ಳವನು, ಮನೋಹರವಾದ ಹುಬ್ಬುಗಳುಳ್ಳವನು, ಸುಸ್ಮಿತವಾದ ಅಧರಗಳುಳ್ಳವನು, ಚೆಲುವಾದ ಕಪೋಲಗಳುಳ್ಳವನು, ಶಂಖದಂತೆ ಕೊರಳುಳ್ಳವನು, ದಿವ್ಯವಾದ ಕರ್ಣಗಳೂ ಆಯತವಾದ ಭುಜಗಳೂ ಉಳ್ಳವನು, ರಕ್ತವರ್ಣದ ಅಂಗುಲಿಗಳುಳ್ಳವನು, ತನುಮಧ್ಯನೂ, ವಿಶಾಲವಕ್ಷನೂ, ಬೇಕಾದ ಅಳತೆಗೆ ಸರಿಯಾಗಿರುವ ಸಮಸ್ತ ಅಂಗಗಳುಳ್ಳವನೂ, ನಿರ್ದೇಶಿಸಲು ಸಾಧ್ಯವಿಲ್ಲದಂತಹ ದೇವರೂಪನೂ, ಸ್ನಿಗ್ಧವರ್ಣನೂ, ಅರಳಿರುವ ಕಮಲದಂತಹ ಚರಣಯುಗಳನೂ, ತನ್ನ ರೂಪಿಗೆ ಅರ್ಹವಾದ ಪೀತಾಂಬರವನ್ನು ಧರಿಸಿದವನೂ, ಅನೇಕ ಆಭರಣಾಲಂಕೃತನೂ, ಅತಿಶಯವಾದ ಸೌಂದರ್ಯದಿಂದ ಎಲ್ಲರ ಮನಸ್ಸನ್ನೂ ಆಕರ್ಷಿಸಿರುವವನೂ, ಸಮಸ್ತ ವಸ್ತುಗಳನ್ನೂ ತನ್ನ ಲಾವಣ್ಯದಿಂದ ತುಂಬುವವನೂ, ಅದ್ಭುತವೂ ಅಂಚಿತ್ಯವೂ ಆದ ನಿತ್ಯ ಯೌವನವುಳ್ಳವನೂ, ಪುಷ್ಪದ ಹಾಸದಂತೆ ಕೋಮಲನೂ, ದಿಗಂತಗಳನ್ನೂ ಪುಣ್ಯಗಂಧದಿಂದ ತುಂಬುವವನೂ, ಸ್ವಭಾವದಿಂದಲೇ ಮೂರು ಲೋಕಗಳನ್ನೂ ಅತಿಕ್ರಮಿಸಿದವನೂ, ಭಕ್ತರಲ್ಲಿ ಕರುಣ ಅನುರಾಗಪೂರ್ಣನೂ, ಪುರುಷಶ್ರೇಷ್ಠನೂ, ಜಗತ್ತಿನ ಸೃಷ್ಟಿ ಸ್ಥಿತಿ ಲಯವೇ ಲೀಲೆಯಾದವನೂ, ತನ್ನಲ್ಲಿ ಯಾವುದೂ ಹೇಯವೇ ಇಲ್ಲದವನೂ, ಎಲ್ಲಾ ಕಲ್ಯಾಣಗುಣ ಪರಿಪೂರ್ಣನೂ ತಾನಲ್ಲದ ಇತರ ಸಮಸ್ತ ವಸ್ತುಗಳಿಂದಲೂ ವಿಲಕ್ಷಣನಾದವನೂ ಪರಮಾತ್ಮನೂ ಆದವನೇ ಪರಬ್ರಹ್ಮ ನಾರಾಯಣನು." *

* ತಪ್ತ ಕಾರ್ತಸ್ವರ ಗಿರಿವರಪ್ರಭಃ, ಸಹಸ್ರಾಂಶು ಶತ ಸಹಸ್ರ ಕಿರಣಃ, ಗಂಭೀರಾಂಭಃ ಸಮುದ್ಭೂತ ಸುಮೃಷ್ಟನಾಳ ರವಿಕರ ವಿಕಸಿತ ಪುಂಡರೀಕದಳಾಮಲಾಯತೇಕ್ಷಣಃ, ಸುಭ್ರೂ ಲಲಾಟಃ, ಸುನಾಸಃ, ಸುಸ್ಮಿತಾಧರ ವಿದ್ರುಮಃ, ಸುರುಚಿರ ಕೋಮಲ ಗಂಡಃ, ಕಂಬುಗ್ರೀವಃ, ದಿವ್ಯಕರ್ಣಕಿಸಲಯಃ, ಪೀನ ವೃತ್ತಾಯತ ಭುಜಃ, ಚಾರುತರಾತಿ ತಾಮ್ರ ಕರತಲಾನುರಕ್ತಾಂಗುಲೀಭಿರಲಂಕೃತಃ, ತನುಮಧ್ಯಃ ವಿಶಾಲ ವಕ್ಷಸ್ಥಲಃ, ಸಮವಿಭಕ್ತ ಸರ್ವಾಂಗಃ ಅನಿರ್ದೇಶ್ಯ ದಿವ್ಯರೂಪಸಂಹನನಃ, ಸ್ನಿಗ್ಧವರ್ಣಃ, ಪ್ರಬುದ್ಧ

ಇಂತಹ ಪರಬ್ರಹ್ಮನನ್ನು, ಸುಂದರಪುರುಷನನ್ನು ಪ್ರೀತಿಸದೆ ಇರಲು ಯಾರಿಗೆ ತಾನೆ ಸಾಧ್ಯ? ಆ ಪ್ರೀತಿಯೇ ಭಕ್ತಿ. ಅದೇ ಮುಕ್ತಿಯ ದಾರಿ. ಈ ಭಕ್ತಿಯ ಮುಕ್ತಿಯ ದಾರಿಯನ್ನು ಅನುಸರಿಸುವವರು ಸ್ವಾಭಾವಿಕವಾಗಿ "ತಾವು ಎಷ್ಟರವರು, ತಮ್ಮ ಪಾಪ ದೊಡ್ಡದು, ತಾವು ಅಲ್ಪರು" ಎಂಬ ಅಭಿಪ್ರಾಯವನ್ನೇ ಹೊಂದಿರುತ್ತಾರೆ. ಆಳವಂದಾರ್ ಅವರು ಕೇವಲ ಜ್ಞಾನಿಗಳೇ ಆದರೂ, "ಅಮರ್ಯಾದಃ, ಕ್ಷುದ್ರಃ, ಕೃತಘ್ನಃ, ದುರ್ಮಾನಿ, ಸ್ಮರಪರವಶೋ, ವಂಚನಪರಃ" ಎಂದು ಮುಂತಾಗಿ ಹೇಳಿಕೊಂಡು ಭಗವಂತನಿಗೆ ನಮಸ್ಕಾರ ಮಾಡುತ್ತಿರುವಾಗ, ಅವರಿಗೆ ಆಗದವರು ಯಾರೋ "ನೋಡು! ಅವನ ಯೋಗ್ಯತೆಯನ್ನು ಅವನೇ ಹೇಳಿಕೊಳ್ಳುತ್ತಿದ್ದಾನೆ" ಎಂದರೆಂದೂ, ಆಳವಂದಾರ್ ಅವರು ಆಗ ಭಗವಂತನಿಗೆ "ನೋಡು ಸ್ವಾಮಿ! ನಾನೊಬ್ಬನೇ ಅಲ್ಲ; ಸಾಕ್ಷಿಯನ್ನು ಕೂಡ ಕರೆತಂದಿದ್ದೇನೆ" ಎಂದು ಹೇಳಿದರೆಂದೂ ಒಂದು ಕತೆಯಿದೆ. ಹೀಗೆ ನೈಚ್ಯಾನುಸಂಧಾನ ಮಹಾತ್ಮರಾದವರೆಲ್ಲರ ಪದ್ಧತಿಯೇ ಆಗಿದೆ. ರಾಮಾನುಜರ ಭಕ್ತಿಮಾರ್ಗವನ್ನು ಅನುಸರಿಸಿದ ಅವರಿಗಿಂತ ಹಿಂದಲ ಮುಮುನಿಯರೂ ಈ ದಾರಿಯಲ್ಲಿ ತಮ್ಮ ಅನುಭವವನ್ನು ಹೇಳಿದ್ದಾರೆ.

"ಕಳ್ಳನು ನಾನು. ಕೆಡುಕು ಮಾಡಿದ್ದೇನೆ. ಕಂಡ ವಿಷಯಕ್ಕೆ ಅಲೆದಿದ್ದೇನೆ. ನಿಜ. ಆದರೂ ತಿಳಿದವನಾದೆನು. ಉದ್ಧಾರವಾಗುವ ಮಾರ್ಗವನ್ನು ಸೇರಿದೆನು. ಬೇಗನೆ ದೇವರ ಅನುಗ್ರಹವನ್ನು ಪಡೆದೆನು. ಒಳಗೆಲ್ಲ ಕರಗಿ ಕೊರಲು ಸಡಿಲವಾಗಿ ದನಿಗೆಟ್ಟು ಮೈಯೆಲ್ಲ ಕಣ್ಣೀರು ಸೇರಿರಲು, ಕಗ್ಗತ್ತಲ ರಾತ್ರಿಯಲ್ಲಿ ಹಗಲಲ್ಲಿ ನಾನು ಕರೆಯುತ್ತಿರುವೆನು ನಾರಾಯಣಾ ಎಂಬ ಹೆಸರನ್ನು.

"ಕಲೆಗಳನ್ನು ಕಲಿತವನಲ್ಲ ನಾನು; ಐದು ಪೊಲನು ಎಳಸುವ ಆಸೆಗಳಿಗೆ ಮನವನ್ನು ತಿರುಗಿಸಿದೆನು; ದೀನನಾದ ನಾನು ಈ ಕಾರಣದಿಂದ ನಲ್ಮೆಯನ್ನು ಪಡೆಯದಾದೆನು; ವಿಸ್ತಾರವಾದ ಈ ಭೂಮಿಯ ಅನೇಕ ಜೀವಿಗಳಿಗೆ ಕೆಟ್ಟದ್ದನ್ನೇ ಪ್ರಾರ್ಥಿಸಿ ತಿರುಗುತ್ತಿದ್ದೆನು. ಹೀಗಿದ್ದು ನಾನು ಪಾರ್ಪಟ್ಟೆನು. ಒಳ್ಳೆಯ ಗತಿಗೆ ಬಾಳಿಸುವ ದಾರಿಯನ್ನು ಚಿಂತಿಸಿ ಒಳ್ಳೆಯ ನೆಲೆಯೆಂದು ಹಿಡಿದೆನು, ದಾಸನಾದ ನಾನು ನಾರಾಯಣಾ ಎಂಬ ಹೆಸರನ್ನು.

"ಕುಲವನ್ನು ಕೊಡುವ, ಸಿರಿಯನ್ನು ತಂದಿಡುವ, ನಂಬಿದವರು ಪಡುವ ದೂಸರನೆಲ್ಲ ನೆಲಮಟ್ಟಮಾಡುವ, ಉನ್ನತ ಸ್ಥಿತಿಯನ್ನು ಅನುಗ್ರಹಿಸುವ, ಅನುಗ್ರಹದೊಡನೆ ಹಿರಿಯ ಪದವಿಯನ್ನು ಕೊಡುವ, ಬಲವನ್ನು ನೀಡುವ, ಇನ್ನೆಲ್ಲ

---

ಪುಂಡರೀಕ ಚಾರುಚರಣಯುಗಳಃ, ಸ್ವಾನುರೂಪ ಪೀತಾಂಬರಧರಃ, ಅಮಲ ಕಿರೀಟ ಕುಂಡಲ ಹಾರ ಕೌಸ್ತುಭ ಕೇಯೂರ ಕಟಕ ನೂಪುರೋದರಬಂಧನಾದ್ಯಪರಿಮಿತಾಶ್ಚರ್ಯಾಂತ ದಿವ್ಯ ಭೂಷಣಃ, ಶಂಖ ಚಕ್ರ ಗದಾಸಿ ಶಾರ್ಙ್ಗ ಶ್ರೀವತ್ಸ ವನಮಾಲಾಲಂಕೃತಃ, ಅನವಧಿಕಾತಿಶಯ ಸೌಂದರ್ಯಾಹೃತಾಶೇಷ ಮನೋದೃಷ್ಟಿ ವೃತ್ತಿಃ, ಲಾವಣ್ಯಾಮೃತ ಪೂರಿತಾಶೇಷ ಚರಾಚರ ಭೂತಜಾತಃ, ಅತ್ಯದ್ಭುತಾಚಿಂತ್ಯ ನಿತ್ಯಯೌವನಃ, ಪುಷ್ಪಹಾಸ ಸುಕುಮಾರಃ, ಪುಣ್ಯ ಗಂಧ ವಾಸಿತಾನಂತ ದಿಗಂತರಾಲಃ, ತ್ರೈಲೋಕ್ಯಾಕ್ರಮಣ ಪ್ರವೃತ್ತ ಗಂಭೀರ ಭಾವಃ, ಕರುಣಾನುರಾಗ ಮಧುರ ಲೋಚನಾಶ್ರಿತ ವರ್ಗಃ, ಪುರುಷವರಃ, ನಿಖಿಲ ಜಗದುದಯ ವಿಭವ ಲಯ ಲೀಲ; ನಿರಸ್ತ ಸಮಸ್ತ ಹೇಯಃ, ಸಮಸ್ತ ಕಲ್ಯಾಣ ಗುಣನಿಧಿಃ, ಸ್ವೇತರ ಸಮಸ್ತ ವಸ್ತು ವಿಲಕ್ಷಣಃ, ಪರಮಾತ್ಮಾ, ಪರಬ್ರಹ್ಮ ನಾರಾಯಣಃ.

ವನ್ನೂ ತಂದಿಡುವ, ಹೆತ್ತ ತಾಯಿಗಿಂತ ಹೆಚ್ಚಿನ ಹಿತವನ್ನು ಗೆಯ್ಯುವ, ಆನಂದವನ್ನು ತರುವ, ಸೊಲ್ಲ ಕಂಡುಕೊಂಡೆನು ನಾನು ನಾರಾಯಣಾ ಎಂಬ ಹೆಸರನ್ನು."*

ನಮಗೆ ಆವಶ್ಯಕವಾದ ಮಟ್ಟಿಗೆ, ಭಕ್ತರಿಗೆ ಆವಶ್ಯಕವಾದ ಮಟ್ಟಿಗೆ ಈ ಮೇಲಿನ ಆಳ್ವಾರುಗಳಿಂದ ಪ್ರತಿಪಾದಿತವಾದ ಪ್ರಪತ್ತಿ ಭಕ್ತಿಮಾರ್ಗವೇ ರಾಮಾನುಜಾಚಾರ್ಯರು ಹೇಳಿದ ಭಗವಂತನನ್ನು ಮುಟ್ಟುವ ದಾರಿ. ಇದು ಯಾವ ಒಂದು ಪಂಥಕ್ಕೂ ಒಂದು ಮತ ಪಂಗಡಕ್ಕೂ ಮಾತ್ರ ಅನ್ವಯಿಸು ವುದಲ್ಲ. ಇದು ವಿಶ್ವದ ಧರ್ಮ. ಈ ಸತ್ಯ, ಈ ಧರ್ಮ ಒಂದೇ ಸಮನಾಗಿ ಎಲ್ಲಾ ಕಾಲಕ್ಕೂ ಎಲ್ಲಾ ದೇಶಗಳಿಗೂ ಅನ್ವಯಿಸುತ್ತದೆ. ಭಗವಂತನ ಕರುಣೆಗೆ ಹೊರಗಾದವರಿಲ್ಲ. ಹರಿಜನರೂ ಹೊರಗಾದವರಲ್ಲ. ಅವರನ್ನೂ ನಮ್ಮಂತೆ ನಮ್ಮ ಜತೆಯಲ್ಲಿ ತೆಗೆದುಕೊಂಡುಹೋಗಬೇಕು ಎಂಬುದೆ ರಾಮಾನುಜಾಚಾರ್ಯರ ಜೀವನದ ಮುಖ್ಯ ತತ್ವವೆಂದು ನಾವು ಗ್ರಹಿಸಬಹುದು.

ನಮ್ಮ ನಾಡು ಎಚ್ಚತ್ತು ಹೊಸ ಬಾಳ ಬೆಳಕನ್ನು ಕಾಣುತ್ತಿದೆ. ರಾಮಾನು ಜಾಚಾರ್ಯರ ಪ್ರತಿನಿಧಿಗಳೇ ಆದ ಮಹಾತ್ಮಾ ಗಾಂಧಿಯವರೂ, ದಿವಂಗತ ಕವಿ ರವೀಂದ್ರರೂ ಜಗತ್ತಿನ ಮಂಗಳವು ಭಾರತ ಸಂಸ್ಕೃತಿಯಿಂದ ಎಂದು ಪ್ರಪಂಚಕ್ಕೇ ಸಾರಿದ್ದಾರೆ. ಆ ಎಚ್ಚತ್ತ ಭಾರತದ ಫಲವಾಗಿ ಕನ್ನಡ ನಾಡು ತನ್ನ ಸ್ವರೂಪ ವನ್ನು ತಾನು ಕಂಡುಕೊಳ್ಳುತ್ತಿದೆ. ಭಾರತವು ಕೈಕೊಂಡಿರುವ ಜಗತ್ಕಲ್ಯಾಣದ ಈ ತಪಸ್ಸಿದ್ಧಿಗೆ ಕನ್ನಡ ನಾಡು ಈ ಮೂಲಕ ತನ್ನ ಭಾಗವನ್ನು ಸಲ್ಲಿಸಲಿ. ಭಾರತ ಸಂಸ್ಕೃತಿಯನ್ನು ಬೆಳಸಲು ಇದು ಕನ್ನಡ ನಾಡಿನವರ ಸಂಭಾವನೆಯಾಗಲಿ.

ವಂದೇ ರಾಮಾನುಜಂ

**ಗೊರೂರು ರಾಮಸ್ವಾಮಿ ಐಯಂಗಾರ್**

---

* ಶ್ರೀ ಮಾಸ್ತಿ ವೆಂಕಟೇಶ ಅಯ್ಯಂಗಾರರ 'ತಮಿಳು ವೈಷ್ಣವ ಪ್ರಬಂಧಗಳು' ಎಂಬುದರಿಂದ.

# ವಿಶ್ವಮತ ತತ್ವ

೧

ನಾವು ಒಂದು ವಸ್ತುವನ್ನು ಒಂದು ಕಡೆಯಿಂದ ನೋಡಿದರೆ ನಮಗೆ ಅದರ ಒಂದು ಪಾರ್ಶ್ವ ಮಾತ್ರ ಕಾಣಿಸುವುದು. ನಿತ್ಯವೂ ನಿಂತೆಡೆಯಲ್ಲೇ ನಿಂತು ಹಾಗೆ ನೋಡುವುದು ಅಭ್ಯಾಸವಾದರೆ ಆ ಒಂದು ಪಾರ್ಶ್ವವೇ ಪೂರ್ಣ ವಸ್ತುವೆಂಬ ಭಾವನೆ ಬಂದುಬಿಡುವುದು. ಒಂದು ವೇಳೆ ಅದೇ ವಸ್ತುವಿನ ಬೇರೆಯ ಭಾಗವು ನಮ್ಮ ಕಣ್ಣಿಗೆ ಬಿದ್ದರೂ ಅದು ಬೇರೆಯ ವಸ್ತುವೆಂದೇ ಭ್ರಮೆಗೊಳ್ಳುವೆವು. ಇದು ಸಾಮಾನ್ಯವಾಗಿ ಎಲ್ಲ ವಿಚಾರಗಳಲ್ಲೂ ಎಲ್ಲ ದೇಶಗಳಲ್ಲೂ ಜನರ ಬೆನ್ನುಹತ್ತಿ ಬಂದ ಭ್ರಮೆ. ನಾವು ಒಂದೇ ವಿಧವಾದ ಸಂಗೀತವನ್ನು ಕೇಳುತ್ತ, ಒಂದೇ ರೀತಿಯಾದ ಚಿತ್ರವನ್ನು ನೋಡುತ್ತ, ಒಂದೇ ರೀತಿಯಾದ ಆಚರಣೆಯನ್ನು ಆಚರಿಸುತ್ತ ಇದ್ದುಕೊಂಡು ನಾವು ಕೇಳಿ ಪಾಟವಾಗಿರುವ ಗೀತಗಳೇ ಸಂಗೀತ, ನಾವು ಬಳಕೆಯಾಗಿ ನೋಡಿದ ಚಿತ್ರಗಳೇ ಕಲೆ, ನಮಗೆ ಅಭ್ಯಾಸವಾಗಿರುವ ಆಚಾರವೇ ಮತ ಎಂದು ತಿಳಿದುಕೊಳ್ಳುತ್ತೇವೆ. ಬೇರೆಯ ಜನರು ಹಾಡುವ ಹಾಡು ಹಾಡಾಗಿ ಕೇಳಿಸುವುದಿಲ್ಲ. ಇತರರು ಆಚರಿಸುವ ಆರಾಧನೆ ದೇವರಪೂಜೆಯೆಂಬ ಭಾವನೆ ಬರುವುದಿಲ್ಲ. ಅಪರೂಪವಾಗಿ ಅವು ಕಣ್ಣಿಗೆ ಬಿದ್ದಾಗ ಅಚ್ಚರಿಗೊಂಡು ಬೆಚ್ಚಿಬಿದ್ದು ಅವನ್ನು ಕುತೂಹಲದಿಂದ ನೋಡುವೆವು. ಒಂದು ಪಕ್ಷ ಅವು ನಮ್ಮ ನೆರೆಗೇ ಬಂದು ನೆಲಸುವ ಸಂಭವವೊದಗಿದರೆ, ಅವುಗಳ ವಿಚಾರವಾಗಿ ವಿಸ್ಮಯ ಹೋಗಿ ವಿರೋಧ ಹುಟ್ಟುವುದು. ಜನಜನರಿಗೆ ಜನಜನಾಂಗಗಳಿಗೆ ಅನೇಕ ವಿಚಾರಗಳಲ್ಲಿ—ಮುಖ್ಯವಾಗಿ ಮತವಿಚಾರಗಳಲ್ಲಿ—ವೈಷಮ್ಯಗಳು ಹುಟ್ಟುವುದಕ್ಕೆ ಇದೇ ಕಾರಣ.

ಆದರೆ ನಮ್ಮ ದೃಷ್ಟಿ ಒಂದು ಕಡೆ ನೆಲಸದಂತೆ ಅದನ್ನು ನಾಲ್ಕೂ ಕಡೆ ಹೊರಳಿಸಿ ಮತಗಳನ್ನು ಹೊರಗೂ ಒಳಗೂ, ಮೇಲೂ ಕೆಳಗೂ, ಸರ್ವತೋಮುಖವಾಗಿ ನೋಡುವ ಅಭ್ಯಾಸಮಾಡಿದರೆ ಮತಗಳಲ್ಲಿ ಸಾಮಾನ್ಯವಾದುದು ಯಾವುದು, ವಿಶೇಷವಾದುದು ಯಾವುದು, ಮತಗಳಿಗೆ ಆವಶ್ಯಕವಾದುದು ಯಾವುದು, ಆಕಸ್ಮಿಕವಾದುದು ಯಾವುದು, ಮತದ ಅಂತರಂಗ ಯಾವುದು, ಬಹಿರಂಗ ಯಾವುದು, ಯಾವುದು ಜೀವ, ಯಾವುದು ಶರೀರ ಎಂಬುದು ಬೋಧೆಯಾಗುವುದು. ಹೀಗೆ ವಿವೇಚನೆ ಮಾಡುವುದು ಅಭ್ಯಾಸವಾದರೆ ಮತಮತಕ್ಕಿರುವ ವಿರೋಧ ತೊಲಗುವುದು; ಮತಶಬ್ದದ ಅರ್ಥ ವಿಶಾಲವಾಗುವುದು, ಪುಷ್ಟಿಗೊಳ್ಳುವುದು.

ಮೊದಲನೆಯ ದೃಷ್ಟಿ ಸಂಕುಚಿತವಾದುದು, ಎರಡನೆಯದು ಸರ್ವತೋಮುಖವಾದುದು; ಒಂದರಿಂದ ಸಮಾಜವು ಒಡೆದುಹೋಗುವುದು, ಇನ್ನೊಂದರಿಂದ ಒಗ್ಗಟ್ಟಾಗುವುದು; ಒಂದು ಅಸಹನೆಗೆ ಕಾರಣ, ಇನ್ನೊಂದು ಸೌಹಾರ್ದಕ್ಕೆ ಸಾಧನ. ಪ್ರತಿಯೊಂದು ಸಮಾಜದ ಒಂದೊಂದು ಅವಸ್ಥಾನದಲ್ಲೂ ಇವೆರಡೂ ಜೊತೆಜೊತೆಯಲ್ಲಿ ಒಂದರೊಡನೆ ಒಂದು ಹೋರಾಡುತ್ತ ಎಲ್ಲ ಕಾಲದಲ್ಲೂ ಇದ್ದೇ ಇರುತ್ತವೆ. ಹಿಂದೆಬಿದ್ದಿರುವ ಸಮಾಜಗಳಲ್ಲಿ ಸಂಕುಚಿತ ದೃಷ್ಟಿ ಪ್ರಬಲಿಸಿರುತ್ತದೆ, ಮುಂದೆ ಹೋಗುತ್ತಿರುವ ಸಮಾಜಗಳಲ್ಲಿ ವಿಶಾಲದೃಷ್ಟಿ ಹಿರಿದಾಗಿರುತ್ತದೆ.

೨

ಪ್ರತಿಯೊಂದು ದೇಶದಲ್ಲೂ ಮತದ ಮೂರು ಅವಸ್ಥಾನಗಳನ್ನು ಕಾಣಬಹುದು. ಸಮಾಜದ ತರುಣಾವಸ್ಥೆಯಲ್ಲಿ ಒಂದು ಕುಲದ ಅಥವಾ ಗೋತ್ರದ ಹಲವು ಸಂಸಾರಗಳು ಸೇರಿ ಒಂದು ಗುಂಪಾಗಿ ಇರುತ್ತವೆ. ಒಂದೊಂದು ಗುಂಪಿನವರೂ ಕೆಲವು ಪ್ರಕೃತಿ ಶಕ್ತಿಗಳನ್ನು ಸಜೀವ ಪದಾರ್ಥಗಳೆಂದೆಣಿಸಿ ಅವನ್ನು ಪೂಜಿಸುವರು. ಒಂದೊಂದು ಗುಂಪಿನವರೂ ತಮ್ಮದೇ ಆದ ನೃತ್ಯರೂಪವಾದ ಅಥವಾ ಗಾನರೂಪವಾದ ದೇವತಾರ್ಚನೆಯನ್ನು ಆಚರಿಸುವರು. ಇವನ್ನು ಇತರ ಗುಂಪಿನವರು ಕಾಣದಂತೆ ಕೇಳದಂತೆ ತಮ್ಮಲ್ಲೇ ಅತಿ ಗೋಪ್ಯವಾಗಿ ಇಟ್ಟುಕೊಳ್ಳುವರು. ಇತರ ಗುಂಪಿನವನು ಯಾವನಾದರೂ ಆ ನೃತ್ಯ ಗೀತಗಳನ್ನು ನೋಡಿ ಕಲಿತುಕೊಂಡು ಹೋಗಲು ಬಂದಿರುವನೆಂದು ತಿಳಿದರೆ ಅವನನ್ನು ಜೀವದೊಂದಿಗೆ ಬಿಡುವುದಿಲ್ಲ. ಮತ ವಿಚಾರದಲ್ಲಿ ಇವರು ಅತ್ಯುಗ್ರವಾದ ನಿಯಮಗಳನ್ನು ಅನುಸರಿಸುವರು.

ಕಾಲಕ್ರಮದಲ್ಲಿ ಈ ಮತವು ಕೂಡ ವಿಶಾಲಗೊಳ್ಳುವುದು. ಸಮಾಜವು ಗುಂಪಿನ ಅವಸ್ಥಾನದಿಂದ ಜನಾಂಗದ ಅವಸ್ಥಾನಕ್ಕೆ ಬರುವುದು ಗುಂಪಿನ ಜೀವನದಲ್ಲಿ ಮನೋವೈಶಾಲ್ಯ ಹುಟ್ಟುವುದರಿಂದ. ಒಂದೊಂದು ಗುಂಪೂ ಬೇರೆಯಾಗಿರದೆ ಪರಸ್ಪರ ವಿರೋಧವನ್ನು ತೊರೆದು ಹತ್ತಾರು ಗುಂಪುಗಳು ಸೇರಿ ಒಂದು ಜನವಾಗುತ್ತಾರೆ. ಹೀಗೆ ಒಂದು ಸಮಾಜವನ್ನು ವಿಸ್ತರಿಸಿ ಒಂದುಗೂಡಿಸುವುದು ದೇವರುಗಳಿಗೆಲ್ಲಾ ಹಿರಿದಾದ ದೇವದೇವನ ಅರಿವು. ಪ್ರಾಚೀನ ಭಾರತೀಯರು ಮೊದಲಲ್ಲಿ ಹಲವು ದೇವತೆಗಳನ್ನು ಪೂಜಿಸುತ್ತಿದ್ದು ಕಾಲಕ್ರಮದಲ್ಲಿ ಎಲ್ಲ ದೇವತೆಗಳಿಗಿಂತಲೂ ಹಿರಿದಾದ ಬ್ರಹ್ಮನನ್ನು ಆರಾಧಿಸಿಯೂ, ಯೆಹೂದ್ಯರು, ಯಾಹವೆಯನ್ನು ಆರಾಧಿಸಿಯೂ ಜನಾಂಗಗಳಾದುವು.

ಒಂದೊಂದು ಜನಾಂಗವೂ ತನ್ನದೇ ಒಂದು ದೇವದೇವನನ್ನು ಪೂಜಿಸುವುದು. ಅದಕ್ಕಾಗಿಯೇ ನಿವಾಸಲಾಗಿ ಆಲಯಗಳನ್ನು ಕಟ್ಟಿ ಜನರು ಅಲ್ಲಿ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವ, ಸಂವತ್ಸರೋತ್ಸವಗಳನ್ನು ನಡಸುವರು. ಆ ದೇವರ ಪೂಜೆಯನ್ನು ಯೋಗ್ಯವಾದ ರೀತಿಯಲ್ಲಿ ನಡಸಲು ಪೂಜಾ ವಿಧಾನದಲ್ಲಿ ನುರಿತ ಅರ್ಚಕರ ಮತ್ತು ಪುರೋಹಿತರ ಕೋಮುಗಳು ಆ ಜನಾಂಗದಲ್ಲಿ ಹುಟ್ಟುವುವು. ಸಾಮಾನ್ಯ ಜನರಿಗೆ ದೇವರ ದರ್ಶನ ಮಾಡಿಸುವುದು, ಅಥವಾ ಆ ದೇವರಿಗೆ ಪ್ರೀತಿಯಾದ ಪೂಜೆ ಪುರಸ್ಕಾರಗಳನ್ನೂ, ವ್ರತಗಳನ್ನೂ ಮಾಡಿಸುವುದು ಇವರ ಕರ್ತವ್ಯ. ಅವರ ಜೀವನೋಪಾಯವೂ ಅದೇ. ನಮ್ಮ ದೇಶದಲ್ಲೇ ಆಗಲಿ ಇತರ ದೇಶಗಳಲ್ಲೇ ಆಗಲಿ ಯಾರು ಮತದಿಂದಲೇ ತಮ್ಮ ಹೊಟ್ಟೆ ಹೊರೆದುಕೊಳ್ಳುವರೋ, ಯಾರು ಅದರಿಂದಲೇ ಸಮಾಜದಲ್ಲಿ ಸ್ಥಾನಮಾನಗಳನ್ನು ಪಡೆದಿರುವರೋ, ಅವರು ಪ್ರಾಯಶಃ ಸ್ವಲ್ಪ ಸಂಕುಚಿತಮನಸ್ಕರಾಗಿರುವುದುಂಟು. ಅವರಿಗೆ ಇತರ ಮತಗಳಲ್ಲಿ ಸಹನೆ ಸೌಹಾರ್ದವಿರುವುದೂ ಅಪರೂಪವೇ. ತಮ್ಮ ಜೀವನಕ್ಕಾಗಿ ಮತವನ್ನೇ ನಂಬಿಕೊಂಡಿರುವುದರಿಂದ ಧನಿಕರನ್ನೂ ಅಧಿಕಾರ ವರ್ಗದವರನ್ನೂ ಆಶ್ರಯಿಸುವುದೂ ಪುರಸ್ಕರಿಸುವುದೂ ಅವರ ಸಾಮಾನ್ಯ

ಲಕ್ಷಣಗಳು. ಅವರ ನೇತೃತ್ವದಲ್ಲಿ ಮತದ ಬಾಹ್ಯಾಡಂಬರಗಳು ಮುಂದಕ್ಕೆ ಬಂದು ಅದಕ್ಕೆ ಜೀವಪ್ರಾಯವಾದ ಸತ್ಯಪ್ರೇಮ, ಧರ್ಮನಿಷ್ಠೆ, ಸೇವಾಬುದ್ಧಿಗಳು ಹಿಂದಕ್ಕೆ ಬೀಳುವುವು. ಮತವು ಪುರೋಹಿತರ ಮತ್ತು ರಾಜಕೀಯದ ಸೆರೆಯಾಗುವುದು.

ಮತವನ್ನು ಈ ಸೆರೆಯಿಂದ ಬಿಡಿಸಿ ಅದನ್ನು ವಿಶಾಲಪಡಿಸಲು ಎಲ್ಲ ದೇಶಗಳಲ್ಲೂ ಕೆಲವರು ಮಹಾತ್ಮರು ಜನ್ಮವೆತ್ತಿರುವರು. ಬುದ್ಧ, ಕ್ರಿಸ್ತ, ಮಹಮ್ಮದ್, ರಾಮಾನುಜ, ಬಸವ ಮುಂತಾದವರು ಅಂಥ ಮಹಾತ್ಮರು. ಒಂದು ಕೋಮಿನವರಿಗೆ ಅಥವಾ ಒಂದು ಜನಾಂಗಕ್ಕೆ ಮಾತ್ರ ಒಲಿದು ಇತರ ಮಾನವರನ್ನು ಮರೆಯುವುದು ದೇವರ ಸ್ವಭಾವಕ್ಕೆ ಯೋಗ್ಯವಾದುದಲ್ಲ. ಅಂಥಾ ಸಂಕುಚಿತವಾದ ದೇವರು ಪೂಜೆಗೆ ಅನರ್ಹನು. ದೇವರ ಪಾಲಿಗೆ ಎಲ್ಲರೂ ಮಕ್ಕಳಂತೆ ಪ್ರಿಯವಾದವರೇ. ದೇವರು ಯಾವ ಒಂದು ಕೋಮಿಗೂ ಅಧೀನನಲ್ಲ; ಯಾರೇ ಆಗಲಿ ಅಂತಶ್ಶುದ್ಧಿಯಿಂದ, ಶ್ರದ್ಧೆಯಿಂದ, ಭಕ್ತಿಯಿಂದ ದೇವರನ್ನು ಪ್ರಾರ್ಥಿಸಿದರೆ, ಕರೆದರೆ, ಮೇಲು ಕೀಳೆಂದೆಣಿಸದೆ ದೇವರು ಅವರಿಗೆ ಒಲಿಯುವನು: ಹೀಗೆ ಬೋಧಿಸಿ ಕೆಲವು ಮಹಾತ್ಮರು[1] ಮತವನ್ನು ವಿಶಾಲಗೊಳಿಸಿದರು. ತಮಗೆ ಕಂಡ ಹೊಸ ಬೆಳಕನ್ನು, ತಮ್ಮಲ್ಲಿ ಹುಟ್ಟಿದ ಹೊಸ ಧರ್ಮಬುದ್ಧಿಯನ್ನು ಜಾತಿಭೇದ ಲಿಂಗಭೇದವನ್ನೆಣಿಸದೆ ಇವರು ಮಾನವವರ್ಗಕ್ಕೆ ಹರಡಬೇಕೆಂದು ಹೊರಟರು. ಪ್ರತಿಯೊಬ್ಬನಲ್ಲೂ ದೇವರು ಅಂತರ್ಯಾಮಿಯಾಗಿದ್ದಾನೆಂದೂ ಪ್ರತಿಯೊಬ್ಬನೂ ದೇವರನ್ನು ತನ್ನ ಆತ್ಮದಲ್ಲಿಯೇ ಕಾಣಬಹುದೆಂದೂ, ಅರ್ಚನಾದಿಗಳಿಗಿಂತ ಅಂತಶ್ಶುದ್ಧಿಯೂ, ಉಪವಾಸ ತೀರ್ಥಯಾತ್ರೆಗಳಿಗಿಂತ ಸತ್ಯಪ್ರೇಮವೂ ಮಾನವ ಸೇವೆಯೂ ಅತ್ಯಾವಶ್ಯಕವಾದುದೆಂದೂ ಇವರು ಬೋಧಿಸಿದರು. ಇದು ಮತದ ಮೂರನೆಯ ಅವಸ್ಥಾನ. ಇಲ್ಲಿ ಮತವು ರಾಷ್ಟ್ರ ಮತ್ತು ಜನಾಂಗಗಳ ಎಲ್ಲೆಯನ್ನು ದಾಟಿ ಮಾನವನ ಮತವಾಗುವುದು: ಇಂಥ ಮತವನ್ನು ಪಾಶ್ಚಾತ್ಯ ತತ್ವಶಾಸ್ತ್ರಜ್ಞರು ವಿಶ್ವಮತವೆಂದು ಕರೆಯುವರು.

ವಿಶ್ವಮತಗಳಲ್ಲೆಲ್ಲಾ ಕ್ರೈಸ್ತನ ಮತವೇ ಅತ್ಯಂತ ಯೋಗ್ಯವಾದುದು ಮತ್ತು ವಿಶಾಲವಾದುದು, ಅದಾದ ಮೇಲೆ ಮಹಮ್ಮದೀಯ ಮತ, ಜೋರಾಸ್ಟರಿನ ಮತ ಇತ್ಯಾದಿ ವಿಶ್ವಮತಗಳು ಬರುವುವೆಂದು ಕ್ರೈಸ್ತರ ಅಭಿಮತ. ಬೌದ್ಧಮತವು ನಿರೀಶ್ವರವಾದುದರಿಂದ ಅವರ ಪಾಲಿಗೆ ಅದು ಮತವೇ ಅಲ್ಲ.[2] ಹಿಂದುಗಳು ತಮ್ಮ ಮತವನ್ನು ತಮ್ಮ ಜನರಿಗೆ ಮೀಸಲಾಗಿ ಇಟ್ಟುಕೊಂಡಿರುವುದರಿಂದಲೂ, ತಮ್ಮ ಸಮಾಜದಲ್ಲಿ ಕೂಡ ಅದನ್ನು ವೈದಿಕ ರೀತಿಯಾಗಿ ಆಚರಿಸಲು

---

[1] ಬುದ್ಧನು ನಿರೀಶ್ವರವಾದಿಯಾದುದರಿಂದ ಮೇಲೆ ಹೇಳಿದುದು ಅವನಿಗೆ ಅನ್ವಯಿಸುವುದಿಲ್ಲ. ಆದರೆ ಅವನು ಕಂಡ ಸತ್ಯವನ್ನು ಯಾವ ವಿಧವಾದ ಸಂಕುಚಿತ ಮನೋಭಾವವೂ ಇಲ್ಲದೆ ಎಲ್ಲರಿಗೂ ಬೋಧಿಸಿದನು.

[2] ಈ ಅಭಿಪ್ರಾಯವು ಅನೇಕರಿಗೆ ಒಪ್ಪಿಗೆಯಾಗಲಾರದು. ವಿಚಾರಪರರಾದ ಕೆಲವರಿಗೆ ಬೌದ್ಧ ಮತವು ಹಿಡಿಸುವಷ್ಟು ಬೇರೆ ಮತಗಳು ಹಿಡಿಸಲಾರವು. ಕೆಲವರು ಅದನ್ನು ಮತಗಳಲ್ಲಿ ಅತ್ಯುತ್ತಮವಾದುದೆಂದೂ ಹೇಳುವರು.

ಎಲ್ಲರಿಗೂ ಅವಕಾಶ ಕೊಡದಿರುವುದರಿಂದಲೂ, ಕೋಟ್ಯಂತರ ಭಾರತೀಯರನ್ನು ಅವಕ್ಕೆ ಬಾಹಿರರಾಗಿ ಮಾಡಿರುವುದರಿಂದಲೂ ಅದು ವಿಶ್ವಮತವಾಗಲು ಯೋಗ್ಯವಲ್ಲವೆಂದು ವಾದಿಸುವರು.

ಯಾವ ಭೇದವನ್ನೂ ಎಣಿಸದೆ ಎಲ್ಲರಿಗೂ ಕ್ರೈಸ್ತ ದೀಕ್ಷೆಯನ್ನು ಕೊಡುವುದು ಕ್ರೈಸ್ತಮತದ ಒಂದು ದೊಡ್ಡ ಗುಣ. ಈ ಗುಣವಿಲ್ಲದ ಮತವು ವಿಶ್ವಮತವಾಗಲಾರದು. ಮಹಮ್ಮದೀಯ ಮತದಲ್ಲೂ ಈ ದೊಡ್ಡ ಗುಣವಿದೆ. ಹಿಂದು ಮತದಲ್ಲಿ ಈ ವೈಶಾಲ್ಯವಿಲ್ಲ. ಈ ಒಂದು ಲೋಪ ಅದರ ಗುಣಗಳನ್ನೆಲ್ಲಾ ಮುಚ್ಚಿಬಿಟ್ಟಿದೆ. ಇದನ್ನು ತೊಡೆದು ಹಾಕಲು ಬೌದ್ಧರು, ಜೈನರು, ಬಸವ ಮುಂತಾದ ವೀರಶೈವರು, ರಾಮಾನುಜರು, ಕಬೀರ್ ಕನಕದಾಸ ಮುಂತಾದ ಮಹಾನುಭಾವರು ತಂಡತಂಡವಾಗಿ ಭಾರತದ ಧಾರ್ಮಿಕ ಇತಿಹಾಸದ ಉದ್ದಕ್ಕೂ ಶ್ರಮಿಸಿದರೂ ಈಗ ಅವರ ಅನುಯಾಯಿಗಳ ಆಸರೆಯಲ್ಲಿ ಆ ಮತಗಳು ತಮ್ಮ ವೈಶಾಲ್ಯವನ್ನು ಕಳೆದುಕೊಂಡಿವೆ. ವಿಶ್ವಮತವನ್ನು ಸ್ಥಾಪಿಸಲು ಮಾಡಿದ ಪ್ರಯತ್ನವೊಂದೂ ಈಡೇರದೆ, ವಿಶಾಲವಾದ ಒಂದು ಮತ ನೆಲೆಯಾಗಿ ನಿಲ್ಲದುದು ಭಾರತದ ಒಂದು ದುರದೃಷ್ಟ.

ಈ ಅಂಶದಲ್ಲಿ ಕ್ರೈಸ್ತ ಮತವೂ ಮಹಮ್ಮದೀಯ ಮತವೂ ವಿಶ್ವಮತಗಳಾಗುವುದಕ್ಕೆ ಯೋಗ್ಯವಾದುವುಗಳಾದರೂ ಅವು ಇತರ ಮತಗಳಲ್ಲಿ ತೋರುವ ಅಸಹನೆಯನ್ನು ನೋಡಿದಾಗ ಅವು ವಿಶ್ವಮತವಾಗಲು ಅನರ್ಹವೆಂದು ವ್ಯಕ್ತಪಡುವುದು. ಮಹಮ್ಮದೀಯರಿಗೆ ಮೋಕ್ಷ ದೊರೆಯುವುದೆಂದು ಕ್ರೈಸ್ತರು ನಂಬುವುದಿಲ್ಲ. ಅವರು ಕ್ರೈಸ್ತ ದೀಕ್ಷೆ ಪಡೆದರೆ ಮಾತ್ರ ಅವರಿಗೆ ಮೋಕ್ಷಲಾಭವಾಗುವುದು. ಹಾಗೆಯೇ ಮಹಮ್ಮದೀಯರು ಕೂಡ ಕ್ರೈಸ್ತರು ಮಹಮ್ಮದೀಯರಾದ ಹೊರತು ಅವರಿಗೆ ಮೋಕ್ಷವಿಲ್ಲವೆಂದು ಸ್ಪಷ್ಟವಾಗಿ ಹೇಳುವರು. ಇಂದು ಕ್ರಿಸ್ತನ ಉಪದೇಶವನ್ನು ಪಾಲಿಸುತ್ತಿರುವವರಲ್ಲಿ ಮಹಾತ್ಮ ಗಾಂಧಿಯವರನ್ನು ಮೀರಿಸುವ ಕ್ರೈಸ್ತರು ಹೆಚ್ಚು ಜನ ಇರಲಾರರು. ಆದರೂ ಕ್ರೈಸ್ತ ಈಸಾಯಿಗಳು ಮಹಾತ್ಮ ಗಾಂಧಿಯವರಿಗೆ ಮೋಕ್ಷವುಂಟೆಂದು ಹೇಳರು.

ತತ್ವ ದೃಷ್ಟಿಯಿಂದ ಈ ಎಲ್ಲ ಮತಗಳೂ ಒಂದಲ್ಲ ಒಂದು ಅಂಶದಲ್ಲಿ ಸಂಕುಚಿತವಾದುವೇ. ಮೋಕ್ಷ ಸಾಧನೆಗೆ ಉತ್ತಮವಾದ ಭಕ್ತಿ ಜ್ಞಾನ ಶೀಲಗಳು ಮುಖ್ಯವಾದುವೇ ಹೊರತು ಯಾವುದೋ ಒಂದು ಮತಕ್ಕೆ ಸೇರಿ ದೀಕ್ಷೆ ಪಡೆಯುವುದಾಗಲಿ ಒಂದು ನಿರ್ದಿಷ್ಟವಾದ ವೇದವನ್ನು ನಂಬುವುದಾಗಲಿ ಆವಶ್ಯಕವಿಲ್ಲ. ಕ್ರೈಸ್ತವೇದವೇ ನಿಜ, ಮತವಿಚಾರಗಳಲ್ಲಿ ತಿಳಿಯಬಹುದಾದುದನ್ನೆಲ್ಲ ಅದೊಂದರಿಂದಲೇ ತಿಳಿಯಬೇಕು, ಇತರ ವೇದಗಳು ನಿಜವಲ್ಲ ಎಂದು ತಿಳಿದವನು ಯಾವನೂ ಹೇಳುವುದಿಲ್ಲ. ಕ್ರೈಸ್ತರೊಬ್ಬರಿಗೆ ಮಾತ್ರ ಮೋಕ್ಷ, ಇತರರಿಗಿಲ್ಲ ಎಂಬ ವಾದಕ್ಕೂ, ನಾರ್ಡಿಕ್ ಬುಡಕಟ್ಟಿನವರೇ ಸರ್ವೋತ್ಕೃಷ್ಟರಾದ ಜನ, ಅವರ ವಿನಾ ಇತರರಿಗೆ ಚೆನ್ನಾಗಿ ಬದುಕಿ ಬಾಳುವ ಚೈತನ್ಯವೇ ಇಲ್ಲ ಎಂದು ಹೇಳುವ ಹಿಟ್ಲರಿನ ಮತಕ್ಕೂ ತತ್ವದಲ್ಲಿ ಏನು ವ್ಯತ್ಯಾಸ?

೩

ನಿಜವಾದ ವಿಶ್ವಮತವು ಯಾವ ಮತವನ್ನೂ ನಿಕೃಷ್ಟವಾಗಿ ಕಾಣುವುದಿಲ್ಲ. ಅದರ ದೃಷ್ಟಿಯಲ್ಲಿ ಮತಗಳು ಬೇರೆ ಬೇರೆಯಾದರೂ ಅವೆಲ್ಲವೂ ಒಂದೇ ಗಿಡದ ಬೇರುಗಳು, ರೆಂಬೆಗಳು, ಪುಷ್ಪಗಳು, ಫಲಗಳು. ಅನಾಗರಿಕ ಮತದಂತೆ ಒಂದು ಗುಂಪಿನ ಮತವಾಗಲಿ, ನಾಗರಿಕ ಜನಾಂಗದ ಮತವಾಗಲಿ, ಕ್ರೈಸ್ತ ಮತದಂತೆ ಜನಾಂಗಗಳ ಮತವಾಗಲಿ—ಎಲ್ಲವೂ ಮತ ವೃಕ್ಷದ ಶಾಖೋಪಶಾಖೆಗಳು: ಅನಾಗರಿಕ ಮತವು ತಾಯಿಬೇರು, ಮತದ ಮೊಳೆ; ನಾಗರಿಕ ಮತಗಳು ಅದರಿಂದ ಕವಲೊಡೆದ ಕೊಂಬೆಗಳು. ಮತದ ಮರವಿನ್ನೂ ಬೆಳೆಯುತ್ತಿದೆ; ಇನ್ನೂ ಬಲಿಯದ ರೆಂಬೆಗಳೂ ಇವೆ, ಮುಂದೆ ಬರಲಿರುವ ರೆಂಬೆಗಳೂ ಇವೆ; ಸುಳಿಯಿನ್ನೂ ಒಡೆಯುತ್ತಲೇ ಇದೆ, ಅದು ತುದಿಗೂಡಿಲ್ಲ—ಬಹುಶಃ ಕೂಡ ಲಾರದು. ಆಲದ ಮರದ ಬಿಳಲಿನಂತೆ ಒಂದೊಂದು ಮತದ ಬಿಳಲೂ ಒಂದೊಂದು ಕಾಲದಲ್ಲಿ ಬಂದಿವೆ; ಕೆಳಗಿನವು ಕನಿಷ್ಠವಾದುವೆಂದೂ ಮೇಲಿನವು ಉತ್ಕೃಷ್ಟವಾದು ವೆಂದೂ ಹೇಳಲಾಗದು. ಇವೆಲ್ಲವೂ ಒಂದೇ ಮರದ ಭಾಗಗಳೆಂದೂ ಅವು ಆವಶ್ಯಕವಾದುವೆಂದೂ ತಿಳಿಯುವುದು ವಿಶ್ವಮತದ ಮೊದಲನೆಯ ತತ್ವ.

ವಿಶ್ವಮತ ದೃಷ್ಟಿಯಲ್ಲಿ ಮತವು ಬರಿಯ ಭಕ್ತಿಯೂ ಅಲ್ಲ, ಜ್ಞಾನವೂ ಅಲ್ಲ, ಕರ್ಮವೂ ಅಲ್ಲ. ಯಾವ ಮತದಲ್ಲೂ ಒಂದೇ ಅಂಶವು ತಾನೇ ತಾನಾಗಿ ಇರುವುದಿಲ್ಲ. ಭಕ್ತಿಯನ್ನು ಬೋಧಿಸುವ ಮತಗಳು ಕೂಡ ಅದನ್ನು ತಿಳಿವಿನಿಂದಲೇ ಬೋಧಿಸಬೇಕು. ಯಾವುದೇ ಆಗಲಿ ಒಂದು ಪಕ್ಷವನ್ನು ಹಿಡಿದು ವಾದಿಸುವವರು ತಮ್ಮ ಪಕ್ಷವನ್ನು ತರ್ಕದಿಂದಲೇ ಸಮರ್ಥಿಸಬೇಕು. ಆದುದರಿಂದ ಭಕ್ತಿವಾದಿಗಳು ತಮ್ಮ ಪಕ್ಷವನ್ನು ಸಾಧಿಸುವಮಟ್ಟಿಗಾದರೂ ಜ್ಞಾನವನ್ನು ಕೈಹಿಡಿಯಲೇ ಬೇಕು. ಆದರೆ ಇದಕ್ಕೆ ಪ್ರತಿಯಾಗಿ ಭಕ್ತಿವಾದಿಗಳು "ಭಕ್ತಿ ಪ್ರಧಾನವಾದುದು, ಜ್ಞಾನ ಅದಕ್ಕೆ ಅಧೀನವಾದುದು ಎಂದು ನಾವು ಹೇಳುತ್ತೇವೆಯೇ ಹೊರತು ಅದು ಅನಾವಶ್ಯಕವೆಂದು ವಾದಿಸಿದೆವೇ?" ಎಂದು ಕೇಳಬಹುದು. ನಂಬಿಕೆಯೇ ಮೇಲಿನದಾಗಿರಲಿ, ಅದನ್ನು ನಿಲ್ಲಿಸುವ ಜ್ಞಾನವು ಕೆಳಗಿನ ಊರೆಯೇ ಆಗಿರಲಿ ಅದರಿಂದ ಊರೆ ಕೀಳಾಗುವುದಿಲ್ಲ. ಊರೆಗಿರುವ ಶಕ್ತಿ ಅದನ್ನು ಬಿಟ್ಟರೆ ಬೇರೆ ಯಾವುದಕ್ಕೂ ಬರಲಾರದು. ಅದುವರೆಗೂ ಮಿಕ್ಕುವು ಅದರ ಸಹಾಯವನ್ನು ಪಡೆಯಲೇ ಬೇಕು. ಹಾಗೆಯೇ ತರ್ಕಿಸುತ್ತಹೋದರೆ ಎಲ್ಲವೂ ಅನ್ಯೋನ್ಯಾ ಶ್ರಯಿಗಳಾಗಿರುವುದೆಂಬುದು ವಿಶದಪಡುವುದು. ಒಂದು ಕಡೆಯಿಂದ ನೋಡಿದಾಗ ಭಕ್ತಿಗೆ ಜ್ಞಾನ ಆಸರೆ; ಇನ್ನೊಂದು ಕಡೆಯಿಂದ ನೋಡಿದಾಗ ಜ್ಞಾನಕ್ಕೆ ಭಕ್ತಿ ಆಸರೆ; ನಂಬಿಕೆಯಿಲ್ಲದವನಿಗೆ ಯಾವ ಜ್ಞಾನವೂ ಸಿದ್ಧಿಸುವುದಿಲ್ಲ. ಒಂದೇ ನಂಬಿಕೆ ಎಲ್ಲಾ ಕಾಲಕ್ಕೂ ನಿಲ್ಲದಿರಬಹುದು, ಆದರೆ ಪರೀಕ್ಷೆ ಮಾಡುವುಕ್ಕಾದರೂ ತಾತ್ಕಾಲಿಕವಾಗಿ ಒಂದು ನಂಬಿಕೆ ಬೇಕು. ಅದರಿಂದ ನಮ್ಮ ಜೀವನವನ್ನು ಸಾರ್ಥಕ ಪಡಿಸುವುದಾದರೆ ಅದು ನಿಲ್ಲುವುದು, ಇಲ್ಲದಿದ್ದರೆ ಬಿದ್ದುಹೋಗುವುದು; ಅದರ ಸ್ಥಾನದಲ್ಲಿ ಇನ್ನೊಂದು ನಂಬಿಕೆ ಬಂದು ನಿಲ್ಲುವುದು. ಹೀಗೆಯೇ ಜ್ಞಾನಕರ್ಮ ಗಳೂ ಭಕ್ತಿಕರ್ಮಗಳೂ ಒಂದನ್ನೊಂದು ಅವಲಂಬಿಸಿವೆ. ತಿಳಿವಳಿಕೆಯನ್ನೂ

ನಂಬಿಕೆಯನ್ನೂ ಸ್ವಾತಂತ್ರ್ಯವನ್ನೂ ಹುಟ್ಟಿಸದ ಕರ್ಮವು ಗಾಣದ ಎತ್ತಿನ ಸುತ್ತಿನಂತೆ. ಸತ್ವಪೂರ್ಣ ಕರ್ಮವು ಕ್ರಮಕ್ರಮವಾಗಿ ಜೀವನದ ಹೊರೆಯನ್ನು ಇಳಿಸಬೇಕು; ಜೀವನವಲ್ಲಿ ಹೊಸ ಆಸಕ್ತಿಯನ್ನು ಹುಟ್ಟಿಸಬೇಕು; ಅದಕ್ಕೆ ಹೊಸ ಹೊಳಪನ್ನು ಕೊಡಬೇಕು. ಕರ್ಮದಿಂದ ಈ ಕೆಲಸಗಳು ಆಗಬೇಕಾದರೆ ಅದು ತಿಳಿವಿನಿಂದ ಕೂಡಿದುದಾಗಿರಬೇಕು. ಉತ್ಸಾಹವನ್ನು ಹುಟ್ಟಿಸುವಂಥ ಒಂದು ಉದಾತ್ತವಾದ ನಂಬಿಕೆ ಅದರ ಹಿಂದೆ ಇರಬೇಕು. ತಿಳಿವಿಲ್ಲದೆ ತಿರುಗಿದರೆ ದಾರಿ ಸಾಗುವುದಿಲ್ಲ; ತಿಳಿದು ನಡೆಯುವುದರಿಂದ ಗುರಿಯನ್ನು ತಲುಪುತ್ತೇವೆ.

ವಿಶ್ವದ ವೈವಿಧ್ಯ ವೈಚಿತ್ರ್ಯಗಳ ರಸಜ್ಞತೆ ವಿಶ್ವಮತದ ಜೀವಾಳ. ಆ ರಸಜ್ಞತೆಯ ತಳಹದಿ ಸೌಹಾರ್ದ, ಸಹೃದಯತ್ವ. ಎಲ್ಲವೂ ಒಂದೇ, ಎಲ್ಲವೂ ಸಮವಾದುವು — ಎಂದು ತಿಳಿಯುವುದು ಸೌಹಾರ್ದವಲ್ಲ. ಒಂದೊಂದಕ್ಕೂ ಇರುವ ವ್ಯತ್ಯಾಸವನ್ನು ನೋಡಿ ಅವೆಲ್ಲವೂ ಬೇರೆಬೇರೆಯಾಗಿದ್ದರೂ ಕೂಡ ಅವುಗಳೊಳಗೆ ಮಿಡಿಯುತ್ತಿರುವ ಹೃದಯವೊಂದೇ ಎಂದು ತಿಳಿಯುವುದು ನಿಜವಾದ ಸೌಹಾರ್ದ. ಅಲ್ಲದೆ ಯಾವುದೊಂದು ಮತವೂ ಪೂರ್ಣತ್ವವನ್ನು ಹೊಂದುವುದಿಲ್ಲ. ಮತವು ಸರ್ವದಾ ಬೆಳೆಯುತ್ತಿರುವುದು, ವಿಕಾಸಹೊಂದುವುದು. ಯಾವುದೇ ಮತವಾಗಲಿ, ಬೆಳೆಯುವುದು ಅದರ ಜೀವಾಳ ಎಂಬುದನ್ನು ಮರೆತರೆ ಅದು ಮಲೆತು ಅಭ್ಯುದಯಕ್ಕೆ ಅಡಚಣೆಯಾಗುವುದು. ಹರಿಯುವ ನೀರು ಹೇಗೆ ಯಾವಾಗಲೂ ಶುಚಿಯಾಗಿರುವುದೋ ಹಾಗೆಯೇ ಬೆಳೆಯುವ ಮತವೂ ಸರ್ವದಾ ನಿರ್ಮಲವಾಗಿರುವುದು.

೪

ಇಂಥ ವಿಶ್ವಮತವು ಎಲ್ಲಿಯಾದರೂ ಇದೆಯೇ ಅಥವಾ ಅದು ಬರಿಯ ಕನಸೇ? ಅದು ಬರಿಯ ಕನಸಲ್ಲ, ವಾಸ್ತವಿಕವಾಗಿ ಇದೆ ಎಂದು ಕೆಲವು ಇಂದಿನ ಹೊಸ ಮತಗಳು ಸಾರುತ್ತಿವೆ. ಥಿಯಾಸಫಿ ಸಂಘದವರೂ ರಾಮಕೃಷ್ಣ ಮತದವರೂ ತಾವು ಬೋಧಿಸುತ್ತಿರುವ ಮತವನ್ನು ವಿಶ್ವಮತವೆಂದು ಹೇಳುತ್ತಾರೆ; ಬಾಬಿ ಮತದವರು ಕೂಡ ತಮ್ಮದು ವಿಶ್ವಮತವೆಂದು ಹೇಳುತ್ತಾರೆ. ಇವುಗಳನ್ನೆಲ್ಲ ಇಲ್ಲಿ ವಿಮರ್ಶಿಸುವುದಕ್ಕೆ ಅವಕಾಶವಿಲ್ಲ. ಥಿಯಾಸಫಿ ಸಂಘದವರೂ ರಾಮಕೃಷ್ಣ ಮತದವರೂ ಪ್ರಚಾರಮಾಡುತ್ತಿರುವ ಮತಗಳು ಕನ್ನಡಿಗರಿಗೆ ತಿಳಿದಿರುವುದರಿಂದ ಆ ವಿಚಾರವಾಗಿ ಒಂದೆರಡು ಮಾತುಗಳನ್ನು ಮಾತ್ರ ಇಲ್ಲಿ ಹೇಳಬಹುದು.

ವಿಶ್ವಮತ ತತ್ವವನ್ನು ಇವೆರಡೂ ಸ್ಪಷ್ಟವಾಗಿ ಸಾರುತ್ತವೆ. ಇವು ಇತರ ಮತಗಳಲ್ಲಿ ತೋರಿಸುವ ಸೌಹಾರ್ದ ಅತಿಶಯವಾದುದು; ಅಸಹನೆ ಇಲ್ಲದಿರುವುದು ಇವುಗಳ ಒಂದು ದೊಡ್ಡ ಗುಣ. ಈ ಮತಗಳ ಆಶ್ರಯದಲ್ಲಿ ಹಿಂದುಗಳೂ ಮಹಮ್ಮದೀಯರೂ ಕ್ರೈಸ್ತರೂ ಬೌದ್ಧರೂ, ಎಲ್ಲ ದೇಶದವರೂ ಎಲ್ಲ ಬುಡಕಟ್ಟಿನವರೂ ಮೇಲು ಕೀಳೆಂಬ ವ್ಯತ್ಯಾಸವಿಲ್ಲದೆ ಸೇರಿ ಮತಗಳ ಮೂಲ ತತ್ವಗಳನ್ನು ತಿಳಿದು ಆಚರಿಸಲು ಅವಕಾಶವಿದೆ. ಈ ಎರಡು ಸಂಘಗಳು ಮಾನವರೆಲ್ಲರೂ ಭ್ರಾತೃಗಳು ಎಂಬ ಭಾವನೆಯನ್ನು ಹರಡುತ್ತಿವೆ. ವಿಜ್ಞಾನಕ್ಕೂ ಮತಕ್ಕೂ

ತತ್ವಜ್ಞಾನಕ್ಕೂ ವಿರೋಧವಲ್ಲದ ವಿಚಾರಪೂರಿತವಾದ ಮತತತ್ವಗಳನ್ನು ಎತ್ತಿ ಹಿಡಿಯಲು ಪ್ರಯತ್ನ ಪಡುತ್ತಿವೆ.

ಆದರೂ ಏಕೋ ಇವೆರಡಕ್ಕೂ ಜನಪ್ರಿಯವಾಗುವಷ್ಟು ಶಕ್ತಿಯಿಲ್ಲವಾಗಿದೆ. ಇವು ವಿಶೇಷವಾಗಿ ಪುಸ್ತಕಗಳ ಮತ್ತು ಉಪನ್ಯಾಸಗಳ ಮೂಲಕ ಹರಡುತ್ತಿವೆಯೇ ಹೊರತು ಇವುಗಳ ಪ್ರಚಾರಕರು ಜನರ ಜೀವನದಲ್ಲಿ ಪ್ರವೇಶಿಸಬೇಕಾದಷ್ಟು ಪ್ರವೇಶಿಸಿಲ್ಲ. ಇವು ಎಲ್ಲ ಮತಗಳಲ್ಲೂ ಸೌಹಾರ್ದ ತೋರಿಸಿದ ಮಾತ್ರಕ್ಕೆ ಒಂದು ಮತವನ್ನು ಸ್ಥಾಪಿಸಿದಂತೆ ಆಗುವುದಿಲ್ಲ. ಮತಗಳ ಸಂತೆ ಒಂದು ಮತವಾಗಲಾರದು. ಅಲ್ಲದೆ ಈ ಸಂಘದವರಿಗೆ—ಮುಖ್ಯವಾಗಿ ರಾಮಕೃಷ್ಣಾಶ್ರಮ ದವರಿಗೆ—ಶಂಕರಾಚಾರ್ಯರ ಮತದಲ್ಲಿ ಪಕ್ಷಪಾತ ಸ್ವಲ್ಪ ಬಲವಾಗಿದೆ. ಆದುದರಿಂದ ಹಿಂದುಗಳಲ್ಲಿ ಕೂಡ ಕೆಲವರು ಇದರಲ್ಲಿ ವಿಶ್ವಾಸ ತೋರಿಸುತ್ತಿಲ್ಲ. ಇವೆರಡು ಸಂಘಗಳಲ್ಲಿಯೂ ಸಮನ್ವಯಶಕ್ತಿ ಸಾಲದು. ಹಾಗೆ ಆ ಶಕ್ತಿ ಇದ್ದಿದ್ದರೆ ಈ ಸಂಘಗಳ ಆವರಣದಲ್ಲಿ ಎಲ್ಲ ಮತಗಳ ದೋಷಗಳೂ ಸುಟ್ಟು ಹೋಗಿ ಅವುಗಳಲ್ಲಿರುವ ಗುಣಗಳು ಸೇರಿ ಮಾನವಜೀವನಕ್ಕೆ ಹೊಸ ಶಕ್ತಿಯನ್ನುಂಟು ಮಾಡಬಹುದಾಗಿತ್ತು. ಮತಕ್ಕೆ ಒರೆಗಲ್ಲು ಜೀವನ; ಅದರ ಸತ್ವವು ಜೀವನದಲ್ಲಿ ಹೊರ ಬೀಳದಿದ್ದರೆ ಅದರಲ್ಲಿ ಸತ್ವವಿದೆಯೆಂದು ಹೇಳಲಾಗುವುದಿಲ್ಲ. ಪ್ರಪಂಚದಲ್ಲಿ ನಡೆಯುತ್ತಿರುವ ಅನ್ಯಾಯವನ್ನು ತಡೆಗಟ್ಟಲೂ ನ್ಯಾಯವನ್ನು ಎತ್ತಿ ಹಿಡಿಯಲೂ ಈ ಸಂಘಗಳವರು ಬದ್ಧಕಂಕಣರಾಗಿ ನಿಂತಿರುವುದಿಲ್ಲ. ಅಂತರ್ರಾಷ್ಟ್ರೀಯ ಜೀವನದಲ್ಲಿ ಒಗ್ಗಟ್ಟನ್ನೂ ಬಲವನ್ನೂ ಹುಟ್ಟಿಸದ ಮತವು ವಿಶ್ವಮತವಾಗ ಲಾರದು.

ಒಂದು ಮತವು ದೊಡ್ಡದಾಗಬೇಕಾದರೆ, ಜಾಗ್ರತೆಯಾಗಿ ವಿಸ್ತರಿಸಬೇಕಾದರೆ ಅದಕ್ಕೆ ವಿಶ್ವವನ್ನೇ ಆಕರ್ಷಿಸುವಷ್ಟು ಪ್ರಬಲವಾದ ವ್ಯಕ್ತಿಯ ಸಹಾಯಬೇಕು. ಅಂಥ ವ್ಯಕ್ತಿಯ ನಂಬಿಕೆ, ಪ್ರೇಮ, ಸೇವಾಸಕ್ತಿ, ಕಾರ್ಯದಕ್ಷತೆಗಳು ಅತಿಮಾನುಷ ವಾಗಿರಬೇಕು. ಇಂಥ ವ್ಯಕ್ತಿತ್ವವು ಈ ಎರಡು ಸಂಘಗಳ ಮೂಲಪುರುಷರಲ್ಲಿ ಇಲ್ಲವೆಂದು ಹೇಳಬೇಕು. ರಾಮಕೃಷ್ಣಪರಮಹಂಸರ ವಿಚಾರವಾಗಿ ಹೀಗೆ ಹೇಳುವುದು ನ್ಯಾಯವೇ ಎಂದು ಕೇಳಬಹುದು. ವಿಮರ್ಶೆಯಲ್ಲಿ ಅಭಿಮಾನಕ್ಕೆ ಎಡೆಯಿಲ್ಲ. ರಾಮಕೃಷ್ಣಪರಮಹಂಸರು ಅದ್ವಿತೀಯ ಸಾಧಕರು; ಅವರ ವಾದ ಮತ್ತು ವಾಣಿ ರಮಣೀಯವಾದುವು. ಆದರೆ ವಿಶ್ವಮತನಾಯಕ ನಾಗುವಷ್ಟು ಸೇವಾಸಕ್ತಿ ಅವರಲ್ಲಿಲ್ಲ. ಬುದ್ಧ ಕ್ರಿಸ್ತರೊಡನೆ ಅವರನ್ನು ತೂಗಿ ನೋಡಿದರೆ ಅವರ ವ್ಯಕ್ತಿತ್ವದ ಈ ನ್ಯೂನತೆ ಸ್ಪಷ್ಟವಾಗುವುದು. ಸಮುದ್ರ ದಂತಿರುವ ಮಾನವಜೀವನದಲ್ಲಿ ಅವರ ಜೀವನ ಬೆರೆಯಲಿಲ್ಲ. ಮಾನವರ ಉದ್ಧಾರಕ್ಕಾಗಿ ಅವರು ತಮ್ಮ ಜೀವನವನ್ನು ಸವೆಯಿಸಲಿಲ್ಲ. ಜೀವನದ ಹೊರಗೆ ನಿಂತು ಜೀವಿಗಳ ಕಷ್ಟವನ್ನು ನೋಡಿ ಕನಿಕರಿಸಬಹುದು, ಅವರ ಸಂಕಟ ಆರಲೆಂದು ಹರಸಬಹುದು. ಜನರಲ್ಲಿ ಬೆರೆಯದೆ ದೂರದಲ್ಲಿ ನಿಂತು ಹರಸುವವರಲ್ಲಿ ಜನರಿಗೆ ನಂಬಿಕೆ ಬರುವುದಿಲ್ಲ. ವಿಶ್ವಜೀವನಕ್ಕೆ, ವಿಶಾಲವಾದ ಜೀವನಕ್ಕೆ, ತುಂಬುಜೀವನಕ್ಕೆ ಬಾಹಿರರಾದ ಯಾರೂ ವಿಶ್ವಮತನಾಯಕರಾಗಲಾರರು.

ವಿಶ್ವಮತನಾಯಕನಾಗಲು ಬೇಕಾದಂಥ ವ್ಯಕ್ತಿತ್ವವೆಂದರೆ ಮಹಾತ್ಮ ಗಾಂಧಿಯವರದು. ಅವರ ಪ್ರೀತಿಯು ಆಕಾಶದಂತೆ ವಿಶಾಲ, ಸಾಗರದಂತೆ ಆಳ; ಅವರ ಕರ್ಮನಿಷ್ಠೆಯೂ ಪ್ರಾಮಾಣಿಕತೆಯೂ ಅಗ್ನಿಯಂತೆ ನಿರ್ಮಲ. ಸತ್ಯ ಅಹಿಂಸೆ*ಗಳೆರಡೂ ವಿಶ್ವಮತದ ಮುಖ್ಯ ತತ್ವಗಳಾಗುವಷ್ಟು ಉದಾತ್ತವಾದುವು. ಆದರೆ ಗಾಂಧಿಯವರು ಮುಖ್ಯವಾಗಿ ರಾಜಕೀಯನಾಯಕರು; ಈ ತತ್ವಗಳನ್ನು ರಾಜಕೀಯಕ್ಕಾಗಿಯೇ ಹೆಚ್ಚಾಗಿ ಬಳಸುತ್ತಿರುವರು. ಇವು ಜೀವನವೆಲ್ಲಕ್ಕೂ ಅನ್ವಯವಾಗಿಲ್ಲ; ಎಲ್ಲ ಜನಾಂಗಗಳ ಹಿತಕ್ಕಾಗಿಯೂ ಅನ್ವಯವಾಗಿಲ್ಲ. ಗಾಂಧಿಯವರು ಭಾರತದ ನಾಯಕರಾಗಿ ದುಡಿಯಲು ಅವರ ಜೀವನವನ್ನು ಮೀಸಲಾಗಿಟ್ಟಿರುವರು; ಇತರ ದೇಶಗಳಿಗಾಗಿ ಅಷ್ಟು ಶ್ರಮಿಸುತ್ತಿಲ್ಲ. ಭಾರತೀಯರಿಗಾಗುತ್ತಿರುವ ಅನ್ಯಾಯಕ್ಕೆ ಮಾತ್ರವೇ ಹೊಡೆದಾಡದೆ ಇತರ ಜನಾಂಗಗಳಲ್ಲೂ ಕಲೆತು ಮಾನವ ಲೋಕವನ್ನೆಲ್ಲ ಆವರಿಸಿರುವ ಅನ್ಯಾಯವನ್ನು ಸತ್ಯ ಮತ್ತು ಅಹಿಂಸೆಯ ಮಾರ್ಗದಿಂದ ಎದುರಿಸಲು ಎಲ್ಲ ದೇಶಗಳಲ್ಲೂ ಸುತ್ತಿ ಎಲ್ಲ ಜನರಿಗೂ ಕಲಿಸಲು ಹೊರಟಿದ್ದರೆ, ಜೀವನದ ಎಲ್ಲ ಅಂಶಗಳಲ್ಲೂ ಇವನ್ನು ಅನುಷ್ಠಾನಕ್ಕೆ ತರಲು ಪ್ರಯತ್ನಿಸಿದ್ದರೆ ಅವರ ನಾಯಕತ್ವದಲ್ಲಿ ವಿಶ್ವಮತವು ಬರಿಯ ಕನಸಾಗದೆ ವಾಸ್ತವವಾದ ಅಂಶವಾಗಬಹುದಿತ್ತು.

ವಿಶ್ವಮತವನ್ನು ಸ್ವರ್ಗದಿಂದ ಮರ್ತ್ಯಕ್ಕೆ ತರುವ ಮಹಾತ್ಮರ ಹುಟ್ಟನ್ನು ಇನ್ನೂ ಕಾಯುತ್ತ ಕುಳಿತಿರಬೇಕಾಗಿದೆ. ಇದು ನಿರಾಶಾವಾದವೆಂದು ತಿಳಿಯಕೂಡದು. ಆದರೆ ವಿಶ್ವಮತ ತತ್ವವು ಸತ್ವವುಳ್ಳದ್ದಾದ್ದರಿಂದ ಈಗಲ್ಲದಿದ್ದರೆ ಇನ್ನು ಮುಂದೆಯಾದರೂ ಅದರಲ್ಲಿ ಜನರಿಗೆ ನಂಬಿಕೆ ಹುಟ್ಟಿಯೇ ಹುಟ್ಟುವುದು. ಅದನ್ನು ಎಲ್ಲ ಜನಾಂಗಗಳ ಮುಂದೆಯೂ ಎತ್ತಿಹಿಡಿಯುವಂಥ ಮಹಾತ್ಮರು ಹುಟ್ಟಿಯೇ ಹುಟ್ಟುವರು. ತತ್ವಶಾಸ್ತ್ರಜ್ಞನು ರಾಷ್ಟ್ರದ ನಾಯಕನಾದ ಹೊರತು ಸಮಾಜದಲ್ಲಿ ನ್ಯಾಯ ನೆಲಸಲಾರದು ಎಂಬ ತತ್ವವನ್ನು ಎರಡು ಸಾವಿರ ವರ್ಷಗಳ ಹಿಂದೆ ಪ್ಲೇಟೋ ಸಾರಿದನು. ಎಷ್ಟೋ ಪ್ರಯತ್ನಗಳು ನಡೆದಿದ್ದರೂ ಆ ನಾಯಕತ್ವವು ಲಭಿಸಿಲ್ಲ. ಆದರೂ ಆ ಧ್ಯೇಯದಲ್ಲಿ ನಂಬಿಕೆಯಾಗಲಿ ಪ್ರೀತಿಯಾಗಲಿ ಹೋಗಿರುವುದೆ? ಮಾನವಕುಲ ಇರುವವರೆಗೆ ಅಚ್ಚಳಿಯದೆ ಅವು ಇದ್ದೇ ಇರುವುವು. ತತ್ವ ಶಾಸ್ತ್ರಜ್ಞರಿಗೆ ಪ್ರಿಯವಾದುವೆಲ್ಲ ಹೀಗೆಯೇ. ಅವು ಎಷ್ಟೆಷ್ಟು ಉತ್ಕೃಷ್ಟವಾದುವೊ ಅಷ್ಟಷ್ಟು ಕಷ್ಟ ಸಾಧ್ಯವಾದುವು.

**ಜಿ. ಹನುಮಂತರಾವ್**

---

* ಅಹಿಂಸೆಗಿಂತ ಪ್ರೀತಿ ಗಟ್ಟಿಯಾದದ್ದು. ಆದ್ದರಿಂದ ಅದಕ್ಕೆ ಬದಲಾಗಿ ಪ್ರೀತಿ ಎಂಬಿದ್ದರೆ ಚೆನ್ನು.

# ಕನ್ನಡದ ಮುಂಬರಿವು

ಕನ್ನಡದ ಇಂದಿನ ಸಾಹಿತ್ಯ ನೂರು ವರ್ಷದ ಬೆಳಸು. ಶ್ರೀಮನ್ ಮಹಾರಾಜ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ಕಳೆದ ಶತಮಾನದ ನಾಲ್ಕನೆಯ ದಶಕದಲ್ಲಿ ಕನ್ನಡ ದೇಶದ ಹೊಸ ವಿದ್ಯಾಭ್ಯಾಸವನ್ನು ಆರಂಭಮಾಡಿದರು. ಅದಾದ ಇಪ್ಪತ್ತೈದು ವರ್ಷದಮೇಲೆ ಆಗ ರಾಜ್ಯದ ಆಡಳಿತ ನಡಸುತ್ತಿದ್ದ ಆಂಗ್ಲ ಅಧಿಕಾರಿಗಳು ಭಾರತವರ್ಷದ ವಿದ್ಯಾಭ್ಯಾಸದ ಹೊಸ ಕ್ರಮವನ್ನು ಅನುಕರಿಸಿ ಈ ಸೀಮೆಯಲ್ಲೂ ಒಂದು ಹೊಸ ಕ್ರಮವನ್ನು ಮೊದಲಿಟ್ಟರು. ರಾಜ್ಯ ನಮ್ಮ ಒಡೆಯರ ಕೈಗೆ ಬಂದಮೇಲೆ ವಿದ್ಯೆಗೆ ವ್ಯವಸ್ಥೆಗೆ ಮಾತ್ರ ಅಲ್ಲದೆ ಅದರ ಫಲವಾದ ಸಾಹಿತ್ಯಕ್ಕೂ ಉತ್ತೇಜನ ದೊರೆಯಲು ಮೊದಲಾಯಿತು. ಶ್ರೀಮನ್ ಮಹಾರಾಜ ಶ್ರೀ ಚಾಮರಾಜ ಒಡೆಯರ ಆಶ್ರಯದಲ್ಲಿ ಹೊಸ ನಾಟಕ, ಹೊಸ ಪದ್ಯ, ಹೊಸ ಗದ್ಯ ಸೃಷ್ಟಿಯಾದುವು. ಕರ್ಣಾಟಕ ಭಾಷೋಜ್ಜೀವಿನೀ ಸಭೆ ಪಂಡಿತ ಮಂಡಲಿಗೆ ಒಂದು ಇಂಬಾಗಿ ಏರ್ಪಟ್ಟಿತು. ಜನದ ಜೀವನದಲ್ಲಿ ಹೊಸ ಸಾಹಿತ್ಯ ತರಬೇಕಾದ ಮಾರ್ಪಾಡು ಒಂದುಂಟು ಎಂಬ ತತ್ವ ಲೇಖಕರಾಗಬಹುದಾದ ಜನರ ಮನಸ್ಸಿನಲ್ಲಿ ರೂಪುಗೊಂಡಿತು. ಪ್ರಾಚೀನ ಗ್ರಂಥಗಳನ್ನು ಹೊರಗೆ ತರುವುದಕ್ಕಾಗಿಯೂ ನವೀನ ಗ್ರಂಥಗಳ ನಿರ್ಮಾಣವನ್ನು ಪ್ರೋತ್ಸಾಹಿಸುವುದಕ್ಕಾಗಿಯೂ ವಿದ್ಯಾಭ್ಯಾಸದ ಇಲಾಖೆ ಕಾರ್ಯಕ್ರಮವನ್ನು ಕೈಗೊಂಡಿತು. ಹೀಗೆ ೧೯೦೦ನೆಯ ಇಸವಿಯ ವೇಳೆಗೆ ಹೊಸ ಸಾಹಿತ್ಯಕ್ಕೆ ಒಂದು ವೇದಿಕೆ ಸಿದ್ಧವಾಯಿತು.

ಸಾಹಿತ್ಯದ ವೇದಿಕೆ ಸಿದ್ಧವಾದರೂ ಅದನ್ನು ಸಿದ್ಧಪಡಿಸಿದವರು ಅದನ್ನು ತುಂಬಲು ಯಾವ ಸಾಹಿತ್ಯ ಬರುವುದೆಂಬುದನ್ನು ಅರಿತಿದ್ದಿರಲಾರರು. ಕನ್ನಡದ ಜನಕ್ಕೆ ಆಂಗ್ಲ ಸಾಹಿತ್ಯ ಭೌತಶಾಸ್ತ್ರಗಳ ಪರಿಚಯಮಾಡಿಕೊಟ್ಟ ಮಹನೀಯರು ತಮ್ಮ ಪ್ರಯತ್ನದ ಫಲವಾಗಿ ಕನ್ನಡದಲ್ಲಿ ಇಂಗ್ಲಿಷ್ ಸಾಹಿತ್ಯದಂಥ ಸಾಹಿತ್ಯ ಬರುವುದೆಂದು ನಿರೀಕ್ಷಿಸಿದರು. ಆ ವಿದ್ಯಾಭ್ಯಾಸವನ್ನು ಪಡೆದ ಕನ್ನಡಿಗರು ಹಳೆಯ ಸಾಹಿತ್ಯದ ವಿಷಯದಲ್ಲಿ ಪಾಶ್ಚಾತ್ಯರ ಅಸಂತುಷ್ಟಿಯನ್ನು ಅನುಭವಿಸಿದರೂ ತಮ್ಮ ಭಾಷೆಯಲ್ಲಿ ಕೆಲಸಮಾಡಬೇಕು ಎಂದು ಯೋಚಿಸಿದ್ದು ಅಷ್ಟಾಗಿ ಕಾಣಲಿಲ್ಲ. ಹೊಸ ವಿದ್ಯಾಭ್ಯಾಸಕ್ರಮದಿಂದ ಪಾಂಡಿತ್ಯವನ್ನು ಪಡೆದಿದ್ದ ಸಾಂಪ್ರದಾಯಿಕ ವಿದ್ವಾಂಸರು ಹಿಂದಿನ ಸಾಹಿತ್ಯದ ಅನುಕರಣೆಯಲ್ಲಿ ಹೊರತು ಬೇರೆ ಹೇಗೂ ತಮ್ಮ ಶಕ್ತಿಯನ್ನು ವಿನಿಯೋಗಿಸಲಾರದೆ ಇದ್ದರು. ಒಬ್ಬ ಮಹನೀಯರು ಬಂಗಾಳಿ ಭಾಷೆಯ ಕಥೆ ಹಲವಾರನ್ನು ಕನ್ನಡಕ್ಕೆ ಭಾಷಾಂತರಮಾಡಿ ಓದುವ ಜನರಲ್ಲಿ ಒಂದು ಹೊಸ ರುಚಿಯನ್ನು ಬೆಳಸುತ್ತಿದ್ದರು; ಮತ್ತೆ ಕೆಲವರು ಮರಾಠಿಯಿಂದ ಕೆಲವು ಕೃತಿಗಳನ್ನು ಕನ್ನಡಿಸಿ ಹೊಸ ರೀತಿಯ ಓದುಗರಿಗೆ ಸ್ವಲ್ಪ ಗ್ರಾಸವನ್ನು ಒದಗಿಸುತ್ತಿದ್ದರು. ಆದರೆ ಯಾರೂ ತಾವು ಭಾಷಾಂತರಮಾಡುತ್ತಿದ್ದಂಥ ಕೃತಿಗಳನ್ನು ಕನ್ನಡದಲ್ಲಿ ಕನ್ನಡಿಗರ ಜೀವನವನ್ನು ಚಿತ್ರಿಸಿ ರಚಿಸಬಹುದೆಂದು ಧೈರ್ಯಮಾಡಿದಂತೆ ತೋರುವುದಿಲ್ಲ. ಕನ್ನಡದ ಲೇಖಣಿ ಆಂಗ್ಲ ಸಾಹಿತ್ಯದ,

ವಂಗ ಸಾಹಿತ್ಯದ, ಮಹಾರಾಷ್ಟ್ರ ಸಾಹಿತ್ಯದ ಸಾಹಿತ್ಯ ಪಂಕ್ತಿಯನ್ನು ತಿದ್ದಿತು ಹೊರತಾಗಿ ಆ ಪಂಕ್ತಿಯಂತೆ ತನ್ನದೊಂದು ಪಂಕ್ತಿಯನ್ನು ಬರೆಯುವುದರಲ್ಲಿ ಆಗ ಇನ್ನೂ ತೊಡಗಲಿಲ್ಲ.

ಕೃತಿಯಲ್ಲಿ ತೊಡಗದಿದ್ದರೂ ಈ ತರ್ಜುಮೆಯ ಅಥವಾ ಪ್ರತಿ ಕೃತಿಯ ಸಾಹಿತ್ಯ ಕನ್ನಡದ ಜನಕ್ಕೆ ಹೊಸದೊಂದು ಉಸಿರನ್ನು ಒಂದೊಂದು ಸಂದರ್ಭದಲ್ಲಿ ತಂದಿತು. ಹೊಸಗನ್ನಡದ ಗದ್ಯ ಶೈಲಿಯ ಮೂಲಪುರುಷರಾದ ಶ್ರೀ ಚನ್ನಪಟ್ಟಣದ ವಾಸುದೇವಯ್ಯನವರು ಬರೆದ ಆರ್ಯಕೀರ್ತಿ ಗ್ರಂಥವು ಕನ್ನಡದ ಜನಕ್ಕೆ ಸ್ವಾತಂತ್ರ್ಯದ ಒಂದು ಸಿಟ್ಟನ್ನು ತೋರಿಸಿಕೊಟ್ಟಿತು. ದೇಶ ಭಕ್ತಿ, ದೇಶಭಾಷಾ ಭಕ್ತಿ, ಸ್ವಜನ ಪ್ರೇಮ, ಭಾರತೀಯ ಇತಿಹಾಸವನ್ನು ಕುರಿತ ಅಭಿಮಾನ, ತಲೆಯೆತ್ತಿ ನಡೆಯುವ ಆತ್ಮವಿಶ್ವಾಸ, ಇವು ಆಪ್ಯಾಯಮಾನವಾದ ಭಾವನೆ ಗಳೆಂದು ಕನ್ನಡದ ಜನ ಆಗ ಮನಗಂಡರು. ಸ್ವಾತಂತ್ರ್ಯದ ಭಾವನೆ ಹೀಗೆ ಒಂದು ಜನತೆಯ ಚೇತನವನ್ನು ಮುಟ್ಟುವುದೇ ತಡ, ಮುಟ್ಟಿದೊಡನೆ ಅಂಥ ಜನತೆಯಲ್ಲಿ ಇನ್ನೂ ಉಸಿರಿದ್ದರೆ ಅದರ ಬಾಳಿನ ಎಲ್ಲ ಭಾಗವನ್ನೂ ಆವರಿಸುವುದು. ಇದಕ್ಕೆ ತಕ್ಕಂತೆ ಹೊಸ ಶತಮಾನದ ಮೊದಲ ಹತ್ತು ವರ್ಷದಲ್ಲಿ ರಾಜಪುರುಷ ಲಾರ್ಡ್ ಕರ್ಜನ್ನರ ವಿಚಾರವಿಹೀನವಾದ ಕೆಲವು ನುಡಿ ನಡೆಗಳಿಂದ ಭರತವರ್ಷ ದಲ್ಲಿ ಸ್ವಾತಂತ್ರ್ಯದ ಅಪೇಕ್ಷೆ ಕೋಲಾಹಲದಿಂದ ಮೇಲೆದ್ದಿತು. ೧೯೧೦ನೆಯ ವರ್ಷದ ವೇಳೆಗೆ ಭಾರತಜನಾಂಗ ಇತಿಹಾಸದಲ್ಲಿ ಒಂದು ಹೊಸ ಪಥದಲ್ಲಿ ಕಾಲಿಟ್ಟಿತು. ರಾಜಕೀಯ ಆಂದೋಲನದೊಂದಿಗೆ ಜನಜೀವನದ ಇತರ ಭಾಗ ಗಳಲ್ಲಿ ಇದೇ ಸ್ವಾತಂತ್ರ್ಯಾಭಿಲಾಷೆಯ ಪ್ರಭಾವ ತಲೆದೋರಿತು.

ಹೊಸ ಶತಮಾನದ ಮೊದಲ ದಶಕದಲ್ಲಿ ಕಾಲೇಜುಗಳಲ್ಲಿ ಓದುತ್ತಿದ್ದ ಯುವಕರು ಹಲವರು ಸ್ವತಂತ್ರ ಸಾಹಿತ್ಯವನ್ನು ನಿರ್ಮಿಸುವ ಈ ಕೆಲಸದಲ್ಲಿ ತೊಡಗಿದರೆನ್ನುವುದು ಈಗ ನಮಗೆ ಕಾಣುತ್ತದೆ. ಹೊಸ ಸಾಹಿತ್ಯವನ್ನು ನಿರ್ಮಿ ಸೋಣ, ಅದಕ್ಕೆ ನಾವು ಮೂಲಪುರುಷರಾಗೋಣ, ಎಂದು ಹತ್ತು ಕಡೆಯ ಹತ್ತು ಜನ ಒಬ್ಬರೊಂದಿಗೊಬ್ಬರು ಮಾತನಾಡಿ ಒಂದು ಕಾರ್ಯಕ್ರಮವನ್ನು ಇವರು ಕೈಕೊಂಡರೆಂದು ನಾವು ಹೇಳಲಾಗುವುದಿಲ್ಲ. ಪ್ರಕೃತಿಯ ಪ್ರೇರಣೆಗಳಂತೆ ಇತಿಹಾಸದ ಪ್ರೇರಣೆಗಳಂತೆ ಸಾಹಿತ್ಯದ ಪ್ರೇರಣೆಗಳೂ ಒಂದು ಕಾಲದಲ್ಲಿ, ಒಂದು ಸ್ಥಿತಿಯಲ್ಲಿ ಬಾಳುತ್ತಿರುವ ಹಲವು ಜೀವನಗಳನ್ನು ಒಂದು ದಿಕ್ಕಿಗೆ ಸೆಳೆಯುತ್ತವೆ. ಆ ದಿಕ್ಕಿನಲ್ಲಿ ನಡೆದು ಮುಂದುವರಿದ ಮೇಲೆ ಆ ಪ್ರೇರಿತ ಜೀವಗಳು ತಮ್ಮ ಸಹೋದ್ಯೋಗಿಗಳನ್ನು ಕಂಡುಕೊಳ್ಳುತ್ತವೆ. ಆರಂಭದ ಆ ವರ್ಷಗಳಲ್ಲಿ ಹೊಸ ತರದ ಕೃತಿಯ ರಚನೆಯಲ್ಲಿ ತೊಡಗಿದವರ ಹೆಸರನ್ನೆಲ್ಲ ಇಲ್ಲಿ ಹೇಳುವುದು ಸಾಧ್ಯ ವಲ್ಲ. ಹಾಗೆ ಹೇಳುವುದು ಅನವಶ್ಯಕವೂ ಹೌದು. ಕರ್ಣಾಟಕ ಗ್ರಂಥಮಾಲೆ ಯಲ್ಲಿ, ಸುವಾಸಿನಿ, ಕೃಷ್ಣಸೂಕ್ತಿ, ಮಧುರವಾಣಿಗಳಲ್ಲಿ, ಇಂಥ ಇತರ ಪತ್ರಿಕೆ ಗಳಲ್ಲಿ, ಹೊಸ ತರದ ಲೇಖನಗಳು ಕಂಡು ಬಂದುವು. ಬಹು ಕಾಲ ಕನ್ನಡಕ್ಕಾಗಿ ದುಡಿದು ದಿವಂಗತರಾದ ಶ್ರೀ॥ ಎಂ. ಎಸ್. ಪುಟ್ಟಣ್ಣನವರು, ನಾರಾಯಣರಾಯರು, ಪಂಜೆ ಮಂಗೇಶರಾಯರು, ಶಾಂತ ಕವಿಗಳು; ಆ ಕಾಲದಲ್ಲಿ ಬರೆಯಲು ತೊಡಗಿ

ದೇವರ ಕೃಪೆಯಿಂದ ಇನ್ನೂ ಕನ್ನಡದ ಸೇವೆಯಲ್ಲಿ ನಿರತರಾಗಿರುವ ಶ್ರೀ॥ ಬೆನಗಲ್ ರಾಮರಾಯರು, ಆಲೂರ ವೆಂಕಟರಾಯರು, ಬೆಳ್ಳೂರ ಮೈಲಾರ ಶ್ರೀಕಂಠಯ್ಯನವರು, ಇಂಥ ಇತರ ನಮ್ಮ ಹಿರಿಯರು ನಾಲ್ವತ್ತು ವರ್ಷದ ಸಾಹಿತ್ಯ ಸೇವೆಯ ಕುರುಹಾಗಿ ನಮ್ಮ ಹೊಸ ಸಾಹಿತ್ಯದ ಮುಖ್ಯಜ್ಯೋತಿಗಳಾಗಿ ದಾರಿ ತೋರುತ್ತಿದ್ದಾರೆ.

ಕೃತಿ ಸ್ವತಂತ್ರವಾದದ್ದು ಎಂದರೆ ಏನು? ಕೃತಿಯಲ್ಲಿ ಹೇಳಿರುವ ವಿಷಯ, ಅದನ್ನು ಹೇಳಿರುವ ಸಾಹಿತ್ಯ ಪದ್ಧತಿ, ಅಥವಾ ಆ ಹೇಳಿರುವ ರೀತಿ, ಇದು ಯಾವುದೇ ಆಗಲಿ ಸಂಪ್ರದಾಯದಿಂದ ಕುಂಠಿತವಾಗದೆ ಆತ್ಮವಿಶ್ವಾಸದಿಂದ ನಡೆದರೆ ಕೃತಿ ಸ್ವತಂತ್ರವಾಗುತ್ತದೆ. ಮೊದಲಿಂದ ಕಂಡ ದಾರಿಯನ್ನು ಬಿಟ್ಟುಹೋಗುವುದಕ್ಕೆ ಪ್ರವೃತ್ತಿಯೇ ಇಲ್ಲದೆ ಅಥವಾ ಅಂಥ ಪ್ರವೃತ್ತಿಯಿದ್ದರೂ ಏನು ಮಾಡಿದರೆ ಏನಾಗುವುದೋ ಎಂಬ ಭಯದಿಂದ ಪಕ್ಕಕ್ಕೆ ಅಡಿಯಿಡಲಾರದೆ ನಡೆಯುವ ಮಂದಿ ಇಂಥ ಕೆಲಸವನ್ನು ಮಾಡಲಾರರು. ಇವರ ಶಕ್ತಿ ಕಡಮೆಯೆಂದಲ್ಲ; ಇವರ ಸಾಹಿತ್ಯಪ್ರೇರಣೆ ಕಿರಿಯದೆಂದಲ್ಲ; ಇವರ ಭಾಷಾಪ್ರೇಮ ಅಲ್ಪವೆಂದಲ್ಲ. ಈ ಎಲ್ಲದರಲ್ಲೂ ಇವರು ಸ್ವತಂತ್ರ ಕೃತಿಯ ನಿರ್ಮಾಪಕನಿಗಿಂತ ಮೇಲೆಯೇ ಇರಬಹುದು. ಅವನು ಪಡೆದ ಒಂದು ಪ್ರಚೋದನವನ್ನು ಇವರು ಪಡೆಯದೆ ನಿಲ್ಲುತ್ತಾರೆ, ಅಷ್ಟೆ. ಆ ಪ್ರಚೋದನ ಸ್ವಲ್ಪ ಹೊರಗಿಂದ ಬರುತ್ತದೆ; ಬಹುಮಟ್ಟಿಗೆ ಒಳಗಿಂದ ಪುಷ್ಟವಾಗುತ್ತದೆ. ಹೀಗೆ ಮಾಡಿ ನೋಡೋಣ, ಹೇಗಿರುತ್ತದೆ ಎಂದು ಅವನು ನೋಡುತ್ತಾನೆ. ಇದು ಪ್ರಯೋಗದ ಪದ್ಧತಿ. ಪ್ರಯೋಗವೆಲ್ಲ ಫಲಿಸುವುದಿಲ್ಲ. ನಾಡಿನ ಭಾಗ್ಯದಿಂದ ಅವನ ಅದೃಷ್ಟದಿಂದ ಕೆಲವು ಕೃತಿ ಚೆನ್ನವಾದರೆ ಅದು ಸಾಹಿತ್ಯ ಎಂಬ ಗೌರವವನ್ನು ಪಡೆಯುತ್ತದೆ. ಇದಾದೊಡನೆ ಅದು ಎಷ್ಟು ಅಲ್ಪ ರೀತಿಯಲ್ಲೆ ಆದರೂ ಸಾರಸ್ವತ ಸಾಮ್ರಾಜ್ಯವನ್ನು ವಿಸ್ತಾರ ಮಾಡುತ್ತದೆ; ನುಡಿಯ ಕಾವ್ಯಭಂಡಾರದಲ್ಲಿ ಒಂದು ವಸ್ತುವಾಗಿ ಸೇರುತ್ತದೆ; ಜನತೆಯ ಸಂಸ್ಕೃತಿಗೆ ರೂಪುಗೊಟ್ಟ ಒಂದು ಮೂರ್ತಿಯಾಗುತ್ತದೆ.

ಭರತವರ್ಷದ ಹೊಸ ಯುಗದ ಮೊದಲಲ್ಲಿ ಕನ್ನಡದ ಹೃದಯ ಹೊಸದಾಗಿ ಏನನ್ನು ಬೇಡುತ್ತಿತ್ತು ಎಂದು ತಿಳಿಯಬೇಕಾದರೆ ನಾವು ಆಗಣ ಇಂಥ ಕೃತಿಗಳನ್ನು ಎತ್ತಿ ನೋಡಬೇಕು. ಶ್ರೀಮಾನ್ ಶ್ರೀಕಂಠಯ್ಯನವರ ಇಂಗ್ಲಿಷ್ ಗೀತಗಳ ರೀತಿ ಪದ್ಧತಿ ಸರ್ವತ್ರ ಹೊಸವಾಗಿದ್ದಂತೆ 'ಭರತಮಾತೆಯ ಭರತಮಾತೆಯ ಎಂದು ನೀ ತಲೆಯೆತ್ತುವೆ' ಎನ್ನುವ ಮನೋಭಾವವು ಹೊಸ ಕಾಲದದು. ಅಂದಿನಿಂದ ಇಂದಿಗೆ ನಮ್ಮ ಸಾಹಿತ್ಯ ಅದೇ ದಾರಿಯಲ್ಲಿ ಮುಂದುವರಿದು ಬಂದಿದೆ; ವರ್ಷವರ್ಷಕ್ಕೆ ಹೊಸತಾಗಿ ಬಂದ ಸಂದರ್ಭಗಳ ಮಾತನ್ನೂ ವ್ಯಕ್ತಪಡಿಸಲು ಯತ್ನಿಸಿದೆ. ಆದರೂ ಅದರ ಮುಖ್ಯ ಲಕ್ಷಣ ಬೇರೆಯಾಗಿಲ್ಲ. ಜನದ ಭಾವನೆಗೆ ಸಾಹಿತ್ಯ ರೂಪು ಕೊಡಬೇಕು: ಅಂದು ಕೊಡಲು ಮೊದಲುಮಾಡಿ ಇಂದೂ ಅದು ನಮ್ಮ ಜನರ ಭಾವನೆಗೆ ರೂಪನ್ನು ಕೊಡುತ್ತಿದೆ.

ಒಟ್ಟು ಒಂದು ಕಾಲದ ಬರವಣಿಗೆಯನ್ನು ಕುರಿತು ಇಂಥ ಮಾತನ್ನು ಹೇಳುವುದು ಸಾಧ್ಯವೇ ಎಂದು ಯಾರಾದರೂ ಕೇಳಬಹುದು. ಯಾವ ಒಂದು ಕಾಲದ

ಸಾಹಿತ್ಯವೂ ಹರಿಹಿನಲ್ಲಿ ಒಂದು ಹೊಳೆಯನ್ನು ಹೋಲುತ್ತದೆ. ಶಯ್ಯೆಯ ಮಧ್ಯ ದಲ್ಲಿ ಹಾಯುತ್ತ ಹೊಳೆಯ ಹೆಚ್ಚು ಭಾಗವಾಗಿ ಒಂದು ಜಲರಾಶಿ ಒಂದು ವೇಗದಲ್ಲಿ ನಡೆಯುತ್ತದೆ. ಇತ್ತ ಅತ್ತ ಹೊಳೆಯ ಸ್ವಲ್ಪ ಭಾಗ ಜೇರೆಯ ಧಾಟಿಯಿಂದ ಹೋಗುತ್ತಿರುತ್ತದೆ. ವೇಗವನ್ನು ತಡೆಯುತ್ತ, ಕೆಲವುವೇಳೆ ಸುಳಿಯಾಗುತ್ತ, ಹಿಂದಕ್ಕೆ ತಿರುಗುತ್ತ ಇನ್ನಷ್ಟು ನೀರು ಇರುತ್ತದೆ. ಶಯ್ಯೆಯನ್ನೆ ಬಿಟ್ಟು ಬಯಲ ಮೇಲೆ ಹರಿಯುವ ನೀರೂ ಸ್ವಲ್ಪ ಇರಬಹುದು. ಸಾಹಿತ್ಯದ ಲಕ್ಷಣ ಹೀಗೆ, ಹಾಗೆ, ಎಂದು ಹೇಳುವಲ್ಲಿ ಬಹು ಜನದ ಮನಸ್ಸನ್ನು ಪ್ರತಿಬಿಂಬಿಸುವ ಬಹುಭಾಗದ ಸಾಹಿತ್ಯ ನಮ್ಮ ದೃಷ್ಟಿಯಲ್ಲಿರುತ್ತದೆ. ಹಿಂದಣ ದಾರಿಯೇ ದಾರಿ ಎನ್ನುವ ಹಲ ಕೆಲವು ಲೇಖಕರೂ ತೀರ ಹೊಸ ದಾರಿಗೆ ನುಗ್ಗುವ ಕೆಲ ಜನರೂ ಸಾಹಿತ್ಯ ರಾಷ್ಟ್ರದಲ್ಲಿ ಇರಬಹುದು. ಒಟ್ಟು ಸಾಹಿತ್ಯದ ಮಾತನ್ನು ಆಡುವಾಗ ಹೆಚ್ಚಿನ ಸಂಖ್ಯೆಯ ಭಾವನೆಯನ್ನು ಗಮನಿಸುವುದಾಗುತ್ತದೆ. ನಮ್ಮ ಹೊಸ ಸಾಹಿತ್ಯವನ್ನು ಕುರಿತು ಈ ಮೊದಲು ಹೇಳಿದ ಮಾತನ್ನು ಈ ದೃಷ್ಟಿಯಿಂದ ಗ್ರಹಿಸಬೇಕು.

ಹೊಸ ಸಾಹಿತ್ಯ ಎಲ್ಲವೂ ದಾರಿ ತಪ್ಪಿದೆ ಎಂದು ಭಯಪಡುವ ಹಿರಿಯ ರಿದಾರೆ. ಹೊಸ ಬರಹದಲ್ಲಿ ಯಾವ ನಿಯಮ ಇರಬಹುದು ಎಂದು ನಿದಾನಿಸಿ ನೋಡದೆ ಇವರು ಅದರಲ್ಲಿ ನಿಯಮವಿಲ್ಲವೆಂದೇ ತಿಳಿಯುತ್ತಾರೆ. ನಿಯಮ ಇಲ್ಲವೆಂದು ತೋರಿಸುವುದಕ್ಕೆ ಇಂಥ ಹಿರಿಯರು, ಹೊಸ ದೃಷ್ಟಿಯಿಂದ ನೋಡಿದರೂ ನಿಯಮ ತಪ್ಪಿದ್ದೆನ್ನಬೇಕಾದ ಕೃತಿಗಳನ್ನು ಎತ್ತಿಕೊಳ್ಳುತ್ತಾರೆ. ತಪ್ಪು ಎಂದಿದ್ದರೂ ತಪ್ಪೆ: ಹಳೆಯದಾದ ಮಾತ್ರಕ್ಕೆ ಎಲ್ಲವೂ ಒಳ್ಳೆಯದಾಗುವುದಿಲ್ಲ; ಹೊಸದಾದ ಮಾತ್ರಕ್ಕೂ ಎಲ್ಲವೂ ಒಳ್ಳೆಯದಾಗಲಾರದು. ಇಂದಿನ ಬಹಣೆ ತಪ್ಪಿದ ಪದ್ಯದಿಂದ ಹೊಸ ಸಾಹಿತ್ಯ ಎಲ್ಲ ಕೆಟ್ಟುಹೋಗಲಾರದು. ಹಿಂದೆ ವೃತ್ತ ಬರೆದವರು ಎಷ್ಟು ತಪ್ಪುಗಳನ್ನು ಬರೆದರೊ! ಅಷ್ಟರಿಂದ ವೃತ್ತದ ನಿಯಮಕ್ಕೆ ಅಭಾವ ಒದಗಲಿಲ್ಲ. ಇನ್ನು ಹೊಸ ಸಾಹಿತ್ಯದ ಕೆಲವು ಭಾಗದ ಜೀವನವರ್ಣನೆ ಅತಿಗೆ ಹೋಗುತ್ತದೆ ಎನ್ನುವವರು ಹಿಂದಿನ ಕಾಲದ ಸಾಹಿತ್ಯದ ಕೆಲವು ಭಾಗವನ್ನು ಮನಸ್ಸಿಗೆ ತಂದು ಕೊಂಡರೆ ಸಮಾಧಾನವಾಗಬಹುದು. ಈಗಿನ ಸಿನೀಮ ಮಟ್ಟದ ಅತಿ ಶೃಂಗಾರ, ಆಯಾ ಕಾಲಕ್ಕೆ ತಕ್ಕಂತೆ ರಾವಣನ ಅಂತಃಪುರದ ವರ್ಣನೆಯಲ್ಲಿಯೂ ರಾಧಾ ಕೃಷ್ಣರ ಪ್ರೇಮದ ವರ್ಣನೆಯಲ್ಲಿಯೂ ವತ್ಸರಾಜನ ಅಂತಃಪುರಜೀವನದ ವರ್ಣನೆ ಯಲ್ಲಿಯೂ ತಕ್ಕಷ್ಟು ಕಾಣುತ್ತದೆ. ಎಲ್ಲ ಕಾಲದಲ್ಲೂ ಚಟ್ನಿ, ಉಪ್ಪಿನಕಾಯಿ ಉಂಟು; ಹಳಸಿದ ಅಡಿಗೆ ಉಂಟು. ಎಲ್ಲ ಕಾಲದಲ್ಲೂ ಇಂಥ ಶೃಂಗಾರ ಕೃತಿ ಉಂಟು. ಯಾವ ಕಾಲದಲ್ಲೂ ಸಾಹಿತ್ಯದ ಯೋಗ್ಯತೆಯನ್ನು ಅಳೆಯಬೇಕಾದರೆ ಆಗಿನ ಕೃತಿಗಳಲ್ಲಿ ಮಹಾಜನಕ್ಕೆ ಒಪ್ಪಿದ, ಮಹಾಜನದ ಅಭಿಪ್ರಾಯವನ್ನು ವ್ಯಕ್ತಪಡಿಸಿದ, ಸಾಹಿತ್ಯವನ್ನು ಗಣಿಸಬೇಕು. ಇನ್ನು ಮಹಾಜನ ಯಾರು ಎಂದು ನಾನು ವಿವರಿಸುತ್ತ ಚರ್ಚೆಯನ್ನು ಬೆಳಸುವುದಿಲ್ಲ. ಓದುವವರಿಗೆ ನನ್ನ ಅರ್ಥ ತಕ್ಕಮಟ್ಟಿಗೆ ತಿಳಿದರೂ ಈ ಸಂದರ್ಭಕ್ಕೆ ಅದು ಸಾಕು.

ಇನ್ನೂ ನಮ್ಮ ಸಾಹಿತ್ಯ ಮುಂದುವರಿಯಬೇಕು, ಮುಂದುವರಿಯುತ್ತದೆ. ಮುಖ್ಯವಾಗಿ ಅದರಲ್ಲಿ ಸ್ವಾತಂತ್ರ್ಯಾಭಿಲಾಷೆ ಭದ್ರವಾಗಿ ನೆಲಸಬೇಕು. ಹಿಂದಣ

ಮಂದಿ ಹಿಂದಣವೇ ಚೆಂದ ಎಂದಂತೆ ಇಂದಿನವರು ಹೊರಗಿನವೇ ಚೆಂದ ಎನ್ನುವ ಸಂಭವವಿದೆ. ಹೊಸ ವಿದ್ಯಾಭ್ಯಾಸದ ಪರಿಣಾಮವಾಗಿ ನಮ್ಮಲ್ಲಿ, ಹೊರಗಿನ ಜನರ ಮೆಚ್ಚಿಗೆಯೇ ಯೋಗ್ಯತೆಯ ಒರೆಗಲ್ಲು, ಎನ್ನುವಂತೆ ನಾವು ನಡೆಯುತ್ತೇವೆ. ಒಂದು ಕಾಲಕ್ಕೆ ಇದು ಅವಶ್ಯವಾಗಿ ಇದ್ದಿರಬಹುದು. ಆ ಅವಸ್ಥೆ ಈಗ ನಮಗೆ ಬೇಕಿಲ್ಲ. ಹತ್ತಾರು ವಿಶ್ವವಿದ್ಯಾನಿಲಯಗಳಾಗಿ ಸಾವಿರಾರು ಪ್ರತಿಭಾವಂತರು ಆಧುನಿಕ ಪ್ರಪಂಚದ ತಿಳಿವನ್ನು ಗ್ರಹಿಸಿ ನೂರಾರು ಹಿರಿಯರಾದರೂ ಪರದೇಶದ ಯಾವ ಜ್ಞಾನಿಗಿಂತ ಕಡಮೆಯಲ್ಲ ಎಂಬ ಸ್ಥಿತಿಯನ್ನು ಮುಟ್ಟಿರುವಾಗ ಭರತವರ್ಷ ತನ್ನ ಧ್ಯೇಯಗಳಿಗೆ, ಕಾರ್ಯಗಳಿಗೆ, ಪರರ ಪ್ರಶಂಸೆಯನ್ನು ಬೇಡುವುದು ಸರಿಯಲ್ಲ. ದಾಸ್ಯದ ಹೇಯಭಾಗ ರಾಜಕೀಯವಲ್ಲ, ಆಂತರಿಕವಾದದ್ದು; ಬುದ್ಧಿ ಮನಸ್ಸು ಗಳನ್ನು ಸಂಕೋಲೆಯಲ್ಲಿ ಹಾಕಿರತಕ್ಕದ್ದು. ಭಾರತೀಯರು ಕೆಲವು ಕಾಲದ ಹಿಂದೆ ವಾರಣಾಸಿಯನ್ನು ಕ್ಯಾಮ್ ನದಿ ಥೇಮ್ಸ್ ನದಿಗಳ ದಡಕ್ಕೆ ತೆಗೆದುಕೊಂಡುಹೋಗಿ ಇಟ್ಟರು; ಈಗ ಅದನ್ನು ಗಂಗಾ ನದಿಯ ದಡಕ್ಕೆ ಮತ್ತೆ ತರಬೇಕು, ಭರತವರ್ಷ ಎಷ್ಟೋ ಕಾಲದಿಂದ ಬಯಸಿರುವ ತತ್ತ್ವಗಳನ್ನು ಸಾಧಿಸುವುದಕ್ಕೆ ಯತ್ನ ಮಾಡಬೇಕು.

ಈ ಮೂಲಸೂತ್ರವನ್ನು ಅನುಸರಿಸಿದ ಸಾಹಿತ್ಯ ಈಗಿನ ಕಾಲದ ಜೀವನವನ್ನು ವಿಸ್ತಾರವಾಗಿ ವಿವರವಿವರವಾಗಿ ಒಳಗೊಂಡು ಬೆಳೆಯುತ್ತದೆ. ಇಂದಿನ ಸಾಹಿತ್ಯ ಇಂದಿನ ಬಾಳುವೆಯಂತೆ ಸಾರ್ವಜನಿಕ ಆಗಬೇಕು; ಜೀವನದಷ್ಟು ವಿಸ್ತಾರವಾಗು ವುದಲ್ಲದೆ ಜೀವನವನ್ನೇ ವಿಸ್ತಾರಗೊಳಿಸುವ ಒಂದು ಧ್ಯೇಯದಿಂದ ಅದು ಆವಿಷ್ಟ ವಾಗಬೇಕು. ಕನ್ನಡದ ಸಾಹಿತ್ಯ ಈ ಪದವಿಯನ್ನು ಏರಬೇಕಾದರೆ ಕನ್ನಡದ ಜನತೆ ಇನ್ನೂ ಚೆನ್ನಾಗಿ ಎಚ್ಚರಗೊಳ್ಳಬೇಕು. ಜನತೆ ಎಚ್ಚರಗೊಳ್ಳದೆ ಅರೆ ನಿದ್ರೆಯಲ್ಲಿಯೇ ಇರುತ್ತ ಅದರ ಕಣ್ಣಾದ ಲೇಖಕನು ಮಾತ್ರ ಹೆಚ್ಚು ಹೆಚ್ಚು ವಿಕಾಸವಾಗಬೇಕೆನ್ನು ವುದು ಆಗದ ಮಾತು. ಈಗ ಕನ್ನಡದಲ್ಲಿ ಬರೆಯುವವರು ವಿಶೇಷವಾಗಿ ಹೊಸ ದಿನದ ತರುಣರು. ಹಿರಿಯರಾದವರು ಈಗಲೂ ನಮಗೆ ಕನ್ನಡದಲ್ಲಿ ಮಾತನಾಡು ವುದಕ್ಕೆ ಬರುವುದಿಲ್ಲ, ಬರೆಯುವುದಕ್ಕೆ ಬರುವುದಿಲ್ಲ ಎನ್ನುವವರಿದ್ದಾರೆ; ಕನ್ನಡದ ಗ್ರಂಥಗಳನ್ನು ಈಗಲೂ ಓದದೆ ಇದ್ದಾರೆ. ಅಲ್ಲಿ ಇಲ್ಲಿ ಓದಿದರೆ ಲೇಖಕನನ್ನು ಕಂಡಾಗ, ಪರವೆಯಿಲ್ಲ, ಒಳ್ಳೆಯ ಕೆಲಸ ಮಾಡುತ್ತಿದ್ದೀರಿ ಎಂದು ಅನ್ಯರಂತೆ ಅರೆ ಮೆಚ್ಚಿಕೆಯ ಮಾತನ್ನು ಆಡುವವರಿದ್ದಾರೆ. ಕನ್ನಡ ತಮ್ಮದು, ತಮ್ಮ ಆರಾಧ್ಯ ದೈವ, ಎನ್ನುವುದನ್ನು ಇವರು ಕಂಡಿಲ್ಲ. ಎಷ್ಟು ಬೇಗನೆ ಇಂಥ ಎಲ್ಲ ಹಿರಿಯರೂ ದೇಶಭಾಷೆಯ ಕಡೆಗೆ ಒಲೆಯುವರೊ ಅಷ್ಟು ಬೇಗನೆ ಕನ್ನಡ ನಮ್ಮ ಜೀವನದಲ್ಲಿ ಅದಕ್ಕೆ ತಕ್ಕದಾದ ಸ್ಥಾನವನ್ನು ಪಡೆಯುತ್ತದೆ.

ದೇಶಭಾಷೆ ಈ ಸ್ಥಾನವನ್ನು ಪಡೆದಾಗ್ಗೆ ದೇಶದ ಜನ ತಮ್ಮ ಜೀವನದ ಎಲ್ಲ ವ್ಯಾಪಾರಕ್ಕೂ ಅದನ್ನೆ ಸಹಜವಾಗಿ ಉಪಯೋಗಿಸುತ್ತಾರೆ. ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಭಾಷೆಯನ್ನು ಇಂಗ್ಲಿಷ್ ಜನರು ಎಲ್ಲೆಲ್ಲಿ ಬಳಸುತ್ತಾರೋ ಅಲ್ಲೆಲ್ಲ ಕನ್ನಡ ನಾಡಿನಲ್ಲಿ ಜನರು ಕನ್ನಡ ಭಾಷೆಯನ್ನು ಬಳಸಬೇಕು. ದಿನದ ವ್ಯವಹಾರ ದಷ್ಟು ಮಾತ್ರವಲ್ಲ, ಪರಸ್ಪರ ಬರೆಯುವ ಪತ್ರಗಳಲ್ಲಿ ಮಾತ್ರವಲ್ಲ, ಕನ್ನಡದ ಜನ

ಎಷ್ಟು ಇಂಗ್ಲಿಷ್ ಬಲ್ಲವರಾದರೂ ಹೊತ್ತು ಹೋಗುವುದಕ್ಕೆ ಕನ್ನಡದ ಪುಸ್ತಕವನ್ನು ಎತ್ತಿಕೊಳ್ಳುವ ಚಟ ಬರಬೇಕು. ಪುಣ್ಯವಂತರು ಸೇರುವ ವಿನೋದ ಮಂದಿರಗಳಲ್ಲಿ ಓದುವ ಕೋಣೆಯ ಮೇಜಿನಮೇಲೆ ಗೊಂಬೆಯ ಪತ್ರಿಕೆ ಕನ್ನಡದ್ದಾಗಿರಬೇಕು; ಅಂಥ ಪತ್ರಿಕೆಯನ್ನು ನೋಡಿದಮೇಲೆ 'ಇಲಸ್ಟ್ರೇಟೆಡ್ ಲಂಡನ್ ನ್ಯೂಸ್' ಚಿತ್ರ ಪತ್ರಿಕೆಯನ್ನು ನೋಡುವ ಚಪಲ ಉಳಿಯಬಾರದು; ನೋಡುವ ಅವಶ್ಯಕತೆ ಇರಬಾರದು. ಗ್ರಂಥ ಭಂಡಾರಗಳಲ್ಲಿ ಕನ್ನಡದ ಪುಸ್ತಕಗಳಿಗಾಗಿ ಇಂಗ್ಲಿಷ್ ಪುಸ್ತಕಗಳಿಗೆ ಒದಗಿಸುವುದಕ್ಕಿಂತ ಹೆಚ್ಚಿನ ಹಣವನ್ನು ಒದಗಿಸುವ ಮನಸ್ಸು ಬರಬೇಕು; ಹಾಗೆ ಒದಗಿಸಿದ ಹಣ ಕನ್ನಡದಲ್ಲಿ ಪ್ರಕಟವಾಗುತ್ತಿರುವ ಒಳ್ಳೆಯ ಪುಸ್ತಕಗಳನ್ನು ಕೊಳ್ಳುವುದಕ್ಕೆ ಸಾಲದೆ ಹೋಗಬೇಕು. ಇದು ನಾವು ಬಯಸುವ ಏಳ್ಗೆಯ ಕಾಲದ ಒಂದೆರಡು ಲಕ್ಷಣ. ಆ ಏಳ್ಗೆಯನ್ನು ಕನ್ನಡದ ಜನ ಊಹಿಸಲಿ; ಅದನ್ನು ಸಾಧಿಸಲು ಯತ್ನಮಾಡಲಿ.

ಈ ಯತ್ನದಲ್ಲಿ ಕನ್ನಡ ಮನೆಮಾತಾದವರು ಮಾತ್ರ ಭಾಗಿಗಳಾದಾರೆಂದು ಯಾರೂ ಭಾವಿಸಬಾರದು. ಕನ್ನಡ ಎನ್ನುವುದು ಒಂದು ನಾಡ ಹೆಸರು, ಬರಿಯ ಒಂದು ನುಡಿಯ ಹೆಸರಲ್ಲ. ಕನ್ನಡಿಗನೆಂದರೆ ಕನ್ನಡ ನಾಡಿನ ಪ್ರಜೆ. ಕನ್ನಡಿಗನ ಮನೆಮಾತು ತಮಿಳಿರಬಹುದು, ಕನ್ನಡ ಇರಬಹುದು, ತೆಲುಗು ಇರಬಹುದು, ಉರ್ದು ಇರಬಹುದು; ಕೊಂಕಣಿ, ಮರಾಠಿ, ಕೊಡಗು, ತುಳು ಇರಬಹುದು. ಇದು ಈಗಾಗಲೆ ನಮ್ಮ ಇತಿಹಾಸದಲ್ಲಿ ತಕ್ಕಷ್ಟು ಸ್ಪಷ್ಟವಾಗಿದೆ. ಅಚ್ಚಕನ್ನಡಿಗ, ಅಚ್ಚವಲ್ಲದ ಕನ್ನಡಿಗ ಎಂಬಂಥ ಮಾತೂ ನಾವು ತಮಿಳರು ನಾವು ಕೊಂಕಣಿಗಳು ಎಂಬಂಥ ಮಾತೂ ಒಮ್ಮೊಮ್ಮೆ ಒತ್ತಟ್ಟು ಕೇಳುವುದಾದರೂ ಕಾರ್ಯರಂಗದಲ್ಲಿ ಇಂಥ ಜನರೆಲ್ಲ ಭೇದಬುದ್ಧಿಯಿಲ್ಲದೆ ದುಡಿದಿದ್ದಾರೆ, ದುಡಿಯುತ್ತಿದಾರೆ. ಈ ಲೇಖನ ಸೇರಿರುವ ಈ ಗ್ರಂಥದಿಂದ ಕಾಣುವಂತೆ ಕನ್ನಡದ ಸೇವಕರಲ್ಲಿ ಎಲ್ಲ ಕುಲ ಎಲ್ಲ ಗೋತ್ರವೂ ಸೇರಿವೆ. ಕನ್ನಡ ದೇಶಕ್ಕೆ ಮುಸಲ್ಮಾನರು ಬೇರೆಯಲ್ಲ; ಕ್ರೈಸ್ತರು ದೂರವಲ್ಲ. ಈ ತಾಯ ಮಡಿಲಲ್ಲಿ ನಾವೆಲ್ಲ ಒಂದೇ ತರದ ಮಕ್ಕಳು. ಎಲ್ಲರೂ ಈ ತಾಯ ಬಸಿರಿನ ಮಕ್ಕಳು; ನಮ್ಮಲ್ಲಿ ಯಾರೂ ಮಲಮಕ್ಕಳಿಲ್ಲ.

ಲೋಕದ ಚರಿತ್ರೆಯಲ್ಲಿ ಭೇದಬುದ್ಧಿಯಿಂದ ಎಂದೂ ಕೇಡೇ ಆಗಿದೆ; ಎಲ್ಲ ಕೇಡಿಗೂ ಭೇದಬುದ್ಧಿಯೇ ಕಾರಣವೆಂದೇ ಹೇಳಬಹುದು. ಈ ಬುದ್ಧಿಯನ್ನು ತಿದ್ದಿ ಮಾನವ ವರ್ಗವೇ ಒಂದು ಮನೆತನ, ಜೀವರಾಶಿಯೆಲ್ಲ ಒಂದೇ ಮನೆತನ, ಸೃಷ್ಟಿಯೆಲ್ಲ ಒಂದು ಮನೆ ಎಂಬುದನ್ನು ಕಲಿಸುವುದೇ ಭರತವರ್ಷ ಕೈಗೊಂಡಿರುವ ವ್ರತ. ವೇದಗಳ ಅನಾದಿ ಕಾಲದಿಂದ ಇಂದಿನವರೆಗೆ ಏನಾದರೂ ಒಂದು ಮಾತು ಸ್ಪಷ್ಟವಾಗಿರುವುದಾದರೆ ಭರತವರ್ಷದ ಧ್ಯೇಯ ಇದೇ ಎನ್ನುವುದು ಹಾಗೆ ಸ್ಪಷ್ಟವಾಗಿದೆ. ಆ ಧ್ಯೇಯವನ್ನು ಸಾಧಿಸುವುದರಲ್ಲಿ ಕನ್ನಡದ ನಾಡು ಎಂದಿನಿಂದಲೂ ನೆರವಾಗಿ ದುಡಿದಿದೆ. ಮುಂದಕ್ಕಾದರೂ ಅದಕ್ಕೆ ಇದೇ ಕರ್ತವ್ಯ. ನಮ್ಮ ನಾಡು ಲೋಕದ ಎಲ್ಲ ಸುಸಂಸ್ಕೃತಿಯ ಸಂಗ್ರಹಸ್ಥಾನ ಆಗಬೇಕು. ಕನ್ನಡ ನಾಡಿನ ಹಿಂದೂ ಮಕ್ಕಳಿಗೆ, ಕ್ರೈಸ್ತ ಮಕ್ಕಳಿಗೆ, ಮುಸ್ಲಿಂ ಮಕ್ಕಳಿಗೆ; ಬೌದ್ಧ, ಜೈನ, ಇನ್ನೆಲ್ಲ ಮತದ ಮಕ್ಕಳಿಗೆ; ಆಯಾ ಮಹನೀಯ ಗುರುವರ್ಯರ ಉಪದೇಶ ಕನ್ನಡದಲ್ಲಿ ದೊರೆಯ

ಬೇಕು. ಯಾವ ಕನ್ನಡಿಗನೂ ತಾನು ಹುಟ್ಟಿದ ಧರ್ಮ ಒಂದನ್ನರಿತು ತೃಪ್ತನಾಗ
ಬಾರದು. ಎಲ್ಲ ಮತಗಳೂ ವಿಶ್ವದ ಒಂದು ಧರ್ಮದ ಬೇರೆ ಬೇರೆಯ ಶಾಖೆಗಳೆಂದು
ಅವನು ಮನಗಾಣಬೇಕು; ಅದರಂತೆ ಬಾಳಬೇಕು; ಭರತವರ್ಷದ ಸಾವಿರಾರು
ಕಾಲದ ತಪಸ್ಸಿನ ಸಿದ್ಧಿಯನ್ನು ತನ್ನ ಬಾಳಲ್ಲಿ ತೋರಬೇಕು.

ಈ ಧ್ಯೇಯ ಅತಿಯೆಂದು ನಾವು ಹೆದರುವುದು ಬೇಡ. ಸಾವಿರ ವರ್ಷದ
ಹಿಂದೆ ಪಂಪನನ್ನು ಪಡೆದ ನಾಡು, ಅದಾದ ಶತಮಾನ ಶತಮಾನ ಅಂತರಗಳಲ್ಲಿ
ಬಸವನನ್ನು, ಕುಮಾರವ್ಯಾಸನನ್ನು, ಚಿಕದೇವರಾಜನನ್ನು ಪಡೆದ ನಾಡು, ಎಷ್ಟೋ
ಶತಮಾನದ ಹಿಂದೆ 'ಯಂ ಶೈವಾಃ ಸಮುಪಾಸತೇ....' ಎಂಬ ಶ್ಲೋಕದಲ್ಲಿ
ಸರ್ವಮತ ಸಮನ್ವಯವನ್ನು ಮಾಡಿದ ನಾಡು ಸದ್ಯದ ಕಾಲದಲ್ಲಿ ಎಂತೋ
ಕುಗ್ಗಿದಂತೆ ಕಂಡ ಮಾತ್ರಕ್ಕೆ ಜನದ ಬಾಳ್ವೆಯಲ್ಲಿ ಅಂದಿನ ಹಿರಿಮೆ ಇಲ್ಲದೆ
ಹೋಯಿತೆಂದು ತಿಳಿಯುವುದು ತಪ್ಪು. ನಮ್ಮ ಮನೆತನ ದೊಡ್ಡದು ಎನ್ನುವ
ಹೆಮ್ಮೆ ಒಂದು ಸಂದರ್ಭದಲ್ಲಿ ದುರಭಿಮಾನವಾಗಿ ಪರಿಣಮಿಸಬಹುದು ನಿಜ.
ಮತ್ತೊಂದು ಸಂದರ್ಭದಲ್ಲಿ ಅದು ಧೈರ್ಯವನ್ನು ಕೊಡಬಹುದು, ತಪ್ಪಿಗೆ ನಡೆಯ
ದಂತೆ ರಕ್ಷಿಸಬಹುದು. ಅಭಿಮಾನ ಸಾರ್ಥಕವಾಗುವುದು ಹೀಗೆ. ಇದಕ್ಕಾಗಿ
ಕನ್ನಡದ ಜನ ಅಭಿಮಾನದ ವ್ರತವನ್ನು ಹಿಡಿಯಬೇಕು. ನಾಲ್ವತ್ತು ವರ್ಷದ
ಹಿಂದೆ ನಮ್ಮ ಜನದ ಜೀವನವನ್ನು ಚಿತ್ರಿಸುವ ಸಾಹಿತ್ಯ ಎಷ್ಟಿತ್ತು? ಇಪ್ಪತ್ತು
ವರ್ಷದ ಹಿಂದೆ ಎಷ್ಟಿತ್ತು? ನಲವತ್ತು ವರ್ಷದ ಹಿಂದೆ ಅದು ಇರಲೇ ಇಲ್ಲ;
ಅಯ್ಯೊ, ಇಲ್ಲವಲ್ಲ ಎನ್ನುವ ಜನರೂ ಇರಲಿಲ್ಲ. ಇಪ್ಪತ್ತು ವರ್ಷದ ಹಿಂದೆ ಅದು
ಎಲ್ಲೋ ಸ್ವಲ್ಪ ತಲೆದೋರಿತ್ತು; 'ಅಯ್ಯೋ ನಮ್ಮಲ್ಲಿ ಸಾಕಾದಷ್ಟು ಸಾಹಿತ್ಯ
ನಿರ್ಮಾಣವಾಗುತ್ತಿಲ್ಲ' ಎಂದು ಜನ ಚಿಂತಿಸತೊಡಗಿದರು. ಈಗ ಯೋಗ್ಯತೆ
ಯಿಂದ ಲೋಕದ ಇತರ ಸಾಹಿತ್ಯಗಳ ಉತ್ತಮ ಕೃತಿಗಳೊಂದಿಗೆ ನಿಲ್ಲಲು ತಕ್ಕ
ಕೃತಿ ನಮ್ಮಲ್ಲಿ ಆಗಿವೆ. ಜೀವನದ ನಡೆಗೆ ಹೊಣೆಯಾದ ಕಲ್ಯಾಣಕಾರಕ ಸತ್ವ ಕಾಲ
ಸ್ಥಳಗಳ ಪಕ್ಷಪಾತವನ್ನು ಕಾಣದ ಸತ್ವ. ಎಲ್ಲಿ ಎಂದು ಯಾರು ಬೇಡಿ ಕೈನೀಡಿದರೆ
ಅಲ್ಲಿ ಅಂದು ಅವರ ಬೊಗಸೆಯನ್ನು ಅದು ಶಿವತತ್ವದಿಂದ ತುಂಬುತ್ತದೆ. ನಮ್ಮ
ಜನತೆಯ ಶ್ರೇಯಸ್ಸು ಯಾವುದೆಂದು ತಿಳಿದು ನಾಡ ಪ್ರಮುಖರೆಲ್ಲ ಅದನ್ನು
ಸಾಧಿಸಲು ಬಯಸಿದರೆ ಅದು ಸಿದ್ಧಿಯಾಗುವುದಕ್ಕೆ ಬಹುಕಾಲವೇನೂ ಆಗುವುದಿಲ್ಲ.
ಒಮ್ಮುಖವಾದ ಪ್ರಯತ್ನ ಒಂದೇ ಈಗ ಆವಶ್ಯಕವಾಗಿರುವುದು; ಅದರ ಬಗ್ಗೆ
ನಾವೆಲ್ಲ ಮನಸ್ಸು ಮಾಡಬೇಕು.

ಈ ಏಕಮುಖತೆ ಬೇಗನೆ ಬರಲಿ. ನಾಡು ನುಡಿಗಳು ಇನ್ನೂ ಹೆಚ್ಚಿನ
ಶುಭವನ್ನು ಇಷ್ಟರಲ್ಲೇ ಕಾಣಲಿ.

**ಮಾಸ್ತಿ ವೆಂಕಟೇಶ ಅಯ್ಯಂಗಾರ್**

ಪುಸ್ತಕ ದೊರೆಯುವ ಸ್ಥಳ

೧. ಎ. ಎಸ್. ಕೃಷ್ಣಸ್ವಾಮಿ,
೪೩–೪೪, ಗವೀಪುರದ ವಿಸ್ತರಣ,
ಬಸವನಗುಡಿ ಅಂಚೆ,
ಬೆಂಗಳೂರು ಪಟ್ಟಣ.

೨. ಬೆಂಗಳೂರು ಪ್ರೆಸ್,
ಮೈಸೂರು ರೋಡು,
ಬೆಂಗಳೂರು ಪಟ್ಟಣ.

[ಅಂಚೆಯ ವೆಚ್ಚ: ಪ್ರತಿ ಒಂದಕ್ಕೆ ಒಂದು ರೂಪಾಯಿ]

